# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ದ್ರೋಣಪರ್ವ
ಕರ್ಣ ಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೧೭

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

## ಸಂಪುಟ 17

*ಮುದ್ರಕರು:*

**ಭಾರತ ದರ್ಶನ ಮುದ್ರಣಾಲಯ**

163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ॥ ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ರಾಮೇಶ್ವರಾವಧಾನೀ**

ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ಎ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ದಯಾಮಯನಾದ ಭಗವಂತನ ಕೃಪೆಯಿಂದಲೂ, ಸದ್ಗುರುವಿನ ದಿವ್ಯಾಶೀರ್ವಾದಗಳಿಂದಲೂ, ಸತ್ಪುರುಷರ ಸಹಕಾರ-ಸದಾಶಯ ಗಳಿಂದಲೂ ಶ್ರೀಮನ್ಮಹಾಭಾರತದ ಹದಿನೇಳನೆಯ ಕುಸುಮವು ಸರ್ವಾಂಗ ಸುಂದರವಾಗಿ ರೂಪುಗೊಂಡು ದಯಾಮಯನಾದ ಪರಮಾತ್ಮನ ದಿವ್ಯ ಪಾದಾರವಿಂದಗಳಲ್ಲಿ ಅರ್ಪಿತವಾಗಿದೆ. ಪ್ರಸಾದರೂಪವಾದ ಈ ಸಂಪುಟ ವನ್ನು ಪರಮಾತ್ಮನನ್ನು ನೆನೆದು ಶುಭಕೋರಿ ನಮ್ಮ ಪ್ರಿಯವಾಚಕರ ಅಂಜಲಿ ಪುಟಗಳಲ್ಲಿಡುತ್ತಿದ್ದೇವೆ. ಇದು ಹದಿನೇಳನೆಯ ಸಂಪುಟ. ಹತ್ತು-ಏಳು ಸೇರಿ ಹದಿನೇಳಾಗುತ್ತದೆ. 'ಏಳು-ಹತ್ತು! ಕಷ್ಟವಾದರೂ ಕುಳಿತುಕೊಳ್ಳಬೇಡ ; ಮೇಲೇಳು! ಮುಂದಿನ ಮೆಟ್ಟಲನ್ನು ಹತ್ತು'–ಎಂದು ಪ್ರೇರಿಸುತ್ತಾ ಪರಮಾತ್ಮನು ಮುಂದೆ-ಮುಂದೆ ಸೆಳೆದುಕೊಂಡು ಹೋಗುತ್ತಿದ್ದಾನೆ. ಹಾಗಿಲ್ಲದಿದ್ದರೆ ನಮ್ಮಂತಹ ಹೆಳವರಿಗೆ ಮೆಟ್ಟಲುಗಳನ್ನು ಹತ್ತಲು ಹೇಗೆ ತಾನೇ ಸಾಧ್ಯವಾಗುತ್ತಿದ್ದಿತು? ಈ ಸಂಪುಟದ ಪ್ರಕಟಣೆಯಾಗುತ್ತಿದ್ದಾಗ ಒಂದು ಸಣ್ಣ ಅನುಭವ : ಮುದ್ರಣಾಲಯದ ವಿಷಯ. ಮೂರು ವರ್ಷಗಳ ಹಿಂದೆಯೇ, ಮುಂದೆ ಬರಬಹುದಾದ ಅಪಾಯವನ್ನು ಮಾನವದೃಷ್ಟಿಯಿಂದ ಯೋಚಿಸಿ, ಅದರ ನಿವಾರಣೆಗಾಗಿ ಮಾನವಸಹಜವಾದ ಕಾರ್ಯಕ್ರಮವನ್ನು ಕೈಗೊಳ್ಳಲಾಗಿತ್ತು. ನಿರೀಕ್ಷಿಸಿದಂತೆ ಅಪಾಯವೂ ಸನ್ನಿಹಿತವಾಯಿತು. ಆದರೆ ಮಾನವಸಹಜವಾದ ಅತಿಬುದ್ಧಿವಂತಿಕೆಯಿಂದ ನಿರೂಪಿಸಿದ್ದ ಕಾರ್ಯ ಕ್ರಮವೂ ಕೈಗೂಡಲಿಲ್ಲ. ಮೂರು ವರ್ಷಗಳ ಹಿಂದಿನಿಂದಲೂ ಮಾಡಿದ ಯೋಜನೆಯೂ ಹುಸಿಯಾಗಿ ಮುರಿದುಬಿದ್ದಿತು. ಆದರೆ ದಯಾಮಯನಾದ ಪರಮಾತ್ಮನು ಮಾತ್ರ ಕೈಬಿಡಲಿಲ್ಲ. ಅನಿರೀಕ್ಷಿತವಾದ ನೆರವು ಸಿಕ್ಕಿತು. ಕಾರ್ಯವು ಹೆಚ್ಚು ಸುಗಮವಾಯಿತು. '**ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಂ**'–ಎಂಬ ಅಮೂಲ್ಯಪಾಠವನ್ನು ಮತ್ತೊಮ್ಮೆ ಕಲಿತಂತಾಯಿತು.

ಇಂತಹ ಅನುಭವಗಳು ಹಲವಾರು. ಅವನು ಭಯಕೃತ್ ಎಂಬುದೂ ಸತ್ಯ ; ಭಯನಾಶನ ಎಂಬುದೂ ಎರಡು ಪಾಲು ಹೆಚ್ಚು ಸತ್ಯ. ಈ ರೀತಿ ಯಲ್ಲಿ ದಯಾಮಯನಾದ ಪರಮಾತ್ಮನು ತನ್ನದೇ ಆದ ಈ ಕಾರ್ಯವನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾನೆ. ಅವನ ಕರುಣೆಯು ಅಗಾಧ ;

ಮೆಟ್ಟಲನ್ನೂ ಹತ್ತಿಸುತ್ತಾನೆ. ತನ್ನ ಅದ್ಭುತವಾದ ಪವಾಡವನ್ನು ಜಗತ್ತಿಗೆ ತೋರಿಸುತ್ತಾನೆ.

ಈ ಸಂಪುಟದೊಡನೆ ದ್ರೋಣಪರ್ವದ ದ್ರೋಣವಧೆಯ ಉಪ ಪರ್ವವು ಮುಗಿದಿರುತ್ತದೆ. ನಮ್ಮ ಆಶಯದಂತೆ ದ್ರೋಣಪರ್ವವನ್ನು ಈ ಸಂಪುಟದಲ್ಲಿ ಪೂರ್ಣಗೊಳಿಸಲು ಸಾಧ್ಯವಾಗಲಿಲ್ಲ. ದ್ರೋಣಪರ್ವದ ಇನ್ನೂ ಸುಮಾರು ನೂರು ಪುಟಗಳಷ್ಟು ಕಥಾಭಾಗವು ಉಳಿದಿರುತ್ತದೆ.

ಈ ಸಂಪುಟದಲ್ಲಿ ದ್ರೋಣಪರ್ವದ ೧೨೨ನೆಯ ಅಧ್ಯಾಯದಿಂದ ೧೯೨ನೆಯ ಅಧ್ಯಾಯಪೂರ್ತಿ ಕಥಾಭಾಗವಿದೆ. ಜಯದ್ರಥನ ವಧೆ, ಘಟೋತ್ಕಚನ ವಧೆ ಮತ್ತು ದ್ರೋಣರ ವಧೆ—ಈ ಕಥಾಭಾಗಗಳು ಈ ಸಂಪುಟದಲ್ಲಿ ಅಡಕವಾಗಿವೆ. ಯುದ್ಧಸಂಗತಿಯೇ ಅನೇಕವಾಗಿ ಬಂದರೂ ಅಲ್ಲಲ್ಲಿ ಬರುವ ಸಂಭಾಷಣೆಗಳು ಹೃದಯಂಗಮವಾಗಿವೆ. ದ್ರೋಣ-ದುಃಶಾಸನರ ಸಂಭಾಷಣೆ (೧೨೨) ; ಸಾತ್ಯಕಿಯ ವಿಷಯವಾಗಿ ಯುಧಿಷ್ಠಿರ-ಭೀಮರ ಸಂಭಾಷಣೆ (೧೨೬) ; ಭೀಮ-ದ್ರೋಣರ ಸಂಭಾಷಣೆ (೧೨೭) ; ದುರ್ಯೋಧನನಿಂದ ದ್ರೋಣರ ನಿಂದನೆ ಮತ್ತು ಅದಕ್ಕೆ ಅವರ ಉತ್ತರ (೧೨೭) ; ಕರ್ಣ-ದುರ್ಯೋಧನರ ಮಾತುಕತೆ (೧೪೫)-(೧೫೧) ಇಂತಹ ಸಂಭಾಷಣೆಗಳು ಅನೇಕ ಸಂದರ್ಭಗಳಲ್ಲಿ ಬರುತ್ತವೆ. ಒಬ್ಬೊಬ್ಬರು ಮಾತನಾಡುವಾಗಲೂ ಅವರು ತಮ್ಮ ಅಭಿಪ್ರಾಯಗಳನ್ನು ಮಂಡಿಸುವ ರೀತಿಯು ಪರಮಾಶ್ಚರ್ಯಕರವಾಗಿ ಕಾಣುತ್ತದೆ. ದುರ್ಯೋಧನನೇ ಮಾತನಾಡಲಿ ; ಕರ್ಣನೇ ಮಾತನಾಡಲಿ—ಇಬ್ಬರ ಹೇಳಿಕೆಗಳೂ ಸರಿಯಾಗಿವೆಯೆಂದೇ ಯಾರಿಗಾದರೂ ಅನಿಸದೇ ಇರದು. ಪ್ರತಿಯೊಬ್ಬರ ಮಾತುಗಳೂ ತರ್ಕಬದ್ಧವಾಗಿಯೇ ಇರುತ್ತವೆ. ಇಂತಹ ಅದ್ಭುತಕೃತಿರತ್ನದ ರಚನೆಯು ವ್ಯಾಸರೂಪನಾದ ವಿಷ್ಣುವಿಗಲ್ಲದೇ ಮತ್ತಾರಿಗೆ ತಾನೇ ಸಾಧ್ಯವಾದೀತು? ಹಿಂದಿನ ಸಂಪುಟಗಳಲ್ಲಿ ಕೊಟ್ಟಿರುವಂತೆಯೇ ಈ ಸಂಪುಟದಲ್ಲಿಯೂ ಯುದ್ಧದ ವಿಶ್ಲೇಷಣೆಯನ್ನು ಕೊಡಲಾಗಿದೆ. ಸಂಪಾದಕಮಂಡಲಿಗೆ ತೋರಿದ ಕೆಲವು ಅನಿಸಿಕೆಗಳನ್ನೂ ಇಲ್ಲಿ ಕೊಡಲಾಗಿದೆ. ಇದೇ ಸಿದ್ಧಾಂತವೆಂದೂ ಭಾವಿಸಬೇಕಾಗಿಲ್ಲ. ಪಾಠ-ಅಪಪಾಠಗಳ ಸಿದ್ಧಾಂತವು ಮಹರ್ಷಿಗಳಾದ ವ್ಯಾಸರೊಬ್ಬರಿಂದ ಮಾತ್ರವೇ ಸಾಧ್ಯವಾಗುತ್ತದೆ. ಅವರ ಪೂರ್ಣಾನುಗ್ರಹವನ್ನು ಪಡೆದಿರುವವರಿಗೂ ಸಾಧ್ಯವಾಗಬಹುದು. ವೇದದಂತೆ ಆಸೇತುಹಿಮಾಚಲಪರ್ಯಂತವಾಗಿ ಮಹಾ

ಭಾರತದ ಒಂದೇ ಪಾಠವಿಲ್ಲವಾದುದರಿಂದ ಕೆಲವು ಕಡೆಗಳಲ್ಲಿ ಗ್ರಂಥವು ವಿಕೃತಗೊಂಡಿರಬಹುದೆಂದು ಊಹಿಸಲು ಸಾಧ್ಯವಿದೆ. ಇದುವರೆಗೆ ಈ ಗ್ರಂಥವನ್ನು ಪರಿಷ್ಕರಿಸಿ ಪ್ರಕಟಿಸಿರುವವರು–'ಇರುವುದೆಲ್ಲಾ ಸರಿ ಅಥವಾ ಬಹುಪಾಠವು ಯಾವುದಿರುವುದೋ ಅದೇ ಸರಿ'–ಎಂಬ ಸಿದ್ಧಾಂತವನ್ನಿಟ್ಟು ಕೊಂಡು ಪ್ರಕಾಶಿಸಿರುವಂತಿದೆ. ಅರ್ಥವ್ಯತ್ಯಯದ ಬಗೆಗೆ, ಸಮನ್ವಯಿಸ ಲಾಗದ ಅಸಂಗತಗಳ ಬಗೆಗೆ ಯಾರೂ ಹೆಚ್ಚು ಗಮನಕೊಟ್ಟಂತೆ ಕಾಣುವು ದಿಲ್ಲ. ಒಬ್ಬಿಬ್ಬರು ಪ್ರಕಾಶಕರು ಗಮನಕೊಟ್ಟಿದ್ದರೂ ಇರುವುದನ್ನು ಸರಿ ಪಡಿಸುವುದರಲ್ಲಿ (ಶ್ಲೋಕಗಳನ್ನು ತಿದ್ದಿಬರೆಯುವುದರ ಮೂಲಕ ಅಥವಾ ಕಷ್ಟಪಟ್ಟು ಅರ್ಥಮಾಡುವುದರ ಮೂಲಕ) ಶ್ರಮಿಸಿದ್ದಾರೆಯೇ ಹೊರತು ಸೂಕ್ಷ್ಮವಾಗಿ ಪರಿಶೀಲಿಸಲು ಹೋಗಿಲ್ಲ. ಮಹಾಭಾರತದ ಬಗೆಗೆ ಇದೊಂದು ಕಾರ್ಯವು ತೀವ್ರವಾಗಿ ಆಗಬೇಕಾಗಿದೆ–ಎಂಬುದು ನಮ್ಮ ಅಭಿಪ್ರಾಯ ವಾಗಿದೆ.

ಮಹಾಭಾರತದ ಪ್ರಚಾರಕಾರ್ಯವು ಸಾಧಾರಣರೀತಿಯಲ್ಲಿ ನಡೆಯು ತ್ತಿದೆ. ಸರಾಸರಿ ದಿನಕ್ಕೆ ಒಬ್ಬರಂತೆ ಗ್ರಾಹಕರಾಗುತ್ತಿದ್ದಾರೆ. ನಮ್ಮ ಅನೇಕ ಗ್ರಾಹಕರು ನೂತನಗ್ರಾಹಕರನ್ನು ಮಾಡಿಕೊಟ್ಟು ಉಪಕರಿಸುತ್ತಿದ್ದಾರೆ. ನಮ್ಮ ಗೌರವಪ್ರತಿನಿಧಿಗಳೂ ಸಹ ಹೆಚ್ಚು ಶ್ರಮವಹಿಸಿ ಕಾರ್ಯಮಾಡುತ್ತಿದ್ದಾರೆ. ಆದರೆ ಇನ್ನೂ ಇದರ ಪ್ರಚಾರ ಹೆಚ್ಚಬೇಕು. ಪ್ರತಿಯೊಬ್ಬ ಕನ್ನಡಿಗ ಸಹೋದರನ ಮನೆಯಲ್ಲಿಯೂ ಮಹಾಭಾರತದ ಜ್ಯೋತಿಯು ಬೆಳಗ ಬೇಕು. ಇದಕ್ಕೆ ನಾವೆಲ್ಲರೂ ಟೊಂಕಕಟ್ಟಿ ಶ್ರಮಿಸಬೇಕು.

3-2-1979ನೇ ಶನಿವಾರ ಸಾಯಂಕಾಲ ಬಸವನಗುಡಿಯಲ್ಲಿರುವ ಶ್ರೀ ಭವಾನೀಕಲ್ಯಾಣಮಂಟಪದಲ್ಲಿ ಹದಿನಾರನೆಯ ಸಂಪುಟದ ಪ್ರಕಾಶನ ಸಮಾರಂಭವು ನಡೆಯಿತು. ಕರ್ನಾಟಕದ ರಾಜ್ಯಪಾಲರಾದ ಶ್ರೀ ಗೋವಿಂದ ನಾರಾಯಣ್ ಅವರು ಅಧ್ಯಕ್ಷತೆ ವಹಿಸಿದ್ದರು. ಸಮಾರಂಭವು ವೇದಘೋಷ ದೊಡನೆ ಪ್ರಾರಂಭವಾಯಿತು. ಸಂಗೀತ ವಿದುಷೀ ಶ್ರೀಮತೀ ವಸಂತ ಮಾಧವಿಯವರು ಸ್ವಾಗತಪದ್ಯಮಾಲಿಕೆಯನ್ನು ಸುಶ್ರಾವ್ಯವಾಗಿ ಹಾಡಿದರು. ಅನಂತರ ವಿದ್ವಾನ್ ಹೆಚ್. ಎನ್. ರಂಗಸ್ವಾಮಿಯವರು ಸ್ವಾಗತಭಾಷಣ ಮಾಡುತ್ತಾ ಇದುವರೆಗೆ ಸಾಧಿಸಿರುವ ಪ್ರಗತಿ, ಮುಂದೆ ಸಾಧಿಸಬೇಕಾಗಿರು ವುದು, ಸರ್ಕಾರದ ವತಿಯಿಂದ ನಮಗೆ ಆಗಬೇಕಾಗಿರುವ ಸಹಾಯ–ಈ

ವಿಷಯಗಳನ್ನು ವಿವರಿಸಿ ಹೇಳಿದರು. ಶ್ರೀ ನೆ. ವೆಂ. ಶ್ರೀನಿವಾಸರಾಯರು ಸಮಾರಂಭಕ್ಕೆ ಬಂದಿದ್ದ ಸಂದೇಶಗಳನ್ನು ಓದಿದನಂತರ ಹದಿನಾರನೆಯ ಸಂಪುಟದ ಪ್ರಕಾಶನವನ್ನು ಶ್ರೀಮತೀ ಚಂದ್ರಾ-ಗೋವಿಂದ ನಾರಾಯಣ್ ಅವರು ತಮ್ಮ ಅಮೃತಹಸ್ತದಿಂದ ನೆರವೇರಿಸಿಕೊಟ್ಟರು. ಶ್ರೀಮತೀ ಶೈಲಜಾ ಅವರು ಮಹಾಭಾರತದಿಂದ ಆಯ್ದ ಶ್ಲೋಕಗಳನ್ನು ಸುಶ್ರಾವ್ಯವಾಗಿ ಹಾಡಿ ದರು. ಅನಂತರ ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ವರದದೇಶಿಕಾಚಾರ್ಯ ರಂಗಪ್ರಿಯರು ಹದಿನಾರನೆಯ ಸಂಪುಟದ ಪರಿಚಯವನ್ನು ತಮ್ಮ ವಿದ್ವತ್ಪೂರ್ಣವಾದ ವಾಣಿಯಿಂದ ಮಾಡಿಕೊಟ್ಟರು. ಕೊನೆಯಲ್ಲಿ ಅಧ್ಯಕ್ಷ ಸ್ಥಾನದಿಂದ ಮಾತನಾಡಿದ ರಾಜ್ಯಪಾಲರು ಮಹಾಭಾರತದ ಹೆಗ್ಗಳಿಕೆಯ ಬಗೆಗೆ ವಿದ್ವತ್ಪೂರ್ಣವಾದ ಭಾಷಣಮಾಡುತ್ತಾ ಕರ್ನಾಟಕದಲ್ಲಿರುವ ಸುಮಾರು 2,500 ಪ್ರೌಢಶಾಲೆಗಳಿಗೂ ಈ ಸಂಪುಟಗಳನ್ನು ತರಿಸಿಕೊಳ್ಳು ವಂತೆ ತಮ್ಮ ಸರ್ಕಾರಕ್ಕೆ ಸಲಹೆಮಾಡುವುದಾಗಿ ತಿಳಿಸಿದರು. (ಈ ವಿಷಯ ದಲ್ಲಿ ಅವರು ಸರ್ಕಾರಕ್ಕೆ ಪತ್ರವೊಂದನ್ನು ಬರೆದಿರುವರೆಂಬ ಸಂತಸದ ಸುದ್ದಿಯು ತಿಳಿದುಬಂದಿದೆ. ಅವರ ಆಶಯವೂ ನಮ್ಮೆಲ್ಲರ ಆಶಯವೂ ಕಾರ್ಯಗತವಾಗಲೆಂದು ಭಗವಂತನನ್ನು ಪ್ರಾರ್ಥಿಸೋಣ.) ಶ್ರೀರಾಮ ಚಂದ್ರಾಪುರಮಠದ ಶ್ರೀ ಶ್ರೀ ರಾಘವೇಂದ್ರಭಾರತೀಸ್ವಾಮಿಗಳವರು ಕಳುಹಿಸಿ ಕೊಟ್ಟಿದ್ದ ಸುವರ್ಣಮಂತ್ರಾಕ್ಷತೆಯನ್ನು ರಾಜ್ಯಪಾಲರು ಫಲ-ಪುಷ್ಪ ಗಳೊಂದಿಗೆ ಸಂಪಾದಕಮಂಡಲಿಯವರಿಗೆ ವಿತರಣೆಮಾಡಿದರು. ವಿದ್ವಾನ್ ರಾಮೇಶ್ವರಾವಧಾನಿಗಳು ವಂದನಾರ್ಪಣೆ ಮಾಡಿದನಂತರ ಶಾಂತಿಪಾಠ ದೊಂದಿಗೆ ಸಮಾರಂಭವು ಮುಕ್ತಾಯವಾಯಿತು.

ಪರಮದಯಾಳುಗಳಾದ ಸಂಪಾದಕಮಂಡಲಿಯವರು ಕೇವಲ ಪರ ಮಾತ್ಮನ ಪ್ರೇರಣೆಯಿಂದಾಗಿ ನಿಃಸ್ಪೃಹತೆಯಿಂದ ಗ್ರಂಥವನ್ನು ಸಂಪಾದಿಸಿ ಕೊಡುತ್ತಿದ್ದಾರೆ. ಇದು ಎಲ್ಲರಿಗೂ ತಿಳಿದಿರುವ ವಿಷಯವೇ ಆಗಿದ್ದರೂ ಪುನಃ ಪುನಃ ಬರೆಯುತ್ತಿರುವ ಕಾರಣವೇನೆಂದರೆ : ಅವರಿಗೆ ಕೃತಜ್ಞತೆಯನ್ನು ಸಲ್ಲಿ ಸಲು ಸಾಧ್ಯತೆಯಿರುವುದು ಈ ಒಂದು ರೂಪದಲ್ಲಿ ಮಾತ್ರ. ಫಲಾಪೇಕ್ಷೆ ಯಿಲ್ಲದೇ ಕಾರ್ಯಮಾಡಲು ಸಾಧ್ಯವೇ ಇಲ್ಲವೆಂಬ ಸಿದ್ಧಾಂತವಿರುವ ಈ ವ್ಯವಹಾರಿಕ ಪ್ರಪಂಚದಲ್ಲಿ ಈ ವಿಷಯವು ಅನೇಕರಿಗೆ ಅಚ್ಚರಿಯಾಗಿ ಕಾಣ

ಬಹುದು. ದೈವಯೋಗದಿಂದ ಸಂಪಾದಕಮಂಡಲಿಯ ವಿದ್ವಾಂಸರೆಲ್ಲರೂ ನಿಃಸ್ಪೃಹತೆಯಿಂದ ಈ ಮಹಾಕಾರ್ಯದಲ್ಲಿ ಸಹಕಾರವನ್ನು ನೀಡುತ್ತಿರುವುದಂತೂ ನಿಜ. ಅನೇಕ ಗೌರವಪ್ರತಿನಿಧಿಗಳೂ ಸಹ ಯಾವ ವಿಧವಾದ ಪ್ರಯೋಜನವನ್ನೂ ಅಪೇಕ್ಷಿಸದೇ ಇದರ ಪ್ರಚಾರಕಾರ್ಯವನ್ನು ಮಾಡುತ್ತಿದ್ದಾರೆ. ಈ ಮಹಾಕಾರ್ಯವು ದೈವೇಚ್ಛೆಯಿಂದ ನಡೆಯುತ್ತಿದೆಯೆಂಬುದಕ್ಕೆ ಇವೆಲ್ಲವೂ ಜ್ವಲಂತಸಾಕ್ಷಿಗಳು.

ಹಿಂದಿನಿಂದ ನಡೆದುಬಂದಿರುವ ಪದ್ಧತಿಯಂತೆ ದ್ರೋಣವಧಾಪರ್ವವು ಮುಗಿದ ಅಂಗವಾಗಿ ಹರೇರಾಮ ಮಂತ್ರಜಪದ ಹೋಮ, ಶ್ರೀವಿಷ್ಣುಸಹಸ್ರನಾಮ ಹೋಮ, ನವಗ್ರಹಹೋಮಗಳನ್ನು 13-5-1979 ನೇ ಭಾನುವಾರ ಶ್ರೀ ಸಾಯಿ ಅಧ್ಯಾತ್ಮಿಕ ಕೇಂದ್ರದಲ್ಲಿ ನಡೆಸಲಾಯಿತು. ಇದಕ್ಕೆ ಪೂರ್ವಾಂಗವಾಗಿ ಹನ್ನೆರಡು ದಿವಸಗಳು ರುದ್ರಾಭಿಷೇಕ, ಸೂರ್ಯ ನಮಸ್ಕಾರ, ನವಗ್ರಹ ಜಪ, ರಾಮಾಯಣಪಾರಾಯಣ, ಭಾಗವತ ಪಾರಾಯಣ, ವೇದಪಾರಾಯಣ, ಶ್ರೀವಿಷ್ಣುಸಹಸ್ರನಾಮಪಾರಾಯಣ, ಹರೇರಾಮ ಮಂತ್ರ ಜಪ–ಇವುಗಳು ನಡೆದುವು. ಅಭಿಮಾನಿಗಳೆಲ್ಲರೂ ಸಮಾರಂಭದಲ್ಲಿ ಭಾಗವಹಿಸಿ ಪ್ರಸಾದವನ್ನು ಸ್ವೀಕರಿಸಿದರು.

ಈ ಸಂಪುಟಕ್ಕೆ ಜ್ಞಾನಪೀಠ ಪ್ರಶಸ್ತಿ ವಿಜೇತರಾದ ರಾಷ್ಟ್ರಕವಿ ದ. ರಾ. ಬೇಂದ್ರೆಯವರು ಮುನ್ನುಡಿಯನ್ನು ಬರೆದುಕೊಟ್ಟು ಪ್ರೋತ್ಸಾಹಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕವಂದನೆಗಳು.

ಕೆನರಾ, ಸಿಂಡಿಕೇಟ್, ಕಾರ್ಪೊರೇಷನ್, ಕರ್ಣಾಟಕ ಮತ್ತು ನ್ಯಾಷನಲ್ ಕೋ-ಆಪರೇಟಿವ್ ಬ್ಯಾಂಕುಗಳು ಯಥಾಪೂರ್ವವಾಗಿ ಮಹಾಭಾರತದ ಪೂರ್ಣಮಾಲೆಗೆ ಗ್ರಾಹಕರಾಗಲು ಸಾಲವನ್ನು ನೀಡುತ್ತಿದ್ದಾರೆ. ಇದರ ಸದುಪಯೋಗವನ್ನು ಸಾರ್ವಜನಿಕರು ಸಾಧ್ಯವಾದಷ್ಟು ಬೇಗ ಪಡೆದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇವೆ. ಕಡೆಯದಾಗಿ ಈ ಮಹಾಕಾರ್ಯಕ್ಕೆ ನಾನಾರೀತಿಯಲ್ಲಿ ನೆರವು ನೀಡುತ್ತಿರುವ ನಮ್ಮ ಸುಹೃದರೆಲ್ಲರಿಗೂ ಪರಮಾತ್ಮನು ಆಯುರಾರೋಗ್ಯ-ಸುಖ-ಸಂತೋಷಗಳನ್ನು ದಯಪಾಲಿಸಲೆಂದು ಪ್ರಾರ್ಥಿಸಿ ವಿರಮಿಸುತ್ತೇವೆ. –ಪ್ರಕಾಶಕರು.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು; ಸಮಸ್ತಸನ್ಮಙ್ಗಲಾನಿ ಭವನ್ತು

# ಮುನ್ನುಡಿ

ಶ್ರೀಮಾನ್ ವಿದ್ವಾನ್ ಹೆಚ್. ಎನ್. ರಂಗಸ್ವಾಮಿಯವರ ಒಂದು ಕಾಗದ ನನಗೆ ಬಂದಿತು. ಅವರು ಕೈಗೊಂಡ ಕಾರ್ಯದ 17ನೆಯ ಸಂಪುಟಕ್ಕೆ ನಾನು ಆರಂಭದ ಕೆಲವು ಮಾತು ಬರೆಯಬೇಕು ಎಂದು. ಮಹಾಭಾರತದ ಕಾರ್ಯ ಸಣ್ಣಪುಟ್ಟದ್ದಲ್ಲ. ಈಗಾಗಲೇ 16 ಸಂಪುಟ ಮುಗಿಸಿ 17ನೆಯದನ್ನೂ ಮುಗಿಸಿರುವುದು ವಿದ್ವಾಂಸರಾದ ಸಂಪಾದಕಮಂಡಲಿಯವರು ಸಮರ್ಥರೆಂದೇ ಸಾರುತ್ತದೆ. ಈ ಕೈಗೊಂಡ ಕಾರ್ಯ ನಿರ್ವಿಘ್ನವಾಗಿ ಮುಗಿಯಲಿ ಎಂದು ಶ್ರೀ ಗಣಪತಿಯಲ್ಲಿ ಪ್ರಾರ್ಥನೆಯನ್ನು ಅರ್ಪಿಸುತ್ತಿದ್ದೇನೆ.

ಮಹಾಭಾರತ–ಪಂಚಮವೇದ ಎಂದು ಪ್ರಖ್ಯಾತ. ಚತುರ್ವೇದಗಳಲ್ಲಿಯೂ ಸಹಕಾರ ತಪ್ಪಿದಾಗ, ಈ ಪಂಚಮವೇದ ಶ್ರೀ ವೇದವ್ಯಾಸರ ರೂಪದಲ್ಲಿ ಸಹಕಾರದ ಹೊಳೆ ಎತ್ತುತ್ತದೆ. ಅದಕ್ಕಾಗಿ ಬಾದರಾಯಣ ಭಾಷ್ಯ, ಅದಕ್ಕಾಗಿ ಭಗವದ್ಗೀತೆ, ಅದಕ್ಕಾಗಿ ವಿಷ್ಣುಸಹಸ್ರ–ಹೀಗೆ ಅನೂಚಾನವಾಗಿ ಬಂದ ಕಾರ್ಯ–ಶ್ವೇತ, ಕೃಷ್ಣಯಜುರ್ವೇದಗಳ ವಿಭಾಗದಿಂದ ಮತ್ತೆ ಬ್ರಾಹ್ಮಣಶಾಖೆಗಳಲ್ಲಿ ಅಸಹಕಾರವನ್ನು ತಂದೊಡ್ಡಿತು. 1131 ಶಾಖೆಯ ಲೆಕ್ಕಾಚಾರ ಇನ್ನೂ ಕೂಟಪ್ರಶ್ನೆಯಾಗಿಯೇ ಉಳಿದುಕೊಂಡಿದೆ. ಬ್ರಾಹ್ಮಣವರ್ಗ ಪರಸ್ಪರರ ವಿಶೇಷಗಳ ಬಗೆಗೆ ಅಸೂಯೆತಾಳಿರುವುದರಿಂದ 'ಸಹಕಾರ' ಮಂತ್ರ ಮಾತ್ರವಾಗಿ ಉಳಿದುಕೊಂಡಿದೆ. ಇಂದು ಬ್ರಾಹ್ಮಣ ಮತ್ತು ಕ್ಷತ್ರಿಯರಲ್ಲಿ ಇರುವ ಸಂಬಂಧ–ಅಸಹಕಾರ ಸಂಬಂಧ. ಇವರಿಬ್ಬರಲ್ಲಿ ಸೌಮನಸ್ಯ ನೆಲೆಗೊಳ್ಳದಿದ್ದರೆ ವೈಶ್ಯಾದಿ ವ್ರಾತ್ಯ–ವ್ಯಾಧರವರೆಗೆ ಎಲ್ಲರೂ ಅವರ ವೈರಿಗಳೇ. 'ಸಹವೀರ್ಯಂ ಕರವಾವಹೈ' ಎಂಬುದು ಕೇವಲ ಮಂತ್ರ ಮಾತ್ರ. ವೈರ ಇಂದು ಚಾತುರ್ವರ್ಣ್ಯದಲ್ಲಿ ತಾಂಡವವಾಡುತ್ತಿದೆ. ಬ್ರಾಹ್ಮಣ್ಯದ ಇತಿಹಾಸ–ಇದಕ್ಕೆ ಪುಟಗೊಡುತ್ತಿದೆ. ನಮಗೆ ಬೇಕಾಗಿದ್ದು–ಸಂವಾದವಲ್ಲ ; ವಾದ-ವಿವಾದಕ್ರೀಡೆ. ಶ್ರೀಭಗವದ್ಗೀತೆ ಕೊಡುವ ಸಂದೇಶ-ಸಂವಾದ ; ವಾದ-ವಿವಾದವಲ್ಲ. ಗೀತೆ ಮುಖ್ಯವಾಗಿ ಕಲಿಯುಗಕ್ಕೆ ಕೊಟ್ಟ ತಾರಕ ಮಂತ್ರ. ಅದಕ್ಕೂ ಚಿಕ್ಕದಾಗಿ ಇರುವುದು–ವಿಷ್ಣುಸಹಸ್ರ. ಅದರಲ್ಲಿಯೂ 'ಪ್ರಾಣದ' ಮಹತ್ತ್ವ ಹೆಚ್ಚಿನದು. ನಾವು ಇಂದು ನಿಃಷ್ಪ್ರಾಣರಾಗಿದ್ದೇವೆ. ಬದುಕಿಗೆ ಹೆದರಿದ್ದೇವೆ. ಸಾವಿನ ಮಹತ್ತ್ವ ಹುತಾತ್ಮಪದವಿಗೆ ಏರಿಕೆ. ಏನೇ ಇರಲಿ ಮಹಾಭಾರತವನ್ನು ಬ್ರಾಹ್ಮಣವರ್ಗ ಸ್ನೇಹ-ಸಹಕಾರದಿಂದ ಎತ್ತಿ

ಹಿಡಿಯಬೇಕು. ಹಾಗಾಗದಿದ್ದರೆ ದುರ್ಯೋಧನ, ಕರ್ಣ, ರಾವಣ, ಏಕ ಲವ್ಯಾದಿಗಳು ಮಹಾತ್ಮರ ಪದವಿಗೆ ಏರುತ್ತಾರೆ. ಇಂತಹ ಅಶಿಕ್ಷೆ ಸಮಾಜ ಘಾತಕ. ಇದು ಸದ್ಯಕ್ಕೆ ನನ್ನ ನಿಲುವು. ಅಂತೆಯೇ ನಾನು ವ್ಯಾಸರ ತೋಳಿನ ಕಥೆ ಇತಿಹಾಸವಲ್ಲ! ಎಂದು ತಿಳಿಯುವವರೆಗೂ ಮಹಾಭಾರತದ ಪೂಜೆ ನಡೆಯಲೇಬೇಕು ; ಅನಂತರದಲ್ಲಿಯೂ ನಡೆಯಬೇಕು ಎಂದು ಶ್ರದ್ಧೆ ಇಟ್ಟು ಕೊಂಡಿದ್ದೇನೆ. ಈ ನಿಮಿತ್ತ, ವಾಚಕಮಹಾಶಯರಲ್ಲಿ ಶ್ರದ್ಧಾಯುಕ್ತವಾಗಿ ಇದರ ವಾಚನ, ಪಠಣ, ಶ್ರವಣ ನಡೆಯಬೇಕು ಎಂದು ಪ್ರಾರ್ಥಿಸುತ್ತೇನೆ.

23, 'ಶ್ರೀಮಾತಾ' — **ದ. ರಾ. ಬೇಂದ್ರೆ.**
ಸಾಧನಕೇರಿ, ಧಾರವಾಡ - 580 008 — 19-5-1979

## ದ್ವಿತೀಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ 17ನೆಯ ಸಂಪುಟದ ಎರಡನೆಯ ಮುದ್ರಣವನ್ನು ಮುಗಿಸಿದ್ದೇವೆ. 17ನೆಯ ಸಂಪುಟದ ಪ್ರತಿಗಳು ಮುಗಿದು ಸುಮಾರು ಎರಡು ವರ್ಷಗಳೇ ಆದುವು. ಈಗ ಮೂರು ಸಾವಿರಕ್ಕೂ ಹೆಚ್ಚು ಗ್ರಾಹಕರಿಗೆ ನಾವು ಈ ಸಂಪುಟವನ್ನು ಕೊಡಬೇಕಾಗಿದೆ. ಎಷ್ಟೇ ಪ್ರಯತ್ನಿ ಸಿದರೂ ಪುನರ್ಮುದ್ರಣಕಾರ್ಯವು ವೇಗವಾಗಿ ಸಾಗುತ್ತಿಲ್ಲ. ಪ್ರತಿಗಳು ಮಾತ್ರ ಅತಿಶೀಘ್ರವಾಗಿ ಮುಗಿದುಹೋಗುತ್ತಿವೆ. 17ನೆಯ ಸಂಪುಟವು ಹೊರಬೀಳುವ ವೇಳೆಗೆ 32 ಸಂಪುಟಗಳಲ್ಲಿ 17 ಸಂಪುಟಗಳು ಮಾತ್ರವೇ ಇರುತ್ತವೆ. ಇನ್ನು 15 ಸಂಪುಟಗಳನ್ನು ಪುನರ್ಮುದ್ರಣಮಾಡಬೇಕಾಗಿದೆ. ಇಷ್ಟು ಸಂಪುಟಗಳು ಇಲ್ಲದಿದ್ದರೂ ಕನ್ನಡಬಾಂಧವರು ಸಂಸ್ಥೆಯ ಮೇಲಿನ ವಿಶ್ವಾಸದಿಂದ ಗ್ರಾಹಕರಾಗುತ್ತಲೇ ಇದ್ದಾರೆ. ಈ ವಿಶ್ವಾಸವು ಅಥವಾ ನಂಬಿಕೆಯು ಸರ್ವದಾ ಇರಲು ಸಾಧ್ಯವಾಗುವಂತೆ ಮಾಡಬೇಕೆಂದು ಭಗವಂತನನ್ನು ಸರ್ವದಾ ಪ್ರಾರ್ಥಿಸುತ್ತಿದ್ದೇವೆ. ದಯಾಮಯನಾದ ಪರಮಾತ್ಮನು ನಮ್ಮ ಪ್ರಾರ್ಥನೆಯನ್ನು ನಡೆಸಿಕೊಡುವನೆಂಬ ಭರವಸೆಯಿದೆ. ಹಿಂದಿನಂತೆಯೇ ಸಂಪಾದಕಮಂಡಲಿಯ ವಿದ್ವಾಂಸರು ಈ ಸಂಪುಟವನ್ನು ಪರಿಶೋಧಿಸಿ ಕೊಟ್ಟಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕವಂದನೆಗಳು. ಈ ಸಂಪುಟವೂ ಮೈಸೂರಿನ ವಿಜಯಲಕ್ಷ್ಮಿ ಮುದ್ರಣಾಲಯದವರ ಸಹಯೋಗದಿಂದ ಪ್ರಕಟವಾಗಿದೆ.

**—ಪ್ರಕಾಶಕರು.**

# ಮಹಾಭಾರತದ ಭಗವದ್ಗೀತಾಪರ್ವದ ಸಂಪುಟಗಳು

## ಶ್ರೀಮನ್ಮಹಾಭಾರತ-ಭೀಷ್ಮಪರ್ವ ಸಂಪುಟ-೧೨, ೧೩, ೧೪.

ಸಂ. : ವಿದ್ವಾನ್ ಹೆಚ್. ಎನ್. ರಂಗಸ್ವಾಮಿ ಮತ್ತು ಇತರರು. ಪ್ರ. : ಭಾರತ ದರ್ಶನ ಪ್ರಕಾಶನ, ತ್ಯಾಗರಾಜನಗರ, ಬೆಂಗಳೂರು-28. ಪುಟಗಳು : ಮೂರು ಸಂಪುಟಗಳಿಂದ ಒಟ್ಟು ಸುಮಾರು 2000. ಪ್ರತಿಯೊಂದು ಸಂಪುಟದ ಬೆಲೆ ಹನ್ನೊಂದು ಮತ್ತು ಹದಿಮೂರು ರೂ. (1977-78).

"ಶ್ರೀಮದ್ರಾಮಾಯಣ" ಮತ್ತು "ಶ್ರೀಮನ್ಮಹಾಭಾರತ" ಎರಡೂ ನಮ್ಮ ದೇಶದ ರಾಷ್ಟ್ರೀಯ ಮಹಾಕಾವ್ಯಗಳೆಂಬುದು ನಿರ್ವಿವಾದ. ಭಾರತೀಯ ಜೀವನಮೌಲ್ಯಗಳನ್ನೂ, ಸಂಸ್ಕೃತಿಯನ್ನೂ ನಾನಾಪಾತ್ರಘಟನೆಗಳ ವಾಙ್ಮಯದಿಂದ ರಸವತ್ತಾಗಿ ಇವೆರಡೂ ನಿರೂಪಣೆಮಾಡುತ್ತವೆ. ಇವು ಸಂಸ್ಕೃತದಲ್ಲಿವೆ. ಇವುಗಳಲ್ಲಿ ವ್ಯಾಸಪ್ರಣೀತವಾದ ಮಹಾಭಾರತ ಬೃಹತ್ತು-ಮಹತ್ತುಗಳೆರಡರಿಂದಲೂ ಕೂಡಿದೆ. ಮಾನವರನ್ನು ಜ್ಞಾನಮಾರ್ಗದಲ್ಲಿ ಮುನ್ನಡೆಯಿಸುವುದಕ್ಕಾಗಿ ನಾಲ್ಕು ವೇದಗಳನ್ನು ವರ್ಗೀಕರಿಸಿದ ವೇದವ್ಯಾಸರು ಜನಸಾಮಾನ್ಯರಿಗಾಗಿ (ವೇದವನ್ನರಿಯಲು ಸಾಧ್ಯವಿಲ್ಲದವರಿಗಾಗಿ) ಒಂದು ಲಕ್ಷ ಶ್ಲೋಕಗಳಿಂದ ಹದಿನೆಂಟು ಪರ್ವಗಳಲ್ಲಿ ಮಹಾಭಾರತವನ್ನು ಐದನೆಯ ವೇದವೆನಿಸುವಂತೆ ರಚಿಸಿದರು. ಇದಲ್ಲದೆ ಹದಿನೆಂಟು ಪುರಾಣಗಳನ್ನೂ ರಚಿಸಿ, ಜನರು ಸನ್ಮಾರ್ಗದಲ್ಲಿ ಪ್ರವರ್ತಿಸಿ ಬಾಳುವಂತೆ ದಾರಿ ತೋರಿಸಿಕೊಟ್ಟರು. ವ್ಯಾಸರು ಹೇಳದೆ ಉಳಿದ ವಿಷಯವೇ ಇಲ್ಲ. ಅವರಿಂದೀಚೆಯವರು ಹೇಳಿದ್ದು, ರಚಿಸಿದ್ದು ಏನಿದ್ದರೂ ವ್ಯಾಸರು ಹೇಳಿದುದರ ಪುನರಾವರ್ತನೆ. ಆದುದರಿಂದ "ವ್ಯಾಸೋಚ್ಛಿಷ್ಟಂ ಜಗತ್ಸರ್ವಂ" ಎಂಬ ಮಾತು ರೂಢಿಗತವಾಯಿತು. ಸಂಸ್ಕೃತಭಾಷೆಯಲ್ಲಿರುವುದರಿಂದ ಇಂದಿನ ಜನಸಾಮಾನ್ಯರಿಗೆ ದುರವಗಾಹವಾಗಿರುವ ಶ್ರೀಮನ್ಮಹಾಭಾರತವನ್ನು ಮುಖ್ಯಶ್ಲೋಕಾರ್ಥಗಳೊಂದಿಗೆ ಗ್ರಂಥ ಗಾತ್ರಾನುಗುಣಸಂಪುಟಗಳಾಗಿ ರೂಪಿಸಿ, ಅನುವಾದ-ವಿವರಣೆಗಳೊಂದಿಗೆ ಮುಖ್ಯಶ್ಲೋಕಾರ್ಥಗಳೊಂದಿಗೆ ಕನ್ನಡದಲ್ಲಿ ಕೊಡುವ ಯೋಜನೆಯಂತೆ ಈ ಗ್ರಂಥಸಂಪುಟಗಳು ಇದೀಗ ಪ್ರಕಟವಾಗುತ್ತಿವೆ. ಸಂಬೋಧವಾಗ್ರೂಪ, ತೃಪ್ತಿಕರಸನ್ನಿವೇಶ

ವಿಮರ್ಶೆ, ಗೂಢಾರ್ಥಪ್ರತಿಪಾದನೆ, ತಪ್ಪಿಲ್ಲದ ಮುದ್ರಣ, ಸೊಗಸಾದ ರೂಪ ವಿನ್ಯಾಸ, ಒಳಪುಟಗಳಲ್ಲಿ ಅವಶ್ಯಕಥಾಚಿತ್ರಗಳು, ಗ್ರಾಹಕರಿಗೆ ಕಡಿಮೆ ಬೆಲೆಗೆ ದೊರೆಯುವ ಏರ್ಪಾಡು, ಗ್ರಂಥದ ಬೆಲೆಯ ಹಣಕ್ಕೆ ಸುಲಭ ಕಂತಿನ ಬ್ಯಾಂಕ್ ನೆರವು–ಇವೆಲ್ಲವುಗಳಿಂದ ಕೂಡಿದ ಪ್ರಕಟಣೆಯಾಗಿ ಈ ಗ್ರಂಥ ಸಂಪುಟಗಳು ಸಕಾಲದಲ್ಲಿ ಹೊರಬರುತ್ತಿರುವುದು ಓದುಗರ ಭಾಗ್ಯ.

ಭಾರವತ್ತ್ವವೂ ಸಾರವತ್ತ್ವವೂ ಆಗುಳ್ಳ ಮಹಾಭಾರತದಲ್ಲಿ ಸಾರವತ್ತಾದುದು ಭೀಷ್ಮಪರ್ವ. ಇದೊಂದು ಮಹಾಯುದ್ಧದ ಮಹತ್ಪರಿಣಾಮದ ಪ್ರಾರಂಭ ಭಾಗ. ವೀರನೂ, ನೀತಿವಂತನೂ, ಭಗವದ್ಭಕ್ತನೂ ಆದ ಭೀಷ್ಮನು ತನ್ನ ಅತ್ಯುನ್ನತಿಯನ್ನು ಮೆರೆದು, ವೀರಭಕ್ತಿಯಿಂದ ಕೃಷ್ಣನನ್ನೇ ಒಲಿಸಿ ಆತ್ಮಾರ್ಪಣೆಮಾಡಿದ್ದು ಈ ಭಾಗದಲ್ಲಿ. ಅಷ್ಟಾದಶ ಅಧ್ಯಾಯಗಳುಳ್ಳ, ಯೋಗಶಾಸ್ತ್ರವೆನಿಸಿದ ಕೃಷ್ಣಾರ್ಜುನಸಂವಾದಾತ್ಮಕವಾದ ಭಗವದ್ಗೀತೆ ಬರುವುದೂ ಈ ಭಾಗದಲ್ಲಿಯೇ. ಇದರಿಂದಲೇ ಈ ಭಾಗವು "ಭಗವದ್ಗೀತಾಪರ್ವ" ಎನಿಸಿದೆ. ಭಗವದ್ಗೀತಾಪರ್ವವು ಭೀಷ್ಮಪರ್ವದ ಹದಿಮೂರನೆಯ ಅಧ್ಯಾಯದಿಂದ ನಲವತ್ತಮೂರನೆಯ ಅಧ್ಯಾಯದವರೆಗೆ ವ್ಯಾಪಿಸಿದೆ. ಇಪ್ಪತ್ತೈದನೆಯ ಅಧ್ಯಾಯದಿಂದ ನಲವತ್ತಮೂರರವರೆಗೆ ಇರುವ ಹದಿನೆಂಟು ಅಧ್ಯಾಯಗಳ ಭಾಗ ಮಾತ್ರ "ಭಗವದ್ಗೀತೆ."

ಪ್ರಸ್ತುತ ಸಂಪುಟಗಳು 12, 13, 14 ಎಂಬ ಮೂರಾಗಿದ್ದು, ಭೀಷ್ಮ ಪರ್ವದ ಐವತ್ತೊಂಬತ್ತು ಅಧ್ಯಾಯಗಳಿಂದ ಕೂಡಿದೆ. ಭಗವದ್ಗೀತೆಯೇ ಈ ಮೂರೂ ಸಂಪುಟಗಳಲ್ಲಿ ಬರುವ ಮಹತ್ತ್ವಪೂರ್ಣವಾದ ಭಾಗ. ಹನ್ನೆರಡನೆಯ ಸಂಪುಟದಲ್ಲಿ ಗೀತೆಯ ಮೊದಲ ಆರು ಅಧ್ಯಾಯಗಳೂ, ಹದಿಮೂರನೆಯ ಸಂಪುಟದಲ್ಲಿ ಆಮೇಲಿನ ಎಂಟು ಅಧ್ಯಾಯಗಳೂ, ಹದಿನಾಲ್ಕನೆಯ ಸಂಪುಟದಲ್ಲಿ ಉಳಿದ ಅಧ್ಯಾಯಗಳೂ ಇದ್ದು, ಈ ಮೂರು ಸಂಪುಟಗಳೂ ಒಟ್ಟಿಗೆ ಏಕಕಾಲದಲ್ಲಿ ಭಗವದ್ಗೀತೆ–ವಿವರಣಾತ್ಮಕವೂ, ಭೀಷ್ಮಪರ್ವ ಕಥಾಭಾಗಾತ್ಮಕವೂ ಆಗಿ ವೈಶಿಷ್ಟ್ಯಪೂರ್ಣವಾಗಿದೆ. ಭಗವದ್ಗೀತಾ ಭಾಗದ ಎಲ್ಲ ಶ್ಲೋಕಗಳ ಮೂಲವನ್ನೂ ಕೊಡಲಾಗಿದೆ. ಶ್ಲೋಕಾರ್ಥ ವಿವರಣೆಯಲ್ಲಿ ಅಲ್ಲಲ್ಲಿ ಲೌಕಿಕಾನುಭವದ ದೃಷ್ಟಾಂತಗಳು, ಕಥೆಗಳು, ಘಟನೆಗಳೂ ಕೂಡಿದ್ದು ಇವು ಅರ್ಥವನ್ನು ಹೆಚ್ಚು ಸ್ಪಷ್ಟಗೊಳಿಸುತ್ತವೆ.

ವೈಶಂಪಾಯನರು ಜನಮೇಜಯನಿಗೆ ಭಗವದ್ಗೀತೆಯ ಮಹತ್ತ್ವವನ್ನು ತಿಳಿಸುತ್ತ "**ಗೀತಾ ಸುಗೀತಾ ಕರ್ತವ್ಯಾ**" (ಗೀತೆಯನ್ನು ಸುಗೀತವನ್ನಾಗಿ ಮಾಡಬೇಕು) ಎಂದಿದ್ದಾರೆ. ಇದು ಹಾಡಲು ತಕ್ಕುದು ; ಪಠನ, ಪಾಠನ, ಶ್ರವಣ, ಮನನ, ಧಾರಣ, ಅನುಸರಣಯೋಗ್ಯವಾದುದು. ಇತರ ಶಾಸ್ತ್ರಗಳಿಂದಾಗುವ ಪ್ರಯೋಜನವೆಲ್ಲವೂ ಇದರಿಂದಲೇ ಆಗುವುದು. ಇಂತಹ ಪವಿತ್ರಗ್ರಂಥ ಬೇರೆ ಇಲ್ಲ. 'ಪದ್ಮನಾಭನ ಪಾದಕಮಲದಿಂದ ಬಂದ ಗಂಗೆ ಲೋಕಪಾವನೆ. ಹೀಗಿರುವಾಗ ಮುಖಕಮಲದಿಂದ ಬಂದ ಗೀತಾಮೃತ ಅದೆಷ್ಟು ಪವಿತ್ರವೋ!' ಎಂದಿರುವುದು ಅರ್ಥವತ್ತಾಗಿದೆ.

ಶ್ಲೋಕಾರ್ಥಗಳನ್ನು ತಿಳಿಸುವಲ್ಲಿ ಬರುವ ಪದ–ಸಂದರ್ಭಗಳ, ವಿವಿಧ ಅರ್ಥಚ್ಛಾಯೆಗಳ, ಹಾಗೂ ಸಂದಿಗ್ಧವಿಷಯಗಳ ವಿವರಣೆಯನ್ನು ಶಂಕರ, ರಾಮಾನುಜ, ಮಧ್ವಾದಿವ್ಯಾಖ್ಯಾನಗಳ ಆಧಾರದಿಂದ ಅಲ್ಲಲ್ಲಿ ಚರ್ಚಿಸಿ ವಿಶದಪಡಿಸಲಾಗಿದೆ. ಗೀತೆಯನ್ನು ವಿಚಾರಪೂರ್ವಕವಾಗಿ ಅಧ್ಯಯನಮಾಡುವವರ ಮನಸ್ಸಿನಲ್ಲಿ ಮೂಡಬಹುದಾದ ಸಂಶಯಗಳಿಗೆ ಈ ವ್ಯಾಖ್ಯಾನಗಳಲ್ಲಿ ಬಹಳಷ್ಟು ಪರಿಹಾರಸಿಗುತ್ತದೆ. "**ಧರ್ಮಕ್ಷೇತ್ರೇ ಕುರುಕ್ಷೇತ್ರೇ**" ಎಂಬಲ್ಲಿ, "**ಪರ್ಯಾಪ್ತಂ ಅಪರ್ಯಾಪ್ತಂ**" ಎಂಬಲ್ಲಿ, ಸರಿಯೆನಿಸುವ ವಿವರಣೆ ಈ ಗ್ರಂಥಸಂಪುಟದಲ್ಲಿ ಸಿಗುತ್ತದೆ. ದುರ್ಯೋಧನನು ದ್ರೋಣರೊಡನೆ ಮಾತನಾಡಿದಾಗ ದ್ರೋಣರೇಕೆ ಉತ್ತರಿಸಲಿಲ್ಲ? ಅರ್ಜುನನಿಗೆ ಈ ಸಂದರ್ಭದಲ್ಲಿ ಮಾತ್ರ ಏಕೆ ವಿಷಾದವುಂಟಾಯಿತು? ಎಂಬ ಪ್ರಶ್ನೆಗಳಿಗೆ ಇಲ್ಲಿ ಉತ್ತರ ದೊರೆಯುತ್ತದೆ. ಶ್ರೇಯಸ್ಸು-ಪ್ರೇಯಸ್ಸು, ಗುಡಾಕೇಶ-ಹೃಷೀಕೇಶ ವಿಚಾರ, "**ನಾಸತೋ ವಿದ್ಯತೇ ಭಾವಃ**" ಎಂಬುದರ ವಿಶ್ಲೇಷಣೆ, ಸಾಂಖ್ಯ ವಿಚಾರ, ನಿಸ್ತ್ರೈಗುಣ್ಯಸ್ಥಿತಿ ವಿಚಾರ, "**ಆದಿತ್ಯಾನಾಮಹಂ ವಿಷ್ಣುಃ**", "**ವೇದಾನಾಂ ಸಾಮವೇದೋऽಸ್ಮಿ**" ಎಂಬಲ್ಲಿ ಬರುವ ಅರ್ಥಸಂದೇಹ–ಇಂತಹವನ್ನೆಲ್ಲ ವಾಖ್ಯಾನಿಸಿರುವುದು ಓದುಗರಿಗೆ ಸಹಾಯಕವಾಗಿದೆ. ಭಗವದ್ಗೀತೆಯಲ್ಲಿ ಬರುವ ವಿಶೇಷಪದಗಳಿಗೆ ವಿಶೇಷಾರ್ಥವಿದೆ. ಯೋಗ, ಭಕ್ತಿ, ಸುಕೃತಿ, ಏಕಭಕ್ತಿ, ಅಭ್ಯಾಸ, ಸ್ಮೃತಿ, ಅಧಿಯಜ್ಞ, ಸ್ವಭಾವ, ವಿಸರ್ಗ, ಅಧ್ಯಾತ್ಮ ಅಧಿದೈವ, ಸಾಂಖ್ಯ, ಮೇರುಪರ್ವತ (ಪುಟ 895) ಮುಂತಾದುವುಗಳಿಗೆಲ್ಲ ಸಮರ್ಪಕವಾದ ವಿವರಣೆ ದೊರೆಯುತ್ತದೆ.

ಪರಿಶಿಷ್ಟದಲ್ಲಿ ಗೀತಾಪಾರಾಯಣವಿಧಿಯನ್ನೂ ಗೀತಾಮಾಹಾತ್ಮ್ಯವನ್ನೂ ಕೊಡಲಾಗಿದೆ. ಗೀತಾಶ್ಲೋಕಸಂಖ್ಯೆಯನ್ನೂ ಆಧಾರಪೂರ್ವಕ ಚರ್ಚಿಸಲಾಗಿದೆ. ಭಗವದ್ಗೀತೆಯಲ್ಲಿ ಪ್ರತಿಪಾದಿತವಾದ ಸಮತ್ವ ಹಾಗೂ ರಷ್ಯಾದೇಶದ ಇಂದಿನ ಸಾಮ್ಯವಾದ–ಇವುಗಳ ತೌಲನಿಕವಿವರಣೆಯಿದೆ. ಇವುಗಳಿಂದ ಈ ಗ್ರಂಥಸಂಪುಟಗಳ ಉಪಯೋಗ, ಮೌಲ್ಯ ಹೆಚ್ಚಾಗಿದೆ. ಭಗವದ್ಗೀತೆಯ ಮೂಲ, ಅನುವಾದ, ವ್ಯಾಖ್ಯಾನಗ್ರಂಥಗಳು ಸಂಖ್ಯೆಯಲ್ಲಿ ಕನ್ನಡದಲ್ಲಿ ಕಡಿಮೆಯೇ. ಆ ಅರಕೆಯನ್ನು ತುಂಬುವುದರಲ್ಲಿ ವಿಚಾರವಂತರು ಸಂಪುಟಗಳನ್ನು ಕೈಗೆತ್ತಿಕೊಳ್ಳುವುದೆಂದರೆ ಜ್ಞಾನದ ಬಿಂದಿಗೆಯನ್ನೇ ಹಿಡಿದು ಕೊಂಡ ಹಾಗೆ. –ಟಿ. ಕೇಶವಭಟ್ಟ

## ಮೂರನೆಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ದಯೆಯಿಂದ 17ನೆಯ ಸಂಪುಟದ ಮೂರನೆಯ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇವೆ. 16ನೆಯ ಸಂಪುಟ ವನ್ನು D.T.P. ಮೂಲಕ ಹೊರತರಲು ಪ್ರಯತ್ನಿಸುತ್ತಿದ್ದು 17ನೆಯ ಸಂಪುಟವನ್ನು ಮುದ್ರಣಾಲಯದಲ್ಲಿಯೇ ಮುದ್ರಿಸಲಾಯಿತು. 16 ಮತ್ತು 17 ಈ ಎರಡು ಸಂಪುಟಗಳನ್ನೂ ಒಟ್ಟಾಗಿಯೇ ಹೊರತರಲು ಪ್ರಯತ್ನಿಸ ಲಾಗುತ್ತಿದೆ. ಮುದ್ರಣಾಲಯದಲ್ಲಿ ಈಗ ಮುದ್ರಣವಾಗುತ್ತಿರುವುದು ಭಾಗವತದ ಎರಡನೆಯ ಸಂಪುಟ. ಇದನ್ನು ಸಾಧ್ಯವಾದಷ್ಟು ಬೇಗ ಮುಗಿಸಿ ಗ್ರಾಹಕರಿಗೆ ವಿತರಿಸಬೇಕೆಂಬ ಆಶಯವಿದೆ. ಎಲ್ಲಕ್ಕೂ ಪರಮಾತ್ಮನ ಅನುಗ್ರಹಬೇಕು. ನಮ್ಮ ಸಂಕಲ್ಪಕ್ಕೆ ಅವನು 'ಅಸ್ತು' ಎನ್ನಬೇಕು. ಆಗಲೇ ನಮ್ಮ ಸತ್ಸಂಕಲ್ಪಗಳು ಈಡೇರಿಯಾವು.

ಈ ಸಂಪುಟದ ತಪ್ಪು-ಒಪ್ಪುಗಳನ್ನು ಸಂಪಾದಕಮಂಡಲಿಯವರು ನೋಡಿಕೊಟ್ಟಿರುತ್ತಾರೆ. ಅವರಿಗೆ ನಮ್ಮ ಹೃತ್ಪೂರ್ವಕವಂದನೆಗಳು.

ದಯಾಮಯನಾದ ಪರಮಾತ್ಮನು ಎಲ್ಲರಿಗೂ ಆಯುರಾರೋಗ್ಯ-ಐಶ್ವರ್ಯಗಳನ್ನಿತ್ತು ಕಾಪಾಡಲಿ. –ಪ್ರಕಾಶಕರು.

## ಮಹಾಭಾರತ–ದ್ರೋಣಪರ್ವ : ಹದಿನೇಳನೆಯ ಸಂಪುಟದ ವಿಷಯಾನುಕ್ರಮಣಿಕೆ


| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ಜಯದ್ರಥವಧಪರ್ವ | | |
| ೧೨೨ | ದ್ರೋಣರು ದುಃಶಾಸನನನ್ನು ನಿಂದಿಸಿದುದು : ವೀರಕೇತುವೇ ಮೊದಲಾದ ಪಾಂಚಾಲರನ್ನು ವಧಿಸಿದುದು : ದ್ರೋಣ-ಧೃಷ್ಟದ್ಯುಮ್ನರ ಯುದ್ಧ : ದ್ರೋಣರು ಮೂರ್ಛಿತರಾದುದು : ಧೃಷ್ಟದ್ಯುಮ್ನನ ಪಲಾಯನ : ದ್ರೋಣರ ವಿಜಯ .... | 2933 |
| ೧೨೩ | ಸಾತ್ಯಕಿಯೊಡನೆ ದುಃಶಾಸನನ ಘೋರಯುದ್ಧ : ದುಃಶಾಸನನ ಪರಾಜಯ .... | 2942 |
| ೧೨೪ | ಕೌರವ-ಪಾಂಡವರ ಘೋರಯುದ್ಧ : ಪಾಂಡವರೊಡನೆ ದುರ್ಯೋಧನನ ಕಾಳಗ .... | 2946 |
| ೧೨೫ | ದ್ರೋಣರು ಬೃಹತ್ಕ್ಷತ್ರ, ಧೃಷ್ಟಕೇತು, ಜರಾಸಂಧನ ಮಗನಾದ ಸಹದೇವ, ಧೃಷ್ಟದ್ಯುಮ್ನನ ಮಗನಾದ ಕ್ಷತ್ರಧರ್ಮ- ಇವರನ್ನು ಸಂಹರಿಸಿದುದು : ಚೇಕಿತಾನನ ಪರಾಜಯ .... | 2951 |
| ೧೨೬ | ಯುಧಿಷ್ಠಿರನು ಚಿಂತಾಮಗ್ನನಾಗಿ ಸಾತ್ಯಕಿ-ಅರ್ಜುನರು ಇರುವ ಸ್ಥಳವನ್ನು ತಿಳಿದು ಬರಲು ಭೀಮಸೇನನನ್ನು ಕಳುಹಿಸಿಕೊಟ್ಟುದು .... | 2959 |
| ೧೨೭ | ಭೀಮಸೇನನು ಕೌರವರ ಸೈನ್ಯವನ್ನು ಪ್ರವೇಶಿಸಿದುದು : ಸಾರಥಿಸಹಿತವಾದ ದ್ರೋಣರ ರಥವನ್ನು ಧ್ವಂಸಮಾಡಿದುದು : ಧೃತರಾಷ್ಟ್ರನ ಹನ್ನೊಂದು ಮಕ್ಕಳನ್ನು ವಧಿಸಿದುದು : ಉಳಿದ ಮಕ್ಕಳೊಡನೆ ಕೌರವಸೈನ್ಯದ ಪಲಾಯನ .... | 2965 |
| ೧೨೮ | ಭೀಮಸೇನನು ದ್ರೋಣರನ್ನೂ ಮತ್ತು ಇತರ ಕೌರವ ಯೋಧರನ್ನೂ ಪರಾಜಯಗೊಳಿಸಿದುದು : ದ್ರೋಣರ ರಥವನ್ನು ಎಂಟು ಬಾರಿ ಎಸೆದುದು : ಭೀಮಸೇನನು ಕಷ್ಣಾರ್ಜುನರನ್ನು ಸಮೀಪಿಸಿದುದು : ಸಿಂಹನಾದದ ಮೂಲಕ ಯುಧಿಷ್ಠಿರನಿಗೆ ಸೂಚನೆಯನ್ನಿತ್ತುದು .... | 2974 |
| ೧೨೯ | ಭೀಮಸೇನ ಮತ್ತು ಕರ್ಣರ ಯುದ್ಧ : ಕರ್ಣನ ಪರಾಜಯ | 2980 |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ೧೩೦ | ದುರ್ಯೋಧನನು ದ್ರೋಣರನ್ನು ನಿಂದಿಸಿದುದು : ದ್ರೋಣರು ದ್ಯೂತದ ಪರಿಣಾಮವನ್ನು ತಿಳಿಯ ಹೇಳಿ ಪುನಃ ದುರ್ಯೋಧನ ನನ್ನು ಯುದ್ಧಕ್ಕೆ ಕಳುಹಿಸಿಕೊಟ್ಟುದು : ದುರ್ಯೋಧನ ನೊಡನೆ ಯುಧಾಮನ್ಯು ಮತ್ತು ಉತ್ತಮೌಜಸರ ಯುದ್ಧ | 2984 |
| ೧೩೧ | ಭೀಮಸೇನನಿಂದ ಕರ್ಣನ ಪರಾಜಯ | .... 2989 |
| ೧೩೨ | ಭೀಮ-ಕರ್ಣರ ಘೋರಯುದ್ಧ | .... 2995 |
| ೧೩೩ | ಕರ್ಣ-ಭೀಮರ ಯುದ್ಧ : ಕರ್ಣನ ರಥದ ವಿನಾಶ : ಧೃತರಾಷ್ಟ್ರನ ಮಗನಾದ ದುರ್ಜಯನ ವಧೆ | .... 3000 |
| ೧೩೪ | ಭೀಮಸೇನ-ಕರ್ಣರ ಯುದ್ಧ : ಭೀಮಸೇನನಿಂದ ದುರ್ಮುಖನ ವಧೆ : ಕರ್ಣನ ಪಲಾಯನ | .... 3005 |
| ೧೩೫ | ಧೃತರಾಷ್ಟ್ರನು ಭೀಮಸೇನನ ಬಲವನ್ನು ಖೇದಪೂರ್ವಕ ವಾಗಿ ವರ್ಣಿಸಿದುದು : ತನ್ನ ಮಕ್ಕಳನ್ನೂ ನಿಂದಿಸಿದುದು : ಭೀಮನು ದುರ್ಮರ್ಷಣನೇ ಮೊದಲಾದ ಐವರು ಕೌರವರನ್ನು ಸಂಹರಿಸಿದುದು | .... 3010 |
| ೧೩೬ | ಭೀಮ-ಕರ್ಣರ ಯುದ್ಧ : ಕರ್ಣನ ಪಲಾಯನ : ಭೀಮನು ಧೃತರಾಷ್ಟ್ರನ ಏಳು ಮಕ್ಕಳನ್ನು ಸಂಹರಿಸಿದುದು | .... 3015 |
| ೧೩೭ | ಭೀಮ-ಕರ್ಣರ ಯುದ್ಧ : ಧೃತರಾಷ್ಟ್ರನ ಏಳು ಮಂದಿ ಮಕ್ಕಳ ಸಂಹಾರ | .... 3020 |
| ೧೩೮ | ಭೀಮ-ಕರ್ಣರ ಭಯಂಕರಯುದ್ಧ | .... 3028 |
| ೧೩೯ | ಭೀಮ-ಕರ್ಣರ ಭಯಂಕರಯುದ್ಧ : ಮೊದಲು ಭೀಮನ ವಿಜಯ : ಅನಂತರ ಕರ್ಣನ ವಿಜಯ : ಅರ್ಜುನನ ಬಾಣಗಳಿಂದ ಪೀಡಿತರಾದ ಕರ್ಣಾಶ್ವತ್ಥಾಮರು ಪಲಾಯನಮಾಡಿದುದು | .... 3031 |
| ೧೪೦ | ಸಾತ್ಯಕಿಯು ಅಲಂಬುಷನನ್ನೂ ಮತ್ತು ದುಃಶಾಸನನ ಕುದುರೆಗಳನ್ನೂ ಸಂಹರಿಸಿದುದು | .... 3049 |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ೧೪೧ | ಸಾತ್ಯಕಿಯ ಅದ್ಭುತಪರಾಕ್ರಮ : ಶ್ರೀಕೃಷ್ಣನು ಅರ್ಜುನನಿಗೆ ಸಾತ್ಯಕಿಯ ಆಗಮನದ ಸೂಚನೆಯನ್ನಿತ್ತುದು : ಅರ್ಜುನನ ಚಿಂತೆ | .... 3054 |
| ೧೪೨ | ಭೂರಿಶ್ರವಸನಿಗೂ-ಸಾತ್ಯಕಿಗೂ ಕಟುಸಂಭಾಷಣೆ ಮತ್ತು ಯುದ್ಧ : ಭೂರಿಶ್ರವಸನು ಸಾತ್ಯಕಿಯ ಕತ್ತನ್ನು ಕತ್ತರಿಸಲು ಹೋದುದು : ಅರ್ಜುನನು ಭೂರಿಶ್ರವಸನ ಭುಜವನ್ನು ಕತ್ತರಿಸಿದುದು | .... 3059 |
| ೧೪೩ | ಭೂರಿಶ್ರವಸನು ಅರ್ಜುನನನ್ನು ನಿಂದಿಸಿದುದು : ಅರ್ಜುನನ ಉತ್ತರ : ಭೂರಿಶ್ರವಸನ ಪ್ರಾಯೋಪವೇಶ : ಆ ಸಮಯ ದಲ್ಲಿ ಸಾತ್ಯಕಿಯು ಭೂರಿಶ್ರವಸನ ಶಿರಸ್ಸನ್ನು ಕತ್ತರಿಸಿದುದು | 3070 |
| ೧೪೪ | ಸಾತ್ಯಕಿಯು ಭೂರಿಶ್ರವಸನಿಂದ ಅಪಮಾನಿತನಾದುದಕ್ಕೆ ಕಾರಣ : ವೃಷ್ಣಿವಂಶದ ವೀರರ ಪ್ರಶಂಸೆ | .... 3085 |
| ೧೪೫ | ಅರ್ಜುನನು ಜಯದ್ರಥನನ್ನು ಆಕ್ರಮಿಸಿದುದು : ಕರ್ಣ-ದುರ್ಯೋಧನರ ಸಂಭಾಷಣೆ : ಅರ್ಜುನನೊಡನೆ ಕರ್ಣನ ಯುದ್ಧ : ಕರ್ಣನ ಪಲಾಯನ : ಎಲ್ಲ ಯೋಧರೊಡನೆಯೂ ಅರ್ಜುನನ ಘೋರಯುದ್ಧ | .... 3090 |
| ೧೪೬ | ಅರ್ಜುನನ ಅದ್ಭುತಪರಾಕ್ರಮ ಮತ್ತು ಸೈಂಧವನ ವಧೆ | .... 3104 |
| ೧೪೭ | ಅರ್ಜುನನ ಬಾಣಗಳ ಪ್ರಹಾರದಿಂದ ಕೃಪರು ಮೂರ್ಛೆಹೋದುದು : ಅರ್ಜುನನ ಖೇದ : ಕರ್ಣ-ಸಾತ್ಯಕಿಯರ ಯುದ್ಧ : ಕರ್ಣನ ಪರಾಜಯ | .... 3122 |
| ೧೪೮ | ಅರ್ಜುನನು ಕರ್ಣನನ್ನು ನಿಂದಿಸಿದುದು : ವೃಷಸೇನನನ್ನು ವಧೆಮಾಡುವೆನೆಂದು ಅರ್ಜುನನು ಪ್ರತಿಜ್ಞೆಮಾಡಿದುದು : ಶ್ರೀಕೃಷ್ಣನು ಅರ್ಜುನನಿಗೆ ಭಯಾನಕವಾದ ದೃಶ್ಯವನ್ನು ತೋರಿಸುತ್ತಾ ಯುಧಿಷ್ಠಿರನ ಸಮೀಪಕ್ಕೆ ಕರೆದುಕೊಂಡು ಹೋದುದು | .... 3133 |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ೧೪೯ | ಶ್ರೀಕೃಷ್ಣನು ಯುಧಿಷ್ಠಿರನಿಗೆ ವಿಜಯದ ವಾರ್ತೆಯನ್ನು ತಿಳಿಸಿದುದು : ಯುಧಿಷ್ಠಿರನು ಶ್ರೀಕೃಷ್ಣನ ಸ್ತುತಿಗೈಯ್ದುದು ಮತ್ತು ಭೀಮಾರ್ಜುನ-ಸಾತ್ಯಕಿಯರನ್ನೂ ಅಭಿನಂದಿಸಿದುದು | .... 3142 |
| ೧೫೦ | ವ್ಯಾಕುಲಿತನಾದ ದುರ್ಯೋಧನನು ಖೇದಗೊಂಡು ದ್ರೋಣರನ್ನು ನಿಂದಿಸಿದುದು | .... 3152 |
| ೧೫೧ | ದ್ರೋಣರು ದುರ್ಯೋಧನನಿಗೆ ಉತ್ತರಿಸಿದುದು : ಪುನಃ ಯುದ್ಧಕ್ಕೆ ಹೊರಟುದು | .... 3157 |
| ೧೫೨ | ದುರ್ಯೋಧನ-ಕರ್ಣರ ಸಂಭಾಷಣೆ : ಯುದ್ಧದ ಪುನರಾರಂಭ | .... 3164 |
| | ಹದಿನಾಲ್ಕನೆಯ ದಿವಸದ ಯುದ್ಧದ ವಿಶ್ಲೇಷಣೆ | .... 3170 |
| ಘಟೋತ್ಕಚವಧಪರ್ವ | | |
| ೧೫೩ | ಕೌರವ-ಪಾಂಡವಸೈನಿಕರ ನಡುವೆ ಭಯಂಕರಯುದ್ಧ : ದುರ್ಯೋಧನ-ಯುಧಿಷ್ಠಿರರ ಯುದ್ಧ : ದುರ್ಯೋಧನನ ಪರಾಜಯ | .... 3208 |
| ೧೫೪ | ರಾತ್ರಿಯುದ್ಧದಲ್ಲಿ ಪಾಂಡವಸೈನಿಕರು ದ್ರೋಣಾಚಾರ್ಯರನ್ನು ಆಕ್ರಮಿಸಿದುದು : ದ್ರೋಣರಿಂದ ಪಾಂಡವಸೈನ್ಯದ ನಾಶ | .... 3212 |
| ೧೫೫ | ದ್ರೋಣರು ಶಿಬಿಯನ್ನು ಸಂಹರಿಸಿದುದು : ಭೀಮಸೇನನು ಮಲ್ಲಯುದ್ಧದಲ್ಲಿ ಕಲಿಂಗರಾಜನ ಕುಮಾರನನ್ನೂ, ಶಸ್ತ್ರಯುದ್ಧದಲ್ಲಿ ಧ್ರುವ-ಜಯರಾತರನ್ನೂ, ಧೃತರಾಷ್ಟ್ರನ ಮಕ್ಕಳಾದ ದುಷ್ಕರ್ಣ-ದುರ್ಮದರನ್ನೂ ಸಂಹರಿಸಿದುದು | 3216 |
| ೧೫೬ | ಸೋಮದತ್ತ-ಸಾತ್ಯಕಿಯರ ಯುದ್ಧ : ಸೋಮದತ್ತನ ಪರಾಜಯ : ಘಟೋತ್ಕಚಾಶ್ವತ್ಥಾಮರ ಯುದ್ಧ : ಅಶ್ವತ್ಥಾಮನು ಘಟೋತ್ಕಚನ ಪುತ್ರನನ್ನೂ, ಒಂದು | |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| | ಅಕ್ಷೌಹಿಣೀ ರಾಕ್ಷಸಸೈನ್ಯವನ್ನೂ, ದ್ರುಪದನ ಮಕ್ಕಳನ್ನೂ ಸಂಹರಿಸಿದುದು : ಪಾಂಡವಸೈನ್ಯದ ಪರಾಜಯ | .... 3222 |
| ೧೫೭ | ಸೋಮದತ್ತನು ಮೂರ್ಛೆಹೋದುದು : ಭೀಮನಿಂದ ಬಾಹ್ಲೀಕನ ವಧೆ : ಭೀಮನು ಧೃತರಾಷ್ಟ್ರನ ಹತ್ತು ಮಕ್ಕಳನ್ನೂ, ಶಕುನಿಯ ಸೈನ್ಯದ ಏಳು ಮಹಾರಥರನ್ನೂ ಮತ್ತು ಐವರು ಸಹೋದರರನ್ನೂ ಸಂಹರಿಸಿದುದು : ದ್ರೋಣ-ಯುಧಿಷ್ಠಿರರ ಯುದ್ಧ : ಯುಧಿಷ್ಠಿರನ ವಿಜಯ | 3244 |
| ೧೫೮ | ದುರ್ಯೋಧನ-ಕರ್ಣರ ಸಂಭಾಷಣೆ : ಕೃಪರು ಕರ್ಣನನ್ನು ನಿಂದಿಸಿದುದು : ಕರ್ಣನು ಕೃಪರನ್ನು ಅವಮಾನ ಪಡಿಸಿದುದು | .... 3249 |
| ೧೫೯ | ಅಶ್ವತ್ಥಾಮನು ಕರ್ಣನನ್ನು ಸಂಹರಿಸಲು ಹೊರಟುದು : ದುರ್ಯೋಧನನು ತಡೆದುದು : ಪಾಂಡವ-ಪಾಂಚಾಲರು ಕರ್ಣನನ್ನು ಆಕ್ರಮಿಸಿದುದು : ಕರ್ಣನ ಪರಾಕ್ರಮ : ಅರ್ಜುನನಿಂದ ಕರ್ಣನ ಪರಾಜಯ : ದುರ್ಯೋಧನನು ಪಾಂಚಾಲರ ವಧೆಗೆ ಅಶ್ವತ್ಥಾಮನನ್ನು ನಿಯೋಜಿಸಿದುದು | 3261 |
| ೧೬೦ | ಅಶ್ವತ್ಥಾಮನು ದುರ್ಯೋಧನನಿಗೆ ಆಶ್ವಾಸನೆಯನ್ನಿತ್ತು ಪಾಂಚಾಲರೊಡನೆ ಯುದ್ಧಮಾಡಿದುದು : ಧೃಷ್ಟದ್ಯುಮ್ನನನ್ನು ರಥಹೀನನನ್ನಾಗಿ ಮಾಡಿದುದು : ಪಾಂಚಾಲಸೈನ್ಯದ ಪಲಾಯನ | .... 3273 |
| ೧೬೧ | ಭೀಮಾರ್ಜುನರಿಂದ ಕೌರವಸೇನೆಯ ಆಕ್ರಮಣ : ಕೌರವಸೇನೆಯ ಪಲಾಯನ | .... 3281 |
| ೧೬೨ | ಸಾತ್ಯಕಿಯಿಂದ ಸೋಮದತ್ತನ ವಧೆ : ದ್ರೋಣರಿಗೂ ಯುಧಿಷ್ಠಿರನಿಗೂ ಯುದ್ಧ : ಶ್ರೀಕೃಷ್ಣನು ಯುಧಿಷ್ಠಿರನಿಗೆ ದ್ರೋಣರಿಂದ ದೂರವಿರಲು ಹೇಳಿದುದು | .... 3283 |
| ೧೬೩ | ಕೌರವ-ಪಾಂಡವರ ಸೈನ್ಯಗಳಲ್ಲಿ ದೀವಟಿಗೆಗಳ ಪ್ರಕಾಶ | .... 3288 |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ೧೬೪ | ಉಭಯಪಕ್ಷಗಳ ಸೈನ್ಯಗಳಿಗೂ ಭಯಂಕರಯುದ್ಧ : ದುರ್ಯೋಧನನು ದ್ರೋಣರನ್ನು ರಕ್ಷಿಸುವಂತೆ ಸೈನಿಕರಿಗೆ ಆದೇಶನೀಡಿದುದು | .... 3294 |
| ೧೬೫ | ಎರಡು ಸೈನ್ಯಗಳ ನಡುವೆ ಭಯಂಕರವಾದ ಯುದ್ಧ : ಕೃತವರ್ಮನು ಯುಧಿಷ್ಠಿರನನ್ನು ಪರಾಜಯ ಗೊಳಿಸಿದುದು | .... 3298 |
| ೧೬೬ | ಸಾತ್ಯಕಿಯು ಭೂರಿಯನ್ನು ಸಂಹರಿಸಿದುದು : ಘಟೋತ್ಕಚಾಶ್ವತ್ಥಾಮರ ಘೋರಯುದ್ಧ : ಭೀಮ-ದುರ್ಯೋಧನರ ಯುದ್ಧ : ದುರ್ಯೋಧನನ ಪಲಾಯನ | .... 3302 |
| ೧೬೭ | ಕರ್ಣನು ಸಹದೇವನನ್ನು ಪರಾಜಯಗೊಳಿಸಿದುದು : ಶಲ್ಯನು ಶತಾನೀಕನನ್ನು ವಧಿಸಿದುದು : ವಿರಾಟನ ಪರಾಜಯ : ಅರ್ಜುನನಿಂದ ಪರಾಜಿತನಾದ ಅಲಂಬುಷನು ಯುದ್ಧವನ್ನು ಬಿಟ್ಟು ಓಡಿಹೋದುದು | .... 3308 |
| ೧೬೮ | ಶತಾನೀಕನು ಚಿತ್ರಸೇನನನ್ನೂ, ವೃಷಸೇನನು ದ್ರುಪದನನ್ನೂ ಪರಾಜಯಗೊಳಿಸಿದುದು : ಪ್ರತಿವಿಂಧ್ಯ ಮತ್ತು ದುಃಶಾಸನರ ಯುದ್ಧ | .... 3314 |
| ೧೬೯ | ನಕುಲನಿಂದ ಶಕುನಿಯು ಪರಾಜಿತನಾದುದು : ಶಿಖಂಡಿಗೂ-ಕೃಪಾಚಾರ್ಯರಿಗೂ ಭಯಂಕರವಾದ ಯುದ್ಧ | .... 3319 |
| ೧೭೦ | ಧೃಷ್ಟದ್ಯುಮ್ನ-ದ್ರೋಣರ ಯುದ್ಧ : ಧೃಷ್ಟದ್ಯುಮ್ನನು ದ್ರುಮಸೇನನನ್ನು ಸಂಹರಿಸಿದುದು : ಕರ್ಣ-ಸಾತ್ಯಕಿಯರ ಯುದ್ಧ : ಕರ್ಣನು ದುರ್ಯೋಧನನಿಗೆ ಸಲಹೆನೀಡಿದುದು : ಶಕುನಿಯು ಪಾಂಡವರನ್ನು ಆಕ್ರಮಿಸಿದುದು | .... 3325 |
| ೧೭೧ | ಸಾತ್ಯಕಿಯು ದುರ್ಯೋಧನನನ್ನೂ, ಅರ್ಜುನನು ಶಕುನಿ-ಉಲೂಕರನ್ನೂ, ಧೃಷ್ಟದ್ಯುಮ್ನನು ಕೌರವರ ಸೈನ್ಯವನ್ನೂ ಪರಾಜಯಗೊಳಿಸಿದುದು | .... 3332 |
| ೧೭೨ | ದುರ್ಯೋಧನನ ನಿಂದನೆಯಿಂದ ಖತಿಗೊಂಡ ದ್ರೋಣ-ಕರ್ಣರ ಭೀಕರಯುದ್ಧ : ಪಾಂಡವಸೈನಿಕರ ಪಲಾಯನ : | |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| | ಭೀಮಸೇನನು ಸೈನಿಕರನ್ನು ಹಿಂದಿರುಗಿಸಿದುದು : ಭೀಮಾರ್ಜುನರು ಕೌರವಸೈನ್ಯವನ್ನು ಪುನಃ ಆಕ್ರಮಿಸಿದುದು | .... 3338 |
| ೧೭೩ | ಕರ್ಣನು ಧೃಷ್ಟದ್ಯುಮ್ನನನ್ನೂ, ಪಾಂಚಾಲರನ್ನೂ ಪರಾಜಯಗೊಳಿಸಿದುದು : ಯುಧಿಷ್ಠಿರನ ಆತಂಕ : ಕೃಷ್ಣಾರ್ಜುನರು ಕರ್ಣನೊಡನೆ ಯುದ್ಧಕ್ಕೆ ಹೋಗುವಂತೆ ಘಟೋತ್ಕಚನನ್ನು ಪ್ರೋತ್ಸಾಹಿಸಿ ಕರ್ಣನೊಡನೆ ಯುದ್ಧಮಾಡಲು ಕಳುಹಿಸಿದುದು | .... 3343 |
| ೧೭೪ | ಘಟೋತ್ಕಚನಿಗೂ-ಜಟಾಸುರನ ಮಗನಾದ ಅಲಂಬುಷನಿಗೂ ಘೋರಯುದ್ಧ : ಘಟೋತ್ಕಚನು ಅಲಂಬುಷನನ್ನು ಸಂಹರಿಸಿದುದು | .... 3352 |
| ೧೭೫ | ಘಟೋತ್ಕಚನ ಮತ್ತು ಅವನ ರಥಾದಿಗಳ ಸ್ವರೂಪ ವರ್ಣನೆ : ಕರ್ಣ-ಘಟೋತ್ಕಚರ ಘೋರಸಂಗ್ರಾಮ | .... 3359 |
| ೧೭೬ | ಅಲಾಯುಧನು ಯುದ್ಧಸ್ಥಳವನ್ನು ಪ್ರವೇಶಿಸಿದುದು : ಅವನ ಸ್ವರೂಪ ಮತ್ತು ರಥಾದಿಗಳ ವರ್ಣನೆ | .... 3374 |
| ೧೭೭ | ಭೀಮಸೇನ ಮತ್ತು ಅಲಾಯುಧರ ಘೋರಯುದ್ಧ | .... 3377 |
| ೧೭೮ | ಉಭಯಪಕ್ಷಗಳ ಸೈನ್ಯಗಳ ನಡುವೆ ಭಯಂಕರಯುದ್ಧ : ಘಟೋತ್ಕಚನು ಅಲಾಯುಧನನ್ನು ಸಂಹರಿಸಿದುದು : ದುರ್ಯೋಧನನ ಪಶ್ಚಾತ್ತಾಪ | .... 3383 |
| ೧೭೯ | ಘಟೋತ್ಕಚನ ಘೋರಯುದ್ಧ : ಕರ್ಣನ ಶಕ್ತ್ಯಾಯುಧದಿಂದ ಘಟೋತ್ಕಚನ ಸಂಹಾರ | .... 3387 |
| ೧೮೦ | ಘಟೋತ್ಕಚನ ವಧೆಯಿಂದಾಗಿ ಪಾಂಡವರ ಶೋಕ : ಕೃಷ್ಣನ ಸಂತೋಷ ಮತ್ತು ಅದಕ್ಕೆ ಕಾರಣನಿರೂಪಣೆ | .... 3400 |
| ೧೮೧ | ಶ್ರೀಕೃಷ್ಣನು ಜರಾಸಂಧನೇ ಮೊದಲಾದ ಧರ್ಮದ್ರೋಹಿಗಳನ್ನು ವಧಿಸಲು ಕಾರಣವನ್ನು ಅರ್ಜುನನಿಗೆ ವಿವರಿಸಿ ಹೇಳಿದುದು | .... 3407 |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|
| ೧೮೨ | ಕರ್ಣನು ಅರ್ಜುನನ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸದಿದ್ದುದಕ್ಕೆ ಕಾರಣವನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳಿದುದು | .... 3412 |
| ೧೮೩ | ಧೃತರಾಷ್ಟ್ರನ ಪಶ್ಚಾತ್ತಾಪ : ಸಂಜಯನ ಉತ್ತರ : ಘಟೋತ್ಕಚನ ವಧೆಗಾಗಿ ಯುಧಿಷ್ಠಿರನ ಶೋಕ : ಶ್ರೀಕೃಷ್ಣ ಮತ್ತು ಕೃಷ್ಣದ್ವೈಪಾಯನರಿಂದ ಸಮಾಧಾನ | .... 3421 |
| ದ್ರೋಣವಧಪರ್ವ | | |
| ೧೮೪ | ನಿದ್ರೆಯಿಲ್ಲದೇ ವ್ಯಾಕುಲರಾಗಿದ್ದ ಸೈನಿಕರು ಅರ್ಜುನನ ಮಾತಿನಂತೆ ನಿದ್ರೆಹೋದುದು : ಚಂದ್ರೋದಯವಾದನಂತರ ಪುನಃ ಯುದ್ಧವನ್ನು ಪ್ರಾರಂಭಿಸಿದುದು | .... 3430 |
| | ಹದಿನಾಲ್ಕನೆಯ ದಿವಸದ ರಾತ್ರಿಯುದ್ಧದ ವಿಶ್ಲೇಷಣೆ | .... 3437 |
| ೧೮೫ | ದುರ್ಯೋಧನನು ದ್ರೋಣರನ್ನು ಅವಹೇಳನ ಮಾಡಿದುದು : ದ್ರೋಣರ ವ್ಯಂಗ್ಯೋಕ್ತಿ | .... 3467 |
| ೧೮೬ | ಪಾಂಡವವೀರರು ದ್ರೋಣರನ್ನು ಆಕ್ರಮಿಸಿದುದು : ದ್ರುಪದಪೌತ್ರರು, ದ್ರುಪದ-ವಿರಾಟ ಇವರೇ ಮೊದಲಾದವರ ವಧೆ : ಧೃಷ್ಟದ್ಯುಮ್ನನ ಪ್ರತಿಜ್ಞೆ | .... 3475 |
| ೧೮೭ | ರಣಾಂಗಣದ ಭೀಕರತೆಯ ವರ್ಣನೆ : ನಕುಲನಿಂದ ದುರ್ಯೋಧನನು ಪರಾಜಿತನಾದುದು : | .... 3482 |
| ೧೮೮ | ದುಃಶಾಸನ-ಸಹದೇವರ, ಕರ್ಣ-ಭೀಮರ ಮತ್ತು ದ್ರೋಣಾರ್ಜುನರ ಮಹಾಸಮರ | .... 3489 |
| ೧೮೯ | ಧೃಷ್ಟದ್ಯುಮ್ನನು ದುಃಶಾಸನನನ್ನು ಪರಾಜಯಗೊಳಿಸಿ ದ್ರೋಣರನ್ನು ಆಕ್ರಮಿಸಿದುದು : ನಕುಲ-ಸಹದೇವರು ಧೃಷ್ಟದ್ಯುಮ್ನನನ್ನು ರಕ್ಷಿಸಿದುದು : ದುರ್ಯೋಧನ-ಸಾತ್ಯಕಿಯರ ಸಂಭಾಷಣೆ ಮತ್ತು ಯುದ್ಧ : ಕರ್ಣ-ಭೀಮಸೇನರ ಸಂಗ್ರಾಮ : ಕೌರವರ ಮೇಲೆ ಅರ್ಜುನನ ಆಕ್ರಮಣ | .... 3495 |
| ೧೯೦ | ದ್ರೋಣಾಚಾರ್ಯರ ಘೋರಸಂಹಾರಕ್ರಿಯೆ : ಋಷಿಗಳು ಅಸ್ತ್ರತ್ಯಾಗಮಾಡುವಂತೆ ದ್ರೋಣರಿಗೆ ಆದೇಶ ನೀಡಿದುದು : | |

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
| --- | --- | --- |
| | ಅಶ್ವತ್ಥಾಮನು ಹತನಾದನೆಂಬುದನ್ನು ತಿಳಿದು ದ್ರೋಣರಿಗೆ ಜೀವನದಲ್ಲಿಯೇ ನಿರಾಶೆಯುಂಟಾದುದು | .... 3505 |
| ೧೯೧ | ದ್ರೋಣ-ಧೃಷ್ಟದ್ಯುಮ್ನರ ಯುದ್ಧ : ಸಾತ್ಯಕಿಯ ಶೌರ್ಯ | 3515 |
| ೧೯೨ | ಎರಡೂ ಪಕ್ಷಗಳ ಮಹಾರಥರ ಪರಸ್ಪರಯುದ್ಧ : ಧೃಷ್ಟದ್ಯುಮ್ನನ ಆಕ್ರಮಣ : ದ್ರೋಣರು ಶಸ್ತ್ರಸಂನ್ಯಾಸಮಾಡಿ ಯೋಗ ಧಾರಣೆಯ ಮೂಲಕವಾಗಿ ಬ್ರಹ್ಮಲೋಕಕ್ಕೆ ಹೋದುದು : ಧೃಷ್ಟದ್ಯುಮ್ನನು ದ್ರೋಣರ ಶಿರಸ್ಸನ್ನು ಕತ್ತರಿಸಿದುದು | .... 3522 |
| | ೧೫ನೆಯ ದಿವಸದ ಯುದ್ಧದ ವಿಶ್ಲೇಷಣೆ | .... 3533 |

---

## ಚತುರ್ಥ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ಕರುಣೆಯಿಂದಲೂ ಗುರುಭಗವಂತನ ದಿವ್ಯಾಶೀರ್ವಾದದಿಂದಲೂ ಸತ್ಪುರುಷರ ಸಹಕಾರ-ಸದಾಶಯಗಳಿಂದಲೂ 17ನೇ ಸಂಪುಟದ ಪುನರ್ಮುದ್ರಣವನ್ನು ಮುಗಿಸಿರುತ್ತೇವೆ. ಈಗ ಹೊರತರುತ್ತಿರುವ ಎಲ್ಲಾ ಸಂಪುಟಗಳನ್ನು ಸಾಮಾನ್ಯವಾಗಿ ಕಂಪ್ಯೂಟರ್ ಮೂಲಕವೇ ಸಿದ್ಧಪಡಿಸುತ್ತಿದ್ದೇವೆ. ಇದರಿಂದ ಖರ್ಚು ಹೆಚ್ಚಾಗುತ್ತದೆ ಮಾತ್ರವಲ್ಲದೆ ಸ್ವಲ್ಪ ಸಾವಕಾಶಕ್ಕೂ ಅವಕಾಶವಾಗಿದೆ. ಮುದ್ರಣವನ್ನು ಬೇರೆ ಕಡೆ ಅನಿವಾರ್ಯವಾಗಿ ಮಾಡಿಸಬೇಕಾಗಿದೆ. ಮುದ್ರಣಾಲಯದವರು ಸೌಜನ್ಯದಿಂದಲೂ, ವಿಶ್ವಾಸದಿಂದಲೂ ಪುನರ್ ಮುದ್ರಣವನ್ನು ಮಾಡಿಕೊಡುತ್ತಿದ್ದಾರೆ. ಆದರೂ ಕೆಲವು ವೇಳೆ ಅನಿವಾರ್ಯವಾಗಿ ಸಾವಕಾಶವಾಗುತ್ತಿದೆ. ಆದುದರಿಂದ ನಮ್ಮ ಪ್ರಿಯಗ್ರಾಹಕರು ಬೇಸರಿಸಬಾರದಾಗಿ ವಿನಂತಿಸುತ್ತೇವೆ. ಉಳಿದ 10 ಸಂಪುಟಗಳನ್ನು ಪುನರ್ಮುದ್ರಣಮಾಡುವುದು ನಿಶ್ಚಯ. ಇತ್ತೀಚೆಗೆ ಗ್ರಾಹಕರ ಸಂಖ್ಯೆ ಹೆಚ್ಚುತ್ತಿದೆಯೆಂದು ತಿಳಿಸಲು ಸಂತಸವಾಗು ತ್ತದೆ. ನೂರಾರು ಸಂಖ್ಯೆಯಲ್ಲಿ ಮಾತ್ರವಲ್ಲದೆ ಸಾವಿರಾರು ಸಂಖ್ಯೆಯಲ್ಲಿ ನಮ್ಮ ಕನ್ನಡ ಬಾಂಧವರು ಗ್ರಾಹಕರಾಗಬೇಕೆಂಬುದು ನಮ್ಮ ಆಸೆಯಾಗಿದೆ. ಆದುದರಿಂದ ನಮ್ಮ ಗ್ರಾಹಕರು ತಮ್ಮ ಬಂಧುವರ್ಗದವರನ್ನೂ, ಮಿತ್ರವರ್ಗದವರನ್ನೂ ಗ್ರಾಹಕರನ್ನಾಗಿ ಮಾಡಿಕೊಟ್ಟು ಸಹಕರಿಸಬೇಕಾಗಿ ವಿನಂತಿಸುತ್ತೇವೆ. ಪರಮಾತ್ಮನು ನಮ್ಮೆಲ್ಲರಿಗೂ ತುಷ್ಟಿ-ಶಾಂತಿ-ಪುಷ್ಟಿಗಳನ್ನು ದಯಪಾಲಿಸಲಿ.

**– ಪ್ರಕಾಶಕರು.**

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮಜ್ಜಗದ್ಗುರು ಶಂಕರಾಚಾರ್ಯ
ಶ್ರೀಮದ್ರಾಮಚಂದ್ರಾಪುರಮಠಸ್ಥ



**ಶ್ರೀಮದ್ರಾಘವೇಂದ್ರಭಾರತೀ ಶ್ರೀಸ್ವಾಮಿಭಿಃ ।**

ಅಸ್ಮದತ್ಯಂತ ಪ್ರಿಯಶಿಷ್ಯ ಕೇಶವಸುಬ್ರಹ್ಮಣ್ಯಕೌಶಿಕ, ಸಂಪಾದಕ, ಭಾರತ ದರ್ಶನ, ತ್ಯಾಗರಾಜನಗರ, ಬೆಂಗಳೂರು-28. ಇವರಿಗೆ ಬರೆಸಿದ ಸಂದೇಶ :

ಅದಾಗಿ : ನೀವು ಕೈಗೊಂಡ ಮಹಾಭಾರತ ಕನ್ನಡ ಅನುವಾದದ ಹದಿನೇಳನೆಯ ಸಂಪುಟವನ್ನು ಪ್ರಕಾಶನಗೊಳಿಸುವ ವಿಷಯ ವೇದ್ಯವಾಗಿ ಸಂತಸವಾಯ್ತು.

**ಪ್ರತಿಪರ್ವರಸೋದಯಃ** ಎಂದು ಮಹಾಕವಿ ಕಾಳಿದಾಸನು ಸಮುದ್ರ ವನ್ನೂ ರಸಗಬ್ಬನ್ನೂ, ಮಹಾಭಾರತವನ್ನೂ ಒಂದೇ ಚರಣದಲ್ಲಿ ವಿವರಿಸಿದ್ದ ನೆಂಬುದು ಪ್ರಸಿದ್ಧವಷ್ಟೆ! ಇದರಂತೆ ರಸಪೂರ್ಣ ವಿಷ್ಣುಮಹಿಮೆ, ರಾಜನೀತಿ, ಯುದ್ಧಚಾತುರ್ಯ ಮುಂತಾದ ಅತ್ಯುಪಯುಕ್ತವಿಚಾರಗಳಿಂದ ಕೂಡಿದ ಈ ದ್ರೋಣಪರ್ವವು ರಸೋದಯಪೂರ್ಣವೆಂದು ಓದುಗರಿಗೆ ತಾನೇ ಪ್ರತ್ಯಕ್ಷ ವಿಷಯವಾಗಿದೆ.

ಶಕ್ತಿಸಂಪನ್ನನಾದ ಕರ್ಣನಿಗೆ ಅರ್ಜುನನ ಮೇಲೆ ಪ್ರಯೋಗಿಸಲು ಅವಕಾಶವಾಗದೆ ದುಷ್ಟಶಕ್ತಿಯ ಘಟೋತ್ಕಚನ ನಾಶಕ್ಕೆ ಈ ಅಮೋಘ

ಶಕ್ತಿ ಪ್ರಯೋಗಿಸುವಂತಾದ ಘಟನೆಯನ್ನು ಸೂಕ್ಷ್ಮದೃಷ್ಟಿಯಿಂದ ವಿಮರ್ಶಿಸ ಬೇಕಾದ ಪ್ರಧಾನವಿಷಯಗಳಲ್ಲಿ ಒಂದೆಂದು ಈ ಪರ್ವದಲ್ಲಿ ಕಂಡುಬರು ತ್ತಿದ್ದು ಇಂತಹ ಅನೇಕ ಮಹತ್ತ್ವಸಂದರ್ಭಗಳು ಈ ಸಂಪುಟದಲ್ಲಿಯೂ ತುಂಬಾ ಇವೆಯಷ್ಟೆ!

ವಿದ್ಯಾ, ತಪಸ್ಸು, ಶಸ್ತ್ರಾಸ್ತ್ರ ಪರಿಣತಿಗಳಿಂದ ರಾರಾಜಿಸುವ ದ್ರೋಣರ ವರ್ಣನೆ, ದ್ರೋಣರ ಯುದ್ಧವರ್ಣನೆಯುಳ್ಳ ಈ ಪರ್ವವು ಭಾರದ್ವಾಜ ಸಂತತಿಯ ಮಹಿಮಾವರ್ಣನೆಯೆಂದೇ ಕಾಣುತ್ತಿದೆ. ದೇವಭಾಷೆಯೆಂದೂ, ಪ್ರಾಚೀನಭಾರತದ ಸುಸಂಸ್ಕೃತ ಸಮೃದ್ಧಭಾಷೆಯೆಂದೂ, ಸರ್ವಭಾಷಾ ಮಾತೃವೆಂದೂ ಪ್ರಸಿದ್ಧವಾದ ಸರಸ ಸಂಸ್ಕೃತಭಾಷೆಯಲ್ಲಿರುವ ಈ ಮಹಾ ಭಾರತವನ್ನು ಸಂಪುಟ–ಸಂಪುಟವಾಗಿ ಕನ್ನಡಾನುವಾದಕ್ಕೆ ತಂದು ಪ್ರಕಟಿಸುವ ನಿಮ್ಮೀಸಮಯೋಚಿತ ಸಾಹಸವು ಕನ್ನಡಗರಿಗೆ ಪರಪ್ರಸಾದವಾಗಿದ್ದು ಪ್ರಶಂಸಾರ್ಹ ಸತ್ಕಾರ್ಯವೇ ಸರಿ!

ಸಮರ್ಥ ಪಂಡಿತರ ಸರಸ್ವತೀಸೇವೆಯ ಫಲವಾದ, ನಿಮ್ಮ ಮಾರ್ಗ ದರ್ಶನದಲ್ಲಿಯ, ಭಾರತ ದರ್ಶನದ ಕೊಡುಗೆಯಾದ, ಗ್ರಂಥದ ರಸಾ ಸ್ವಾದನೆಯನ್ನು ಪ್ರತಿ ಕನ್ನಡಿಗನೂ ಸವಿದು, ನಮ್ಮ ದೇಶದ ಪ್ರಾಚೀನವೈಭವ ಗಳನ್ನರಿತು, ಈಗಿನ ಪರಿಸ್ಥಿತಿಗೆ ಅಳವಡಿಸಿಕೊಂಡು, ಶಾಂತಿ, ಸಮೃದ್ಧ ಜೀವನವನ್ನು ನಡೆಸುವಂತಾಗಲಿ!

ಈ ಗ್ರಂಥ ಪ್ರಕಟಣೆಗೆ ಹಿಂದೆ ಘೋಷಿಸಿದ ರಾಜ್ಯಸರಕಾರದ ಬೆಂಬಲ ದೊಂದಿಗೆ ದೇಶದ ಎಲ್ಲರ ಸಹಕಾರ-ಪ್ರೋತ್ಸಾಹಗಳೂ ದೊರೆತು ಎಲ್ಲ ಸಂಪುಟಗಳೂ ಸಕಾಲದಲ್ಲಿ ಪ್ರಕಾಶವಾಗುತ್ತಿರಲಿ. ಜನತೆಯ ಸದ್ಗ್ರಂಥಾವ ಲೋಕನಕ್ಕೆ ಅನುಕೂಲಪಡಿಸಲು ಪ್ರಯತ್ನಿಸುತ್ತಿರುವ ನಿಮಗೆ-ನಿಮ್ಮ ಸಂಸ್ಥೆಗೆ ಸಹ ಪರಮಾತ್ಮನ ಪರಮಪ್ರಸಾದ ಪ್ರಾಪ್ತವಾಗಲೆಂದು ಈ ಹಿಂದೆ ಪ್ರತ್ಯಕ್ಷ ಹರಿಸಿದಂತೆ ಈಗಲೂ ಹಾರೈಸುತ್ತೇವೆ. ಇತಿ ಶ್ರೀಮನ್ನಾರಾಯಣಸ್ಮೃತಯಃ

---

ಮಿತಿ :– ಶ್ರೀ ಸಿದ್ಧಾರ್ಥಿ ಸಂ–ವೈಶಾಖ ಕೃಷ್ಣ ೭ ಯು (ತಾ|| 18-5-79 )
ಭಾರ್ಗವ ವಾಸರೇ.

ವಸತಿ :– ಶಿವಮೊಗ್ಗಾ ಜಿಲ್ಲಾ ತೀರ್ಥಹಳ್ಳಿ ತಾಲ್ಲೂಕು-ತೀರ್ಥರಾಜಪುರವಿರಾಜಿತ
ಶ್ರೀರಾಮಚಂದ್ರಾಪುರ ಮಠೇ.

ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಮಹಾಭಾರತ-ದ್ರೋಣಪರ್ವ-ಹದಿನೇಳನೆಯ ಸಂಪುಟ

೧೨೨ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದ್ರೋಣರು ದುಃಶಾಸನನನ್ನು ನಿಂದಿಸಿದುದು : ವೀರಕೇತುವೇ ಮೊದಲಾದ ಪಾಂಚಾಲರನ್ನು ವಧಿಸಿದುದು : ದ್ರೋಣ-ಧೃಷ್ಟದ್ಯುಮ್ನರ ಯುದ್ಧ: ದ್ರೋಣರು ಮೂರ್ಛಿತರಾದುದು : ಧೃಷ್ಟದ್ಯುಮ್ನನ ಪಲಾಯನ : ದ್ರೋಣರ ವಿಜಯ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

“ಮಹಾರಾಜ! ದುಃಶಾಸನನ ರಥವು ತಮ್ಮ ಸಮೀಪದಲ್ಲಿಯೇ ನಿಂತಿರುವುದನ್ನು ನೋಡಿ ದ್ರೋಣರು ಅವನನ್ನು ಕುರಿತು ಈ ಮಾತುಗಳನ್ನು ಹೇಳಿದರು :

“ದುಃಶಾಸನ! ಈ ಎಲ್ಲ ಮಹಾರಥರೂ ಯಾವ ಕಾರಣದಿಂದ ಓಡಿ ಬರುತ್ತಿದ್ದಾರೆ? ದುರ್ಯೋಧನರಾಜನು ಕುಶಲಿಯಾಗಿರುವನಲ್ಲವೇ? ಸೈಂಧವನಿನ್ನೂ ಬದುಕಿರುವನಲ್ಲವೇ? ನೀನು ರಾಜಪುತ್ರನಾಗಿರುವೆ. ರಾಜನ ತಮ್ಮನಾಗಿರುವೆ. ಮಹಾರಥರಲ್ಲಿ ಪರಿಗಣಿತನಾಗಿರುವೆ. ಇವೆಲ್ಲಕ್ಕಿಂತಲೂ ಮಿಗಿಲಾಗಿ ಯೌವರಾಜ್ಯಪದವಿಯನ್ನೂ ಪಡೆದಿರುವೆ. ಇಂತಹ ಉಚ್ಚಪದವಿಯಲ್ಲಿರುವ ನೀನೂ ಸಹ ಯುದ್ಧದಿಂದೇಕೆ ಓಡಿಬರುತ್ತಿರುವೆ? ನೀನು ದ್ಯೂತದ ಸಮಯದಲ್ಲಿ ದ್ರೌಪದಿಯನ್ನು ಕುರಿತು ಏನು ಹೇಳಿದೆಯೆಂಬುದು ನಿನ್ನ ನೆನಪಿನಲ್ಲಿರುವುದೇ?

**ದಾಸೀ ಜಿತಾಸಿ ದ್ಯೂತೇ ತ್ವಂ ಯಥಾಕಾಮಚರೀ ಭವ ।**
**ವಾಸಸಾಂ ವಾಹಿಕಾ ರಾಜ್ಞೋ ಭ್ರಾತುರ್ಜ್ಯೇಷ್ಠಸ್ಯ ಮೇ ಭವ ॥೪॥**

"ದ್ಯೂತದಲ್ಲಿ ನೀನು ನಮ್ಮಿಂದ ಜಯಿಸಲ್ಪಟ್ಟು ಈಗ ನಮ್ಮ ದಾಸಿಯಾಗಿರುವೆ. ಇನ್ನು ಮುಂದೆ ನೀನು ನಮ್ಮ ಇಚ್ಛಾನುವರ್ತಿಯಾಗಿ ಕೆಲಸಮಾಡಿಕೊಂಡಿರು. ನನ್ನ ಜ್ಯೇಷ್ಠಭ್ರಾತೃವಾದ ದುರ್ಯೋಧನರಾಜನ ವಸ್ತ್ರಗಳ ವಾಹಿಕೆಯಾಗು (ವಸ್ತ್ರಗಳನ್ನು ತಂದುಕೊಡುವ ಕಾರ್ಯವು ನಿನ್ನದಾಗಿರಲಿ ).

**ನ ಸನ್ತಿ ಪತಯಃ ಸರ್ವೇ ತೇಽದ್ಯ ಷಣ್ಡತಿಲೈಃ ಸಮಾಃ ।**

ಎಣ್ಣೆಯನ್ನು ತೆಗೆದ ಜಳ್ಳಾದ ಎಳ್ಳಿಗೆ ಸಮಾನರಾಗಿರುವ ಪಾಂಡವರು ಈಗ ನಿನ್ನ ಪತಿಗಳಾಗಿ ಉಳಿದಿರುವುದಿಲ್ಲ."

ಹೀಗೆ ಹಿಂದೆ ಪಾಂಡವರನ್ನು ಷಂಡರೆಂದು ಹೇಳಿದ ನೀನು ಇಂದೇಕೆ ಯುದ್ಧದಿಂದ ಪಲಾಯನಮಾಡಿದೆ? ಪಾಂಡವರೊಡನೆಯೂ ಪಾಂಚಾಲ ರೊಡನೆಯೂ ನೀನಾಗಿಯೇ ವೈರವನ್ನು ಕಟ್ಟಿಕೊಂಡು, ಅದರ ಪರಿಣಾಮ ವನ್ನು ಎದುರಿಸಬೇಕಾಗಿ ಬಂದಿರುವಾಗ ಇಂದು ಒಬ್ಬನೇ ಒಬ್ಬ ಸಾತ್ಯಕಿಯನ್ನು ಸಂಧಿಸಿ ಅವನೊಬ್ಬನೊಡನೆಯೂ ಯುದ್ಧಮಾಡಲು ಭಯಪಟ್ಟುದೇಕೆ? ಹಿಂದೆ ಜೂಜಾಟದ ಸಮಯದಲ್ಲಿ ಪಗಡೇಕಾಯಿಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ತೆಗೆದಿಡುವಾಗ ಆ ಪಗಡೇಕಾಯಿಗಳೇ ಮುಂದೆ ಪರಮದಾರುಣವಾದ ವಿಷಸರ್ಪೋಪಮವಾದ ಬಾಣಗಳಾಗಿ ಪರಿವರ್ತನೆ ಹೊಂದುವುವೆಂಬುದನ್ನು ಅಂದು ನೀನು ತಿಳಿದುಕೊಳ್ಳಲಿಲ್ಲವೇ? ಪಾಂಡವರ ವಿಷಯದಲ್ಲಿ ಅದರಲ್ಲಿಯೂ ವಿಶೇಷವಾಗಿ ಧರ್ಮಾತ್ಮನಾದ ಯುಧಿಷ್ಠಿರನ ವಿಷಯದಲ್ಲಿ ಆಡಿದ ಅಪ್ರಿಯವಾದ ಮಾತುಗಳಿಗೆ ಮತ್ತು ಅವಮಾನ ಗೊಳಿಸುವುದರ ಮೂಲಕವಾಗಿ ದ್ರೌಪದಿಯನ್ನು ಕ್ಲೇಶಪಡಿಸಿದುದಕ್ಕೆ ನೀನೇ ಮುಖ್ಯಕಾರಣನಾಗಿದ್ದೆಯಲ್ಲವೇ? ದುಃಶಾಸನ! ಅಂದಿನ ನಿನ್ನ ಅಭಿಮಾನವೆಲ್ಲಿ ಹೋಯಿತು? ದರ್ಪವೆಲ್ಲಿ ಹೋಯಿತು? ವೀರ್ಯವೆಲ್ಲಿ ಉಡುಗಿ ಹೋಯಿತು? ಅಂದಿನ ನಿನ್ನ ಗರ್ಜನೆಯು ಈಗೆಲ್ಲಿಗೆ ಹೋಗಿದೆ? ವಿಷಸರ್ಪಸದೃಶರಾದ ಪಾರ್ಥರನ್ನು ನೀನು ಪ್ರಕೋಪಗೊಳಿಸಿ ಈಗ ಎಲ್ಲಿಗೆ ತಾನೇ ಹೋಗುವೆ?

ಈಗ ಭಾರತೀಸೇನೆಗಾಗಿ ಶೋಕಿಸಬೇಕಾಗಿದೆ. ರಾಜನಾದ ದುರ್ಯೋ ಧನನಿಗಾಗಿ ಶೋಕಿಸಬೇಕಾಗಿದೆ. ಏಕೆಂದರೆ : ಕ್ರೂರಸ್ವಭಾವದವನಾದ ಅವನ ತಮ್ಮನಾದ ನೀನು ಪರಾಕ್ರಮದಿಂದ ಶತ್ರುವನ್ನು ಎದುರಿಸುವುದಕ್ಕೆ ಬದ

ಲಾಗಿ ಪಲಾಯನಪರಾಯಣನಾಗಿರುವೆ. ಶತ್ರುವಿನ ಬಾಣಗಳಿಂದ ಕ್ಷತ-ವಿಕ್ಷತವಾಗುತ್ತಿರುವ, ಅದರಿಂದಲೇ ಬಹಳವಾಗಿ ಭಯಪಟ್ಟಿರುವ ನಮ್ಮ ಸೈನ್ಯವನ್ನು ನಿನ್ನ ಬಾಹುಬಲವನ್ನೇ ಆಶ್ರಯಿಸಿ ರಕ್ಷಿಸಬೇಕಾದುದು ನಿನ್ನ ಕರ್ತವ್ಯವಾಗಿರಲಿಲ್ಲವೇ? ಹಾಗೆ ರಕ್ಷಿಸಬೇಕಾಗಿದ್ದ ನೀನೇ ಈಗ ಹೆದರಿ ರಣಾಂಗಣವನ್ನು ಬಿಟ್ಟು ಓಡಿಬಂದು ಶತ್ರುಗಳಿಗೆ ಹರ್ಷವನ್ನುಂಟುಮಾಡು ತ್ತಿರುವೆ. ಶತ್ರುಸೂದನನೇ! ಸೈನ್ಯಕ್ಕೆ ನಾಯಕನಾಗಿರುವ ನೀನೇ ಪಲಾಯನ ಮಾಡಿದ್ದಾದರೆ ಬೇರೆ ಯಾರು ತಾನೇ ರಣಾಂಗಣದಲ್ಲಿ ಯುದ್ಧಮಾಡಲು ಉಳಿಯುತ್ತಾರೆ? ಆಶ್ರಯಭೂತನಾಗಿರುವ ಸೇನಾನಾಯಕನೇ ಭೀತನಾದರೆ ಸರ್ವಸೈನ್ಯವೂ ಭಯಗೊಳ್ಳುವುದು ಸ್ವಾಭಾವಿಕ. ಒಬ್ಬನೇ ಒಬ್ಬ ಸಾತ್ವತ ನೊಡನೆ ಯುದ್ಧಮಾಡುವಾಗಲೇ ನಿನ್ನ ಬುದ್ಧಿಯು ಹೆದರಿ ಪಲಾಯನ ಮಾಡಲು ಪ್ರೇರಿಸಿತು. ಹೀಗಿರುವಾಗ ರಣರಂಗದಲ್ಲಿ ಗಾಂಡೀವಧನ್ವನಾದ ಅರ್ಜುನನನ್ನಾಗಲೀ, ಭೀಮಸೇನನನ್ನಾಗಲೀ, ನಕುಲ-ಸಹದೇವರನ್ನಾಗಲೀ– ನೋಡಿದ್ದೇ ಆದರೆ ಆಗೇನು ಮಾಡುವೆ? ಸೂರ್ಯಾಗ್ನಿಗಳಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ ಅರ್ಜುನನ ಬಾಣಗಳಿಗೆ ಸಾತ್ಯಕಿಯ ಬಾಣ ಗಳೆಂದಿಗೂ ಸಾಟಿಯಾಗುವುದಿಲ್ಲ (ಸರಿದೂಗುವುದಿಲ್ಲ). ಮಿತವಾದ ವೇಗ ವುಳ್ಳ ಸಾತ್ಯಕಿಯ ಬಾಣಗಳಿಗೇ ನೀನು ಹೆದರಿ ಪಲಾಯನಮಾಡಿರುವೆ. ಆದರೆ ದುಃಶಾಸನ! ನೀನು ಅಲ್ಲಿಂದ ಇಲ್ಲಿಗೆ ಓಡಿಬಂದಮಾತ್ರಕ್ಕೆ ನಿನ್ನ ಜೀವರಕ್ಷಣೆಯಾಗುವುದೆಂದು ನಾನು ಭಾವಿಸುವುದಿಲ್ಲ. ಭೀಮಾರ್ಜುನರಿಂದ ನಿನಗೆ ಪ್ರಾಣಭಯವು ತಪ್ಪಿದ್ದಲ್ಲ. ಆದುದರಿಂದ ಒಂದು ಉಪಾಯವನ್ನು ಸೂಚಿಸುತ್ತೇನೆ. ಅದರಂತೆ ಮಾಡು.

**ತ್ವರಿತೋ ವೀರ ಗಚ್ಛ ತ್ವಂ ಗಾನ್ಧಾರ್ಯುದರಮಾವಿಶ ।**
**ಪೃಥಿವ್ಯಾಂ ಧಾವಮಾನಸ್ಯ ನಾನ್ಯತ್ಪಶ್ಯಾಮಿ ಜೀವಿತಮ್ ॥೧೬॥**

ವೀರ ದುಃಶಾಸನ! ಶೀಘ್ರಾತಿಶೀಘ್ರವಾಗಿ ಓಡಿಹೋಗಿ ನಿನ್ನ ತಾಯಿ ಯಾದ ಗಾಂಧಾರಿಯ ಹೊಟ್ಟೆಯಲ್ಲಿ ಅಡಗಿಕೊಂಡುಬಿಡು. ಅದಕ್ಕಿಂತಲೂ ಬೇರೆಯ ಸುರಕ್ಷಿತವಾದ, ನಿನ್ನ ಪ್ರಾಣಗಳನ್ನುಳಿಸುವ ಸ್ಥಳವು ಪೃಥಿವಿಯಲ್ಲಿ– ನೀನು ಎತ್ತಕಡೆಗೇ ಓಡಿಹೋದರೂ ಸಿಗಲಾರದು. (ಭೂಮಂಡಲದಲ್ಲಿ

ನೀನು ಎತ್ತಹೋದರೂ ಭೀಮಾರ್ಜುನರು ನಿನ್ನನ್ನು ಜೀವಸಹಿತವಾಗಿ ಬಿಡುವುದಿಲ್ಲ.) ಹಾಗೆ ಗಾಂಧಾರಿಯ ಹೊಟ್ಟೆಯನ್ನು ಪುನಃ ಪ್ರವೇಶಿಸಲು ಅಸಾಧ್ಯವೆನಿಸಿದರೆ ನಿನ್ನ ಪ್ರಾಣವನ್ನುಳಿಸಿಕೊಳ್ಳಲು ಮತ್ತೊಂದು ಮಾರ್ಗವಿದೆ.

**ಯದಿ ತಾವತ್ಕೃತಾ ಬುದ್ಧಿಃ ಪಲಾಯನಪರಾಯಣಾ ।**
**ಪೃಥಿವೀ ಧರ್ಮರಾಜಾಯ ಶರ್ಮೇಣೈವ ಪ್ರದೀಯತಾಮ್ ॥೧೭॥**

ಪಲಾಯನಮಾಡುವುದರಲ್ಲಿಯೇ ನಿನ್ನ ಬುದ್ಧಿಯು ನಿಶ್ಚಿತವಾಗಿರುವುದಾದರೆ ಪಲಾಯನಮಾಡುವುದರಿಂದ ನಿನ್ನ ಜೀವವುಳಿಯುವುದಿಲ್ಲ. ನಿನ್ನ ಜೀವವುಳಿಸಿಕೊಳ್ಳಲು ಇರುವ ಮತ್ತೊಂದು ಮಾರ್ಗವೆಂದರೆ : ಈ ಸಾಮ್ರಾಜ್ಯವನ್ನು ಶಾಂತಿಸಂಧಾನದ ಮೂಲಕವಾಗಿಯೇ ಧರ್ಮರಾಜನಿಗೆ ಒಪ್ಪಿಸುವುದು. ಹೀಗಾದರೂ ಮಾಡು. ಆಗಲಾದರೂ ನಿನ್ನ ಪ್ರಾಣಗಳು ಉಳಿದುಕೊಂಡಾವು.

ಸರ್ಪಗಳಿಗೆ ಸಮಾನವಾದ ಅರ್ಜುನನ ನಾರಾಚಗಳು ಧನುಸ್ಸಿನಿಂದ ಚ್ಯುತವಾಗಿ ನಿನ್ನ ಶರೀರವನ್ನು ಹೊಗುವ ಮೊದಲೇ ಪಾಂಡವರೊಡನೆ ಸಂಧಿಮಾಡಿಕೊಳ್ಳುವುದು ಸೂಕ್ತವಾಗಿದೆ. ಮಹಾತ್ಮರಾದ ಪಾಂಡವರು ನೂರು ಮಂದಿ ಸಹೋದರರನ್ನೂ (ನಿಮ್ಮೆಲ್ಲರನ್ನೂ ) ಸಂಹರಿಸಿ ಭೂಮಿಯನ್ನು ಕಿತ್ತುಕೊಳ್ಳುವುದರೊಳಗಾಗಿ ಅವರೊಡನೆ ಸಂಧಿಮಾಡಿಕೊಳ್ಳುವುದು ಸೂಕ್ತವಾಗಿದೆ. ಧರ್ಮಪುತ್ರನಾದ ಯುಧಿಷ್ಠಿರನೂ–ಸಮರಶ್ಲಾಘಿಯಾದ ಶ್ರೀಕೃಷ್ಣನೂ ಕ್ರುದ್ಧರಾಗುವುದರೊಳಗಾಗಿ ಪಾಂಡವರೊಡನೆ ಸಂಧಿ ಮಾಡಿಕೊಳ್ಳುವುದೇ ಸೂಕ್ತವಾಗಿದೆ. ಮಹಾಬಾಹುವಾದ ಭೀಮನು ನಮ್ಮ ವಿಶಾಲವಾದ ಸೈನ್ಯದೊಳಕ್ಕೆ ನುಗ್ಗಿ ನಿನ್ನ ಸೋದರರರನ್ನು ಹಿಡಿದುಕೊಳ್ಳುವುದರೊಳಗಾಗಿ ಪಾಂಡವರೊಡನೆ ಸಂಧಿಮಾಡಿಕೊಳ್ಳುವುದು ಸೂಕ್ತವಾಗಿದೆ.

ಹಿಂದೆ ಭೀಷ್ಮನೇ ನಿನ್ನ ಅಣ್ಣನಾದ ಸುಯೋಧನನಿಗೆ, ಯುದ್ಧದಲ್ಲಿ ಪಾಂಡವರು ಅಜೇಯರೆಂದೂ ಆದುದರಿಂದ ಅವರೊಡನೆ ಸಂಧಿಮಾಡಿಕೊಳ್ಳುವಂತೆಯೂ ಹೇಳಿದ್ದನು. ಆದರೆ ಮೂರ್ಖನಾದ ನಿನ್ನಣ್ಣ ದುರ್ಯೋಧನನು ಭೀಷ್ಮನು ಹೇಳಿದಂತೆ ಮಾಡಲಿಲ್ಲ. (ಆಗಲೇ ಸಂಧಾನಕ್ಕೆ ಒಪ್ಪದಿದ್ದ ಮಾನಧನನಾದ ದುರ್ಯೋಧನನು ಈ ಸಮಯದಲ್ಲಿ ಖಂಡಿತವಾಗಿ ಒಪ್ಪಲಾರನು.) ಆದುದರಿಂದ, ದುಃಶಾಸನ! ಯುದ್ಧದಲ್ಲಿ ಧೈರ್ಯವನ್ನು ತಳೆದು

ಪ್ರಯತ್ನಪೂರ್ವಕವಾಗಿ ಪಾಂಡವರೊಡನೆ ಯುದ್ಧಮಾಡು. ನಿನ್ನ ರಕ್ತವನ್ನು ಕುಡಿಯಲು ಭೀಮನು ಪ್ರತಿಜ್ಞೆಮಾಡಿರುವನೆಂದು ನಾನು ಕೇಳಿದ್ದೇನೆ. ಅವನು ಮಾಡಿರುವ ಪ್ರತಿಜ್ಞೆಯು ಯಾವುದೇ ಕಾರಣದಿಂದಲೂ ಸುಳ್ಳಾಗುವುದಿಲ್ಲ. ಅದು ಹಾಗೆಯೇ ನಡೆಯುತ್ತದೆ. (ಭೀಮಸೇನನು ನಿನ್ನ ರಕ್ತವನ್ನು ಪಾನಮಾಡಿಯೇ ತೀರುತ್ತಾನೆ.) ಮೂರ್ಖನೇ! ಭೀಮನ ಪರಾಕ್ರಮ ವೆಷ್ಟೆಂಬುದನ್ನು ನೀನು ಕಾಣೆಯೇನು? ನೀನೇ ಅವನೊಡನೆ ವೈರವನ್ನಾ ರಂಭಿಸಿದೆ. (ಪಾಂಡವರೊಡನೆ ಹಗೆತನಕ್ಕೆ ನೀನೇ ಮುಖ್ಯಕಾರಣನು.) ಆದರೆ ಯುದ್ಧದಲ್ಲಿ ಮಾತ್ರ ನೀನು ಪಲಾಯನಪರಾಯಣನಾಗಿರುವೆ. ಕ್ಷತ್ರಿಯನಾದ ವನು ಯುದ್ಧದಲ್ಲಿ ಖಂಡಿತವಾಗಿಯೂ ಪಲಾಯನಮಾಡಬಾರದು. ಆದುದರಿಂದ ನೀನೀಗಲೇ ಇದೇ ರಥದಲ್ಲಿ ಕುಳಿತು ಸಾತ್ಯಕಿಯು ಇರುವಲ್ಲಿಗೆ ಹೋಗು. ನಾಯಕನಾದ ನಿನ್ನಿಂದ ವಿಹೀನವಾದ ನಮ್ಮ ಸೈನ್ಯವು ದಿಕ್ಕಾಪಾಲಾಗಿ ಹೋಗುವುದು. ಆದುದರಿಂದ ನಿನ್ನ ಆತ್ಮಸಂರಕ್ಷಣೆಗಾಗಿ, ಕೀರ್ತಿಯ ರಕ್ಷಣೆಗಾಗಿ ಸತ್ಯವಿಕ್ರಮನಾದ ಸಾತ್ಯಕಿಯೊಡನೆ ಯುದ್ಧಮಾಡು."

ಮಹಾರಾಜ! ದ್ರೋಣರು ನಿನ್ನ ಮಗನಾದ ದುಃಶಾಸನನೊಡನೆ ಇಷ್ಟು ನಿಷ್ಠುರವಾಗಿ ಹೇಳಿದರೂ ಅವನು ಮಾತ್ರ ಒಂದು ಮಾತನ್ನೂ ಆಡಲಿಲ್ಲ. ದ್ರೋಣರು ಹೇಳಿದುದೆಲ್ಲವನ್ನೂ ಕೇಳಿಸಿಕೊಂಡರೂ ಕೇಳಿಸಿಕೊಳ್ಳಲಿಲ್ಲವೋ ಎಂಬಂತೆ ಸಾತ್ಯಕಿಯು ಹೋದ ಮಾರ್ಗವನ್ನೇ ಹಿಡಿದು ಹೊರಟು ಹೋದನು. ಯುದ್ಧದಲ್ಲಿ ಹಿಮ್ಮೆಟ್ಟದೇ ಇದ್ದ ಮ್ಲೇಚ್ಛರ ಮಹಾಸೈನ್ಯದಿಂದ ಯುಕ್ತನಾದ ದುಃಶಾಸನನು ಪುನಃ ಸಾತ್ಯಕಿಯಿದ್ದ ಸ್ಥಳಕ್ಕೆ ಬಂದು ಅವನೊಡನೆ ಯುದ್ಧಮಾಡಲು ತೊಡಗಿದನು.

ರಥಿಗಳಲ್ಲಿ ಶ್ರೇಷ್ಠರಾದ ದ್ರೋಣರೂ ಸಹ ಪರಮಕ್ರುದ್ಧರಾಗಿ ಮಧ್ಯಮವೇಗವನ್ನು ಆಶ್ರಯಿಸಿ ಪಾಂಚಾಲ-ಪಾಂಡವಯೋಧರ ಮೇಲೆ ಆಕ್ರಮಣ ನಡೆಸಿದರು. ದ್ರೋಣರು ಪಾಂಡವರ ಸೈನ್ಯವನ್ನು ಪ್ರವೇಶಿಸಿ ನಿಶಿತವಾದ ಸಾವಿರಾರು ಬಾಣಗಳಿಂದ ನೂರಾರು-ಸಾವಿರಾರು ಯೋಧರನ್ನು ಪಲಾಯಿತರನ್ನಾಗಿ ಮಾಡಿದರು. ಅನಂತರ ದ್ರೋಣರು ತಮ್ಮ ಹೆಸರನ್ನು ಗಟ್ಟಿಯಾಗಿ ಉದ್ಘೋಷಿಸುತ್ತಾ ಪಾಂಡು-ಪಾಂಚಾಲ-ಮತ್ಸ್ಯಸೈನ್ಯಗಳಲ್ಲಿ

ಘೋರವಾದ ಸಂಹಾರಕಾರ್ಯವನ್ನು ಮಾಡಿದರು. ಈ ರೀತಿಯಲ್ಲಿ ದ್ರೋಣರು ಅಲ್ಲಲ್ಲಿ ಸೈನ್ಯದೊಳಕ್ಕೆ ನುಗ್ಗಿಹೋಗುತ್ತಾ ಸಾವಿರಾರು ಯೋಧರನ್ನು ಸಂಹರಿಸುತ್ತಾ ಪಾಂಡು-ಪಾಂಚಾಲ-ಮತ್ಸ್ಯರನ್ನು ಪರಾಜಯಗೊಳಿಸುತ್ತಿರುವುದನ್ನು ಕಂಡು ದ್ಯುತಿಮಂತನಾದ ಪಾಂಚಾಲರಾಜಕುಮಾರನಾದ ವೀರಕೇತುವು ದ್ರೋಣರನ್ನು ಬಗ್ಗಿದ ಗಿಣ್ಣುಗಳಿದ್ದ ಐದು ಬಾಣಗಳಿಂದ ಪ್ರಹರಿಸಿ, ಮತ್ತೊಂದು ಬಾಣದಿಂದ ಧ್ವಜವನ್ನೂ–ಪುನಃ ಏಳು ಬಾಣಗಳಿಂದ ದ್ರೋಣರ ಸಾರಥಿಯನ್ನೂ ಪ್ರಹರಿಸಿದನು. ಅವರಿಬ್ಬರೂ ಯುದ್ಧದಲ್ಲಿ ತೊಡಗಿದ್ದಾಗ ನಾನೊಂದು ಆಶ್ಚರ್ಯವನ್ನು ಕಂಡೆನು, ಮಹಾರಾಜ!

ಮಹಾಪರಾಕ್ರಮಿಗಳಾದ ದ್ರೋಣರಿಗೆ ವೇಗವಂತನಾದ, ಪಾಂಚಾಲ ರಾಜಕುಮಾರನಾದ ವೀರಕೇತುವನ್ನು ಅತಿಕ್ರಮಿಸಿ ಹೋಗಲಾಗಲಿಲ್ಲ. ರಣರಂಗದಲ್ಲಿ ದ್ರೋಣರು ವೀರಕೇತುವಿನಿಂದ ತಡೆಯಲ್ಪಟ್ಟುದನ್ನು ಕಂಡು ಧರ್ಮಪುತ್ರನ ಜಯೈಷಿಗಳಾದ ಪಾಂಚಾಲರೆಲ್ಲರೂ ದ್ರೋಣರನ್ನು ಮುತ್ತಿದರು. ಅನಂತರ ಅವರು ಅಗ್ನಿಸದೃಶವಾದ ಬಾಣಗಳಿಂದಲೂ, ಬಹುಮೂಲ್ಯವಾದ ತೋಮರಗಳಿಂದಲೂ, ವಿವಿಧವಾದ ಶಸ್ತ್ರಗಳಿಂದಲೂ ದ್ರೋಣರೊಬ್ಬರನ್ನೇ ಮುಚ್ಚಿಬಿಟ್ಟರು. ದ್ರೋಣರು ನಾಲ್ಕು ಕಡೆಗಳಿಂದಲೂ ಬರುತ್ತಿದ್ದ ಬಾಣ-ತೋಮರ-ಶಸ್ತ್ರಗಳೆಲ್ಲವನ್ನೂ ಬಾಣಗಳ ಸಮೂಹದಿಂದ ತುಂಡು-ತುಂಡುಗಳಾಗಿ ಕತ್ತರಿಸಿ–ಅಪಾರವಾದ ನೀರನ್ನು ಧರಿಸಿರುವ ಮೋಡಗಳನ್ನು ದಿಕ್ಕಾಪಾಲಾಗಿ ಚದುರಿಸುವ ವಾಯುದೇವನಂತೆ–ಪ್ರಕಾಶಿಸಿದರು. ಅನಂತರ ಶತ್ರುವೀರಹಂತಕರಾದ ದ್ರೋಣರು ಮಹಾಘೋರವಾದ ಸೂರ್ಯಾಗ್ನಿಸದೃಶವಾದ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ವೀರಕೇತುವಿನ ರಥದ ಕಡೆಗೆ ಪ್ರಯೋಗಿಸಿದರು. ದ್ರೋಣಪ್ರಮುಕ್ತವಾದ ಆ ಬಾಣವು ಪಾಂಚಾಲಕುಲನಂದನನಾದ ವೀರಕೇತುವಿನ ಕವಚವನ್ನು ಸೀಳಿಕೊಂಡು ಶರೀರದ ಒಳಹೊಕ್ಕು ರಕ್ತದಿಂದ ನೆನೆಯಲ್ಪಟ್ಟು ಹೊರಕ್ಕೆ ಬಂದು ಪ್ರಜ್ವಲಿಸುತ್ತಿರುವುದೋ ಎಂಬಂತೆ ಕಾಣುತ್ತಾ ಭೂಮಿಯಲ್ಲಿ ಬಿದ್ದಿತು. ಚಂಡಮಾರುತದಿಂದ ಪೀಡಿತವಾದ ದೊಡ್ಡ ಸಂಪಿಗೆಯ ಮರವು ಪರ್ವತದ ಮೇಲಿನಿಂದ ಕೆಳಕ್ಕೆ ಬೀಳುವಂತೆ ಪಾಂಚಾಲಕುಲನಂದನನು ಗತಪ್ರಾಣನಾಗಿ ರಥದಿಂದ ಕೆಳಕ್ಕೆ ಬಿದ್ದನು. ಮಹಾಧನುಷ್ಮಂತನಾದ, ಮಹಾಬಲನಾದ

ಪಾಂಚಾಲರಾಜಪುತ್ರನು ಹತನಾಗಲಾಗಿ, ಪಾಂಚಾಲಯೋಧರೆಲ್ಲರೂ ಬಹಳ ತ್ವರೆಯಿಂದ ದ್ರೋಣರನ್ನು ಮುತ್ತಿದರು. ಭ್ರಾತೃವ್ಯಸನದಿಂದ ದುಃಖಿತರಾದ ಚಿತ್ರಕೇತು, ಸುಧನ್ವಾನ, ಚಿತ್ರವರ್ಮಾ ಮತ್ತು ಚಿತ್ರರಥರು ಸಂಘಟಿತರಾಗಿ ಭಾರದ್ವಾಜರೊಡನೆ ಯುದ್ಧಮಾಡುವ ಇಚ್ಛೆಯಿಂದ–ವರ್ಷಾಕಾಲದಲ್ಲಿ ಮೋಡಗಳು ಮಳೆಗರೆಯುವಂತೆ–ಬಾಣಗಳ ಮಳೆಗರೆಯುತ್ತಾ ದ್ರೋಣ ರನ್ನು ಆಕ್ರಮಿಸಿದರು. ಮಹಾರಥರಾದ ರಾಜಪುತ್ರರಿಂದ ಬಹಳವಾಗಿ ಪೀಡಿಸಲ್ಪಟ್ಟ ದ್ವಿಜಶ್ರೇಷ್ಠರಾದ ದ್ರೋಣರು ರಾಜಪುತ್ರರನ್ನು ಇಲ್ಲದಂತೆ ಮಾಡಲು ಉಗ್ರವಾದ ಕೋಪವನ್ನು ತಾಳಿದರು. ಅನಂತರ ದ್ರೋಣರು ಆ ಪಾಂಚಾಲರಾಜಪುತ್ರರ ಮೇಲೆ ಬಲೆಯರೂಪವಾದ ಬಾಣಗಳನ್ನು ಆಕರ್ಣ ವಾಗಿ ಎಳೆದು ಪ್ರಯೋಗಿಸಿದರು. ಆಕರ್ಣಾಂತವಾಗಿ ಸೆಳೆದು ಪ್ರಯೋಗಿಸಿದ ದ್ರೋಣರ ಬಾಣಗಳಿಂದ ಪೀಡಿತರಾದ ರಾಜಪುತ್ರರು ಆ ಸಮಯದಲ್ಲಿ ತಾವು ಮಾಡಬೇಕಾದ ಕರ್ತವ್ಯವನ್ನು ತಿಳಿಯಲಿಲ್ಲ (ದಿಙ್ಮೂಢರಾದರು). ಮುಂದೇನುಮಾಡಬೇಕೆಂಬುದನ್ನು ತಿಳಿಯದೇ ಕ್ರಿಯಾಶೂನ್ಯರಾಗಿದ್ದ ರಾಜ ಪುತ್ರರನ್ನು ನೋಡಿ ದ್ರೋಣರು ಗಹ-ಗಹಿಸಿ ನಗುತ್ತಾ ರಾಜಕುಮಾರರನ್ನು ಅಶ್ವ-ಸೂತ-ರಥಗಳಿಂದ ವಿಹೀನರನ್ನಾಗಿ ಮಾಡಿದರು. ಸುನಿಶಿತವಾದ ಬೇರೆ ಭಲ್ಲಗಳಿಂದ ಮಹಾಯಶೋವಂತರಾದ ದ್ರೋಣರು–ಹೂಗಿಡಗಳಿಂದ ಹೂವನ್ನು ಕುಯ್ಯುವಂತೆ–ರಾಜಕುಮಾರರ ಉತ್ತಮಾಂಗಗಳನ್ನು (ತಲೆ ಗಳನ್ನು ) ಕತ್ತರಿಸಿ ಕೆಳಕ್ಕೆ ಬೀಳಿಸಿದರು. ದೇವಾಸುರರ ಯುದ್ಧದಲ್ಲಿ ದೇವತೆ ಗಳಿಂದ ಹತರಾದ ದೈತ್ಯ-ದಾನವರು ರಥಗಳಿಂದ ಕೆಳಗುರುಳುತ್ತಿದ್ದಂತೆ– ಸುವರ್ಚಸ್ಕರಾದ ಪಾಂಚಾಲರಾಜಕುಮಾರರು ದ್ರೋಣರ ಬಾಣಗಳಿಂದ ಹತರಾಗಿ ರಥಗಳಿಂದ ಭೂಮಿಗುರುಳಿದರು. ಮಹಾರಾಜ! ಪ್ರತಾಪವಂತ ರಾದ ದ್ರೋಣರು ಯುದ್ಧದಲ್ಲಿ ಪಾಂಚಾಲರಾಜಕುಮಾರರನ್ನು ಸಂಹರಿಸಿ ದುರಾಸದವಾದ, ಸುವರ್ಣಮಯವಾದ ಪೃಷ್ಠಭಾಗದಿಂದ ಕೂಡಿದ್ದ ಧನುಸ್ಸನ್ನು ಮಂಡಲಾಕಾರವಾಗಿ ಸುತ್ತುತ್ತಿರುವಂತೆಯೇ ಮಾಡಿದರು. ದೇವಸದೃಶರಾದ, ಮಹಾರಥರಾದ ಪಾಂಚಾಲರು ದ್ರೋಣರಿಂದ ಹತರಾದುದನ್ನು ನೋಡಿ, ಬಹಳ ಉದ್ವಿಗ್ನನಾದ ಧೃಷ್ಟದ್ಯುಮ್ನನು ಕಣ್ಣುಗಳಿಂದ ಕಂಬನಿಯನ್ನು ಸುರಿಸುತ್ತಾ ಅತ್ಯಂತಕ್ರುದ್ಧನಾಗಿ ದ್ರೋಣರ ರಥದ ಕಡೆಗೆ ಧಾವಿಸಿದನು. ರಣಕ್ಷೇತ್ರದಲ್ಲಿ ಧೃಷ್ಟದ್ಯುಮ್ನನು

ಬಾಣಗಳಿಂದ ದ್ರೋಣರನ್ನು ತಡೆದು ನಿಲ್ಲಿಸಿರುವುದನ್ನು ನೋಡಿ ಕೌರವ ಸೈನ್ಯದಲ್ಲಿ ಒಡನೆಯೇ ಹಾಹಾಕಾರವೆದ್ದಿತು.

ಮಹಾತ್ಮನಾದ ಪಾರ್ಷತನ ಬಾಣಗಳಿಂದ ದ್ರೋಣರು ಸಂಪೂರ್ಣವಾಗಿ ಆಚ್ಛಾದಿತರಾದರೂ ಸಹ ಸ್ವಲ್ಪವಾದರೂ ವ್ಯಥಿತರಾಗಲಿಲ್ಲ. ನಗು-ನಗುತ್ತಲೇ ಅವನೊಡನೆ ಯುದ್ಧಮಾಡಲು ತೊಡಗಿದರು. ಕ್ರೋಧಮೂರ್ಛಿತನಾದ ಪಾಂಚಾಲ್ಯನು ದ್ರೋಣರನ್ನು ಬಗ್ಗಿದ ಗಿಣ್ಣುಗಳಿದ್ದ ತೊಂಬತ್ತು ಬಾಣಗಳಿಂದ ಅವರ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಮಹಾಯಶೋವಂತರಾದ ದ್ರೋಣರು ಬಲಿಷ್ಠನಾದ ಧೃಷ್ಟದ್ಯುಮ್ನನಿಂದ ಬಹಳ ಗಾಢವಾಗಿ ಪ್ರಹರಿಸಲ್ಪಟ್ಟವರಾಗಿ ರಥಪೀಠದ ಪಕ್ಕಕ್ಕೆ ಸರಿದು ಕುಳಿತರು ಮತ್ತು ಅಷ್ಟರಲ್ಲಿಯೇ ಮೂರ್ಛೆಹೋದರು. ದ್ರೋಣರು ಅಂತಹ ಸ್ಥಿತಿಯಲ್ಲಿದ್ದುದನ್ನು ಕಂಡು, ಪರಾಕ್ರಮಿಯಾದ, ವೀರನಾದ ಧೃಷ್ಟದ್ಯುಮ್ನನು ಶೀಘ್ರವಾಗಿ ಧನುಸ್ಸನ್ನು ಕೆಳಗಿಟ್ಟು ಕತ್ತಿಯನ್ನು ಕೈಗೆತ್ತಿಕೊಂಡನು. ಮಹಾರಥನಾದ ಧೃಷ್ಟದ್ಯುಮ್ನನು ರಥದಿಂದ ಕೆಳಕ್ಕೆ ಧುಮುಕಿ ಬಹಳತ್ವರೆಯಿಂದ ಭಾರದ್ವಾಜರ ರಥವನ್ನು ಹತ್ತಿದನು. ಕ್ರೋಧದಿಂದ ಕೆಂಗಣ್ಣನಾಗಿದ್ದ ಧೃಷ್ಟದ್ಯುಮ್ನನು ದ್ರೋಣರ ಶರೀರದಿಂದ ತಲೆಯನ್ನು ಹಾರಿಸುವ ಇಚ್ಛೆಯಿಂದಿದ್ದನು. ಆದರೆ ಅಷ್ಟರೊಳಗಾಗಿಯೇ ದ್ರೋಣರು ಸುಧಾರಿಸಿಕೊಂಡು ಪ್ರಜ್ಞೆಯನ್ನು ಹೊಂದಿದರು. ತಮ್ಮನ್ನು ಸಂಹರಿಸುವ ಇಚ್ಛೆಯಿಂದ ಧೃಷ್ಟದ್ಯುಮ್ನನು ತಮ್ಮ ರಥದಲ್ಲಿ ನಿಂತಿರುವುದನ್ನು ನೋಡಿ, ಘೋರವಾಗಿ ಶಬ್ದಮಾಡುವ ಧನುಸ್ಸನ್ನು ಕೈಗೆತ್ತಿಕೊಂಡು ಹತ್ತಿರದ ಲಕ್ಷ್ಯವನ್ನು ಭೇದಿಸುವ, ವೈತಸ್ತಿಕವೆಂಬ ಹೆಸರಿನ ಬಾಣಗಳಿಂದ ಧೃಷ್ಟದ್ಯುಮ್ನನನ್ನು ದ್ರೋಣರು ಪ್ರಹರಿಸಿದರು. ಪುನಃ ದ್ರೋಣರು ಮಹಾರಥನಾದ ಧೃಷ್ಟದ್ಯುಮ್ನನೊಡನೆ ಯುದ್ಧಮಾಡಲು ತೊಡಗಿದರು. ಹತ್ತಿರದಲ್ಲಿರುವ ಲಕ್ಷ್ಯವನ್ನು ಭೇದಿಸಲು ಸಾಧ್ಯವಾಗುವಂತೆ 'ವೈತಸ್ತಿಕ' ಎಂಬ ಹೆಸರಿನ ಬಾಣಗಳನ್ನು ದ್ರೋಣರೇ ನಿರ್ಮಿಸಿದ್ದರು. ಆ ಬಾಣಗಳಿಂದಲೇ ತಮ್ಮ ನಿಕಟವರ್ತಿಯಾಗಿದ್ದ ಧೃಷ್ಟದ್ಯುಮ್ನನನ್ನು ಕ್ಷತ-ವಿಕ್ಷತನನ್ನಾಗಿ ಮಾಡಿದರು. ಮಹಾಬಲನಾದ, ಪರಾಕ್ರಮಿಯಾದ, ಮಹಾರಥನಾದ ಧೃಷ್ಟದ್ಯುಮ್ನನು ಅನೇಕ ವೈತಸ್ತಿಕ

ಬಾಣಗಳಿಂದ ಗಾಯಗೊಂಡು ಭಗ್ನವಾದ ವೇಗವುಳ್ಳವನಾಗಿ (ಕೈಯಲ್ಲಿ ಕತ್ತಿ ಯಿದ್ದರೂ ಪ್ರಹರಿಸಲು ಅಸಮರ್ಥನಾಗಿ) ಒಡನೆಯೇ ದ್ರೋಣರ ರಥದಿಂದ ಕೆಳಕ್ಕೆ ನೆಗೆದು ತನ್ನ ರಥವನ್ನು ಹತ್ತಿ ಮಹಾಧನುಸ್ಸನ್ನು ಪುನಃ ಕೈಗೆತ್ತಿಕೊಂಡು ಅನೇಕಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ದ್ರೋಣರೂ ಸಹ ನಿಶಿತವಾದ ಬಾಣಗಳಿಂದ ಪಾರ್ಷತನನ್ನು ಪ್ರಹರಿಸಿದರು. ಮೂರು ಲೋಕ ಗಳನ್ನೂ ಪಡೆದುಕೊಳ್ಳಬೇಕೆಂಬ ಇಚ್ಛೆಯಿಂದ ಹಿಂದೆ ಶಕ್ರ-ಪ್ರಹ್ಲಾದರು ಯುದ್ಧಮಾಡಿದಂತೆ–ದ್ರೋಣ-ಪಾಂಚಾಲ್ಯರು ಮಹಾದ್ಭುತವಾಗಿ ಯುದ್ಧ ಮಾಡಿದರು. ಇಬ್ಬರೂ ಸಹ ಯುದ್ಧದ ಪ್ರಣಾಳಿಕೆಗಳನ್ನು ಚೆನ್ನಾಗಿ ತಿಳಿದು ಕೊಂಡಿದ್ದರು. ಆದುದರಿಂದಲೇ ಅವರು ವಿಚಿತ್ರವಾದ ಮಂಡಲಗಳನ್ನೂ ಯಮಕಗಳನ್ನೂ, ಪ್ರದರ್ಶಿಸುತ್ತಾ ಬಾಣಗಳಿಂದ ಒಬ್ಬರನ್ನು ಮತ್ತೊಬ್ಬರು ಕ್ಷತ-ವಿಕ್ಷತರನ್ನಾಗಿ ಮಾಡುತ್ತಿದ್ದರು. ವರ್ಷಾಕಾಲದಲ್ಲಿ ಮೋಡಗಳು ಧಾರಾಕಾರವಾಗಿ ಮಳೆಗರೆಯುವಂತೆ–ದ್ರೋಣ-ಪಾರ್ಷತರು ಬಾಣಗಳ ಮಳೆಯನ್ನೇ ಸೃಷ್ಟಿಸುತ್ತಾ ಎಲ್ಲ ಯೋಧರ ಮನಸ್ಸುಗಳನ್ನೂ ಭ್ರಾಂತಿ ಗೊಳಿಸುತ್ತಿದ್ದರು. ಮಹಾತ್ಮರಾದ ದ್ರೋಣ-ಧೃಷ್ಟದ್ಯುಮ್ನರು ಬಾಣಗಳಿಂದ ಆಕಾಶವನ್ನೂ, ನಾಲ್ಕು ದಿಕ್ಕುಗಳನ್ನೂ, ಭೂಮಿಯನ್ನೂ ತುಂಬಿಸಿಬಿಟ್ಟರು. ಅವರಿಬ್ಬರ ಯುದ್ಧವು ಪರಮಾದ್ಭುತವಾಗಿದ್ದಿತು. ಪ್ರಾಣಿಗಳೆಲ್ಲವೂ ಅವರ ಯುದ್ಧವನ್ನು ಬಹಳವಾಗಿ ಪ್ರಶಂಸಿಸಿದುವು. ಕ್ಷತ್ರಿಯರೂ ಮತ್ತು ಇತರ ಸೈನಿಕರೂ ಸಹ ಅವರ ಯುದ್ಧವನ್ನು ಬಹಳವಾಗಿ ಹೊಗಳಿದರು. “ಧೃಷ್ಟದ್ಯುಮ್ನನೊಡನೆ ಯುದ್ಧದಲ್ಲಿ ತೊಡಗಿರುವ ದ್ರೋಣರು ನಿಶ್ಚಯವಾಗಿ ನಮಗೆ ವಶರಾಗುತ್ತಾರೆ (ಧೃಷ್ಟದ್ಯುಮ್ನನು ದ್ರೋಣರನ್ನಿಂದು ಜಯಿಸುತ್ತಾನೆ).”–ಎಂದು ಪಾಂಚಾಲರು ಕೂಗಿಕೊಳ್ಳುತ್ತಿದ್ದರು.

ಆ ಸಮಯದಲ್ಲಿ ದ್ರೋಣರು ಅತ್ಯಂತತ್ವರೆಯಿಂದ ಧೃಷ್ಟದ್ಯುಮ್ನನ ಸಾರಥಿಯ ತಲೆಯನ್ನು–ವೃಕ್ಷದಲ್ಲಿರುವ ಫಲವನ್ನು ಕೆಳಕ್ಕೆ ಬೀಳಿಸುವಂತೆ– ದೇಹದಿಂದ ಕೆಳಕ್ಕೆ ಕೆಡವಿದರು. ಯಂತಾರನು ಹತನಾಗಲಾಗಿ ನಿಯಂತ್ರಣವು ತಪ್ಪಿದ ಧೃಷ್ಟದ್ಯುಮ್ನನ ಕುದುರೆಗಳು ದಿಕ್ಕಾಪಾಲಾಗಿ ಓಡಿಹೋದುವು. ಪಾರ್ಷತನ ಕುದುರೆಗಳು ಓಡಿಹೋದನಂತರ ಪರಾಕ್ರಮಿಗಳಾದ ದ್ರೋಣರು ಪಾಂಚಾಲ-ಸೃಂಜಯಯೋಧರೊಡನೆ ಯುದ್ಧಮಾಡತೊಡಗಿದರು. ಸ್ವಲ್ಪ

ಹೊತ್ತಿನಲ್ಲಿಯೇ ಪ್ರತಾಪವಂತರಾದ, ಅರಿಂದಮರಾದ ಭಾರದ್ವಾಜರು ಪಾಂಡು-ಪಾಂಚಾಲರನ್ನು ಜಯಿಸಿ ತಮ್ಮ ವ್ಯೂಹದ ಅಗ್ರಭಾಗಕ್ಕೆ ಹೋಗಿ ಪುನಃ ಅಲ್ಲಿಯೇ ವ್ಯವಸ್ಥಿತರಾದರು. ಆ ಸಮಯದಲ್ಲಿ ಪಾಂಡವರೂ ಸಹ ದ್ರೋಣರನ್ನು ಜಯಿಸುವ ಉತ್ಸಾಹದಿಂದಿರಲಿಲ್ಲ."

೧೨೨ನೆಯ ಅಧ್ಯಾಯವು ಮುಗಿಯಿತು.

೧೨೩ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯೊಡನೆ ದುಃಶಾಸನನ ಘೋರಯುದ್ಧ: ದುಃಶಾಸನನ ಪರಾಜಯ

ಸಂಜಯನು ಸಾತ್ಯಕಿ-ದುಃಶಾಸನರ ಯುದ್ಧವನ್ನು ವರ್ಣಿಸುತ್ತಾನೆ :

"ಮಹಾರಾಜ! ದ್ರೋಣರ ನಿಂದನೆಗೆ ಪಾತ್ರನಾದ ದುಃಶಾಸನನು ಮಳೆಯನ್ನು ಸುರಿಸುವ ಮೇಘದಂತೆ-ನೂರಾರು-ಸಾವಿರಾರು ಬಾಣಗಳನ್ನು ಶೈನೇಯನ ಮೇಲೆ ಸುರಿಸುತ್ತಾ ಅವನನ್ನು ಆಕ್ರಮಿಸಿದನು. ದುಃಶಾಸನನು ಸಾತ್ಯಕಿಯನ್ನು ಮೊದಲು ಅರುವತ್ತು ಬಾಣಗಳಿಂದ ಪ್ರಹರಿಸಿ ಪುನಃ ಹದಿನಾರು ಬಾಣಗಳಿಂದ ಪ್ರಹರಿಸಿದರೂ ಮೈನಾಕಪರ್ವತದಂತೆ ಸುಸ್ಥಿರನಾಗಿ ನಿಂತಿದ್ದ ಸಾತ್ಯಕಿಯನ್ನು ಕಂಪನಗೊಳಿಸಲು ದುಃಶಾಸನನಿಗೆ ಸಾಧ್ಯವಾಗಲಿಲ್ಲ. ಅದರಿಂದ ನಿರಾಶನಾಗದೇ ಶೂರನಾದ ದುಃಶಾಸನನು ನಾನಾದೇಶಗಳಿಂದ ಬಂದಿದ್ದ ದೊಡ್ಡ ರಥಗಳ ಸಮೂಹದಿಂದಲೂ ಬಾಣಗಳಿಂದಲೂ ಸಾತ್ಯಕಿಯನ್ನು ಮುತ್ತಿದನು. ಮೇಘಕ್ಕೆ ಸಮಾನವಾದ ಗರ್ಜನೆಯಿಂದ ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ, ಎಲ್ಲ ದಿಕ್ಕುಗಳಿಂದಲೂ ದುಃಶಾಸನಪ್ರಮುಖರಾದ ವೀರರು ಅಸಂಖ್ಯಾತವಾದ ಬಾಣಗಳನ್ನು ಸಾತ್ಯಕಿಯ ಮೇಲೆ ಸುರಿಸುತ್ತಾ ಅವನನ್ನು ಆಕ್ರಮಿಸಿದರು. ದುಃಶಾಸನನು ತನ್ನ ಮೇಲೆ ಬೀಳಲು ಬರುತ್ತಿದ್ದುದನ್ನು ಕಂಡು ಮಹಾಬಾಹುವಾದ ಸಾತ್ಯಕಿಯು ಅವನಿಗೆ ಅಭಿಮುಖವಾಗಿ ರಥವನ್ನು ನಡೆಸಿ ಬಾಣಗಳಿಂದ ಕೌರವನನ್ನು ಮುಚ್ಚಿದನು. ದುಃಶಾಸನಪ್ರಮುಖರಾದ ರಥಿಕರು ಸಾತ್ಯಕಿಯು ಬಿಟ್ಟ ಬಾಣಗಳ ಸಮೂಹಗಳಿಂದ ಮುಚ್ಚಲ್ಪಟ್ಟವರಾಗಿ ಭಯಗೊಂಡು ನಿನ್ನ ಸೈನಿ

ಕರು ನೋಡುತ್ತಿದ್ದಂತೆಯೇ ಪಲಾಯನಮಾಡಿದರು. ಹಾಗೆ ಓಡುತ್ತಿದ್ದವರಲ್ಲಿ ನಿನ್ನ ಮಗನಾದ ದುಃಶಾಸನನು ಸೇರಿಕೊಳ್ಳಲಿಲ್ಲ. ಭಯರಹಿತನಾಗಿ ರಣಾಂಗಣದಲ್ಲಿ ನಿಂತು ಸಾತ್ಯಕಿಯನ್ನು ಅನೇಕ ಬಾಣಗಳಿಂದ ಪೀಡಿಸಿದನು. ಸಾತ್ಯಕಿಯ ಕುದುರೆಗಳನ್ನು ನಾಲ್ಕು ಬಾಣಗಳಿಂದಲೂ, ಸಾರಥಿಯನ್ನು ಮೂರು ಬಾಣಗಳಿಂದಲೂ ಮತ್ತು ಸಾತ್ಯಕಿಯನ್ನು ನೂರು ಬಾಣಗಳಿಂದಲೂ ಪ್ರಹರಿಸಿ ಗಟ್ಟಿಯಾಗಿ ಗರ್ಜಿಸಿದನು. ಅದರಿಂದ ಪರಮಕ್ರುದ್ಧನಾದ ಮಾಧವನು ಯುದ್ಧದಲ್ಲಿ ದುಃಶಾಸನನ ರಥವನ್ನೂ, ಸೂತನನ್ನೂ, ಧ್ವಜವನ್ನೂ ನೇರವಾಗಿ ಹೋಗುವ ಬಾಣಗಳಿಂದ ಅದೃಶ್ಯರನ್ನಾಗಿ ಮಾಡಿ ಶೂರನಾದ ದುಃಶಾಸನನನ್ನೂ ಬಾಣಗಳಿಂದ ಮುಚ್ಚಿಬಿಟ್ಟನು. ಜೇಡರ ಹುಳುವು ಶಂಕೆಯಿಂದ ಕೂಡಿ ತನ್ನ ಬಳಿಗೆ ಬಂದಿರುವ ಹುಳುವನ್ನು ತನ್ನ ದಾರದಿಂದ ಸುತ್ತಿಬಿಡುವಂತೆ–ಭಯದ ಶಂಕೆಯಿಂದ ತಾನೇ ತಾನಾಗಿ ಬಂದಿರುವ ದುಃಶಾಸನನನ್ನು ಶತ್ರುಂಜಯನಾದ ಸಾತ್ಯಕಿಯು ತ್ವರೆಯಿಂದ ಕೂಡಿದವನಾಗಿ ಬಾಣಗಳಿಂದ ಮುಚ್ಚಿದನು. ದುಃಶಾಸನನು ಸಾತ್ಯಕಿಯ ಬಾಣಗಳಿಂದ ಆಚ್ಛಾದಿತನಾಗಿರುವುದನ್ನು ಕಂಡು ರಾಜನಾದ ದುರ್ಯೋಧನನು ತ್ರಿಗರ್ತರನ್ನು ಯುಯುಧಾನನ ರಥದ ಬಳಿಗೆ ಹೋಗುವಂತೆ ಪ್ರಚೋದಿಸಿದನು. ಯುದ್ಧವಿಶಾರದರಾದ ಮೂರು ಸಾವಿರ ತ್ರಿಗರ್ತರಥಿಕರು ದುರ್ಯೋಧನನ ಆಜ್ಞೆಯಂತೆ ಕ್ರೂರಕರ್ಮಿಯಾದ ಸಾತ್ಯಕಿಯ ಬಳಿಗೆ ಹೋದರು. ರಹಸ್ಯದಲ್ಲವರು ಪ್ರತಿಜ್ಞೆಯನ್ನು ಕೈಗೊಂಡು ಸಂಶಪ್ತಕರಾಗಿ ಪ್ರಾಣಾಂತ್ಯದವರೆಗೂ ಯುದ್ಧಮಾಡುತ್ತಲೇ ಇರಬೇಕೆಂಬ ನಿಶ್ಚಲವಾದ ಬುದ್ಧಿಯಿಂದ ಕೂಡಿದವರಾಗಿ ದೊಡ್ಡದಾದ ರಥದ ಸಾಲಿನಿಂದ ಕೂಡಿದವರಾಗಿ ಸಾತ್ಯಕಿಯನ್ನು ಆಕ್ರಮಿಸಿದರು. ಬಾಣಗಳ ಮಳೆಗರೆಯುತ್ತಾ ತನ್ನ ಮೇಲೆ ಬೀಳಲು ಬರುತ್ತಿದ್ದ ಮೂರು ಸಾವಿರ ರಥಿಕರಲ್ಲಿ ಬಹಳ ಮುಖ್ಯರಾದ ಐದು ನೂರು ಮಂದಿ ಸೇನಾಗ್ರಣಿಗಳನ್ನೂ ಸಾತ್ಯಕಿಯು ಸಂಹರಿಸಿದನು. ಚಂಡಮಾರುತದ ವೇಗದಿಂದ ಭಗ್ನವಾಗಿಹೋದ ವೃಕ್ಷಗಳು ಪರ್ವತದ ಮೇಲಿನಿಂದ ಬೀಳುವಂತೆ–ಶಿನಿಶ್ರೇಷ್ಠನ ಬಾಣಗಳಿಂದ ಹತರಾದ ತ್ರಿಗರ್ತಯೋಧರು ಬಹಳ ಶೀಘ್ರವಾಗಿ ಭೂಮಿಯ ಮೇಲೆ ಬಿದ್ದರು. ಶೈನೇಯನ ಬಾಣಗಳಿಂದ ಕತ್ತರಿಸಲ್ಪಟ್ಟ, ರಕ್ತದಿಂದ ತೋಯ್ದುಹೋಗಿದ್ದ, ಕ್ಷತ-ವಿಕ್ಷತವಾಗಿ ಬಿದ್ದಿದ್ದ ಆನೆ

ಗಳಿಂದಲೂ ಧ್ವಜಗಳಿಂದಲೂ, ಸುವರ್ಣಾಭರಣಗಳಿಂದ ಅಲಂಕೃತವಾಗಿದ್ದ ಕುದುರೆಗಳಿಂದಲೂ ವ್ಯಾಪ್ತವಾಗಿದ್ದ ಆ ರಣರಂಗವು–ಸುಪುಷ್ಪಿತವಾದ ಮುತ್ತುಗದ ಮರಗಳಿಂದ ವ್ಯಾಪ್ತವಾಗಿರುವಂತೆ ಕಾಣುತ್ತಿದ್ದಿತು. ಯುದ್ಧದಲ್ಲಿ ಯುಯುಧಾನನಿಂದ ಅವ್ಯಾಹತವಾಗಿ ವಧಿಸಲ್ಪಡುತ್ತಿದ್ದ ನಿನ್ನ ಕಡೆಯ ಸೈನಿಕರು–ಕೆಸರಿನಲ್ಲಿ ಸಿಕ್ಕಿಹಾಕಿಕೊಂಡಿರುವ ಆನೆಗಳಂತೆ ರಕ್ಷಕರಾರನ್ನೂ ಕಾಣಲಿಲ್ಲ. ಆ ಸಮಯದಲ್ಲಿ ಅವರನ್ನು ರಕ್ಷಿಸುವವರೇ ಇರಲಿಲ್ಲ. ಪಕ್ಷಿರಾಜ ನಾದ ಗರುಡನ ಭಯದಿಂದ ಸರ್ಪಗಳು ಹುತ್ತವನ್ನು ಸೇರಿಕೊಳ್ಳುವಂತೆ–ಸಾತ್ಯಕಿಯ ಭಯದಿಂದ ಎಲ್ಲ ಸೈನಿಕರೂ ದ್ರೋಣರ ರಥದ ಕಡೆಗೆ ಓಡಿ ಹೋದರು. ಸಾವಕಾಶವಾಗಿಯೇ ಅರ್ಜುನನ ರಥದ ಬಳಿಗೆ ಹೋಗುತ್ತಿದ್ದ ಸಾತ್ಯಕಿಯನ್ನು ಪುನಃ ನಿನ್ನ ಮಗನಾದ ದುಃಶಾಸನನು ತಡೆದು ಬಗ್ಗಿದ ಗಿಣ್ಣು ಗಳಿದ್ದ ಒಂಬತ್ತು ಬಾಣಗಳಿಂದ ಬಹಳ ಶೀಘ್ರವಾಗಿ ಪ್ರಹರಿಸಿದನು. ಮಹಾಧನುಷ್ಮಂತನಾದ ಸಾತ್ಯಕಿಯು ಅದಕ್ಕೆ ಪ್ರತಿಯಾಗಿ ಚಿನ್ನದ ಮೂಲಭಾಗವಿದ್ದ, ಹದ್ದಿನ ರೆಕ್ಕೆಗಳನ್ನು ಹೊಂದಿದ್ದ, ನೇರವಾಗಿ ಹೋಗುವ ನಿಶಿತವಾಗಿದ್ದ ಐದು ಬಾಣಗಳಿಂದ ದುಃಶಾಸನನನ್ನು ಪ್ರಹರಿಸಿದನು. ಮಹಾರಾಜ! ಅನಂತರ ದುಃಶಾಸನನು ನಗು-ನಗುತ್ತಲೇ ಮೂರು ಬಾಣಗಳಿಂದ ಸಾತ್ಯಕಿಯನ್ನು ಪ್ರಹರಿಸಿ ಪುನಃ ಐದು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಸಾತ್ಯಕಿಯೂ ನಿನ್ನ ಮಗನಾದ ದುಃಶಾಸನನನ್ನು ಶೀಘ್ರವಾಗಿ ಹೋಗುವ ಐದು ಬಾಣಗಳಿಂದ ಗಾಯಗೊಳಿಸಿ ಮತ್ತೊಂದು ಬಾಣದಿಂದ ಅವನ ಧನುಸ್ಸನ್ನೂ ಕತ್ತರಿಸಿ ನಸುನಗುತ್ತಾ ಅರ್ಜುನನ ಕಡೆಗೆ ಹೊರಟನು. ಈ ವಿಧವಾದ ತಿರಸ್ಕಾರದಿಂದ ದುಃಶಾಸನನು ಪರಮಕ್ರುದ್ಧನಾಗಿ ಅರ್ಜುನನ ಕಡೆಗೆ ಹೋಗುತ್ತಿದ್ದ ಸಾತ್ಯಕಿಯನ್ನು ಕೊಲ್ಲುವ ಆಶಯದಿಂದ ಸಂಪೂರ್ಣವಾಗಿ ಲೋಹದಿಂದ ಮಾಡಲ್ಪಟ್ಟಿದ್ದ ಶಕ್ತ್ಯಾಯುಧವನ್ನು ಅವನ ಮೇಲೆ ರಭಸದಿಂದೆಸೆದನು. ಸಾತ್ಯಕಿಯು ನಿನ್ನ ಮಗನೆಸೆದ ಘೋರವಾದ ಆ ಶಕ್ತ್ಯಾಯುಧವನ್ನು ರಣಹದ್ದಿನ ರೆಕ್ಕೆಗಳಿಂದ ಕೂಡಿದ್ದ ನಿಶಿತವಾದ ಬಾಣಗಳಿಂದ ನೂರು ಭಾಗಗಳಾಗಿ ಕತ್ತರಿಸಿಬಿಟ್ಟನು. ಜನೇಶ್ವರ! ನಿನ್ನ ಮಗನು ಪುನಃ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು

ಸಾತ್ಯಕಿಯನ್ನು ಬಾಣಗಳಿಂದ ಗಾಯಗೊಳಿಸಿ ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು.

ಅದರಿಂದ ಪರಮಕ್ರುದ್ಧನಾದ, ಮಹಾಭಾಗನಾದ ಸಾತ್ಯಕಿಯಾದರೋ ನಿನ್ನ ಮಗನನ್ನು ಭ್ರಾಂತಿಗೊಳಿಸುತ್ತಾ ಅಗ್ನಿಯ ಜ್ವಾಲೆಗಳ ಆಕಾರವನ್ನು ಹೊಂದಿದ್ದ, ಬಗ್ಗಿದ ಗಿಣ್ಣುಗಳಿದ್ದ ಮೂರೇ ಮೂರು ಬಾಣಗಳಿಂದ ದುಃಶಾಸನನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಪುನಃ ಅಯೋಮಯವಾದ, ತೀಕ್ಷ್ಣವಾದ ಮುಖಗಳಿಂದ ಕೂಡಿದ್ದ ಎಂಟು ಬಾಣಗಳಿಂದ ದುಃಶಾಸನನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ದುಃಶಾಸನನು ಸಾತ್ಯಕಿಯನ್ನು ಇಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಸಾತ್ವತನೂ ಸಹ ಬಗ್ಗಿದ ಗಿಣ್ಣುಗಳಿದ್ದ ಮೂರು ಬಾಣಗಳಿಂದ ಪುನಃ ದುಃಶಾಸನನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅನಂತರ ಮಹಾರಥನಾದ ಸಾತ್ಯಕಿಯು ದುಃಶಾಸನನ ರಥದ ಕುದುರೆಗಳನ್ನು ನಿಶಿತವಾದ ಬಾಣಗಳಿಂದ ಸಂಹರಿಸಿದನು. ಅವನ ಸಾರಥಿಯನ್ನೂ ಸಹ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಸಂಹರಿಸಿದನು. ಅನಂತರ ಪರಮಾಸ್ತ್ರವಿದನಾದ ಸಾತ್ಯಕಿಯು ಒಂದು ಭಲ್ಲದಿಂದ ದುಃಶಾಸನನ ಧನುಸ್ಸನ್ನೂ, ಐದು ಬಾಣಗಳಿಂದ ಅವನ ಚರ್ಮದ ಕೈಚೀಲವನ್ನೂ, ಎರಡು ಭಲ್ಲಗಳಿಂದ ಅವನ ಧ್ವಜವನ್ನೂ–ರಥಶಕ್ತಿಯನ್ನೂ ಕತ್ತರಿಸಿದನು. ಅನಂತರ ತೀಕ್ಷ್ಣವಾದ ಬಾಣಗಳಿಂದ ಅವನ ಇಬ್ಬರು ಪಾರ್ಶ್ವರಕ್ಷಕರನ್ನೂ ಸಂಹರಿಸಿದನು. ಈ ರೀತಿಯಲ್ಲಿ ಛಿನ್ನಧನ್ವನಾದ, ರಥಹೀನನಾದ, ಹತಾಶ್ವನಾದ, ಹತಸಾರಥಿಯಾದ ದುಃಶಾಸನನನ್ನು ತ್ರಿಗರ್ತಸೇನಾಪತಿಯು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟುಹೋದನು. ಭಾರತ! ಆ ಸಮಯದಲ್ಲಿ ಸಾತ್ಯಕಿಯು ಮುಹೂರ್ತಪರ್ಯಂತವಾಗಿ ದುಃಶಾಸನನನ್ನೇ ಹಿಂಬಾಲಿಸಿ ಅವನೊಡನೆ ಯುದ್ಧದಲ್ಲಿ ತೊಡಗಿದ್ದನು. ಆದರೆ ಮಹಾಬಾಹುವಾದ ಸಾತ್ಯಕಿಯು ಭೀಮಸೇನನು ಮಾಡಿದ್ದ ಪ್ರತಿಜ್ಞೆಯನ್ನು ಸ್ಮರಿಸಿ ಅವನನ್ನು ಸಂಹರಿಸುವ ಅವಕಾಶವು ಸಿಕ್ಕಿದ್ದರೂ ಸಂಹರಿಸಲಿಲ್ಲ. ಭೀಮಸೇನನು ಸಭಾಮಧ್ಯದಲ್ಲಿ ನಿನ್ನ ಮಕ್ಕಳೆಲ್ಲರನ್ನೂ ಯುದ್ಧದಲ್ಲಿ ವಧಿಸುವುದಾಗಿ ಪ್ರತಿಜ್ಞೆಮಾಡಿದ್ದನು. ಅದನ್ನು ಸ್ಮರಿಸಿಯೇ ಸಾತ್ಯಕಿಯು ದುಃಶಾಸನನನ್ನು ಸಂಹರಿಸಲಿಲ್ಲ. ಈ ರೀತಿ ಸಾತ್ಯಕಿಯು

ಯುದ್ಧದಲ್ಲಿ ದುಃಶಾಸನನನ್ನು ಜಯಿಸಿ ಅತ್ಯಂತತ್ವರೆಯಿಂದ ಧನಂಜಯನು ಹೋಗಿದ್ದ ಮಾರ್ಗವನ್ನೇ ಹಿಡಿದು ಹೊರಟುಹೋದನು."

೧೨೩ನೆಯ ಅಧ್ಯಾಯವು ಮುಗಿಯಿತು.

೧೨೪ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಕೌರವ-ಪಾಂಡವರ ಘೋರಯುದ್ಧ: ಪಾಂಡವರೊಡನೆ ದುರ್ಯೋಧನನ ಕಾಳಗ

ಧೃತರಾಷ್ಟ್ರನು ದುಗುಡದಿಂದ ಕೇಳುತ್ತಾನೆ :

"ಸಂಜಯ! ಅರ್ಜುನನ ಬಳಿಗೆ ಹೋಗುತ್ತಿದ್ದ ಸಾತ್ಯಕಿಯನ್ನು ಸಂಹಾರಮಾಡುವ ಅಥವಾ ಅವನನ್ನು ಮುಂದೆ ಹೋಗದಂತೆ ತಡೆದು ನಿಲ್ಲಿಸುವ ಮಹಾರಥರು ನಮ್ಮ ಅಪಾರಸೈನ್ಯದಲ್ಲಿ ಯಾರೂ ಇರಲೇ ಇಲ್ಲವೇ? ಇಂದ್ರಸದೃಶಪರಾಕ್ರಮನಾದ ಸತ್ಯವಿಕ್ರಮನಾದ ಸಾತ್ಯಕಿಯು- ಮಹೇಂದ್ರನು ದಾನವರನ್ನು ಮರ್ದನಮಾಡಿದಂತೆ-ಏಕಾಕಿಯಾಗಿಯೇ ಮಹಾದ್ಭುತಕರ್ಮವನ್ನೇ ಮಾಡಿದನು. ಸಾತ್ಯಕಿಯು ಯಾವ ಮಾರ್ಗದಿಂದ ಹೊರಟಿದ್ದನೋ ಆ ಮಾರ್ಗವು ವೀರರಿಂದ ಶೂನ್ಯವಾಗಿಬಿಟ್ಟಿದ್ದಿತೇ? ಅಥವಾ ಆ ಮಾರ್ಗದಲ್ಲಿದ್ದ ವೀರರಲ್ಲಿ ಹಲವರು ಅರ್ಜುನನಿಂದ ಹತ ರಾಗಿಯೇ ಹೋದರು. ವೃಷ್ಣಿವೀರನು ಮಾಡಿರುವ ಸಾಹಸಕ್ರಿಯೆಯನ್ನು ಪ್ರಾಯಶಃ ದೇವರಾಜನಾದ ಇಂದ್ರನೂ ಮಾಡಲಾರನು. ಮಹಾತ್ಮನಾದ ವೃಷ್ಣ್ಯಂಧಕಪ್ರವೀರನ ಆ ಸಾಹಸಕರ್ಮವು ನಂಬುವುದಕ್ಕೆ ಸಾಧ್ಯವಿಲ್ಲದುದು ಮತ್ತು ಜನಸಾಮಾನ್ಯರಿಂದ ಊಹಿಸಲು ಕೂಡ ಅಸದಳವಾದುದು. ಅವನ ಸಾಹಸಕಾರ್ಯಗಳ ವರ್ಣನೆಯನ್ನು ಕೇಳಿ ನನ್ನ ಮನಸ್ಸು ಬಹಳ ವ್ಯಥೆಗೊಂಡಿದೆ. ಸತ್ಯವಿಕ್ರಮನಾದ ಒಬ್ಬನೇ ಒಬ್ಬ ಸಾತ್ಯಕಿಯು ಬಹುಸಂಖ್ಯಾತ ರಾದ ಸೈನಿಕರನ್ನು ಧೂಳೀಪಟಲಮಾಡಿಬಿಟ್ಟಿರುವನು.

ಈ ಮಾತನ್ನು ನೀನು ಒಮ್ಮೆಯಲ್ಲ; ಹತ್ತಾರು ಸಲ ಹೇಳಿರುವೆ. ನೀನು ಹೇಳುತ್ತಿರುವುದನ್ನು ನೋಡಿದರೆ ನನ್ನ ಮಕ್ಕಳಲ್ಲಿ ಯಾರೂ ಜೀವಂತ ರಾಗಿ ಉಳಿದೇ ಇಲ್ಲವೆಂಬ ಭಾವನೆಯೂ ನನಗುಂಟಾಗುತ್ತಿದೆ. ಅನೇಕ ಮಹಾತ್ಮರು ಆ ಸಮಯದಲ್ಲಿ ಯುದ್ಧಮಾಡುತ್ತಿದ್ದರು. ಒಬ್ಬನೇ ಒಬ್ಬ ಸಾತ್ಯ

ಕಿಯು ಬಹುಸಂಖ್ಯಾತರಾದ ಮಹಾರಥರನ್ನು ಹೇಗೆ ಅತಿಕ್ರಮಿಸಿ ಹೋದನು? ಈ ವಿಷಯವನ್ನು ನನಗೆ ಯಥಾವತ್ತಾಗಿ ಹೇಳು, ಸಂಜಯ!"

"ಮಹಾರಾಜ! ರಥ-ಗಜಾಶ್ವಗಳಿಂದ ಸಮೃದ್ಧವಾಗಿದ್ದ ನಿನ್ನ ವಿಶಾಲ ಸೈನ್ಯದ ಉದ್ಯೋಗವು ಭಯಂಕರವಾಗಿಯೂ, ಪ್ರಳಯಕಾಲಸದೃಶ ವಾಗಿಯೂ ಇದ್ದಿತು (ನಿನ್ನ ಸೈನಿಕರು ಉದ್ಯೋಗಶೀಲರಾಗಿಯೇ ಇದ್ದರು). ನಿನ್ನಿಂದ ಆಹ್ವಾನಿತರಾಗಿ ನಾನಾದೇಶಗಳಿಂದ ಬಂದಿದ್ದ ಸೈನಿಕರ ಸಮೂಹ ಗಳೂ ಅಸಂಖ್ಯಾತವಾಗಿಯೂ, ಅಪ್ರತಿಮವಾಗಿಯೂ ಇದ್ದುವು. ಅಂತಹ ಸೇನಾಸಮೂಹವು ಇದುವರೆಗೆ ಈ ಲೋಕದಲ್ಲಿ ಎಲ್ಲಿಯೂ ಸೇರಿಯೇ ಇರಲಿಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ. ಅಲ್ಲಿಗೆ ಬಂದಿದ್ದ ದೇವತೆಗಳೂ ಮತ್ತು ಚಾರಣರೂ–'ಇಂತಹ ಸಮೂಹಗಳಿಗೆ ಈ ಯುದ್ಧವೇ ಕಡೆಯದಾಗುತ್ತದೆ (ಇಂತಹ ಸಮೂಹವು ಹಿಂದೆ ಸೇರಿಯೂ ಇರಲಿಲ್ಲ; ಮುಂದೆ ಸೇರುವುದೂ ಇಲ್ಲ). ಜಯದ್ರಥನ ವಧೆಯ ಸಮಯದಲ್ಲಿ ಅವ ನನ್ನು ರಕ್ಷಿಸಲು ದ್ರೋಣರು ನಿರ್ಮಿಸಿದಂತಹ ವ್ಯೂಹವು ಎಂದೂ ನಿರ್ಮಿತ ವಾಗಿರಲಿಲ್ಲ'–ಎಂಬುದಾಗಿ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು. ಪರಸ್ಪರಪ್ರಹರಣಗಳಲ್ಲಿ ತೊಡಗಿದ್ದ ಸೇನಾಸಮೂಹದಿಂದ ಉದ್ಭೂತವಾಗು ತ್ತಿದ್ದ ಮಹಾಧ್ವನಿಯು ಚಂಡಮಾರುತದಿಂದ ಅಲ್ಲೋಲ-ಕಲ್ಲೋಲವಾದ ಸಮುದ್ರಗಳ ಭೋರ್ಗರೆಯುವ ಧ್ವನಿಯಂತೆಯೇ ಇದ್ದಿತು. ನಿನ್ನ ಕಡೆಗೆ ಮತ್ತು ಪಾಂಡವರ ಕಡೆಗೆ ವಿಶ್ವಾದ್ಯಂತವಾಗಿ ಬಂದಿದ್ದ ಪಾರ್ಥಿವರ ಸಮೂಹವು ಅಸಂಖ್ಯವಾಗಿದ್ದಿತು. ಆ ಸೇನಾಸಮೂಹದಲ್ಲಿ ನೂರಾರು- ಸಾವಿರಾರು ದಳಗಳಿದ್ದುವು. ಸಮರಾಂಗಣದಲ್ಲಿ ಸುದೃಢವಾದ ಪರಾಕ್ರಮವನ್ನು ತೋರಿಸುವ ಕುಪಿತರಾದ ಪ್ರವೀರರಿಂದ ಆ ಸೇನಾಸಮೂಹಗಳು ಸಮೃದ್ಧವಾಗಿದ್ದುವು. ಅವರಲ್ಲಿ ಪರಸ್ಪರ ಘರ್ಷಣೆಯಾಗುತ್ತಿದ್ದಾಗ ಭಯಂಕರವಾದ ಮತ್ತು ರೋಮಾಂಚಕರವಾದ ಶಬ್ದವುಂಟಾಯಿತು. ಭೀಮಸೇನ, ಧೃಷ್ಟದ್ಯುಮ್ನ, ನಕುಲ-ಸಹದೇವರು ಪಾಂಡವಜ್ಯೇಷ್ಠನಾದ ಯುಧಿಷ್ಠಿರ–ಇವರೆಲ್ಲರೂ ಸೇರಿ ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದರು.

**ಆಗಚ್ಛತ ಪ್ರಹರತ ದ್ರುತಂ ವಿಪರಿಧಾವತ ।**
**ಪ್ರವಿಷ್ಟಾವರಿಸೇನಾಂ ಹಿ ವೀರೌ ಮಾಧವಪಾಣ್ಡವೌ ॥೧೬॥**

“ಬೇಗ ಬನ್ನಿರಿ! ಶತ್ರುಗಳನ್ನು ಪ್ರಹರಿಸಿರಿ! ಬಹಳ ಶೀಘ್ರವಾಗಿ ಅವರನ್ನು ಆಕ್ರಮಿಸಿರಿ! ವೀರರಾದ ಮಾಧವ-ಪಾಂಡವರು ಶತ್ರುಸೇನೆಯನ್ನು ಪ್ರವೇಶಿಸಿಬಿಟ್ಟಿದ್ದಾರೆ. ಅವರಿಬ್ಬರೂ ಸೇರಿ ಜಯದ್ರಥನ ವಧೆಯನ್ನು ಬಹಳ ಸುಲಭವಾಗಿ ಸಾಧಿಸಬೇಕಾಗಿದೆ. ಅದಕ್ಕೆ ಅನುಕೂಲವಾಗುವಂತೆ ನೀವೆಲ್ಲರೂ ಕ್ಷಿಪ್ರವಾಗಿ ಕಾರ್ಯಮಾಡಿರಿ.”–ಎಂಬುದಾಗಿ ಯುಧಿಷ್ಠಿರಾದಿಗಳು ಸೈನಿಕರನ್ನು ಹುರಿದುಂಬಿಸುತ್ತಿದ್ದರು. “ಒಂದು ವೇಳೆ ಈಗ ನಾವು ಜಾಗ್ರತರಾಗಿರದಿದ್ದರೆ ಮಾಧವಾರ್ಜುನರು ಇಲ್ಲದಿರುವ ಈ ಸಮಯದಲ್ಲಿ ಕೌರವರು ನಮ್ಮನ್ನು ಜಯಿಸಿ ಕೃತಾರ್ಥರಾಗಿಬಿಡಬಹುದು. ಆದುದರಿಂದ ನೀವೆಲ್ಲರೂ ಈ ಕೂಡಲೇ ಸಂಘಟಿತರಾಗಿ–ಮಹಾವೇಗಯುಕ್ತವಾದ ಗಾಳಿಯು ಸಮುದ್ರವನ್ನು ಅಲ್ಲೋಲ-ಕಲ್ಲೋಲಮಾಡುವಂತೆ–ಕೌರವರ ಸೇನಾಸಮುದ್ರವನ್ನು ಕಲಕಿ ಬಿಡಿರಿ”–ಎಂಬುದಾಗಿಯೂ ಧೃಷ್ಟದ್ಯುಮ್ನಾದಿ ಗಳು ಹೇಳುತ್ತಿದ್ದರು.

ಭೀಮಸೇನನಿಂದಲೂ-ಧೃಷ್ಟದ್ಯುಮ್ನನಿಂದಲೂ ಪ್ರೇರಿತರಾದ ಪಾಂಡವ ಯೋಧರು ತಮಗೆ ಪ್ರಿಯವಾದ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಕೌರವರ ಕಡೆಯ ಸೈನಿಕರನ್ನು ವೀರಾವೇಶದಿಂದ ಸಂಹರಿಸತೊಡಗಿದರು. ಶ್ರೇಷ್ಠವಾದ ತೇಜಸ್ಸಿನಿಂದ ಕೂಡಿದ್ದ ಪಾಂಡವರ ಕಡೆಯ ಯೋಧರು ಸ್ವರ್ಗೇಚ್ಛುಗಳಾಗಿ ದ್ದರು. ಆದುದರಿಂದಲೇ ಅವರು ಶತ್ರುಗಳ ಮೂಲಕವಾಗಿ ಯುದ್ಧದಲ್ಲಿ ಸಾವನ್ನು ಬಯಸಿದ್ದರು. ಮಿತ್ರರ ಕಾರ್ಯಸಾಧನೆಯಲ್ಲಿಯೇ ದೃಷ್ಟಿಯಿದ್ದ ಅವರು ತಮ್ಮ ಜೀವಿತದ ವಿಷಯದಲ್ಲಿ ಆಸಕ್ತಿಯುಳ್ಳವರಾಗಿರಲಿಲ್ಲ. ವ್ಯರ್ಥ ವಾಗಿ ಜೀವಿಸಿರುವುದನ್ನು ಅವರು ಪ್ರಶಂಸಿಸುತ್ತಿರಲಿಲ್ಲ. ಅದೇ ರೀತಿಯಲ್ಲಿ ನಿನ್ನ ಕಡೆಯ ಸೈನಿಕರೂ ಸಹ ಯುದ್ಧದ ಮೂಲಕವಾಗಿ ಮಹಾಯಶಸ್ಸನ್ನು ಆಶಿಸುತ್ತಾ ಯುದ್ಧವನ್ನೇ ಮಾಡಬೇಕೆಂಬ ಶ್ರೇಷ್ಠವಾದ ನಿರ್ಧಾರವನ್ನು ಮಾಡಿ ಯುದ್ಧಮಾಡಲು ಸಜ್ಜಾಗಿ ನಿಂತಿದ್ದರು.

ಕೌರವ-ಪಾಂಡವರಲ್ಲಿ ಭಯಂಕರವಾದ ಮತ್ತು ಘೋರವಾದ ಯುದ್ಧವು ನಡೆಯುತ್ತಿರಲಾಗಿ, ಸಾತ್ಯಕಿಯು ಎಲ್ಲ ಕೌರವಸೈನಿಕರನ್ನೂ ಜಯಿಸಿ ಅರ್ಜುನನ ಬಳಿಗೆ ಹೊರಟುಹೋದನು. ಸೂರ್ಯರಶ್ಮಿಯು ಮೇಲೆ ಬಿದ್ದು ಪ್ರತಿರಶ್ಮಿಗಳನ್ನು ಹೊರಸೂಸುತ್ತಿದ್ದ ಯೋಧರ ಕವಚಗಳು ಸುತ್ತಲೂ ಇದ್ದ ಸೈನಿಕರ ಕಣ್ಣುಗಳನ್ನು ಕೋರೈಸುತ್ತಿದ್ದುವು. (ಸೈನಿಕರೆಲ್ಲರೂ

ಕವಚಗಳನ್ನು ತೊಟ್ಟುಕೊಂಡಿದ್ದರು. ಕವಚಗಳು ಸುವರ್ಣಮಯವಾಗಿದ್ದುವು. ಅವುಗಳ ಮೇಲೆ ಸೂರ್ಯನ ಕಿರಣಗಳು ಬಿದ್ದು ಪ್ರತಿಕಿರಣಗಳು ಕವಚಗಳಿಂದ ಹೊರಬರುತ್ತಿದ್ದುವು. ಆ ಕಿರಣಗಳು ಎಲ್ಲ ಸೈನಿಕರ ಕಣ್ಣುಗಳನ್ನೂ ಕೋರೈಸುತ್ತಿದ್ದುವು.)

ಮಹಾತ್ಮರಾದ ಪಾಂಡವರು ವಿಜಯಗಳಿಸುವ ಸಲುವಾಗಿ ಪ್ರಯತ್ನಿಸುತ್ತಿದ್ದಾಗ–ದುರ್ಯೋಧನನೇ ಪಾಂಡವರ ಮಹಾಸೈನ್ಯವನ್ನು ಪ್ರವೇಶಿಸಿದನು. ಪಾಂಡವರಿಗೂ ಮತ್ತು ದುರ್ಯೋಧನನಿಗೂ ನಡೆದ ಮಹಾಭಯಂಕರವಾದ ಆ ಸಂಗ್ರಾಮವು ಸರ್ವಪ್ರಾಣಿಗಳ ಕ್ಷಯಕರಸಂಗ್ರಾಮವಾಗಿ ಪರಿಣಮಿಸಿತು.”

ದುರ್ಯೋಧನನು ಏಕಾಕಿಯಾಗಿ ಪಾಂಡವರೊಡನೆ ಯುದ್ಧಕ್ಕೆ ಹೋದನೆಂದು ಸಂಜಯನು ಹೇಳಿದೊಡನೆಯೇ ಉದ್ವೇಗದಿಂದ ಕೂಡಿದ ಧೃತರಾಷ್ಟ್ರನು ಹೇಳುತ್ತಾನೆ :

“ಸೂತ! ನೀನು ಹೇಳಿದ ರೀತಿಯಲ್ಲಿ ನನ್ನ ಸೈನಿಕರೆಲ್ಲರೂ ಪಲಾಯನ ಮಾಡಲಾಗಿ, ತಾನೇ ಬಹಳ ಕಷ್ಟದಲ್ಲಿ ಸಿಕ್ಕಿರಲಾಗಿ, ದುರ್ಯೋಧನನು ಯುದ್ಧದಿಂದ ಹಿಮ್ಮೆಟ್ಟಿರಲಿಲ್ಲವೇ? ಮಹಾಯುದ್ಧದಲ್ಲಿ ಒಬ್ಬನಿಗೂ ಮತ್ತು ಬಹುಮಂದಿ ಯೋಧರಿಗೂ ನಡುವೆ ಯುದ್ಧನಡೆಯುವುದು, ಅದರಲ್ಲಿಯೂ ಪ್ರಧಾನಭೂತನಾದ ರಾಜನೊಬ್ಬನೇ ಅಸಂಖ್ಯಾತರಾದ ಶತ್ರುಗಳೊಡನೆ ಯುದ್ಧದಲ್ಲಿ ತೊಡಗುವುದು ಸರಿಯಲ್ಲವೆಂದೇ ನಾನು ಭಾವಿಸುತ್ತೇನೆ. ನನ್ನ ಹಿರಿಯಮಗ ದುರ್ಯೋಧನನು ಬಹಳ ಸುಖದಲ್ಲಿ ಬೆಳೆದವನು. ಐಶ್ವರ್ಯಕ್ಕೂ ಲೋಕಕ್ಕೂ ಸ್ವಾಮಿಯಾಗಿದ್ದಾನೆ. ಒಬ್ಬನೇ ಒಬ್ಬನು ಬಹುಸಂಖ್ಯಾತಯೋಧರೊಡನೆ ಕದನಕ್ಕೆ ಹೋಗಿ ಪರಾಙ್ಮುಖನಾಗಲಿಲ್ಲವೇ?”

“ಮಹಾರಾಜ! ಬಹುಸಂಖ್ಯಾತರಾದ ಯೋಧರೊಡನೆ ನಡೆದ ನಿನ್ನ ಮಗನ ಯುದ್ಧವು ಅತ್ಯಾಶ್ಚರ್ಯಕರವಾಗಿದ್ದಿತು. ವಿವರಿಸಿ ಹೇಳುವೆನು ; ಕೇಳು. ಕಮಲಗಳಿಂದ ಕೂಡಿರುವ ಸರೋವರವನ್ನು ಆನೆಯು ಮಥಿಸಿಬಿಡುವಂತೆ–ನಿನ್ನ ಮಗನು ಪಾಂಡವೀಸೇನೆಯನ್ನು ಅಲ್ಲೋಲ-ಕಲ್ಲೋಲ ಮಾಡಿಬಿಟ್ಟನು. ಅನಂತರ ನಿನ್ನ ಮಗನಿಂದ ಓಡಿಸಲ್ಪಡುತ್ತಿದ್ದ ತಮ್ಮ ಆ ಸೈನ್ಯವನ್ನು ನೋಡಿ ಪಾಂಚಾಲರು ಭೀಮಸೇನಪುರಸ್ಸರರಾಗಿ ದುರ್ಯೋಧನ

ನನ್ನು ಆಕ್ರಮಿಸಿದರು. ಆ ಸಮಯದಲ್ಲಿ ದುರ್ಯೋಧನನು ಭೀಮಸೇನನನ್ನು ಹತ್ತು ಬಾಣಗಳಿಂದಲೂ, ನಕುಲ-ಸಹದೇವರನ್ನು ಮೂರು-ಮೂರು ಬಾಣಗಳಿಂದಲೂ, ಧರ್ಮರಾಜನನ್ನು ಏಳು ಬಾಣಗಳಿಂದಲೂ, ವಿರಾಟ-ದ್ರುಪದರನ್ನು ಆರಾರು ಬಾಣಗಳಿಂದಲೂ, ಶಿಖಂಡಿಯನ್ನು ನೂರು ಬಾಣಗಳಿಂದಲೂ, ಧೃಷ್ಟದ್ಯುಮ್ನನನ್ನು ಇಪ್ಪತ್ತು ಬಾಣಗಳಿಂದಲೂ, ದ್ರೌಪದಿಯ ಐವರು ಮಕ್ಕಳನ್ನು ಮೂರು-ಮೂರು ಬಾಣಗಳಿಂದಲೂ ಪ್ರಹರಿಸಿದನು. ಅನಂತರ ಕ್ರುದ್ಧನಾದ ದುರ್ಯೋಧನನು–ಅಂತಕನು ಸಮಸ್ತಪ್ರಾಣಿಗಳನ್ನೂ ವಿನಾಶಮಾಡುವ ರೀತಿಯಲ್ಲಿ–ಬೇರೆಯ ನೂರಾರು ಯೋಧರನ್ನೂ, ಗಜ ಸೈನ್ಯಗಳಿಂದ ಕೂಡಿದ್ದ ರಥಗಳನ್ನೂ ತನ್ನ ಉಗ್ರವಾದ ಬಾಣಗಳಿಂದ ಕತ್ತರಿಸಿ ಹಾಕಿದನು. ಸುಯೋಧನನು ತಾನು ಪಡೆದುಕೊಂಡಿದ್ದ ಶಿಕ್ಷಣದಿಂದಲೂ ಮತ್ತು ಅಸ್ತ್ರಬಲದಿಂದಲೂ ಧನುಸ್ಸನ್ನು ಮಂಡಲಾಕಾರವನ್ನಾಗಿ ಮಾಡಿ ಶತ್ರುಗಳನ್ನು ಧ್ವಂಸಮಾಡುತ್ತಿದ್ದುದು ಮಾತ್ರವೇ ಕಾಣುತ್ತಿದ್ದಿತು. ಅವನು ಬಾಣಗಳನ್ನು ಅನುಸಂಧಾನಮಾಡುತ್ತಿದ್ದುದಾಗಲೀ, ಅದನ್ನು ದೀರ್ಘವಾಗಿ ಸೆಳೆದು ಬಿಡುತ್ತಿದ್ದುದಾಗಲೀ, ಯಾರಕಣ್ಣಿಗೂ ಗೋಚರವಾಗುತ್ತಲೇ ಇರಲಿಲ್ಲ. (ಬಾಣಪ್ರಯೋಗದಲ್ಲಿ ದುರ್ಯೋಧನನಿಗೆ ಅಂತಹ ಕೈಚಳಕವಿದ್ದಿತು.) ಶತ್ರುಗಳನ್ನು ಅವ್ಯಾಹತವಾಗಿ ಸಂಹಾರಮಾಡುತ್ತಿದ್ದ, ಸುವರ್ಣಮಯವಾದ ಪೃಷ್ಠಭಾಗವಿದ್ದ ದುರ್ಯೋಧನನ ಧನುಸ್ಸು ಯಾವಾಗಲೂ ಮಂಡಲಾಕೃತಿಯಲ್ಲಿಯೇ ಇದ್ದುದನ್ನು ಆ ಯುದ್ಧಸಮಯದಲ್ಲಿ ಎಲ್ಲ ಜನರೂ ನೋಡಿದರು. ಆ ಸಮಯದಲ್ಲಿ ಜಯಗಳಿಸಬೇಕೆಂದು ಬಹಳವಾಗಿ ಪ್ರಯತ್ನಿಸುತ್ತಿದ್ದ ನಿನ್ನ ಮಗನ ಧನುಸ್ಸನ್ನು ಯುಧಿಷ್ಠಿರರಾಜನು ಎರಡು ಭಲ್ಲಗಳಿಂದ ಕತ್ತರಿಸಿದನು. ಧರ್ಮಜನು, ಸುಪ್ರಯುಕ್ತವಾದ ಶ್ರೇಷ್ಠವಾದ ಹತ್ತು ಬಾಣಗಳಿಂದ ದುರ್ಯೋಧನನನ್ನು ಪ್ರಹರಿಸಿದನು. ಆ ಬಾಣಗಳು ದುರ್ಯೋಧನನ ಕವಚವನ್ನು ಸಮೀಪಿಸಿ ಅದನ್ನು ಕತ್ತರಿಸಿ ಭೂಮಿಯೊಳಗೆ ಪ್ರವೇಶಿಸಿದುವು. ಯುಧಿಷ್ಠಿರನ ಆ ಸಾಹಸಕಾರ್ಯವನ್ನು ನೋಡಿ ಸಂತೋಷಭರಿತರಾದ ಪಾರ್ಥರು–ಹಿಂದೆ ವೃತ್ರನ ವಧೆಯಾದನಂತರ ದೇವೇಂದ್ರನನ್ನು ದೇವತೆಗಳೂ ಮತ್ತು ಮಹರ್ಷಿಗಳೂ ಆನಂದತುಂದಿಲರಾಗಿ ಸುತ್ತುವರಿದಂತೆ–ಯುಧಿಷ್ಠಿರನನ್ನು ಸುತ್ತುವರಿದರು. ಅನಂತರ ಪ್ರತಾಪ

ವಂತನಾದ ನಿನ್ನ ಮಗನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ನಿಲ್ಲು-ನಿಲ್ಲೆಂದು ಹೇಳುತ್ತಾ ಯುಧಿಷ್ಠಿರನನ್ನು ಆಕ್ರಮಿಸಿದನು. ಆ ಮಹಾ ಸಂಗ್ರಾಮದ ಸಮಯದಲ್ಲಿ ನಿನ್ನ ಮಗನು ಪುನಃ ಯುದ್ಧಕ್ಕೆ ಬರುತ್ತಿರುವುದನ್ನು ಕಂಡ, ವಿಜಯೇಚ್ಛುಗಳಾದ ಪಾಂಚಾಲರು ಒಟ್ಟಾಗಿ ಸೇರಿ ಅವನನ್ನು ಎದುರಿಸಲು ಮುಂದೆ ಹೋದರು. ಆ ಸಮಯದಲ್ಲಿ ದ್ರೋಣರು ಯುಧಿಷ್ಠಿರನನ್ನು ಸೆರೆಹಿಡಿಯಬೇಕೆಂಬ ಅಭಿಲಾಷೆಯಿಂದ–ಚಂಡಮಾರುತ ದಿಂದ ಹಾರಿಸಲ್ಪಟ್ಟು ಮಳೆಗರೆಯುವ ಮೇಘಗಳನ್ನು ಪರ್ವತವು ತಡೆದು ನಿಲ್ಲಿಸುವಂತೆ–ಪಾಂಚಾಲಸೇನಾಸಮೂಹವನ್ನು ತಡೆದು ನಿಲ್ಲಿಸಿದರು. ಮಹಾ ರಾಜ! ಆ ಸಮಯದಲ್ಲಿ ನಿನ್ನ ಕಡೆಯ ಯೋಧರಿಗೂ ಮತ್ತು ಪಾಂಡವರ ಕಡೆಯ ಯೋಧರಿಗೂ ರೋಮಾಂಚಕರವಾದ ಮಹಾಸಂಗ್ರಾಮವು ನಡೆ ಯಿತು. ಯುದ್ಧದಲ್ಲಿ ತೊಡಗಿದ್ದ ಎರಡೂ ಪಕ್ಷಗಳ ಯೋಧರ ಸಂಹಾರವು ಪ್ರಳಯಕಾಲದ ರುದ್ರನ ಸಂಹಾರಲೀಲೆಯಂತೆ ಕಾಣುತ್ತಿದ್ದಿತು.

ಆಗ ಧನಂಜಯನು ಯಾವ ದಿಕ್ಕಿನಲ್ಲಿದ್ದನೋ ಆ ದಿಕ್ಕಿನಲ್ಲಿ ಘೋರ ವಾದ ಶಬ್ದವಾಯಿತು. ಆ ಶಬ್ದವು ಇತರ ಎಲ್ಲ ಶಬ್ದಗಳನ್ನೂ ಅತಿಕ್ರಮಿಸಿದ್ದಿತು ಮತ್ತು ರೋಮಾಂಚಕರವಾಗಿದ್ದಿತು. ಕೌರವಸೈನ್ಯದ ಮಧ್ಯದಲ್ಲಿ ನಿನ್ನ ಕಡೆಯ ಧನುಷ್ಮಂತರ, ಅರ್ಜುನನ ಮತ್ತು ಸಾತ್ಯಕಿಯ ಘೋರಗರ್ಜನೆಗಳು ಕೇಳಿಬರುತ್ತಿದ್ದು, ವ್ಯೂಹದ ದ್ವಾರದಲ್ಲಿ ಶತ್ರುಗಳೊಡನೆ ಯುದ್ಧಮಾಡುತ್ತಿದ್ದ ದ್ರೋಣರ ಗರ್ಜನೆಯೂ ಕೇಳಿಸುತ್ತಿದ್ದಿತು. ಈ ರೀತಿಯಲ್ಲಿ ಅರ್ಜುನ, ದ್ರೋಣರು ಮತ್ತು ಮಹಾರಥನಾದ ಸಾತ್ಯಕಿ–ಇವರುಗಳು ಕ್ರುದ್ಧರಾಗಿರಲಾಗಿ ಪೃಥಿವಿಯಲ್ಲಿ ವಿಪರೀತವಾದ ಜನಕ್ಷಯವಾಯಿತು."

೧೨೪ನೆಯ ಅಧ್ಯಾಯವು ಮುಗಿಯಿತು.

೧೨೫ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದ್ರೋಣರು, ಬೃಹತ್ಕ್ಷತ್ರ, ಧೃಷ್ಟಕೇತು, ಜರಾಸಂಧನ ಮಗನಾದ ಸಹದೇವ, ಧೃಷ್ಟದ್ಯುಮ್ನನ ಮಗನಾದ ಕ್ಷತ್ರಧರ್ಮ–ಇವರನ್ನು ಸಂಹರಿಸಿದುದು : ಚೇಕಿತಾನನ ಪರಾಜಯ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಅಪರಾಹ್ಣಸಮಯದಲ್ಲಿ ಸೋಮಕರೊಡನೆ

ದ್ರೋಣರು ಭಯಂಕರವಾದ ಯುದ್ಧದಲ್ಲಿ ತೊಡಗಿದರು. ಮೇಘದ ಗರ್ಜನೆಗೆ ಸಮಾನವಾದ ಸಿಂಹನಾದಗಳು ಎರಡುಕಡೆಗಳಿಂದಲೂ ಕೇಳಿಬರುತ್ತಿದ್ದುವು. ನರಶ್ರೇಷ್ಠರಾದ ದ್ರೋಣರು ಕೆಂಪುಕುದುರೆಗಳನ್ನು ಕಟ್ಟಿದ್ದ ರಥದಲ್ಲಿ ಕುಳಿತು, ಏಕಾಗ್ರಚಿತ್ತರಾಗಿ ಮಧ್ಯಮವೇಗವನ್ನಾಶ್ರಯಿಸಿ ಪಾಂಡವರನ್ನು ಆಕ್ರಮಿಸಿದರು. ನಿನಗೆ ಪ್ರಿಯವನ್ನು ಮಾಡುವುದರಲ್ಲಿಯೇ ಆಸಕ್ತರಾಗಿದ್ದ ಮಹಾಧನುಷ್ಮಂತರಾದ, ಮಹಾಬಲಿಷ್ಠರಾದ, ಕಲಶೋದ್ಭವರಾದ, ಪ್ರತಾಪವಂತರಾದ ದ್ರೋಣರು ಚಿತ್ರಿತವಾದ ಮೂಲಭಾಗವಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣಗಳಿಂದ ಶ್ರೇಷ್ಠರಾದ ಯೋಧರನ್ನು ಆರಿಸಿಕೊಂಡು ಸಂಹರಿಸುತ್ತಿರುವರೋ ಎಂಬಂತೆ–ರಣಾಂಗಣದ ಸುತ್ತಲೂ ತಿರುಗುತ್ತಾ ಧನುರ್ಬಾಣಗಳಿಂದ ಕ್ರೀಡೆಯಾಡುತ್ತಿದ್ದರು. ಆ ಸಮಯದಲ್ಲಿ ಕೇಕಯಮಹಾರಥರಾದ, ಐವರು ಕೇಕಯರಾಜಕುಮಾರರಲ್ಲಿ ಹಿರಿಯನಾದ, ಸಮರಕರ್ಕಶನಾದ (ಕ್ರೌರ್ಯದಿಂದ ಯುದ್ಧಮಾಡುವ) ಬೃಹತ್ಕ್ಷತ್ರನು ದ್ರೋಣರನ್ನು ಎದುರಿಸಿದನು. ಗಂಧಮಾದನಪರ್ವತದ ಮೇಲೆ ಮಳೆಯನ್ನು ಸುರಿಸುವ ಮಹಾಮೇಘದಂತೆ–ತೀಕ್ಷ್ಣವಾದ ಬಾಣಗಳನ್ನು ಆಚಾರ್ಯರ ಮೇಲೆ ಸುರಿಸುತ್ತಾ ಬೃಹತ್ಕ್ಷತ್ರನು ದ್ರೋಣರನ್ನು ಬಹಳವಾಗಿ ಗಾಯಗೊಳಿಸಿದನು. ಅದರಿಂದ ಪರಮಕ್ರುದ್ಧರಾದ ದ್ರೋಣರು ಸುವರ್ಣಮಯವಾದ ಮೂಲಭಾಗವಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಹದಿನೈದು ಬಾಣಗಳನ್ನು ಬೃಹತ್ಕ್ಷತ್ರನ ಮೇಲೆ ಪ್ರಯೋಗಿಸಿದರು. ದ್ರೋಣರಿಂದ ಬಿಡಲ್ಪಟ್ಟ ವಿಷಸರ್ಪಸದೃಶವಾಗಿದ್ದ ಬಾಣಗಳಲ್ಲಿ ಒಂದೊಂದನ್ನೂ ಪ್ರಹೃಷ್ಟನಂತಿದ್ದ ಬೃಹತ್ಕ್ಷತ್ರನು ಐದೈದು ಬಾಣಗಳಿಂದ ಕತ್ತರಿಸಿದನು. ದ್ವಿಜಶ್ರೇಷ್ಠರಾದ ದ್ರೋಣರು ಕೇಕಯನ ಹಸ್ತಲಾಘವವನ್ನು ಕಂಡು ಗಹ-ಗಹಿಸಿ ನಗುತ್ತಾ ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ಎಂಟು ಬಾಣಗಳನ್ನು ಪುನಃ ಅವನ ಮೇಲೆ ಪ್ರಯೋಗಿಸಿದರು. ದ್ರೋಣರ ಧನುಸ್ಸಿನಿಂದ ಚ್ಯುತವಾಗಿ ತನ್ನ ಮೇಲೆ ಬೀಳಲಿದ್ದ ಆ ಬಾಣಗಳನ್ನು ನೋಡಿ ಕೇಕಯನು ಅಷ್ಟೇ ಸಂಖ್ಯೆಯ ನಿಶಿತವಾದ ಬಾಣಗಳಿಂದ ಅವುಗಳನ್ನು ಕತ್ತರಿಸಿದನು. ಬೃಹತ್ಕ್ಷತ್ರನ ಸುದುಷ್ಕರವಾದ ಆ ಸಾಹಸಕರ್ಮವನ್ನು ನೋಡಿ ನಿನ್ನ ಕಡೆಯ ಸೈನಿಕರಿಗೆ ವಿಸ್ಮಯವುಂಟಾಯಿತು. ಅನಂತರ ದ್ರೋಣರು ತಮ್ಮ ಹೆಚ್ಚಳ

ವನ್ನು ತೋರಿಸಿಕೊಳ್ಳುತ್ತಾ, ಸುದುರ್ಜಯವಾದ ದಿವ್ಯವಾದ ಬ್ರಹ್ಮಾಸ್ತ್ರವನ್ನು ಪ್ರಕಟಿಸಿದರು. ಕೇಕಯಮಹಾರಥನು–ದ್ರೋಣರಿಂದ ಬ್ರಹ್ಮಾಸ್ತ್ರವು ಮುಕ್ತವಾದುದನ್ನು ನೋಡಿ ತಾನೂ ಬ್ರಹ್ಮಾಸ್ತ್ರವನ್ನೇ ಪ್ರಕಟಿಸುತ್ತಾ ಅವರು ಬಿಟ್ಟ ಬ್ರಹ್ಮಾಸ್ತ್ರವನ್ನು ಉಪಶಮನಗೊಳಿಸಿದನು.

ದ್ರೋಣರು ಪ್ರದರ್ಶಿಸಿದ ಬ್ರಹ್ಮಾಸ್ತ್ರವನ್ನು ಉಪಶಮನಗೊಳಿಸಿದ ನಂತರ ಬೃಹತ್ಕ್ಷತ್ರನು ಸುವರ್ಣಮಯವಾದ ಮೂಲಭಾಗಗಳಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಅರುವತ್ತು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಮನುಷ್ಯಶ್ರೇಷ್ಠರಾದ ದ್ರೋಣರೂ ಕೇಕಯನನ್ನು ನಾರಾಚದಿಂದ ಪ್ರಹರಿಸಿದರು. ಈ ನಾರಾಚವು ಅವನ ಕವಚವನ್ನು ಭೇದಿಸಿಕೊಂಡು ಭೂಮಿಯನ್ನು ಸೇರಿತು. ಪೊರೆಕಳಚಿದ ಕೃಷ್ಣಸರ್ಪವು ಯಾವ ರೀತಿಯಲ್ಲಿ ಎಷ್ಟು ಶೀಘ್ರವಾಗಿ ಬಿಲವನ್ನು ಸೇರಿಕೊಳ್ಳುವುದೋ–ಅದೇ ರೀತಿಯಲ್ಲಿ ದ್ರೋಣರು ಬಿಟ್ಟ ಬಾಣವು ಕೇಕಯನನ್ನು ಭೇದಿಸಿಕೊಂಡು ಭೂಮಿಯನ್ನು ಹೊಕ್ಕಿತು. ದ್ರೋಣರ ಬಾಣಗಳಿಂದ ಗಾಢವಾಗಿ ಗಾಯಗೊಂಡ ಕೇಕಯನು ಮಹಾಕೋಪದಿಂದ ಆವಿಷ್ಟನಾಗಿ ತನ್ನೆರಡು ಕಣ್ಣುಗಳನ್ನೂ ಅಗಲವಾಗಿ ತೆರೆದುಕೊಂಡು ದುರುಗುಟ್ಟಿನೋಡುತ್ತಾ, ಸುವರ್ಣಮಯವಾದ ಮೂಲಭಾಗವಿದ್ದ, ಮಸೆಗಲ್ಲಿನಿಂದ ಹರಿತವಾಗಿ ಮಾಡಲ್ಪಟ್ಟಿದ್ದ ಎಪ್ಪತ್ತು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಪುನಃ ಒಂದು ಬಾಣದಿಂದ ದ್ರೋಣರ ಸಾರಥಿಯ ಮರ್ಮಸ್ಥಳದಲ್ಲಿ ಪ್ರಹರಿಸಿದನು. ಬೃಹತ್ಕ್ಷತ್ರನು ಬಿಟ್ಟ ಬಾಣಗಳಿಂದ ಬಹಳವಾಗಿ ಗಾಯಗೊಂಡ ದ್ರೋಣರು ಬಹಳ ತೀಕ್ಷ್ಣವಾದ ಬಾಣಗಳನ್ನು ಕೇಕಯರಾಜನ ರಥದ ಕಡೆಗೆ ಪ್ರಯೋಗಿಸಿದರು. ದ್ರೋಣರು ಮಹಾರಥನಾದ ಬೃಹತ್ಕ್ಷತ್ರನಿಗೆ ಬಹಳ ವ್ಯಾಕುಲವನ್ನುಂಟುಮಾಡಿ ಅನಂತರ ಅವನ ನಾಲ್ಕು ಕುದುರೆಗಳನ್ನೂ ನಾಲ್ಕು ಬಾಣಗಳಿಂದ ಸಂಹರಿಸಿದರು. ಒಂದು ಬಾಣದಿಂದ ಸೂತನನ್ನು ಸಂಹರಿಸಿ ಅವನು ಕುಳಿತಿದ್ದ ಸ್ಥಳದಿಂದ ಕೆಳಕ್ಕೆ ಬೀಳಿಸಿದರು. ಮತ್ತೆರಡು ಬಾಣಗಳಿಂದ ಅವನ ಧ್ವಜವನ್ನೂ ಮತ್ತು ಶ್ವೇತಛತ್ರವನ್ನೂ ಕತ್ತರಿಸಿ ಕೆಳಕ್ಕೆ ಬೀಳಿಸಿದರು. ಅನಂತರ ದ್ವಿಜಶ್ರೇಷ್ಠರಾದ ದ್ರೋಣರು ಸುಪ್ರಯುಕ್ತವಾದ ನಾರಾಚದಿಂದ ಬೃಹತ್ಕ್ಷತ್ರನ ವಕ್ಷಃಸ್ಥಳದಲ್ಲಿ ಪ್ರಹರಿಸಿದರು. ಒಡನೆಯೇ ಅವನು ವಿದೀರ್ಣ

ಹೃದಯನಾಗಿ ಕೆಳಗುರುಳಿದನು. ಕೇಕಯರ ಮಹಾರಥನಾದ ಬೃಹತ್ಕ್ಷತ್ರನು ಹತನಾಗಲಾಗಿ, ಶಿಶುಪಾಲನ ಮಗನಾದ ಧೃಷ್ಟಕೇತುವು ಸಾರಥಿಯನ್ನು ಕುರಿತು ಹೇಳಿದನು :

"ಸೂತನೇ! ಕೇಕಯರ ಮತ್ತು ಪಾಂಚಾಲರ ನಾಲ್ಕು ವಿಧವಾದ ಸೈನಿಕರನ್ನೂ ಸಂಹಾರಮಾಡುತ್ತಾ ಕವಚಧಾರಿಗಳಾದ ದ್ರೋಣರು ಎಲ್ಲಿರುವರೋ ಅಲ್ಲಿಗೇ ಕುದುರೆಗಳನ್ನು ದೌಡಾಯಿಸು (ರಥವನ್ನು ನಡೆಸು)."

ಮಹಾರಾಜ! ಧೃಷ್ಟಕೇತುವಿನ ಆ ಮಾತನ್ನು ಕೇಳಿ ಸಾರಥಿಯು ರಥಿಗಳಲ್ಲಿ ಶ್ರೇಷ್ಠನಾದ ಧೃಷ್ಟಕೇತುವನ್ನು ಶೀಘ್ರವಾಗಿ ಹೋಗುವ ಕಾಂಬೋಜ ಜಾತಿಯ ಕುದುರೆಗಳ ಮೂಲಕವಾಗಿ ದ್ರೋಣರಿದ್ದಲ್ಲಿಗೆ ಒಯ್ದನು. ಚೇದಿರಾಜನಾದ ಮಹಾಬಲಿಷ್ಠನಾದ ಧೃಷ್ಟಕೇತುವು–ತನ್ನ ನಾಶಕ್ಕಾಗಿ ಮಿಡತೆಯು ಅಗ್ನಿಯ ಬಳಿಗೆ ತ್ವರೆಯಿಂದ ಹೋಗುವಂತೆ–ದ್ರೋಣರ ಸಮೀಪಕ್ಕೆ ಹೋದನು. ಅನಂತರ ಧೃಷ್ಟಕೇತುವು ಅಶ್ವ-ರಥ-ಧ್ವಜಸಹಿತರಾದ ದ್ರೋಣರನ್ನು ಅರುವತ್ತು ಬಾಣಗಳಿಂದ ಪ್ರಹರಿಸಿದನು. ಮಲಗಿರುವ ವ್ಯಾಘ್ರವನ್ನು ಚುಚ್ಚುತ್ತಿರುವನೋ ಎಂಬಂತೆ–ಧೃಷ್ಟಕೇತುವು ಪುನಃ ತೀಕ್ಷ್ಣವಾದ ಬಾಣಗಳಿಂದ ದ್ರೋಣರನ್ನು ಬಲವಾಗಿ ಪ್ರಹರಿಸಿದನು. ದ್ರೋಣರು ವಿಜಯಕ್ಕಾಗಿ ಪ್ರಯತ್ನಿಸುತ್ತಿದ್ದ, ಬಲಿಷ್ಠನಾದ ಧೃಷ್ಟಕೇತುವಿನ ಧನುಸ್ಸಿನ ಮಧ್ಯಭಾಗವನ್ನು ನಿಶಿತವಾದ, ರಣಹದ್ದಿನ ರೆಕ್ಕೆಯನ್ನು ಹೊಂದಿದ್ದ ಕ್ಷುರಪ್ರದಿಂದ ಕತ್ತರಿಸಿದರು. ಒಡನೆಯೇ ಮಹಾರಥನಾದ ಶೈಶುಪಾಲಿಯು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ರಣಹದ್ದಿನ ಮತ್ತು ನವಿಲಿನ ರೆಕ್ಕೆಗಳಿಂದ ಕೂಡಿದ್ದ ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ದ್ರೋಣರೂ ನಾಲ್ಕು ಬಾಣಗಳಿಂದ ಧೃಷ್ಟಕೇತುವಿನ ರಥದ ನಾಲ್ಕು ಕುದುರೆಗಳನ್ನು ಸಂಹರಿಸಿ, ಮತ್ತೊಂದು ಬಾಣದಿಂದ ನಗು-ನಗುತ್ತಲೇ ಸಾರಥಿಯ ತಲೆಯನ್ನೂ ಕತ್ತರಿಸಿ ಶರೀರದಿಂದ ಬೇರ್ಪಡಿಸಿದರು. ಪುನಃ ಧೃಷ್ಟಕೇತುವನ್ನು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದರು. ಚೈದ್ಯನು ಒಡನೆಯೇ ಗದೆಯನ್ನು ತೆಗೆದುಕೊಂಡು ರಥದಿಂದ ಕೆಳಕ್ಕೆ ನೆಗೆದು ಕ್ರುದ್ಧವಾದ ಹೆಣ್ಣುಹಾವಿನಂತಿದ್ದ ಆ ಗದೆಯನ್ನು ದ್ರೋಣರ ಮೇಲೆ ರಭಸ

ದಿಂದ ಎಸೆದನು. ಕಾಲರಾತ್ರಿಯಂತೆ ಮೇಲೆದ್ದು ತಮ್ಮ ಮೇಲೆ ಬೀಳಲು ಬರುತ್ತಿರುವ, ಲೋಹಮಯವಾದ, ಬಹಳ ಭಾರವಾದ, ಸುವರ್ಣದಿಂದ ವಿಭೂಷಿತವಾಗಿದ್ದ ಗದೆಯನ್ನು ನೋಡಿ ಭಾರದ್ವಾಜರು ನಿಶಿತವಾದ ಅನೇಕ ಸಾವಿರ ಬಾಣಗಳಿಂದ ಆ ಗದೆಯನ್ನು ಛಿನ್ನ-ಭಿನ್ನವಾಗಿ ಮಾಡಿದರು. ದ್ರೋಣರ ಸಾವಿರಾರು ಬಾಣಗಳ ಪ್ರಹಾರದಿಂದ ಭಿನ್ನವಾದ ಆ ಗದೆಯು ಭೂಮಿಯ ಮೇಲುಭಾಗವನ್ನು ತನ್ನ ಘೋರವಾದ ಧ್ವನಿಯಿಂದ ಪ್ರತಿಧ್ವನಿಸುತ್ತಾ ಕೆಳಕ್ಕೆ ಬಿದ್ದಿತು. ದ್ರೋಣರ ಅಸಂಖ್ಯಾತಬಾಣಗಳಿಂದ ಗದೆಯು ನಾಶವಾದುದನ್ನು ಕಂಡು ಕೋಪಗೊಂಡ ಧೃಷ್ಟಕೇತುವು ದ್ರೋಣರನ್ನು ಲಕ್ಷಿಸಿ ತೋಮರವನ್ನೂ-ಸುವರ್ಣವಿಭೂಷಿತವಾಗಿದ್ದ ಶಕ್ತ್ಯಾಯುಧವನ್ನೂ ಪ್ರಯೋಗಿಸಿದನು. ದ್ರೋಣರು ಐದು ಬಾಣಗಳಿಂದ ತೋಮರವನ್ನೂ, ಮತ್ತೈದು ಬಾಣಗಳಿಂದ ಶಕ್ತ್ಯಾಯುಧವನ್ನೂ ಕತ್ತರಿಸಿದರು. ಭಿನ್ನವಾದ ಆ ತೋಮರ-ಶಕ್ತ್ಯಾಯುಧಗಳು ಗರುಡನಿಂದ ಛಿನ್ನ-ಭಿನ್ನವಾದ ಸರ್ಪಗಳೋಪಾದಿಯಲ್ಲಿ ಭೂಮಿಯ ಮೇಲೆ ಬಿದ್ದುವು. ತನ್ನನ್ನು ವಧಿಸಲು ಇಚ್ಛಿಸಿದ್ದ ಧೃಷ್ಟಕೇತುವನ್ನು ವಧಿಸುವ ಸಲುವಾಗಿ ಪ್ರತಾಪವಂತರಾದ ಭಾರದ್ವಾಜರು ತೀಕ್ಷ್ಣವಾದ ಬಾಣವೊಂದನ್ನು ಧೃಷ್ಟಕೇತುವಿನ ಮೇಲೆ ಪ್ರಯೋಗಿಸಿದರು. ಘೋರವಾದ ಆ ಬಾಣವು ಅಮಿತೌಜಸ್ಕನಾದ ಧೃಷ್ಟಕೇತುವಿನ ಕವಚವನ್ನು ಭೇದಿಸಿ ಅನಂತರ ಹೃದಯವನ್ನೂ ಹೊಕ್ಕು ಅಲ್ಲಿಂದಲೂ ಹೊರಬಂದು–ಹಂಸವು ಪದ್ಮಸರೋವರವನ್ನು ಸೇರುವಂತೆ– ಭೂಮಿಯನ್ನು ಸೇರಿತು. ಯಾವ ರೀತಿಯಲ್ಲಿ ಹಸಿದಿರುವ ಹಂಗನಹಕ್ಕಿಯು ಪತಂಗವನ್ನು ನುಂಗುವುದೋ–ಅದೇ ರೀತಿಯಲ್ಲಿ ಶೂರರಾದ ದ್ರೋಣರು ಧೃಷ್ಟಕೇತುವನ್ನು ಆ ಮಹಾಯುದ್ಧದಲ್ಲಿ ನುಂಗಿಬಿಟ್ಟರು. ಚೇದಿರಾಜನು ಮರಣಹೊಂದಲಾಗಿ ಶ್ರೇಷ್ಠವಾದ ಅಸ್ತ್ರಗಳನ್ನು ತಿಳಿದುಕೊಂಡಿದ್ದ ಅವನ ಮಗನು ಕೋಪಾವಿಷ್ಟನಾಗಿ ತನ್ನ ತಂದೆಯಿದ್ದ ಸ್ಥಳದಲ್ಲಿಯೇ ನಿಂತು ದ್ರೋಣರನ್ನೆದುರಿಸಿದನು. ಮಹಾರಣ್ಯದಲ್ಲಿರುವ ಮಹಾವ್ಯಾಘ್ರವು ಜಿಂಕೆಯ ಮರಿಯನ್ನು ನಿರ್ಲಕ್ಷ್ಯದಿಂದ ಸಂಹರಿಸುವಂತೆ–ಬಲಿಷ್ಠರಾದ ದ್ರೋಣರು ನಸುನಗುತ್ತಲೇ ಚೇದಿರಾಜನ ಮಗನನ್ನು ಯಮನ ಮನೆಗೆ ಕಳುಹಿಸಿಬಿಟ್ಟರು. ಪಾಂಡವಮಹಾಯೋಧರು ಈ ರೀತಿಯಾಗಿ ಒಬ್ಬೊಬ್ಬರಾಗಿ ಕ್ಷಯಿಸು

ತ್ತಿರಲಾಗಿ, ಜರಾಸಂಧನ ಮಗನಾದ ವೀರನಾದ ಸಹದೇವನು ತಾನಾಗಿಯೇ ದ್ರೋಣರನ್ನು ಆಕ್ರಮಿಸಿದನು. ಮಹಾಬಾಹುವಾದ ಸಹದೇವನು–ಮೇಘವು ಸೂರ್ಯನನ್ನು ಮುಚ್ಚಿಬಿಡುವಂತೆ–ದ್ರೋಣರನ್ನು ಬಾಣಗಳ ವೃಷ್ಟಿಯಿಂದ ಅದೃಶ್ಯರನ್ನಾಗಿ ಮಾಡಿದನು. ಕ್ಷತ್ರಿಯಮರ್ದನರಾದ ದ್ರೋಣರು ಸಹ ದೇವನ ಆ ಹಸ್ತಲಾಘವವನ್ನು ಕಂಡು ನೂರಾರು ಸಾವಿರಾರು ಬಾಣಗಳನ್ನು ಬಹಳ ಶೀಘ್ರವಾಗಿ ಸಹದೇವನ ಮೇಲೆ ಸುರಿಸಿದರು. ರಥಸ್ಥನಾಗಿದ್ದ, ರಥಿ ಗಳಲ್ಲಿ ಶ್ರೇಷ್ಠನಾಗಿದ್ದ ಜಾರಾಸಂಧಿಯನ್ನು ದ್ರೋಣರು ಬಾಣಗಳಿಂದ ಮುಚ್ಚಿ ಅನಂತರದಲ್ಲಿ ಎಲ್ಲ ಧನುಷ್ಮಂತರೂ ನೋಡುತ್ತಿರುವಂತೆಯೇ ಅವನನ್ನು ನಿಶಿತವಾದ ಬಾಣಗಳಿಂದ ಸಂಹರಿಸಿದರು. ಕಾಲವು ಪ್ರಾಪ್ತವಾಗಿ ಅಂತಕನು ಯಾವ ರೀತಿಯಲ್ಲಿ ಸರ್ವಪ್ರಾಣಿಗಳನ್ನೂ ಸಂಹರಿಸುತ್ತಾನೆಯೋ–ಅದೇ ರೀತಿ ಯಲ್ಲಿ ಯಮಸದೃಶರಾದ ದ್ರೋಣರು ತಮ್ಮ ಸಮೀಪಕ್ಕೆ ಬಂದ ಯೋಧ ರೆಲ್ಲರನ್ನೂ ಅಲ್ಲಿಯೇ ಸಂಹರಿಸಿಬಿಡುತ್ತಿದ್ದರು. ಅನಂತರ ದ್ರೋಣರು ಯುದ್ಧದಲ್ಲಿ ತಮ್ಮ ಹೆಸರನ್ನು ಎಲ್ಲರಿಗೂ ಕೇಳಿಸುವಂತೆ ಉದ್ಘೋಷಿಸುತ್ತಾ ಅನೇಕಸಾವಿರ ಬಾಣಗಳಿಂದ ಪಾಂಡವರ ಸೈನ್ಯವನ್ನು ಮುಚ್ಚಿಬಿಟ್ಟರು. ದ್ರೋಣರ ನಾಮಾಂಕಿತವಾದ, ದ್ರೋಣರಿಂದ ಬಿಡಲ್ಪಟ್ಟ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣಗಳು ಪಾಂಡವರ ಕಡೆಯ ಆನೆಗಳನ್ನೂ, ಕುದುರೆಗಳನ್ನೂ, ಪದಾತಿಗಳನ್ನೂ ಸಾವಿರಾರು ಸಂಖ್ಯೆಯಲ್ಲಿ ಸಂಹರಿಸಿದುವು. ಇಂದ್ರನಿಂದ ಮಹಾಸುರರು ಪೀಡಿತರಾದಂತೆ–ದ್ರೋಣರಿಂದ ಪೀಡಿತರಾಗುತ್ತಿದ್ದ ಪಾಂಚಾಲಯೋಧರು–ಶೀತವ್ಯಾಧಿಯಿಂದ ಪೀಡಿತವಾದ ಹಸುಗಳಂತೆ–ಗಡ-ಗಡನೆ ನಡುಗಿದರು. ದ್ರೋಣರಿಂದ ಅಸಂಖ್ಯಾತವಾದ ಸೈನ್ಯವು ಮಥಿಸಲ್ಪಡುತ್ತಿರಲಾಗಿ ಪಾಂಡವರ ಸೇನೆಯಲ್ಲಿ ಘೋರವಾದ ಆರ್ತ ನಾದವುಂಟಾಯಿತು. ಸೂರ್ಯನ ಬಿಸಿಲಿನ ಝಳದಿಂದ ಪರಿತಪಿಸುತ್ತಿದ್ದ, ದ್ರೋಣರ ಬಾಣಗಳಿಂದ ಮಥಿಸಲ್ಪಡುತ್ತಿದ್ದ ಪಾಂಚಾಲರು ಆ ಸಮಯದಲ್ಲಿ ಬಹಳವಾಗಿ ಭಯಗೊಂಡು ವ್ಯಾಕುಲಿತರಾದರು. ಭಾರದ್ವಾಜರ ಶರವರ್ಷ ದಿಂದ ವಿಮೋಹಿತರಾದ ಪಾಂಚಾಲಮಹಾರಥರು ಸಂಧಿವಾತರೋಗಿ ಗಳಂತಾದರು (ಭಯದಿಂದಾಗಿ ಅವರ ತೊಡೆಗಳು ಸೆಟೆದು ನಿಂತಿದ್ದುವು). ಆ ಸಮಯದಲ್ಲಿ ಚೇದಿಗಳು, ಸೃಂಜಯರು, ಕಾಶಿ-ಕೋಸಲರು ದ್ರೋಣ

ರೊಡನೆ ಯುದ್ಧಮಾಡುವ ಇಚ್ಛೆಯಿಂದ ಪರಮಸಂತುಷ್ಟರಾಗಿ ಅವರನ್ನು ಆಕ್ರಮಿಸಿದರು. ಚೇದಿ-ಪಾಂಚಾಲ-ಸೃಂಜಯರು–'ದ್ರೋಣರನ್ನು ಕೊಲ್ಲಿರಿ! ದ್ರೋಣರನ್ನು ಕೊಲ್ಲಿರಿ!–ಎಂದು ಪರಸ್ಪರವಾಗಿ ಕೂಗಿಕೊಳ್ಳುತ್ತಾ ದ್ರೋಣರ ಮೇಲೆ ದಾಳಿಮಾಡಿದರು. ದ್ರೋಣರನ್ನು ಯಮನ ಮನೆಗೆ ಕಳುಹಿಸ ಬೇಕೆಂದು ಇಚ್ಛಿಸಿದ್ದ ಪುರುಷವ್ಯಾಘ್ರರು ಮಹಾದ್ಯುತಿಮಂತರಾದ ದ್ರೋಣ ರನ್ನು ಸಂಹರಿಸಲು ತಮ್ಮ ಎಲ್ಲ ಶಕ್ತಿಗಳನ್ನೂ ಕ್ರೋಡೀಕರಿಸಿ ಪ್ರಯತ್ನಿಸುತ್ತಿ ದ್ದರು. ಹಾಗೆ ಪ್ರಯತ್ನಿಸುತ್ತಿದ್ದ ಚೇದಿ-ಪಾಂಚಾಲ-ಸೃಂಜಯವೀರರನ್ನು ಅದರಲ್ಲಿಯೂ ಮುಖ್ಯವಾಗಿ ಚೇದಿಮುಖ್ಯರನ್ನು ದ್ರೋಣರೇ ಬಾಣಗಳಿಂದ ಯಮನ ಮನೆಗೆ ಕಳುಹಿಸುತ್ತಿದ್ದರು. ಚೇದಿಮುಖ್ಯರೆಲ್ಲರೂ ಸಂಪೂರ್ಣವಾಗಿ ಕ್ಷಯಿಸಿಹೋಗಲಾಗಿ, ದ್ರೋಣರ ಬಾಣಗಳಿಂದ ಸತತವಾಗಿ ಪೀಡಿತ ರಾಗುತ್ತಿದ್ದ ಪಾಂಚಾಲರು ಭಯದಿಂದ ನಡುಗಿದರು. ಸರ್ವವಿನಾಶಕರವಾದ ದ್ರೋಣರ ಆ ಕರ್ಮಗಳನ್ನು ನೋಡಿ ಪಾಂಚಾಲಯೋಧರು ಭೀಮಸೇನ ನನ್ನೂ–ಧೃಷ್ಟದ್ಯುಮ್ನನನ್ನೂ ರಕ್ಷಣಾರ್ಥವಾಗಿ ಕೂಗಿಕೊಂಡರು.

"ಈ ಬ್ರಾಹ್ಮಣಶ್ರೇಷ್ಠರು ನಿಶ್ಚಯವಾಗಿಯೂ ದುಷ್ಕರವಾದ ಮಹಾ ತಪಸ್ಸನ್ನೇ ಮಾಡಿದ್ದಾರೆ. ಅದರಿಂದಲೇ ಇವರು ಯುದ್ಧದಲ್ಲಿ ಸಂಕ್ರುದ್ಧರಾಗಿ ಕ್ಷತ್ರಿಯರ್ಷಭರನ್ನು ದಹಿಸುತ್ತಿದ್ದಾರೆ.

**ಧರ್ಮೋ ಯುದ್ಧಂ ಕ್ಷತ್ರಿಯಸ್ಯ ಬ್ರಾಹ್ಮಣಸ್ಯ ಪರಂ ತಪಃ ।**
**ತಪಸ್ವೀ ಕೃತವಿದ್ಯಶ್ಚ ಪ್ರೇಕ್ಷಿತೇನಾಪಿ ನಿರ್ದಹೇತ್ ॥೬೧॥**

ಯುದ್ಧಮಾಡುವುದು ಕ್ಷತ್ರಿಯನ ಧರ್ಮವಾಗಿದೆ. ತಪಸ್ಸುಮಾಡುವುದು ಬ್ರಾಹ್ಮಣನ ಧರ್ಮವಾಗಿದೆ. ಇವರು ಬ್ರಾಹ್ಮಣಧರ್ಮದಂತೆ ತಪಸ್ವಿಗಳೂ ಆಗಿದ್ದಾರೆ. ಕ್ಷತ್ರಿಯರ ವಿದ್ಯೆಯನ್ನೂ ಸಂಪೂರ್ಣವಾಗಿ ಅಧ್ಯಯನ ಮಾಡಿದ್ದಾರೆ. ಆದುದರಿಂದಲೇ ಇವರು ಕೇವಲ ದೃಷ್ಟಿಪಾತದಿಂದಲೇ ಶತ್ರು ಗಳನ್ನು ದಹಿಸಬಲ್ಲವರಾಗಿದ್ದಾರೆ.

ಈ ಯುದ್ಧದಲ್ಲಿ ಅನೇಕ ಕ್ಷತ್ರಿಯಶಿರೋಮಣಿಗಳು ಘೋರವಾದ ಮತ್ತು ದುಸ್ತರವಾದ ಅಸ್ತ್ರಸಂಸ್ಪರ್ಶವುಳ್ಳ ದ್ರೋಣಾಗ್ನಿಯನ್ನು ಪ್ರವೇಶಿಸಿ ಭಸ್ಮೀಭೂತರಾಗಿಹೋದರು. ಮಹಾತೇಜಸ್ವಿಗಳಾದ ದ್ರೋಣರು ತಮ್ಮ ಲ್ಲಿರುವ ಅಪಾರವಾದ ಬಲ, ಉತ್ಸಾಹ ಮತ್ತು ಧೈರ್ಯಗಳಿಗೆ ಅನುಸಾರವಾಗಿ

ಸರ್ವಪ್ರಾಣಿಗಳನ್ನೂ ವಿಮೋಹಗೊಳಿಸುತ್ತಾ ನಮ್ಮ ಸೈನ್ಯವನ್ನು ಸಂಹಾರ ಮಾಡುತ್ತಲೇ ಇದ್ದಾರೆ.”

ಇವೇ ಮುಂತಾಗಿ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದ ಪಾಂಚಾಲ ಸೃಂಜಯಯೋಧರ ಮಾತುಗಳನ್ನು ಕೇಳಿ ಕ್ಷಾತ್ರಧರ್ಮದಲ್ಲಿ ವ್ಯವಸ್ಥಿತ ನಾಗಿದ್ದ ಮಹಾಬಲನಾದ ಕ್ಷತ್ರಧರ್ಮನು ಕ್ರೋಧದಿಂದ ಉದ್ವೇಜಿತವಾದ ಮನಸ್ಸಿನಿಂದ ಕೂಡಿದವನಾಗಿ ಅರ್ಧಚಂದ್ರವೆಂಬ ಬಾಣದಿಂದ ದ್ರೋಣರ ಬಾಣಸಹಿತವಾದ ಧನುಸ್ಸನ್ನು ಕತ್ತರಿಸಿದನು. ಅದರಿಂದ ಪರಮಕುದ್ಧರಾದ, ಕ್ಷತ್ರಿಯಮರ್ದನರಾದ, ಮಹಾಬಲಿಷ್ಠರಾದ ದ್ರೋಣಾಚಾರ್ಯರು ತೇಜೋ ವಿಶಿಷ್ಟವಾಗಿಯೂ, ವೇಗಯುಕ್ತವಾಗಿಯೂ ಇದ್ದ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು, ಶತ್ರುಗಳ ಸೈನ್ಯವನ್ನು ವಿನಾಶಗೊಳಿಸುವಂತಹ ತೀಕ್ಷ್ಣತರ ವಾದ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ, ಕಿವಿಯ ತುದಿಯ ವರೆಗೂ ಸೆಳೆದು ಕ್ಷತ್ರಧರ್ಮನ ಮೇಲೆ ಬಿಟ್ಟರು. ಆ ಬಾಣವು ಕ್ಷತ್ರಧರ್ಮ ನನ್ನು ಸಂಹರಿಸಿ ಭೂಮಿಯ ಮೇಲೆ ಬಿದ್ದಿತು. ಭಿನ್ನಹೃದಯನಾದ (ಗತ ಪ್ರಾಣನಾದ) ಕ್ಷತ್ರಧರ್ಮನು ರಥದಿಂದ ಭೂಮಿಯ ಮೇಲೆ ಬಿದ್ದನು. ಧೃಷ್ಟದ್ಯುಮ್ನನ ಮಗನಾದ ಕ್ಷತ್ರಧರ್ಮನು ಹತನಾಗಲಾಗಿ, ಪಾಂಡವರ ಕಡೆಯ ಎಲ್ಲ ಸೈನಿಕರೂ ಕಂಪಿಸಿದರು. ಆ ಸಮಯದಲ್ಲಿ ಮಹಾಬಲನಾದ ಚೇಕಿತಾನನು ದ್ರೋಣರ ಮೇಲೆ ಆಕ್ರಮಣನಡೆಸಿದನು. ಅವನು ಹತ್ತು ಬಾಣಗಳಿಂದ ದ್ರೋಣರನ್ನು ವಕ್ಷಃಸ್ಥಳದಲ್ಲಿ ಪ್ರಹರಿಸಿ ಗಾಯಗೊಳಿಸಿದನು. ಅನಂತರ ನಾಲ್ಕು ಬಾಣಗಳಿಂದ ದ್ರೋಣರ ಸಾರಥಿಯನ್ನೂ ಪ್ರಹರಿಸಿ ಪುನಃ ನಾಲ್ಕು ಬಾಣಗಳಿಂದ ಅವರ ನಾಲ್ಕು ಕುದುರೆಗಳನ್ನೂ ಪ್ರಹರಿಸಿದನು. ಆಚಾರ್ಯರು ಚೇಕಿತಾನನನ್ನು ಮೂರು ಬಾಣಗಳಿಂದ ಬಾಹುಗಳಲ್ಲಿಯೂ ಮತ್ತು ವಕ್ಷಃಸ್ಥಳದಲ್ಲಿಯೂ ಪ್ರಹರಿಸಿ, ಅವನ ಧ್ವಜವನ್ನು ಏಳು ಬಾಣಗಳಿಂದ ಧ್ವಂಸಮಾಡಿದರು. ಅನಂತರ ಮೂರು ಬಾಣಗಳಿಂದ ಚೇಕಿತಾನನ ಸಾರಥಿ ಯನ್ನೂ ಸಂಹರಿಸಿದರು. ಸೂತನು ಹತನಾಗಲಾಗಿ ಭಾರದ್ವಾಜರ ಬಾಣ ಗಳಿಂದ ಗಾಯಗೊಂಡ ಚೇಕಿತಾನನ ಕುದುರೆಗಳು ರಥವನ್ನೆಳೆದುಕೊಂಡು ಓಡಿಹೋದುವು. ಸಾರಥಿಯಿಂದ ವಿಹೀನನಾಗಿದ್ದ ಚೇಕಿತಾನನ ರಥವು ಓಡಿಹೋದುದನ್ನು ಕಂಡು ದ್ರೋಣರು–ಸುಸಂಘಟಿತರಾಗಿ ತಮ್ಮೊಡನೆ

ಯುದ್ಧಮಾಡುತ್ತಿದ್ದ ಶೂರರಾದ ಚೇದಿ-ಪಾಂಚಾಲ-ಸೃಂಜಯಯೋಧರನ್ನು ಎಲ್ಲ ಕಡೆಗಳಲ್ಲಿಯೂ ಪಲಾಯನಪರಾಯಣರನ್ನಾಗಿಸುತ್ತಾ ರಣಾಂಗಣದಲ್ಲಿ ಬಹಳವಾಗಿ ಶೋಭಿಸಿದರು. ಆಕರ್ಣವಾಗಿ ನರೆತ ಕೂದಲಿನಿಂದ ಕೂಡಿದ್ದ, ಶ್ಯಾಮಲವರ್ಣದವರಾಗಿದ್ದ, ಎಂಭತ್ತೈದು ವಯಸ್ಸಿನವರಾಗಿದ್ದ, ವೃದ್ಧರಾದ ದ್ರೋಣರು ರಣಾಂಗಣದಲ್ಲಿ ಹದಿನಾರು ವರ್ಷ ಪ್ರಾಯದವರಂತೆ ಸಂಚರಿಸುತ್ತಿದ್ದರು. ಸ್ವಲ್ಪವೂ ಭಯವೆಂಬುದೇ ಇಲ್ಲದವರಂತೆ ರಣಾಂಗಣದ ಸುತ್ತಲೂ ಧನುಷ್ಪಾಣಿಗಳಾಗಿ ತಿರುಗುತ್ತಿದ್ದ ಶತ್ರುಸೂದನರಾದ ದ್ರೋಣ ರನ್ನು–ವಜ್ರಧರನಾದ ಇಂದ್ರನಿರಬಹುದೆಂದೇ ಶತ್ರುಗಳೆಲ್ಲರೂ ಭಾವಿಸಿದರು. ಅನಂತರ ಮಹಾಬಾಹುವಾದ, ಬುದ್ಧಿವಂತನಾದ ದ್ರುಪದನು ತನ್ನ ಸಮೀಪಸ್ಥರೊಡನೆ ಹೇಳಿದನು :

"ವ್ಯಾಘ್ರವು ಕ್ಷುದ್ರಮೃಗಗಳನ್ನು ಸಂಹರಿಸುವಂತೆ–ಲುಬ್ಧರಾದ ಈ ದ್ರೋಣರು ಕ್ಷತ್ರಿಯರನ್ನು ಸಂಹರಿಸುತ್ತಿದ್ದಾರೆ. ಯಾವನ ಲೋಭದ ಕಾರಣದಿಂದ ನಿಷ್ಪಾಪರಾದ ಕ್ಷತ್ರಿಯರು ಅಪಾರಸಂಖ್ಯೆಯಲ್ಲಿ ಹತರಾಗು ತ್ತಿರುವರೋ ಅಂತಹ ದುರ್ಮತಿಯಾದ ಪಾಪಿಷ್ಠನಾದ ದುರ್ಯೋಧನನು ಅತ್ಯಂತಕಷ್ಟಕರವಾದ ಲೋಕಗಳನ್ನೇ ಹೊಂದುತ್ತಾನೆ.

ನೂರಾರು ಯೋಧರು ಬಾಣಗಳಿಂದ ಕತ್ತರಿಸಲ್ಪಟ್ಟವರಾಗಿ ವೃಷಭ ಗಳಂತೆ ಈ ರಣಾಂಗಣದಲ್ಲಿ ಮಲಗಿದ್ದಾರೆ. ರಕ್ತಸಿಕ್ತಾಂಗರಾಗಿರುವ ಇವರು ನಾಯಿ-ನರಿಗಳಿಗೆ ಆಹಾರವಾಗಿ ಮಾಡಲ್ಪಟ್ಟಿದ್ದಾರೆ."

ಮಹಾರಾಜ! ಅಕ್ಷೌಹಿಣೀಪತಿಯಾದ ದ್ರುಪದನು ಹೀಗೆ ಹೇಳಿ ಪಾರ್ಥರನ್ನು ಮುಂದೆಮಾಡಿಕೊಂಡು ತ್ವರೆಯಿಂದ ದ್ರೋಣರನ್ನು ಆಕ್ರಮಿಸಿ ದನು."

೧೨೫ನೆಯ ಅಧ್ಯಾಯವು ಮುಗಿಯಿತು.

೧೨೬ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಚಿಂತಾಮಗ್ನನಾಗಿ ಸಾತ್ಯಕಿ–ಅರ್ಜುನರು ಇರುವ ಸ್ಥಳವನ್ನು ತಿಳಿದು ಬರಲು ಭೀಮಸೇನನನ್ನು ಕಳುಹಿಸಿಕೊಟ್ಟುದು

ಸಂಜಯನು ದ್ರೋಣರ ಪ್ರತಾಪವರ್ಣನೆಯನ್ನು ಮುಂದುವರಿಸು ತ್ತಾನೆ:

“ಮಹಾರಾಜ! ಆಗಿಂದಾಗ್ಯೆ ಪಾಂಡವರ ವ್ಯೂಹಗಳು ಮಥಿಸಲ್ಪಡು ತ್ತಿರಲಾಗಿ, ಪಾರ್ಥರು ಪಾಂಚಾಲ-ಸೋಮಕ ಯೋಧರೊಡನೆ ಬಹಳ ದೂರಕ್ಕೆ ಹೊರಟುಹೋದರು. ರೋಮಾಂಚಕರವಾದ ಮತ್ತು ಭಯಂಕರ ವಾದ ಸಂಗ್ರಾಮವು ನಡೆಯುತ್ತಿರಲಾಗಿ, ಪ್ರಳಯಕಾಲದಂತೆ ಜಗತ್ತು ಕ್ಷಯಿಸಿಹೋಗುತ್ತಿರಲಾಗಿ, ದ್ರೋಣರು ತಮ್ಮ ಪರಾಕ್ರಮವನ್ನು ಪ್ರದರ್ಶಿ ಸುತ್ತಾ ಬಾರಿ-ಬಾರಿಗೂ ಗರ್ಜನೆಮಾಡುತ್ತಿರಲಾಗಿ, ಪಾಂಚಾಲಯೋಧರು ಮತ್ತು ಪಾಂಡವಯೋಧರು ಅವ್ಯಾಹತವಾಗಿ ದ್ರೋಣರಿಂದ ವಧಿಸಲ್ಪಡು ತ್ತಿದ್ದು ಕ್ಷಯಹೊಂದುತ್ತಿರಲಾಗಿ, ಧರ್ಮರಾಜನಾದ ಯುಧಿಷ್ಠಿರನು ಯಾವ ವಿಧವಾದ ಆಶ್ರಯವನ್ನೂ (ಯಾವ ರಕ್ಷಕರನ್ನೂ) ಕಾಣದಾದನು. ‘ಈ ದುಃಸ್ಥಿತಿಯನ್ನು ಪರಿಹರಿಸಿಕೊಳ್ಳುವುದೆಂತು?’—ಎಂದು ಯುಧಿಷ್ಠಿರನು ಯೋಚಿಸತೊಡಗಿದನು. ಸವ್ಯಸಾಚಿಯನ್ನು ಕಾಣಬೇಕೆಂದು ಎಲ್ಲ ದಿಕ್ಕು ಗಳಿಗೂ ಕಣ್ಣುಹಾಯಿಸಿದನು. ಆದರೆ ಪಾರ್ಥನನ್ನಾಗಲೀ—ಮಾಧವನನ್ನಾ ಗಲೀ ಅವನು ಎಲ್ಲಿಯೂ ಕಾಣಲಿಲ್ಲ. ವಾನರರ್ಷಭನಾದ ಮಾರುತಿಯ ಚಿಹ್ನೆಯ ಧ್ವಜವನ್ನು ಹೊಂದಿದ್ದ ನರಶಾರ್ದೂಲನಾದ ಅರ್ಜುನನನ್ನು ನೋಡದೇ—ಗಾಂಡೀವಧನುಸ್ಸಿನ ಟೇಂಕಾರವನ್ನು ಕೇಳದೇ ಯುಧಿಷ್ಠಿರನು ವ್ಯಥಿತಮನಸ್ಕನಾದನು. ಮಹಾರಥನಾದ ವೃಷ್ಣಿಶ್ರೇಷ್ಠನಾದ ಸಾತ್ಯಕಿಯನ್ನೂ ಕಾಣದೆ ಧರ್ಮಾತ್ಮನಾದ ಯುಧಿಷ್ಠಿರನು ಚಿಂತೆಯಿಂದ ಸಂತಪ್ತವಾದ ಅಂಗಗಳುಳ್ಳವನಾದನು. (ಚಿಂತೆಯಿಂದಾಗಿ ಅವನ ಅಂಗಾಂಗಗಳೆಲ್ಲವೂ ಪರಿತಪಿಸಿದುವು.) ನರಶ್ರೇಷ್ಠರಾದ ಅರ್ಜುನ-ಸಾತ್ಯಕಿಯರನ್ನು ಕಾಣದೇ ಲೋಕಾಪವಾದದ ಭಯದಿಂದಾಗಿ ಯುಧಿಷ್ಠಿರನಿಗೆ ಮನಃಶಾಂತಿಯೇ ಸಿಗಲಿಲ್ಲ. ಮಹಾಬಾಹುವಾದ ಯುಧಿಷ್ಠಿರನು ಶೈನೇಯನ ರಥವನ್ನೇ ಮನಸ್ಸಿನಲ್ಲಿ ಚಿಂತಿಸುತ್ತಾ ಹೀಗೆ ಯೋಚಿಸಿದನು :

“ಫಾಲ್ಗುನನಿರುವ ಸ್ಥಳಕ್ಕೆ ಹೋಗುವಂತೆ ಮಿತ್ರರಿಗೆ ಅಭಯಂಕರ ನಾಗಿದ್ದ, ಸತ್ಯನಿಷ್ಠನಾದ, ಶಿನಿಯ ಮೊಮ್ಮಗನಾದ ಸಾತ್ಯಕಿಯನ್ನು ನಾನೇ ಕಳುಹಿಸಿಕೊಟ್ಟೆನು. ನಾನೇ ಮಾಡಿದ ಈ ಕಾರ್ಯದಿಂದಾಗಿ—ಮೊದಲು ಕೇವಲ ಅರ್ಜುನನೊಬ್ಬನಿಗಾಗಿಯೇ ಯೋಚಿಸುತ್ತಿದ್ದ ನಾನು ಈಗ ಅರ್ಜುನ-ಸಾತ್ಯಕಿಯರಿಬ್ಬರ ಬಗೆಗೂ ಯೋಚಿಸಬೇಕಾಗಿದೆ. ಈಗ ಸಾತ್ಯಕಿ

ಮತ್ತು ಧನಂಜಯರಿಬ್ಬರೂ ಎಲ್ಲಿದ್ದಾರೆಂಬುದನ್ನು ತಿಳಿದುಕೊಳ್ಳಬೇಕಾಗಿದೆ. ಅರ್ಜುನನ ಮಾರ್ಗಾನುಸಾರಿಯಾಗಿರಲು ಹೇಳಿ ಸಾತ್ಯಕಿಯನ್ನು ಕಳುಹಿಸಿ ಕೊಟ್ಟೆನು. ಈಗ ಸಾತ್ಯಕಿಯ ಮಾರ್ಗಾನುಸಾರಿಯಾಗುವಂತೆ ಯಾರನ್ನು ಕಳುಹಿಸಲಿ? ನಾನೇನಾದರೂ ಪ್ರಯತ್ನಿಸಿ ಅರ್ಜುನನನ್ನು ಮಾತ್ರವೇ ಹುಡುಕಿಸಿದ್ದಾದರೆ, ಯುಯುಧಾನನು ಎಲ್ಲಿರುವನೆಂಬುದನ್ನು ತಿಳಿಯಲು ಪ್ರಯತ್ನಿಸದಿದ್ದರೆ ಲೋಕವೇ ನನ್ನನ್ನು ನಿಂದಿಸುತ್ತದೆ.

ತಮ್ಮನನ್ನು ಮಾತ್ರವೇ ಹುಡುಕಲು ಪ್ರಯತ್ನಿಸಿ ಧರ್ಮಪುತ್ರನಾದ ಯುಧಿಷ್ಠಿರನು ಸತ್ಯವಿಕ್ರಮನಾದ ಸಾತ್ಯಕಿಯನ್ನು ತ್ಯಜಿಸಿಬಿಟ್ಟನು–ಎಂದು ಲೋಕವು ನನ್ನನ್ನು ನಿಂದಿಸುತ್ತದೆ. ಲೋಕಾಪವಾದದ ವಿಷಯದಲ್ಲಿ ಅತ್ಯಂತ ಭೀರುವಾಗಿರುವ ನಾನು ಮಹಾತ್ಮನಾದ ಮಾಧವನ (ಸಾತ್ಯಕಿಯ) ಸ್ಥಾನವನ್ನು ಕಂಡುಹಿಡಿಯುವ ಸಲುವಾಗಿ ಕುಂತಿಯ ಮಗನಾದ ಭೀಮಸೇನನನ್ನೇ ಕಳುಹಿಸುತ್ತೇನೆ. ಶತ್ರುಸೂದನನಾದ ಅರ್ಜುನನಲ್ಲಿ ನನಗೆ ಎಷ್ಟು ಪ್ರೀತಿ ಯಿರುವುದೋ ಅಷ್ಟೇ ಪ್ರೀತಿಯು ಯುದ್ಧದುರ್ಮದನಾದ ವೃಷ್ಣಿವೀರನಾದ ಸಾತ್ವತನಲ್ಲಿಯೂ ಇದೆ. ಮೇಲಾಗಿ ಶಿನಿವಂಶಕ್ಕೆ ಆನಂದವರ್ಧಕನಾದ ಸಾತ್ಯ ಕಿಯ ಮೇಲೆ ನಾನು ಹೆಚ್ಚಿನ ಹೊಣೆಗಾರಿಕೆಯನ್ನೂ ಹೊರಿಸಿದ್ದೇನೆ. ಮಹಾ ಬಲನಾದ ಸಾತ್ಯಕಿಯಾದರೋ ತನ್ನ ಮಿತ್ರನಿಗೆ ತೊಂದರೆಯಾಗಿರುವುದೆಂಬ ಕಾರಣದಿಂದಲೂ, ನನ್ನ ಮಾತನ್ನು ಗೌರವಿಸುವ ಸಲುವಾಗಿಯೂ ಮೊಸ ಳೆಯು ಸಾಗರವನ್ನು ಪ್ರವೇಶಿಸುವಂತೆ–ಕೌರವಸೇನೆಯೊಳಕ್ಕೆ ಪ್ರವೇಶಿಸಿದನು. ಧೀಮಂತನಾದ, ವೃಷ್ಣಿವೀರನಾದ ಸಾತ್ಯಕಿಯೊಡನೆ ಯುದ್ಧಮಾಡುತ್ತಿರುವ, ಯುದ್ಧದಿಂದ ಹಿಂದಿರುಗದಿರುವ ಶೂರರ ಸಿಂಹನಾದಗಳ ಗರ್ಜನೆಯು ಕೇಳಿಬರುತ್ತಿದೆ. ಈ ಸಮಯದಲ್ಲಿ ನಾನೇನು ಮಾಡಬೇಕೆಂಬುದರ ಬಗೆಗೆ ಬಹಳವಾಗಿ ತರ್ಕಿಸಿ ಒಂದು ನಿಶ್ಚಯಕ್ಕೆ ಬಂದಿರುತ್ತೇನೆ. ಮಹಾರಥರಾದ ಅರ್ಜುನ-ಸಾತ್ಯಕಿಯರು ಎಲ್ಲಿಗೆ ಹೋಗಿದ್ದಾರೆಯೋ ಅದೇ ಸ್ಥಳಕ್ಕೆ ಧನು ಷ್ಮಂತನಾದ, ಪಾಂಡವೇಯನಾದ ಭೀಮಸೇನನೂ ಹೋಗುವುದೇ ನನಗೆ ಬಹಳ ಉಚಿತವಾಗಿ ಕಾಣುತ್ತಿದೆ. ಭೀಮಸೇನನಿಗೆ ಅಸಾಧ್ಯವಾದ ಕಾರ್ಯ ವೆಂಬುದೇ ಪ್ರಪಂಚದಲ್ಲಿ ಇಲ್ಲ. (ಯಾವುದೇ ಕಾರ್ಯವನ್ನಾದರೂ ಇವನು ಮಾಡಿ ಮುಗಿಸಬಲ್ಲನು.) ಇವನು ತನ್ನ ಬಾಹುಬಲವನ್ನಾಶ್ರಯಿಸಿ ಪ್ರಯತ್ನ

ಶೀಲನಾಗಿ ಭೂಮಂಡಲದಲ್ಲಿರುವ ಸಮಸ್ತಧನುರ್ಧಾರಿಗಳನ್ನೂ ಎದುರಿಸಿ ಅನಾಯಾಸವಾಗಿ ಯುದ್ಧಮಾಡಲು ಸಮರ್ಥನಾಗಿದ್ದಾನೆ. ಮಹಾತ್ಮನಾದ ಭೀಮಸೇನನ ಬಾಹುಬಲವನ್ನೇ ಆಶ್ರಯಿಸಿ ನಾವು ವನವಾಸವನ್ನು ಮುಗಿಸಿ ಬಂದಿದ್ದೇವೆ. ಭೀಮನು ಯಾವ ಯುದ್ಧದಲ್ಲಿಯೂ ಪರಾಜಿತನಾಗಿರುವುದಿಲ್ಲ. ಇಲ್ಲಿಂದ ಭೀಮಸೇನನು ಸಾತ್ವತನ ಬಳಿಗೆ ಹೊರಟುಹೋದರೆ ಸಾತ್ವತ-ಫಾಲ್ಗುನರಿಬ್ಬರೂ ಸನಾಥರಾಗುತ್ತಾರೆ. ಸ್ವಯಂಶಸ್ತ್ರಕೋವಿದರಾದ, ವಾಸುದೇವನಿಂದ ರಕ್ಷಿಸಲ್ಪಡುತ್ತಿರುವ ಸಾತ್ವತ-ಫಾಲ್ಗುನರ ವಿಷಯದಲ್ಲಿ ನಾನು ಶೋಕಿಸಬೇಕಾಗಿಲ್ಲವೆಂಬುದೇನೋ ನಿಜ. ಆದರೆ ನನ್ನ ಮನಸ್ಸಿನಲ್ಲಿ ಸಾತ್ಯಕಿಯ ಸಂಬಂಧವಾಗಿ ಉಂಟಾಗಿರುವ ಕಳವಳವನ್ನು ಅವಶ್ಯವಾಗಿ ನಾನು ಹೋಗಲಾಡಿಸಿಕೊಳ್ಳಬೇಕಾಗಿದೆ. ಆದುದರಿಂದ ಸಾತ್ವತನ ಮಾರ್ಗಾನುಸರಣೆ ಮಾಡಲು ನಾನು ಭೀಮಸೇನನನ್ನು ನಿಯೋಜಿಸುತ್ತೇನೆ (ನನ್ನ ಮನಸ್ತೃಪ್ತಿಗಾಗಿ ಭೀಮಸೇನನನ್ನು ಸಾತ್ವತನ ಬಳಿಗೆ ಕಳುಹಿಸುತ್ತೇನೆ). ಈ ವಿಧಾನವನ್ನು ಅನುಸರಿಸಿದರೆ ಸಾತ್ಯಕಿಯು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಿದಂತಾಗುವುದೆಂದು ನಾನು ಭಾವಿಸುತ್ತೇನೆ.”

ಮಹಾರಾಜ! ಧರ್ಮಪುತ್ರನಾದ ಯುಧಿಷ್ಠಿರನು ಹೀಗೆ ನಿಶ್ಚಯಿಸಿ ಭೀಮಸೇನನ ಬಳಿಗೆ ರಥವನ್ನು ಕೊಂಡೊಯ್ಯುವಂತೆ ಸಾರಥಿಗೆ ಹೇಳಿದನು. ಧರ್ಮರಾಜನ ಮಾತನ್ನು ಕೇಳಿ ಹಯಶಿಕ್ಷಣಕೋವಿದನಾದ ಸಾರಥಿಯು ಸುವರ್ಣಭೂಷಿತವಾಗಿದ್ದ ರಥವನ್ನು ಭೀಮನ ಬಳಿಗೊಯ್ದನು. ಭೀಮಸೇನನನ್ನು ಸಮೀಪಿಸಿ ತನಗೆ ಆಗ ಒದಗಿಬಂದಿರುವ ಸುದುಃಸಹವಾದ ಸ್ಥಿತಿಯನ್ನು ಚಿಂತಿಸುತ್ತಾ ಅನೇಕಬಗೆಯಾಗಿ ಮಾತನಾಡಿಕೊಳ್ಳುತ್ತಾ ರಾಜನು ಸಮ್ಮೋಹಿತನಾದನು (ಭ್ರಾಂತನಾದನು). ಮೋಹಾವಿಷ್ಟನಾದ, ಕುಂತೀಪುತ್ರನಾದ ಯುಧಿಷ್ಠಿರನು ಭೀಮಸೇನನನ್ನು ತನ್ನ ಸಮೀಪಕ್ಕೆ ಕರೆದು ಈ ಮಾತುಗಳನ್ನು ಹೇಳಿದನು :

“ಭೀಮಸೇನ! ಯಾವ ನಿನ್ನ ತಮ್ಮನು ಗಂಧರ್ವರಿಂದ ಕೂಡಿದ ದೇವತೆಗಳನ್ನೂ–ದೈತ್ಯರನ್ನೂ ರಥೈಕಸಹಾಯನಾಗಿ ಜಯಿಸಿದ್ದನೋ ಅಂತಹ ಅರ್ಜುನನ ಚಿಹ್ನೆಯನ್ನೇ ನಾನಿಂದು ಕಾಣುತ್ತಿಲ್ಲ. ಅವನು ಎಲ್ಲಿದ್ದಾನೆಂಬ ಗುರುತೇ ಸಿಕ್ಕದಾಗಿದೆ.”

ಅಷ್ಟೊಂದು ಗಾಬರಿಯಿಂದ ತನ್ನ ಸಮೀಪಕ್ಕೆ ಬಂದ ಧರ್ಮಜನನ್ನು ಕುರಿತು ಭೀಮಸೇನನು ಹೇಳಿದನು :

"ಮಹಾರಾಜ! ನೀನು ಇಷ್ಟು ಗಾಬರಿಗೊಂಡುದನ್ನು ನಾನು ಇದುವರೆಗೆ ನೋಡಿಯೂ ಇರಲಿಲ್ಲ ; ಕೇಳಿಯೂ ಇರಲಿಲ್ಲ. ಹಿಂದೆ ವನವಾಸಕಾಲದಲ್ಲಿ ನಾವು ಬಹಳವಾಗಿ ದುಃಖಪಡುತ್ತಿದ್ದಾಗ ನೀನು ಸಮಯೋಚಿತವಾದ ಮಾತುಗಳನ್ನು ಹೇಳಿ ಸಮಾಧಾನಪಡಿಸುತ್ತಿದ್ದೆ. ಆದರೆ ಈಗ ನೀನೇ ಬಹಳವಾಗಿ ತಲ್ಲಣಿಸುತ್ತಿರುವೆ. ಎದ್ದೇಳು, ರಾಜೇಂದ್ರ! ಅಧೀರನಾಗಬೇಡ. ಈ ಸಮಯದಲ್ಲಿ ನಾನು ಏನು ಮಾಡಬೇಕೆಂಬುದನ್ನು ಆಜ್ಞಾಪಿಸು, ನಿನಗೆ ತಿಳಿದಿರುವಂತೆ ನಾನು ಮಾಡಲು ಅಸಾಧ್ಯವಾದ ಕಾರ್ಯವು ಯಾವುದೂ ಇರುವುದಿಲ್ಲ. ನಾನೇನು ಮಾಡಬೇಕೆಂಬುದನ್ನು ಆಜ್ಞಾಪಿಸು. ಮನಸ್ಸನ್ನು ಮಾತ್ರ ಶೋಕಕ್ಕೀಡುಮಾಡಬೇಡ."

ಮಹಾರಾಜ! ಕಂಬನಿದುಂಬಿದ್ದ, ಕುಂದಿದ ಮುಖಭಾವದಿಂದಿದ್ದ ಯುಧಿಷ್ಠಿರನು ಕೃಷ್ಣಸರ್ಪದಂತೆ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಭೀಮ ಸೇನನನ್ನು ಕುರಿತು ಹೇಳಿದನು :

"ಭೀಮಸೇನ! ಯಶೋವಂತನಾದ, ಕ್ರುದ್ಧನಾದ ಶ್ರೀಕೃಷ್ಣನಿಂದ ನಿರ್ಘೋಷಿತವಾದ ಪಾಂಚಜನ್ಯಶಂಖದ ಧ್ವನಿಯು ಮಾತ್ರವೇ ಕೇಳುತ್ತಿದೆ (ದೇವದತ್ತಶಂಖದ ಧ್ವನಿಯೇ ಕೇಳಿಬರುತ್ತಿಲ್ಲ). ಆದುದರಿಂದ ನಿಶ್ಚಯ ವಾಗಿಯೂ ನಿನ್ನ ತಮ್ಮನಾದ ಧನಂಜಯನು ಹತನಾಗಿಯೇ ಯುದ್ಧಭೂಮಿ ಯಲ್ಲಿ ಮಲಗಿದ್ದಾನೆ. ಸಾತ್ವತವೀರನಾದ ಶ್ರೀಕೃಷ್ಣನೇ ಅರ್ಜುನನು ಹತ ನಾದನಂತರ ಶತ್ರುಗಳೊಡನೆ ಯುದ್ಧಮಾಡುತ್ತಿದ್ದಾನೆ (ಪಾಂಚಜನ್ಯಶಂಖದ ಶಬ್ದವು ಮಾತ್ರವೇ ಕೇಳಿಬರುತ್ತಿರುವುದಕ್ಕೆ ಇದೇ ಕಾರಣವಿರಬಹುದೆಂದು ನನ್ನ ಭಾವನೆಯಾಗಿದೆ ). ಯಾವನ ವೀರ್ಯವನ್ನು ಅವಲಂಬಿಸಿ ಪಾಂಡವರೆಲ್ಲರೂ ಜೀವಿಸಿದ್ದಾರೆಯೋ–ಭಯವು ಪ್ರಾಪ್ತವಾದ ಕಾಲದಲ್ಲಿ ದೇವತೆಗಳು ಸಹಸ್ರಾಕ್ಷನ ಬಳಿಗೆ ಹೋಗುವಂತೆ–ಯಾವನಬಳಿಗೆ ಹೋಗುತ್ತಾರೆಯೋ ಅಂತಹ ಅರ್ಜುನನು ಸೈಂಧವನನ್ನು ಗ್ರಹಣಮಾಡುವ ಆಶಯದಿಂದ ಕೌರವಸೇನೆಯೊಳಕ್ಕೆ ನುಗ್ಗಿದ್ದಾನೆ. ಭೀಮಸೇನ! ಅರ್ಜುನನು ಹೊರಟುಹೋದುದು ನಮಗೆ ಗೊತ್ತಿದೆ. ಆದರೆ ಅವನು ಹಿಂದಿರುಗಿದ

ವಿಷಯವನ್ನು ನಾವು ತಿಳಿದವರಾಗಿಲ್ಲ. ಅರ್ಜುನನು ಇನ್ನೂ ಯುವಕನು ; ಶ್ಯಾಮಲವರ್ಣನು ; ನಿದ್ರೆಯನ್ನು ಜಯಿಸಿರುವವನು ; ದರ್ಶನೀಯನು ; ಮಹಾರಥನು ; ವಿಶಾಲವಾದ ವಕ್ಷಃಸ್ಥಳದಿಂದ ಕೂಡಿರತಕ್ಕವನು ; ಮಹಾ ಬಾಹುವು ; ಮದಿಸಿದ ಆನೆಯಂತೆ ಪರಾಕ್ರಮವಿರತಕ್ಕವನು ಅಥವಾ ನಡಿಗೆ ಯಿರತಕ್ಕವನು ; ಚಕೋರಪಕ್ಷಿಯ ಕಣ್ಣುಗಳಂತೆ ಕಣ್ಣುಗಳುಳ್ಳವನು ; ಎಣ್ಣೆ ಗೆಂಪಿನ ಮುಖವುಳ್ಳವನು ; ಶತ್ರುಗಳಿಗೆ ಭಯವನ್ನುಂಟುಮಾಡತಕ್ಕವನು. ಅಂತಹ ಅರ್ಜುನನು ಇನ್ನೂ ಬದುಕಿರುವನೆಂಬುದಕ್ಕೆ ನಾನು ಯಾವ ಚಿಹ್ನೆ ಯನ್ನೂ ಕಾಣುತ್ತಿಲ್ಲ. ಅರಿಂದಮನೇ! ಇದೇ ನನ್ನ ಶೋಕಕ್ಕೆ ಸ್ಥಾನವಾಗಿದೆ (ಕಾರಣವಾಗಿದೆ ). ಹವಿಸ್ಸಿನಿಂದ ಅಗ್ನಿಯು ವರ್ಧಿಸುವಂತೆ–ಅರ್ಜುನನ ಸಲುವಾಗಿ ಮತ್ತು ಸಾತ್ಯಕಿಯ ಸಲುವಾಗಿ ನನ್ನ ಶೋಕವು ಕ್ಷಣ-ಕ್ಷಣಕ್ಕೂ ವರ್ಧಿಸುತ್ತಿದೆ. ಇದರಿಂದಲೇ ನಾನು ಬುದ್ಧಿಭ್ರಮಣೆಯನ್ನೂ ಹೊಂದಿದ್ದೇನೆ. ಮಹಾರಥನಾದ ಸಾತ್ವತನೆಲ್ಲಿರುವನೆಂಬುದನ್ನೂ ನೀನು ತಿಳಿದುಕೊಳ್ಳಬೇಕು. ನಿನ್ನ ತಮ್ಮನಾದ, ಮಹಾರಥನಾದ, ಅರ್ಜುನನನ್ನು ಸಾತ್ಯಕಿಯು ಅನುಸರಿಸಿ ಹೋಗಿರುವನು. ಅವನನ್ನೂ ಕಾಣದೆ ನಾನು ಗಾಬರಿಗೊಂಡಿದ್ದೇನೆ. ಪಾರ್ಥನು ಹತನಾದರೂ ಸಾತ್ಯಕಿಯು ಮುನ್ನುಗ್ಗಿ ಯುದ್ಧಮಾಡುತ್ತಾನೆ. ಪರಂತಪನೇ! ಅರ್ಜುನ ಮತ್ತು ಸಾತ್ಯಕಿಯರು ಜೀವಂತರಾಗಿರುವರೇ ಎಂಬ ವಿಷಯದಲ್ಲಿ ನನಗೆ ಸಂಶಯವುಂಟಾಗಿದೆ. ಈ ಸಂಶಯವು ನನ್ನಿಂದ ದೂರವಾಗುತ್ತಿಲ್ಲ. ಪ್ರತಿಕ್ಷಣದಲ್ಲಿಯೂ ಅವರ ವಿಷಯವಾಗಿ ಯೋಚಿಸುತ್ತಿರುವುದೇ ಆಗಿದೆ. ಕೌಂತೇಯ! ಧನಂಜಯನು ಎಲ್ಲಿಗೆ ಹೋಗಿರುವನೋ, ಮಹಾವೀರ್ಯನಾದ ಸಾತ್ಯಕಿಯು ಎಲ್ಲಿಗೆ ಹೋಗಿರುವನೋ– ಅಲ್ಲಿಗೆ ನೀನು ಈಗಲೇ ಹೋಗು.

ಧರ್ಮಜ್ಞನೇ! ನಾನು ನಿನ್ನ ಹಿರಿಯಣ್ಣನಾಗಿದ್ದೇನೆ. ನೀನು ನನ್ನ ಆಜ್ಞೆಯನ್ನು ಪರಿಪಾಲಿಸುವುದು ಉಚಿತವೆಂದು ಭಾವಿಸುವೆಯಾದರೆ ನಾನು ಹೇಳಿದಂತೆ ಮಾಡು. ಒಂದುವೇಳೆ ಅರ್ಜುನನು ಇರುವ ಸ್ಥಳವನ್ನು ನೀನು ತಿಳಿದುಕೊಳ್ಳದಿದ್ದರೂ ಚಿಂತೆಯಿಲ್ಲ. ಸಾತ್ಯಕಿಯು ಇರುವ ಸ್ಥಳವನ್ನು ನೀನು ಅವಶ್ಯವಾಗಿ ತಿಳಿಯಲೇಬೇಕು. ನನಗೆ ಪ್ರಿಯವನ್ನುಂಟುಮಾಡುವ ಇಚ್ಛೆ ಯಿಂದ ಸಾತ್ಯಕಿಯು ಅತ್ಯಂತದುರ್ಗಮವಾದ, ಘೋರವಾದ, ಜಿತೇಂದ್ರಿಯ

ರಲ್ಲದವರಿಂದ ಸಂಚರಿಸಲು ಅಸಾಧ್ಯವಾದ ಅರ್ಜುನನ ಮಾರ್ಗವನ್ನೇ ಹಿಡಿದು ಹೋಗಿರುವನು.

**ದೃಷ್ಟ್ವಾ ಕುಶಲಿನೌ ಕೃಷ್ಣೌ ಸಾತ್ವತಂ ಚೈವ ಸಾತ್ಯಕಿಮ್ ।**
**ಸಂವಿದಂ ಚೈವ ಕುರ್ಯಾಸ್ತ್ವಂ ಸಿಂಹನಾದೇನ ಪಾಣ್ಡವ ॥೪೯॥**

ಕುಶಲಿಗಳಾಗಿರುವ ಕೃಷ್ಣಾರ್ಜುನರನ್ನೂ–ಸಾತ್ವತವಂಶೀಯನಾದ ಸಾತ್ಯಕಿಯನ್ನೂ ನೋಡಿದನಂತರ ನೀನು ಉಚ್ಚಸ್ವರದ ಸಿಂಹನಾದದ ಮೂಲಕ ನಮಗೆ ಸೂಚನೆಯನ್ನು ಕೊಡಬೇಕು."

೧೨೬ನೆಯ ಅಧ್ಯಾಯವು ಮುಗಿಯಿತು.

೧೨೭ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಭೀಮಸೇನನು ಕೌರವರ ಸೈನ್ಯವನ್ನು ಪ್ರವೇಶಿಸಿದುದು : ಸಾರಥಿಸಹಿತವಾದ ದ್ರೋಣರ ರಥವನ್ನು ಧ್ವಂಸಮಾಡಿದುದು : ಧೃತರಾಷ್ಟ್ರನ ಹನ್ನೊಂದು ಮಕ್ಕಳನ್ನು ವಧಿಸಿದುದು : ಉಳಿದ ಮಕ್ಕಳೊಡನೆ ಕೌರವಸೈನ್ಯದ ಪಲಾಯನ

ಧರ್ಮರಾಜನ ಮಾತಿಗೆ ಭೀಮಸೇನನು ಉತ್ತರಿಸುತ್ತಾನೆ :

"ಅಣ್ಣ! ಯಾವ ರಥವು ಹಿಂದೆ ಬ್ರಹ್ಮನನ್ನೂ, ಈಶಾನನನ್ನೂ, ಇಂದ್ರನನ್ನೂ, ವರುಣನನ್ನೂ ಹೊತ್ತಿದ್ದಿತೋ–ಅಂತಹ ಅಜೇಯವಾದ ರಥದಲ್ಲಿಯೇ ಕುಳಿತು ಕೃಷ್ಣಾರ್ಜುನರು ಯುದ್ಧಕ್ಕೆ ಹೋಗಿರುತ್ತಾರೆ. ಆದುದ ರಿಂದ ಅವರಿಗೆ ಯಾವ ವಿಧವಾದ ಭಯವೂ ಇಲ್ಲ. ಆದರೆ ನಿನ್ನ ಆಜ್ಞೆಯನ್ನು ಶಿರಸಾವಹಿಸಿ ನಾನಲ್ಲಿಗೆ ಹೋಗುತ್ತೇನೆ. ನೀನು ಶೋಕಿಸಬೇಡ. ಆ ನರ ವ್ಯಾಘ್ರರನ್ನು ಸಂಧಿಸಿದನಂತರ ನೀನು ಹೇಳಿರುವಂತೆ ಸಿಂಹನಾದದ ಮೂಲಕವಾಗಿ ಅವರು ಕುಶಲಿಗಳಾಗಿರುವರೆಂಬ ಸೂಚನೆಯನ್ನೂ ಕೊಡುತ್ತೇನೆ."

ಮಹಾರಾಜ! ಬಲಿಷ್ಠನಾದ ಭೀಮಸೇನನು ಯುಧಿಷ್ಠಿರನಿಗೆ ಹೀಗೆ ಹೇಳಿ, ಯುಧಿಷ್ಠಿರನನ್ನು (ಯುಧಿಷ್ಠಿರನ ರಕ್ಷಣಾಭಾರವನ್ನು) ಧೃಷ್ಟ ದ್ಯುಮ್ನನಿಗೂ ಮತ್ತು ಇತರ ಸುಹೃದರಿಗೂ ಒಪ್ಪಿಸಿಕೊಟ್ಟು ಅಲ್ಲಿಂದ

ಹೊರಟನು. ಹೊರಡುವ ಸಮಯದಲ್ಲಿ ಮಹಾಬಲನಾದ ಭೀಮಸೇನನು ಧೃಷ್ಟದ್ಯುಮ್ನನನ್ನು ಕುರಿತು ಹೇಳಿದನು :

"ಮಹಾಬಾಹುವೇ! ಮಹಾರಥರಾದ ದ್ರೋಣರು ಧರ್ಮರಾಜನನ್ನು ಸರ್ವೋಪಾಯಗಳಿಂದಲೂ ಬಂಧಿಸುವ ಪ್ರಯತ್ನದಲ್ಲಿಯೇ ಇದ್ದಾರೆ. ಈ ವಿಷಯವು ನಿನಗೂ ತಿಳಿದೇ ಇರುವುದು. ನನಗೆ ಅಲ್ಲಿಗೆ ಹೋಗುವುದಕ್ಕಿಂತಲೂ ಮುಖ್ಯವಾದ ಕರ್ತವ್ಯವು ರಾಜನ ರಕ್ಷಣೆಯೇ ಆಗಿದೆ. ರಾಜನನ್ನು ರಕ್ಷಿಸುವುದೇ ನಮ್ಮೆಲ್ಲರ ಅತಿಮುಖ್ಯವಾದ ಕರ್ತವ್ಯವಾಗಿದೆ. ಆದರೆ ನಮ್ಮಣ್ಣನು ಅರ್ಜುನನಿರುವೆಡೆಗೆ ಹೋಗಲೇಬೇಕೆಂದು ಹೇಳಿರುವುದರಿಂದ ಅವನಿಗೆ ಪ್ರತ್ಯುತ್ತರವನ್ನು ಕೊಡಲು ನಾನು ಉತ್ಸುಕನಾಗಿಲ್ಲ. ನಾವೆಲ್ಲರೂ ಯಾವ ವಿಧವಾದ ಶಂಕೆಯೂ ಇಲ್ಲದೇ ಧರ್ಮರಾಜನ ಮಾತಿನಂತೆ ನಡೆದುಕೊಳ್ಳಬೇಕು. ಆದುದರಿಂದ ಮರಣೋನ್ಮುಖನಾಗಿರುವ ಸೈಂಧವನೆಲ್ಲಿರುವನೋ ಅಲ್ಲಿಗೆ ನಾನು ಈಗಲೇ ಹೋಗುತ್ತೇನೆ.

ನನ್ನ ತಮ್ಮನಾದ ಅರ್ಜುನನ ಮತ್ತು ಧೀಮಂತನಾದ ಸಾತ್ಯಕಿಯ ಮಾರ್ಗವನ್ನೇ ಅನುಸರಿಸಿ ನಾನೂ ಹೋಗುತ್ತೇನೆ. ನೀನು ಮಾತ್ರ ಪ್ರಯತ್ನಪೂರ್ವಕವಾಗಿ ಯುಧಿಷ್ಠಿರನನ್ನು ಸರ್ವಾತ್ಮನಾ ರಕ್ಷಿಸಬೇಕು. ರಣಾಂಗಣದಲ್ಲಿ ಮಾಡಬೇಕಾದ ಎಲ್ಲ ಕಾರ್ಯಗಳಿಗಿಂತಲೂ ಅತಿಮುಖ್ಯವಾದ ಕಾರ್ಯವು ಇದೇ ಆಗಿದೆ."

ಮಹಾರಾಜ! ಹೀಗೆ ಹೇಳಿದ ವೃಕೋದರನಿಗೆ ಪ್ರತ್ಯುತ್ತರವಾಗಿ ಧೃಷ್ಟದ್ಯುಮ್ನನು ಹೇಳಿದನು : "ಭೀಮಸೇನ! ನಿನ್ನ ಇಷ್ಟಾನುಸಾರವಾಗಿಯೇ ನಾನು ಕಾರ್ಯಮಾಡುತ್ತೇನೆ. ನೀನು ಆ ವಿಷಯವಾಗಿ ಸ್ವಲ್ಪವೂ ಯೋಚಿಸದೇ ಪ್ರಯಾಣಮಾಡು. ಧೃಷ್ಟದ್ಯುಮ್ನನನ್ನು ಸಂಹಾರಮಾಡದೆ ಯಾವುದೇ ಕಾರಣದಿಂದಲೂ ದ್ರೋಣರು ಧರ್ಮರಾಜನನ್ನು ಸೆರೆಹಿಡಿಯಲಾರರು."

ಧೃಷ್ಟದ್ಯುಮ್ನನು ಹೀಗೆಂದು ಹೇಳಿ ಸಂಪೂರ್ಣವಾಗಿ ಯುಧಿಷ್ಠಿರನನ್ನು ರಕ್ಷಿಸುವ ಭರವಸೆಯನ್ನಿತ್ತನಂತರ ಭೀಮಸೇನನು ಧರ್ಮರಾಜನನ್ನು ಧೃಷ್ಟದ್ಯುಮ್ನನ ರಕ್ಷಣೆಗೊಳಪಡಿಸಿ, ಗುರುವೂ, ಜ್ಯೇಷ್ಠಭ್ರಾತೃವೂ ಆದ

ಯುಧಿಷ್ಠಿರನಿಗೆ ಅಭಿವಾದನಮಾಡಿ, ಅರ್ಜುನನು ಹೋಗಿದ್ದ ಮಾರ್ಗವನ್ನೇ ಅನುಸರಿಸಿ ಹೊರಟನು. ಹೊರಡುವ ವೇಳೆಯಲ್ಲಿ ಧರ್ಮರಾಜನು ಭೀಮ ಸೇನನನ್ನು ಗಾಢವಾಗಿ ಆಲಿಂಗಿಸಿಕೊಂಡು ನೆತ್ತಿಯನ್ನು ಆಘ್ರಾಣಿಸಿ ಶುಭಾಶೀ ರ್ವಾದಗಳನ್ನು ಮಾಡಿದನು. ಅನಂತರ ಭೀಮಸೇನನು ಸಂಪೂಜಿತರಾದ ಮತ್ತು ಸಂತುಷ್ಟರಾದ ಬ್ರಾಹ್ಮಣರಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ, *ಎಂಟು ವಿಧವಾದ ಮಂಗಳವಸ್ತುಗಳನ್ನು ಸ್ಪರ್ಶಿಸಿ, ಕೈರಾತಕವೆಂಬ ಮಧು ವನ್ನು ಪಾನಮಾಡಿ ಮದದಿಂದ ಕೆಂಪೇರಿದ ಕಣ್ಣುಗಳಿಂದ ಕೂಡಿದವನಾಗಿ ದ್ವಿಗುಣೀಕೃತವಾದ ಬಲೋತ್ಸಾಹಗಳನ್ನು ಹೊಂದಿದನು. ಆ ಸಮಯದಲ್ಲಿ ಬ್ರಾಹ್ಮಣರು ವಿಜಯಪ್ರಾಪ್ತಿಯ ಸೂಚಕವಾದ ಸ್ವಸ್ತಿವಾಚನಗಳನ್ನು ಮಾಡಿ ದರು. ಆಗಲೇ ವಿಜಯದ ಆನಂದಾನುಭವಿಯಾದ ಬುದ್ಧಿಯನ್ನು ಭೀಮ ಸೇನನು ತನ್ನಲ್ಲಿಯೇ ಕಂಡುಕೊಂಡನು (ವಿಜಯಾನಂದದ ಅನುಭವವು ಭೀಮಸೇನನಿಗೆ ಮೊದಲೇ ಆಗಿಬಿಟ್ಟಿತು). ಗಾಳಿಯು ಅವನ ಎದುರಾಗಿ ಬೀಸದೆ ಅವನ ಕಡೆಯಿಂದಲೇ ಬೀಸುತ್ತಿದ್ದು (ಅನುಕೂಲವಾದ ವಾತಾವರಣ ವಿದ್ದು) ಭೀಮಸೇನನ ವಿಜಯೋದಯವನ್ನು ಸೂಸುತ್ತಿದ್ದಿತು. ರಥಿಗಳಲ್ಲಿ ಶ್ರೇಷ್ಠನಾದ, ಮಹಾಬಾಹುವಾದ ಭೀಮಸೇನನು ಕವಚವನ್ನು ಧರಿಸಿ, ಶುಭ ಕುಂಡಲಗಳನ್ನೂ ಭುಜಕೀರ್ತಿಗಳನ್ನೂ ಧರಿಸಿ, ಕೈಚೀಲಗಳನ್ನು ಹಾಕಿಕೊಂಡು ರಥಾರೋಹಣಮಾಡಿದನು. ಕಪ್ಪಾದ ಲೋಹದಿಂದ ಮಾಡಲ್ಪಟ್ಟಿದ್ದ ಭೀಮ ಸೇನನ ಕವಚವು ಸುವರ್ಣದಿಂದ ಚಿತ್ರಿತವಾಗಿದ್ದು ಬಹುಮೂಲ್ಯದ್ದಾಗಿದ್ದಿತು. ಅದು ಅವನ ಶರೀರಕ್ಕೆ ಸಂಪೂರ್ಣವಾಗಿ ಅಂಟಿಕೊಂಡಂತಿದ್ದು ಮಿಂಚಿನಿಂದ ಕೂಡಿದ ಮೇಘದಂತೆಯೇ ಪ್ರಕಾಶಿಸುತ್ತಿದ್ದಿತು. ಹೊಂಬಣ್ಣದ, ಕೆಂಪಾದ, ಕಪ್ಪಾದ, ಮತ್ತು ಬಿಳಿಯ ಬಣ್ಣದ ವಸ್ತ್ರಗಳನ್ನು ಧರಿಸಿಕೊಂಡಿದ್ದ, ಕಂಠತ್ರಾಣ ವನ್ನು (ಕುತ್ತಿಗೆ ಪಟ್ಟಿಯನ್ನು) ಹೊಂದಿದ್ದ ಭೀಮಸೇನನು ಕಾಮನಬಿಲ್ಲಿ ನಿಂದ ಕೂಡಿದ ಮೋಡದಂತೆಯೇ ಪ್ರಕಾಶಿಸಿದನು. ಮಹಾರಾಜ! ಭೀಮ

---

* ಎಂಟು ಮಂಗಳವಸ್ತುಗಳು : ಅನಲೋ ಗೌರ್ಹಿರಣ್ಯಂ ಚ ದೂರ್ವಾ ಗೋರೋಚನಾಮೃತಮ್ । ಅಕ್ಷತಂ ದಧಿ ಚೇತ್ಯಷ್ಟೌ ಮಙ್ಗಲಾನಿ ಪ್ರಚಕ್ಷತೇ ॥ ಅಗ್ನಿ, ಹಸು, ಚಿನ್ನ, ಗರಿಕೆ, ಗೋರೋಚನ, ಹಾಲು, ಮಂತ್ರಾಕ್ಷತೆ ಮತ್ತು ಮೊಸರು–ಈ ಎಂಟನ್ನು ಮಂಗಳದ್ರವ್ಯಗಳೆಂದು ಹೇಳುತ್ತಾರೆ.

ಸೇನನು ನಿನ್ನ ಸೈನ್ಯದೊಡನೆ ಯುದ್ಧಮಾಡುವ ಇಚ್ಛೆಯಿಂದ ಹೊರಟ ಸಮಯದಲ್ಲಿ ಪುನಃ ಮಹಾಘೋರವಾದ ಪಾಂಚಜನ್ಯಮಹಾಶಂಖದ ಮಹಾ ಧ್ವನಿಯಾಯಿತು. ಮೂರು ಲೋಕಗಳನ್ನೂ ಭಯಗೊಳಿಸುವ ಘೋರವಾದ ಮಹಾನಿನಾದವನ್ನು ಪುನಃ ಕೇಳಿದ ಧರ್ಮಪುತ್ರನು ಮಹಾಬಾಹುವಾದ ಭೀಮಸೇನನೊಡನೆ ಹೇಳಿದನು : "ನೋಡು ಭೀಮಸೇನ! ಇದು ವೃಷ್ಣಿ ಪ್ರವೀರನಾದ ಶ್ರೀಕೃಷ್ಣನ ಪಾಂಚಜನ್ಯಶಂಖದ ಧ್ವನಿಯೇ ಆಗಿದೆ. ಶ್ರೀಕೃಷ್ಣನೇ ಆ ಶಂಖವನ್ನು ಊದಿದ್ದಾನೆ. ಶ್ರೇಷ್ಠವಾದ ಆ ಶಂಖವು ತನ್ನ ಧ್ವನಿಯಿಂದ ಪೃಥಿವಿಯನ್ನೂ ಮತ್ತು ಅಂತರಿಕ್ಷವನ್ನೂ ಪ್ರತಿಧ್ವನಿಸುತ್ತಿದೆ. ನಿಶ್ಚಯವಾಗಿಯೂ ಸವ್ಯಸಾಚಿಯು ಮಹಾವ್ಯಸನದಲ್ಲಿ ಸಿಕ್ಕಿಕೊಂಡಿರುವುದರಿಂದಲೇ ಚಕ್ರ-ಗದಾಧರನಾದ ಶ್ರೀಕೃಷ್ಣನೇ ಎಲ್ಲ ಕುರುಗಳೊಡನೆಯೂ ಯುದ್ಧ ಮಾಡುತ್ತಿದ್ದಾನೆ. ನಿಶ್ಚಯವಾಗಿಯೂ ಕುಂತಿಯು ಅನೇಕವಾದ ಅಪಶಕುನ ಗಳನ್ನೇ ಕಂಡಿರಬೇಕು. ತಾನು ಕಂಡ ಅಪಶಕುನಗಳ ವಿಷಯವಾಗಿ ಚರ್ಚಿ ಸುತ್ತಲೂ ಇರಬಹುದು. ದ್ರೌಪದೀ-ಸುಭದ್ರೆಯರೂ ತಮ್ಮ ಬಂಧುಗಳೊಡನೆ ಅಶುಭಶಕುನಗಳನ್ನು ಕಂಡಿರಬಹುದು. ಆದುದರಿಂದ, ಭೀಮಸೇನ! ಧನಂಜಯನಿರುವೆಡೆಗೆ ನೀನು ತ್ವರೆಯಿಂದ ಹೋಗು. ಸ್ವಲ್ಪವೂ ಸಾವಕಾಶಮಾಡಬೇಡ. ಧನಂಜಯನನ್ನು ನೋಡುವ ಇಚ್ಛೆಯಿಂದಲೂ ಮತ್ತು ಸಾತ್ಯಕಿಯ ಕಾರಣದಿಂದಲೂ ದಿಕ್ಕುಗಳೂ ಮತ್ತು ಉಪದಿಕ್ಕುಗಳೂ ನನಗೆ ಅಂಧಕಾರಮಯವಾಗಿ ಕಾಣುತ್ತಿವೆ. ಆದುದರಿಂದ ಬೇಗ ಹೋಗು, ಭೀಮಸೇನ! ಶೀಘ್ರವಾಗಿ ಹೋಗು."

ಮಹಾರಾಜ! ಹೀಗೆ ಗುರುವಿನಿಂದ ಅನುಜ್ಞಾತನಾದ ಪ್ರತಾಪವಂತ ನಾದ, ಪಾಂಡುಪುತ್ರನಾದ ವೃಕೋದರನು–ತೋಳಪಟ್ಟಿಯನ್ನೂ, ಅಂಗುಲಿ ತ್ರಾಣಗಳನ್ನೂ ಧರಿಸಿದವನಾಗಿ ಧನುಸ್ಸನ್ನು ಹಿಡಿದು ಹೊರಡಲು ಸಿದ್ಧ ನಾದನು. ಅಣ್ಣನಿಗೆ ಪ್ರಿಯವನ್ನುಂಟುಮಾಡುವ, ತಮ್ಮನಾದ ಭೀಮಸೇನ ನನ್ನು ಯುಧಿಷ್ಠಿರನು ಆದರಪೂರ್ವಕವಾಗಿ ಬೀಳ್ಕೊಟ್ಟನು. ಭೀಮಸೇನನು ರಥದಲ್ಲಿ ಕುಳಿತು ಹೋಗುತ್ತಿದ್ದಾಗ ನಗಾರಿಯನ್ನು ಬಾರಿಸಿದನು. ಶಂಖವನ್ನು ಬಾರಿ-ಬಾರಿಗೂ ಊದುತ್ತಿದ್ದನು. ಸಿಂಹನಾದವನ್ನು ಮಾಡಿದನು. ಧನು ಷ್ಟೇಂಕಾರವನ್ನು ಪುನಃ ಪುನಃ ಮಾಡುತ್ತಿದ್ದನು. ಆ ಮಹಾಶಬ್ದದಿಂದ ಶತ್ರು

ಪಕ್ಷದ ವೀರರ ಮನಸ್ಸು ಕುಸಿಯುವಂತೆ ಮಾಡಿದನು. ತನ್ನ ಭಯಂಕರ ಸ್ವರೂಪವನ್ನು ಪ್ರದರ್ಶಿಸುತ್ತಾ ಭೀಮಸೇನನು ಶತ್ರುಗಳಿದ್ದ ಕಡೆಗೆ ಶೀಘ್ರವಾಗಿ ಹೋದನು. ವಿಶೋಕನೆಂಬ ಸಾರಥಿಯಿಂದ ಸಂಚಾಲಿತವಾದ, ಮನೋವೇಗ-ವಾಯುವೇಗಗಳಿಗೆ ಸಮಾನವಾದ ವೇಗದಿಂದ ಕೂಡಿದ್ದ, ಸುಶಿಕ್ಷಿತವಾದ, ಶ್ರೇಷ್ಠವಾದ ಕುದುರೆಗಳು ಹರ್ಷಸೂಚಕವಾಗಿ ಶಬ್ದ ಮಾಡುತ್ತಾ ಭೀಮಸೇನನನ್ನು ಒಯ್ಯುತ್ತಿದ್ದುವು. ಕುಂತಿಯ ಮಗನಾದ ಭೀಮಸೇನನು ತನ್ನ ಕೈಯಿಂದ ಧನುಸ್ಸಿನ ಮೌರ್ವಿಯನ್ನು ತೀಡುತ್ತಾ, ಕರ್ಣಾಂತವಾಗಿ ಸೆಳೆಯುತ್ತಾ, ಬಾಣಗಳ ಮಳೆಗೆರೆಯುತ್ತಾ, ಶತ್ರುಗಳನ್ನು ಗಾಯಗೊಳಿಸುತ್ತಾ, ಅವರ ಶರೀರಗಳನ್ನು ಛಿನ್ನ-ಭಿನ್ನವಾಗಿ ಮಾಡುತ್ತಾ, ದುರ್ಯೋಧನನ ಸೇನಾವ್ಯೂಹದ ಅಗ್ರಭಾಗವನ್ನು ಮಥಿಸಿಬಿಟ್ಟನು. ದೇವತೆಗಳು ಇಂದ್ರನನ್ನು ಅನುಸರಿಸಿಕೊಂಡು ಹೋಗುತ್ತಿದ್ದಂತೆ–ಶೂರರಾದ ಸೋಮಕ-ಪಾಂಚಾಲಯೋಧರು, ಶತ್ರುಗಳನ್ನು ಧ್ವಂಸಮಾಡಿಕೊಂಡು ಹೋಗುತ್ತಿದ್ದ ಮಹಾಬಾಹುವಾದ ಭೀಮಸೇನನನ್ನು ಅನುಸರಿಸಿಕೊಂಡು ಹೋಗುತ್ತಿದ್ದರು. ಹಾಗೆ ಹೋಗುತ್ತಿದ್ದ ಭೀಮಸೇನನನ್ನು ನಿನ್ನ ಪಕ್ಷದ ಯೋಧರೆಲ್ಲರೂ ಸಂಘಟಿತರಾಗಿ ಸುತ್ತುವರಿದರು. ರಥಿಗಳಲ್ಲಿ ಶ್ರೇಷ್ಠರಾದ, ಸೈನ್ಯಸಮೇತರಾದ ಮತ್ತು ವೀರರಾದ ದುಃಶಲ, ಚಿತ್ರಸೇನ, ಕುಂಡಭೇದೀ, ವಿವಿಂಶತಿ, ದುರ್ಮುಖ, ದುಃಸಹ, ವಿಕರ್ಣ, ಶಲ, ವಿಂದ, ಅನುವಿಂದ, ಸುಮುಖ, ದೀರ್ಘಬಾಹು, ಸುದರ್ಶನ, ವೃಂದಾರಕ, ಸುಹಸ್ತ, ಸುಷೇಣ, ದೀರ್ಘಲೋಚನ, ಅಭಯ, ರೌದ್ರಕರ್ಮಾ, ಸುವರ್ಮಾ ಮತ್ತು ದುರ್ವಿಲೋಚನ–ಇವರು ಪರಮಶೋಭೆಯಿಂದ ಕೂಡಿದವರಾಗಿ, ಸುಸಂಘಟಿತರಾಗಿ ಭೀಮಸೇನನನ್ನು ಆಕ್ರಮಿಸಿದರು. ಮಹಾರಥನಾದ ಭೀಮಸೇನನು ಧಾರ್ತರಾಷ್ಟ್ರಮಹಾವೀರರಿಂದ ಸುತ್ತುಗಟ್ಟಲ್ಪಟ್ಟನು. ಪರಾಕ್ರಮಿಯಾದ ಭೀಮಸೇನನು ಅವರೆಲ್ಲರನ್ನೂ ನೋಡಿ–ಸಿಂಹವು ಕ್ಷುದ್ರಮೃಗಗಳ ಮೇಲೆ ರಭಸದಿಂದ ಬೀಳುವಂತೆ–ರಭಸದಿಂದ ದುಃಶಲಾದಿಗಳ ಮೇಲೆ ಬಿದ್ದನು. ಆಗತಾನೇ ಹುಟ್ಟಿದ ಸೂರ್ಯನನ್ನು ಮೇಘಗಳು ಆವರಿಸುವಂತೆ–ವೀರರಾದ ನಿನ್ನ ಮಕ್ಕಳು ತೀಕ್ಷ್ಣವಾದ ಬಾಣಗಳಿಂದ ಭೀಮಸೇನನನ್ನು ಮುಚ್ಚುತ್ತಾ ದಿವ್ಯವಾದ ಮಹಾಶಸ್ತ್ರಗಳನ್ನು ಪ್ರದರ್ಶಿಸಿದರು. ಆದರೆ ಭೀಮಸೇನನು

ಅವರೆಲ್ಲರನ್ನೂ ಅತಿಕ್ರಮಿಸಿ ದ್ರೋಣರ ಸೇನೆಯ ಬಳಿಗೆ ಹೊರಟು ಹೋದನು. ಅಲ್ಲಿ ತನ್ನ ಮುಂದಿದ್ದ ಗಜಸೈನ್ಯವನ್ನು ಬಾಣಗಳ ವರ್ಷದಿಂದ ಮುಚ್ಚಿದನು. ಪವನಾತ್ಮಜನಾದ ಭೀಮಸೇನನು ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ಬಾರಿ-ಬಾರಿಗೂ ಮುಚ್ಚುತ್ತಾ ಸ್ವಲ್ಪಹೊತ್ತಿನಲ್ಲಿಯೇ ನಮ್ಮ ಗಜ ಸೇನೆಯನ್ನು ಧ್ವಂಸಮಾಡಿಬಿಟ್ಟನು. ಶರಭದ ಗರ್ಜನೆಯಿಂದ ವನ್ಯಮೃಗಗಳು ಭಯಗೊಂಡು ಓಡಿಹೋಗುವಂತೆ–ಭೀಮನಿಂದ (ಭೀಮನ ಗರ್ಜನೆಯಿಂದ) ಭಯಗೊಂಡ ಎಲ್ಲ ಆನೆಗಳೂ ಭಯಂಕರವಾಗಿ ಕಿರುಚಿಕೊಳ್ಳುತ್ತಾ ದಿಕ್ಕಾಪಾಲಾಗಿ ಓಡಿಹೋದುವು. ಪುನಃ ಭೀಮಸೇನನು ಬಹಳ ವೇಗವಾಗಿ ದ್ರೋಣರ ಸೈನ್ಯದ ಮೇಲೆ ಆಕ್ರಮಣವನ್ನು ನಡೆಸಿದನು. ಎತ್ತರವಾದ ಅಲೆಗಳಿಂದ ಕೂಡಿರುವ ಸಮುದ್ರವನ್ನು ತೀರಪ್ರದೇಶವು ತಡೆದು ನಿಲ್ಲಿಸುವಂತೆ–ದ್ರೋಣರು ಭೀಮಸೇನನನ್ನು ತಡೆದು ನಿಲ್ಲಿಸಿದರು. ದ್ರೋಣರು ನಸುನಗುತ್ತಲೇ ಭೀಮಸೇನನ ನೆತ್ತಿಯನ್ನು ನಾರಾಚದಿಂದ ಪ್ರಹರಿಸಿದರು. ಅದರಿಂದ ಭೀಮಸೇನನು ಊರ್ಧ್ವರಶ್ಮಿಗಳಿಂದ ಕೂಡಿದ ಆದಿತ್ಯನಂತೆಯೇ ಪ್ರಕಾಶಿಸಿದನು. ಅರ್ಜುನನಂತೆಯೇ ಭೀಮಸೇನನೂ ತಮ್ಮನ್ನು ಗೌರವಿಸುವನೆಂದು ಭಾವಿಸಿದ ಆಚಾರ್ಯರು ವೃಕೋದರನನ್ನು ಕುರಿತು ಹೇಳಿದರು :

"ಭೀಮಸೇನ! ಮಹಾಬಲ! ನಿನ್ನ ಎದುರಾಗಿ ನಿಂತಿರುವ ಶತ್ರುವಾದ ನನ್ನನ್ನು ಪರಾಜಯಗೊಳಿಸದೇ ಶತ್ರುಸೈನ್ಯವನ್ನು ಪ್ರವೇಶಿಸಲು ನಿನಗೆ ಸಾಧ್ಯವಾಗುವುದಿಲ್ಲ. ನಿನ್ನ ತಮ್ಮನಾದ ಅರ್ಜುನನು ನನ್ನ ಅನುಮತಿಯನ್ನು ಪಡೆದುಕೊಂಡೇ ಸೈನ್ಯದೊಳಗೆ ಪ್ರವೇಶಿಸಿದನು. ಒಂದು ವೇಳೆ ನೀನೂ ಹಾಗೆ ಮಾಡುವುದಾದರೆ (ಅರ್ಜುನನಂತೆಯೇ ನನ್ನನ್ನು ಪ್ರಾರ್ಥಿಸಿಕೊಳ್ಳುವುದಾದರೆ) ಪ್ರವೇಶಿಸಲು ನಿನಗೂ ಅನುಮತಿಯನ್ನು ಕೊಡುತ್ತೇನೆ. ಹಾಗಿಲ್ಲದಿದ್ದರೆ–ನನ್ನ ಸೈನ್ಯದೊಳಗೆ ಪ್ರವೇಶಿಸಲು ನಿನಗೆ ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ."

ಕಳೆದುಹೋದ ಭಯವುಳ್ಳವನಾಗಿದ್ದ, ಕ್ರುದ್ಧನಾಗಿದ್ದ, ರಕ್ತದಂತೆ ಕೆಂಪಾದ ಕಣ್ಣುಗಳನ್ನು ಹೊಂದಿದ್ದ ಭೀಮಸೇನನು ಗುರುಗಳು ಹೇಳಿದ ಮಾತುಗಳನ್ನು ಕೇಳಿ ದ್ರೋಣರನ್ನು ಕುರಿತು ಹೇಳಿದನು :

"ಬ್ರಾಹ್ಮಣಕುಲಕಳಂಕರೇ! ನನ್ನ ತಮ್ಮನಾದ ಅರ್ಜುನನು ನಿಮ್ಮ

ಅನುಮತಿಯನ್ನು ಪಡೆದುಕೊಂಡು ಈ ಸಮರಾಂಗಣವನ್ನು ಪ್ರವೇಶಿಸಿಲ್ಲ. ದುರ್ಧರ್ಷನಾದ ಅವನು ಇಂದ್ರನ ಸೈನ್ಯವನ್ನಾದರೂ ಯಾವ ವಿಧವಾದ ಭಯವೂ ಇಲ್ಲದೇ ಪ್ರವೇಶಿಸಬಲ್ಲನು. ಆದರೆ ಅವನು ನಿಮ್ಮನ್ನು ಆಚಾರ್ಯರೆಂದು ಭಾವಿಸಿ ವಿಶೇಷವಾಗಿ ಗೌರವಿಸಿದ್ದಾನೆ. ಈ ಕಾರಣದಿಂದ ನೀವು ಸಮ್ಮಾನಿತರಾಗಿರುವಿರಿ (ನಿಮ್ಮ ಸೈನ್ಯವನ್ನು ಪ್ರವೇಶಿಸಲಾಗದೇ ನಿಮ್ಮನ್ನು ಗೌರವಿಸಿದನೆಂದು ಭಾವಿಸಬೇಡಿ). ಆದರೆ :

**ನಾರ್ಜುನೋಽಹಂ ಘೃಣೀ ದ್ರೋಣ ಭೀಮಸೇನೋಽಸ್ಮಿ ತೇ ರಿಪುಃ ||**

ದ್ರೋಣರೇ! ನಾನು ದಯಾಮೂರ್ತಿಯಾದ ಅರ್ಜುನನಲ್ಲ. ನಿಮ್ಮ ಪರಮಶತ್ರುವಾದ ಭೀಮಸೇನನಾಗಿದ್ದೇನೆ.

**ಪಿತಾ ನಸ್ತ್ವಂ ಗುರುರ್ಬನ್ಧುಸ್ತಥಾ ಪುತ್ರಾಸ್ತು ತೇ ವಯಮ್ |**
**ಇತಿ ಮನ್ಯಾಮಹೇ ಸರ್ವೇ ಭವನ್ತಂ ಪ್ರಣತಾಃ ಸ್ಥಿತಾಃ |**
**ಅದ್ಯ ತದ್ವಿಪರೀತಂ ತೇ ವದತೋಽಸ್ಮಾಸು ದೃಶ್ಯತೇ ||೫೦||**

'ನೀವೇ ನಮ್ಮ ತಂದೆ, ಗುರು ಮತ್ತು ಬಂಧುಗಳು. ನಾವು ನಿಮ್ಮ ಮಕ್ಕಳು'–ಹೀಗೆಂದೇ ಭಾವಿಸಿ ನಾವೆಲ್ಲರೂ ನಿಮಗೆ ವಿನೀತರಾಗಿಯೇ ಇದ್ದೆವು. ಆದರೆ ಈಗ ನೀವು ಆಡುತ್ತಿರುವ ಮಾತನ್ನು ನೋಡಿದರೆ ನಮ್ಮ ಮೇಲೆ ನಿಮಗೆ ತದ್ವಿರುದ್ಧವಾದ ಭಾವನೆಯೇ ಇರುವುದು ಸ್ಪಷ್ಟವಾಗಿ ಕಾಣುತ್ತಿದೆ.

ನೀವು ನಮ್ಮನ್ನು ಶತ್ರುಗಳೆಂದು ಭಾವಿಸುವಿರಾದರೆ ಅದು ಹಾಗೆಯೇ ಸರಿ. ಭೀಮಸೇನನಾದ ನಾನು ನಿಮ್ಮ ಶತ್ರುವು ಮಾಡಬೇಕಾಗಿರುವ ಕಾರ್ಯವನ್ನೇ ಮಾಡುತ್ತೇನೆ."

ಹೀಗೆ ಹೇಳಿದ ಭೀಮಸೇನನು ಯಮಧರ್ಮನು ಕಾಲದಂಡವನ್ನು ಮೇಲಕ್ಕೆತ್ತುವಂತೆಯೇ–ತನ್ನ ಗದೆಯನ್ನು ಮೇಲಕ್ಕೆತ್ತಿ ಗರಗರನೆ ತಿರುಗಿಸಿ ದ್ರೋಣರ ರಥದ ಕಡೆಗೆ ರಭಸದಿಂದೆಸೆದನು. ಅಷ್ಟರೊಳಗಾಗಿ ದ್ರೋಣರು ರಥದಿಂದ ಕೆಳಕ್ಕೆ ನೆಗೆದಿದ್ದರು. ಚಂಡಮಾರುತವು ತನ್ನ ವೇಗದಿಂದ ನೂರಾರು ವೃಕ್ಷಗಳನ್ನು ಬುಡಮೇಲು ಮಾಡುವಂತೆ–ಭೀಮಪ್ರಮುಕ್ತವಾದ ಗದೆಯು ಅಶ್ವ-ಸೂತ-ಧ್ವಜಸಹಿತವಾದ ದ್ರೋಣರ ರಥವನ್ನು ನುಚ್ಚು ನೂರಾಗಿ ಮಾಡಿಬಿಟ್ಟಿತು. ಅಷ್ಟು ಮಾತ್ರವಲ್ಲದೇ ಅನೇಕಯೋಧರನ್ನೂ

ಧೂಳೀಪಟಲಮಾಡಿತು. ರಥೋತ್ತಮನಾದ ಭೀಮಸೇನನನ್ನು ಪುನಃ ನಿನ್ನ ಮಕ್ಕಳು ಸುತ್ತುಗಟ್ಟಿದರು. ಯೋಧಶ್ರೇಷ್ಠರಾದ ದ್ರೋಣರೂ ಮತ್ತೊಂದು ರಥವನ್ನು ಹತ್ತಿ ವ್ಯೂಹದ ಹೆಬ್ಬಾಗಿಲಿಗೆ ಹೋಗಿ ಯುದ್ಧ ಸನ್ನದ್ಧರಾಗಿ ನಿಂತರು. ಅನಂತರ ಕ್ರುದ್ಧನಾದ, ಪರಾಕ್ರಮಿಯಾದ ಭೀಮ ಸೇನನು ತನ್ನ ಮುಂದಿದ್ದ ರಥಸೈನ್ಯವನ್ನು ಬಾಣಗಳಿಂದ ಮುಚ್ಚಿಬಿಟ್ಟನು. ಮಹಾರಥರಾದ, ಜಯಗಳಿಸಬೇಕೆಂಬ ಆಸೆಯಿಂದಿದ್ದ ಭೀಮಬಲರಾದ ನಿನ್ನ ಮಕ್ಕಳು ಭೀಮನಿಂದ ಪ್ರಹರಿಸಲ್ಪಡುತ್ತಿದ್ದರೂ ಅವನೊಡನೆ ಕೆಚ್ಚೆದೆ ಯಿಂದಲೇ ಕಾದಾಡುತ್ತಿದ್ದರು. ಅನಂತರ ಕ್ರುದ್ಧನಾದ ದುಃಶಾಸನನು ಪಾಂಡುನಂದನನಾದ ಭೀಮಸೇನನನ್ನು ವಧಿಸುವ ಇಚ್ಛೆಯಿಂದ ಸಂಪೂರ್ಣ ವಾಗಿ ಲೋಹಮಯವಾಗಿದ್ದ, ತೀಕ್ಷ್ಣವಾಗಿದ್ದ ರಥಶಕ್ತಿಯನ್ನು ಭೀಮನ ಮೇಲೆ ರಭಸದಿಂದೆಸೆದನು. ನಿನ್ನ ಮಗನಿಂದ ಎಸೆಯಲ್ಪಟ್ಟು, ರಭಸದಿಂದ ಬಂದು ಮೇಲೆ ಬೀಳುವುದರಲ್ಲಿದ್ದ ಮಹಾಶಕ್ತಿಯನ್ನು ಭೀಮಸೇನನು ಎರಡಾಗಿ ಕತ್ತರಿಸಿಬಿಟ್ಟನು. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಸಂಕ್ರುದ್ಧನಾದ ಭೀಮಸೇನನು ತೀಕ್ಷ್ಣವಾದ ಬೇರೆಯ ಮೂರು ಬಾಣ ಗಳಿಂದ ಕುಂಡಭೇದೀ, ಸುಷೇಣ, ದೀರ್ಘನೇತ್ರ ಎಂಬ ನಿನ್ನ ಮೂವರು ಮಕ್ಕಳನ್ನು ಸಂಹರಿಸಿದನು. ಅನಂತರ ಭೀಮಸೇನನು ಯುದ್ಧಮಾಡುತ್ತಿದ್ದ ನಿನ್ನ ವೀರಪುತ್ರರಲ್ಲಿ ಕುರುಗಳ ಕೀರ್ತಿವರ್ಧಕನಾಗಿದ್ದ, ವೀರನಾದ ವೃಂದಾರಕನನ್ನು ಸಂಹರಿಸಿದನು. ಪುನಃ ಮೂರು ನಿಶಿತವಾದ ಬಾಣಗಳಿಂದ ಅಭಯ, ರೌದ್ರಕರ್ಮಾ, ದುರ್ವಿಲೋಚನ–ಎಂಬ ನಿನ್ನ ಮೂವರು ಮಕ್ಕ ಳನ್ನೂ ಸಂಹರಿಸಿದನು. ಈ ರೀತಿಯಲ್ಲಿ ಬಲಿಷ್ಠನಾದ ಭೀಮಸೇನನಿಂದ ನಿನ್ನ ಮಕ್ಕಳು ವಧಿಸಲ್ಪಡುತ್ತಿದ್ದರೂ ನಿನ್ನ ವೀರಪುತ್ರರು ಹಿಮ್ಮೆಟ್ಟದೇ ಯೋಧ ಶ್ರೇಷ್ಠನಾದ ಭೀಮಸೇನನನ್ನು ನಾಲ್ಕೂ ಕಡೆಗಳಿಂದಲೂ ಸೈನ್ಯಸಮೇತರಾಗಿ ಮುತ್ತಿಗೆ ಹಾಕಿದರು. ವರ್ಷರ್ತುವಿನಲ್ಲಿ ಮೇಘಗಳು ಜಲಧಾರೆಗಳಿಂದ ಪರ್ವತವನ್ನು ಮುಚ್ಚಿಬಿಡುವಂತೆ–ನಿನ್ನ ಮಕ್ಕಳು ಭಯಂಕರಕರ್ಮನಾದ ಭೀಮಸೇನನನ್ನು ಬಹುಸಂಖ್ಯಾತವಾದ ಬಾಣಗಳಿಂದ ಮುಚ್ಚಿಬಿಟ್ಟರು. ಪರ್ವತವು ಕಲ್ಲಿನ ಮಳೆಯನ್ನು ಸಹಿಸಿಕೊಳ್ಳುವಂತೆ–ಭೀಮಸೇನನು ನಿನ್ನ ಮಕ್ಕಳು ಸುರಿಸುತ್ತಿದ್ದ ಬಾಣಗಳ ಮಳೆಯನ್ನು ಸಹಿಸಿಕೊಳ್ಳುತ್ತಿದ್ದನು.

ಶತ್ರುಹಂತಕನಾದ ಪಾಂಡವದಾಯಾದನು ನಿನ್ನ ಪುತ್ರರ ಅನೇಕ ಬಾಣಗಳ ಪ್ರಹಾರದಿಂದ ಸ್ವಲ್ಪವಾದರೂ ವ್ಯಥಿತನಾಗಲಿಲ್ಲ. ಯಾವಾಗಲೂ ಜೊತೆ ಯಲ್ಲಿಯೇ ಇರುತ್ತಿದ್ದ ವಿಂದಾನುವಿಂದರನ್ನೂ ಮತ್ತು ಸುವರ್ಮಾಣನೆಂಬ ನಿನ್ನ ಮತ್ತೊಬ್ಬ ಮಗನನ್ನೂ ಭೀಮಸೇನನು ನಗುನಗುತ್ತಲೇ ಯಮನ ಮನೆಗೆ ಕಳುಹಿಸಿಕೊಟ್ಟನು. ಬಳಿಕ ಸುದರ್ಶನನೆಂಬ ನಿನ್ನ ವೀರಪುತ್ರನನ್ನು ಬಹಳ ಶೀಘ್ರವಾಗಿ ನಿಶಿತವಾದ ಬಾಣದಿಂದ ಪ್ರಹರಿಸಿದನು. ಅವನೂ ಸಹ ಒಡನೆಯೇ ಕೆಳಕ್ಕುರುಳಿ ಪ್ರಾಣತೊರೆದನು. ಈ ರೀತಿಯಲ್ಲಿ ಪಾಂಡುನಂದನ ನಾದ ಭೀಮಸೇನನು ಎಲ್ಲ ದಿಕ್ಕುಗಳಿಗೂ ದೃಷ್ಟಿಯನ್ನು ಹಾಯಿಸುತ್ತಾ ಶೀಘ್ರವಾಗಿ ಹೋಗುವ ಬಾಣಗಳಿಂದ ತನ್ನೆದುರಾಗಿದ್ದ ರಥಸೈನ್ಯವನ್ನು ಧ್ವಂಸಗೊಳಿಸಿದನು. ಭೀಮಸೇನನ ರಥದ ಗಡ-ಗಡಾಶಬ್ದಗಳಿಂದಲೂ, ಅವನು ಪದೇ ಪದೇ ಮಾಡುತ್ತಿದ್ದ ಸಿಂಹಗರ್ಜನೆಗಳಿಂದಲೂ, ನಿನ್ನ ಮಕ್ಕಳು–ಸಿಂಹವನ್ನು ನೋಡಿದ ಮೃಗಗಳೋಪಾದಿಯಲ್ಲಿ–ಭಯಗೊಂಡು ನಿರುತ್ಸಾಹಿಗಳಾದರು.

ಭೀಮಸೇನನ ಭಯದಿಂದ ಪೀಡಿತರಾದ ನಿನ್ನ ಮಕ್ಕಳೆಲ್ಲರೂ ಒಡ ನೆಯೇ ಪಲಾಯನಮಾಡಿದರು. ಕುಂತೀಪುತ್ರನಾದ ಭೀಮಸೇನನೂ ಸಹ ಬಹಳ ದೂರದವರೆಗೂ ಅವರನ್ನು ಅಟ್ಟಿಸಿಕೊಂಡೇ ಹೋದನು. ಭೀಮ ಸೇನನು ರಣಾಂಗಣದ ಸುತ್ತಲೂ ಇದ್ದ ಕೌರವಯೋಧರನ್ನು ಬಹಳವಾಗಿ ಗಾಯಗೊಳಿಸಿದನು. ಭೀಮಸೇನನಿಂದ ಪ್ರಹೃತರಾಗುತ್ತಿದ್ದ ನಿನ್ನ ಮಕ್ಕಳೂ ಮತ್ತು ನಿನ್ನ ಕಡೆಯ ಯೋಧರೂ ಭೀಮಸೇನನನ್ನು ಅಲ್ಲಿಯೇ ಬಿಟ್ಟು ಶ್ರೇಷ್ಠ ವಾದ ತಮ್ಮ ವಾಹನಗಳನ್ನು ಚಪ್ಪರಿಸುತ್ತಾ ರಣಾಂಗಣದಿಂದ ಪಲಾಯನ ಮಾಡಿದರು. ಮಹಾಬಲನಾದ ಭೀಮಸೇನನು ಹೀಗೆ ನಿನ್ನ ಮಕ್ಕಳನ್ನೂ, ನಿನ್ನ ಕಡೆಯ ಸೈನಿಕರನ್ನೂ ಜಯಿಸಿ ಸಿಂಹದ ಗರ್ಜನೆಗೆ ಸಮನಾಗಿ ಗರ್ಜನೆ ಮಾಡುತ್ತಾ, ತನ್ನ ಭುಜಗಳನ್ನು ಗಟ್ಟಿಯಾಗಿ ತಟ್ಟಿಕೊಂಡನು. ಗಟ್ಟಿಯಾಗಿ ಚಪ್ಪಾಳೆತಟ್ಟುತ್ತಾ ಮಹಾಬಲನಾದ ಭೀಮಸೇನನು ರಥಸೈನ್ಯವನ್ನು ಹೆದರಿಸುತ್ತಾ; ಶ್ರೇಷ್ಠರಾದ ಯೋಧರನ್ನು ಸಂಹಾರಮಾಡುತ್ತಾ, ರಥಸೈನಿಕ ರನ್ನು ದಾಟಿಕೊಂಡು ದ್ರೋಣರ ಸೈನ್ಯದ ಮೇಲೆ ದಾಳಿಮಾಡಲು ಹೋದನು.

೧೨೭ನೆಯ ಅಧ್ಯಾಯವು ಮುಗಿಯಿತು.

೧೨೮ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಭೀಮಸೇನನು ದ್ರೋಣರನ್ನೂ ಮತ್ತು ಇತರ ಕೌರವಯೋಧರನ್ನೂ ಪರಾಜಯಗೊಳಿಸಿದುದು : ದ್ರೋಣರ ರಥವನ್ನು ಎಂಟು ಬಾರಿ ಎಸೆದುದು : ಭೀಮಸೇನನು ಕೃಷ್ಣಾರ್ಜುನರನ್ನು ಸಮೀಪಿಸಿದುದು : ಸಿಂಹನಾದದ ಮೂಲಕ ಯುಧಿಷ್ಠಿರನಿಗೆ ಸೂಚನೆಯನ್ನಿತ್ತುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ರಥಸೈನ್ಯವನ್ನು ಅತಿಕ್ರಮಿಸಿ ಬಂದ ಭೀಮಸೇನನನ್ನು ತಡೆಯುವ ಇಚ್ಛೆಯಿಂದ ದ್ರೋಣರು ಅಟ್ಟಹಾಸಪೂರ್ವಕವಾಗಿ ನಗುತ್ತಾ ಪಾಂಡವನ ಮೇಲೆ ಬಾಣಗಳ ಮಳೆಗರೆದರು. ದ್ರೋಣರು ಬಿಡುತ್ತಿದ್ದ ಬಾಣಗಳೆಲ್ಲವನ್ನೂ ನುಂಗಿಹಾಕುತ್ತಿದ್ದಾನೆಯೋ ಎಂಬಂತೆ ಭೀಮಸೇನನು ಅವರ ಬಾಣಗಳೆಲ್ಲವನ್ನೂ ತನ್ನ ಬಾಣಗಳಿಂದ ನಿರಸನಗೊಳಿಸುತ್ತಾ, ಕೌರವ ಸೋದರರರನ್ನು ಬಲವೆಂಬ ಮಾಯೆಯಿಂದ ಭ್ರಾಂತರನ್ನಾಗಿ ಮಾಡುತ್ತಾ ಅವರ ಮೇಲೆ ದಾಳಿಯನ್ನು ಉಪಕ್ರಮಿಸಿದನು. ಶ್ರೇಷ್ಠಧನುಷ್ಮಂತರಾದ ರಾಜರು ನಿನ್ನ ಮಕ್ಕಳಿಂದಲೂ ಪ್ರೇರಿತರಾಗಿ ಅತ್ಯಂತವೇಗಯುಕ್ತರಾಗಿ ಭೀಮಸೇನನನ್ನು ಎಲ್ಲ ಕಡೆಗಳಿಂದಲೂ ಆಕ್ರಮಿಸಿದರು. ಶತ್ರುಯೋಧರಿಂದ ಆಕ್ರಮಿತನಾಗಿದ್ದರೂ ಸಹ ಭೀಮಸೇನನು ಗಹ-ಗಹಿಸಿ ನಗುತ್ತಲೇ ಸುಘೋರವಾದ, ಶತ್ರುಪಕ್ಷವಿನಾಶಿನಿಯಾದ ಗದೆಯನ್ನು ಮೇಲಕ್ಕೆತ್ತಿ ವೇಗವಾಗಿ ತಿರುಗಿಸಿ ಸಿಂಹದಂತೆ ಗರ್ಜನೆಮಾಡುತ್ತಾ ಶತ್ರುಪಕ್ಷದ ರಾಜರ ಮೇಲೆ ರಭಸದಿಂದೆಸೆದನು.

ಸುಸ್ಥಿರವಾದ ಚಿತ್ತವೃತ್ತಿಯುಳ್ಳ ಇಂದ್ರನಿಂದ ಪ್ರಮುಕ್ತವಾದ ವಜ್ರಾಯುಧದಂತೆಯೇ–ಭೀಮಸೇನನಿಂದ ಪ್ರಮುಕ್ತವಾದ ಆ ಮಹಾಗದೆಯು ನಿನ್ನ ಪಕ್ಷದ ಅನೇಕಸೈನಿಕರನ್ನು ಧ್ವಂಸಮಾಡಿತು. ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ ಆ ಮಹಾಗದೆಯು ತನ್ನ ಭಯಂಕರವಾದ ಧ್ವನಿಯಿಂದ ಭೂಮಂಡಲವನ್ನೇ ತುಂಬುತ್ತಾ ನಿನ್ನ ಮಕ್ಕಳನ್ನು ತ್ರಾಸಗೊಳಿಸಿತು. ತೇಜೋವಿಶಿಷ್ಟವಾಗಿದ್ದ, ಬಹಳ ರಭಸದಿಂದ ಮೇಲೆ ಬೀಳಲು ಬರುತ್ತಿದ್ದ ಆ ಮಹಾಗದೆಯನ್ನು ನೋಡಿದೊಡನೆಯೇ ನಿನ್ನ ಕಡೆಯ ಸೈನಿಕರು ಭಯಂಕರವಾಗಿ ಕೂಗಿಕೊಳ್ಳುತ್ತಾ ಪಲಾಯನಮಾಡಿದರು. ಸಹಿಸಲು ಅಶಕ್ಯವಾದ ಆ

ಗದೆಯ ಘೋರಶಬ್ದವನ್ನು ಕೇಳಿ ಅನೇಕ ಪದಾತಿಸೈನಿಕರು ನಿಂತಿದ್ದಂತೆಯೇ ಕೆಳಕ್ಕೆ ಕುಸಿದರು. ರಥಿಕರು ರಥಗಳಿಂದ ಕೆಳಕ್ಕೆ ಬಿದ್ದರು. ಗದಾಪಾಣಿಯಾದ ಭೀಮಸೇನನಿಂದ ಬಾರಿಬಾರಿಗೂ ಪ್ರಹೃತರಾಗುತ್ತಿದ್ದ ನಿನ್ನ ಕಡೆಯ ಸೈನಿಕರು ಭಯಗೊಂಡವರಾಗಿ–ವ್ಯಾಘ್ರದ ವಾಸನೆಯನ್ನು ತಿಳಿದು ಮೃಗಗಳು ಓಡಿ ಹೋಗುವಂತೆ–ಓಡಿಹೋದರು. ಕೌಂತೇಯನು ಯುದ್ಧದಲ್ಲಿ ಶತ್ರುಗಳಾದ ಮತ್ತು ದುರಾಸದರಾದ ನಿನ್ನ ಮಕ್ಕಳನ್ನು ಓಡಿಸಿ–ಪಕ್ಷಿರಾಜನಾದ ಗರುಡ ನೋಪಾದಿಯಲ್ಲಿ ಅತ್ಯಂತವೇಗದಿಂದ ಆ ಸೇನಾಸಮುದಾಯವನ್ನು ಅತಿ ಕ್ರಮಿಸಿ ಮುಂದೆ ಹೋದನು. ಈ ರೀತಿಯಲ್ಲಿ ಸೈನಿಕರ ಸಂಹಾರಕ್ರಿಯೆಯನ್ನು ಅವ್ಯಾಹತವಾಗಿ ನಡೆಸುತ್ತಿದ್ದ, ರಥಶ್ರೇಷ್ಠರಲ್ಲಿಯೇ ಶ್ರೇಷ್ಠರಥಿಯಾದ ಭೀಮ ಸೇನನನ್ನು ದ್ರೋಣರು ಪುನಃ ಎದುರಿಸಿದರು. ಅಲೆಗಳ ರೂಪವಾದ ಬಾಣ ಗಳ ಸಾಲುಗಳಿಂದ ದ್ರೋಣರು ಭೀಮಸೇನನನ್ನು ಮುಂದೆ ಹೋಗದಂತೆ ತಡೆದು ಗಟ್ಟಿಯಾಗಿ ಸಿಂಹನಾದವನ್ನು ಮಾಡಿದರು. ಆ ಗರ್ಜನೆಯು ಪಾಂಡವರಿಗೆ ಭಯವನ್ನುಂಟುಮಾಡಿತು. ಅನಂತರ ಮಹಾತ್ಮನಾದ ಭೀಮ ಸೇನನಿಗೂ ಮತ್ತು ದ್ರೋಣರಿಗೂ ಬಹುಭಯಂಕರವಾದ, ದೇವಾಸುರ ಸಂಗ್ರಾಮಕ್ಕೆ ಸಮಾನವಾದ ಯುದ್ಧವು ನಡೆಯಿತು. ಯಾವಾಗ ದ್ರೋಣರು ತಮ್ಮ ಧನುಸ್ಸಿನಿಂದ ಹೊರಬರುತ್ತಿದ್ದ ತೀಕ್ಷ್ಣವಾದ ಬಾಣಗಳಿಂದ ನೂರಾರು-ಸಾವಿರಾರು ಯೋಧರನ್ನು ಸಂಹರಿಸಲು ಉಪಕ್ರಮಿಸಿದರೋ–ಆಗ ಬಲಿಷ್ಠನಾದ ಭೀಮಸೇನನು ಬಹಳ ವೇಗದಿಂದ ರಥದಿಂದ ಕೆಳಕ್ಕೆ ಧುಮುಕಿ ಎರಡು ಕಣ್ಣುಗಳನ್ನೂ ಮುಚ್ಚಿಕೊಂಡು ತಲೆಯನ್ನು ಹೆಗಲಿನ ಮಧ್ಯದಲ್ಲಿ ಕುಗ್ಗಿಸಿ, ಎರಡು ಕೈಗಳನ್ನೂ ವಕ್ಷಃಸ್ಥಳದಲ್ಲಿಟ್ಟುಕೊಂಡು ಮನಸ್ಸು, ವಾಯು ಮತ್ತು ಗರುಡರ ವೇಗವನ್ನು ಆಶ್ರಯಿಸಿ ಪದಾತಿಯಾಗಿಯೇ ದ್ರೋಣರ ಕಡೆಗೆ ಓಡಿದನು. (ದ್ರೋಣರ ಬಾಣಗಳು ಮಳೆಯ ರೂಪದಲ್ಲಿ ಭೀಮಸೇನನ ಮೇಲೆ ಸುರಿಯುತ್ತಿದ್ದಿತು. ಬಾಣಗಳಿಗೆದುರಾಗಿ ಭೀಮ ಸೇನನು ಓಡುತ್ತಿದ್ದನು. ಹಾಗೆ ಓಡಿಹೋಗುವಾಗ ಕಣ್ಣುಗಳನ್ನು ಮುಚ್ಚಿ ಕೊಂಡನು. ಶಿರಸ್ಸನ್ನು ಎದೆಯಲ್ಲಿ ಹುದುಗಿಸಿ ಎರಡು ತೋಳುಗಳಿಂದಲೂ ತನ್ನ ವಕ್ಷಃಸ್ಥಳವನ್ನು ಭದ್ರವಾಗಿ ಮುಚ್ಚಿಕೊಂಡನು. (ಬಾಣವು, ಕುತ್ತಿಗೆಗೆ ವಕ್ಷಃ ಸ್ಥಳ ಮತ್ತು ಕಣ್ಣಿಗೆ ಬೀಳಕೂಡದೆಂದು ಭೀಮಸೇನನು ಹೀಗೆ ಮಾಡಿದನು.)

ಯಾವ ರೀತಿಯಲ್ಲಿ ಗೂಳಿಯು ಮಳೆಯನ್ನು ಸಂತೋಷದಿಂದಲೇ ತಡೆದು ಕೊಳ್ಳುತ್ತದೆಯೋ–ಅದೇ ರೀತಿಯಲ್ಲಿ ನರವ್ಯಾಘ್ರನಾದ ಭೀಮಸೇನನು ದ್ರೋಣರು ಬಿಡುತ್ತಿದ್ದ ಬಾಣಗಳ ವರ್ಷವನ್ನು ಲೀಲೆಯಿಂದಲೇ ಪರಿಗ್ರಹಿಸಿ ದನು. ಬಾಣಗಳಿಂದ ಪ್ರಹೃತನಾಗುತ್ತಿದ್ದರೂ ಮಹಾಬಲನಾದ ಭೀಮಸೇನನು ದ್ರೋಣರ ರಥವನ್ನು ಈಷಾದಂಡದ ಸ್ಥಳದಲ್ಲಿ (ಮೂಕಿಯ ಮರದ ಹತ್ತಿರದಲ್ಲಿ) ಹಿಡಿದುಕೊಂಡು ದೂರಕ್ಕೆ ತಳ್ಳಿಬಿಟ್ಟನು. ಭೀಮನಿಂದ ತಳ್ಳಲ್ಪಟ್ಟ ರಥವು ಬಹಳ ದೂರಕ್ಕೆ ಹೋಗಿಬೀಳಲಾಗಿ, ದ್ರೋಣರು ಆ ರಥವನ್ನು ಬಿಟ್ಟು ಮತ್ತೊಂದು ರಥದಲ್ಲಿ ಕುಳಿತು ಪುನಃ ಶಕಟವ್ಯೂಹದ ಮಹಾದ್ವಾರಕ್ಕೆ ಹೋದರು. ಭಗ್ನವಾದ ಉತ್ಸಾಹವುಳ್ಳವರಾಗಿದ್ದರೂ ಪುನಃ ಮತ್ತೊಂದು ರಥದಲ್ಲಿ ಕುಳಿತುಬಂದ ಆಚಾರ್ಯರನ್ನು ನೋಡಿ ಬಹಳವಾಗಿ ಕೋಪ ಗೊಂಡ ಭೀಮಸೇನನು ಪುನಃ ವೇಗವಾಗಿ ಹೋಗಿ ರಥದ ಮೂಕಿಯನ್ನು ಹಿಡಿದು ಅತಿರಥರಾದ ದ್ರೋಣರ ಸಮೇತವಾಗಿ ಆ ರಥವನ್ನೂ ಬಹಳ ದೂರಕ್ಕೆ ತಳ್ಳಿಬಿಟ್ಟನು. ಈ ರೀತಿಯಲ್ಲಿ ಭೀಮನು ದ್ರೋಣರ ಎಂಟು ರಥ ಗಳನ್ನು ತಳ್ಳಿದನು. ನಿಮೇಷಮಾತ್ರದಲ್ಲಿ ದ್ರೋಣರೂ ಮತ್ತೊಂದು ರಥದಲ್ಲಿ ಕುಳಿತು ವ್ಯೂಹದ್ವಾರಕ್ಕೆ ಬಂದು ವಿಸ್ಮಯದಿಂದ ವಿಕಸಿತವಾದ ಕಣ್ಣುಗಳುಳ್ಳ ನಿನ್ನ ಯೋಧರಿಗೆ ಕಾಣಿಸಿಕೊಳ್ಳುತ್ತಿದ್ದರು.

ಆ ಕ್ಷಣದಲ್ಲಿ ದ್ರೋಣರ ಸಾರಥಿಯೂ ಸಹ ಅಷ್ಟೇ ವೇಗದಿಂದ ಕುದುರೆಗಳನ್ನು ಓಡಿಸುತ್ತಿದ್ದನು. ತಾನು ರಥವನ್ನು ನಿರ್ಮೂಲನಮಾಡಿದಷ್ಟೇ ವೇಗದಲ್ಲಿ ದ್ರೋಣರು ಮತ್ತೊಂದು ರಥವನ್ನು ಹತ್ತಿಬರುತ್ತಿದ್ದುದೂ ಮತ್ತು ಸಾರಥಿಯೂ ಸಹ ಭ್ರಾಂತಿಗೊಳ್ಳದೇ ಅಶ್ವಗಳನ್ನು ನಯನಮಾಡು ತ್ತಿದ್ದುದೂ–ಭೀಮಸೇನನಿಗೆ ಪರಮಾದ್ಭುತವಾಗಿ ಕಂಡಿತು. ಅನಂತರ ಭೀಮ ಸೇನನು ತನ್ನ ರಥದಲ್ಲಿ ಕುಳಿತು ನಿನ್ನ ಮಗನ ಸೈನ್ಯದ ಮೇಲೆ ಪುನಃ ದಾಳಿಮಾಡಲು ಉಪಕ್ರಮಿಸಿದನು. ಚಂಡಮಾರುತವು ವೃಕ್ಷಗಳನ್ನು ಬುಡಮೇಲಾಗಿ ಮಾಡುವಂತೆ–ಕ್ಷತ್ರಿಯರನ್ನು ಧೂಳಿಪಟಲಮಾಡುತ್ತಲೂ, ಪೂರ್ಣಪ್ರವಾಹದಿಂದ ಕೂಡಿರುವ ಸಿಂಧೂನದಿಯ ವೇಗವು ತೀರಪ್ರದೇಶದ ವೃಕ್ಷಗಳನ್ನು ಕೊಚ್ಚಿಕೊಂಡು ಹೋಗುವಂತೆ–ಎದುರಾಗಿ ಸಿಕ್ಕಿದ ಸೈನಿಕರನ್ನು ಸೀಳಿಹಾಕುತ್ತಲೂ ಭೀಮಸೇನನು ಮುಂದುವರಿದನು. ಅತಿಬಲನಾದ, ವೀರ

ನಾದ ಭೀಮಸೇನನು ಹಾರ್ದಿಕ್ಯನಿಂದ ರಕ್ಷಿಸಲ್ಪಡುತ್ತಿದ್ದ ಭೋಜಾನೀಕಕ್ಕೆ ಹೋಗಿ ಹಾರ್ದಿಕ್ಯನ ಸೇನೆಯನ್ನು ಧ್ವಂಸಗೊಳಿಸಿ ಆ ಸೇನಾಸಮೂಹವನ್ನೂ ಅತಿಕ್ರಮಿಸಿ ಮುಂದೆಹೋದನು. ಶಾರ್ದೂಲವು ಎತ್ತುಗಳನ್ನು ಭಯಪಡಿಸುವಂತೆ–ಪಾಂಡವನು ಚಪ್ಪಾಳೆಯಿಂದಲೇ ಸೈನ್ಯಸಮೂಹಗಳನ್ನು ಭಯಪಡಿಸುತ್ತಾ ಎಲ್ಲ ಸೈನ್ಯಗಳನ್ನೂ ಜಯಿಸಿದನು. ಭೋಜನ ಸೈನ್ಯವನ್ನೂ ಅತಿಕ್ರಮಿಸಿ ಅನಂತರದಲ್ಲಿ ದರದರ ವಿಶಾಲವಾದ ಸೈನ್ಯವನ್ನೂ, ಮ್ಲೇಚ್ಛಗಣಗಳನ್ನೂ, ಇನ್ನೂ ಅನೇಕ ಯುದ್ಧವಿಶಾರದರಾದ ಯೋಧರನ್ನೂ ಅತಿಕ್ರಮಿಸಿ, ಮುಂದೆ ಹೋಗಿ, ಶತ್ರುಸೈನ್ಯದೊಡನೆ ಯುದ್ಧಮಾಡುತ್ತಿದ್ದ ಮಹಾರಥನಾದ ಸಾತ್ಯಕಿಯನ್ನೂ ನೋಡಿದ, ಪ್ರಯತ್ನಶೀಲನಾದ ಕೌಂತೇಯನು ರಥದ ಮೂಲಕವಾಗಿ ಬಹಳ ವೇಗದಿಂದ ಮುಂದೆ ಹೋದನು. ಮಹಾರಾಜ! ಧನಂಜಯನನ್ನು ಕಾಣಲಿಚ್ಛಿಸಿದ್ದ ಪಾಂಡುನಂದನನಾದ ಭೀಮಸೇನನು ನಿನ್ನ ಕಡೆಯ ಯೋಧರೆಲ್ಲರನ್ನೂ ಅತಿಕ್ರಮಿಸಿ ಮುಂದೆ-ಮುಂದೆ ಹೋಗುತ್ತಿದ್ದನು. ಪರಾಕ್ರಮಿಯಾದ ಭೀಮಸೇನನು ಅನತಿದೂರದಲ್ಲಿಯೇ ಸಿಂಧುರಾಜನ ವಧಾರ್ಥವಾಗಿ ಅತ್ಯಂತಪರಾಕ್ರಮದಿಂದ ಹೋರಾಡುತ್ತಿದ್ದ ಮಹಾರಥನಾದ ಅರ್ಜುನನನ್ನು ಕಂಡನು. ಅರ್ಜುನನನ್ನು ಕಂಡೊಡನೆಯೇ ಯುಧಿಷ್ಠಿರನ ಆಜ್ಞಾನುಸಾರವಾಗಿ–ವರ್ಷಾಕಾಲದಲ್ಲಿ ಮೇಘವು ಗರ್ಜಿಸುವಂತೆ–ಪುರುಷವ್ಯಾಘ್ರನಾದ ಭೀಮಸೇನನು ಬಹಳ ಗಟ್ಟಿಯಾಗಿ ಸಿಂಹನಾದಗಳನ್ನು ಮಾಡಿದನು. ಕೌರವ್ಯ! ಘೋರತರವಾಗಿ ಗರ್ಜಿಸುತ್ತಿದ್ದ ಭೀಮಸೇನನ ಭಯಂಕರ ಸಿಂಹನಾದಗಳನ್ನು ಪಾರ್ಥ-ಕೃಷ್ಣರಿಬ್ಬರೂ ಕೇಳಿದರು. ಬಲಿಷ್ಠನಾದ ಭೀಮಸೇನನ ಸಿಂಹಗರ್ಜನೆಯನ್ನು ವೀರರಾದ ಕೃಷ್ಣ-ಪಾರ್ಥರು ಏಕಕಾಲದಲ್ಲಿ ಕೇಳಿ ವೃಕೋದರನನ್ನು ನೋಡುವ ಇಚ್ಛೆಯಿಂದ ಪುನಃ ಪುನಃ ಗರ್ಜಿಸುತ್ತಿದ್ದರು.

ಅನಂತರ ಎರಡು ಗೂಳಿಗಳು ಗುಟುರುಹಾಕುವಂತೆ–ಪಾರ್ಥನೂ ಮತ್ತು ಮಾಧವನೂ ಗಟ್ಟಿಯಾಗಿ ಗರ್ಜನೆಮಾಡುತ್ತಾ ಮುಂದೆ ನಡೆದರು.

ಭೀಮಸೇನನ ಸಿಂಹನಾದವನ್ನೂ, ಧನುಷ್ಮಂತನಾದ ಫಾಲ್ಗುನನ ಗರ್ಜನೆಯನ್ನೂ ಕೇಳಿ ಧರ್ಮಪುತ್ರನಾದ ಯುಧಿಷ್ಠಿರನು ಬಹಳ ಪ್ರಸನ್ನನಾದನು. ಆ ಇಬ್ಬರ ಸಿಂಹನಾದಗಳನ್ನೂ ಕೇಳಿ ಧರ್ಮರಾಜನು ಶೋಕರಹಿತ

ನಾದನು. ವಿಭುವಾದ ಯುಧಿಷ್ಠಿರನು ಯುದ್ಧದಲ್ಲಿ ಧನಂಜಯನಿಗೆ ವಿಜಯ ವನ್ನು ಆಶಿಸಿದನು. ಮದೋತ್ಕಟನಾದ ಭೀಮಸೇನನು ಹಾಗೆ ಗರ್ಜನೆ ಮಾಡುತ್ತಿರಲಾಗಿ, ಮಹಾಬಾಹುವಾದ, ಧರ್ಮಾತ್ಮರಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ತನ್ನಲ್ಲಿಯೇ ನಸುನಕ್ಕು ಭೀಮಸೇನನನ್ನು ಸ್ಮರಿಸಿ ತನ್ನ ಹೃದಯದಲ್ಲಿದ್ದುದನ್ನು ಮನಸ್ಸಿನಲ್ಲಿಯೇ ಹೇಳಿಕೊಂಡನು :

**ದತ್ತಾ ಭೀಮ ತ್ವಯಾ ಸಂವಿತ್ಕೃತಂ ಗುರುವಚಸ್ತಥಾ ।**
**ನ ಹಿ ತೇಷಾಂ ಜಯೋ ಯುದ್ಧೇ ಯೇಷಾಂ ದ್ವೇಷ್ಟಾಸಿ ಪಾಣ್ಡವ ।**
**ದಿಷ್ಟ್ಯಾ ಜೀವತಿ ಸಂಗ್ರಾಮೇ ಸವ್ಯಸಾಚೀ ಧನಂಜಯಃ ॥೪೦॥**

"ಭೀಮಸೇನ! ಪಾರ್ಥ-ಸಾತ್ಯಕಿಯರು ಬದುಕಿರುವ ಬಗೆಗೆ ನೀನು ಸೂಚನೆಯನ್ನು ಕೊಟ್ಟಿರುವೆ. ಗುರುವಿನ ಆಜ್ಞೆಯು ನಿನ್ನಿಂದ ಪರಿಪಾಲಿಸ ಲ್ಪಟ್ಟಿದೆ. ನೀನು ಯಾರನ್ನು ದ್ವೇಷಿಸುವೆಯೋ ಅವರಿಗೆ ಖಂಡಿತವಾಗಿಯೂ ಯುದ್ಧದಲ್ಲಿ ಜಯವೆಂಬುದಿಲ್ಲ. ಸವ್ಯಸಾಚಿಯಾದ ಧನಂಜಯನು ಭಾಗ್ಯ ವಶಾತ್ ಇನ್ನೂ ಬದುಕಿದ್ದಾನೆ. ಯಾವನು ಖಾಂಡವದಾಹದಲ್ಲಿ ಇಂದ್ರನನ್ನೂ ಸಹ ಯುದ್ಧದಲ್ಲಿ ಜಯಿಸಿ ಅಗ್ನಿದೇವನಿಗೆ ಸಂತೃಪ್ತಿಯನ್ನುಂಟುಮಾಡಿ ದನೋ–ಅಂತಹ ರಿಪುಹಂತಕನಾದ ಫಾಲ್ಗುನನು ಭಾಗ್ಯವಶಾತ್ ಇನ್ನೂ ಜೀವಿಸಿದ್ದಾನೆ. ದೇವತೆಗಳಿಂದಲೂ ಸುದುರ್ಜಯರಾಗಿದ್ದ ನಿವಾತಕವಚ ರೆಂಬ ರಾಕ್ಷಸರು ಧನುರೇಕಸಹಾಯನಾದ ಯಾವ ಅರ್ಜುನನಿಂದ ಪರಾಜಿತರಾದರೋ–ಆ ಅರ್ಜುನನು ಭಾಗ್ಯವಶಾತ್ ಇನ್ನೂ ಬದುಕಿದ್ದಾನೆ. ಗೋಗ್ರಹಣಕ್ಕಾಗಿ ಸಂಘಟಿತರಾಗಿ ಆಗಮಿಸಿದ್ದ ಎಲ್ಲ ಕೌರವರನ್ನೂ ವಿರಾಟ ನಗರದಲ್ಲಿ ಏಕಾಕಿಯಾಗಿ ಯಾವನು ಜಯಿಸಿದನೋ–ಆ ಅರ್ಜುನನು ದೇವರ ದಯೆಯಿಂದ ಇನ್ನೂ ಬದುಕಿದ್ದಾನೆ. ಯಾವನು ಮಹಾಯುದ್ಧದಲ್ಲಿ ತನ್ನ ಭುಜಬಲ–ಪರಾಕ್ರಮಗಳಿಂದ ಹದಿನಾಲ್ಕು ಸಾವಿರ ಕಾಲಕೇಯರನ್ನು ಸಂಹರಿಸಿದನೋ–ಅಂತಹ ಅತುಲಪರಾಕ್ರಮಿಯಾದ ಅರ್ಜುನನು ಅದೃಷ್ಟ ವಶಾತ್ ಇನ್ನೂ ಬದುಕಿದ್ದಾನೆ. ಮಹಾಬಲಿಷ್ಠನಾದ ಗಂಧರ್ವರಾಜನನ್ನು ದುರ್ಯೋಧನನ ಸಲುವಾಗಿ ಯಾವನು ಅಸ್ತ್ರವೀರ್ಯದಿಂದ ಪರಾಜಯ ಗೊಳಿಸಿದನೋ–ಅಂತಹ ಮಹಾನುಭಾವನಾದ ಅರ್ಜುನನು ದೈವಯೋಗ ದಿಂದ ಇನ್ನೂ ಬದುಕಿದ್ದಾನೆ. ಕಿರೀಟ-ಮಾಲಾಧರನಾದ, ಬಲಿಷ್ಠನಾದ,

ಶ್ವೇತಾಶ್ವನಾದ ಶ್ರೀಕೃಷ್ಣನನ್ನೇ ಸಾರಥಿಯನ್ನಾಗಿ ಹೊಂದಿರುವ, ನನಗೆ ಯಾವಾಗಲೂ ಅತ್ಯಂತಪ್ರಿಯನಾದ ಅರ್ಜುನನು ಸೌಭಾಗ್ಯವಶಾತ್ ಇನ್ನೂ ಜೀವಿಸಿದ್ದಾನೆ. ಪುತ್ರಶೋಕಸಂತಪ್ತನಾದ ಅರ್ಜುನನು ದುಷ್ಕರವಾದ ಕರ್ಮ ವನ್ನು ಮಾಡಬೇಕೆಂದು ಉದ್ದೇಶಿಸಿ ಜಯದ್ರಥನ ವಧೆಮಾಡಲು ಘೋರ ವಾದ ಪ್ರತಿಜ್ಞೆಯನ್ನು ಮಾಡಿರುವನು. ನಿಶ್ಚಯವಾಗಿಯೂ ನಮ್ಮ ಧನಂಜಯನು ಯುದ್ಧದಲ್ಲಿ ಸೈಂಧವನನ್ನು ಸಂಹರಿಸುವನೇ? ಸೂರ್ಯನು ಅಸ್ತಮಿಸುವುದರೊಳಗಾಗಿ ವಾಸುದೇವನಿಂದ ರಕ್ಷಿತನಾಗಿ, ಪ್ರತಿಜ್ಞೆಯನ್ನು ಪೂರ್ಣಮಾಡಿಕೊಂಡು ಬರುವ ಅರ್ಜುನನೊಡನೆ ನಾನು ಪುನಃ ಸೇರುವೆನೇ? ದುರ್ಯೋಧನನ ಹಿತದಲ್ಲಿಯೇ ನಿರತನಾಗಿರುವ ಸೈಂಧವರಾಜನು ಯುದ್ಧದಲ್ಲಿ ಅರ್ಜುನನಿಂದ ಹತನಾಗಿ ತನ್ನ ಶತ್ರುಗಳನ್ನು (ಶತ್ರುಗಳಾದ ನಮ್ಮನ್ನು ) ಸಂತೋಷಪಡಿಸುತ್ತಾನೆಯೇ?

ಯುದ್ಧದಲ್ಲಿ ಸೈಂಧವನು ಅರ್ಜುನನಿಂದ ಹತನಾದುದನ್ನು ಕಂಡು ದುರ್ಯೋಧನರಾಜನು ನಮ್ಮೊಡನೆ ಸಂಧಿಮಾಡಿಕೊಳ್ಳುವನೇ? ಭೀಮ ಸೇನನು ತನ್ನ ತಮ್ಮಂದಿರನ್ನು ಸಂಹರಿಸುತ್ತಿರುವುದನ್ನು ಕಂಡು ಆಗಲಾದರೂ ಮೂರ್ಖನಾದ ದುರ್ಯೋಧನನು ನಮ್ಮೊಡನೆ ಸಂಧಿಮಾಡಿಕೊಳ್ಳುವನೇ? ಇನ್ನೂ ಅನೇಕಯೋಧರು ನಮ್ಮಿಂದ ಹತರಾಗಿ ರಣಾಂಗಣದಲ್ಲಿ ಬಿದ್ದಿರುವುದನ್ನು ಕಂಡು ಮಂದನಾದ ದುರ್ಯೋಧನನು ತಾನು ಮಾಡಿದ ಕುತ್ಸಿತವಾದ ಕಾರ್ಯಕ್ಕೆ ಪಶ್ಚಾತ್ತಾಪವನ್ನಾದರೂ ಪಡುವನೇ? ಪಿತಾಮಹನಾದ ಭೀಷ್ಮನೊಬ್ಬನ ಅವಸಾನದಿಂದಲೇ ನಮ್ಮ ವೈರವು ಪ್ರಶಮನಗೊಳ್ಳುವುದೇ? ಉಳಿದವರನ್ನಾದರೂ ರಕ್ಷಿಸಬೇಕೆಂಬ ಆಶಯ ದಿಂದ ದುರ್ಯೋಧನನು ನಮ್ಮೊಡನೆ ಸಂಧಿಯನ್ನು ಮಾಡಿಕೊಳ್ಳುವನೇ?"

ಮಹಾರಾಜ! ಹೀಗೆ ದಯಾರಸಪರಿಪೂರ್ಣನಾದ ಯುಧಿಷ್ಠಿರನು ಅನೇಕಪ್ರಕಾರವಾಗಿ ಚಿಂತಿಸುತ್ತಿದ್ದಾಗ ಮತ್ತೊಂದು ಕಡೆಯಲ್ಲಿ ಬಹಳ ಘೋರವಾದ ಯುದ್ಧವು ನಡೆಯುತ್ತಿದ್ದಿತು."

೧೨೮ನೆಯ ಅಧ್ಯಾಯವು ಮುಗಿಯಿತು.

## ಭೀಮಸೇನ ಮತ್ತು ಕರ್ಣರ ಯುದ್ಧ: ಕರ್ಣನ ಪರಾಜಯ

ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ :

"ಸಂಜಯ! ಮೇಘದ ಗರ್ಜನೆಗೆ ಸಮಾನವಾಗಿ ಉಚ್ಚಸ್ವರದಿಂದ ಗರ್ಜನೆಮಾಡುತ್ತಿದ್ದ ಮಹಾಬಲನಾದ ಭೀಮಸೇನನನ್ನು ನಮ್ಮ ಕಡೆಯ ಯಾವ-ಯಾವ ವೀರಯೋಧರು ತಡೆದರು? ಕ್ರುದ್ಧನಾದ ಭೀಮಸೇನನ ಮುಂದೆ ನಿಂತು ಯುದ್ಧಮಾಡುವವನನ್ನು ನಾನು ಮೂರು ಲೋಕಗಳಲ್ಲಿಯೂ ಕಾಣೆನು. ಗದೆಯನ್ನು ಮೇಲೆತ್ತಿ ಕಾಲನಂತೆ ಯುದ್ಧಮಾಡಲು ಬರುವ ಭೀಮಸೇನನ ಮುಂದೆ ನಿಂತು ಯುದ್ಧಮಾಡುವವನನ್ನು ನಾನು ಕಂಡೇ ಇಲ್ಲ. ಯುದ್ಧಸಮಯದಲ್ಲಿ ರಥದಿಂದಲೇ ರಥವನ್ನೂ–ಆನೆಯಿಂದಲೇ ಆನೆಯನ್ನೂ ಯಾವನು ಪ್ರಹರಿಸಿ ಸಂಹರಿಸುತ್ತಾನೆಯೋ– ಅಂತಹವನ ಮುಂದೆ ಸಾಕ್ಷಾತ್ ಶತಕ್ರತುವೂ ಯುದ್ಧಕ್ಕೆ ನಿಲ್ಲಲಾರನು. ಹೀಗಿರುವಾಗ ಬೇರೆ ಯಾರು ತಾನೇ ಅವನೆದುರಾಗಿ ನಿಂತು ಯುದ್ಧಮಾಡಬಲ್ಲರು? ಕ್ರುದ್ಧನಾದ, ನನ್ನ ಮಕ್ಕಳನ್ನು ವಧಿಸಲು ಇಚ್ಛಿಸಿದ್ದ ಭೀಮಸೇನನ ಅಗ್ರಭಾಗದಲ್ಲಿ ದುರ್ಯೋಧನನ ಹಿತದಲ್ಲಿಯೇ ಆಸಕ್ತಿಹೊಂದಿದ್ದ ಯಾವ ಯೋಧರು ನಿಂತಿದ್ದರು? ಭೀಮಸೇನನೆಂಬ ದಾವಾನಲವು ತೃಣಕ್ಕೆ ಸಮಾನರಾದ ನನ್ನ ಮಕ್ಕಳನ್ನು ದಹಿಸುತ್ತಿದ್ದಾಗ ರಣಾಂಗಣದಲ್ಲಿ ಅವನ ಮುಂದೆ ಯಾವ ಮನುಷ್ಯರು ನಿಂತಿದ್ದರು? ಯಮನು ಎಲ್ಲ ಪ್ರಜೆಗಳನ್ನೂ ವಿನಾಶಗೊಳಿಸುವಂತೆ– ಭೀಮಸೇನನು ನನ್ನ ಮಕ್ಕಳನ್ನು ವಿಧ್ವಂಸನಗೊಳಿಸುತ್ತಿದ್ದಾಗ ಅವನನ್ನು ಯಾವ ಯೋಧರು ತಡೆದು ನಿಲ್ಲಿಸಿದರು?

**ನ ಮೇಽರ್ಜುನಾದ್ಭಯಂ ತಾದೃಕ್ಕೃಷ್ಣಾನ್ನಾಪಿ ಚ ಸಾತ್ವತಾತ್ ।**
**ಹುತಭುಗ್ಜನ್ಮನೋ ನೈವ ಯಾದೃಗ್ಭೀಮಾದ್ಭಯಂ ಮಮ ॥೮॥**

ನನಗೆ ಅರ್ಜುನನಿಂದಲೂ ಅಷ್ಟು ಭಯವಿಲ್ಲ ; ಶ್ರೀಕೃಷ್ಣನಿಂದಲೂ ಅಷ್ಟು ಭಯವಿಲ್ಲ ; ಸಾತ್ಯಕಿಯಿಂದಲೂ ಅಷ್ಟು ಭಯವಿಲ್ಲ ; ಅಗ್ನಿಜನ್ಮನಾದ ಧೃಷ್ಟದ್ಯುಮ್ನನಿಂದಲೂ ಅಷ್ಟು ಭಯವಿಲ್ಲ. ಆದರೆ ಭೀಮಸೇನನ ವಿಷಯ

ದಲ್ಲಿ ನನಗೆ ಬಹಳ ಭಯವಿದೆ. ನನ್ನ ಮಕ್ಕಳನ್ನು ಸುಟ್ಟುಬಿಡಲು ಇಚ್ಛಿಸಿರುವ ಪ್ರದೀಪ್ತವಾದ ಭೀಮಾಗ್ನಿಯ ಸುತ್ತಲೂ ನನ್ನ ಕಡೆಯ ಯಾವ ಶೂರರು ನಿಂತಿದ್ದರು? ಈ ವಿಷಯವನ್ನು ನನಗೆ ಹೇಳು, ಸಂಜಯ!"

"ಮಹಾರಾಜ! ನಾನು ಹಿಂದೆ ಹೇಳಿದಂತೆ ಗರ್ಜನೆಮಾಡುತ್ತಿದ್ದ ಮಹಾಬಲನಾದ ಭೀಮಸೇನನನ್ನು ಅದೇರೀತಿಯಲ್ಲಿ ಭಯಂಕರವಾದ ಸಿಂಹ ನಾದವನ್ನೇ ಮಾಡುತ್ತಾ ಬಲಿಷ್ಠನಾದ ಕರ್ಣನು ಆಕ್ರಮಿಸಿದನು. ಅತ್ಯಂತ ಸಹನಶೀಲನಾದ ಕರ್ಣನು ತನ್ನ ಬಲವನ್ನು ಪ್ರದರ್ಶಿಸುತ್ತಿರುವ ಭೀಮನೊಡನೆ ವೀರಸಮ್ಮತವಾದ ಯುದ್ಧವನ್ನು ಮಾಡುವ ಇಚ್ಛೆಯಿಂದ ತನ್ನ ಮಹಾಧನುಸ್ಸನ್ನು (ಧನುಸ್ಸಿನ ಮೌರ್ವಿಯನ್ನು) ಸುದೀರ್ಘವಾಗಿ ಸೆಳೆಯುತ್ತಾ ಚಂಡಮಾರುತದ ವೇಗವನ್ನು ತಡೆಯುವ ವೃಕ್ಷದೋಪಾದಿಯಲ್ಲಿ– ಭೀಮಸೇನನ ಮಾರ್ಗವನ್ನು ತಡೆದನು. ತನ್ನ ಮುಂದೆ ಮಹಾವೇಗಯುಕ್ತ ನಾದ ವೈಕರ್ತನನು ನಿಂತಿರುವುದನ್ನು ಕಂಡಕೂಡಲೇ ಭೀಮಸೇನನು ಬಹಳ ಕೋಪಗೊಂಡನು. ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಅನೇಕ ಬಾಣಗಳನ್ನು ಕರ್ಣನ ಮೇಲೆ ಬಲಪೂರ್ವಕವಾಗಿ ಪ್ರಯೋಗಿಸಿದನು. ಕರ್ಣನೂ ಸಹ ಅವುಗಳೆಲ್ಲವನ್ನೂ ಪ್ರತಿಗ್ರಹಿಸಿ ಅವುಗಳಿಗೆ ಪ್ರತಿಯಾಗಿ ಅನೇಕಬಾಣಗಳನ್ನು ಭೀಮಸೇನನ ಮೇಲೆ ಬಿಟ್ಟನು. ಕರ್ಣ-ಭೀಮರ ಆ ಮಹಾಸಂಘರ್ಷವನ್ನು ನೋಡುತ್ತಿದ್ದ, ವಿಜಯಗಳಿಸಲು ಸತತವಾಗಿ ಪ್ರಯತ್ನಿಸುತ್ತಿದ್ದ ಎಲ್ಲ ಯೋಧರ ಶರೀರಗಳೂ ನಡುಗುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. ಆ ಇಬ್ಬರು ಮಹಾವೀರರ ಚಪ್ಪಾಳೆಗಳ ಶಬ್ದಗಳನ್ನೂ ಮತ್ತು ಭೀಮಸೇನನ ಗರ್ಜನೆಯನ್ನೂ ಕೇಳಿ ರಣಾಂಗಣದಲ್ಲಿದ್ದ ರಥಿಗಳ ಮತ್ತು ಆನೆಸವಾರರ ಶರೀರಗಳೂ ಕಂಪಿಸುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. ಮಹಾತ್ಮನಾದ ಭೀಮಸೇನನಿಂದ ಪದೇ-ಪದೇ ಆಗುತ್ತಿದ್ದ ಸಿಂಹ ನಾದಗಳಿಂದ ಭೂಮ್ಯಂತರಿಕ್ಷಗಳು ಸ್ತಬ್ಧವಾಗಿಬಿಟ್ಟಿರುವುವೆಂದೇ ಅಲ್ಲಿದ್ದ ಕ್ಷತ್ರಿಯರ್ಷಭರೆಲ್ಲರೂ ಭಾವಿಸಿದರು. ಭೀಮಸೇನನ ಭಯಂಕರಗರ್ಜನೆಯ ಪರಿಣಾಮವಾಗಿ ಎಲ್ಲ ಯೋಧರ ಧನುಸ್ಸುಗಳೂ ಅಸ್ತ್ರ-ಶಸ್ತ್ರಗಳೂ ಕೈಗಳಿಂದ ಜಾರಿ ಭೂಮಿಯ ಮೇಲೆ ಬಿದ್ದುವು. ಮತ್ತೆ ಕೆಲವು ಯೋಧರ

ಪ್ರಾಣಗಳೇ ಶರೀರಗಳಿಂದ ಹಾರಿಹೋದುವು. ಕರ್ಣನಿಗೂ ಮತ್ತು ಭೀಮನಿಗೂ ಸುಘೋರವಾದ ಯುದ್ಧವು ನಡೆಯುತ್ತಿದ್ದಾಗ ಸೈನ್ಯದಲ್ಲಿದ್ದ ಎಲ್ಲ ವಾಹನಗಳೂ (ಆನೆ-ಕುದುರೆಗಳೂ) ಭಯಗೊಂಡು ಮಲ-ಮೂತ್ರಗಳನ್ನು ವಿಸರ್ಜಿಸಿದುವು. ಅವುಗಳ ಮನಸ್ಸು ಉತ್ಸಾಹಶೂನ್ಯವಾಯಿತು. ಘೋರವಾದ ಮತ್ತು ಅನೇಕವಾದ ಅಪಶಕುನಗಳು ಪ್ರಕಟಗೊಂಡುವು. ಅಂತರಿಕ್ಷವು ರಣಹದ್ದುಗಳಿಂದಲೂ, ಹದ್ದುಗಳಿಂದಲೂ ಮತ್ತು ಕಾಗೆಗಳಿಂದಲೂ ಆವೃತವಾಯಿತು. ಕರ್ಣನು ಭೀಮಸೇನನನ್ನು ಇಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಪುನಃ ಅವನು ಬಹಳ ತ್ವರೆಯಿಂದ ಶೀಘ್ರವಾಗಿ ಹೋಗುವ ಐದು ಬಾಣಗಳಿಂದ ಭೀಮನ ಸಾರಥಿಯನ್ನೂ ಪ್ರಹರಿಸಿದನು. ಕ್ಷಿಪ್ರವಾಗಿ ಕಾರ್ಯ ಮಾಡುವ, ಮಹಾಯಶೋವಂತನಾದ ಭೀಮಸೇನನು ಕೂಡ ಗಹ-ಗಹಿಸಿ ನಗುತ್ತಾ ಕರ್ಣನನ್ನು ಅರುವತ್ತುನಾಲ್ಕು ಬಾಣಗಳಿಂದ ಪ್ರತಿಯಾಗಿ ಪ್ರಹರಿಸಿದನು. ಅನಂತರ ಮಹಾಧನುಷ್ಮಂತನಾದ ಕರ್ಣನು ಭೀಮಸೇನನ ಮೇಲೆ ನಾಲ್ಕು ಬಾಣಗಳನ್ನು ಬಿಟ್ಟನು. ಭೀಮಸೇನನು ಅವು ತನ್ನ ಹತ್ತಿರಕ್ಕೆ ಬರುವ ಮೊದಲೇ ತನ್ನ ಕೈಚಳಕವನ್ನು ತೋರಿಸುತ್ತಾ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಕರ್ಣನು ಬಿಟ್ಟ ನಾಲ್ಕು ಬಾಣಗಳನ್ನೂ ಚೂರು ಚೂರುಗಳಾಗಿ ಕತ್ತರಿಸಿಬಿಟ್ಟನು. ಆಗ ಕರ್ಣನು ಬಾಣಗಳ ಸಮೂಹದಿಂದ ಅನೇಕಬಾರಿ ಭೀಮಸೇನನನ್ನು ಮುಚ್ಚುತ್ತಿದ್ದನು. ಕರ್ಣನು ಬಿಟ್ಟ ಬಾಣಗಳ ಸಮೂಹ ದಿಂದ ಹಲವು ಬಾರಿ ಆಚ್ಛಾದಿತನಾದ, ಮಹಾರಥನಾದ ಭೀಮಸೇನನು ಕರ್ಣನ ಧನುಸ್ಸನ್ನು ಮುಷ್ಟಿಪ್ರದೇಶದಲ್ಲಿ ಕತ್ತರಿಸಿದನು. ಅನಂತರ ಬಗ್ಗಿದ ಗಿಣ್ಣುಗಳಿದ್ದ ಅನೇಕಬಾಣಗಳಿಂದ ಕರ್ಣನನ್ನು ಗಾಯಗೊಳಿಸಿದನು. ಭಯಂಕರಕರ್ಮನಾದ, ಮಹಾರಥನಾದ, ಸೂತನ ಮಗನಾದ ಕರ್ಣನು ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ಶಿಂಜಿನಿಯನ್ನು ಬಿಗಿದು ಭೀಮಸೇನನನ್ನು ಅನೇಕಬಾಣಗಳಿಂದ ಗಾಯಗೊಳಿಸಿದನು. ಅದರಿಂದ ಬಹಳ ಕ್ರುದ್ಧನಾದ ಭೀಮಸೇನನು ಬಗ್ಗಿದ ಗಿಣ್ಣುಗಳಿದ್ದ ಮೂರು ಬಾಣಗಳನ್ನು ಬಹಳ ರಭಸದಿಂದ ಕರ್ಣನ ವಕ್ಷಃಸ್ಥಳದಲ್ಲಿ ನೆಟ್ಟುಬಿಟ್ಟನು. ಎದೆಯ ಮಧ್ಯ ಭಾಗದಲ್ಲಿ ಚುಚ್ಚಿಕೊಂಡಿದ್ದ ಆ ಮೂರು ಬಾಣಗಳಿಂದ ಕರ್ಣನು ಮೂರು ಶಿಖರಗಳುಳ್ಳ ಎತ್ತರವಾದ ಪರ್ವತದಂತೆಯೇ ವಿರಾಜಿಸಿದನು. ಧಾತುಗಳ

ಚಿಲುಮೆಗಳಿರುವ ಪರ್ವತದಿಂದ ಗೈರಿಕಾದಿ ಧಾತುಗಳು ಹರಿದುಬರುವಂತೆ–ಶ್ರೇಷ್ಠವಾದ ಆ ಬಾಣಗಳಿಂದ ಗಾಯಗೊಂಡ ಕರ್ಣನ ವಕ್ಷಃಸ್ಥಳದಿಂದ ರಕ್ತವು ಸ್ರವಿಸತೊಡಗಿತು. ಗಾಢವಾದ ಪ್ರಹಾರದಿಂದ ಪೀಡಿತನಾದ ಕರ್ಣನು ಸ್ವಲ್ಪ ಕುಗ್ಗಿದನು. ಆದರೂ ಮರುಕ್ಷಣದಲ್ಲಿಯೇ ಚೇತರಿಸಿಕೊಂಡು ಶಿಂಜಿನಿಯನ್ನು ಕರ್ಣಾಂತವಾಗಿ ಸೆಳೆಯುತ್ತಾ ಅನೇಕಬಾಣಗಳಿಂದ ಭೀಮಸೇನನನ್ನು ಪ್ರಹರಿಸಿದನು. ಪುನಃ ಕರ್ಣನು ಭೀಮನ ಮೇಲೆ ನೂರಾರು ಸಾವಿರಾರು ಬಾಣಗಳನ್ನು ಸುರಿಸಿದನು. ದೃಢಧನ್ವನಾದ ಕರ್ಣನಿಂದ ಬಹಳವಾಗಿ ಪೀಡಿತನಾದ ಭೀಮಸೇನನು ಕ್ಷುರದಿಂದ ಕರ್ಣನ ಧನುಸ್ಸಿನ ಮೌರ್ವಿಯನ್ನು ಬಹಳ ಶೀಘ್ರವಾಗಿ ಕತ್ತರಿಸಿಬಿಟ್ಟನು. ಅವನ ಸಾರಥಿಯನ್ನೂ ಸಹ ಭಲ್ಲದಿಂದ ಪ್ರಹರಿಸಿ ಆಸನದಿಂದ ಕೆಳಕ್ಕುರುಳಿಸಿದನು. ಮಹಾರಥನಾದ ಭೀಮಸೇನನು ಪುನಃ ಹಲವಾರು ಬಾಣಗಳಿಂದ ಕರ್ಣನ ರಥದ ಕುದುರೆಗಳನ್ನೂ ಪ್ರಾಣರಹಿತಗಳನ್ನಾಗಿ ಮಾಡಿದನು. ಕರ್ಣನು ಸತ್ತುಹೋದ ಕುದುರೆಗಳಿದ್ದ ರಥದಿಂದ ಒಡನೆಯೇ ಕೆಳಕ್ಕೆ ಧುಮುಕಿ ಭೀಮಸೇನನ ಭಯದಿಂದ ತನ್ನ ಮಗನಾದ ವೃಷಸೇನನ ರಥವನ್ನು ಹತ್ತಿದನು. ಪ್ರತಾಪವಂತನಾದ ಭೀಮಸೇನನು ಯುದ್ಧದಲ್ಲಿ ಕರ್ಣನನ್ನು ಪರಾಜಯಗೊಳಿಸಿ ಮೇಘದ ಗರ್ಜನೆಗೆ ಸಮಾನವಾದ ಘೋರಗರ್ಜನೆಯನ್ನು ಮಾಡಿದನು. ಭೀಮಸೇನನ ಘೋರಗರ್ಜನೆಯನ್ನು ಕೇಳಿ ಯುದ್ಧದಲ್ಲಿ ಕರ್ಣನು ಭೀಮಸೇನನಿಂದ ಪರಾಜಿತನಾದನೆಂಬುದನ್ನು ತಿಳಿದು ಯುಧಿಷ್ಠಿರನು ಆನಂದಪರವಶನಾದನು. ಆ ಸಮಯದಲ್ಲಿ ಪಾಂಡವರ ಸೈನ್ಯವು ಸರ್ವತ್ರ ಶಂಖಧ್ವನಿಮಾಡಿತು. ಶತ್ರುಸೈನ್ಯದಲ್ಲಿ ಆದ ಶಂಖಧ್ವನಿಯನ್ನು ಕೇಳಿ ನಿನ್ನ ಕಡೆಯ ಯೋಧರೂ ಗಟ್ಟಿಯಾಗಿ ಗರ್ಜನೆಮಾಡಿದರು. ಯುಧಿಷ್ಠಿರನೂ ಸಹ ಹರ್ಷಾಧಿಕ್ಯದಿಂದ ತನ್ನ ಸೈನ್ಯವನ್ನು ಶಂಖಧ್ವನಿಗಳಿಂದಲೂ, ಬಾಣಗಳ 'ಸೊಯ್' ಎಂಬ ಶಬ್ದಗಳಿಂದಲೂ ಜಯಕಾರಪೂರ್ವಕವಾದ ಹರ್ಷಧ್ವನಿಗಳಿಂದಲೂ ವ್ಯಾಪ್ತವಾಗಿ ಮಾಡಿದನು. ಆ ಸಮಯದಲ್ಲಿಯೇ ಪಾರ್ಥನು ಗಾಂಡೀವಧನುಸ್ಸನ್ನು ಟೇಂಕರಿಸಿದನು. ಶ್ರೀಕೃಷ್ಣನು ಪಾಂಚಜನ್ಯವನ್ನೂ ದಿದನು. ಆದರೆ ಆ ಎರಡು ಧ್ವನಿಗಳನ್ನೂ ವಿಲೀನಗೊಳಿಸಿ ಗಟ್ಟಿಯಾಗಿ ಗರ್ಜನೆಮಾಡುತ್ತಿದ್ದ ಭೀಮನ ದಾರುಣವಾದ ಸಿಂಹನಾದದ ಧ್ವನಿಯು

ಸೈನಿಕರಿದ್ದ ಎಲ್ಲ ಸ್ಥಳಗಳಲ್ಲಿಯೂ ಕೇಳಿಬಂದಿತು. ಅನಂತರ ಆ ಇಬ್ಬರು ಮಹಾವೀರರೂ ನೇರವಾಗಿ ಹೋಗುವ ಬಾಣಗಳಿಂದ ಒಬ್ಬರು ಮತ್ತೊಬ್ಬ ರನ್ನು ಪುನಃ ಪ್ರಹರಿಸಲು ಪ್ರಾರಂಭಿಸಿದರು. ಆ ಸಮಯದಲ್ಲಿ ಕರ್ಣನು ಮೃದುಪೂರ್ವಕವಾಗಿ ಬಾಣಗಳನ್ನು ಬಿಡುತ್ತಿದ್ದನು. ಭೀಮಸೇನನು ದೃಢಪೂರ್ವಕವಾಗಿ ಬಾಣಗಳನ್ನು ಬಿಡುತ್ತಿದ್ದನು."

೧೨೯ನೆಯ ಅಧ್ಯಾಯವು ಮುಗಿಯಿತು.

೧೩೦ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದುರ್ಯೋಧನನು ದ್ರೋಣರನ್ನು ನಿಂದಿಸಿದುದು : ದ್ರೋಣರು ದ್ಯೂತದ ಪರಿಣಾಮವನ್ನು ತಿಳಿಯಹೇಳಿ ಪುನಃ ದುರ್ಯೋಧನನನ್ನು ಯುದ್ಧಕ್ಕೆ ಕಳುಹಿಸಿಕೊಟ್ಟುದು : ದುರ್ಯೋಧನನೊಡನೆ ಯುಧಾಮನ್ಯು ಮತ್ತು ಉತ್ತಮೌಜಸರ ಯುದ್ಧ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ನಿನ್ನ ಆ ಮಹಾಸೈನ್ಯವು ಭಯಗೊಂಡು ಓಡಿಹೋಗ ಲಾಗಿ, ಅರ್ಜುನನು ಸೈಂಧವನನ್ನು ಬೆನ್ನಟ್ಟಿದನು. ಸಾತ್ವತ-ಭೀಮಸೇನರೂ ಅವನ ಹಿಂದೆಯೇ ಹೋದರು. ಆ ಸಮಯದಲ್ಲಿ ನಿನ್ನ ಮಗ ದುರ್ಯೋ ಧನನು ಏಕಾಕಿಯಾಗಿ ರಥದಲ್ಲಿ ಕುಳಿತು ಅನೇಕಕಾರ್ಯಗಳ ಬಗೆಗೆ ಚಿಂತಿ ಸುತ್ತಾ ತ್ವರೆಯಿಂದ ದ್ರೋಣರ ಬಳಿಗೆ ಹೋದನು. ನಿನ್ನ ಮಗನ ರಥವು ಮನೋವೇಗ ವಾಯುವೇಗಗಳಿಂದ ಕೂಡಿದ್ದು ಅತ್ಯಂತವೇಗವಾಗಿಯೇ ದ್ರೋಣರ ಸಮೀಪಕ್ಕೆ ಹೋಯಿತು. ಕೋಪದಿಂದ ಕೆಂಪಾದ ಕಣ್ಣುಗಳನ್ನು ಹೊಂದಿದ್ದ, ಕುರುನಂದನನಾದ ನಿನ್ನ ಮಗನು ಬಹಳ ಗಾಬರಿಯಿಂದ ಕೂಡಿದವನಾಗಿ ದ್ರೋಣರೊಡನೆ ಸಂಭ್ರಮಯುಕ್ತವಾದ ಈ ಮಾತುಗಳನ್ನು ಹೇಳಿದನು :

"ದ್ರೋಣರೇ! ಅರ್ಜುನ, ಭೀಮಸೇನ, ಅಪರಾಜಿತನಾದ ಸಾತ್ಯಕಿ– ಇವರುಗಳು ನಮ್ಮ ಎಲ್ಲ ಸೈನ್ಯಗಳನ್ನೂ, ಸುವಿಖ್ಯಾತರಾದ ಮಹಾರಥರನ್ನೂ ಜಯಿಸಿ, ಯಾವ ತಡೆಯೂ ಇಲ್ಲದೆ ಸಿಂಧುರಾಜನ ಸಮೀಪಕ್ಕೆ ಬಂದುಬಿಟ್ಟಿ ದ್ದಾರೆ. ಅಲ್ಲಿಯೂ ಸಹ ಅಪರಾಜಿತರಾದ ಆ ಮಹಾರಥರು ನಮ್ಮ ಸೈನ್ಯದ ಮೇಲೆ ದಾಳಿನಡೆಸುತ್ತಲೇ ಇದ್ದಾರೆ. ಆಚಾರ್ಯರೇ! ಅತುಲಪರಾಕ್ರಮಿ

ಯಾದ ಮಹಾರಥನಾದ ಪಾರ್ಥನೇನೋ ತಮ್ಮನ್ನು (ಅವನಲ್ಲಿ ಅಧಿಕಪರಾಕ್ರಮವಿರುವುದರಿಂದ) ಅತಿಕ್ರಮಿಸಿ ಹೋದನು. ಆದರೆ ಸಾತ್ಯಕಿ-ಭೀಮಸೇನರು ನಿಮ್ಮನ್ನು ಹೇಗೆ ಅತಿಕ್ರಮಿಸಿ ಹೋದರು? ವಿಪ್ರಶ್ರೇಷ್ಠರೇ! ನೀವು ಸಾತ್ಯಕಿಯಿಂದಲೂ, ಅರ್ಜುನನಿಂದಲೂ ಮತ್ತು ಭೀಮಸೇನನಿಂದಲೂ ನಿರ್ಜಿತರಾದುದು–ಈ ಲೋಕದಲ್ಲಿ ಸಮುದ್ರವು ಒಣಗಿಹೋದಷ್ಟೇ–ಆಶ್ಚರ್ಯಕರವಾದ ವಿಷಯವಾಗಿದೆ. ಈ ವಿಷಯವನ್ನು ಜನರು ಪದೇ-ಪದೇ ಹೇಳುತ್ತಲೇ ಇದ್ದಾರೆ. ('ಸಮುದ್ರವು ಶೋಷಿತವಾಯಿತು'–ಎಂಬ ಮಾತು ಎಷ್ಟು ಆಶ್ಚರ್ಯಕರವೋ–'ಭೀಮನಾಗಲೀ, ಅರ್ಜುನನಾಗಲೀ, ಸಾತ್ಯಕಿಯಾಗಲೀ ಅಜೇಯರಾದ ದ್ರೋಣರನ್ನು ಪರಾಜಯಗೊಳಿಸಿದರು'–ಎಂಬುದೂ ಅಷ್ಟೇ ಆಶ್ಚರ್ಯಕರವಾದ ಮಾತಾಗಿದೆ.) 'ಧನುರ್ವೇದ ಪಾರಂಗತರಾದ ದ್ರೋಣರು ಪಾರ್ಥ-ಸಾತ್ಯಕಿ-ಭೀಮಸೇನರಿಂದ ಹೇಗೆ ಜಯಿಸಲ್ಪಟ್ಟರು?'–ಎಂದು ನಮ್ಮ ಯೋಧರೆಲ್ಲರೂ ಹೇಳುತ್ತಿದ್ದಾರೆ. ನಿಮ್ಮ ಪರಾಜಯವು ಯಾರಿಂದಲೂ ನಂಬುವುದಕ್ಕೇ ಅಸಾಧ್ಯವಾಗಿದೆ. ಈ ಯುದ್ಧದಲ್ಲಿ ಮಂದಭಾಗ್ಯನಾದ ನನ್ನ ವಿನಾಶವಾಗುವುದಂತೂ ನಿಶ್ಚಯ! ಏಕೆಂದರೆ : ಅತುಲಪರಾಕ್ರಮಿಗಳಾದ, ಪುರುಷವ್ಯಾಘ್ರರಾದ ನಿಮ್ಮನ್ನು ಮೂವರು ಮಹಾರಥರೂ ಅತಿಕ್ರಮಿಸಿ ಹೋದರು. (ಇದು ನನ್ನ ವಿನಾಶದ ಸೂಚನೆಯಲ್ಲದೇ ಮತ್ತೇನು?) ಪರಿಸ್ಥಿತಿಯು ಈ ಹಂತವನ್ನು ಮುಟ್ಟಿರುವಾಗ (ಅರ್ಜುನ, ಸಾತ್ಯಕಿ, ಭೀಮಸೇನ–ಈ ಮೂವರು ಸೈಂಧವನನ್ನು ಸಮೀಪಿಸಿರುವಾಗ) ನಿಮ್ಮ ವಿವೇಚನೆಯು ಏನೆಂಬುದನ್ನು ಹೇಳಿರಿ. ಏನಾಯಿತೋ ಅದು ಆಗಿಹೋಯಿತು. (ಈಗ ಅದನ್ನು ವಿಮರ್ಶಿಸುವುದರಿಂದ ಯಾವ ಪ್ರಯೋಜನವೂ ಇಲ್ಲ.) ಮರ್ಯಾದೆಯನ್ನು ಉಳಿಸುವ ಸಾಮರ್ಥ್ಯವಿರುವ ಆಚಾರ್ಯರೇ! ಈಗ ಉಳಿದಿರುವ ಅಥವಾ ಸನ್ನಿಹಿತವಾಗಿರುವ ಕಾರ್ಯದ ಬಗೆಗೆ ಯೋಚಿಸಿರಿ. ಈ ಸಮಯದಲ್ಲಿ ಸಿಂಧುರಾಜನ ರಕ್ಷಣೆಗಾಗಿ ಅತಿತ್ವರೆಯಿಂದ ಕಾರ್ಯಕ್ರಮಗಳನ್ನು ರೂಪಿಸಬೇಕಾದ ಕಾಲವು ಸನ್ನಿಹಿತವಾಗಿದೆ. ನೀವು ಈ ವಿಷಯವನ್ನು ಬಹಳ ಚೆನ್ನಾಗಿ ಯೋಚಿಸಿ ಸಿಂಧುರಾಜನ ರಕ್ಷಣಾರ್ಥವಾಗಿ ಕೈಗೊಳ್ಳಬೇಕಾದ ಕಾರ್ಯವನ್ನು ಈಗಲೇ ಸಿದ್ಧಗೊಳಿಸಿರಿ."

"ಮಗು! ದುರ್ಯೋಧನ! ನಾವು ಯೋಚಿಸಬೇಕಾದುದು ಅನೇಕ

ಪ್ರಕಾರವಾಗಿದೆ. ಆದರೆ ಈಗ ಏನು ಮಾಡಬೇಕೆಂಬುದರ ಬಗೆಗೆ ಹೇಳುವೆನು; ಕೇಳು. ಪಾಂಡವರ ಕಡೆಯ ಮೂವರು ಮಹಾರಥರೂ ನನ್ನನ್ನು ಅತಿಕ್ರಮಿಸಿ ಮುಂದೆ ಹೋಗಿದ್ದಾರೆ. ಆ ಮೂವರಿಂದ ವ್ಯೂಹದ ಅಗ್ರಭಾಗದಲ್ಲಿ ಎಷ್ಟು ಭಯವಿದ್ದಿತೋ ವ್ಯೂಹದ ಹಿಂಭಾಗದಲ್ಲಿಯೂ ಅಷ್ಟೇ ಭಯವಿದೆ. ಆದರೆ ಕೃಷ್ಣಾರ್ಜುನರು ಇರುವ ಕಡೆಯಲ್ಲಿಯೇ ನಮ್ಮ ಸೈನಿಕರಿಗೆ ಹೆಚ್ಚು ಭಯವಿರುವುದೆಂದು ನಾನು ಭಾವಿಸುತ್ತೇನೆ. ವ್ಯೂಹದ ಹಿಂಭಾಗದಲ್ಲಿಯೂ ಮತ್ತು ಅಗ್ರಭಾಗದಲ್ಲಿಯೂ ನಮ್ಮ ಸೈನಿಕರು ಶತ್ರುಗಳ ದಾಳಿಗೆ ತುತ್ತಾಗಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಸೈಂಧವನ ರಕ್ಷಣೆಯೇ ನಮ್ಮ ಮುಖ್ಯಕರ್ತವ್ಯವೆಂದು ನಾನೂ ಭಾವಿಸಿದ್ದೇನೆ. ಕ್ರುದ್ಧನಾದ ಅರ್ಜುನನಿಂದ ಭಯಗೊಂಡಿರುವ ಸೈಂಧವನನ್ನು ನಾವು ರಕ್ಷಿಸಲೇಬೇಕು. ಸೈಂಧವನನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಭಯಂಕರಪರಾಕ್ರಮಿಗಳಾದ ಯುಯುಧಾನ- ವೃಕೋದರರೂ ಸಹ ವ್ಯೂಹದ ಪಶ್ಚಾದ್ಭಾಗಕ್ಕೇ ಹೋಗಿದ್ದಾರೆ.

ಶಕುನಿಯ ಬುದ್ಧಿಯಲ್ಲಿ ಅಂದು ಹುಟ್ಟಿದ್ದ ದ್ಯೂತವು ನಿಶ್ಚಯವಾಗಿಯೂ ಇಂದು ಈ ಯುದ್ಧದ ರೂಪದಲ್ಲಿ ಪರಿಣಾಮಗೊಂಡಿದೆ. ಅಂದಿನ ಸಭೆಯಲ್ಲಿ ಯಾವ ಪಕ್ಷಕ್ಕೂ ಜಯವಾಗಲೀ–ಪರಾಜಯವಾಗಲೀ ಉಂಟಾಗಿರಲಿಲ್ಲ. ನಮ್ಮ ಪ್ರಾಣಗಳನ್ನೇ ಪಣವನ್ನಾಗಿಟ್ಟು ಆಡುತ್ತಿರುವ ನಮ್ಮ ಜಯಾಪಜಯಗಳು ಇಲ್ಲಿ ಸಿದ್ಧವಾಗಬೇಕಾಗಿದೆ. ಯಾವ ಘೋರವಾದ ವಸ್ತುಗಳನ್ನಿಟ್ಟುಕೊಂಡು ಶಕುನಿಯು ಕುರುಸಭೆಯಲ್ಲಿ ದ್ಯೂತವಾಡಿದನೋ–ಆ ಘೋರವಾದ ವಸ್ತುಗಳನ್ನು ಪಗಡೇಕಾಯಿಗಳೆಂದು ಭಾವಿಸಿಬಿಟ್ಟೆ. ಆದರೆ ಅವುಗಳು ನಿಜವಾಗಿಯೂ ಪಗಡೇಕಾಯಿಗಳಲ್ಲ. ದುರ್ಯೋಧನ! ಅವುಗಳು ದುರಾಸದವಾದ ಬಾಣಗಳು. ನಿನ್ನ ಬಹುಸಂಖ್ಯಾತ ಸೈನಿಕರು ಎಲ್ಲಿದ್ದಾರೆಯೋ ಅಲ್ಲಿಯೇ ನಿಜವಾದ ದ್ಯೂತವು ನಡೆಯುತ್ತಿದೆ. ನಿನ್ನ ಸೈನ್ಯವನ್ನೇ ಜೂಜುಗಾರನೆಂದು ತಿಳಿ. ಅಲ್ಲಿರುವ ಬಾಣಗಳೇ ಪಗಡೇಕಾಯಿಗಳು. ಸೈಂಧವನನ್ನೇ ಸಂಗ್ರಾಮದ್ಯೂತದಲ್ಲಿ ಪಣದ ವಸ್ತುವನ್ನಾಗಿಡಲಾಗಿದೆ. ದ್ಯೂತ ದಲ್ಲಿನ ಜಯಾಪಜಯಗಳು ಇಲ್ಲಿ ನಿಶ್ಚಯಿಸಲ್ಪಡುತ್ತವೆ. ಸಿಂಧುರಾಜನ ಪ್ರಾಣಗಳನ್ನೇ ಪಣದ ವಸ್ತುವನ್ನಾಗಿಟ್ಟು ಶತ್ರುಗಳೊಡನೆ ದೊಡ್ಡದಾದ ಜೂಜಾಟವು ಪ್ರಾರಂಭವಾಗಿದೆ. ಮಹಾರಾಜ! ನಮ್ಮ ಪಕ್ಷದಲ್ಲಿರುವ ಎಲ್ಲ

ಯೋಧರೂ ತಮ್ಮ-ತಮ್ಮ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಸೈಂಧವನ ರಕ್ಷಣೆಯನ್ನು ವಿಧಿವತ್ತಾಗಿ ಮಾಡುವುದು ಯೋಗ್ಯವಾಗಿದೆ. ಈ ರೀತಿಯಲ್ಲಿ ಜೂಜಾಡುತ್ತಿರುವ ನಮಗೆ ಜಯವೋ–ಅಪಜಯವೋ ಎರಡರಲ್ಲಿ ಯಾವುದಾದರೂ ಒಂದು ಸಿದ್ಧವಾಗಿಯೇ ಇದೆ. ಎಲ್ಲಿ ನಿನ್ನ ಮಹಾಧನುಷ್ಮಂತರಾದ ಯೋಧರು ಪ್ರಯತ್ನಪೂರ್ವಕವಾಗಿ ಸೈಂಧವನನ್ನು ರಕ್ಷಿಸುತ್ತಿದ್ದಾರೆಯೋ ಆ ಸೈಂಧವರಕ್ಷಕರನ್ನು ರಕ್ಷಿಸಲು ನೀನೂ ಅಲ್ಲಿಗೆ ಶೀಘ್ರವಾಗಿ ಹೋಗು. ನಾನು ಇಲ್ಲಿಯೇ ಇರುತ್ತೇನೆ. ನಿನ್ನ ಸಹಾಯಕ್ಕಾಗಿ ಇನ್ನೂ ಅನೇಕರನ್ನು ಕಳುಹಿಸುತ್ತೇನೆ. ಎಲ್ಲಕ್ಕಿಂತಲೂ ಮುಖ್ಯವಾಗಿ ಸುಸಂಘಟಿತರಾದ ಪಾಂಡು-ಪಾಂಚಾಲ-ಸೃಂಜಯಯೋಧರನ್ನು ಅಲ್ಲಿಗೆ ಬಾರದಂತೆ ತಡೆಯುತ್ತೇನೆ.”

ದ್ರೋಣರು ಹೀಗೆ ಹೇಳಿದನಂತರ ದುರ್ಯೋಧನನು ಆಚಾರ್ಯರ ಶಾಸನದಂತೆ ತನ್ನನ್ನು ಉಗ್ರವಾದ ಕಾರ್ಯಕ್ಕೆ ಸಿದ್ಧಗೊಳಿಸಿಕೊಂಡು ತನ್ನ ಅನುಚರರೊಡನೆ ಬಹಳ ಶೀಘ್ರವಾಗಿ ಹೊರಟುಹೋದನು. ಆ ವೇಳೆಗೆ ಸರಿಯಾಗಿ ಅರ್ಜುನನ ಚಕ್ರರಕ್ಷಕರಾದ ಪಾಂಚಾಲದೇಶೀಯರಾದ ಯುಧಾಮನ್ಯು ಮತ್ತು ಉತ್ತಮೌಜಸರು ಸೇನೆಯ ಹೊರಭಾಗದಿಂದ ಶಕಟವ್ಯೂಹದ ಪಶ್ಚಾದ್ಭಾಗಕ್ಕೆ ಬಂದವರಾಗಿ ಸವ್ಯಸಾಚಿಯ ಬಳಿಗೆ ಹೋದರು. (ಅರ್ಜುನ, ಭೀಮಸೇನ ಮತ್ತು ಸಾತ್ಯಕಿಯರಂತೆ ಅವರು ಸೇನೆಯ ಮಧ್ಯಭಾಗದಿಂದ ಹೋಗಲಿಲ್ಲ. ಸೇನೆಯ ಹೊರಭಾಗದಿಂದಲೇ ವ್ಯೂಹದ ಹಿಂಭಾಗಕ್ಕೆ ಹೋಗಿ ಅಲ್ಲಿ ಅರ್ಜುನನೊಡನೆ ಸೇರಿಕೊಂಡರು.) ಅರ್ಜುನನು ಯುದ್ಧಮಾಡುವ ಇಚ್ಛೆಯಿಂದ ನಿನ್ನ ಸೈನ್ಯವನ್ನು ಪ್ರವೇಶಿಸುವಾಗ ಅವರು ಅರ್ಜುನನ ಜೊತೆಯಲ್ಲಿದ್ದರು. ಆಗ ಕೃತವರ್ಮನು ಅವರಿಬ್ಬರನ್ನೂ ತಡೆದಿದ್ದನು. ಯುಧಾಮನ್ಯೂತ್ತಮೌಜಸರು ಪಾರ್ಶ್ವಭಾಗದಲ್ಲಿ ನಿನ್ನ ಸೈನ್ಯವನ್ನು ಭೇದಿಸಿ ಸೈನ್ಯದೊಳಕ್ಕೆ ಪ್ರವೇಶಿಸುತ್ತಿದ್ದರು. ಪಾರ್ಶ್ವಭಾಗದಲ್ಲಿ ಸೈನ್ಯದ ಒಳಭಾಗಕ್ಕೆ ನುಗ್ಗಿ ಬರುತ್ತಿದ್ದ ಆ ಇಬ್ಬರು ಪಾಂಚಾಲರನ್ನು ಕುರುರಾಜನು ನೋಡಿದನು. ಅತಿತ್ವರೆಯಿಂದ ಸೈನ್ಯದೊಳಗೆ ಪ್ರವೇಶಿಸುತ್ತಿದ್ದ ಸಹೋದರರಾದ ಯುಧಾಮನ್ಯೂತ್ತಮೌಜಸರೊಡನೆ ಬಲಿಷ್ಠನಾದ, ಭರತಕುಲೋತ್ಪನ್ನನಾದ ದುರ್ಯೋಧನನು ಅತ್ಯಂತವೇಗದಿಂದ ಉತ್ತಮವಾದ ರೀತಿಯಲ್ಲಿ ಯುದ್ಧ ಮಾಡಿದನು. ಕ್ಷತ್ರಿಯಶ್ರೇಷ್ಠರಾದ, ಮಹಾರಥರೆಂದು ವಿಖ್ಯಾತರಾಗಿದ್ದ,

ಪಾಂಚಾಲರಾಜಕುಮಾರರು ಧನುಸ್ಸುಗಳನ್ನೆತ್ತಿಕೊಂಡು ದುರ್ಯೋಧನನನ್ನು ಎದುರಿಸಿದರು. ಯುಧಾಮನ್ಯುವು ರಣಹದ್ದುಗಳ ರೆಕ್ಕೆಗಳನ್ನು ಹೊಂದಿದ್ದ ಮೂವತ್ತು ಬಾಣಗಳಿಂದ ದುರ್ಯೋಧನನನ್ನು ಪ್ರಹರಿಸಿದನು. ಅನಂತರ ಇಪ್ಪತ್ತು ಬಾಣಗಳಿಂದ ಅವನ ಸಾರಥಿಯನ್ನೂ, ನಾಲ್ಕು ಬಾಣಗಳಿಂದ ರಥದ ನಾಲ್ಕು ಕುದುರೆಗಳನ್ನೂ ಪ್ರಹರಿಸಿದನು. ದುರ್ಯೋಧನನು ಒಂದೇ ಒಂದು ಬಾಣದಿಂದ ಯುಧಾಮನ್ಯುವಿನ ಧ್ವಜವನ್ನೂ ಕತ್ತರಿಸಿದನು. ಅನಂತರ ಮತ್ತೊಂದು ಬಾಣದಿಂದ ಅವನ ಧನುಸ್ಸನ್ನೂ ಕತ್ತರಿಸಿದನು. ಭಲ್ಲದಿಂದ ಯುಧಾಮನ್ಯುವಿನ ಸಾರಥಿಯನ್ನೂ ಆಸನದಿಂದ ಕೆಳಕ್ಕೆ ಬೀಳಿಸಿದನು. ಬಳಿಕ ತೀಕ್ಷ್ಣವಾದ ನಾಲ್ಕು ಬಾಣಗಳಿಂದ ಯುಧಾಮನ್ಯುವಿನ ನಾಲ್ಕು ಕುದುರೆ ಗಳನ್ನೂ ಗಾಯಗೊಳಿಸಿದನು. ಅದರಿಂದ ಕ್ರುದ್ಧನಾದ ಯುಧಾಮನ್ಯುವು ಬಹಳ ತ್ವರೆಯಿಂದ ಮೂವತ್ತು ಬಾಣಗಳಿಂದ ನಿನ್ನ ಮಗನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅದೇರೀತಿಯಲ್ಲಿ ಉತ್ತಮೌಜಸನೂ ಕ್ರುದ್ಧನಾಗಿ ಸುವರ್ಣ ಭೂಷಿತವಾದ ಬಾಣಗಳಿಂದ ದುರ್ಯೋಧನನ ಸಾರಥಿಯನ್ನು ಪ್ರಹರಿಸಿ ಅವನನ್ನು ಯಮಲೋಕಕ್ಕೆ ಕಳುಹಿಸಿಕೊಟ್ಟನು. ಮಹಾರಾಜ! ದುರ್ಯೋ ಧನನೂ ಸಹ ಪಾಂಚಾಲರಾಜಕುಮಾರನಾದ ಉತ್ತಮೌಜಸನ ನಾಲ್ಕು ಕುದುರೆಗಳನ್ನೂ ಮತ್ತು ಇಬ್ಬರು ಪಾರ್ಶ್ವರಕ್ಷಕರನ್ನೂ ಸಂಹರಿಸಿದನು. ಹತಾಶ್ವನಾದ ಮತ್ತು ಹತಸಾರಥಿಯಾದ ಉತ್ತಮೌಜಸನು ಸಹೋದರನಾದ ಯುಧಾಮನ್ಯುವಿನ ರಥವನ್ನು ಬಹಳ ಅವಸರದಿಂದ ಹತ್ತಿದನು. ಸಹೋ ದರನ ರಥದಲ್ಲಿ ಕುಳಿತ ಉತ್ತಮೌಜಸನು ದುರ್ಯೋಧನನ ಕುದುರೆಗಳನ್ನು ಅನೇಕ ಬಾಣಗಳಿಂದ ಪ್ರಹರಿಸಿದನು. ಆ ಕುದುರೆಗಳು ಅಸುನೀಗಿ ಕೆಳಗೆ ಬಿದ್ದುವು. ದುರ್ಯೋಧನನ ಕುದುರೆಗಳು ಕೆಳಕ್ಕೆ ಬಿದ್ದೊಡನೆಯೇ ಯುಧಾ ಮನ್ಯುವು ಶ್ರೇಷ್ಠವಾದೊಂದು ಬಾಣದಿಂದ ಬಹಳ ಶೀಘ್ರವಾಗಿ ದುರ್ಯೋ ಧನನ ಧನುಸ್ಸನ್ನೂ ಮತ್ತು ಬತ್ತಳಿಕೆಯನ್ನೂ ಕತ್ತರಿಸಿದನು. ಕುದುರೆಗಳೂ ಮತ್ತು ಸಾರಥಿಯೂ ನಿಧನಹೊಂದಿದನಂತರ ದುರ್ಯೋಧನನು ತನ್ನ ರಥದಿಂದಿಳಿದು ಗದೆಯನ್ನು ತೆಗೆದುಕೊಂಡು ಪಾಂಚಾಲ್ಯರ ಕಡೆಗೆ ವೇಗವಾಗಿ ಧಾವಿಸಿದನು. ಕ್ರುದ್ಧನಾದ ಕುರುಪತಿಯು ತಮ್ಮ ಮೇಲೆ ಬೀಳಲು ಬರುತ್ತಿರುವುದನ್ನು ಕಂಡು ಯುಧಾಮನ್ಯೂತ್ತಮೌಜಸರು ರಥದ ಹಿಂಭಾಗ

ದಿಂದ ಕೆಳಕ್ಕೆ ಹಾರಿದರು. ಪರಮಕ್ರುದ್ಧನಾಗಿದ್ದ ದುರ್ಯೋಧನನು ಸಾರಥಿ ಧ್ವಜಸಹಿತವಾಗಿದ್ದ, ಸುವರ್ಣದಿಂದ ಚಿತ್ರಿತವಾಗಿದ್ದ, ಸುಂದರವಾಗಿದ್ದ, ಪಾಂಚಾಲರ ರಥವನ್ನು ಗದೆಯಿಂದ ಅಪ್ಪಳಿಸಿಬಿಟ್ಟನು. ಹೀಗೆ ಯುಧಾ ಮನ್ಯೂತ್ತಮೌಜಸರ ರಥವನ್ನು ಧ್ವಂಸಮಾಡಿ ಕುದುರೆಗಳಿಂದಲೂ ಸಾರಥಿ ಯಿಂದಲೂ ವಿಹೀನನಾಗಿದ್ದ, ಶತ್ರುತಾಪನನಾದ ನಿನ್ನ ಮಗನು ಬಹಳ ಶೀಘ್ರವಾಗಿ ಮದ್ರರಾಜನಾದ ಶಲ್ಯನ ರಥವನ್ನು ಹತ್ತಿದನು. ಅನಂತರ ಪಾಂಚಾಲಮುಖ್ಯರಾದ, ರಾಜಪುತ್ರರಾದ, ಮಹಾರಥರಾದ ಯುಧಾ ಮನ್ಯೂತ್ತಮೌಜಸರೂ ಬೇರೆಯ ರಥಗಳನ್ನು ಹತ್ತಿಕೊಂಡು ಅರ್ಜುನನ ಬಳಿಗೆ ಹೊರಟುಹೋದರು."

೧೩೦ನೆಯ ಅಧ್ಯಾಯವು ಮುಗಿಯಿತು.

೧೩೧ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಭೀಮಸೇನನಿಂದ ಕರ್ಣನ ಪರಾಜಯ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ರೋಮಹರ್ಷಣವಾದ ಸಂಗ್ರಾಮವಾಗುತ್ತಿರಲಾಗಿ, ಎಲ್ಲ ಸೈನಿಕರೂ ವ್ಯಾಕುಲರಾಗಿ ಶತ್ರುಸೈನಿಕರಿಂದ ಪೀಡಿಸಲ್ಪಡುತ್ತಿರಲಾಗಿ, ಅರಣ್ಯದಲ್ಲಿ ಮದಿಸಿದ ಆನೆಯು ಮತ್ತೊಂದು ಮದಿಸಿದ ಸಲಗದೊಡನೆ ಸೆಣೆಸಾಡಲು ಹೋಗುವಂತೆ–ಕರ್ಣನು ಭೀಮಸೇನನೊಡನೆ ಯುದ್ಧಕ್ಕೆ ಹೋದನು."

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

"ಸಂಜಯ! ಮಹಾಬಲರಾದ ಕರ್ಣ-ಭೀಮರಿಬ್ಬರೂ ಅರ್ಜುನನ ರಥದ ಸಮೀಪದಲ್ಲಿಯೇ ಯುದ್ಧದಲ್ಲಿ ತೊಡಗಿದ್ದರಲ್ಲವೇ? ಅವರಿಬ್ಬರ ಯುದ್ಧವು ಹೇಗಿದ್ದಿತು? ಇದಕ್ಕೆ ಮೊದಲು ಭೀಮಸೇನನಿಂದಲೇ ಕರ್ಣನು ಪರಾಜಿತನಾದನೆಂದೂ ನೀನೇ ಹೇಳಿದೆಯಲ್ಲವೇ? ಮಹಾರಥನಾದ ಕರ್ಣನು ಪುನಃ ಭೀಮಸೇನನೊಡನೆ ಯುದ್ಧಕ್ಕೆ ಹೇಗೆ ಹೋದನು? ಪೃಥಿವಿ ಯಲ್ಲಿಯೇ ಶ್ರೇಷ್ಠಮಹಾರಥನೆಂದು ಪ್ರಖ್ಯಾತನಾಗಿರುವ ರಾಧೇಯನನ್ನು ಎದುರಿಸಿ ಭೀಮನು ಹೇಗೆ ಯುದ್ಧಮಾಡಿದನು? ಧರ್ಮರಾಜನಾದ ಯುಧಿ ಷ್ಠಿರನು ಭೀಷ್ಮ-ದ್ರೋಣರಿಬ್ಬರನ್ನೂ ಮತ್ತು ಮಹಾರಥನಾದ ಕರ್ಣನೊಬ್ಬ

ನನ್ನೂ ಬಿಟ್ಟರೆ ಮತ್ತಾರಿಗೂ ಭಯಪಡುವುದಿಲ್ಲ. ನಾನು ಕೇಳಿರುವಂತೆ ಮಹಾತ್ಮನಾದ, ಮಹಾಬಾಹುವಾದ ಕರ್ಣನ ಮಹಾಪರಾಕ್ರಮವನ್ನು ಅನು ದಿನವೂ ಚಿಂತಿಸುತ್ತಿದ್ದ ಧರ್ಮರಾಜನು ಭಯದಿಂದಾಗಿ ಅನೇಕವರ್ಷಗಳ ವರೆಗೆ ನಿದ್ರಿಸುತ್ತಲೇ ಇರಲಿಲ್ಲ. ಅಂತಹ ಬ್ರಾಹ್ಮಣಪ್ರಿಯನಾದ, ಮಹಾಪರಾ ಕ್ರಮಿಯಾದ, ವೀರ್ಯಸಂಪನ್ನನಾದ, ಯುದ್ಧದಲ್ಲಿ ಹಿಮ್ಮೆಟ್ಟದಿರುವ, ಯೋಧರಲ್ಲಿ ಶ್ರೇಷ್ಠನಾದ ಕರ್ಣನನ್ನು ಎದುರಿಸಿ ಭೀಮಸೇನನು ಹೇಗೆ ಯುದ್ಧಮಾಡಿದನು? ಹಿಂದೊಮ್ಮೆ ಯುದ್ಧದಲ್ಲಿ ತೊಡಗಿದ್ದ ಮಹಾಬಲ-ಪರಾಕ್ರಮರಾದ ವೈಕರ್ತನ-ವೃಕೋದರರು ಪುನಃ ಯಾವರೀತಿಯಲ್ಲಿ ಯುದ್ಧ ಮಾಡಿದರು? ಹಿಂದೆಯೂ ಸಹ ಸೂತಪುತ್ರನು ಅರ್ಜುನನೊಬ್ಬನನ್ನುಳಿದು ಉಳಿದ ನಾಲ್ವರೊಡನೆ ಭ್ರಾತೃತ್ವದ ಮಮತೆಯನ್ನೇ ಇಟ್ಟುಕೊಂಡು ಯುದ್ಧ ಮಾಡುತ್ತಿದ್ದನು. ಮೇಲಾಗಿ ಸೂತಪುತ್ರನು ಅತ್ಯಂತ ದಯಾಪರನು. ಅಂತಹವನು ತಾಯಿಗೆ ಕೊಟ್ಟ ಅಭಿವಚನವನ್ನೂ ಸ್ಮರಿಸುತ್ತಾ ಭೀಮಸೇನ ನೊಡನೆ ಹೇಗೆ ಯುದ್ಧಮಾಡಿದನು? ಶೂರನಾದ ಭೀಮಸೇನನು ಹಿಂದೆ ಕರ್ಣನು ಮಾಡಿದ ವೈರದ ಕೃತ್ಯಗಳನ್ನು ಸ್ಮರಿಸಿಕೊಂಡು ಅವನೊಡನೆ ಹೇಗೆ ಯುದ್ಧಮಾಡಿದನು? ಸಂಜಯ! ನನ್ನ ಮಗನಾದ ದುರ್ಯೋಧನನು ನನ್ನೊಡನೆ ಪದೇ ಪದೇ 'ಕರ್ಣನು ಯುದ್ಧದಲ್ಲಿ ಪಾಂಡವರನ್ನು ಜಯಿಸಿಯೇ ಜಯಿಸುತ್ತಾನೆ.' ಎಂಬುದಾಗಿ ಹೇಳುತ್ತಲೇ ಇದ್ದನು. ನನ್ನ ಮೂರ್ಖಪುತ್ರನು ಯಾರ ಅವಲಂಬನೆಯಿಂದ ಸಮರಾಂಗಣದಲ್ಲಿ ವಿಜಯವು ಲಭಿಸುವುದೆಂಬ ಆಶೆಯನ್ನಿಟ್ಟುಕೊಂಡಿದ್ದನೋ ಅಂತಹ ಕರ್ಣನು ಭಯಂಕರಕರ್ಮನಾದ ಭೀಮಸೇನನೊಡನೆ ಹೇಗೆ ಯುದ್ಧಮಾಡಿದನು?

ಕರ್ಣನ ಆಶ್ರಯವನ್ನು ಪಡೆದ ನನ್ನ ಮಕ್ಕಳು ಮಹಾರಥರಾದ ಪಾಂಡವರೊಡನೆ ದ್ವೇಷವನ್ನು ಕಟ್ಟಿಕೊಂಡರು. ನನ್ನ ಮಕ್ಕಳಿಗೆ ಏಕೈಕಾ ಶ್ರಯನಾದ ಸೂತಪುತ್ರನಾದ ಕರ್ಣನೊಡನೆ ಭೀಮಸೇನನು ಹೇಗೆ ಯುದ್ಧ ಮಾಡಿದನು? ಸೂತಪುತ್ರನ ಮೂಲಕವಾಗಿಯೇ ನಡೆದ ಅನೇಕವಾದ ಅಪ ಕಾರಗಳನ್ನು ಸ್ಮರಿಸುತ್ತಾ ಭೀಮಸೇನನು ಸೂತಪುತ್ರನೊಡನೆ ಹೇಗೆ ಯುದ್ಧ ಮಾಡಿದನು? ಮಹಾಪರಾಕ್ರಮಿಯಾದ ಕರ್ಣನು ರಥೈಕಸಹಾಯನಾಗಿ ಭೂಮಂಡಲವನ್ನೇ ದುರ್ಯೋಧನನ ಸಲುವಾಗಿ ಗೆದ್ದುಕೊಂಡು ಬಂದನು.

ಅಂತಹ ಅತುಲಪರಾಕ್ರಮಿಯಾದ ಸೂತಪುತ್ರನನ್ನು ಎದುರಿಸಿ ಭೀಮಸೇನನು ಹೇಗೆ ಯುದ್ಧಮಾಡಿದನು? ಕವಚಕುಂಡಲಗಳನ್ನು ಧರಿಸಿಯೇ ಜನಿಸಿದ ಸೂತಪುತ್ರನಾದ ಕರ್ಣನೊಡನೆ ಭೀಮನು ಹೇಗೆ ಹೋರಾಡಿದನು? ಅವರಿಬ್ಬರ ನಡುವೆ ಯುದ್ಧವು ಯಾವರೀತಿಯಲ್ಲಿ ನಡೆಯಿತು? ಅವರಿಬ್ಬರಲ್ಲಿ ಜಯಗಳಿಸಿದವರು ಯಾರು? ಸಂಜಯ! ನೀನು ಯುದ್ಧವಾರ್ತೆಯನ್ನು ವಿವರಿಸುವುದರಲ್ಲಿ ಮಹಾಕುಶಲನಾಗಿರುವೆ. ಆದುದರಿಂದ ಕರ್ಣ-ಭೀಮರ ಯುದ್ಧವನ್ನು ನನಗೆ ಯಥಾವತ್ತಾಗಿ ವರ್ಣಿಸಿ ಹೇಳು."

"ಮಹಾರಾಜ! ಭೀಮಸೇನನು ರಥಿಗಳಲ್ಲಿ ಶ್ರೇಷ್ಠನಾದ ರಾಧೇಯನನ್ನು ಬಿಟ್ಟು (ಅವನೊಡನೆ ಯುದ್ಧಮಾಡಲಿಚ್ಛಿಸದೇ) ಕೃಷ್ಣ-ಧನಂಜಯರಿದ್ದ ಸ್ಥಳಕ್ಕೆ ಹೋಗಲು ಇಷ್ಟಪಟ್ಟನು. ಕೃಷ್ಣಾರ್ಜುನರಿದ್ದೆಡೆಗೆ ಹೋಗುತ್ತಿದ್ದ ಭೀಮಸೇನನನ್ನು ರಾಧೇಯನು ನಿರೋಧಿಸುತ್ತಾ ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಬಾಣಗಳಿಂದ–ಮೇಘವು ವೃಷ್ಟಿಧಾರೆಗಳಿಂದ ಪರ್ವತವನ್ನು ಮುಚ್ಚಿಬಿಡುವಂತೆ–ಭೀಮಸೇನನನ್ನು ಮುಚ್ಚಿಬಿಟ್ಟನು. ಅಧಿರಥನ ಮಗನಾದ, ಬಲಿಷ್ಠನಾದ ಕರ್ಣನು ಅರಳುತ್ತಿರುವ ಕಮಲದಂತಿದ್ದ ಮುಖದಿಂದ ಗಹಗಹಿಸಿ ನಗುತ್ತಾ ಅರ್ಜುನನ ಬಳಿಗೆ ಹೋಗುತ್ತಿದ್ದ ಭೀಮಸೇನನನ್ನು ಯುದ್ಧಕ್ಕೆ ಆಹ್ವಾನಿಸುತ್ತಾ ಹೇಳಿದನು :

"ಭೀಮಸೇನ! ಯುದ್ಧದಲ್ಲಿ ನೀನು ಬೆನ್ನು ತೋರಿಸುವುದನ್ನು (ಹಿಮ್ಮೆಟ್ಟುವುದನ್ನು ) ನಿನ್ನ ಶತ್ರುಗಳು ಸ್ವಪ್ನದಲ್ಲಿಯೂ ಯೋಚಿಸಲಾರರು. ಆದರೆ ಪಾರ್ಥನನ್ನು ನೋಡಬೇಕೆಂಬ ಆಸೆಯಿಂದ ಇಂದು ನನಗೇಕೆ ಬೆನ್ನನ್ನು ತೋರಿಸಿಕೊಂಡು ಹೋಗುತ್ತಿರುವೆ? ಪಾಂಡುನಂದನನೇ! ವೀರಮಾತೆಯಾದ ಕುಂತಿಯ ಮಗನೆಂದು ಹೇಳಿಸಿಕೊಂಡವನು ಹೀಗೆಂದಿಗೂ ಮಾಡಬಾರದು. ನೀನು ಮಾಡುತ್ತಿರುವುದು ಕುಂತೀಪುತ್ರನಿಗೆ ಸದೃಶವಾದ ಕಾರ್ಯವಲ್ಲ. ಆದುದರಿಂದ ನನಗೆ ಅಭಿಮುಖನಾಗಿ ನಿಂತು ಬಾಣಗಳ ವೃಷ್ಟಿಯಿಂದ ನನ್ನನ್ನು ಆಕ್ರಮಿಸು."

ಮಹಾರಾಜ! ಭೀಮಸೇನನು ಕರ್ಣನಿಂದ ಬಂದ ಆ ರೀತಿಯ ಆಹ್ವಾನವನ್ನು ಕೇಳಿ ಕೋಪದಿಂದ ಕಿಡಿ-ಕಿಡಿಯಾದನು. ಅರ್ಧಮಂಡಲಪರ್ಯಂತವಾಗಿ ತಿರುಗಿ (ಕರ್ಣನಿಗೆ ಅಭಿಮುಖವಾಗಿ ನಿಂತು ) ಅವನೊಡನೆ ಯುದ್ಧ

ವನ್ನು ಪ್ರಾರಂಭಿಸಿದನು. ಕವಚವನ್ನು ಧರಿಸಿದ್ದ, ದ್ವೈರಥಯುದ್ಧದಲ್ಲಿ (ಎರಡು ರಥಿಗಳು ಮಾತ್ರ ಮಾಡುವ ಯುದ್ಧದಲ್ಲಿ ) ವಿಜಯಕ್ಕಾಗಿ ಪ್ರಯತ್ನಿಸುತ್ತಿದ್ದ ಸರ್ವಶಸ್ತ್ರವಿಶಾರದನಾದ ಕರ್ಣನನ್ನು ಮಹಾಯಶೋವಂತನಾದ ಭೀಮಸೇನನು ನೇರವಾಗಿ ಹೋಗುವ ಬಾಣಗಳ ವೃಷ್ಟಿಯಿಂದ ಮುಚ್ಚಿದನು. ಪರಸ್ಪರ ಕಲಹವನ್ನು ಕಡೆಗಾಣಿಸಬೇಕೆಂಬ ಇಚ್ಛೆಯಿಂದ ಭೀಮ ಸೇನನು ಕರ್ಣನನ್ನು ಸಂಹರಿಸಬೇಕೆಂದು ನಿಶ್ಚಯಿಸಿ ಅನೇಕ ಬಾಣಗಳಿಂದ ಗಾಯಗೊಳಿಸಿದನು. ಮಹಾಬಲನಾದ ಭೀಮನು ಕರ್ಣನ ಅನುಯಾಯಿಗಳನ್ನು ಕೊಂದು ಅವನನ್ನೂ ಆದಷ್ಟು ಶೀಘ್ರವಾಗಿಯೇ ಕೊಲ್ಲಬೇಕೆಂಬ ಆಶಯದಿಂದಿದ್ದನು. ಅಸಹನೆಯಿಂದ ಪರಮಕ್ರುದ್ಧನಾಗಿದ್ದ ಪರಂತಪನಾದ ಪಾಂಡವನು ವಿಧ-ವಿಧವಾದ ಮತ್ತು ಉಗ್ರವಾಗಿದ್ದ ಬಾಣಗಳ ಮಳೆಯನ್ನೇ ಕರ್ಣನ ಮೇಲೆ ಸುರಿಸಿದನು. ಶ್ರೇಷ್ಠವಾದ ಅಸ್ತ್ರಗಳನ್ನು ತಿಳಿದುಕೊಂಡಿದ್ದ ಸೂತಪುತ್ರನಾದ ಕರ್ಣನು, ಮದಿಸಿದ ಆನೆಯಂತೆ ಠೀವಿಯ ನಡಿಗೆಯವನಾಗಿದ್ದ ಭೀಮನ ಅಪಾರವಾದ ಬಾಣಗಳ ವೃಷ್ಟಿಯನ್ನೂ, ಅಸ್ತ್ರಗಳ ಮಾಯೆಯಿಂದ (ಅಸ್ತ್ರಪ್ರಯೋಗಚಾತುರ್ಯದಿಂದ) ನುಂಗಿಬಿಟ್ಟನು. (ನಿರಸನಗೊಳಿಸಿದನು.) ಮಹಾಬಾಹುವಾದ, ಮಹಾಧನುರ್ಧರನಾದ, ಬಲಿಷ್ಠನಾದ ಕರ್ಣನು ತಾನು ಕಲಿತಿದ್ದ ಅಪಾರವಾದ ಧನುರ್ವಿದ್ಯೆಯಿಂದ ಆಚಾರ್ಯ ದ್ರೋಣರಂತೆಯೇ ಗೌರವಿಸಲ್ಪಡುತ್ತಾ ರಣಾಂಗಣದಲ್ಲಿ ಸುತ್ತುತ್ತಿದ್ದನು. ಕರ್ಣನು ಕ್ರೋಧಪೂರ್ವಕನಾಗಿ ಯುದ್ಧ ಮಾಡುತ್ತಿದ್ದ, ಕುಂತಿಯ ಮಗನಾದ ಭೀಮಸೇನನನ್ನು ನಗು-ನಗುತ್ತಲೇ ಎದುರಿಸಿದನು. ಕರ್ಣನು ತನ್ನನ್ನು ನೋಡಿ ನಗುತ್ತಿದ್ದುದನ್ನು ಭೀಮಸೇನನು ಸಹಿಸಲಿಲ್ಲ. ವೀರರಿಬ್ಬರೂ ಯುದ್ಧದಲ್ಲಿ ತೊಡಗಿರಲಾಗಿ, ತನ್ನ ಅಭಿಮುಖನಾಗಿ ನಿಂತಿದ್ದ ಕರ್ಣನನ್ನು ಕ್ರುದ್ಧನಾಗಿದ್ದ ಮತ್ತು ಬಲಿಷ್ಠನಾಗಿದ್ದ ಭೀಮಸೇನನು–ಮಹಾಗಜವನ್ನು ಮಾವಟಿಗನು ಅಂಕುಶದಿಂದ ಚುಚ್ಚುವಂತೆ–ವತ್ಸದಂತಗಳಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಪುನಃ ಭೀಮಸೇನನು ಸುವರ್ಣದ ಮೂಲಭಾಗಗಳಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಸುಪ್ರಮುಕ್ತವಾದ ಇಪ್ಪತ್ತೊಂದು ಬಾಣಗಳಿಂದ ಚಿತ್ರಿತವಾದ ಕವಚವನ್ನು ಧರಿಸಿದ್ದ ಕರ್ಣನನ್ನು ಕ್ಷತ-ವಿಕ್ಷತ

ನನ್ನಾಗಿ ಮಾಡಿದನು. ಅದಕ್ಕೆ ಪ್ರತಿಯಾಗಿ ಕರ್ಣನು ಸುವರ್ಣಮಯವಾದ ಬಲೆಗಳಿಂದ ಹೊದ್ದಿಸಲ್ಪಟ್ಟಿದ್ದ, ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ಭೀಮನ ಕುದುರೆಗಳನ್ನು ಐದೈದು ಬಾಣಗಳಿಂದ ಪ್ರಹರಿಸಿ ಪುನಃ ನಿಮೇಷಾಂತರದಲ್ಲಿ (ಕಣ್ಣುಗಳ ರೆಪ್ಪೆಯನ್ನು ತೆಗೆಯುವಷ್ಟು ಸಮಯದಲ್ಲಿ) ಬಾಣಗಳ ಸಮೂಹವನ್ನೇ ಭೀಮಸೇನನ ರಥದ ಮೇಲೆ ಸುರಿಸಿದುದು ಕಂಡುಬಂದಿತು. ಕರ್ಣನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ರಥ-ಧ್ವಜ-ಸೂತಸಹಿತನಾದ ಭೀಮಸೇನನು ಮುಚ್ಚಿಹೋದನು. ಬಳಿಕ ಕ್ರುದ್ಧನಾದ ಕರ್ಣನು ಅರುವತ್ತು ನಾಲ್ಕು ಬಾಣಗಳಿಂದ ಭೀಮಸೇನನ ಸುದೃಢವಾದ ಕವಚವನ್ನು ಧ್ವಂಸಮಾಡಿದನು. ಅನಂತರ ಭೀಮಸೇನನನ್ನೂ ಸಹ ಮರ್ಮಸ್ಥಳಗಳನ್ನು ಭೇದಿಸುವ ನಾರಾಚರಗಳಿಂದ ಪೀಡಿಸಿದನು. ಮಹಾಬಾಹುವಾದ ಭೀಮಸೇನನು ಕರ್ಣನ ಧನುಸ್ಸಿನಿಂದ ತನ್ನ ಕಡೆಗೆ ಪುಂಖಾನುಪುಂಖವಾಗಿ ಬರುತ್ತಿದ್ದ ಬಾಣಗಳನ್ನು ಗಣನೆಗೇ ತೆಗೆದುಕೊಳ್ಳದೆ ಅಸಂಭ್ರಾಂತನಾಗಿ ಸೂತಪುತ್ರನನ್ನು ಆಲಿಂಗನಮಾಡಿಕೊಳ್ಳುವಷ್ಟು ಸಮೀಪಕ್ಕೆ ಹೋದನು. ಆ ಸಮಯದಲ್ಲಿ ಭೀಮಸೇನನು ಕರ್ಣನ ಧನುಸ್ಸಿನಿಂದ ಹೊರಟ, ನಾಗರಹಾವುಗಳಂತೆಯೇ ಇದ್ದ ಬಾಣಗಳನ್ನು ತನ್ನ ಶರೀರದಲ್ಲಿ ಧರಿಸಿದನು. ಆದರೆ ಅದರಿಂದವನು ಸ್ವಲ್ಪವಾದರೂ ವ್ಯಥಿತನಾಗಲಿಲ್ಲ. ಪ್ರತಾಪವಂತನಾದ ಭೀಮಸೇನನು ಕರ್ಣನ ರಥದ ಸಮೀಪಕ್ಕೆ ಹೋದ ನಂತರ ಬಹಳ ಚೂಪಾಗಿದ್ದ, ತೀಕ್ಷ್ಣವಾಗಿದ್ದ ತೇಜಸ್ಸಿನಿಂದ ಕೂಡಿದ್ದ ಮೂವತ್ತೆರಡು ಭಲ್ಲಗಳಿಂದ ಕರ್ಣನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಕರ್ಣನೂ ಸ್ವಲ್ಪವಾದರೂ ಆಯಾಸಗೊಳ್ಳದೆ ಸೈಂಧವನ ವಧೆಯನ್ನು ಇಚ್ಛಿಸಿದ್ದ, ಮಹಾಬಾಹುವಾದ ಭೀಮಸೇನನನ್ನು ಅನೇಕಬಾಣಗಳಿಂದ ಮುಚ್ಚಿದನು. (ಭೀಮಸೇನನು ತನ್ನ ತಮ್ಮನೆಂಬುದನ್ನು ಸ್ಮರಿಸಿ ಕುಂತಿಗೆ ಕೊಟ್ಟಿದ್ದ ಆಭಿವಚನದಂತೆ) ರಾಧೇಯನು ಭೀಮಸೇನನೊಡನೆ ಮೃದುತ್ವದಿಂದಲೇ ಯುದ್ಧಮಾಡುತ್ತಿದ್ದನು. ಭೀಮಸೇನನು ಹಿಂದೆ ಕರ್ಣನು ಮಾಡಿದ ವೈರ ಜನಕವಾದ ದುಷ್ಟಕರ್ಮಗಳನ್ನು ಸ್ಮರಿಸುತ್ತಾ ಕ್ರೋಧಪೂರ್ವಕವಾಗಿಯೇ ಯುದ್ಧಮಾಡುತ್ತಿದ್ದನು. ಶತ್ರುಹಂತಕನಾದ, ಅಮರ್ಷಣಶೀಲನಾದ ಭೀಮಸೇನನು, ಕರ್ಣನು ತನ್ನೊಡನೆ ಮೃದುತ್ವದಿಂದ ಯುದ್ಧಮಾಡುತ್ತಿರುವುದನ್ನು

ಗಮನಿಸಿ, ಕರ್ಣನು ತನಗೆ ಉದ್ದೇಶಪೂರ್ವಕವಾಗಿ ಅಪಮಾನಮಾಡುತ್ತಿದ್ದಾನೆಂದೇ ಭಾವಿಸಿದನು. ಕರ್ಣನ ಆ ವರ್ತನೆಯನ್ನು ಭೀಮಸೇನನು ಸಹಿಸಿಕೊಳ್ಳಲಿಲ್ಲ. ಕರ್ಣನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು.

ಭೀಮಸೇನನಿಂದ ಪ್ರಮುಕ್ತವಾದ ಆ ಬಾಣಗಳು ಕೂಗುತ್ತಿರುವ ಪಕ್ಷಿಗಳೋಪಾದಿಯಲ್ಲಿ ಎಲ್ಲ ಕಡೆಗಳಿಂದಲೂ ಬಂದು ಕರ್ಣನ ಮೇಲೆ ಬಿದ್ದುವು. ಸುವರ್ಣಮಯವಾದ ಮೂಲಭಾಗವಿದ್ದ, ಥಳ-ಥಳಿಸುತ್ತಿದ್ದ ಅಗ್ರಭಾಗ ಗಳನ್ನು ಹೊಂದಿದ್ದ, ಭೀಮಸೇನನ ಧನುಸ್ಸಿನಿಂದ ಚ್ಯುತವಾದ ಬಾಣಗಳು–ಮಿಡತೆಗಳು ಅಗ್ನಿಯನ್ನು ಮುತ್ತಿಕೊಳ್ಳುವಂತೆ–ರಾಧೇಯನನ್ನು ಆವರಿಸಿಕೊಂಡುವು. ಭೀಮನು ಬಿಟ್ಟ ಬಾಣಗಳಿಂದ ಸಂಪೂರ್ಣವಾಗಿ ಮುಚ್ಚಿಹೋಗಿದ್ದ, ರಥಿಗಳಲ್ಲಿ ಶ್ರೇಷ್ಠನಾದ ಕರ್ಣನು ಅತ್ಯುಗ್ರವಾದ ಬಾಣಗಳನ್ನು ಭೀಮಸೇನನ ಮೇಲೆ ಸುರಿಸಿದನು. ಭೀಮನು ಸಮರಶೋಭಿಯಾದ (ಸಮರಾಂಗಣದಲ್ಲಿ ರತ್ನಪ್ರಾಯನಾಗಿದ್ದ) ಕರ್ಣನ, ಸಿಡಿಲಿಗೆ ಸಮಾನವಾಗಿದ್ದ, ತನಗೆ ಅಭಿಮುಖವಾಗಿ ಬರುತ್ತಿದ್ದ, ಬಾಣಗಳನ್ನು ಅರ್ಧಮಾರ್ಗದಲ್ಲಿಯೇ ಅನೇಕ ಭಲ್ಲಗಳಿಂದ ಕತ್ತರಿಸಿದನು. ಶತ್ರುದಮನನಾದ, ಸೂರ್ಯನ ಮಗನಾದ ಕರ್ಣನು ಭೀಮಸೇನನನ್ನು ಪುನಃ ಬಾಣಗಳ ವರ್ಷದಿಂದ ಮುಚ್ಚಿಬಿಟ್ಟನು. ಮುಳ್ಳುಗಳಿಂದ ಆವೃತವಾದ ಮುಳ್ಳುಹಂದಿಯಂತೆ–ಭೀಮಸೇನನು ಶರೀರಾದ್ಯಂತವಾಗಿ ಬಾಣಗಳಿಂದ ಪರಿವೃತನಾಗಿದ್ದುದನ್ನು ನಾವು ನೋಡಿದೆವು. ರಶ್ಮಿಮಂತನಾದ ಸೂರ್ಯನು ತನ್ನ ಸುತ್ತಲೂ ಕಿರಣಗಳನ್ನು ಧಾರಣೆಮಾಡಿರುವಂತೆ–ಸುವರ್ಣಮಯವಾದ ಮೂಲಭಾಗಗಳಿಂದ ಕೂಡಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ಕರ್ಣನ ಧನುಸ್ಸಿನಿಂದ ಚ್ಯುತವಾದ, ಕಿರಣಸದೃಶವಾದ ಬಾಣಗಳನ್ನು ವೀರನಾದ ಭೀಮಸೇನನು ತನ್ನ ಶರೀರದ ಸುತ್ತಲೂ ಧರಿಸಿದ್ದನು. ವಸಂತರ್ತುವಿನಲ್ಲಿ ಸಮೃದ್ಧವಾದ ಕುಸುಮಗಳಿಂದ ಸಮಲಂಕೃತವಾದ ಅಶೋಕವೃಕ್ಷದಂತೆ ಶರೀರಾದ್ಯಂತವಾಗಿ ರಕ್ತದಿಂದ ತೋಯ್ದುಹೋಗಿದ್ದ ಭೀಮಸೇನನು ಪ್ರಕಾಶಿಸಿದನು. ಕೋಪದಿಂದ ತಿರುಗುತ್ತಿದ್ದ ಕಣ್ಣುಗಳಿಂದ ಕೂಡಿದ್ದ ಮಹಾಬಾಹುವಾದ ಭೀಮಸೇನನು ಕರ್ಣನ ಬಾಣಪ್ರಯೋಗಕೌಶಲವನ್ನು ಸಹಿಸಿಕೊಳ್ಳಲಿಲ್ಲ. ಅವನನ್ನು ಇಪ್ಪತ್ತೈದು ನಾರಾಚಗಳಿಂದ ಪ್ರಹರಿಸಿದನು. ಆ ಸಮಯದಲ್ಲಿ

ಕರ್ಣನು ನಿಗೂಢವಾದ ಕಾಲುಗಳುಳ್ಳ ವಿಷಯುಕ್ತವಾದ ಸರ್ಪಗಳಿಂದ ಕೂಡಿದ ಶ್ವೇತಪರ್ವತದಂತೆ ಪ್ರಕಾಶಿಸಿದನು. ದೇವತೆಗಳ ಪರಾಕ್ರಮಕ್ಕೆ ಸಮನಾದ ಪರಾಕ್ರಮದಿಂದ ಕೂಡಿದ್ದ ಭೀಮಸೇನನು ತನ್ನ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಯುದ್ಧಮಾಡುತ್ತಿದ್ದ ಕರ್ಣನನ್ನು ಹದಿನಾಲ್ಕು ಬಾಣಗಳಿಂದ ಮರ್ಮಸ್ಥಾನಗಳಲ್ಲಿ ಪ್ರಹರಿಸಿದನು. ಪ್ರತಾಪವಂತನಾದ ಭೀಮಸೇನನು ನಗು-ನಗುತ್ತಲೇ ಮತ್ತೊಂದು ಬಾಣದಿಂದ ಬಹಳ ಶೀಘ್ರವಾಗಿ ಕರ್ಣನ ಧನುಸ್ಸನ್ನು ಕತ್ತರಿಸಿದನು. ಅನಂತರ ಬಾಣಗಳಿಂದ ಕರ್ಣನ ಕುದುರೆಗಳನ್ನೂ ಮತ್ತು ಸೂತನನ್ನೂ ತ್ವರೆಯಿಂದ ಸಂಹರಿಸಿ, ಸೂರ್ಯನ ರಶ್ಮಿಗಳಿಗೆ ಸಮಾನವಾದ ನಾರಾಚಗಳಿಂದ ಕರ್ಣನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಸೂರ್ಯನ ಕಿರಣಗಳು ಮೇಘವನ್ನು ಭೇದಿಸಿ ಹೊರಬರುವಂತೆ–ಭೀಮ ಸೇನನು ಬಿಟ್ಟ ನಾರಾಚಗಳು ಕರ್ಣನನ್ನು ಭೇದಿಸಿಕೊಂಡು ಹೊರಬಂದು ಬಹಳ ಶೀಘ್ರವಾಗಿ ಭೂಮಿಯನ್ನು ಸೇರಿಕೊಂಡುವು. ಕತ್ತರಿಸಿಹೋದ ಧನುಸ್ಸಿನಿಂದ ಕೂಡಿದ್ದ, ಬಾಣಗಳಿಂದ ಬಹಳವಾಗಿ ಗಾಯಗೊಂಡಿದ್ದ, ಮಾನಿಷ್ಠನಾದ ಕರ್ಣನು ತಳಮಳಗೊಂಡವನಾಗಿ ಮತ್ತೊಂದು ರಥವನ್ನು ಹತ್ತಿಕೊಂಡು ಅಲ್ಲಿಂದ ಹೊರಟುಹೋದನು."

೧೩೧ನೆಯ ಅಧ್ಯಾಯವು ಮುಗಿಯಿತು.

೧೩೨ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಭೀಮ-ಕರ್ಣರ ಘೋರ ಯುದ್ಧ

ಭೀಮನೊಡನೆ ಯುದ್ಧಮಾಡುತ್ತಿದ್ದ ಕರ್ಣನು ತಳಮಳಗೊಂಡು ಹೊರಟುಹೋದುದನ್ನು ಕೇಳಿ ಖಿನ್ನನಾದ ಧೃತರಾಷ್ಟ್ರನು ಸಂಜಯನೊಡನೆ ಹೇಳುತ್ತಾನೆ :

"ಸಂಜಯ! ಪರಶುರಾಮನು ಉತ್ತಮಧನುರ್ಧರನು. ಸಾಕ್ಷಾತ್ ಶ್ರೀಶಂಕರನ ಶಿಷ್ಯನು. ಅಂತಹ ಪರಶುರಾಮನಿಗೆ ಕರ್ಣನು ಶಿಷ್ಯನಾಗಿದ್ದುದು ಮಾತ್ರವಲ್ಲದೇ–ಅಸ್ತ್ರವಿದ್ಯೆಯಲ್ಲಿಯೂ ಅವನಿಗೆ ಸಮಾನನೆಸಿಕೊಂಡಿರು ತ್ತಾನೆ. ಶಿಷ್ಯೋಚಿತವಾದ ಸದ್ಗುಣಗಳಿಂದ ಸಂಪನ್ನನಾಗಿರುವ ಕರ್ಣನು ಪರಶುರಾಮನಿಗಿಂತಲೂ ಅತಿಶಯಿಸಿಯೇ ಇರುವನೆಂದೂ ಹೇಳಬಹುದು. ಅಂತಹ ಅತುಲಪರಾಕ್ರಮಿಯಾದ ಕರ್ಣನನ್ನು ಕುಂತಿಯ ಮಗನಾದ ಭೀಮ

ಸೇನನು ಲೀಲಾಜಾಲವಾಗಿ ಪರಾಜಯಗೊಳಿಸಿಬಿಟ್ಟನು. ನನ್ನ ಮಕ್ಕಳು ತಮ್ಮ ವಿಜಯದ ಆಶೆಯನ್ನು ಯಾವನಲ್ಲಿ ಇಟ್ಟುಕೊಂಡಿದ್ದರೋ (ತಮ್ಮ ವಿಜಯಕ್ಕಾಗಿ ಯಾವನನ್ನು ಪೂರ್ಣವಾಗಿ ಅವಲಂಬಿಸಿದ್ದರೋ ) ಅಂತಹ ಕರ್ಣನೇ ಭೀಮನಿಂದ ವಿಮುಖವಾಗಿ ಹೋದುದನ್ನು ಕಂಡು ದುರ್ಯೋಧನನು ಏನು ಹೇಳಿದನು? ಮುಂದೆ (ಕರ್ಣನನ್ನು ಪರಾಜಯಗೊಳಿಸಿದನಂತರ ) ಮಹಾಬಲನಾದ ವೀರ್ಯಶ್ಲಾಘಿಯಾದ ಭೀಮಸೇನನು ನನ್ನ ಸೈನಿಕರೊಡನೆ ಹೇಗೆ ಯುದ್ಧಮಾಡಿದನು? ಭೀಮಸೇನನ ಬಾಣಪ್ರಹಾರಗಳಿಂದ ತಳಮಳಗೊಂಡು ರಣಾಂಗಣವನ್ನು ಬಿಟ್ಟುಹೋದ ಕರ್ಣನು ಯಜ್ಞೇಶ್ವರ ನಂತೆಯೇ ಜಾಜ್ವಲ್ಯಮಾನನಾಗಿದ್ದ ಭೀಮಸೇನನನ್ನು ರಣಾಂಗಣದಲ್ಲಿ ಕಂಡು ಏನು ಮಾಡಿದನು?"

"ಮಹಾರಾಜ! ಕರ್ಣನು ಶಾಸ್ತ್ರವಿಧಿಗೆ ಅನುಸಾರವಾಗಿ ಸಿದ್ಧಪಡಿಸಿದ್ದ ಮತ್ತೊಂದು ರಥದಲ್ಲಿ ಕುಳಿತು ಚಂಡಮಾರುತದಿಂದ ಅಲ್ಲೋಲಕಲ್ಲೋಲ ವಾದ ಸಮುದ್ರದಂತೆ–ಕ್ಷುಭಿತನಾಗಿ ಭೀಮಸೇನನನ್ನು ಅತಿಕ್ರಮಿಸಿದನು. ಕರ್ಣನು ಪರಮಕ್ರುದ್ಧನಾಗಿ ರಣರಂಗಕ್ಕೆ ಬಂದುದನ್ನು ನೋಡಿ ಅಗ್ನಿಯಲ್ಲಿ ಸಮರ್ಪಿತವಾದ ಆಹುತಿಯಂತೆ ಕರ್ಣನ ಕ್ರೋಧಾಗ್ನಿಯಲ್ಲಿ ಭೀಮಸೇನನು ಸುಟ್ಟು ಭಸ್ಮವಾಗಿ ಹೋಗುವನೆಂದು ನಿನ್ನ ಮಗನು ಭಾವಿಸಿದನು. ರಾಧೇ ಯನು ನೂತನ ರಥದಲ್ಲಿ ಕುಳಿತು ರಣಾಂಗಣಕ್ಕೆ ಬಂದೊಡನೆಯೇ ಧನು ಷ್ಟೇಂಕಾರಮಾಡಿ ಭಯಂಕರವಾದ ರೀತಿಯಲ್ಲಿ ಚಪ್ಪಾಳೆಯನ್ನು ತಟ್ಟುತ್ತಾ ಭೀಮಸೇನನ ರಥದ ಕಡೆಗೆ ಧಾವಿಸಿದನು. ಶೂರನಾದ ಕರ್ಣನ ಮತ್ತು ಮಹಾತ್ಮನಾದ, ಮಹಾಬಾಹುವಾದ ಭೀಮಸೇನನ ನಡುವೆ ಪುನಃ ಸುಘೋರ ವಾದ ಸಂಘರ್ಷಣೆಯು ಪ್ರಾರಂಭವಾಯಿತು. ಬಹಳ ಕ್ರುದ್ಧರಾಗಿದ್ದ, ಒಬ್ಬರು ಮತ್ತೊಬ್ಬರನ್ನು ವಧಿಸಬೇಕೆಂಬ ಇಚ್ಛೆಯಿಂದ ಕೂಡಿದ್ದ, ಮಹಾಬಾಹು ಗಳಾದ ಭೀಮ-ಕರ್ಣರು ಪರಸ್ಪರವಾಗಿ ತಮ್ಮ ಕಣ್ಣುಗಳಿಂದಲೇ ಸುಟ್ಟು ಬಿಡುವರೋ ಎಂಬಂತೆ ಒಬ್ಬರು ಮತ್ತೊಬ್ಬರನ್ನು ದುರುಗುಟ್ಟಿಕೊಂಡು ಕ್ಷಣ ಕಾಲ ನೋಡುತ್ತಿದ್ದರು. ಕೋಪದಿಂದ ಕೆಂಗಣ್ಣರಾಗಿದ್ದ–ತೀಕ್ಷ್ಣವಾದ ಸ್ವಭಾವ ದಿಂದ ಕೂಡಿದ್ದ ಎರಡು ಸರ್ಪಗಳು ಬುಸುಗುಟ್ಟುವಂತೆ–ದೀರ್ಘವಾಗಿ

ನಿಟ್ಟುಸಿರುಬಿಡುತ್ತಿದ್ದ, ಅರಿಂದಮರಾದ ಕರ್ಣ-ಭೀಮರಿಬ್ಬರೂ ಯುದ್ಧವ ನ್ನಾರಂಭಿಸಿ ಸ್ವಲ್ಪಹೊತ್ತಿನೊಳಗಾಗಿ ಪರಸ್ಪರವಾಗಿ ಗಾಯಗೊಳಿಸಿದರು. ಅವರಿಬ್ಬರೂ ಕೋಪಗೊಂಡ ಹುಲಿಗಳಂತಿದ್ದರು. ಗಿಡಗಹಕ್ಕಿಗಳಂತೆ ವೇಗ ವಂತರಾಗಿದ್ದರು. ಸಂಕ್ರುದ್ಧವಾಗಿದ್ದ ಶರಭಗಳಂತೆ ಇಬ್ಬರೂ ಪರಸ್ಪರವಾಗಿ ಘೋರಯುದ್ಧದಲ್ಲಿ ತೊಡಗಿದರು. ಆ ಸಮಯದಲ್ಲಿ ಅರಿಂದಮನಾದ ಭೀಮಸೇನನು ಅಕ್ಷದ್ಯೂತದ ಸಮಯದಲ್ಲಿ, ಅರಣ್ಯದಲ್ಲಿ ಮತ್ತು ವಿರಾಟ ನಗರದಲ್ಲಿ ಅನುಭವಿಸಿದ ದುಃಖ-ಕ್ಲೇಶಗಳನ್ನು ಸ್ಮರಿಸಿಕೊಂಡನು. ನಿನ್ನ ಮಕ್ಕಳು ಮೋಸದಿಂದ ರಾಜ್ಯವನ್ನೂ ಮತ್ತು ಉಜ್ಜ್ವಲವಾದ ರತ್ನಗಳನ್ನೂ ಅಪಹರಿಸಿದುದನ್ನೂ ಸ್ಮರಿಸಿಕೊಂಡನು. ಪುತ್ರಸಹಿತನಾದ ನೀನು ಅವರಿಗೆ ನಾನಾರೀತಿಗಳಲ್ಲಿ ಕೊಟ್ಟ ಕ್ಲೇಶಗಳೆಲ್ಲವನ್ನೂ ಸ್ಮರಿಸಿಕೊಂಡನು. ಪಾಪರಹಿತ ಳಾದ ಕುಂತಿಯನ್ನು ಪುತ್ರಸಹಿತಳಾಗಿ ಅರಗಿನ ಮನೆಯಲ್ಲಿ ಸುಡಲು ಸಪುತ್ರ ನಾದ ನೀನು ಪ್ರಯತ್ನಿಸಿದುದನ್ನೂ ಭೀಮಸೇನನು ಆ ಸಮಯದಲ್ಲಿ ಸ್ಮರಿಸಿ ಕೊಂಡನು. ಸಭಾಮಧ್ಯದಲ್ಲಿ ದುರಾತ್ಮರು ದ್ರೌಪದಿಗೆ ಕೊಟ್ಟ ಕ್ಲೇಶಗಳನ್ನೂ ಸ್ಮರಿಸಿದನು. ದುಃಶಾಸನನು ದ್ರೌಪದಿಯ ಮುಡಿಯನ್ನು ಹಿಡಿದು ಸಭಾಮಧ್ಯಕ್ಕೆ ಸೆಳೆದುತಂದುದು ಅವನ ಕಣ್ಣಿಗೆ ಕಟ್ಟಿದಂತಿತ್ತು. ಆ ಸಮಯದಲ್ಲಿ ಕರ್ಣನಾಡಿದ ಮಾತುಗಳೂ ಕಿವಿಯಲ್ಲಿ ಪ್ರತಿಧ್ವನಿಸುತ್ತಿದ್ದುವು.

**ಪತಿಮನ್ಯಂ ಪರೀಪ್ಸಸ್ವ ನ ಸನ್ತಿ ಪತಯಸ್ತವ ।**
**ಪತಿತಾ ನರಕೇ ಪಾರ್ಥಾಃ ಸರ್ವೇ ಷಣ್ಢತಿಲೋಪಮಾಃ ॥೧೬॥**

"(ದ್ಯೂತದಲ್ಲಿ ನಿನ್ನನ್ನೂ ಪಣವಾಗಿಟ್ಟು ಕಳೆದುಕೊಂಡನಂತರ ಅವರು ನಿನ್ನ ಪತಿಗಳೂ ಅಲ್ಲ ; ನೀನು ಅವರ ಹೆಂಡತಿಯೂ ಅಲ್ಲ.) ಸಧ್ಯದಲ್ಲಿ ನಿನಗೆ ಪತಿಗಳೇ ಇಲ್ಲ. ದ್ರೌಪದಿ! ಬೇರೆ ಪತಿಯನ್ನು ವರಿಸು. ಎಣ್ಣೆತೆಗೆದ ಎಳ್ಳಿಗೆ ಸಮನಾಗಿರುವ ನಿನ್ನ ಪತಿಗಳು ನರಕದಲ್ಲಿ ಬಿದ್ದುಹೋಗಿದ್ದಾರೆ."

ಮಹಾರಾಜ! ಹೀಗೆಂಬುದಾಗಿ ನಿನ್ನ ಸಮಕ್ಷದಲ್ಲಿಯೇ ನಿನ್ನ ಮಕ್ಕಳೂ ಮತ್ತು ಕರ್ಣನೂ ಹೇಳಿದುದನ್ನು ಭೀಮಸೇನನು ಸ್ಮರಿಸಿದನು. ನಿನ್ನ ಮಕ್ಕಳು ಕೃಷ್ಣೆಯನ್ನು ದಾಸಿಯನ್ನಾಗಿ ಮಾಡಿಕೊಂಡು ಉಪಭೋಗಿಸಲು ಇಚ್ಛಿಸಿದ್ದರು. ಚೀರ-ಕೃಷ್ಣಾಜಿನಗಳನ್ನು ಧರಿಸಿ ಅರಣ್ಯಕ್ಕೆ ಹೊರಟಿದ್ದ

ಪಾಂಡವರನ್ನು ಸಭೆಯಲ್ಲಿ–ಅದೂ ನಿನ್ನ ಎದುರಿನಲ್ಲಿಯೇ ಕರ್ಣನು ಕಠಿನೋಕ್ತಿಗಳಿಂದ ತೆಗಳಿದುದನ್ನು ಭೀಮಸೇನನು ಸ್ಮರಿಸಿದನು. ಉತ್ತಮಸ್ಥಿತಿಯಲ್ಲಿದ್ದ ನಿನ್ನ  ಮಗನು ಕೋಪಗೊಂಡು ಬುದ್ಧಿಹೀನನಾಗಿ ಕಷ್ಟಪರಿಸ್ಥಿತಿಯಲ್ಲಿದ್ದ ಪಾರ್ಥರನ್ನು ಹುಲ್ಲಿಗಿಂತಲೂ ಕಡೆಯಾಗಿ ಕಾಣುತ್ತಾ ಯಾವ ನಿಷ್ಠುರವಾದ ಮಾತುಗಳನ್ನು ಹೇಳಿದ್ದನೋ ಅದನ್ನೂ ಭೀಮಸೇನನು ಆ ಸಮಯದಲ್ಲಿ ಸ್ಮರಿಸಿಕೊಂಡನು. ಧರ್ಮಾತ್ಮನಾದ, ಶತ್ರುಹಂತಕನಾದ ವೃಕೋದರನು ಚಿಕ್ಕಂದಿನಿಂದಲೂ ತಾನು ಅನುಭವಿಸಿದ ಕಷ್ಟಗಳೆಲ್ಲವನ್ನೂ ಸ್ಮರಿಸುತ್ತಾ ತನ್ನ ಜೀವನದಲ್ಲಿಯೇ ಜುಗುಪ್ಸೆಹೊಂದಿದ್ದನು. ಅಂತಹ ಸಮಯದಲ್ಲಿ ಭರತಶಾರ್ದೂಲನಾದ ಭೀಮನು ಸುವರ್ಣಮಯವಾದ ಪೃಷ್ಠಭಾಗದಿಂದ ಕೂಡಿದ್ದ ದುರಾಸದವಾಗಿದ್ದ, ದೊಡ್ಡದಾದ ತನ್ನ ಧನುಸ್ಸನ್ನು ಟೇಂಕರಿಸುತ್ತಾ ಪ್ರಾಣದ ಮೇಲಿನ ಹಂಗನ್ನೂ ತೊರೆದು ಕರ್ಣನೊಡನೆ ಯುದ್ಧಮಾಡಿದನು. ಥಳ-ಥಳಿಸುವ ಕಾಂತಿಯಿಂದ ಕೂಡಿದ್ದ, ಮಸೆಗಲ್ಲಿನ ಮೇಲೆ ಉಜ್ಜಿ ಹರಿತವಾಗಿ ಮಾಡಲ್ಪಟ್ಟಿದ್ದ ಬಾಣಗಳ ಸಮೂಹಗಳಿಂದ ಭೀಮಸೇನನು  ಕರ್ಣನ ರಥವನ್ನು ಮುಚ್ಚುತ್ತಾ ಸೂರ್ಯನ ಪ್ರಭೆಯನ್ನು ನೆಲದ ಮೇಲೆ ಬೀಳದಂತೆ ತಡೆದುಬಿಟ್ಟನು. ಆಗ ಕರ್ಣನು ಭೀಮಸೇನನನ್ನು ನೋಡಿ ಗಹ-ಗಹಿಸಿ ನಗುತ್ತಾ ಭೀಮಸೇನನ ಬಾಣಗಳ ಸಮೂಹಗಳನ್ನು ಶಿಲೆಯಿಂದ ಚೂಪಾಗಿ ಮಾಡಲ್ಪಟ್ಟಿದ್ದ ಬಾಣಗಳಿಂದ ಬಹಳ ಬೇಗ ನಿರಸನಗೊಳಿಸಿದನು. ಮಹಾರಥನಾದ, ಮಹಾಬಲನಾದ, ಮಹಾಬಾಹುವಾದ ಆಧಿರಥಿಯು ಭೀಮನನ್ನು ನಿಶಿತವಾದ ಒಂಬತ್ತು ಮಹಾಬಾಣಗಳಿಂದ ಗಾಯಗೊಳಿಸಿದನು. ಮಾವಟಿಗನು ಅಂಕುಶದಿಂದ ಆನೆಯನ್ನು ನಿಯಂತ್ರಿಸುವಂತೆ–ಕರ್ಣನು ಬಾಣಗಳಿಂದ ಭೀಮಸೇನನನ್ನು ತಡೆಯುತ್ತಿದ್ದರೂ ಮಹಾಬಲನಾದ ವೃಕೋದರನು ಸ್ವಲ್ಪವಾದರೂ ಗಾಬರಿಗೊಳ್ಳದೇ ಕರ್ಣನನ್ನು ಎದುರಿಸುತ್ತಿದ್ದನು. ತನ್ನ ಮೇಲೆ ವೇಗದಿಂದ ಬೀಳಲು ಬರುತ್ತಿದ್ದ ವೇಗಶಾಲಿಯಾದ ಪಾಂಡವರ್ಷಭನಾದ ಭೀಮಸೇನನ ಮೇಲೆ ಕರ್ಣನು–ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯ ಮೇಲೆ ಎಗರಿ ಬೀಳುವಂತೆ–ದಾಳಿಮಾಡಿದನು. ಅನಂತರ ಕರ್ಣನು  ನೂರು ನಗಾರಿಗಳಿಗೆ ಸಮಾನವಾದ ಧ್ವನಿಯಿಂದ ಕೂಡಿದ್ದ ಶಂಖವನ್ನು ಗಟ್ಟಿಯಾಗಿ ಊದಿದನು.  ಹುಣ್ಣಿಮೆಯ ದಿವಸಗಳಲ್ಲಿ ಸಮುದ್ರವು ಉಕ್ಕಿಬರುವಂತೆ–

ಕೌರವರ ಸೈನ್ಯವು ಸಂತೋಷದಿಂದ ಉಬ್ಬಿಹೋಯಿತು. ಸಂತೋಷದಿಂದ ಮೈಯುಬ್ಬಿದ ಗಜಾಶ್ವ-ರಥ-ಪದಾತಿಗಳ ಸೈನ್ಯವನ್ನು ನೋಡಿ ಭೀಮಸೇನನು ಕರ್ಣನನ್ನು ಬಾಣಗಳಿಂದ ಮುಚ್ಚಿದನು. ಅದಕ್ಕೆ ಪ್ರತಿಯಾಗಿ ಕರ್ಣನೂ ಭೀಮಸೇನನನ್ನು ಬಾಣಗಳಿಂದ ಮುಚ್ಚುತ್ತಾ ಕರಡಿಯ ಬಣ್ಣಕ್ಕೆ ಸಮಾನ ವಾದ ಬಣ್ಣವಿದ್ದ ತನ್ನ ಕುದುರೆಗಳನ್ನು ಹಂಸದ ಬಣ್ಣವಿದ್ದ ಭೀಮಸೇನನ ಶ್ರೇಷ್ಠವಾದ ಕುದುರೆಗಳೊಡನೆ ಬೆರೆಸಿದನು. (ಕರ್ಣನು ತನ್ನ ಕುದುರೆಗಳನ್ನು ಭೀಮಸೇನನ ಕುದುರೆಗಳಿಗೆ ಅತ್ಯಂತ ಸಮೀಪದಲ್ಲಿ ನಿಲ್ಲಿಸಿದನು.) ಕರ್ಣನು ಕರಡಿಗಳ ಬಣ್ಣದ ತನ್ನ ಕುದುರೆಗಳನ್ನು ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ಭೀಮಸೇನನ ಬಿಳಿಯ ಕುದುರೆಗಳೊಡನೆ ಸಮ್ಮಿಶ್ರಿಸಿ ದುದನ್ನು ನೋಡಿ ನಿನ್ನ ಮಕ್ಕಳಲ್ಲಿ ದೊಡ್ಡದಾದ ಹಾಹಾಕಾರವೆದ್ದಿತು. ವಾಯುವೇಗದಿಂದ ಕೂಡಿದ್ದ ಭೀಮನ ಕುದುರೆಗಳು ಕರ್ಣನ ಕರಡೀಬಣ್ಣದ ಕುದುರೆಗಳೊಡನೆ ಸಮ್ಮಿಶ್ರಣಹೊಂದಿ–ಆಕಾಶದಲ್ಲಿ ಕಪ್ಪು ಮತ್ತು ಬಿಳಿಯ ಬಣ್ಣಗಳಿಂದ ಕೂಡಿದ ಮೋಡಗಳಂತೆಯೇ–ಪ್ರಕಾಶಿಸಿದುವು. ರೋಷಾವೇಷ ದಿಂದಿದ್ದ, ಕೋಪದಿಂದ ಕೆಂಗಣ್ಣರಾಗಿದ್ದ, ಕರ್ಣ-ಭೀಮರನ್ನು ಕಂಡು ನಿನ್ನ ಕಡೆಯ ಮಹಾರಥರು ಭಯಗೊಂಡು ನಡುಗಿದರು. ಅವರಿಬ್ಬರ ಕಾಳಗವು ಯಮರಾಜನ ರಾಷ್ಟ್ರದಂತೆ ಅತ್ಯಂತಭಯಂಕರವಾಗಿದ್ದಿತು. ಪ್ರೇತರಾಜನಾದ ಯಮನ ಪಟ್ಟಣವನ್ನು ನೋಡಲು ಸಾಧ್ಯವಾಗದಂತೆ–ಅವರು ಪರಸ್ಪರವಾಗಿ ಮಾಡುತ್ತಿದ್ದ ಯುದ್ಧವನ್ನು ಕಣ್ಣಿನಿಂದ ನೋಡಲೂ ಕೂಡ ಸಾಧ್ಯವಾಗುತ್ತಿರ ಲಿಲ್ಲ. ರಂಗಮಂಟಪದಲ್ಲಿ ನಡೆಯುವ ನಾಟಕೀಯವಾದ ಯುದ್ಧ ದಂತೆಯೇ ಚಿತ್ರ-ವಿಚಿತ್ರವಾಗಿ ನಡೆಯುತ್ತಿದ್ದ ಯುದ್ಧವನ್ನು ನೋಡುತ್ತಿದ್ದ ಮಹಾರಥರು ಇಬ್ಬರಲ್ಲಿ ಯಾವ ಒಬ್ಬನಿಗೂ ಜಯವು ಸಿಕ್ಕಿಯೇ ಸಿಕ್ಕುವು ದೆಂಬುದನ್ನು ನಿರೀಕ್ಷಿಸಿರಲಿಲ್ಲ. (ಯುದ್ಧವು ಸರಿಸಮವಾಗಿ ನಡೆಯುತ್ತಿದ್ದಿತು.) ಮಹಾರಾಜ! ಪುತ್ರಸಹಿತನಾದ ನಿನ್ನ ದುರ್ಮಂತ್ರಿತ್ವಕ್ಕೆ ಫಲರೂಪವಾಗಿ, ಮಹಾಸ್ತ್ರರಾದ ಕರ್ಣ-ಭೀಮರು ಅತ್ಯಂತ ಸಮೀಪದಲ್ಲಿ ನಿಂತು ಯುದ್ಧ ಮಾಡುತ್ತಿದ್ದುದನ್ನು ನಿನ್ನ ಕಡೆಯ ಮಹಾರಥರು ನೋಡುತ್ತಿದ್ದರು. ಅದ್ಭುತವಿಕ್ರಮರಾದ, ಶತ್ರುಹಂತಕರಾದ ರಾಧೇಯ-ಕೌಂತೇಯರು ನಿಶಿತವಾದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಮುಚ್ಚುತ್ತಾ, ಬಾಣಗಳ

ಸಮೂಹಗಳಿಂದ ಆಕಾಶವನ್ನೇ ಆವೃತವಾಗುವಂತೆ ಮಾಡಿದರು. ನಿಶಿತವಾದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಸಂಹರಿಸಬೇಕೆಂದು ಇಚ್ಛಿಸಿ ಯುದ್ಧ ಮಾಡುತ್ತಿದ್ದ ಆ ಇಬ್ಬರು ಮಹಾರಥರು ಮಳೆಗರೆಯುವ ಮೋಡಗಳಂತೆ ಪ್ರೇಕ್ಷಣೀಯರಾಗಿದ್ದರು. ಅರಿಂದಮರಾದ ಭೀಮ-ಕರ್ಣರು ಸುವರ್ಣ ಮಯವಾದ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಾ–ಉಲ್ಕೆಗಳಿಂದ (ಬಾಲಚುಕ್ಕಿಗಳಿಂದ ) ಆಕಾಶವು ಪ್ರಕಾಶಮಾನವಾಗುವಂತೆ–ಆಕಾಶವನ್ನು ಪ್ರಕಾಶಗೊಳಿಸಿದರು. ಶರತ್ಕಾಲದಲ್ಲಿ ಮದಿಸಿದ ಸಾರಸಪಕ್ಷಿಗಳ ಸಾಲುಗಳು. ಆಕಾಶದಲ್ಲಿ ಪ್ರಕಾಶಮಾನವಾಗಿ ಕಾಣುವಂತೆ ಭೀಮ-ಕರ್ಣರಿಂದ ಸತತವಾಗಿ ಬಿಡಲ್ಪಡುತ್ತಿದ್ದ, ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಬಾಣಗಳ ಸಾಲುಗಳು ಪ್ರಕಾಶಿಸುತ್ತಿದ್ದುವು. ಅರಿಂದಮನಾದ ಭೀಮಸೇನನು ಕರ್ಣನೊಡನೆ ಯುದ್ಧದಲ್ಲಿ ತೊಡಗಿರುವುದನ್ನು ಕಂಡು ಕೃಷ್ಣ-ಧನಂಜಯರು ಭೀಮನ ಮೇಲೆ ಅತಿಭಾರವಾದ ಹೊರೆಯು ಬಿದ್ದಿದೆಯೆಂದು ಭಾವಿಸಿದರು. ಕರ್ಣ- ಭೀಮರ ಬಾಣಗಳಿಂದ ದೃಢವಾಗಿ ಪ್ರಹೃತರಾದ ಗಜಾಶ್ವ-ಪದಾತಿಸೈನಿಕರು ಆ ಬಾಣಗಳು ಬೀಳುವ ಜಾಗವನ್ನೂ ಅತಿಕ್ರಮಿಸಿ ಬಹಳ ದೂರಕ್ಕೆ ಹೋಗಿ ಬೀಳುತ್ತಿದ್ದರು. (ಆ ಬಾಣಗಳು ಗಜಾಶ್ವ-ಪದಾತಿಗಳನ್ನು ಪ್ರಹರಿಸುತ್ತಿದ್ದುದು ಮಾತ್ರವಲ್ಲದೇ ಪ್ರಹರಿಸಿದನಂತರವೂ ಅವರನ್ನು ಬಹಳ ದೂರದವರೆಗೆ ದೂಡಿ ಕೆಳಕ್ಕೆ ಬೀಳಿಸುತ್ತಿದ್ದುವು.) ಭೀಮನ ಬಾಣಗಳಿಂದ ಪ್ರಹೃತರಾಗಿ ಅನೇಕರು ಕೆಳಕ್ಕೆ ಬೀಳುತ್ತಿದ್ದರು. ಹೀಗೆ ನಿನ್ನ ಮಕ್ಕಳ ಸೈನ್ಯದಲ್ಲಿ ಅಪಾರವಾದ ಜನಕ್ಷಯವಾಯಿತು. ಗಜಾಶ್ವ-ಪದಾತಿಗಳ ನಿರ್ಜೀವವಾದ ಶರೀರಗಳಿಂದ ರಣಭೂಮಿಯು ಕ್ಷಣಮಾತ್ರದಲ್ಲಿ ತುಂಬಿಹೋಯಿತು."

೧೩೨ನೆಯ ಅಧ್ಯಾಯವು ಮುಗಿಯಿತು.

೧೩೩ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಕರ್ಣ–ಭೀಮರ ಯುದ್ಧ: ಕರ್ಣನ ರಥದ ವಿನಾಶ : ಧೃತರಾಷ್ಟ್ರನ ಮಗನಾದ ದುರ್ಜಯನ ವಧೆ

ಭೀಮಸೇನನ ಪರಾಕ್ರಮಕಥನವನ್ನು ಕೇಳಿದ ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ :

“ಸಂಜಯ! ಭೀಮಸೇನನ ಪರಾಕ್ರಮವು ಅತ್ಯದ್ಭುತವಾದುದೆಂದೇ ನಾನು ಭಾವಿಸುತ್ತೇನೆ. ವೇಗವಿಕ್ರಮನಾದ ಕರ್ಣನನ್ನೂ ಅತಿಶಯಿಸಿ ಅವನು ಯುದ್ಧಮಾಡಿರುವನು. ಸರ್ವಾಸ್ತ್ರಗಳನ್ನೂ ಹೊಂದಿರುವ ಯಕ್ಷಾಸುರ-ಮಾನವರೊಡನೆ ಕೂಡಿರುವ ದೇವತೆಗಳನ್ನೂ ಸಹ ಕರ್ಣನು ಯುದ್ಧದಲ್ಲಿ ತಡೆದು ನಿಲ್ಲಿಸಬಲ್ಲನು. ಅಂತಹ ಅತುಲವಿಕ್ರಮನಾದ ಕರ್ಣನು ವಿಜಯ ಲಕ್ಷ್ಮಿಯಿಂದ ಸಮಲಂಕೃತನಾದವನಂತೆ ಕಾಣುತ್ತಿದ್ದ ಕುಂತಿಯ ಮಗನಾದ ಭೀಮಸೇನನನ್ನು ಯಾವ ಕಾರಣದಿಂದ ಅತಿಕ್ರಮಿಸಲಿಲ್ಲ? (ಪರಾಜಯ ಗೊಳಿಸಲಿಲ್ಲ?) ಈ ವಿಷಯವನ್ನು ನನಗೆ ಹೇಳು, ಸಂಜಯ! ಪ್ರಾಣ ಗಳನ್ನೇ ಪಣವನ್ನಾಗಿಟ್ಟು ಯುದ್ಧದ್ಯೂತವಾಡುತ್ತಿದ್ದ ಆ ಇಬ್ಬರ ನಡುವೆ ಯುದ್ಧವು ಹೇಗೆ ನಡೆಯಿತು? ಅವರಿಬ್ಬರ ಈ ಯುದ್ಧದ್ಯೂತದಲ್ಲಿಯೇ ಜಯವಾಗಲೀ–ಅಪಜಯವಾಗಲೀ ನಿರ್ಧಾರವಾಗಬೇಕಾಗಿದೆಯೆಂದು ನಾನು ಭಾವಿಸಿದ್ದೇನೆ. ರಣಕ್ಷೇತ್ರದಲ್ಲಿ ಕರ್ಣನೊಬ್ಬನ ಸಹಾಯದಿಂದಲೇ ನನ್ನ ಮಗ ನಾದ ಸುಯೋಧನನು ಶ್ರೀಕೃಷ್ಣ-ಸಾತ್ಯಕಿಗಳೇ ಮೊದಲಾದವರಿಂದ ಕೂಡಿದ ಸಮಸ್ತಪಾರ್ಥರನ್ನೂ ಜಯಿಸುವ ಉತ್ಸಾಹದಿಂದಿರುತ್ತಾನೆ. ಭೀಮಕರ್ಮ ನಾದ ಭೀಮಸೇನನು ಕರ್ಣನನ್ನು ಹಲವು ಬಾರಿ ಜಯಿಸಿದನೆಂಬ ವಾರ್ತೆ ಯನ್ನು ಕೇಳಿ ನನ್ನ ಮನಸ್ಸು ಮೋಹಪರವಶವಾಗುತ್ತಿರುವಂತೆ ಕಾಣುತ್ತಿದೆ (ಎಚ್ಚರತಪ್ಪುವುದರಲ್ಲಿದ್ದೇನೆ). ನನ್ನ ಮಗನ ದುರ್ನೀತಿಯಿಂದಾಗಿ ನನ್ನ ಮಕ್ಕಳೆಲ್ಲರೂ ವಿನಾಶಹೊಂದಿದರೆಂದೇ ಭಾವಿಸಿದ್ದೇನೆ. ಖಂಡಿತವಾಗಿಯೂ ಕರ್ಣನು ಮಹಾಧನುಷ್ಮಂತರಾದ ಪಾರ್ಥರನ್ನು ಜಯಿಸುವುದಿಲ್ಲ. ಕರ್ಣನು ಪಾಂಡುವಿನ ಮಕ್ಕಳೊಡನೆ ಎಷ್ಟು ಸಲ ಯುದ್ಧಗಳನ್ನು ಮಾಡಿದನೋ ಆ ಎಲ್ಲ ಯುದ್ಧಗಳಲ್ಲಿಯೂ ಪಾಂಡವರೇ ಕರ್ಣನನ್ನು ಜಯಿಸಿದ್ದಾರೆ. ಮಗು, ಸಂಜಯ! ಪಾಂಡವರು ಇಂದ್ರಸಹಿತರಾದ ದೇವತೆಗಳಿಂದಲೂ ಜಯಿಸ ಲ್ಪಡತಕ್ಕವರಲ್ಲ. ಆದರೆ ಈ ವಿಷಯವನ್ನು ಮೂರ್ಖನಾದ ನನ್ನ ಪುತ್ರ ದುರ್ಯೋಧನನು ತಿಳಿದುಕೊಂಡಿಲ್ಲ. ಕುಬೇರಸದೃಶನಾದ ಯುಧಿಷ್ಠಿರ ನಿಂದ ರಾಜ್ಯ-ಕೋಶಗಳನ್ನು ಅಪಹರಿಸಿರುವ ನನ್ನ ಮಗನು-ಜೇನು ತುಪ್ಪವನ್ನಾಶಿಸಿ ಕೆಳಗಿರುವ ಪ್ರಪಾತವನ್ನು ತಿಳಿಯದೇ ಅದನ್ನು ಪಡೆದು ಕೊಳ್ಳಲು ಪ್ರಯತ್ನಿಸುವ ಬುದ್ಧಿಹೀನನಾದ ಮನುಷ್ಯನಂತೆ–ರಾಜ್ಯಾ

ಪಹಾರದ ಫಲಿತಾಂಶವೇನೆಂಬುದನ್ನು ತಿಳಿದವನಾಗಿಲ್ಲ. ವಂಚನೆಯ ಬುದ್ಧಿಯಿಂದ ಕೂಡಿರುವ ನನ್ನ ಮಗನು ಮೋಸದ ಮಾರ್ಗದಿಂದಲೇ ಮಹಾತ್ಮರಾದ ಪಾಂಡವರ ರಾಜ್ಯವನ್ನು ಅಪಹರಿಸಿ ಅಷ್ಟುಮಾತ್ರದಿಂದಲೇ ಪಾಂಡವರು ಜಯಿಸಲ್ಪಟ್ಟರೆಂದು ಭ್ರಮಿಸಿ ಅವರನ್ನು ಅಪಮಾನಗೊಳಿಸಿದನು. (ನೀನು ಹೇಳಿದಂತೆ ನಾನೂ ಇದಕ್ಕೆ ಕಾರಣನಾಗಿದ್ದೇನೆ. ನಾನೂ ನಿರಪರಾಧಿಯಲ್ಲ.) ಜಿತೇಂದ್ರಿಯನಲ್ಲದ ನಾನೂ ಸಹ ಪುತ್ರಸ್ನೇಹವೆಂಬ ವ್ಯಾಮೋಹದಿಂದ ಬದ್ಧನಾಗಿ ಧರ್ಮದಲ್ಲಿಯೇ ಸ್ಥಿರವಾದ ಬುದ್ಧಿಯುಳ್ಳವರಾಗಿದ್ದ ಪಾಂಡುನಂದನರನ್ನು ವಂಚಿಸಿದೆನು. ಸರ್ವನಾಶವಾಗುವುದೆಂದು ಮುಂದಾಗಿಯೇ ಯೋಚಿಸಿದ್ದ, ದೀರ್ಘದರ್ಶಿಯಾದ, ಸಹೋದರರಿಂದೊಡಗೂಡಿದ ಯುಧಿಷ್ಠಿರನು ನಮ್ಮೊಡನೆ ಸಂಧಿಯನ್ನೇ ಮಾಡಿಕೊಳ್ಳಬೇಕೆಂಬ ಅಪೇಕ್ಷೆಯಿಂದಲೇ ಇದ್ದನು. ಆದರೆ ಅವನು ಸಂಧಿಗಾಗಿ ಬಂದುದನ್ನು ನನ್ನ ಮಗನು ಯುದ್ಧಮಾಡಲು ಅಶಕ್ತತೆಯಿಂದ ಸಂಧಿಗಾಗಿ ಬಂದನೆಂದು ಭಾವಿಸಿ ಸಂಧಿಯ ಮಾತನ್ನೇ ಸಂಪೂರ್ಣವಾಗಿ ತಿರಸ್ಕರಿಸಿದನು. ನೀನು ಹೇಳಿದಂತೆಯೇ ಆ ಎಲ್ಲ ದುಃಖಗಳನ್ನೂ, ನಾನು ಮಾಡಿದ ಅನೇಕವಾದ ಅಪಕಾರಗಳನ್ನೂ ಮತ್ತು ನಾವು ಕೊಟ್ಟ ಕ್ಲೇಶಗಳನ್ನೂ ಮನಸ್ಸಿನಲ್ಲಿಟ್ಟುಕೊಂಡು ಮಹಾಬಾಹುವಾದ ಭೀಮಸೇನನು ಕರ್ಣನೊಡನೆ ಯುದ್ಧಮಾಡುತ್ತಿದ್ದನು. ಪರಸ್ಪರದ್ವೇಷಿಗಳಾದ ಯೋಧಶ್ರೇಷ್ಠರಾದ ಕರ್ಣ-ಭೀಮರು ಮುಂದೆ ಯಾವ ರೀತಿಯಲ್ಲಿ ಯುದ್ಧಮಾಡಿದರೆಂಬುದನ್ನು ಹೇಳು, ಸಂಜಯ!''

''ಮಹಾರಾಜ! ಅರಣ್ಯದಲ್ಲಿರುವ ಎರಡು ಸಲಗಗಳ ನಡುವೆ ಕಾಳಗವು ನಡೆಯುವಂತೆ–ಒಬ್ಬರು ಮತ್ತೊಬ್ಬರನ್ನು ಕೊಲ್ಲಬೇಕೆಂದು ನಿಶ್ಚಯಿಸಿ ಯುದ್ಧಮಾಡುತ್ತಿದ್ದ ಕರ್ಣ-ಭೀಮರ ಯುದ್ಧವು ಹೇಗೆ ನಡೆಯಿತೆಂದು ಹೇಳುವೆನು ; ಕೇಳು. ಕ್ರುದ್ಧನಾದ ಕರ್ಣನು, ಶತ್ರುಗಳನ್ನು ದಮನಮಾಡುವ, ಯುದ್ಧದಲ್ಲಿ ಮಹಾಪರಾಕ್ರಮವನ್ನು ಪ್ರದರ್ಶಿಸುತ್ತಿದ್ದ, ಪರಮಕ್ರುದ್ಧನಾದ ಭೀಮಸೇನನಿಗೆ ತನ್ನ ಪರಾಕ್ರಮವನ್ನೂ ತೋರಿಸುತ್ತಾ ಮಹಾವೇಗಯುಕ್ತವಾಗಿದ್ದ, ನಿಶಿತವಾದ ಅಲುಗಿನಿಂದ ಕೂಡಿದ್ದ ಸುವರ್ಣದಿಂದ ಶೃಂಗರಿಸಲ್ಪಟ್ಟಿದ್ದ ಮೂವತ್ತು ಬಾಣಗಳಿಂದ ಅವನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಭೀಮಸೇನನು ನಿಶಿತವಾದ ಮೂರು

ಬಾಣಗಳಿಂದ ಕರ್ಣನ ಧನುಸ್ಸನ್ನು ಕತ್ತರಿಸಿದನು. ಅನಂತರ ಭೀಮಸೇನನು ಭಲ್ಲದಿಂದ ಸಾರಥಿಯನ್ನೂ ರಥನೀಡದಿಂದ (ರಥದಲ್ಲಿ ಸಾರಥಿಯು ಕುಳಿತುಕೊಳ್ಳುವ ಸ್ಥಾನ) ಕೆಳಕ್ಕೆ ಕೆಡವಿದನು. ಧನುಸ್ಸನ್ನು ಕಳೆದುಕೊಂಡ ಕರ್ಣನು ಯಾವುದೇ ರೀತಿಯಿಂದಾದರೂ ಭೀಮಸೇನನನ್ನು ಸಂಹರಿಸ ಬೇಕೆನ್ನುವ ಉತ್ಕಟೇಚ್ಛೆಯಿಂದ, ಚಿನ್ನದಿಂದಲೂ, ವೈಡೂರ್ಯದಿಂದಲೂ ಸಮಲಂಕೃತವಾದ ದಂಡದಿಂದ ಕೂಡಿದ್ದ ಶಕ್ತ್ಯಾಯುಧವನ್ನು ಸ್ಪರ್ಶಿಸಿದನು. ಮಹಾಬಲನಾದ ರಾಧೇಯನು ಮತ್ತೊಂದು ಕಾಲಶಕ್ತಿಯಂತೆಯೇ ಇದ್ದ ಮಹಾಶಕ್ತಿಯನ್ನು ಮೇಲಕ್ಕೆತ್ತಿ ಹಿಡಿದುಕೊಂಡು ಭೀಮನನ್ನು ಅನುಲಕ್ಷಿಸಿ ಜೀವಿತಕ್ಕೆ ಅಂತವನ್ನುಂಟುಮಾಡುವಂತೆಯೇ ಇದ್ದ ಅದನ್ನು ಭೀಮಸೇನನ ಮೇಲೆ ರಭಸದಿಂದ ಎಸೆದನು. ಇಂದ್ರನು ವಜ್ರಾಯುಧವನ್ನು ಪ್ರಯೋಗಿಸುವಂತೆ–ಬಲಿಷ್ಠನಾದ, ಸೂತನ ಮಗನಾದ ರಾಧೇಯನು ಮಹಾಶಕ್ತ್ಯಾಯುಧವನ್ನು ಭೀಮಸೇನನ ಮೇಲೆ ರಭಸದಿಂದೆಸೆದು ಗಟ್ಟಿಯಾಗಿ ಗರ್ಜನೆಯನ್ನು ಮಾಡಿದನು. ಕರ್ಣನ ಆ ಸಿಂಹನಾದವನ್ನು ಕೇಳಿ ನಿನ್ನ ಮಕ್ಕಳು ಆನಂದತುಂದಿಲರಾದರು. ಸೂರ್ಯಾಗ್ನಿಗಳಿಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ಕರ್ಣನ ಭುಜದಿಂದ ವಿಮುಕ್ತವಾದ ಶಕ್ತ್ಯಾಯುಧವನ್ನು ಭೀಮಸೇನನು ಶೀಘ್ರವಾಗಿ ಹೋಗುವ ಏಳು ಬಾಣಗಳಿಂದ ಆಕಾಶದಲ್ಲಿಯೇ ಕತ್ತರಿಸಿಬಿಟ್ಟನು. ಪೊರೆಯನ್ನು ಬಿಟ್ಟ ಹಾವಿನಂತೆಯೇ ಇದ್ದ ಶಕ್ತ್ಯಾಯುಧವನ್ನು ಕತ್ತರಿಸಿದ ಭೀಮಸೇನನು ಬಹಳ ಕುಪಿತನಾಗಿ ಸೂತಪುತ್ರನ ಪ್ರಾಣಗಳನ್ನು ಹುಡುಕುತ್ತಿರುವನೋ ಎಂಬಂತೆ ಪಕ್ಷಿಗಳ ರೆಕ್ಕೆಗಳನ್ನೇ ಆವರಣ ವಸ್ತ್ರಗಳನ್ನಾಗಿ ಹೊಂದಿದ್ದ, ಸುವರ್ಣಮಯವಾದ ಮೂಲಭಾಗವಿದ್ದ, ಮಸೆಗಲ್ಲಿನಿಂದ ಶುದ್ಧವಾಗಿ ಮಾಡಲ್ಪಟ್ಟಿದ್ದ ಯಮದಂಡಕ್ಕೆ ಸಮಾನವಾದ ಬಾಣಗಳನ್ನು ಕರ್ಣನ ಮೇಲೆ ಪ್ರಯೋಗಿಸಿದನು. ಕರ್ಣನೂ ಸಹ ಸುವರ್ಣಮಯವಾದ ಹಿಂಭಾಗದಿಂದ ಕೂಡಿದ್ದ, ದುರಾಸದವಾದ ಮತ್ತೊಂದು ಮಹಾಧನುಸ್ಸನ್ನು ಕೈಗೆತ್ತಿಕೊಂಡು ಸುದೀರ್ಘವಾಗಿ ಸೆಳೆದು ಅನೇಕ ಬಾಣಗಳನ್ನು ಭೀಮನಮೇಲೆ ಸುರಿಸಿದನು. ಪಾಂಡುವಿನ ಮಗನಾದ ಭೀಮಸೇನನು ವಸುಷೇಣನು ಬಿಟ್ಟ ಒಂಬತ್ತು ದೊಡ್ಡ ಬಾಣಗಳನ್ನು ಬಗ್ಗಿದ ಗಿಣ್ಣುಗಳಿದ್ದ ಒಂಬತ್ತು ಬಾಣಗಳಿಂದ ಕತ್ತರಿಸಿದನು. ಭೀಮಸೇನನು

ಕರ್ಣನು ಬಿಟ್ಟ ಮಹಾಬಾಣಗಳನ್ನು ಕತ್ತರಿಸಿದನಂತರ ಸಿಂಹದಂತೆಯೇ ಗರ್ಜನೆಮಾಡಿದನು. ಸೈನಿಕರ ಕೋಲಾಹಲಶಬ್ದಗಳ ಮಧ್ಯದಲ್ಲಿ–ಬೆದೆ ಬಂದಿರುವ ಕಡಸಿಗಾಗಿ ಗರ್ಜಿಸುವ ಎರಡು ಹೋರಿಗಳಂತೆಯೇ ಭೀಮ-ಕರ್ಣರು ಗರ್ಜಿಸುತ್ತಿದ್ದರು. ಮಾಂಸದ ಅಭಿಲಾಷೆಯಿಂದ ಪರಸ್ಪರವಾಗಿ ಗರ್ಜಿಸುವ ಎರಡು ಹುಲಿಗಳಂತೆಯೇ ಭೀಮ-ಕರ್ಣರು ಗರ್ಜಿಸುತ್ತಿದ್ದರು. ಅವರಿಬ್ಬರೂ ಗೋಶಾಲೆಯಲ್ಲಿರುವ ಎರಡು ಹೋರಿಗಳು ಪರಸ್ಪರವಾಗಿ ಸೆಣೆಸಾಡುವಂತೆ–ಪರಸ್ಪರವಾಗಿ ಗಾಯಗೊಳಿಸಲು ಇಚ್ಛಿಸುತ್ತಾ ಒಬ್ಬರು ಮತ್ತೊಬ್ಬರ ಛಿದ್ರವನ್ನೇ ಹುಡುಕುತ್ತಾ ಪರಸ್ಪರವಾಗಿ ದುರುಗುಟ್ಟಿಕೊಂಡು ನೋಡುತ್ತಿದ್ದರು. ಎರಡು ಮಹಾಗಜಗಳು ದಂತಗಳ ಅಗ್ರಭಾಗಗಳಿಂದ ಪರಸ್ಪರವಾಗಿ ಸೆಣೆಸಾಡುವಂತೆ–ಶಿಂಜಿನಿಯನ್ನು ಸುದೀರ್ಘವಾಗಿ ಸೆಳೆದು ಪ್ರಹರಿಸಿದ ಬಾಣಗಳಿಂದ ಕರ್ಣ-ಭೀಮರು ಬಡಿದಾಡಿದರು. ಮಹಾರಾಜ! ಶಸ್ತ್ರಗಳ ವೃಷ್ಟಿಯಿಂದ ಒಬ್ಬರು ಮತ್ತೊಬ್ಬರನ್ನು ಸುಟ್ಟುಹಾಕುತ್ತಿದ್ದರು. ಕೋಪದಿಂದ ಒಬ್ಬರು ಮತ್ತೊಬ್ಬರನ್ನು ಅಗಲವಾಗಿ ತೆರೆದ ಕಣ್ಣುಗಳಿಂದ ದುರುಗುಟ್ಟಿಕೊಂಡು ನೋಡುತ್ತಿದ್ದರು. ಒಬ್ಬರು ಮತ್ತೊಬ್ಬರನ್ನು ನೋಡಿ ತಿರಸ್ಕಾರಭಾವದಿಂದ, ಅಟ್ಟಹಾಸದಿಂದ ನಗುತ್ತಿದ್ದರು. ಬಾರಿ-ಬಾರಿಗೂ ಒಬ್ಬರು ಮತ್ತೊಬ್ಬರನ್ನು ಹೆದರಿಸುತ್ತಿದ್ದರು. ಶಂಖಗಳನ್ನೂ ಗಟ್ಟಿಯಾಗಿ ಊದುತ್ತಿದ್ದರು. ಹೀಗೆ ಅವರು ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ಪುನಃ ಭೀಮಸೇನನು ಕರ್ಣನ ಧನುಸ್ಸನ್ನು ಮುಷ್ಟಿಪ್ರದೇಶದಲ್ಲಿ (ಮುಷ್ಟಿಯಿಂದ ಧನುಸ್ಸನ್ನು ಹಿಡಿದಿದ್ದ ಸ್ಥಳದಲ್ಲಿ) ಕತ್ತರಿಸಿದನು. ಶಂಖದ ಬಣ್ಣದಿಂದ ಕೂಡಿದ್ದ ಕರ್ಣನ ಕುದುರೆಗಳನ್ನು ಬಾಣಗಳಿಂದ ಯಮನ ಮನೆಗೆ ಕಳುಹಿಸಿಕೊಟ್ಟನು. ಕರ್ಣನ ಸಾರಥಿಯನ್ನೂ ಸಹ ಬಾಣದಿಂದ ಸಂಹರಿಸಿ ರಥನೀಡದಿಂದ ಕೆಳಕ್ಕೆ ಬೀಳಿಸಿದನು.

ಕುದುರೆಗಳನ್ನೂ, ಸಾರಥಿಯನ್ನೂ ಕಳೆದುಕೊಂಡ ಕರ್ಣನು ಭೀಮನ ಬಾಣಸಮೂಹಗಳಿಂದ ಮುಚ್ಚಲ್ಪಟ್ಟವನಾಗಿ ಬಗೆಹರಿಯದ ಚಿಂತೆಯಲ್ಲಿ ಮಗ್ನನಾದನು. ಭೀಮನು ಅವ್ಯಾಹತವಾಗಿ ಬಿಡುತ್ತಿದ್ದ ಬಾಣಗಳ ಸಮೂಹದಿಂದ ಭ್ರಾಂತನಾದ ವೈಕರ್ತನನು ಆ ಸಮಯದಲ್ಲಿ ತನ್ನ ಕರ್ತವ್ಯ ವೇನೆಂಬುದನ್ನೇ ಅರಿಯದೇ ಹೋದನು. ಅಂತಹ ದಾರುಣವಾದ ಕಷ್ಟದಲ್ಲಿ

ಸಿಕ್ಕಿದ ಕರ್ಣನನ್ನು ನೋಡಿ ದುರ್ಯೋಧನರಾಜನು ಕೋಪದಿಂದ ಮೈನಡುಗಿಸುತ್ತಾ ದುರ್ಜಯನಿಗೆ ಆದೇಶನೀಡುತ್ತಾ ಹೇಳಿದನು :

"ದುರ್ಜಯ! ಭೀಮಸೇನನು ಕರ್ಣನನ್ನು ನುಂಗಿಹಾಕುತ್ತಿದ್ದಾನೆ. ಆದುದರಿಂದ ಭೀಮನು ಕರ್ಣನನ್ನು ನುಂಗುವುದಕ್ಕೆ ಮೊದಲೇ ಕರ್ಣನಿಗೆ ಬೆಂಬಲಿಗನಾಗಿ ನೀನಲ್ಲಿಗೆ ಶೀಘ್ರವಾಗಿ ಹೋಗು. ಗಡ್ಡ-ಮೀಸೆಗಳೇ ಇಲ್ಲದ ಆ ತೂಬರಕನನ್ನು ಬೇಗನೇ ಸಂಹರಿಸು."

ಮಹಾರಾಜ! ದುರ್ಯೋಧನನು ಹೀಗೆಂದು ಹೇಳಿದೊಡನೆಯೇ ನಿನ್ನ ಮಗನಾದ ದುರ್ಜಯನು ಹಾಗೆಯೇ ಆಗಲೆಂದು ಹೇಳಿ ಯುದ್ಧದಲ್ಲಿಯೇ ಅತ್ಯಂತಾಸಕ್ತನಾಗಿದ್ದ ಭೀಮಸೇನನ ಮೇಲೆ ಬಾಣಗಳನ್ನು ಸುರಿಸುತ್ತಾ ಅವನನ್ನು ಆಕ್ರಮಿಸಿದನು. ಮಹಾಶೂರನಾದ ದುರ್ಜಯನು ಭೀಮಸೇನ ನನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿ, ಪುನಃ ಏಳು ಬಾಣಗಳಿಂದ ಗಾಯಗೊಳಿಸಿದನು. ಅದರಿಂದ ಬಹಳವಾಗಿ ಕೋಪಗೊಂಡ ಭೀಮಸೇನನು ಶೀಘ್ರವಾಗಿ ಹೋಗುವ ಬಾಣಗಳಿಂದ ದುರ್ಜಯನನ್ನು ಮರ್ಮಸ್ಥಳಗಳಲ್ಲಿ ಪ್ರಹರಿಸಿ ಅಶ್ವ-ಸಾರಥಿಗಳೊಡನೆ ಯಮನ ಮನೆಗೆ ಕಳುಹಿಸಿದನು. ಆಭರಣಾದಿಗಳಿಂದ ಅಲಂಕೃತನಾಗಿದ್ದ, ಭೀಮನ ಬಾಣಗಳಿಂದ ಕ್ಷತ-ವಿಕ್ಷತನಾಗಿದ್ದ, ಭೂಮಿಯ ಮೇಲೆ ಬಿದ್ದು ಪೆಟ್ಟುತಿಂದ ಸರ್ಪದಂತೆ ಹೊರಳಾಡುತ್ತಿದ್ದ ನಿನ್ನ ಮಗನನ್ನು ನೋಡಿ ಶೋಕಾರ್ತನಾದ ಕರ್ಣನು ಕಂಬನಿಗರೆಯುತ್ತಾ ಅವನ ಪ್ರದಕ್ಷಿಣೆಮಾಡಿದನು. ಭೀಮಸೇನನು, ಅತ್ಯಂತ ವೈರಿಯಾದ ಕರ್ಣನ ಸಾರಥಿಯನ್ನೂ, ಕುದುರೆಗಳನ್ನೂ ಕೊಂದು ಅವನನ್ನು ರಥದಿಂದ ವಿಹೀನನನ್ನಾಗಿ ಮಾಡಿ–ಶತಘ್ನಿಗಳಿಂದಲೂ, ಅಂಕುಶಗಳಿಂದಲೂ ಮತ್ತು ಇನ್ನೂ ಅನೇಕ ಬಾಣಗಳಿಂದಲೂ ಮುಚ್ಚಿಬಿಟ್ಟನು. ಭೀಮನ ನಾನಾವಿಧವಾದ ಬಾಣಗಳಿಂದ ಅಧಿರಥನ ಮಗನಾದ ಪರಂತಪನಾದ ಕರ್ಣನು ಕ್ಷತ-ವಿಕ್ಷತನಾಗುತ್ತಿದ್ದರೂ ಕೋಪದ ರೂಪವನ್ನೇ ತಾಳಿದ್ದ ಭೀಮಸೇನನನ್ನು ಬಿಟ್ಟು ಕದಲಲಿಲ್ಲ. (ಅವನಿಗೆ ಹೆದರಿ ಓಡಿಹೋಗಲಿಲ್ಲ.)"

೧೩೩ನೆಯ ಅಧ್ಯಾಯವು ಮುಗಿಯಿತು.

೧೩೪ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಭೀಮಸೇನ–ಕರ್ಣರ ಯುದ್ಧ: ಭೀಮಸೇನನಿಂದ ದುರ್ಮುಖನ ವಧೆ: ಕರ್ಣನ ಪಲಾಯನ

ಸಂಜಯನು ಪುನಃ ಭೀಮ-ಕರ್ಣರ ಯುದ್ಧವನ್ನು ವರ್ಣಿಸುತ್ತಾನೆ :

"ಮಹಾರಾಜ! ರಥವನ್ನು ಕಳೆದುಕೊಂಡು ಭೀಮನಿಂದ ಸಂಪೂರ್ಣ ವಾಗಿ ನಿರ್ಜಿತನಾಗಿದ್ದ ಕರ್ಣನು ಮತ್ತೊಂದು ರಥದಲ್ಲಿ ಕುಳಿತು ಭೀಮಸೇನ ನನ್ನು ಬಾಣಗಳಿಂದ ಪುನಃ ಪ್ರಹರಿಸಿದನು. ಮಹಾಗಜಗಳು ಪರಸ್ಪರವಾಗಿ ದಂತಗಳ ಅಗ್ರಭಾಗಗಳಿಂದಲೇ ಕಾಳಗವಾಡುವಂತೆ ಶಿಂಜಿನಿಯನ್ನು ಸುದೀರ್ಘವಾಗಿ ಸೆಳೆದುಬಿಡುತ್ತಿದ್ದ ಬಾಣಗಳಿಂದ ಭೀಮ-ಕರ್ಣರು ಪರಸ್ಪರ ವಾಗಿ ಸಂಘರ್ಷಿಸಿದರು. ಕರ್ಣನು ಬಾಣಗಳ ಸಮೂಹಗಳಿಂದ ಭೀಮಸೇನ ನನ್ನು ಪ್ರಹರಿಸಿದನು. ಗಟ್ಟಿಯಾಗಿ ಗರ್ಜನೆಮಾಡುತ್ತಾ (ಭೀಮನಿನ್ನೂ ಚೇತ ರಿಸಿಕೊಳ್ಳುವುದರಲ್ಲಿದ್ದಾಗಲೇ) ಪುನಃ ಅವನ ವಕ್ಷಃಸ್ಥಳವನ್ನು ನಿಶಿತವಾದ ಬಾಣ ಗಳಿಂದ ಕರ್ಣನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಭೀಮಸೇನನೂ ನೇರ ವಾಗಿ ಹೋಗುವ ಹತ್ತು ಬಾಣಗಳಿಂದ ಕರ್ಣನನ್ನು ಪ್ರಹರಿಸಿ, ಪುನಃ ಬಗ್ಗಿದ ಗಿಣ್ಣುಗಳಿದ್ದ ಎಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಒಡನೆಯೇ ಕರ್ಣನು ಒಂಬತ್ತು ಬಾಣಗಳಿಂದ ಭೀಮನ ವಕ್ಷಃಸ್ಥಳವನ್ನು ಪ್ರಹರಿಸಿ ರಥದ ಧ್ವಜವನ್ನು ನಿಶಿತವಾದ ಒಂದು ಬಾಣದಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಭೀಮನು–ಅಂಕುಶಗಳಿಂದ ಮಹಾಗಜವನ್ನೂ ಚಾವಟಿಗಳಿಂದ ಕುದುರೆ ಯನ್ನೂ ಪ್ರಹರಿಸುವಂತೆ–ಕರ್ಣನನ್ನು ಅರುವತ್ತುಮೂರು ಬಾಣಗಳಿಂದ ಪ್ರಹರಿಸಿದನು. ಯಶೋವಂತನಾದ ಪಾಂಡವೇಯನ ಬಾಣಗಳಿಂದ ಬಹಳ ವಾಗಿ ಗಾಯಗೊಂಡ ಕರ್ಣನು ಕ್ರೋಧದಿಂದ ರಕ್ತನೇತ್ರನಾಗಿ ತನ್ನ ಕಟ ವಾಯಿಗಳನ್ನು ನಾಲಿಗೆಯಿಂದ ನೆಕ್ಕಿಕೊಳ್ಳುತ್ತಾ ಎಂತಹ ಶರೀರವನ್ನಾದರೂ ಸೀಳಿಕೊಂಡು ಒಳಹೋಗುವ ಒಂದು ಬಾಣವನ್ನು–ಇಂದ್ರನು ವಜ್ರಾಯುಧ ವನ್ನು ಬಲಾಸುರನ ಮೇಲೆ ಪ್ರಯೋಗಿಸಿದಂತೆ–ಭೀಮಸೇನನ ಮೇಲೆ ಪ್ರಯೋಗಿಸಿದನು. ಚಿತ್ರಿತವಾದ ಹಿಂಭಾಗದಿಂದ ಕೂಡಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ಸೂತಪುತ್ರನ ಧನುಸ್ಸಿನಿಂದ ಚ್ಯುತವಾದ ಆ ಬಾಣವು ಭೀಮಸೇನನನ್ನು ಸೀಳಿಕೊಂಡು ಹೊರಬಂದು ಭೂಮಿಯನ್ನೂ ಸೀಳಿ ಒಳಹೊಕ್ಕಿತು. ಅದರಿಂದ ಬಹಳವಾಗಿ ಗಾಯಗೊಂಡ ಮಹಾಬಾಹುವಾದ ಭೀಮಸೇನನು ಪರಮಕ್ರುದ್ಧನಾದನು. ಕಣ್ಣುಗಳು ಕೆಂಪಾದುವು. ನಾಲ್ಕು ಮೊಳಗಳಷ್ಟು ಉದ್ದವಾಗಿದ್ದ, ವಜ್ರಾಯುಧಕ್ಕೆ ಸಮಾನವಾಗಿದ್ದ, ಬಹಳಭಾರವಾಗಿದ್ದ, ಸುವರ್ಣಮಯವಾದ ಆಭರಣಗಳಿಂದ ಸಮಲಂಕೃತ

ವಾಗಿದ್ದ, ಆರು ಕೋಣಗಳಿಂದ ಕೂಡಿದ್ದ ಗದೆಯನ್ನು ಹಿಂದು-ಮುಂದು ನೋಡದೇ ಕರ್ಣನ ಕಡೆಗೆ ಎಸೆದನು. ಕ್ರುದ್ಧನಾದ ಇಂದ್ರನು ವಜ್ರಾಯುಧ ದಿಂದ ಅಸುರರನ್ನು ಸಂಹರಿಸುತ್ತಿದ್ದಂತೆ–ಭೀಮಸೇನನು ತನ್ನ ಗದೆಯಿಂದ ಹೆಚ್ಚು ಭಾರವನ್ನು ಹೊರುವ ಸಾಮರ್ಥ್ಯವನ್ನು ಹೊಂದಿದ್ದ ಕರ್ಣನ ಉತ್ತಮಾಶ್ವಗಳನ್ನು ಸಂಹರಿಸಿದನು. ಅನಂತರ ಮಹಾಬಾಹುವಾದ ಭೀಮ ಸೇನನು ಎರಡು ಕ್ಷುರಗಳಿಂದ ಕರ್ಣನ ಧ್ವಜವನ್ನು ಕತ್ತರಿಸಿ ಅನಂತರ ಅನೇಕ ಬಾಣಗಳಿಂದ ಕರ್ಣನ ಸೂತನನ್ನೂ ಸಂಹರಿಸಿದನು. ಕರ್ಣನು ಧ್ವಜದಿಂದ ವಿಹೀನವಾಗಿದ್ದ, ಅಶ್ವ-ಸಾರಥಿಗಳಿಂದಲೂ ವಿಹೀನವಾಗಿದ್ದ ಆ ರಥವನ್ನು ಬಿಟ್ಟು ಕೆಳಗಿಳಿದು ಧನುಸ್ಸನ್ನು ಟೇಂಕರಿಸುತ್ತಾ ಭಾರವಾದ ಮನಸ್ಸಿನಿಂದ ಅಲ್ಲಿಯೇ ನಿಂತನು. ಆ ಸಮಯದಲ್ಲಿ ನಾವು ರಾಧೇಯನ ಅದ್ಭುತಪರಾಕ್ರಮ ವನ್ನು ಕಂಡೆವು. ರಥಿಗಳಲ್ಲಿ ಶ್ರೇಷ್ಠನಾದ ಕರ್ಣನು ರಥವಿಲ್ಲದೆಯೇ ಶತ್ರುವಾದ ಭೀಮಸೇನನನ್ನು ತಡೆದು ನಿಲ್ಲಿಸಿದನು. ಅಧಿರಥನ ಮಗನಾದ ಕರ್ಣನು ಯುದ್ಧದಲ್ಲಿ ರಥಹೀನನಾಗಿರುವುದನ್ನು ಕಂಡು ದುರ್ಯೋಧನನು ದುರ್ಮುಖನೊಡನೆ ಹೇಳಿದನು : "ದುರ್ಮುಖ! ಭೀಮನು ಕರ್ಣನನ್ನು ರಥಹೀನನನ್ನಾಗಿ ಮಾಡಿರುವನು. ಆದುದರಿಂದ ನೀನೀಗಲೇ ಹೋಗಿ ಮಹಾರಥನಾದ ಕರ್ಣನಿಗೆ ರಥವನ್ನು ಒದಗಿಸಿಕೊಡು."

ಮಹಾರಾಜ! ದುರ್ಯೋಧನನ ಆ ಮಾತನ್ನು ಕೇಳಿ ದುರ್ಮುಖನು ತ್ವರೆಯಿಂದ ಕರ್ಣನ ಬಳಿಗೆ ಹೋಗಿ ಭೀಮಸೇನನನ್ನು ಬಾಣಗಳಿಂದ ತಡೆದು ನಿಲ್ಲಿಸಿದನು. ಸೂತಪುತ್ರನಾದ ಕರ್ಣನಿಗೆ ಬೆಂಬಲಿಸಲು ರಣಾಂಗಣಕ್ಕೆ ಬಂದ ದುರ್ಮುಖನನ್ನು ನೋಡಿದ ವಾಯುಪುತ್ರನಾದ ಭೀಮನು ಪರಮ ಹೃಷ್ಟನಾಗಿ ಕಟವಾಯಿಗಳನ್ನು ನಾಲಿಗೆಯಿಂದ ಸವರಿಕೊಳ್ಳುತ್ತಾ ಬಾಣ ಗಳಿಂದ ಕರ್ಣನನ್ನು ನಿಂತಲ್ಲಿಯೇ ನಿಲ್ಲುವಂತೆ ಮಾಡಿ, ತನ್ನ ರಥವನ್ನು ದುರ್ಮುಖನ ರಥದ ಬಳಿಗೆ ದೌಡಾಯಿಸಿದನು. ಮರುಕ್ಷಣದಲ್ಲಿಯೇ ಭೀಮಸೇನನು ಬಗ್ಗಿದ ಗಿಣ್ಣುಗಳಿದ್ದ ಸುಮುಖಗಳಿದ್ದ (ಸುನಿಶಿತವಾದ ಅಗ್ರಭಾಗಗಳನ್ನು ಹೊಂದಿದ್ದ) ಒಂಬತ್ತು ಬಾಣಗಳಿಂದ ದುರ್ಮುಖನನ್ನು ಪ್ರಹರಿಸಿ ಯಮನ ಲೋಕಕ್ಕೆ ಕಳುಹಿಸಿಕೊಟ್ಟನು. ದುರ್ಮುಖನು ಹತನಾದನಂತರ ಅದೇ ರಥದಲ್ಲಿಯೇ ಕುಳಿತಿದ್ದ ಕರ್ಣನು ದೇದೀಪ್ಯಮಾನ

ನಾದ ಸೂರ್ಯನೋಪಾದಿಯಲ್ಲಿ ಪ್ರಕಾಶಿಸಿದನು. ಭಿನ್ನವಾದ ಮರ್ಮಸ್ಥಳ ಗಳಿದ್ದ, ರಕ್ತದಿಂದ ತೋಯ್ದುಹೋಗಿದ್ದ, ಭೂಮಿಯ ಮೇಲೆ ಪ್ರಾಣ ತೊರೆದು ಮಲಗಿದ್ದ ದುರ್ಮುಖನನ್ನು ಕಂಡು ಕಂಬನಿದುಂಬಿದ ಕರ್ಣನು ಸ್ವಲ್ಪಹೊತ್ತು ಸ್ತಬ್ಧನಾಗಿಯೇ ಕುಳಿತುಬಿಟ್ಟನು. ಪ್ರಾಣತೊರೆದು ಬಿದ್ದಿದ್ದ ದುರ್ಮುಖನಿಗೆ ಕರ್ಣನು ಪ್ರದಕ್ಷಿಣೆಯನ್ನು ಮಾಡಿ ಅವನನ್ನು ಅತಿಕ್ರಮಿಸಿ ಮುಂದೆಹೋಗಿ ದೀರ್ಘವಾಗಿ ಬಿಸಿಯಾದ ನಿಟ್ಟುಸಿರುಬಿಡುತ್ತಾ ಮುಂದೇನು ಮಾಡಬೇಕೆಂಬುದೇ ತಿಳಿಯದವನಾಗಿದ್ದನು. ಅಂತಹ ಅವಕಾಶವನ್ನೇ ಪ್ರತೀಕ್ಷಿಸುತ್ತಿದ್ದ ಭೀಮಸೇನನು ರಣಹದ್ದುಗಳ ರೆಕ್ಕೆಗಳನ್ನೇ ಬಟ್ಟೆಯ ರೂಪ ದಲ್ಲಿ ಧರಿಸಿದ್ದ ಹದಿನಾಲ್ಕು ಬಾಣಗಳನ್ನು ಸೂತಪುತ್ರನ ಮೇಲೆ ಪ್ರಹರಿಸಿ ದನು. ಭೀಮನು ಬಿಟ್ಟ ಸುವರ್ಣಮಯವಾದ ಮೂಲಭಾಗವನ್ನು ಹೊಂದಿದ್ದ, ಮಹಾತೇಜಸ್ಸಿನಿಂದ ಕೂಡಿದ್ದ ಆ ಬಾಣಗಳು ಸುವರ್ಣದಿಂದ ಚಿತ್ರಿತವಾಗಿದ್ದ ಕರ್ಣನ ಕವಚವನ್ನು ಭೇದಿಸಿ ಹತ್ತು ದಿಕ್ಕುಗಳನ್ನೂ ತಮ್ಮ ಕಾಂತಿಯಿಂದ ಬೆಳಗಿದುವು. ರಕ್ತವೇ ಭೋಜನವಾಗಿ ಉಳ್ಳ ಆ ಬಾಣಗಳು ಕಾಲಪ್ರೇರಿತವಾದ ಕ್ರುದ್ಧಸರ್ಪಗಳಂತೆ ಸೂತಪುತ್ರನ ರಕ್ತವನ್ನು ಚೆನ್ನಾಗಿ ಪಾನಮಾಡಿದುವು. ಕೋಪಗೊಂಡ ಮಹಾನಾಗಗಳು ಅರ್ಧಭಾಗ ಮಾತ್ರ ಬಿಲದಲ್ಲಿ ಪ್ರವೇಶಿಸಿ ಉಳಿದರ್ಧಭಾಗವನ್ನು ಹೊರಗೆ ಉಳಿಸಿರುವಂತೆ– ಸೂತಪುತ್ರನ ರಕ್ತವನ್ನು ಪಾನಮಾಡಿ ಹೊರಬಂದ ಬಾಣಗಳು ಭೂಮಿ ಯಲ್ಲಿ ಅರ್ಧಭಾಗವು ಮಾತ್ರವೇ ಹೊಕ್ಕು ಪ್ರಕಾಶಿಸುತ್ತಿದ್ದುವು. ರಾಧೇಯನು ಸುವರ್ಣದಿಂದ ವಿಭೂಷಿತವಾಗಿದ್ದ ಅತ್ಯುಗ್ರವಾದ ಹದಿನಾಲ್ಕು ಬಾಣ ಗಳಿಂದ–ಪರಿಣಾಮವೇನಾಗುವುದೆಂಬುದನ್ನೂ ಯೋಚಿಸದೇ–ಭೀಮಸೇನ ನನ್ನು ಪ್ರಹರಿಸಿದನು. ಕರ್ಣನು ಪ್ರಹರಿಸಿದ ಆ ಬಾಣಗಳು ಭೀಮಸೇನನ ಬಲತೋಳನ್ನು ಗಾಯಗೊಳಿಸಿ-ಕ್ರೌಂಚಪರ್ವತವನ್ನು ರಥದಂತೆ ಸಂಚಾರ ಸಾಧನಭೂತವಾದ ರೆಕ್ಕೆಗಳುಳ್ಳ ಪಕ್ಷಿಗಳು ಸೇರಿಕೊಳ್ಳುವಂತೆ-ಭೂಮಿಯನ್ನು ಸೇರಿಕೊಂಡುವು. ಸೂರ್ಯನು ಅಸ್ತಮಿಸುವ ಸಮಯದಲ್ಲಿ ಸೂರ್ಯಕಿರಣ ಗಳು ದೇದೀಪ್ಯಮಾನವಾಗಿ ಕಾಣುವಂತೆ–ಭೂಮಿಯನ್ನು ಪ್ರವೇಶಿಸುತ್ತಿದ್ದ ಬಾಣಗಳು ಪ್ರಕಾಶಿಸಿದುವು. ಮರ್ಮಸ್ಥಳಗಳನ್ನು ಭೇದಿಸುವ ನಾರಾಚ ಗಳಿಂದ ಕ್ಷತ-ವಿಕ್ಷತನಾದ ಭೀಮಸೇನನು ಪರ್ವತವು ನೀರನ್ನು ಸುರಿಸು

ವಂತೆ—ತನ್ನ ಶರೀರದಿಂದ ರಕ್ತವನ್ನು ಸುರಿಸಿದನು. ಅನಂತರ ಭೀಮನು ಗರುಡನ ವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ಬಾಣಗಳಿಂದ ಕರ್ಣನನ್ನು ಪ್ರಯತ್ನಪೂರ್ವಕವಾಗಿ ಪ್ರಹರಿಸಿದನು. ಬಳಿಕ ಏಳು ಬಾಣಗಳಿಂದ ಅವನ ಸಾರಥಿಯನ್ನೂ ಪ್ರಹರಿಸಿದನು. ಭೀಮನ ಬಾಣಗಳ ಪ್ರಹಾರದಿಂದ



ಬಹಳವಾಗಿ ಗಾಯಗೊಂಡ ರಾಧೇಯನು ಅತ್ಯಂತದುಃಖಿತನಾಗಿ ಮುಂದೇನಾಗುವುದೋ ಎಂಬ ಮಹಾಭಯದಿಂದ ಯುದ್ಧವನ್ನು ಅಲ್ಲಿಗೇ ನಿಲ್ಲಿಸಿ ಶೀಘ್ರವಾಗಿ ಹೋಗುವ ಕುದುರೆಗಳ ಸಹಾಯದಿಂದ ಪಲಾಯನಮಾಡಿದನು. ಅತಿರಥನಾದ ಭೀಮಸೇನನು ಸುವರ್ಣಮಯವಾದ ಧನುಸ್ಸನ್ನು ಬಾರಿ-

ಬಾರಿಗೂ ಟೇಂಕರಿಸುತ್ತಾ, ಪ್ರಜ್ಜ್ವಲಿಸುತ್ತಿರುವ ಯಜ್ಞೇಶ್ವರನಂತೆಯೇ ರಣಾಂಗಣದಲ್ಲಿ ಸುವ್ಯವಸ್ಥಿತನಾಗಿದ್ದನು.”

೧೩೪ನೆಯ ಅಧ್ಯಾಯವು ಮುಗಿಯಿತು.

೧೩೫ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು ಭೀಮಸೇನನ ಬಲವನ್ನು ಖೇದಪೂರ್ವಕವಾಗಿ ವರ್ಣಿಸಿದುದು : ತನ್ನ ಮಕ್ಕಳನ್ನೂ ನಿಂದಿಸಿದುದು : ಭೀಮನು ದುರ್ಮರ್ಷಣನೇ ಮೊದಲಾದ ಐವರು ಕೌರವರನ್ನು ಸಂಹರಿಸಿದುದು

ಧೃತರಾಷ್ಟ್ರನು ನಿಟ್ಟುಸಿರುಬಿಡುತ್ತಾ ಸಂಜಯನಿಗೆ ಹೇಳುತ್ತಾನೆ :

**ದೈವಮೇವ ಪರಂ ಮನ್ಯೇ ಧಿಕ್ಪೌರುಷಮನರ್ಥಕಮ್ ।**
**ಯತ್ರಾಧಿರಥಿರಾಯತ್ತೋ ನಾತರತ್ಪಾಣ್ಡವಂ ರಣೇ ॥೧॥**

“ಸಂಜಯ! ದೈವ ಅಥವಾ ಅದೃಷ್ಟವೇ ಹೆಚ್ಚಿನದೆಂದು ನಾನು ಭಾವಿಸಿದ್ದೇನೆ. ಅನರ್ಥಕವಾದ ಪೌರುಷಕ್ಕೆ ಧಿಕ್ಕಾರವಿರಲಿ. ಅಧಿರಥನ ಮಗನಾದ ಕರ್ಣನು ಎಷ್ಟೇ ಪ್ರಯತ್ನಿಸಿದರೂ ಭೀಮಸೇನನನ್ನು ಅತಿಕ್ರಮಿಸಲು ಸಾಧ್ಯವಾಗದೇಹೋಯಿತು.

ಆದರೆ ಮೂರ್ಖನಾದ ನನ್ನ ಮಗ ದುರ್ಯೋಧನನು ಕರ್ಣನ ವಿಷಯದಲ್ಲಿ ಅಪಾರವಾದ ಭರವಸೆಯನ್ನಿಟ್ಟುಕೊಂಡಿದ್ದನು.

**ಕರ್ಣಃ ಪಾರ್ಥಾನ್ಸಗೋವಿನ್ದಾಞ್ಜೇತುಮುತ್ಸಹತೇ ರಣೇ ।**
**ನ ಚ ಕರ್ಣಸಮಂ ಯೋಧಂ ಲೋಕೇ ಪಶ್ಯಾಮಿ ಕಞ್ಚನ ॥೨॥**

“ಕರ್ಣನು ಶ್ರೀಕೃಷ್ಣಸಹಿತರಾದ ಪಾಂಡವರನ್ನು ಯುದ್ಧದಲ್ಲಿ ಜಯಿಸಲು ಸಮರ್ಥನಾಗಿದ್ದಾನೆ. ಕರ್ಣನಿಗೆ ಸಮಾನನಾದ ಬೇರೊಬ್ಬ ಯೋಧನನ್ನು ಈ ಪ್ರಪಂಚದಲ್ಲಿ ಕಂಡೇ ಇಲ್ಲ.”

ಹೀಗೆಂಬುದಾಗಿ ನನ್ನ ಮಗನು ಪದೇ ಪದೇ ಹೇಳುತ್ತಿದ್ದುದನ್ನು ನಾನೂ ಕೇಳುತ್ತಲೇ ಇದ್ದೆನು. “ಕರ್ಣನು ಮಹಾಬಲಿಷ್ಠ ; ಶೂರವರ ; ಧನುಸ್ಸನ್ನು ದೃಢವಾಗಿ ಹಿಡಿದು ಯುದ್ಧಮಾಡತಕ್ಕವನು ; ಆಯಾಸವನ್ನೂ ಜಯಿಸಿರ

ತಕ್ಕವನು. ಅವನಿಗೆ ಆಯಾಸವೆಂಬುದೇ ಇಲ್ಲ"–ಹೀಗೆಂಬುದಾಗಿ ಮಂದನಾದ ದುರ್ಯೋಧನನು ನನಗೆ ಹಿಂದೆ ಹೇಳಿದ್ದನು. ಇಷ್ಟು ಮಾತ್ರವಲ್ಲ ಸಂಜಯ!

**ವಸುಷೇಣಸಹಾಯಂ ಮಾಂ ನಾಲಂ ದೇವಾಪಿ ಸಂಯುಗೇ ।**
**ಕಿಂ ನು ಪಾಣ್ಡುಸುತಾ ರಾಜನ್ಗತಸತ್ತ್ವಾ ವಿಚೇತಸಃ ॥೫॥**

"ಕರ್ಣನನ್ನು ಸಹಾಯಕನನ್ನಾಗಿ ಪಡೆದುಕೊಂಡಿರುವ ನನ್ನನ್ನು ದೇವತೆಗಳೂ ಜಯಿಸಲಾರರು. ಹೀಗಿರುವಾಗ ಸತ್ತ್ವಹೀನರೂ ಬುದ್ಧಿಹೀನರೂ ಆಗಿರುವ ಪಾಂಡವರ ವಿಷಯದಲ್ಲಿ ಹೇಳತಕ್ಕದ್ದೇನಿದೆ?"– ಎಂಬುದಾಗಿಯು ಮತಿಗೆಟ್ಟ ದುರ್ಯೋಧನನು ನನ್ನೊಡನೆ ಬಡಾಯಿಕೊಚ್ಚಿಕೊಳ್ಳುತ್ತಿದ್ದನು.

ಸಂಜಯ! ವಿಷರಹಿತವಾದ ಸರ್ಪದಂತೆ ಯುದ್ಧದಲ್ಲಿ ಭೀಮಸೇನನಿಂದ ನಿರ್ಜಿತನಾಗಿ ರಣಾಂಗಣದಿಂದಲೇ ಪಲಾಯನಮಾಡುತ್ತಿದ್ದ ಕರ್ಣನನ್ನು ಕಂಡು ದುರ್ಯೋಧನನು ಏನು ಹೇಳಿದನು? ಅಯ್ಯೋ! ನನ್ನ ದುಃಖವನ್ನು ಹೇಗೆ ಸಹಿಸಿಕೊಳ್ಳಲಿ? ಸಂಜಯ! ಈ ದುರ್ಯೋಧನನು ಬುದ್ಧಿಗೆಟ್ಟವನಾಗಿ ಶಲಭವನ್ನು ಬೆಂಕಿಗೆ ತಳ್ಳುವಂತೆ–ಯುದ್ಧದಲ್ಲಿ ಪರಿಣತ ನಲ್ಲದ ದುರ್ಮುಖನನ್ನು ಯುದ್ಧರಂಗದ ಅಗ್ನಿಯೊಳಕ್ಕೆ ತಳ್ಳಿಬಿಟ್ಟನು. ಅಶ್ವತ್ಥಾಮಾ, ಮದ್ರಾಧಿಪತಿಯಾದ ಶಲ್ಯ, ಕೃಪ, ಕರ್ಣ–ಇವರೆಲ್ಲರೂ ಸಂಘಟಿತರಾಗಿಯೇ ಹೋದರೂ ಭೀಮನನ್ನು ಎದುರಿಸಿ ನಿಶ್ಚಯವಾಗಿಯೂ ಯುದ್ಧ ಮಾಡಲಾರರು. ಅವರೆಲ್ಲರೂ ಭೀಮಸೇನನಲ್ಲಿ ಹತ್ತುಸಾವಿರ ಆನೆಗಳಷ್ಟು ಬಲವಿರುವುದೆಂಬುದನ್ನು ತಿಳಿದವರಾಗಿದ್ದಾರೆ. ವಾಯುವಿಗೆ ಸಮಾನವಾದ ತೇಜಸ್ಸನ್ನು ಹೊಂದಿರುವ ಮಾರುತಿಯ ಕ್ರೂರವಾದ ಪರಿಶ್ರಮವನ್ನೂ ತಿಳಿದಿರುತ್ತಾರೆ. ಭೀಮನೂ ಕ್ರೂರಕರ್ಮನೆಂಬುದನ್ನೂ, ಯಮ ಮತ್ತು ಕಾಲರಿಗೆ ಸದೃಶನಾಗಿರುವನೆಂಬುದನ್ನೂ ತಿಳಿದಿರುತ್ತಾರೆ. ಭೀಮಸೇನನ ಬಲ, ಕೋಪ ಮತ್ತು ವೀರ್ಯಗಳನ್ನು ಸಂಪೂರ್ಣವಾಗಿ ಅರಿತಿರುವ ನಮ್ಮ ಮಹಾರಥರು ಯಾವ ಕಾರಣದಿಂದ ಅವನು ಮತ್ತಷ್ಟು ಕೋಪಗೊಳ್ಳುವಂತೆ ಮಾಡುತ್ತಿದ್ದಾರೆ?

ಸ್ವಬಾಹುಬಲದಿಂದ ಅಹಂಕಾರಪಡುತ್ತಿರುವ, ಮಹಾಬಾಹುವಾದ, ಸೂತನ ಮಗನಾದ ಕರ್ಣನೊಬ್ಬನೇ ಭೀಮಸೇನನನ್ನು (ಅವನ ಬಲವನ್ನು)

ಗಣನೆಗೆ ತೆಗೆದುಕೊಳ್ಳದೇ ಅವನೊಡನೆ ಯುದ್ಧಮಾಡಲು ಹೋದನು. ಇಂದ್ರನು ಮಹಾಸುರನನ್ನು ಜಯಿಸಿದಂತೆ–ತಿರಸ್ಕಾರಭಾವದಿಂದ ಭೀಮನೊಡನೆ ಯುದ್ಧಕ್ಕೆ ಹೋದ ಕರ್ಣನನ್ನು ಭೀಮಸೇನನು ಜಯಿಸಿದನು. ಇದರಿಂದ ನಾನು ಈ ನಿರ್ಧಾರಕ್ಕೆ ಬಂದಿದ್ದೇನೆ :

**ನ ಸ ಪಾಣ್ಡುಸುತೋ ಜೇತುಂ ಶಕ್ಯಃ ಕೇನಚಿದಾಹವೇ ॥೧೧॥**

ಪಾಂಡುವಿನ ಮಗನಾದ ಭೀಮಸೇನನನ್ನು ಯುದ್ಧದಲ್ಲಿ ಪರಾಜಯಗೊಳಿಸಿಲು ಯಾರಿಂದಲೂ ಸಾಧ್ಯವೇ ಇಲ್ಲ. ಭೀಮನು ಏಕಾಕಿಯಾಗಿ ದ್ರೋಣರನ್ನೇ ಬಲವಾಗಿ ಗಾಯಗೊಳಿಸಿ ನನ್ನ ಸೈನ್ಯದೊಳಕ್ಕೆ ನುಗ್ಗಿರುವನು. ಧನಂಜಯನನ್ನು ಹುಡುಕಿಕೊಂಡು ಹೊರಟಿರುವ ಭೀಮಸೇನನನ್ನು–ಬದುಕಿರಲು ಇಚ್ಛಿಸಿರುವ ಯಾರುತಾನೆ ಎದುರಿಸಲು ಹೋಗುತ್ತಾರೆ? ವಜ್ರಾಯುಧವನ್ನು ಹಿಡಿದೆತ್ತಿರುವ ಇಂದ್ರನ ಮುಂದೆ ಯಾವ ದಾನವನು ತಾನೇ ಯುದ್ಧಕ್ಕೆ ನಿಂತಾನು? ಹಾಗೆಯೇ ಭೀಮನ ಮುಂದೆ ನಿಂತು ಯುದ್ಧ ಮಾಡಲು ಯಾರು ಉತ್ಸುಕರಾಗಿದ್ದಾರೆ?

**ಪ್ರೇತರಾಜಪುರಂ ಪ್ರಾಪ್ಯ ನಿವರ್ತೇತಾಪಿ ಮಾನವಃ ।**
**ನ ಭೀಮಸೇನಂ ಸಮ್ಪ್ರಾಪ್ಯ ನಿವರ್ತೇತ ಕದಾಚನ ॥೧೪॥**

ಮನುಷ್ಯನು ಯಮರಾಜನ ಪಟ್ಟಣಕ್ಕಾದರೂ ಹೋಗಿ ಹಿಂದಿರುಗಿಬರಬಹುದು. ಆದರೆ ಭೀಮಸೇನನೊಡನೆ ಯುದ್ಧಕ್ಕೆ ಹೋದ ಮಾನವನು ಯಾವಾಗಲೂ ಯಾವುದೇ ಕಾರಣದಿಂದಲೂ ಹಿಂದಿರುಗುವುದಿಲ್ಲ. ಶಲಭಗಳು ತಾವೇ ತಾವಾಗಿ ಅಗ್ನಿಯನ್ನು ಪ್ರವೇಶಿಸುವಂತೆ–ವಿಮೋಹಿತರಾದ, ಅಲ್ಪಬುದ್ಧಿಯವರಾದ ಯಾರು ಸಂಕ್ರುದ್ಧನಾದ ಭೀಮಸೇನನನ್ನು ಅನುಸರಿಸಿ ಹೋಗಿರುವರೋ ಅವರೆಲ್ಲರೂ ಬೆಂಕಿಗೆ ಬಿದ್ದಂತೆಯೇ ಸರಿ. ಅಂದಿನ ಆ ಮಹಾಸಭೆಯಲ್ಲಿ ಕ್ರುದ್ಧನಾಗಿದ್ದ ಭೀಮಸೇನನು ಎಲ್ಲ ಕೌರವರಿಗೂ ಕೇಳಿಸುವಂತೆ ನನ್ನ ಮಕ್ಕಳ ವಧೆಯ ಸಂಬಂಧವಾಗಿ ಯಾವ ಪ್ರತಿಜ್ಞಾವಚನಗಳನ್ನಾಡಿದ್ದನೋ–ಆ ಮಾತುಗಳನ್ನೇ ಸ್ಮರಿಸಿಕೊಳ್ಳುತ್ತಾ ಕರ್ಣನು ಪರಾಜಿತನಾದು ದನ್ನೂ ಕಂಡು ಜೀವಭಯದಿಂದ ದುಃಶಾಸನನೂ ತನ್ನ ಅಣ್ಣನಾದ ದುರ್ಯೋಧನನೊಡನೆ ರಣಾಂಗಣವನ್ನು ಬಿಟ್ಟು ಓಡಿಹೋಗಿರಬಹುದು. ಸಂಜಯ! ದುರ್ಬುದ್ಧಿಯವನಾದ ದುರ್ಯೋಧನನು ಹಿಂದೆ ಮಹಾಸಭೆಯಲ್ಲಿ :

**ಕರ್ಣೋ ದುಃಶಾಸನೋಽಹಂ ಜೇಷ್ಯಾಮೋ ಯುಧಿ ಪಾಣ್ಡವಾನ್**

'ಕರ್ಣನೂ, ದುಃಶಾಸನನೂ ಮತ್ತು ನಾನೂ–ಮೂವರು ಸೇರಿ ಪಾಂಡವರನ್ನು ಯುದ್ಧದಲ್ಲಿ ಜಯಿಸುತ್ತೇವೆ' ಎಂದು ಪದೇ-ಪದೇ ಹೇಳು ತ್ತಲೇ ಇದ್ದನು. ಆದರೆ ಈಗವನು ಕರ್ಣನು ರಥಹೀನನಾದುದನ್ನೂ, ಭೀಮ ಸೇನನಿಂದ ನಿರ್ಜಿತನಾದುದನ್ನೂ ಕಂಡು ಶ್ರೀಕೃಷ್ಣನ ಮಾತನ್ನು ಅಂದು ತಿರಸ್ಕರಿಸಿದುದಕ್ಕಾಗಿ ಬಹಳವಾಗಿ ಪಶ್ಚಾತ್ತಾಪಪಡುತ್ತಿರಬಹುದು.

ಕವಚವನ್ನು ಧರಿಸಿ ಭೀಮಸೇನನೊಡನೆ ಯುದ್ಧಮಾಡಲು ಹೋಗಿ ಅವನಿಂದ ಹತರಾದ ತನ್ನ ಅನುಜರನ್ನು ಕಂಡು ತಾನು ಮಾಡಿದ ಮಹಾಪ ರಾಧಕ್ಕಾಗಿ ಇಂದು ನನ್ನ ಮಗನು ನಿಶ್ಚಯವಾಗಿಯೂ ಪರಿತಪಿಸುತ್ತಿರ ಬಹುದು. ಭಯಂಕರನಾದ, ಭಯಂಕರವಾದ ಆಯುಧವನ್ನು ಧರಿಸಿರುವ, ಕ್ರುದ್ಧನಾದ, ಸಾಕ್ಷಾತ್ ಕಾಲನಂತೆಯೇ ನಿಂತಿರುವ ಪಾಂಡವನನ್ನು ಎದುರು ಹಾಕಿಕೊಂಡು ಜೀವಿಸಿರಲು ಇಚ್ಛಿಸಿರುವ ಯಾವನು ತಾನೇ ಯುದ್ಧಕ್ಕೆ ಹೋದಾನು? ಬಡಬಾಗ್ನಿಯ ಮಧ್ಯಕ್ಕೆ ಹೋದ ಯಾವನಾದರೂ ಅಲ್ಲಿಂದ ತಪ್ಪಿಸಿಕೊಂಡು ಜೀವಸಹಿತವಾಗಿ ಬರಬಹುದು. ಆದರೆ ಭೀಮನಿಗೆ ಎದು ರಾಗಿ ಹೋದವನು ಅವನಿಂದ ತಪ್ಪಿಸಿಕೊಂಡು ಜೀವಸಹಿತವಾಗಿ ಬರಲಾರ ನೆಂಬುದು ನನ್ನ ಖಚಿತವಾದ ಅಭಿಪ್ರಾಯವಾಗಿದೆ. ಯುದ್ಧಸಮಯದಲ್ಲಿ ಕುಪಿತರಾದ ಪಾರ್ಥ-ಪಾಂಚಾಲ-ಕೇಶವ-ಸಾತ್ಯಕಿಗಳು ಶತ್ರುವಿನ ಜೀವವನ್ನು ರಕ್ಷಿಸುವ ಅಥವಾ ಉಳಿಸುವ ವಿಷಯವನ್ನೇ ತಿಳಿದವರಾಗಿಲ್ಲ. (ಅವರ ಕೈಗೆ ಸಿಕ್ಕಿದನಂತರ ಶತ್ರುವು ತನ್ನ ಜೀವವನ್ನು ರಕ್ಷಿಸಿಕೊಳ್ಳಲಾರನು.) ಅಯ್ಯೋ! ನನ್ನ ಮಕ್ಕಳ ಜೀವಿತವು ಬಹಳ ವಿಪತ್ತಿನಲ್ಲಿ ಸಿಕ್ಕಿಹಾಕಿಕೊಂಡಿದೆ, ಸಂಜಯ!"

"ಮಹಾರಾಜ! ಮಹಾಭಯವು ಒದಗಿರುವಾಗ ನೀನು ದುಃಖ ಪಡುತ್ತಿರುವೆ. (ಇದರಿಂದ ಯಾವ ಪ್ರಯೋಜನವೂ ಇಲ್ಲ.) ನಿಶ್ಚಯವಾಗಿ ಹೇಳುವುದಾದರೆ ಇಂದು ನಡೆಯುತ್ತಿರುವ ಜಗತ್ತಿನ ವಿನಾಶಕ್ಕೆ ನೀನೇ ಮೂಲ ಕಾರಣನಾಗಿರುವೆ. ಇದರಲ್ಲಿ ಸಂದೇಹವೇ ಇಲ್ಲ. ನಿನ್ನ ಮಕ್ಕಳ ಮಾತಿನಂತೆಯೇ ನಡೆಯುತ್ತಿದ್ದ ನೀನೇ ಧರ್ಮಾತ್ಮರಾದ ಪಾಂಡವರೊಡನೆ ದ್ವೇಷವನ್ನು ಕಟ್ಟಿಕೊಂಡೆ. ಆ ಸಮಯದಲ್ಲಿ ಯಾರು ಏನನ್ನೇ ಹೇಳಿದರೂ

ಮರಣದ ಹಾದಿಯಲ್ಲಿರುವ ಮನುಷ್ಯನಿಗೆ ಔಷಧವು ಹಿಡಿಸದಂತೆ–ಆ ಸದ್ಬೋಧನೆಗಳೊಂದೂ ನಿನಗೆ ಹಿಡಿಸಲಿಲ್ಲ. ನರೋತ್ತಮ! ಸುದುರ್ಜರ ವಾದ (ಜೀರ್ಣಿಸಿಕೊಳ್ಳಲು ಕಷ್ಟಕರವಾದ) ಕಾಲಕೂಟವಿಷವನ್ನು ಕುಡಿದಿರುವ ನೀನೇ ಅದರ ಸಂಪೂರ್ಣಫಲವನ್ನು ಪಡೆದುಕೊಳ್ಳುವೆ. ಕೇವಲ ಪರಾಜಿತ ರಾದರೆಂಬ ಕಾರಣದಿಂದಲೇ ನೀನು ಮಹಾಬಲಿಷ್ಠರಾದ, ಪ್ರಾಣಗಳನ್ನೇ ಪಣವನ್ನಾಗಿಟ್ಟು ಯುದ್ಧಮಾಡುತ್ತಿರುವ ಯೋಧರನ್ನು ಹಳಿಯುತ್ತಿರುವೆ. ಇದು ಸರಿಯಲ್ಲ. ರಣಾಂಗಣದಲ್ಲಿ ಕೌರವ-ಪಾಂಡವರಿಗೆ ಎಂತಹ ಭಯಂಕರವಾದ ಯುದ್ಧವು ನಡೆಯಿತೆಂಬುದನ್ನು ಹೇಳುತ್ತೇನೆ, ಕೇಳು :

ಭೀಮಸೇನನಿಂದ ಪರಾಜಿತನಾದ ಕರ್ಣನನ್ನು ನೋಡಿ ಮಹಾಧನು ಷ್ಮಂತರಾದ ಸಹೋದರರಾದ ನಿನ್ನ ಐವರು ಮಕ್ಕಳು ತಮ್ಮ ಸಹನೆಯನ್ನು ಕಳೆದುಕೊಂಡರು. ದುರ್ಮರ್ಷಣ, ದುಃಸಹ, ದುರ್ಮದ, ದುರ್ಧರ ಮತ್ತು ಜಯ–ಈ ಐವರೂ ಚಿತ್ರಿತವಾದ ಕವಚವನ್ನು ಧರಿಸಿ ಶತ್ರುವಾದ ಭೀಮ ಸೇನನನ್ನು ಆಕ್ರಮಿಸಿದರು. ಅವರು ನಾಲ್ಕು ದಿಕ್ಕುಗಳಿಂದಲೂ ವೃಕೋದರ ನನ್ನು ಸುತ್ತುಗಟ್ಟಿ ಪತಂಗಗಳ ಸಮೂಹಗಳಿಂದಲೋ ಎಂಬಂತೆ ಬಾಣಗಳ ಸಮೂಹಗಳಿಂದ ಎಲ್ಲ ದಿಕ್ಕುಗಳನ್ನೂ ತುಂಬಿಬಿಟ್ಟರು. ದೇವರೂಪಿಗಳಾದ ಕುರುಕುಲದ ರಾಜಕುಮಾರರು ಬಹಳಶೀಘ್ರವಾಗಿ ತನಗೆದುರಾಗಿ ಯುದ್ಧ ಮಾಡಲು ಬಂದುದನ್ನು ನೋಡಿ ಭೀಮಸೇನನು ನಗು-ನಗುತ್ತಲೇ ಅವರೆಲ್ಲ ರನ್ನೂ ಯುದ್ಧಕ್ಕಾಗಿ ಪ್ರತಿಗ್ರಹಿಸಿದನು (ಅವರೊಡನೆ ಯುದ್ಧಮಾಡಲು ತೊಡಗಿದನು). ನಿನ್ನ ಐವರು ಮಕ್ಕಳು ಯುದ್ಧಮಾಡಲು ಸಿದ್ಧರಾಗಿ ಭೀಮ ಸೇನನ ಮುಂದಿದ್ದುದನ್ನು ನೋಡಿ, ರಾಧೇಯನೂ ಭೀಮಸೇನನನ್ನೆದುರಿಸಿ ಯುದ್ಧಮಾಡಲು ತ್ವರೆಯಿಂದ ಬಂದು ಮಸೆಗಲ್ಲಿನಿಂದ ನಿಶಿತವಾಗಿ ಮಾಡಿದ್ದ, ಸುವರ್ಣಮಯವಾದ ಮೂಲಭಾಗಗಳಿದ್ದ, ತೀಕ್ಷ್ಣವಾದ ಬಾಣಗಳನ್ನು ಭೀಮಸೇನನ ಮೇಲೆ ಸುರಿಸಿದನು. ಆ ಸಮಯದಲ್ಲಿ ಭೀಮನು ನಿನ್ನ ಮಕ್ಕಳಿಂದ ತಡೆಯಲ್ಪಡುತ್ತಿದ್ದರೂ ಅದನ್ನು ಪರಿಗಣಿಸದೇ ಕರ್ಣನೊಡನೆ ಯುದ್ಧಮಾಡಲು ಮುಂದೆ ಧಾವಿಸಿದನು. ಆಗ ನಿನ್ನ ಮಕ್ಕಳು ಕರ್ಣನ ಸುತ್ತಲೂ ನಿಂತು ಅವನೊಡನೆ ಸೇರಿಕೊಂಡು ಬಗ್ಗಿದ ಗಿಣ್ಣು ಗಳಿದ್ದ ಬಾಣಗಳಿಂದ ಭೀಮಸೇನನನ್ನು ಮುಚ್ಚಿದರು. ಅದಕ್ಕೆ ಪ್ರತಿಯಾಗಿ

ಭಯಂಕರವಾದ ಧನುಸ್ಸನ್ನು ಹೊಂದಿದ್ದ ಭೀಮಸೇನನು ಇಪ್ಪತ್ತೈದು ಬಾಣಗಳಿಂದ ಅಶ್ವ-ಸೂತಸಹಿತರಾದ ಐವರು ಕುರುರಾಜಕುಮಾರರನ್ನೂ ಯಮಾಲಯಕ್ಕೆ ಕಳುಹಿಸಿಕೊಟ್ಟನು. ಚಂಡಮಾರುತದಿಂದ ಭಗ್ನವಾಗಿ ಕೆಳಕ್ಕೆ ಬಿದ್ದ, ಚಿತ್ರಿತವಾದ ಹೂಗಳನ್ನು ಧರಿಸಿರುವ ದೊಡ್ಡ-ದೊಡ್ಡ ವೃಕ್ಷಗಳೋಪಾದಿಯಲ್ಲಿ–ಆ ಐವರು ಸಹೋದರರೂ ಸೂತಸಮೇತರಾಗಿ ಪ್ರಾಣಗಳನ್ನು ತೊರೆದು ರಥಗಳಿಂದ ಕೆಳಕ್ಕೆ ಬಿದ್ದರು. ರಾಜಕುಮಾರರ ರಕ್ಷಣೆಗೆಂದು ತ್ವರೆಯಿಂದ ತನ್ನೊಡನೆ ಯುದ್ಧಕ್ಕೆ ಬಂದ ಕರ್ಣನನ್ನೂ ಬಾಣಗಳಿಂದ ತಡೆದು ಬದಿಗೊತ್ತಿಸಿ, ನಿನ್ನ ಮಕ್ಕಳನ್ನು ಸಂಹರಿಸಿದ ಭೀಮಸೇನನ ಅದ್ಭುತ ಪರಾಕ್ರಮವನ್ನು ನಾವು ಆಗ ನೋಡಿದೆವು. ಭೀಮಸೇನನು ನಿಶಿತವಾದ ನೂರಾರು ಬಾಣಗಳಿಂದ ಕರ್ಣನನ್ನು ಎಲ್ಲ ಕಡೆಗಳಿಂದಲೂ ನಿರೋಧಿಸುತ್ತಿದ್ದನು. ಭೀಮಸೇನನ ಆ ಹಸ್ತಲಾಘವವನ್ನು ಕರ್ಣನು ನೋಡುತ್ತಲೇ ಇದ್ದನು. ಕೋಪದಿಂದ ಕೆಂಪಾದ ಕಣ್ಣುಗಳಿಂದ ಕೂಡಿದ್ದ ಭೀಮಸೇನನೂ ಸಹ ತನ್ನ ಮಹಾಧನುಸ್ಸನ್ನು ಕ್ಷಣ-ಕ್ಷಣಕ್ಕೂ ಟೇಂಕರಿಸುತ್ತಾ ಕರ್ಣನನ್ನು ದುರುಗುಟ್ಟಿಕೊಂಡು ನೋಡುತ್ತಿದ್ದನು.

೧೩೫ನೆಯ ಅಧ್ಯಾಯವು ಮುಗಿಯಿತು.

೧೩೬ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಭೀಮ-ಕರ್ಣರ ಯುದ್ಧ: ಕರ್ಣನ ಪಲಾಯನ: ಭೀಮನು ಧೃತರಾಷ್ಟ್ರನ ಏಳು ಮಕ್ಕಳನ್ನು ಸಂಹರಿಸಿದುದು

ಸಂಜಯನು ಭೀಮ-ಕರ್ಣರ ಯುದ್ಧವನ್ನೇ ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಪ್ರತಾಪವಂತನಾದ ಕರ್ಣನು–ನಿನ್ನ ಐವರು ಮಕ್ಕಳೂ ಅಸುನೀಗಿ ರಣಾಂಗಣದಲ್ಲಿ ಬಿದ್ದಿರುವುದನ್ನು ಕಂಡು ರೋಷಾವೇಶಪೂರಿತನಾದನು. ಬಹಳ ಖಿನ್ನಮನಸ್ಕನಾಗಿ ತನ್ನ ಜೀವನದಲ್ಲಿಯೇ ನಿರಾಸಕ್ತಿಯನ್ನೂ ಹೊಂದಿದನು. ಆ ಸಮಯದಲ್ಲಿ ತನ್ನ ಸಮಕ್ಷದಲ್ಲಿಯೇ ಭೀಮನು ನಿನ್ನ ಐವರು ಮಕ್ಕಳನ್ನೂ ಕೊಂದುದರಿಂದ (ಅವರನ್ನು ರಕ್ಷಿಸಲು ತನಗೆ ಸಾಧ್ಯವಾಗದೇ ಇದ್ದುದರಿಂದ ) ಕರ್ಣನು ತಾನು ಮಹಾಪರಾಧಿಯಾದೆ

ನೆಂದೇ ಭಾವಿಸಿಕೊಂಡನು. ಅದರ ಸೇಡನ್ನು ತೀರಿಸಿಕೊಳ್ಳುವ ಸಲುವಾಗಿ ಮಹಾಕ್ರುದ್ಧನಾದ ಕರ್ಣನು ಭೀಮಸೇನನನ್ನು ಆಕ್ರಮಿಸಿದನು. ಅದರಿಂದ ಕೋಪಗೊಂಡ ಭೀಮಸೇನನು ಸಂಭ್ರಮಗೊಂಡವನಾಗಿ ಹಿಂದಿನ ವೈರವನ್ನು ಸ್ಮರಿಸುತ್ತಾ ಕರ್ಣನ ಶರೀರದಲ್ಲಿ ನಿಶಿತವಾದ ಬಾಣಗಳನ್ನು ನೆಟ್ಟನು. ರಾಧೇಯನು ನಗು-ನಗುತ್ತಲೇ ಭೀಮಸೇನನನ್ನು ಐದು ಬಾಣಗಳಿಂದ ಪ್ರಹರಿಸಿ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಿದ್ದ ಸುವರ್ಣಮಯವಾದ ಮೂಲಭಾಗ ವಿದ್ದ ಎಪ್ಪತ್ತು ಬಾಣಗಳಿಂದ ಭೀಮಸೇನನನ್ನು ಪುನಃ ಪ್ರಹರಿಸಿದನು. ಭೀಮಸೇನನು ಕರ್ಣನು ಬಿಟ್ಟ ಬಾಣಗಳನ್ನು ಗಣನೆಗೇ ತೆಗೆದುಕೊಳ್ಳಲಿಲ್ಲ. ಅಸಹನಶೀಲನಾದ ಭೀಮಸೇನನು ಬಗ್ಗಿದ ಗಿಣ್ಣುಗಳಿದ್ದ ನೂರು ಬಾಣಗಳಿಂದ ಕರ್ಣನನ್ನು ಪ್ರಹರಿಸಿದನು. ಪುನಃ ತೀಕ್ಷ್ಣವಾದ ಐದುಬಾಣಗಳಿಂದ ಕರ್ಣನ ಮರ್ಮಸ್ಥಳಗಳಲ್ಲಿ ಪ್ರಹರಿಸಿ, ಭಲ್ಲದಿಂದ ಸೂತಪುತ್ರನ ಧನುಸ್ಸನ್ನೂ ಕತ್ತರಿಸಿದನು. ಖಿನ್ನಮನಸ್ಕನಾದ, ಪರಂತಪನಾದ ಕರ್ಣನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಭೀಮಸೇನನನ್ನು ಬಾಣಗಳಿಂದಲೇ ಮುಚ್ಚಿಬಿಟ್ಟನು. ಭೀಮಸೇನನು ಕರ್ಣನ ರಥದ ಕುದುರೆಗಳನ್ನೂ, ಸಾರಥಿಯನ್ನೂ ಸಂಹರಿಸಿ ಅವನು ಮಾಡಿದುದಕ್ಕೆ ಪ್ರತಿಮಾಡಿ ಅಟ್ಟಹಾಸದಿಂದ ಗಟ್ಟಿಯಾಗಿ ನಕ್ಕನು. ಪುನಃ ಪುರುಷರ್ಷಭನಾದ ಭೀಮನು ಬಾಣಗಳಿಂದ ಕರ್ಣನ ಧನುಸ್ಸನ್ನು ಕತ್ತರಿಸಿದನು. ಸುವರ್ಣಮಯವಾದ ಪೃಷ್ಠಭಾಗವಿದ್ದ ಮಹಾಧ್ವನಿಯಿಂದ ಕೂಡಿದ್ದ ಕರ್ಣನ ಧನುಸ್ಸು ಕೆಳಕ್ಕೆ ಬಿದ್ದಿತು. ಮಹಾರಥನಾದ ಕರ್ಣನು ಆ ರಥದಿಂದಿಳಿದು ಪರಮಕ್ರುದ್ಧನಾಗಿ ಗದೆಯನ್ನು ಕೈಯಲ್ಲಿ ಹಿಡಿದು ವೇಗವಾಗಿ ಬೀಸಿ ಭೀಮನ ಮೇಲೆಸೆದನು. ಆ ಮಹಾಗದೆಯು ತನ್ನ ಮೇಲೆ ಬೀಳುತ್ತಿರುವುದನ್ನು ಕಂಡು ಭೀಮಸೇನನು ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಬಾಣಗಳಿಂದ ಆ ಗದೆಯನ್ನು ನಿರರ್ಥಕಗೊಳಿಸಿದನು. ಅನಂತರ ಸೂತಪುತ್ರನಾದ ಕರ್ಣನನ್ನು ವಧಿಸುವ ಇಚ್ಛೆಯನ್ನು ಹೊಂದಿದ್ದ ಪರಾಕ್ರಮಿಯಾದ ಪಾಂಡವನು ಒಂದು ಸಾವಿರ ಬಾಣಗಳನ್ನು ಕರ್ಣನ ಮೇಲೆ ತ್ವರೆಯಿಂದ ಪ್ರಯೋಗಿಸಿದನು. * [ಹೀಗೆ ಪಾಂಡವನು ಬಿಟ್ಟ

---

* ಕಂಸದಲ್ಲಿ ಹಾಕಿರುವ ಅನುವಾದಕ್ಕೆ ಸಂಬಂಧಿಸಿದ ನಾಲ್ಕು ಶ್ಲೋಕಗಳು ಎಲ್ಲ ಪ್ರತಿಗಳಲ್ಲಿಯೂ ಇವೆ. ಆದರೆ ಇಲ್ಲಿಯ ಸನ್ನಿವೇಶವನ್ನು ವಿಮರ್ಶಿಸಿದರೆ ಈ ಶ್ಲೋಕ

ಅಸಂಖ್ಯಾತವಾದ ಬಾಣಗಳನ್ನು ಬಾಣಗಳಿಂದಲೇ ಕರ್ಣನು ನಿರಸನಗೊಳಿಸಿ ಭೀಮಸೇನನ ಕವಚವನ್ನು ಬಾಣಗಳಿಂದ ಭಿನ್ನಗೊಳಿಸಿದನು. ಅನಂತರ ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಭೀಮಸೇನನನ್ನು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದನು.] ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಅದಕ್ಕೆ ಪ್ರತಿಯಾಗಿ ಮಹಾಬಾಹುವಾದ ಭೀಮಸೇನನು ಕ್ರುದ್ಧನಾಗಿ ಬಗ್ಗಿದ ಗಿಣ್ಣುಗಳಿದ್ದ ಒಂಬತ್ತು ಬಾಣಗಳಿಂದ ಸೂತಪುತ್ರನನ್ನು ಪ್ರಹರಿಸಿದನು. ತೀಕ್ಷ್ಣವಾದ ಆ ಬಾಣಗಳು ಕರ್ಣನ ಕವಚವನ್ನು ಭೇದಿಸಿ ಬಲಭುಜವನ್ನೂ ಗಾಯಗೊಳಿಸಿ ಸರ್ಪಗಳು ಹುತ್ತದೊಳಕ್ಕೆ ಸೇರಿಕೊಳ್ಳುವಂತೆ ಭೂಮಿಯೊಳಗೆ ಸೇರಿಕೊಂಡುವು. ಭೀಮಸೇನನ ಧನುಸ್ಸಿನಿಂದ ಚ್ಯುತವಾದ ಸಾವಿರಾರು ಬಾಣಗಳಿಂದ ಆಚ್ಛಾದಿತನಾದ ಕರ್ಣನು ಪುನಃ ಭೀಮಸೇನನಿಂದ ಪರಾಙ್ಮುಖನಾದನು. ಕೌಂತೇಯನ ಬಾಣಗಳಿಂದ ಕ್ಷತ-ವಿಕ್ಷತನಾಗಿದ್ದ, ಪದಾತಿಯಾಗಿದ್ದ ಸೂತಪುತ್ರನು ಪರಾಙ್ಮುಖನಾಗುತ್ತಿರುವುದನ್ನು ಕಂಡು ದುರ್ಯೋಧನನು ತನ್ನ ಸೈನಿಕರಿಗೆ ಹೇಳಿದನು :

**ತ್ವರಧ್ವಂ ಸರ್ವತೋ ಯತ್ತಾ ರಾಧೇಯಸ್ಯ ರಥಂ ಪ್ರತಿ ॥೧೬॥**

"ರಾಧೇಯನ ರಥದ ಸಮೀಪಕ್ಕೆ ಹೋಗಲು ತ್ವರೆಮಾಡಿರಿ."

ಮಹಾರಾಜ! ದುರ್ಯೋಧನನ ಆ ಮಾತನ್ನು ಕೇಳಿ ನಿನ್ನ ಮಕ್ಕಳು ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಾ ಭೀಮನ ಸಮೀಪಕ್ಕೆ ಬಹಳ ಬೇಗ ಹೋದರು. ಭೀಮನೊಡನೆ ಯುದ್ಧಮಾಡಲು ಹೋದ ಚಿತ್ರ,

---

ಗಳು ಅಸಂಗತವಾಗಿ ಕಾಣುತ್ತವೆ. ಕರ್ಣನು ಧನುಸ್ಸನ್ನು ಕಳೆದುಕೊಂಡುದು, ರಥದಿಂದ ಕೆಳಗಿಳಿದುದು–ಈ ಹಿಂದಿನ ಶ್ಲೋಕಗಳಲ್ಲಿ ಬಂದಿರುತ್ತದೆ. ಪುನಃ ಅವನು ಮತ್ತೊಂದು ರಥವನ್ನು ಹತ್ತಿದ ಪ್ರಸಂಗವಿಲ್ಲ. ಮತ್ತೊಂದು ಧನುಸ್ಸನ್ನು ತೆಗೆದುಕೊಂಡ ವಿಷಯವೂ ಇಲ್ಲ. ಅವನು ಪದಾತಿಯಾಗಿಯೇ ಇದ್ದನೆಂಬ ವಿಷಯವು ಮುಂದೆ ಸ್ಪಷ್ಟವಾಗಿಯೇ ಇದೆ. ಧನುಸ್ಸೂ ಸಹ ಅವನ ಬಳಿಯಲ್ಲಿ ಇಲ್ಲದೇ ಇದ್ದುದರಿಂದ ಭೀಮಸೇನನು ಸಾವಿರಾರು ಬಾಣಗಳನ್ನು ಆತನ ಮೇಲೆ ಬಿಟ್ಟುದರಿಂದ ಕರ್ಣನು ಪಲಾಯನಮಾಡಬೇಕಾಯಿತು. ಕರ್ಣನ ಕೈಯಲ್ಲಿ ಧನುಸ್ಸೇ ಇದ್ದಿದ್ದರೆ ಪಲಾಯನ ಮಾಡುತ್ತಿರಲಿಲ್ಲ. 'ಬಾಣಗಳಿಂದ ಬಾಣಗಳನ್ನು ನಿವಾರಣೆಮಾಡಿಕೊಂಡನು.' ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದನು ಎಂದು ಇದೆಯೇ ಹೊರತು ಕರ್ಣನು ಪುನಃ ಧನುಸ್ಸನ್ನು ತೆಗೆದುಕೊಂಡನೆಂದಾಗಲೀ, ಧನುಸ್ಸು ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದ

ಉಪಚಿತ್ರ, ಚಿತ್ರಾಕ್ಷ, ಚಾರುಚಿತ್ರ, ಶರಾಸನ, ಚಿತ್ರಾಯುಧ ಮತ್ತು ಚಿತ್ರವರ್ಮಾ–ಈ ಏಳು ಮಂದಿಯೂ ವಿಚಿತ್ರರೀತಿಯಲ್ಲಿ ಯುದ್ಧಮಾಡು ತ್ತಿದ್ದರು. ಅವರು ಎಷ್ಟು ಶೀಘ್ರವಾಗಿ ಕರ್ಣನ ರಕ್ಷಣೆಗೆಂದು ಭೀಮಸೇನನ ಸಮೀಪಕ್ಕೆ ಬಂದರೋ–ಅಷ್ಟೇ ಶೀಘ್ರವಾಗಿ ಭೀಮಸೇನನೂ ಅವರನ್ನು ಸಂಹರಿಸಿದನು. ಒಂದೊಂದೇ ಬಾಣದಿಂದ ನಿನ್ನ ಆ ಏಳು ಮಕ್ಕಳನ್ನೂ ಭೀಮಸೇನನು ಕೆಳಗುರುಳಿಸಿದನು. ಚಂಡಮಾರುತದಿಂದ ಬುಡಮೇಲಾಗಿ ಬಿದ್ದ ವೃಕ್ಷಗಳಂತೆ–ಅವರು ಹತರಾಗಿ ಭೂಮಿಯ ಮೇಲೆ ಬಿದ್ದರು. ಮಹಾ ರಥರಾದ ನಿನ್ನ ಏಳು ಮಕ್ಕಳೂ ಅಸುನೀಗಿ ಹತರಾಗಿ ಬಿದ್ದುದನ್ನು ಕಂಡು ಕಣ್ಣೀರಿನಿಂದ ತೋಯ್ದುಹೋಗಿದ್ದ ಮುಖದಿಂದ ಕೂಡಿದ್ದ ಕರ್ಣನು ವಿದು ರನ ಮಾತುಗಳನ್ನು ಸ್ಮರಿಸಿಕೊಂಡನು. ಪರಾಕ್ರಮಿಯಾದ ಕರ್ಣನು ವಿಧಿ ವತ್ತಾಗಿ ಸಜ್ಜುಗೊಳಿಸಲ್ಪಟ್ಟಿದ್ದ ಮತ್ತೊಂದು ರಥದಲ್ಲಿ ಕುಳಿತು ತ್ವರೆಯಿಂದ ಭೀಮಸೇನನನ್ನು ಪುನಃ ಎದುರಿಸಿದನು. ಸುವರ್ಣಮಯವಾದ ಮೂಲಭಾಗ ಗಳಿದ್ದ, ಶಿಲೆಯಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣಗಳ ಪ್ರಹಾರದಿಂದ ಪರಸ್ಪರವಾಗಿ ಗಾಯಗೊಂಡ ಭೀಮ-ಕರ್ಣರು ಸೂರ್ಯನ ರಶ್ಮಿಗಳಿಂದ ಸಮ್ಮಿಶ್ರವಾದ ಎರಡು ಮೇಘಗಳೋಪಾದಿಯಲ್ಲಿ ಪ್ರಕಾಶಿಸಿದರು. ಕ್ರುದ್ಧ ನಾದ ಭೀಮಸೇನನು ನಿಶಿತವಾಗಿದ್ದ, ಪ್ರಚಂಡವಾದ ತೇಜಸ್ಸಿನಿಂದ ಕೂಡಿದ್ದ ಮೂವತ್ತಾರು ಭಲ್ಲಗಳಿಂದ ಕರ್ಣನ ಕವಚವನ್ನು ಧ್ವಂಸಮಾಡಿದನು. ಮಹಾಬಾಹುವಾದ ಕರ್ಣನೂ ಸಹ ಬಗ್ಗಿದ ಗಿಣ್ಣುಗಳಿದ್ದ ಐವತ್ತು ಬಾಣ

---

ವಿಷಯವಾಗಲೀ ಪ್ರಸ್ತಾಪಿಸಲ್ಪಟ್ಟಿಲ್ಲ. ಈ ಕಾರಣಗಳಿಂದ ಈ ನಾಲ್ಕು ಶ್ಲೋಕಗಳೂ ಅಸಂಗತವಾಗಿ ಕಾಣುತ್ತವೆ. ಇವುಗಳ ಅನುವಾದವನ್ನು ಬಿಟ್ಟರೂ ಕಥಾಪ್ರಕರಣವು ಸಮಂಜಸವಾಗಿಯೇ ಮುಂದುವರಿಯುತ್ತದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಸ್ವಾರಸ್ಯವೆಂದರೆ : ಭೀಮನು ಪ್ರಯೋಗಿಸಿದ ಒಂಬತ್ತು ಬಾಣಗಳು ತಮ್ಮ ಕಾರ್ಯವನ್ನು ಪೂರೈಸಿ ಭೂಮಿಯೊಳಗೆ ಸೇರಿಕೊಳ್ಳುತ್ತವೆ. ಭೀಮನು ಪುನಃ ಬಾಣಗಳನ್ನು ಬಿಟ್ಟ ಪ್ರಸ್ತಾಪವಿಲ್ಲದಿದ್ದರೂ ಭೀಮಸೇನನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ "ಸ ಚ್ಛಾದ್ಯಮಾನೋ ಬಾಣೌಘೈಃ' ಎಂದು ಪ್ರಾರಂಭವಾಗುತ್ತದೆ. ಆದುದರಿಂದ 'ತತೋ ಬಾಣಸಹಸ್ರಾಣಿ' ಎಂಬ ಹನ್ನೆರಡನೆಯ ಶ್ಲೋಕದಿಂದ 'ಸ ಚ್ಛಾದ್ಯಮಾನೋ ಬಾಣೌಘೈ'–ಎಂಬ ೧೭ನೆಯ ಶ್ಲೋಕವು ಅನುವರ್ತಿತವಾದರೆ ಸಮಂಜಸವಾಗುತ್ತದೆ.

ಗಳಿಂದ ಭೀಮಸೇನನನ್ನು ಪ್ರಹರಿಸಿದನು. ಮಹಾರಾಜ! ಭೀಮ-ಕರ್ಣ ರಿಬ್ಬರೂ ತಮ್ಮ ಶರೀರಗಳಿಗೆ ರಕ್ತಚಂದನವನ್ನು ಪೂಸಿಕೊಂಡಿದ್ದರು. ಪರಸ್ಪರ ವಾಗಿ ಮಾಡುತ್ತಿದ್ದ ಬಾಣಗಳ ಪ್ರಹಾರದಿಂದ ಇಬ್ಬರೂ ಶರೀರಾದ್ಯಂತವಾಗಿ ಗಾಯಗೊಂಡಿದ್ದರು. ಗಾಯಗಳಿಂದ ಪ್ರವಹಿಸುತ್ತಿದ್ದ ರಕ್ತದಿಂದ ತೋಯ್ದಿದ್ದ ಅವರು ಆಗ ತಾನೇ ಉದಯಿಸಿದ ಚಂದ್ರ-ಸೂರ್ಯರಂತೆಯೇ ಪ್ರಕಾಶಿಸು ತ್ತಿದ್ದರು. ಪರಸ್ಪರವಾಗಿ ಬಾಣಗಳಿಂದ ಪ್ರಹೃತವಾದ ಇಬ್ಬರ ಕವಚಗಳೂ ಭಿನ್ನವಾಗಿದ್ದುವು. ರಕ್ತದಿಂದ ತೋಯಿಸಲ್ಪಟ್ಟ ಶರೀರಗಳಿಂದ ಕೂಡಿದ್ದ ಭೀಮ-ಕರ್ಣರು ಪೊರೆಯನ್ನು ಕಳಚಿದ ಸರ್ಪಗಳಂತೆಯೇ ಪ್ರಕಾಶಿಸು ತ್ತಿದ್ದರು. ಎರಡು ವ್ಯಾಘ್ರಗಳು ಕೋರೆಹಲ್ಲುಗಳಿಂದ ಪರಸ್ಪರವಾಗಿ ಕಾದಾಡು ವಂತೆ–ನರವ್ಯಾಘ್ರರಾದ ಭೀಮ-ಕರ್ಣರು ಬಾಣಗಳಿಂದ ಕಾದಾಡುತ್ತಿದ್ದರು. ಮೇಘಗಳು ಮಳೆಯನ್ನು ಧಾರಾಕಾರವಾಗಿ ಸುರಿಸುವಂತೆಯೇ ಆ ಇಬ್ಬರು ವೀರರೂ ಬಾಣಗಳ ಧಾರೆಯನ್ನೇ ಸೃಷ್ಟಿಸಿ ಒಬ್ಬರು ಮತ್ತೊಬ್ಬರ ಮೇಲೆ ಸುರಿಸುತ್ತಿದ್ದರು. ಮದಿಸಿದ ಎರಡು ಆನೆಗಳು ದಂತಗಳಿಂದ ಪರಸ್ಪರವಾಗಿ ಕಾದಾಡುವಂತೆ–ಅರಿಂದಮರಾದ ಭೀಮ-ಕರ್ಣರು ಬಾಣಗಳಿಂದ ಒಬ್ಬರು ಮತ್ತೊಬ್ಬರ ಶರೀರವನ್ನು ಛಿನ್ನ-ಭಿನ್ನಮಾಡುತ್ತಾ ಪ್ರಕಾಶಿಸಿದರು. ರಥಶ್ರೇಷ್ಠ ರಾದ ಭೀಮ-ಕರ್ಣರು ಸಿಂಹನಾದಮಾಡುತ್ತಿದ್ದರು. ಸಂತೋಷಭರಿತರಾಗಿ ಗರ್ಜನೆಮಾಡುತ್ತಿದ್ದರು ; ಪರಸ್ಪರವಾಗಿ ಯುದ್ಧರೂಪದ ಆಟವನ್ನಾಡು ತ್ತಿದ್ದರು ; ರಥಗಳಲ್ಲಿ ಕುಳಿತು ಮಂಡಲ ಮತ್ತು ಅರ್ಧಮಂಡಲಗತಿಗಳಿಂದ ಸಂಚರಿಸುತ್ತಿದ್ದರು.

ಬೆದೆಬಂದ ಹಸುವಿಗಾಗಿ ಗುಟುರುಹಾಕುವ ಎರಡು ಗೂಳಿಗಳೋ ಪಾದಿಯಲ್ಲಿ–ಸೈನಿಕರ ಕೋಲಾಹಲಶಬ್ದಗಳ ಮಧ್ಯದಲ್ಲಿ ಬಲಿಷ್ಠರಾದ ಭೀಮ-ಕರ್ಣರು ಗರ್ಜನೆಮಾಡುತ್ತಿದ್ದರು. ನರಸಿಂಹರಾದ, ಮಹಾಬಲರಾದ ವೃಕೋದರ-ರಾಧೇಯರು ಎರಡು ಸಿಂಹಗಳಂತೆಯೇ ಅತುಲವಾದ ತಮ್ಮ ಪರಾಕ್ರಮವನ್ನು ತೋರಿಸುತ್ತಿದ್ದರು. ಕ್ರೋಧದಿಂದ ಕೆಂಪಾದ ಕಣ್ಣುಗಳಿಂದ ಕೂಡಿದ್ದ ಮಹಾವೀರ್ಯರಾದ ರಾಧೇಯ-ಕೌಂತೇಯರು ಪರಸ್ಪರವಾಗಿ– ಇಂದ್ರ ಮತ್ತು ಬಲಿಗಳು ಹಿಂದೆ ಯುದ್ಧಮಾಡಿದಂತೆ–ಯುದ್ಧಮಾಡು ತ್ತಿದ್ದರು. ಧನುಸ್ಸನ್ನು ಎರಡು ಕೈಗಳಿಂದಲೂ ಸುದೀರ್ಘವಾಗಿ ಸೆಳೆದು ಬಾಣ

ಬಿಡುತ್ತಿದ್ದ, ಮಹಾಬಾಹುವಾದ ಭೀಮಸೇನನು ಮಿಂಚಿನಿಂದ ಕೂಡಿದ ಮೇಘದೋಪಾದಿಯಲ್ಲಿ ಪ್ರಕಾಶಿಸಿದನು. ರಥಚಕ್ರಗಳ ಗಡ-ಗಡಾ ಶಬ್ದವನ್ನೇ ಗುಡುಗಿನ ರೂಪದಲ್ಲಿಯೂ, ಧನುಸ್ಸನ್ನೇ ಮಿಂಚಿನ ರೂಪದಲ್ಲಿಯೂ, ಬಾಣಗಳನ್ನೇ ನೀರಿನ ರೂಪದಲ್ಲಿಯೂ ಹೊಂದಿದ್ದ ಭೀಮಸೇನನೆಂಬ ಮಹಾಮೇಘವು ಕರ್ಣನೆಂಬ ಮಹಾಪರ್ವತವನ್ನು ಬಾಣವೆಂಬ ನೀರಿನಿಂದ ಮುಚ್ಚಿಬಿಟ್ಟಿತು. ಪಾಂಡುವಿನ ಮಗನಾದ, ಭಯಂಕರಪರಾಕ್ರಮನಾದ ಭೀಮಸೇನನು ಸುಪ್ರಮುಕ್ತವಾದ ಸಾವಿರ ಬಾಣಗಳಿಂದ ಕರ್ಣನನ್ನು ಮುಚ್ಚಿದನು. ಸುಂದರವಾದ ಮೂಲಭಾಗಗಳುಳ್ಳ, ರಣಹದ್ದಿನ ರೆಕ್ಕೆಗಳನ್ನೇ ವಸ್ತ್ರವನ್ನಾಗಿ ಹೊಂದಿದ್ದ ಭೀಮನ ಬಾಣಗಳಿಂದ ಕರ್ಣನು ಆಚ್ಛಾದಿತನಾಗಲಾಗಿ, ನಿನ್ನ ಮಕ್ಕಳು ಭೀಮಸೇನನ ಪರಾಕ್ರಮವೆಷ್ಟೆಂಬುದನ್ನು ಪ್ರತ್ಯಕ್ಷವಾಗಿ ಕಂಡರು. ರಣರಂಗದಲ್ಲಿ ಭೀಮಸೇನನು ಪಾರ್ಥನನ್ನೂ, ಯಶೋವಂತನಾದ ಕೇಶವನನ್ನೂ, ಸಾತ್ಯಕಿಯನ್ನೂ, ತನ್ನ ರಥಚಕ್ರಗಳ ರಕ್ಷಕರನ್ನೂ (ಯುಧಾಮನ್ಯೂತ್ತಮೌಜಸರನ್ನೂ ) ಸಂತೋಷಗೊಳಿಸುತ್ತಾ ಕರ್ಣನೊಡನೆ ಯುದ್ಧಮಾಡುತ್ತಿದ್ದನು. ಸುವಿಖ್ಯಾತನಾದ ಭೀಮಸೇನನ ಪರಾಕ್ರಮ, ಬಾಹುಬಲ ಮತ್ತು ಧೈರ್ಯಗಳನ್ನು ನೋಡಿ ನಿನ್ನ ಮಕ್ಕಳು ಖಿನ್ನಮನಸ್ಕರಾದರು.

೧೩೬ನೆಯ ಅಧ್ಯಾಯವು ಮುಗಿಯಿತು.

೧೩೭ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಭೀಮ-ಕರ್ಣರ ಯುದ್ಧ: ಧೃತರಾಷ್ಟ್ರನ ಏಳು ಮಂದಿ ಮಕ್ಕಳ ಸಂಹಾರ

ಸಂಜಯನು ಕರ್ಣ-ಭೀಮರ ಸಮರವಾರ್ತೆಯನ್ನೇ ಮುಂದುವರಿಸುತ್ತಾನೆ :

ಮಹಾರಾಜ! ಅರಣ್ಯದಲ್ಲಿರುವ ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯ ಘೀಂಕಾರವನ್ನು ಸಹಿಸದಂತೆ–ಭೀಮಸೇನನ ಮೌರ್ವಿಯ ಟೇಂಕಾರಶಬ್ದವನ್ನು ರಾಧೇಯನು ಸಹಿಸಿಕೊಳ್ಳಲಿಲ್ಲ. ಕರ್ಣನು ಸ್ವಲ್ಪಹೊತ್ತು ಭೀಮಸೇನನ ದೃಷ್ಟಿಗೆ ದೂರವಾಗಿಯೇ ಇದ್ದು ಭೀಮಸೇನನಿಂದ ಹತರಾಗಿ ಭೂಮಿಯ ಮೇಲೆ ಬಿದ್ದಿದ್ದ ನಿನ್ನ ಮಕ್ಕಳನ್ನು ನೋಡಿದನು. ತನ್ನ ರಕ್ಷಣೆ

ಗಾಗಿಯೇ ಬಂದ ಅವರೆಲ್ಲರೂ ಗತಪ್ರಾಣರಾಗಿ ಬಿದ್ದಿರುವುದನ್ನು ನೋಡಿ ಕರ್ಣನ ಮನಸ್ಸು ಖಿನ್ನವಾಯಿತು. ಬಹಳವಾಗಿ ದುಃಖಿಸಿದನು. ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಪುನಃ ಭೀಮನಿಗೆದುರಾಗಿ ಬಂದು ನಿಂತನು. ಕ್ರೋಧದಿಂದ ರಕ್ತಾಕ್ಷನಾಗಿದ್ದ ಕರ್ಣನು ಘಟಸರ್ಪವು ಬುಸುಗುಟ್ಟುವಂತೆ–ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ, ಬಾಣಗಳನ್ನು ಪುಂಖಾನುಪುಂಖವಾಗಿ ಭೀಮಸೇನನ ಮೇಲೆ ಬಿಡುತ್ತಾ, ಕಿರಣಗಳನ್ನು ಹೊರಸೂಸುವ ಸೂರ್ಯನಂತೆಯೇ ಪ್ರಕಾಶಿಸಿದನು.

ಸೂರ್ಯನ ಕಿರಣಗಳಿಂದ ಪರ್ವತವು ಆಚ್ಛಾದಿತವಾಗುವಂತೆ–ಕರ್ಣನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ಭೀಮಸೇನನು ಆಚ್ಛಾದಿತನಾದನು. ಪಕ್ಷಿಗಳು ವಾಸಮಾಡುವ ವೃಕ್ಷವನ್ನು ಆಶ್ರಯಿಸುವಂತೆ–ಕರ್ಣನ ಧನುಸ್ಸಿನಿಂದ ಹುಟ್ಟಿದ, ನವಿಲಿನ ಗರಿಗಳನ್ನು ಹೊಂದಿರುವ ಬಾಣಗಳು ಭೀಮಸೇನನನ್ನು ಎಲ್ಲ ಕಡೆಗಳಿಂದಲೂ ಪ್ರವೇಶಿಸಿದುವು. ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ, ಕರ್ಣನ ಧನುಸ್ಸಿನಿಂದ ಚ್ಯುತವಾದ ಬಾಣಗಳು ಅತ್ತಿತ್ತಲಿಂದ ಬರುತ್ತಿದ್ದ–ಸಾಲುಗಟ್ಟಿ ಹಾರುವ ಹಂಸಪಕ್ಷಿಗಳೋಪಾದಿಯಲ್ಲಿ–ಪ್ರಕಾಶಿಸಿದುವು. ಕರ್ಣನ ರಥದ ಕಡೆಯಿಂದ ಭೀಮಸೇನನ ರಥದ ಕಡೆಗೆ ಬಾಣಗಳು ಪುಂಖಾನುಪುಂಖವಾಗಿ ಅಪಾರಸಂಖ್ಯೆಯಲ್ಲಿ ಎಡೆಬಿಡದೆ ಬರುತ್ತಿದ್ದುದನ್ನು ನೋಡಿದರೆ ಕರ್ಣನ ಧನುಸ್ಸು, ಧ್ವಜವೇ ಮೊದಲಾದ ಸಾಮಗ್ರಿಗಳು, ಛತ್ರ, ಈಷಾದಂಡ, ಮೂಕಿ, ನೊಗ–ಇವುಗಳ ಕಡೆಗಳಿಂದಲೂ ಬಾಣಗಳು ಬರುತ್ತಿವೆಯೋ ಎಂಬಂತೆ ಕಾಣುತ್ತಿದ್ದಿತು. ಕರ್ಣನು ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ, ಸುವರ್ಣದಿಂದ ಚಿತ್ರಿತವಾಗಿದ್ದ, ಮಹಾವೇಗಯುಕ್ತವಾಗಿದ್ದ, ಆಕಾಶಗಾಮಿಗಳಾದ ಬಾಣಗಳಿಂದ ಆಕಾಶವನ್ನೇ ತುಂಬಿಸುತ್ತಾ ಭೀಮನ ಮೇಲೆ ಬಿಡುತ್ತಿದ್ದನು. ವೃಕೋದರನು ಅಂತಕನಂತೆಯೇ ಬಹಳ ತೀಕ್ಷ್ಣನಾಗಿ ತನ್ನ ಮೇಲೆ ಬೀಳುತ್ತಿದ್ದ ಕರ್ಣನನ್ನು, ಪ್ರಾಣಗಳ ಮೇಲಿನ ವ್ಯಾಮೋಹವನ್ನು ಸಂಪೂರ್ಣವಾಗಿ ತೊರೆದು, ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಕರ್ಣನು ಬಿಟ್ಟ ಬಾಣಗಳ ವೇಗವು ಸಹಿಸಲು ಅಶಕ್ಯವೆಂದು ಭಾವಿಸಿದ ಭೀಮಸೇನನು ಕರ್ಣನು ಬಿಟ್ಟಿದ್ದ ಬಾಣಗಳೆಲ್ಲವನ್ನೂ ಪ್ರತಿ ಬಾಣಪ್ರಹಾರ

ದಿಂದ ನಿರಸನಗೊಳಿಸಿದನು. ಈ ರೀತಿಯಾಗಿ ಭೀಮಸೇನನು ಕರ್ಣನು ಬಿಟ್ಟಿದ್ದ ಬಾಣಗಳ ಸಮೂಹಗಳೆಲ್ಲವನ್ನೂ ಧ್ವಂಸಮಾಡಿ, ಇಪ್ಪತ್ತು ಬಾಣ ಗಳಿಂದ ಕರ್ಣನನ್ನೂ ಪ್ರಹರಿಸಿದನು. ಪುನಃ ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಇನ್ನೂ ಅನೇಕ ಬಾಣಗಳಿಂದ ಕರ್ಣನನ್ನು ಭೀಮಸೇನನು ಪ್ರಹರಿಸಿದನು. ಹಿಂದೆ ಕರ್ಣನು ಭೀಮಸೇನನನ್ನು ಯಾವ ರೀತಿಯಲ್ಲಿ ಬಾಣಗಳ ಸಮೂಹದಿಂದ ಮುಚ್ಚಿದ್ದನೋ–ಅದೇ ರೀತಿಯಲ್ಲಿ ಭೀಮನೂ ಕರ್ಣನನ್ನು ಬಾಣಗಳ ಸಮೂಹದಿಂದ ಮುಚ್ಚಿದನು. ಯುದ್ಧದಲ್ಲಿ ಭೀಮ ಸೇನನ ಅತುಲಪರಾಕ್ರಮವನ್ನು ನೋಡಿ ನಿನ್ನ ಕಡೆಯ ಯೋಧರೂ ಸಹ ಅವನನ್ನು ಅಭಿನಂದಿಸಿದರು. ಚಾರಣರು ಆನಂದತುಂದಿಲರಾದರು. ಭೂರಿಶ್ರವಸ, ಕೃಪ, ಅಶ್ವತ್ಥಾಮಾ, ಮದ್ರಾಧಿತಿಯಾದ ಶಲ್ಯ, ಜಯದ್ರಥ, ಯುಧಾಮನ್ಯು, ಉತ್ತಮೌಜಸ, ಸಾತ್ಯಕಿ, ಕೇಶವಾರ್ಜುನರು, ಕುರು-ಪಾಂಡವ ಮುಖ್ಯರಾದ ಈ ಹತ್ತುಮಂದಿ ಮಹಾರಥರು **‘ಸಾಧು ಭೀಮ ಸೇನ । ಸಾಧು!’** ಎಂದು ಹೇಳುತ್ತಾ ವೇಗವಾಗಿ ಸಿಂಹನಾದಗಳನ್ನು ಮಾಡಿದರು. ಭಯಂಕರವಾದ, ರೋಮಾಂಚಕವಾದ ಸಿಂಹನಾದಗಳು ಸರ್ವತ್ರ ನಿನಾದಿತವಾಗಲಾಗಿ, ದುರ್ಯೋಧನನು ಬಹಳ ಅವಸರದಿಂದ ರಾಜರನ್ನೂ, ರಾಜಪುತ್ರರನ್ನೂ ವಿಶೇಷವಾಗಿ ತನ್ನ ಸಹೋದರರನ್ನೂ ಸಂಬೋಧಿಸಿ ಹೇಳಿದನು :

**ಕರ್ಣಂ ಗಚ್ಛತ ಭದ್ರಂ ವಃ ಪರೀಪ್ಸನ್ತೋ ವೃಕೋದರಾತ್ ॥೧೮॥**

“ನಿಮಗೆ ಮಂಗಳವಾಗಲಿ! ವೃಕೋದರನಿಂದ ಕರ್ಣನನ್ನು ರಕ್ಷಿಸುವ ಸಲುವಾಗಿ ನೀವೆಲ್ಲರೂ ಕರ್ಣನ ಸಮೀಪಕ್ಕೆ ಈಗಲೇ ಧಾವಿಸಿರಿ.

ಭೀಮನ ಚಾಪದಿಂದ ಚ್ಯುತವಾದ ಬಾಣಗಳು ರಾಧೇಯನನ್ನು ಸಂಹರಿಸುವ ಮೊದಲೇ ಮಹಾಧನುಷ್ಮಂತರಾದ ನೀವೆಲ್ಲರೂ ಸಂಘಟಿತರಾಗಿ ಸೂತಪುತ್ರನ ರಕ್ಷಣೆಗಾಗಿ ಪ್ರಯತ್ನಿಸಿರಿ.” ದುರ್ಯೋಧನನಿಂದ ಸಮಾದಿಷ್ಟ ರಾದ ಅವನ ಏಳು ಮಂದಿ ಸಹೋದರರೂ ಕ್ರುದ್ಧರಾಗಿ ಭೀಮಸೇನನ ಬಳಿಗೆ ಹೋಗಿ ಅವನನ್ನು ನಾಲ್ಕು ಕಡೆಗಳಿಂದಲೂ ಸುತ್ತುಗಟ್ಟಿದರು. ವರ್ಷರ್ತುವಿ ನಲ್ಲಿ ಮೇಘಗಳು ಜಲಧಾರೆಗಳಿಂದ ಪರ್ವತವನ್ನು ಮುಚ್ಚಿಬಿಡುವಂತೆ–

ಸಪ್ತಸಹೋದರರೂ ಕೌಂತೇಯನನ್ನು ಬಾಣಗಳ ವೃಷ್ಟಿಯಿಂದ ಮುಚ್ಚಿದರು. ಪ್ರಜಾಸಂಹಾರಕಾಲದಲ್ಲಿ (ಪ್ರಳಯಕಾಲದಲ್ಲಿ) ಏಳು ಗ್ರಹಗಳೂ ಸೇರಿಕೊಂಡು ಚಂದ್ರನನ್ನು ಪೀಡಿಸುವಂತೆ–ಸಪ್ತಮಹಾರಥರೂ ಸಂಘಟಿತ ರಾಗಿ ಭೀಮಸೇನನನ್ನು ಪೀಡಿಸಿದರು. ಅನಂತರ ಕುಂತೀಕುಮಾರನು ಸುಪರಿಷ್ಕೃತವಾದ ಧನುಸ್ಸನ್ನು ಸುದೀರ್ಘವಾಗಿ ಸೆಳೆದು ಪೀಡಿಸುತ್ತಾ, ದೃಢವಾದ ಮುಷ್ಟಿಯಿಂದ ಹಿಡಿದು ತನ್ನ ಎದುರಾಗಿ ನಿಂತಿರುವ ಕೌರವ ರಾಜಕುಮಾರರನ್ನು ಮನುಷ್ಯಸಾಮಾನ್ಯರೆಂದೇ ತಿಳಿದುಕೊಂಡವನಾಗಿ, ಸೂರ್ಯರಶ್ಮಿಸದೃಶವಾದ ಏಳು ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನ ಮಾಡಿ ಪರಿಶ್ರಮಪೂರ್ವಕವಾಗಿ ಸಪ್ತಸಹೋದರರ ಮೇಲೆ ಪ್ರಯೋಗಿಸಿ ದನು. ಹಿಂದಿನ ವೈರವನ್ನು ಸ್ಮರಿಸಿಕೊಳ್ಳುತ್ತಾ ನಿನ್ನ ಮಕ್ಕಳ ದೇಹಗಳಿಂದ ಪ್ರಾಣಗಳನ್ನು ಸೆಳೆದುಕೊಳ್ಳುತ್ತಿರುವನೋ ಎಂಬಂತೆ ಭೀಮಸೇನನು ನಿನ್ನ ಮಕ್ಕಳ ಮೇಲೆ ಏಳು ಬಾಣಗಳನ್ನು ಪ್ರಯೋಗಿಸಿದನು. ಭೀಮಸೇನನಿಂದ ಬಿಡಲ್ಪಟ್ಟ ಸುವರ್ಣಮಯವಾದ ಮೂಲಭಾಗವನ್ನು ಹೊಂದಿದ್ದ, ಶಿಲೆ ಯಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಆ ಏಳು ಬಾಣಗಳು ನಿನ್ನ ಮಕ್ಕಳನ್ನು ಭೇದಿಸಿಕೊಂಡು ಆಕಾಶಕ್ಕೆ ಹಾರಿದುವು. ಸಪ್ತಸೋದರರ ವಕ್ಷಃಸ್ಥಳಗಳನ್ನು ಸೀಳಿ ಹೊರಬಂದು ಆಕಾಶಕ್ಕೆ ಚಿಮ್ಮಿದ ಸುವರ್ಣಭೂಷಿತವಾದ ಆ ಬಾಣಗಳು ಅಂತರಿಕ್ಷದಲ್ಲಿ ಹಾರಾಡುವ ಗರುಡಪಕ್ಷಿಗಳಂತೆಯೇ ಪ್ರಕಾಶಿಸಿದುವು. ಸುವರ್ಣದಿಂದ ಸಮಲಂಕೃತವಾಗಿದ್ದ ಆ ಏಳು ಬಾಣಗಳು ನಿನ್ನ ಮಕ್ಕಳ ಹೃದಯದಲ್ಲಿ ರಕ್ತವನ್ನು ಕುಡಿದು ಹೊರಬಂದು ರಕ್ತದಿಂದ ಲೇಪಿತವಾದ ರೆಕ್ಕೆಗಳಿಂದಲೂ ಮತ್ತು ಅಗ್ರಭಾಗಗಳಿಂದಲೂ ಪ್ರಕಾಶಿಸಿದುವು. ಪರ್ವತದ ತಪ್ಪಲುಪ್ರದೇಶದಲ್ಲಿ ಹುಟ್ಟಿರುವ ವೃಕ್ಷಗಳು ಆನೆಗಳಿಂದ ಭಗ್ನವಾಗಿ ಕೆಳಗೆಬೀಳುವಂತೆ–ಮರ್ಮಸ್ಥಾನಗಳಲ್ಲಿ ಬಾಣಗಳಿಂದ ಬಹಳವಾಗಿ ಗಾಯಗೊಂಡಿದ್ದ ಸಪ್ತಸಹೋದರರು ಪ್ರಾಣಗಳನ್ನು ತೊರೆದು ರಥಗಳಿಂದ ಕೆಳಗುರುಳಿದರು. ಶತ್ರುಂಜಯ, ಶತ್ರುಸಹ, ಚಿತ್ರ (ಚಿತ್ರಬಾಣ), ಚಿತ್ರಾಯುಧ (ಅಗ್ರಾಯುಧ), ದೃಢ (ದೃಢವರ್ಮಾ), ಚಿತ್ರಸೇನ (ಉಗ್ರಸೇನ) ಮತ್ತು ವಿಕರ್ಣ–ಈ ಏಳು ಮಂದಿ ದುರ್ಯೋಧನನ ಸಹೋದರರು ಭೀಮಸೇನನಿಂದ ಹತರಾಗಿ ಕೆಳಗುರುಳಿದರು.

ಮಹಾರಾಜ! ಹತರಾದ ನಿನ್ನ ಏಳು ಮಂದಿ ಮಕ್ಕಳಲ್ಲಿ ಪಾಂಡವ ಪ್ರಿಯನಾದ ವಿಕರ್ಣನೂ ಸೇರಿದ್ದುದನ್ನು ಕಂಡು ಭೀಮಸೇನನು ದುಃಖದಿಂದ ಬಹಳವಾಗಿ ಶೋಕಿಸುತ್ತಾ ಹೇಳಿದನು :

"ವಿಕರ್ಣ! ನೀನು ನಮಗೆ ಬಹಳ ಪ್ರಿಯನಾದವನು. ನಿನ್ನನ್ನು ನಾನು ಕೊಲ್ಲಬಾರದಾಗಿತ್ತು. ಆದರೆ ಯುದ್ಧದಲ್ಲಿ ನಾನು ಧೃತರಾಷ್ಟ್ರನ ಮಕ್ಕಳೆಲ್ಲರನ್ನೂ ಸಂಹರಿಸುವೆನೆಂದು ಪ್ರತಿಜ್ಞೆಮಾಡಿದ್ದೆನು. ಆ ಪ್ರತಿಜ್ಞೆಯ ಪೂರಣಕ್ಕಾಗಿ ನಿನ್ನನ್ನು ಕೊಲ್ಲುವುದು ಅನಿವಾರ್ಯವಾಯಿತು. ಅದರಿಂದ ನೀನು ನನ್ನಿಂದ ಹತನಾದೆ. ನಾನು ಮಾಡಿದ ಪ್ರತಿಜ್ಞೆಯನ್ನೂ ನಾನು ರಕ್ಷಿಸಿಕೊಂಡಂತಾಯಿತು. ಯದ್ಯಪಿ ನಿನಗೆ ನಮ್ಮ ಮೇಲೆ ವಿಶೇಷವಾದ ಪ್ರೀತಿಯೇ ಇದ್ದರೂ ಕ್ಷಾತ್ರಧರ್ಮವನ್ನು ಸ್ಮರಿಸುತ್ತಾ ನೀನು ನನ್ನೊಡನೆ ಯುದ್ಧಮಾಡಲು ಬಂದೆ. ಅದರಿಂದಲೇ ಹತನಾದೆ. **'ಯುದ್ಧಧರ್ಮೋ ಹಿ ನಿಷ್ಠುರಃ'** ನಿಶ್ಚಯವಾಗಿಯೂ ಯುದ್ಧಧರ್ಮವು ಬಹಳ ನಿಷ್ಠುರವಾದುದು.

**ವಿಶೇಷತೋ ಹಿ ನೃಪತೇಸ್ತಥಾಸ್ಮಾಕಂ ಹಿತೇ ರತಃ ।**
**ನ್ಯಾಯತೋಽನ್ಯಾಯತೋ ವಾಪಿ ಹತಃ ಶೇತೇ ಮಹಾದ್ಯುತಿಃ ॥೩೪॥**
**ಅಗಾಧಬುದ್ಧಿರ್ಗಾಂಗೇಯಃ ಕ್ಷಿತೌ ಸುರಗುರೋಃ ಸಮಃ ।**
**ತ್ಯಾಜಿತಃ ಸಮರೇ ಪ್ರಾಣಾಂಸ್ತಸ್ಮಾದ್ಯುದ್ಧಂ ಹಿ ನಿಷ್ಠುರಮ್ ॥೩೫॥**

ವಿಕರ್ಣ! ಯುದ್ಧವು ನಿಷ್ಠುರವಾದುದೆಂಬುದಕ್ಕೆ ನೀನೊಬ್ಬನೇ ಸಾಕ್ಷಿಯಲ್ಲ. ನಮ್ಮೆಲ್ಲರ ಹಿತದಲ್ಲಿ–ವಿಶೇಷವಾಗಿ ಯುಧಿಷ್ಠಿರನ ಹಿತದಲ್ಲಿ– ಸರ್ವದಾ ನಿರತನಾಗಿದ್ದ, ಮಹಾದ್ಯುತಿಮಂತನಾದ, ವಿಶಾಲಬುದ್ಧಿಯವನಾದ, ಭೂಲೋಕದಲ್ಲಿ ಬೃಹಸ್ಪತಿಗೆ ಸಮಾನನಾಗಿರುವ ಭೀಷ್ಮನು ನ್ಯಾಯದಿಂದಲೋ ಅನ್ಯಾಯದಿಂದಲೋ ಸಮರಭೂಮಿಯಲ್ಲಿ ಹತನಾಗಿ ಪ್ರಾಣಗಳನ್ನು ಪರಿತ್ಯಾಗಮಾಡುವ ಸ್ಥಿತಿಯಲ್ಲಿ ಮಲಗಿದ್ದಾನೆ. ಆದುದರಿಂದ ಯುದ್ಧವೆಂಬುದು ಅತಿನಿಷ್ಠುರವಾದುದು."

ಮಹಾರಾಜ! ಈ ರೀತಿಯಲ್ಲಿ ಮಹಾಬಾಹುವಾದ ಭೀಮಸೇನನು ರಾಧೇಯನು ನೋಡುತ್ತಿದ್ದಂತೆಯೇ ಆ ನಿನ್ನ ಏಳು ಮಂದಿ ಮಕ್ಕಳನ್ನೂ ಸಂಹರಿಸಿ ಘೋರವಾದ ಸಿಂಹನಾದಶಬ್ದವನ್ನು ಹೃದಯಾಂತರಾಳದಿಂದ ಹೊರಹೊಮ್ಮಿಸಿದನು. ಆ ಸಿಂಹನಾದವು ಶೂರವೀರನಾದ ಭೀಮನು

ಯುದ್ಧದಲ್ಲಿ ಜಯಿಸಿರುವ ಮತ್ತು ತನ್ಮೂಲಕವಾಗಿ ತನಗೂ ಮಹಾ ವಿಜಯವು ಲಭಿಸಿರುವ ಸೂಚನೆಯನ್ನು ಯುಧಿಷ್ಠಿರನಿಗೆ ಕೊಟ್ಟಿತು. ಮಹಾಧನುಷ್ಮಂತನಾದ ಭೀಮಸೇನನ ಮಹಾಗರ್ಜನೆಯನ್ನು ಕೇಳಿ ಧೀಮಂತನಾದ ಯುಧಿಷ್ಠಿರನಿಗೆ ಮಹದಾನಂದವಾಯಿತು. ರಣವಾದ್ಯ ಘೋಷಗಳ ಮಹಾನಿನಾದದಿಂದ ಪರಮಹೃಷ್ಟನಾದ ಯುಧಿಷ್ಠಿರನು ತಮ್ಮ ನಾದ ಭೀಮಸೇನನ ಸಿಂಹನಾದವನ್ನು ಅತ್ಯಾದರದಿಂದ ಪ್ರತಿಗ್ರಹಿಸಿದನು. ಮಹಾಹರ್ಷಯುಕ್ತನಾಗಿದ್ದ ಧರ್ಮಜನು “ನನಗೆ ವಿಜಯದ ವಾರ್ತೆಯು ಸಿಂಹನಾದದ ಮೂಲಕವಾಗಿ ತಿಳಿಯಿತು. ಇದರಿಂದ ನಾನು ಪರಮಹೃಷ್ಟ ನಾಗಿದ್ದೇನೆ”–ಎಂಬ ಸೂಚನೆಯನ್ನು ಭೀಮಸೇನನಿಗಿತ್ತು, ಸರ್ವಶಸ್ತ್ರವಿದ ರಲ್ಲಿಯೂ ಶ್ರೇಷ್ಠರಾದ ದ್ರೋಣರನ್ನು ಆಕ್ರಮಿಸಿದನು.

**ಏಕತ್ರಿಂಶನ್ಮಹಾರಾಜ ಪುತ್ರಾಂಸ್ತವ ನಿಪಾತಿತಾನ್ ।**
**ಹತಾನ್ದುರ್ಯೋಧನೋ ದೃಷ್ಟ್ವಾ ಕ್ಷತ್ತುಃ ಸಸ್ಮಾರ ತದ್ವಚಃ ॥೪೧॥**

* ನಿನ್ನ ಮಕ್ಕಳಲ್ಲಿ ಮೂವತ್ತೊಂದು ಮಂದಿ ಹತರಾಗಿ ರಣಾಂಗಣದಲ್ಲಿ ಬಿದ್ದಿರುವುದನ್ನು ನೋಡಿ ದುರ್ಯೋಧನನು ವಿದುರನ ಮಾತನ್ನು ಸ್ಮರಿಸಿ ಕೊಂಡನು. “ವಿದುರನು ನಮ್ಮ ಕಲ್ಯಾಣದ ಸಂಬಂಧದಲ್ಲಿ ಯಾವ ಮಾತು ಗಳನ್ನಾಡಿದ್ದನೋ ಅವೆಲ್ಲವೂ ಈಗ ಪ್ರತ್ಯಕ್ಷವಾಗಿಯೇ ನಡೆಯುತ್ತಿವೆ”– ಎಂಬುದಾಗಿ ಯೋಚಿಸಿದ ನಿನ್ನ ಮಗನು ಮುಂದೇನು ಮಾಡುವುದೆಂಬುದಕ್ಕೆ ಯಾವ ಉತ್ತರವನ್ನೂ ಪಡೆದುಕೊಳ್ಳಲಿಲ್ಲ. (ವಿದುರನು ಹೇಳಿದ್ದಂತೆ ಸರ್ವ ನಾಶವಾಗುತ್ತಿದ್ದರೂ ಅದನ್ನು ತಪ್ಪಿಸಲು ದುರ್ಯೋಧನನು ಅಸಹಾಯನಾಗಿ

---

* ೧೨೭ನೆಯ ಅಧ್ಯಾಯ–ಕುಂಡಭೇದೀ, ವಿಂದ, ಅನುವಿಂದ, ಸುದರ್ಶನ, ವೃಂದಾರಕ, ಸುಷೇಣ, ದೀರ್ಘನೇತ್ರ ಅಭಯ, ರೌದ್ರಕರ್ಮಾ, ಸುವರ್ಮಾ, ದುರ್ವಿಲೋಚನ (11) ೧೩೩ನೆಯ ಅಧ್ಯಾಯ–ದುರ್ಜಯ (1) ೧೩೪ನೆಯ ಅಧ್ಯಾಯ–ದುರ್ಮುಖ (1) ೧೩೫ನೆಯ ಅಧ್ಯಾಯ–ದುರ್ಮರ್ಷಣ, ದುಃಸಹ, ದುರ್ಮದ, ದುರ್ಧರ, ಜಯ (5) ೧೩೬ನೆಯ ಅಧ್ಯಾಯ–ಚಿತ್ರ, ಉಪಚಿತ್ರ, ಚಿತ್ರಾಕ್ಷ, ಚಾರುಚಿತ್ರ, ಶರಾಸನ, ಚಿತ್ರಾ ಯುಧ, ಚಿತ್ರವರ್ಮಾ (7) ೧೩೭ನೆಯ ಅಧ್ಯಾಯ–ಶತ್ರುಂಜಯ, ಶತ್ರುಸಹ, ಚಿತ್ರ (ಚಿತ್ರಬಾಣ), ಚಿತ್ರಾಯುಧ (ಅಗ್ರಾಯುಧ), ದೃಢ (ದೃಢವರ್ಮಾ), ಚಿತ್ರಸೇನ (ಉಗ್ರಸೇನ), ವಿಕರ್ಣ (7) ಭೀಷ್ಮಪರ್ವದಲ್ಲಿ ಸತ್ತುಹೋದ ಮಕ್ಕಳ ಸಂಖ್ಯೆಯು ಇಲ್ಲಿ ಸೇರಿಲ್ಲ. ಹದಿನಾಲ್ಕನೆಯ ದಿವಸದಲ್ಲಿ ಸತ್ತವರ ಸಂಖ್ಯೆಯನ್ನು ಮಾತ್ರ ಸಂಜಯ

ದ್ದನು. ಹೊತ್ತಿಸಿದ ಬೆಂಕಿಯನ್ನು ಆರಿಸುವ ಸಾಧ್ಯತೆಯಿರಲಿಲ್ಲ. ಆದುದರಿಂದಲೇ ದುರ್ಯೋಧನನು ಈ ವಿಷಯದಲ್ಲಿ ನಿರುತ್ತರನಾಗಿದ್ದನು. ಆಗುವುದು ಆಗಿಹೋಗಲಿ–ಎಂಬ ನಿಶ್ಚಯಕ್ಕೆ ಬಂದಿದ್ದನು.)

ಧೃತರಾಷ್ಟ್ರಮಹಾರಾಜ! ದ್ಯೂತಸಮಯದಲ್ಲಿ ದುರ್ಬುದ್ಧಿಯವನಾದ ಮತ್ತು ಅಲ್ಪಬುದ್ಧಿಯವನಾದ ದುರ್ಯೋಧನನು ಕರ್ಣನೊಡನೆ ಕೂಡಿಕೊಂಡು ದ್ರೌಪದಿಯನ್ನು ತುಂಬಿದ ಸಭೆಗೆ ಎಳೆತರಿಸಿ ಎಲ್ಲರ ಸಮ್ಮುಖದಲ್ಲಿಯೇ ಅವಳನ್ನು ಕುರಿತು ಕೆಟ್ಟ-ಕೆಟ್ಟ ಮಾತುಗಳನ್ನೆಲ್ಲಾ ಆಡಿದನು. ಅಷ್ಟೇ ಸಾಲದೆಂದು ಕರ್ಣನು ಪಾಂಡವಪುತ್ರರ ಮತ್ತು ನಿನ್ನ ಸಮ್ಮುಖದಲ್ಲಿ ನೀನೂ ಮತ್ತು ಎಲ್ಲ ಕೌರವರೂ ಕೇಳಿಸಿಕೊಳ್ಳುವಂತೆ (ಗಟ್ಟಿಯಾಗಿ) ಕೃಷ್ಣೆಯನ್ನು ಕುರಿತು ಅತ್ಯಂತಕಠೋರವಾದ ಮಾತುಗಳನ್ನಾಡಿದನು. ಅವನು ಹೇಳಿದ ಮಾತುಗಳು ಇಂದೂ ನನ್ನ ಕಿವಿಗಳನ್ನು ಕೊರೆಯುತ್ತಿವೆ. ನಿನ್ನ ಸ್ಮರಣೆಯಲ್ಲಿಯೂ ಇರಬಹುದು.

**ವಿನಷ್ಟಾಃ ಪಾಣ್ಡವಾಃ ಕೃಷ್ಣೇ ಶಾಶ್ವತಂ ನರಕಂ ಗತಾಃ ।**
**ಪತಿಮನ್ಯಂ ವೃಣೀಷ್ವ.... ॥೪೬॥**

“ಕೃಷ್ಣೇ! ಪಾಂಡವರೆಲ್ಲರೂ ಹಾಳಾಗಿಹೋದರು. ಶಾಶ್ವತವಾದ ನರಕಕ್ಕೆ ಹೋದರು. ಅವರ ಹಂಬಲವನ್ನು ಬಿಟ್ಟು ಬೇರೊಬ್ಬ ಪತಿಯನ್ನು ವರಿಸು” ಎಂದು ಹೇಳಿದ್ದನು.

---

ನಿಲ್ಲಿ ಹೇಳಿದ್ದಾನೆ. ಆದರೆ ಸಂಖ್ಯೆಯಲ್ಲಿ ಒಂದು ವ್ಯತ್ಯಾಸವಿದೆ. ಇಲ್ಲಿ ನಾವು ಕೊಟ್ಟಿರುವ ವಿವರಣೆ ಪ್ರಕಾರ ೩೨ ಆಗುತ್ತದೆ. ಚಿತ್ರ ಮತ್ತು ಚಿತ್ರಾಯುಧರ ಹೆಸರುಗಳು ಎರಡು ಬಾರಿ ಬಂದಿದ್ದರೂ ಸಹ ಈ ಎರಡು ಅಧ್ಯಾಯಗಳಲ್ಲಿ ಏಳು ಎಂಬ ಸಂಖ್ಯೆಯು ನಿರ್ದಿಷ್ಟವಾಗಿರುವುದರಿಂದ ಚಿತ್ರ ಮತ್ತು ಚಿತ್ರಾಯುಧರ ಬೇರೆಯ ಹೆಸರುಗಳನ್ನು ಕಂಸದಲ್ಲಿ ಕೊಡಲಾಗಿದೆ. ಏಕತ್ರಿಂಶನ್ಮಹಾರಾಜ–ಎಂಬುದಕ್ಕೆ ಪಾಠಾಂತರವಿಲ್ಲ. ಈ ಒಂದರ ವ್ಯತ್ಯಾಸವು ಹೇಗಾಯಿತೋ ತಿಳಿಯದು. ಏಕವಚನವಿರುವುದರಿಂದ ಚಿತ್ರೋಪಚಿತ್ರರು (ಚಿತ್ರೋಪಚಿತ್ರಃ) ‘ಒಬ್ಬರು’ ಎಂದು ಭಾವಿಸಿದರೆ ೩೧ ಆಗುತ್ತದೆ. ಆದರೆ ೧೦೦ ಮಕ್ಕಳ ಹೆಸರುಗಳನ್ನು ಹೇಳುವಾಗ ಚಿತ್ರ-ಉಪಚಿತ್ರರನ್ನು ಪ್ರತ್ಯೇಕವಾಗಿಯೇ ಗಣಿಸಲಾಗಿದೆ. ಒಂದು ಸಮಾಧಾನ ಹೇಳಬಹುದು : ೧೨೭ನೆಯ ಅಧ್ಯಾಯದಲ್ಲಿ ಕುಂಡಭೇದಿಯ ಹೆಸರು ಬಂದಿದ್ದರೂ ಇವನು ಈ ಹಿಂದೆಯೇ ಸತ್ತುಹೋಗಿರುವುದರಿಂದ (ಭೀಷ್ಮ-೯೬-೨೭) ಇವನನ್ನು ಬಿಟ್ಟು ಗಣನೆಮಾಡಿದರೆ ೩೧ ಆಗುತ್ತದೆ.

**ತಸ್ಯೇದಂ ಫಲಮಾಗತಮ್ ।** ಹಾಗೆ ಅತ್ಯಂತಕ್ರೂರವಾದ ಮಾತನ್ನು ಆಡಿದುದಕ್ಕೆ ಫಲವು ಇದೀಗ ಪ್ರಾಪ್ತವಾಗಿದೆ. ಆ ಸಮಯದಲ್ಲಿ ನಿನ್ನ ಮಕ್ಕಳಿಗೆ ಧರ್ಮಪುತ್ರರಾದ ಪಾಂಡವರನ್ನು ಕಟುವಚನಗಳಿಂದ ಕೆರಳಿಸುವುದೇ ಒಂದು ವಿಧವಾದ ಮನೋರಂಜನೆಯಾಗಿದ್ದಿತು. ಮಹಾತ್ಮರಾದ ಪಾಂಡವರನ್ನು ಕುಪಿತರನ್ನಾಗಿ ಮಾಡಬೇಕೆಂಬ ಆಶೆಯಿಂದಲೇ ನಿನ್ನ ಮಕ್ಕಳು ಅವರನ್ನು "ಷಂಡರು, ಎಣ್ಣೆತೆಗೆದ ಜಳ್ಳಿನಂತಿರತಕ್ಕವರು" ಇವೇ ಮುಂತಾದ ಕರ್ಣ ಕಠೋರವಾದ ಮಾತುಗಳನ್ನು ಅವರ ಮುಂದೆಯೇ ಆಡಿ ಹಾಸ್ಯಮಾಡಿದರು. ಹದಿಮೂರು ವರ್ಷಗಳ ಪರ್ಯಂತವಾಗಿ ಅಡಗಿಸಿಕೊಂಡಿದ್ದ ಕ್ರೋಧಾಗ್ನಿ ಯನ್ನು ಭೀಮಸೇನನು ಈಗ ನಿನ್ನ ಮಕ್ಕಳ ಮೇಲೆ ವಮನಮಾಡುತ್ತಾ ಅವರನ್ನು ಕೊನೆಗಾಣಿಸುತ್ತಿದ್ದಾನೆ.

ಭರತಶ್ರೇಷ್ಠನೇ! ವಿದುರನು ನಿನ್ನೊಡನೆ ಈ ಕ್ಷತ್ರನಾಶವನ್ನು ತಪ್ಪಿಸ ಬೇಕೆಂದು ಬಹಳವಾಗಿ ಹಲುಬಿದನು. ಆದರೆ ನಿನ್ನಿಂದ ಅವನು ಶಾಂತಿಯನ್ನು ಪಡೆದುಕೊಳ್ಳಲಿಲ್ಲ. (ನೀನು ಅವನ ಆಶಯದಂತೆ ಪಾಂಡವರೊಡನೆ ಶಾಂತಿ ಸಂಧಾನಮಾಡಿಕೊಳ್ಳಲು ಒಪ್ಪಲಿಲ್ಲ.) ಆ ನಿನ್ನ ವ್ಯತಿಕ್ರಮದ ಫಲವನ್ನು ಪುತ್ರಸಹಿತನಾಗಿ ಈಗ ನೀನು ಅನುಭವಿಸಬೇಕಾಗಿದೆ. ನೀನು ಜ್ಞಾನವೃದ್ಧನು ; ವಯೋವೃದ್ಧನು ; ಧೀರನು ; ಕಾರ್ಯದ ತತ್ತ್ವ ಮತ್ತು ಪ್ರಯೋಜನ ಎರಡನ್ನೂ ತಿಳಿದಿರತಕ್ಕವನು. ನೀನು ಇಂತಹ ಮಹಾಮೇಧಾವಿಯೇ ಆಗಿ ದ್ದರೂ ಸುಹೃದರ ಮಾತಿನಂತೆ ನೀನು ನಡೆದುಕೊಳ್ಳಲಿಲ್ಲ. ಇದಕ್ಕೆ ದೈವೇಚ್ಛೆಯೇ ಕಾರಣ. ಆದುದರಿಂದ, ನರವ್ಯಾಘ್ರನೇ! ದುಃಖಿಸಬೇಡ. ಇಂದಿನ ವಿನಾಶಕ್ಕೆ ನೀನು ಮಾಡಿರುವ ಅಪರಾಧವೇ ಹೆಚ್ಚು ಕಾರಣವಾಗಿದೆ. ನಿನ್ನ ಮಕ್ಕಳ ವಿನಾಶಕ್ಕೆ ನೀನೇ ಮುಖ್ಯಕಾರಣನೆಂಬುದು ನನ್ನ ಅಭಿಮತವಾಗಿದೆ. ರಾಜೇಂದ್ರ! ವಿಕರ್ಣನು ಸತ್ತುಹೋದನು. ವೀರ್ಯವಂತನಾದ ಚಿತ್ರಸೇನನೂ ಅಸುನೀಗಿದನು. ರಥಿಶ್ರೇಷ್ಠರೆನಿಸಿದ್ದ ಪ್ರಮುಖರಾದ ನಿನ್ನ ಮಕ್ಕಳೂ ಮೊಮ್ಮಕ್ಕಳೂ ಹತರಾಗಿಹೋದರು. ನಿನ್ನ ಕಡೆಯ ಇನ್ನೂ ಅನೇಕ ಮಹಾರಥರೂ ಸಹ ಕಾಲಗತಿಯನ್ನೈದಿದರು. ಭೀಮಸೇನನು ತನ್ನ ಕಣ್ಣಿ ಮುಂದೆ ಯಾವ ಯಾವ ನಿನ್ನ ಮಕ್ಕಳನ್ನು ಕಾಣುತ್ತಿದ್ದನೋ–ಅವರೆಲ್ಲರನ್ನೂ ಅತ್ಯಂತತ್ವರೆಯಿಂದ ಸಂಹರಿಸಿಬಿಡುತ್ತಿದ್ದನು. ನಿನ್ನ ಅಪರಾಧದ ಕಾರಣ

ದಿಂದಲೇ ಪ್ರಾರಂಭವಾದ ಈ ಮಹಾಯುದ್ಧದಲ್ಲಿ ಭೀಮ-ಕರ್ಣರು ಬಿಡುತ್ತಿದ್ದ ಸಾವಿರಾರು ಬಾಣಗಳಿಂದ ನಮ್ಮ ಸೈನ್ಯವು ದಗ್ಧವಾಗುತ್ತಿರುವುದನ್ನು ನಾನು ನೋಡಿದೆನು."

೧೩೦ನೆಯ ಅಧ್ಯಾಯವು ಮುಗಿಯಿತು.

೧೩೧ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಭೀಮ-ಕರ್ಣರ ಭಯಂಕರಯುದ್ಧ

ಧೃತರಾಷ್ಟ್ರನು ದುಃಖಿತನಾಗಿ ಹೇಳುತ್ತಾನೆ :

"ಸಂಜಯ! ನೀನು ಹೇಳಿದಂತೆಯೇ ಬಹಳ ಅನ್ಯಾಯವಾಗಿ ಹೋಯಿತು. ಆದರಲ್ಲಿಯೂ ವಿಶೇಷವಾಗಿ ನನ್ನಿಂದಲೇ ಹೆಚ್ಚು ಅನ್ಯಾಯವಾಯಿತು. ಇವೆಲ್ಲಕ್ಕೂ ನಾನೇ ಮೂಲಕಾರಣನು. ದುಃಖದಲ್ಲಿ ಸಿಕ್ಕಿಹಾಕಿಕೊಂಡಿರುವ ನಾನು ಈಗ ಅದನ್ನು ಮನಗಾಣುತ್ತಿದ್ದೇನೆ. ಈಗ ಸನ್ನಿಹಿತವಾಗಿರುವ ಅಪಾರಶೋಕವು ನಾನು ಮಾಡಿದ ಅನ್ಯಾಯದ ಫಲವೇ ಆಗಿದೆ. "ಏನು ನಡೆಯಿತೋ (ನಡೆಯಬೇಕಾಗಿದ್ದಿತೋ) ಅದು ನಡೆದುಹೋಯಿತು. ಅದರ ಬಗೆಗೆ ಚಿಂತಿಸುವುದು ವ್ಯರ್ಥ"–ಎಂಬ ಅಭಿಪ್ರಾಯದಿಂದಲೇ ನಾನು ಇದುವರೆಗೂ ಎಲ್ಲ ವಿಷಯಗಳಲ್ಲಿಯೂ ಉದಾಸೀನನಾಗಿಯೇ ಇದ್ದುಬಿಟ್ಟೆನು. ನಾನು ಈಗ ಏನು ಮಾಡಬೇಕೆಂಬುದನ್ನಾದರೂ ಹೇಳು ಸಂಜಯ! ನೀನು ಹೇಳಿದಂತೆಯೇ ನಾನು ಖಂಡಿತವಾಗಿಯೂ ನಡೆದುಕೊಳ್ಳುವೆನು. ನನ್ನ ಅಪರಾಧದಿಂದ ಈ ಅನೇಕ ವೀರರ ನಾಶವು ಹೇಗೆ ಸಂಭವಿಸಿತು?–ಎಂಬುದನ್ನು ಹೇಳು. ನಾನು ನನ್ನ ಮನಸ್ಸನ್ನು ಗಟ್ಟಿಮಾಡಿ ಕೊಂಡಿದ್ದೇನೆ. (ಎಂತಹುದೇ ಅಶುಭವಾರ್ತೆಯನ್ನಾದರೂ ಕೇಳಲು ನನ್ನ ಮನಸ್ಸು ಸಿದ್ಧವಾಗಿದೆ.) ಆದುದರಿಂದ ಎಲ್ಲ ವೃತ್ತಾಂತಗಳನ್ನೂ ವಿಶದ ವಾಗಿಯೇ ಹೇಳು."

"ಮಹಾರಾಜ! ಮಳೆಗರೆಯುವ ಮೋಡಗಳೋಪಾದಿಯಲ್ಲಿ ಮಹಾಪರಾಕ್ರಮಿಗಳಾದ, ಮಹಾಬಲರಾದ ಕರ್ಣ-ಭೀಮರು ಒಬ್ಬರು ಮತ್ತೊಬ್ಬರ ಮೇಲೆ ಬಾಣಗಳ ವೃಷ್ಟಿಯನ್ನೇ ಸುರಿಸಿದರು. ಸುವರ್ಣಮಯವಾದ ಮೂಲಭಾಗಗಳಿದ್ದ, ಶಿಲೆಯಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ 'ಭೀಮ' ಎಂಬ

ಹೆಸರಿನಿಂದ ಕೂಡಿದ್ದ ಬಾಣಗಳು ಜೀವವನ್ನೇ ಹರಣಮಾಡುತ್ತವೆಯೋ ಎಂಬಂತೆ ಕರ್ಣನ ಶರೀರವನ್ನು ಹೊಕ್ಕುವು. ಅದೇ ರೀತಿಯಲ್ಲಿ ರೆಕ್ಕೆಗಳನ್ನೇ ವಸ್ತ್ರರೂಪದಲ್ಲಿ ಹೊಂದಿದ್ದ ಕರ್ಣನಿಂದ ಬಿಡಲ್ಪಟ್ಟ ನೂರಾರು-ಸಾವಿರಾರು ಬಾಣಗಳು ವೀರನಾದ ಭೀಮಸೇನನನ್ನು ಮುಚ್ಚಿಬಿಟ್ಟವು. ರಣಾಂಗಣದ ಸುತ್ತಲೂ ಬೀಳುತ್ತಿದ್ದ ಅವರ ಬಾಣಗಳಿಂದ ನಿನ್ನ ಸೈನಿಕರ ನಡುವೆ ಸಮುದ್ರಕ್ಕಿಂತಲೂ ವಿಶೇಷವಾದ ಅಲ್ಲೋಲ-ಕಲ್ಲೋಲವುಂಟಾಯಿತು. ಅರಿಂದಮನೇ! ಭೀಮನ ಧನುಸ್ಸಿನಿಂದ ಹೊರಬಂದ, ಸರ್ಪಗಳಿಗೆ ಸಮಾನ ವಾದ, ಘೋರವಾದ ಬಾಣಗಳು ಚಮೂಮಧ್ಯದಲ್ಲಿ ಅನೇಕ ಸೈನಿಕರನ್ನು ಸಂಹರಿಸಿದುವು. ಚಂಡಮಾರುತದಿಂದ ಬುಡಮೇಲಾಗಿ ಬಿದ್ದ ವೃಕ್ಷಗಳೋ ಪಾದಿಯಲ್ಲಿ–ಭೀಮನ ಬಾಣಗಳಿಂದ ಹತವಾಗಿ ಬಿದ್ದಿದ್ದ ಹಲವು ಆನೆಗಳೂ, ಕುದುರೆಗಳೂ, ಪದಾತಿಗಳೂ ರಣಾಂಗಣದ ಸುತ್ತಲೂ ಹರಡಿ ಬಿದ್ದಿರುವುದು ಕಂಡುಬಂದಿತು. ಭೀಮನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ಪ್ರಹೃತರಾದ ಯೋಧರು 'ಇದೇನಿದು? (ಕರ್ಣನಿದ್ದೂ ನಮಗೆ ಭೀಮನ ಬಾಣಗಳಿಂದ ರಕ್ಷಣೆಯು ಸಿಕ್ಕುತ್ತಿಲ್ಲವಲ್ಲಾ?)' ಎಂದು ಹೇಳಿಕೊಳ್ಳುತ್ತಾ ಪಲಾಯನಮಾಡಿದರು.

ಈ ಪ್ರಕಾರವಾಗಿ ಮಹಾವೇಗಯುಕ್ತವಾದ ಕರ್ಣ-ಭೀಮರ ಬಾಣಗಳ ಸಮೂಹದಿಂದ ಸಿಂಧು-ಸೌವೀರ-ಕೌರವರ ಸೈನ್ಯಗಳು ಭಗ್ನವಾಗಿ ಹೋದುವು ಮತ್ತು ಅಲ್ಲಿಂದ ಓಡಿಸಲ್ಪಟ್ಟುವು. ಆ ಸೈನ್ಯಸಮೂಹದಲ್ಲಿ ಅನೇಕರು ಹತರಾಗಿ ಹೋಗಿದ್ದರು. ಉಳಿದಿದ್ದ ಅಶ್ವ-ರಥ-ಗಜ-ಪದಾತಿಗಳು ಭೀಮ-ಕರ್ಣರನ್ನು ಅಲ್ಲಿಯೇ ಬಿಟ್ಟು ಎಲ್ಲ ದಿಕ್ಕುಗಳಿಗೂ ಓಡಿಹೋದವು. ಓಡಿಹೋಗುತ್ತಿದ್ದಾಗ ಅವರು ಪರಸ್ಪರವಾಗಿ ಮಾತನಾಡಿಕೊಂಡರು :

**ನೂನಂ ಪಾರ್ಥಾರ್ಥಮೇವಾಸ್ಮಾನ್ಮೋಹಯನ್ತಿ ದಿವೌಕಸಃ ।**
**ಯತ್ಕರ್ಣಭೀಮಪ್ರಭವೈರ್ವಧ್ಯತೇ ನೋ ಬಲಂ ಶರೈಃ ॥೧೩॥**

"ನಿಶ್ಚಯವಾಗಿಯೂ ಕುಂತೀಕುಮಾರರ ಹಿತಕ್ಕಾಗಿಯೇ ದೇವತೆಗಳೂ ನಮ್ಮನ್ನು ಭ್ರಾಂತರನ್ನಾಗಿ ಮಾಡುತ್ತಿದ್ದಾರೆ. ಏಕೆಂದರೆ: ಕರ್ಣ-ಭೀಮರಿಬ್ಬರ ಧನುಸ್ಸುಗಳಿಂದ ಚ್ಯುತವಾದ ಬಾಣಗಳೆಲ್ಲವೂ ನಮ್ಮ ಸೈನ್ಯವನ್ನೇ ಸಂಹಾರ ಮಾಡುತ್ತಿವೆ."

ಭಯದಿಂದ ಪೀಡಿತರಾದ ನಿನ್ನ ಯೋಧರು ಹೀಗೆ ಹೇಳಿಕೊಳ್ಳುತ್ತಾ ಭೀಮ-ಕರ್ಣರ ಬಾಣಗಳು ಬೀಳುವಷ್ಟು ಪ್ರದೇಶವನ್ನು ಬಿಟ್ಟು (ದೂರದಲ್ಲಿ) ಕೇವಲ ಯುದ್ಧಪ್ರೇಕ್ಷಕರಾಗಿ ನಿಂತುಬಿಟ್ಟರು. ಮಹಾರಾಜ! ಅನಂತರ ಆ ರಣಾಂಗಣದಲ್ಲಿ ಶೂರರಿಗೆ ಹರ್ಷವರ್ಧಕವೂ, ಭೀರುಗಳಿಗೆ ಭಯ ವರ್ಧಕವೂ ಆದ ಅತ್ಯಂತಘೋರವಾದ ನದಿಯು ಪ್ರವಹಿಸತೊಡಗಿತು. ಆ ಘೋರನದಿಯು ಗಜಾಶ್ವ-ಮನುಷ್ಯರ ರಕ್ತದ ಕೋಡಿಯಿಂದಲೇ ಪ್ರಾದು ರ್ಭವಿಸಿದ್ದಿತು. ಗತಪ್ರಾಣರಾಗಿದ್ದ ಗಜಾಶ್ವ-ಮನುಷ್ಯರ ಶರೀರಗಳಿಂದ ತುಂಬಿ ಹೋಗಿದ್ದಿತು. ತೋಳುಮರಗಳು, ಪತಾಕೆಗಳು, ಆನೆ-ಕುದುರೆಗಳು, ರಥ ಗಳು, ಆಭರಣಗಳು, ಚೂರ್ಣೀಕೃತವಾಗಿದ್ದ ರಥಗಳು, ಭಗ್ನವಾಗಿ ಹೋಗಿದ್ದ ಚಕ್ರಗಳು, ಅಚ್ಚುಮರಗಳು, ಮೂಕಿಮರಗಳು, ಚಿನ್ನದಿಂದ ಪರಿಷ್ಕೃತವಾಗಿದ್ದ ದೊಡ್ಡದಾದ ಟೇಂಕಾರಶಬ್ದದಿಂದ ಕೂಡಿದ್ದ ಧನುಸ್ಸುಗಳು, ಸುವರ್ಣಮಯ ವಾದ ಮೂಲಭಾಗಗಳನ್ನು ಹೊಂದಿದ್ದ ಬಾಣಗಳು, ಕರ್ಣ-ಭೀಮರ ಧನುಸ್ಸಿನಿಂದ ನಿರ್ಮುಕ್ತವಾದ ಪೊರೆಬಿಟ್ಟ ಹಾವುಗಳಂತೆಯೇ ಇದ್ದ ಸಾವಿರಾರು ನಾರಾಚಗಳು, ಪ್ರಾಸಗಳು, ತೋಮರಗಳು, ಖಡ್ಗಗಳು, ಗಂಡು ಗೊಡಲಿಗಳು, ಸುವರ್ಣಮಯವಾದ ಗದೆಗಳು, ಮುಸಲಗಳು, ಪಟ್ಟಿಶಗಳು, ವಿಧ-ವಿಧವಾದ ಆಕಾರಗಳನ್ನು ಹೊಂದಿದ್ದ ಧ್ವಜಗಳು, ಶಕ್ತ್ಯಾಯುಧಗಳು, ಪರಿಘಗಳು, ಚಿತ್ರಿತವಾದ ಶತಘ್ನಿಗಳು–ಇವುಗಳಿಂದ ರಣಾಂಗಣವು ಬಹಳವಾಗಿ ಪ್ರಕಾಶಿಸುತ್ತಿದ್ದಿತು. ಸುವರ್ಣಮಯವಾದ ಅಂಗದಗಳಿಂದಲೂ, ಹಾರಗಳಿಂದಲೂ, ಕರ್ಣಕುಂಡಲಗಳಿಂದಲೂ, ಕಿರೀಟಗಳಿಂದಲೂ, ಬಳೆ ಗಳಿಂದಲೂ, ಉಂಗುರಗಳಿಂದಲೂ, ಚೂಡಾಮಣಿಗಳಿಂದಲೂ, ಉಷ್ಣೀಷ (ಪೇಟ) ಗಳಿಂದಲೂ, ಸುವರ್ಣಮಯವಾದ ಸೂತ್ರಗಳಿಂದಲೂ, ಕವಚ ಗಳಿಂದಲೂ, ಕೈಚೀಲಗಳಿಂದಲೂ, ಹಾರಗಳಿಂದಲೂ, ನಿಷ್ಕಗಳಿಂದಲೂ, ವಸ್ತ್ರ-ಛತ್ರಗಳಿಂದಲೂ, ಮುರಿದುಬಿದ್ದಿದ್ದ ಚಾಮರ-ವ್ಯಜನಗಳಿಂದಲೂ, ಛಿನ್ನ-ಭಿನ್ನರಾಗಿ ಬಿದ್ದಿದ್ದ ಗಜಾಶ್ವ-ಮನುಷ್ಯರಿಂದಲೂ, ರಕ್ತದಿಂದ ತೊಯ್ದು ಹೋಗಿದ್ದ ಬಾಣಗಳಿಂದಲೂ, ಭಗ್ನವಾದ ಇನ್ನೂ ಅನೇಕ ವಸ್ತುಗಳಿಂದಲೂ ವ್ಯಾಪ್ತವಾಗಿದ್ದ ರಣಾಂಗಣವು–ಗ್ರಹಗಳಿಂದ ವ್ಯಾಪ್ತವಾಗಿದ್ದ ಆಕಾಶದಂತೆಯೇ ಪ್ರಕಾಶಿಸುತ್ತಿದ್ದಿತು.

ಅತಿಮಾನುಷವಾದ ಭೀಮ-ಕರ್ಣರ ಯುದ್ಧಕ್ರಿಯೆಯು ಸಾಮಾನ್ಯರಿಂದ ಯೋಚಿಸಲು ಕೂಡ ಅಸಾಧ್ಯವೂ–ಅದ್ಭುತವೂ ಆಗಿದ್ದಿತು. ಅಂತಹ ಪರಮಾದ್ಭುತವಾದ ಕರ್ಣ-ಭೀಮರ ಯುದ್ಧವನ್ನು ನೋಡಿ ಸಿದ್ಧ-ಚಾರಣರಿಗೆ ವಿಸ್ಮಯವುಂಟಾಯಿತು. ಒಣಮರಗಳಿರುವ ಕಾಡಿನಲ್ಲಿ ಅಗ್ನಿಯ ಮುನ್ನಡೆಯು, ಗಾಳಿಯ ಸಹಾಯದಿಂದ ಬಹಳ ಭಯಂಕರವಾಗಿ ಪರಿಣಮಿಸುವಂತೆ–ಯುದ್ಧದಲ್ಲಿ ಭೀಮನೊಡನೆ ಸಹಯೋಗವನ್ನು ಹೊಂದಿದ್ದ ಕರ್ಣನ ಗಮನವು ಬಹಳ ಭಯಂಕರವಾಗಿ ಪರಿಣಮಿಸಿತು. (ವಾಯುವಿನ ಸಹಾಯ ಪಡೆದ ಅಗ್ನಿಯು ಯಾವುದನ್ನು ದಹಿಸಬಹುದು–ಎಂಬ ವಿವೇಚನೆಯೇ ಇಲ್ಲದೇ ತನ್ನ ಹಾದಿಯಲ್ಲಿ ಸಿಕ್ಕಿದುದನ್ನೆಲ್ಲವನ್ನೂ ಭಸ್ಮಮಾಡಿಬಿಡುವಂತೆ–ಭೀಮನೊಡನೇ ಯುದ್ಧಮಾಡುತ್ತಿದ್ದ ಕರ್ಣನೂ ಸಹ ತನ್ನ ಬಾಣಗಳ ಸಮೂಹಗಳಿಂದ ತನ್ನ ಕಡೆಯವರನ್ನೇ ಧ್ವಂಸಮಾಡುತ್ತಿದ್ದನು.) ಅಂಕುಶ ಪ್ರಹಾರದಿಂದ ಪ್ರೇರಿತವಾದ ಎರಡು ಆನೆಗಳು ಜೊಂಡುಹುಲ್ಲಿನ ಕಾಡನ್ನು ಧ್ವಂಸಮಾಡುವಂತೆ–ಕರ್ಣ-ಭೀಮರೇ ಮೇಘಗಳ ಸಮೂಹಕ್ಕೆ ಸಮಾನವಾಗಿದ್ದ ನಿನ್ನ ಸೈನ್ಯವನ್ನು ಸಂಪೂರ್ಣವಾಗಿ ಧ್ವಂಸಮಾಡಿಬಿಟ್ಟರು. ಅನೇಕ ಗಜಾಶ್ವ-ಪದಾತಿಸೈನಿಕರು ಹತರಾಗಿ ರಣಾಂಗಣದಲ್ಲಿ ಬಿದ್ದಿದ್ದರು. ಅನೇಕ ರಥಗಳು ಧ್ವಜಗಳ ಸಮೇತವಾಗಿ ಕೆಳಗುರುಳಿಬಿದ್ದಿದ್ದುವು.”

೧೩೮ನೆಯ ಅಧ್ಯಾಯವು ಮುಗಿಯಿತು.

೧೩೯ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಭೀಮ–ಕರ್ಣರ ಭಯಂಕರಯುದ್ಧ : ಮೊದಲು ಭೀಮನ ವಿಜಯ : ಅನಂತರ ಕರ್ಣನ ವಿಜಯ : ಅರ್ಜುನನ ಬಾಣಗಳಿಂದ ಪೀಡಿತರಾದ ಕರ್ಣಾಶ್ವತ್ಥಾಮರು ಪಲಾಯನಮಾಡಿದುದು

ಸಂಜಯನು ಕರ್ಣ-ಭೀಮರ ಯುದ್ಧವನ್ನು ಪುನಃ ವರ್ಣಿಸಲು ಉಪಕ್ರಮಿಸಿದನು :

ಮಹಾರಾಜ! ಕರ್ಣನು ಮೊದಲು ಮೂರು ಬಾಣಗಳಿಂದ ಭೀಮನನ್ನು ಪ್ರಹರಿಸಿ, ಬಳಿಕ ವಿಚಿತ್ರವಾದ ಮತ್ತು ಬಹುಸಂಖ್ಯಾತವಾದ ಬಾಣಗಳ ಮಳೆಯನ್ನೇ ಭೀಮನ ಮೇಲೆ ಸುರಿಸಿದನು. ಭೇದಿಸಲ್ಪಡುತ್ತಿರುವ ಪರ್ವತವು ಸ್ವಲ್ಪವಾದರೂ ವಿಚಲಿತವಾಗದೆ ಸುಸ್ಥಿರವಾಗಿರುವಂತೆ–ಮಹಾ

ಬಾಹುವಾದ ಭೀಮಸೇನನು ಕರ್ಣನಿಂದ ಬಹಳವಾಗಿ ಹಿಂಸಿಸಲ್ಪಟ್ಟರೂ ಸುಸ್ಥಿರನಾಗಿಯೇ ನಿಂತಿದ್ದನು. ಸ್ವಲ್ಪವಾದರೂ ವ್ಯಥೆಗೊಳ್ಳಲಿಲ್ಲ. ಕರ್ಣನ ಬಾಣಪ್ರಹಾರದಿಂದ ಕ್ರುದ್ಧನಾದ ಭೀಮಸೇನನು ಪೀತವಾಗಿಯೂ, ನಿಶಿತ ವಾಗಿಯೂ, ಎಣ್ಣೆಯಲ್ಲಿ ನೆನೆಸಲ್ಪಟ್ಟುದಾಗಿಯೂ ಇದ್ದ ಕರ್ಣೀ ಎಂಬ ಬಾಣದಿಂದ ಕರ್ಣನನ್ನು ಕಿವಿಯ ಪ್ರದೇಶದಲ್ಲಿ ಪ್ರಹರಿಸಿದನು. ಆಕಾಶದಿಂದ ಪ್ರದೀಪ್ತವಾದ ಜ್ಯೋತಿಯೊಂದು ಕೆಳಕ್ಕೆ ಬೀಳುವಂತೆ–ದೊಡ್ಡದಾಗಿಯೂ, ಮನೋಹರವಾಗಿಯೂ, ಸುವರ್ಣಮಯವಾಗಿಯೂ ಇದ್ದ ಕರ್ಣನ ಕುಂಡಲವು ಕೆಳಕ್ಕೆ ಬಿದ್ದಿತು. ಅತ್ಯಂತಕ್ರುದ್ಧನಾಗಿದ್ದರೂ ನಗುತ್ತಿರುವಂತೆಯೇ ತೋರ್ಪಡಿಸಿಕೊಳ್ಳುತ್ತಿದ್ದ ವೃಕೋದರನು ಮತ್ತೊಂದು ಭಲ್ಲದಿಂದ ಕರ್ಣನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಪುನಃ ಮಹಾಬಾಹುವಾದ ಭೀಮಸೇನನು ವೇಗಯುಕ್ತನಾಗಿ ಪೊರೆಯನ್ನು ಬಿಟ್ಟ ವಿಷಸರ್ಪಗಳಂತೆಯೇ ಇದ್ದ ಹತ್ತು ಬಾಣಗಳನ್ನು ಕರ್ಣನ ಮೇಲೆ ಪ್ರಯೋಗಿಸಿದನು. ಭೀಮಸೇನನಿಂದ ಪ್ರಮುಕ್ತವಾದ ಆ ಬಾಣಗಳು ಸರ್ಪಗಳು ಹುತ್ತವನ್ನು ಸೇರಿ ಕೊಳ್ಳುವಂತೆ–ಸೂತಪುತ್ರನ ಹಣೆಯನ್ನು ಸೀಳಿಕೊಂಡು ಒಳಸರಿದುವು. ಹಿಂದೆ ಕರ್ಣನು ಕನ್ನೈದಿಲೇ ಹೂವುಗಳ ಮಾಲೆಯನ್ನು ಧರಿಸಿ ಶೋಭಿಸು ತ್ತಿದ್ದಂತೆ–ಭೀಮನು ಬಿಟ್ಟ ಬಾಣಗಳನ್ನು ನೆತ್ತಿಯಲ್ಲಿ ಧರಿಸಿ ಆಗಲೂ ಶೋಭಿಸಿದನು.

ವೇಗಶಾಲಿಯಾದ ಭೀಮಸೇನನಿಂದ ಬಹಳವಾಗಿ ಗಾಯಗೊಂಡ ಕರ್ಣನು ರಥದ ಮೂಕಿಯನ್ನೇ ಆಶ್ರಯಿಸಿ ಕ್ಷಣಕಾಲ ಕಣ್ಣುಮುಚ್ಚಿ ಕುಳಿ ತನು. ಮುಹೂರ್ತಾನಂತರದಲ್ಲಿ (ಸ್ವಲ್ಪಹೊತ್ತಿನಲ್ಲಿಯೇ) ಪರಂತಪನಾದ ಕರ್ಣನು ಪುನಃ ಸಂಜ್ಞೆಯನ್ನು ಪಡೆದುಕೊಂಡನು. ರಕ್ತದಿಂದ ತೋಯ್ದ ಅಂಗಾಂಗಗಳಿಂದ ಕೂಡಿದ್ದ ಕರ್ಣನು ಕೋಪಾವಿಷ್ಟನಾದನು. ದೃಢಧನ್ವನಾದ ಭೀಮಸೇನನಿಂದ ಬಹಳವಾಗಿ ಪೀಡಿಸಲ್ಪಟ್ಟ ಮಹಾವೇಗಯುಕ್ತನಾದ ಕರ್ಣನು ಪರಮಕ್ರುದ್ಧನಾಗಿ ಭೀಮಸೇನನ ರಥದ ಕಡೆಗೆ ಧಾವಿಸಿದನು. (ವೇಗವಾಗಿ ಬಾಣಗಳನ್ನು ಬಿಡಲು ಆರಂಭಿಸಿದನು.) ಅಸಹನಶೀಲನಾದ, ಬಲಿಷ್ಠನಾದ, ಕೋಪಗೊಂಡಿದ್ದ ಕರ್ಣನು ರಣಹದ್ದಿನ ರೆಕ್ಕೆಗಳಿದ್ದ ನೂರು ಬಾಣಗಳನ್ನು ಭೀಮಸೇನನ ಮೇಲೆ ಪ್ರಯೋಗಿಸಿದನು. ಸಮರಾಂಗಣ

ದಲ್ಲಿ ಕರ್ಣನ ಪರಾಕ್ರಮವನ್ನು ಗಣನೆಗೇ ತಂದುಕೊಳ್ಳದೆ ಅವನ ವೀರ್ಯದ ವಿಷಯವಾಗಿ ಕಿಂಚಿತ್ತಾದರೂ ಯೋಚನೆಯನ್ನೇ ಮಾಡದಿದ್ದ ಭೀಮಸೇನನು ಕರ್ಣನ ಮೇಲೆ ಭಯಂಕರವಾದ ಬಾಣಗಳ ಮಳೆಯನ್ನೇ ಸುರಿಸಿದನು. ಪರಂತಪನೇ! ಅನಂತರ ಕ್ರುದ್ಧನಾಗಿದ್ದ ಕರ್ಣನು ಕ್ರುದ್ಧರೂಪನಾಗಿದ್ದ ಭೀಮಸೇನನನ್ನು ಒಂಬತ್ತು ಬಾಣಗಳಿಂದ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ನರಸಿಂಹರಾದ ಭೀಮ-ಕರ್ಣರಿಬ್ಬರೂ ಕೋರೆದಾಡೆಗಳಿಂದ ಕೂಡಿದ ಹುಲಿಗಳಂತೆಯೇ ಪರಸ್ಪರವಾಗಿ ಬಡಿದಾಡುತ್ತಿದ್ದರು. ಮೇಘಗಳೋಪಾದಿಯಲ್ಲಿ ಒಬ್ಬರು ಮತ್ತೊಬ್ಬರ ಮೇಲೆ ಬಾಣಗಳ ಮಳೆಯನ್ನೇ ಸುರಿಸುತ್ತಿದ್ದರು. ಅತ್ಯಂತ ಕ್ರುದ್ಧರಾಗಿದ್ದ, ಮಾಡಿದುದಕ್ಕೆ ಪ್ರತಿಮಾಡಬೇಕೆಂಬ ಇಚ್ಛೆಯುಳ್ಳವರಾಗಿದ್ದ ಭೀಮ-ಕರ್ಣರಿಬ್ಬರೂ ಚಪ್ಪಾಳೆಗಳ ಶಬ್ದದಿಂದಲೇ ಒಬ್ಬರು ಮತ್ತೊಬ್ಬರನ್ನು ಭಯಪಡಿಸುತ್ತಿದ್ದರು. ವಿಧ-ವಿಧವಾದ ಬಾಣಗಳ ಸಮೂಹಗಳಿಂದಲೂ ಪರಸ್ಪರವಾಗಿ ಭಯಗೊಳಿಸುತ್ತಿದ್ದರು. ಬಳಿಕ ಶತ್ರುವೀರಹಂತಕನಾದ, ಮಹಾಬಾಹುವಾದ ಭೀಮಸೇನನು ಕ್ಷುರಪ್ರದಿಂದ ಕರ್ಣನ ಧನುಸ್ಸನ್ನು ಕತ್ತರಿಸಿ ಗರ್ಜನೆಮಾಡಿದನು. ಮಹಾರಥನಾದ ಸೂತಪುತ್ರನು ಭೀಮನಿಂದ ಕತ್ತರಿಸಲ್ಪಟ್ಟ ಆ ಧನುಸ್ಸನ್ನು ವಿಸರ್ಜಿಸಿ ಶತ್ರುವಿನಭಾರವನ್ನು (ವೇಗವನ್ನು ) ಧ್ವಂಸಮಾಡುವ (ತಡೆಹಿಡಿಯುವ) ಮಹಾವೇಗಯುಕ್ತವಾದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡನು. ಕರ್ಣನು ಶರಾನುಸಂಧಾನಮಾಡುವುದರೊಳಗಾಗಿಯೇ ಆ ಧನುಸ್ಸನ್ನೂ ಭೀಮಸೇನನು ಕತ್ತರಿಸಿದನು. ಮೂರನೆಯ ಧನುಸ್ಸನ್ನು ಕರ್ಣನು ಕೈಗೆತ್ತಿಕೊಂಡನು. ಅದನ್ನೂ ಭೀಮನು ಕತ್ತರಿಸಿದನು. ನಾಲ್ಕನೆಯದನ್ನೂ ಕತ್ತರಿಸಿದನು. ಕರ್ಣನು ನೂತನ ಧನುಸ್ಸನ್ನು ಎಷ್ಟು ಶೀಘ್ರವಾಗಿ ಕೈಗೆತ್ತಿಕೊಳ್ಳುತ್ತಿದ್ದನೋ–ಅಷ್ಟೇ ಶೀಘ್ರವಾಗಿಯೇ ಭೀಮನು ಅದನ್ನು ಕತ್ತರಿಸಿ ಹಾಕುತ್ತಿದ್ದನು. ಐದನೆಯದಾಯಿತು ; ಆರನೆಯದಾಯಿತು ; ಏಳನೆಯದಾಯಿತು ; ಎಂಟನೆಯದಾಯಿತು. ಒಂಬತ್ತು , ಹತ್ತು, ಹನ್ನೊಂದು, ಹನ್ನೆರಡು, ಹದಿಮೂರು, ಹದಿನಾಲ್ಕು, ಹದಿನೈದು, ಹದಿನಾರನೆಯ ಧನುಸ್ಸನ್ನೂ ಸಹ ವೃಕೋದರನು (ಕಣ್ಣುರೆಪ್ಪೆಯನ್ನು ಮುಚ್ಚಿತೆಗೆಯುವಷ್ಟು ಹೊತ್ತಿನಲ್ಲಿಯೇ) ಕತ್ತರಿಸಿಹಾಕಿದನು. ಭೀಮನು ಕರ್ಣನ ಧನುಸ್ಸಿನ

ವಿಚ್ಛೇದನಕ್ರಿಯೆಯನ್ನು ಅಷ್ಟಕ್ಕೇ ನಿಲ್ಲಿಸಲಿಲ್ಲ. ಹದಿನೇಳನೆಯ ಮತ್ತು ಹದಿನೆಂಟನೆಯ ಧನುಸ್ಸುಗಳನ್ನೂ ಕತ್ತರಿಸಿದನು. ಆ ಸಂಖ್ಯೆಯು ಏರುತ್ತಲೇ ಹೋಯಿತು. ಕರ್ಣನ ಬಹುಸಂಖ್ಯಾತವಾದ ಧನುಸ್ಸುಗಳನ್ನು ಭೀಮಸೇನನು ಕತ್ತರಿಸಿಹಾಕುತ್ತಿದ್ದನು. ನಿಮೇಷಾರ್ಧದಲ್ಲಿ ಪುನಃ ಕರ್ಣನು ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ಯುದ್ಧಸನ್ನದ್ಧನಾಗುತ್ತಿದ್ದನು. ಕುರು, ಸೌವೀರ ಮತ್ತು ಸಿಂಧುವೀರರು ಅಪಾರಸಂಖ್ಯೆಯಲ್ಲಿ ವಿನಾಶ ಹೊಂದಿರುವುದನ್ನೂ, ಕೆಳಗೆ ಬಿದ್ದಿದ್ದ ಕವಚಗಳಿಂದಲೂ, ಧ್ವಜಗಳಿಂದಲೂ ಮತ್ತು ಶಸ್ತ್ರಗಳಿಂದಲೂ, ರಣಾಂಗಣವು ವ್ಯಾಪ್ತವಾಗಿರುವುದನ್ನೂ, ಆನೆ- ಕುದುರೆ ಮತ್ತು ರಥಿಕರ ನಿರ್ಜೀವದೇಹಗಳು ರಣಾಂಗಣದ ಸುತ್ತಲೂ ರಾಶಿ-ರಾಶಿಯಾಗಿ ಬಿದ್ದಿರುವುದನ್ನೂ ಕಂಡು ಕರ್ಣನ ಶರೀರವು ಕೋಪದಿಂದ ಉದ್ದೀಪ್ತವಾಯಿತು. ರಾಧೇಯನು ಸುವರ್ಣದಿಂದ ವಿಭೂಷಿತವಾಗಿದ್ದ ಮಹಾಧನುಸ್ಸನ್ನು ಟೇಂಕರಿಸುತ್ತಾ ಘೋರರೂಪನಾದ ಭೀಮಸೇನನನ್ನು ಕ್ರೂರದೃಷ್ಟಿಯಿಂದ ದಿಟ್ಟಿಸಿ ನೋಡಿದನು. ಶರತ್ಕಾಲದಲ್ಲಿ ನೆತ್ತಿಯ ಮೇಲಿರುವ ಸೂರ್ಯನು ರಶ್ಮಿಗಳನ್ನು ಪ್ರಪಂಚದ ಮೇಲೆ ಪ್ರಸರಿಸುತ್ತಾ ಪ್ರಕಾಶಮಾನವಾಗಿ ಕಾಣುವಂತೆ–ಕ್ರುದ್ಧನಾದ ಕರ್ಣನು ಸೂರ್ಯನ ರಶ್ಮಿಗ್ರಳಿಗೆ ಸಮಾನವಾದ ಬಾಣಗಳನ್ನು ಭೀಮನ ಮೇಲೆ ಪುಂಖಾನುಪುಂಖವಾಗಿ ಬಿಡುತ್ತಾ ರಣಾಂಗಣದಲ್ಲಿ ಪರಿಶೋಭಿಸಿದನು. ನೂರಾರು ಬಾಣಗಳಿಂದ ಚುಚ್ಚಲ್ಪಟ್ಟಿದ್ದ ಕರ್ಣನ ಶರೀರವು ಭಯಂಕರವಾಗಿ ಕಾಣುತ್ತಿದ್ದ ಕಿರಣಗಳಿಂದ ಪ್ರಕಾಶಮಾನವಾಗಿ ಕಾಣುವ ಸೂರ್ಯಮಂಡಲದಂತೆಯೇ ಕಾಣುತ್ತಿದ್ದಿತು. ಕರ್ಣನು ಎರಡು ಕೈಗಳಿಂದಲೂ ಬಾಣಗಳನ್ನು ಬತ್ತಳಿಕೆಯಿಂದ ತೆಗೆದುಕೊಳ್ಳುವುದರಲ್ಲಾಗಲೀ, ಆ ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನ ಮಾಡುವುದರಲ್ಲಾಗಲೀ, ಶಿಂಜಿನಿಯನ್ನು ಸುದೀರ್ಘವಾಗಿ ಸೆಳೆಯುವುದರಲ್ಲಾಗಲೀ, ಅನಂತರ ಬಾಣಗಳನ್ನು ಬಿಡುವುದರಲ್ಲಾಗಲೀ ಯಾವ ವಿಧವಾದ ಅಂತರವೂ ಕಾಣುತ್ತಿರಲಿಲ್ಲ. (ಬಾಣಗಳು ಧನುಸ್ಸಿನಿಂದ 'ಸೊಯ್' ಎಂದು ಶಬ್ದಮಾಡುತ್ತಾ ಪುಂಖಾನುಪುಂಖವಾಗಿ ಹೊರಬರುತ್ತಿದ್ದುದು ಮಾತ್ರವೇ ಕಾಣಿಸುತ್ತಿದ್ದಿತು.) ಎಡಕ್ಕೂ ಮತ್ತು ಬಲಕ್ಕೂ ಶಿಂಜಿನಿಯನ್ನು ಸೆಳೆದುಬಿಡುತ್ತಿದ್ದ, ಅಗ್ನಿಚಕ್ರಸಮಾನವಾದ ಮತ್ತು ಘೋರವಾದ ಕರ್ಣನ

ಆಯುಧವು (ಧನುಸ್ಸು) ಯಾವಾಗಲೂ ಮಂಡಲಾಕಾರದಲ್ಲಿಯೇ ಇರುತ್ತಿದ್ದಿತು. ಮಹಾರಾಜ! ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ, ಸುನಿಶಿತವಾಗಿದ್ದ, ಕರ್ಣನ ಧನುಸ್ಸಿನಿಂದ ಚ್ಯುತವಾದ ಬಾಣಗಳು ಎಲ್ಲ ದಿಕ್ಕುಗಳನ್ನೂ, ಮತ್ತು ಸೂರ್ಯನ ಪ್ರಭೆಗಳನ್ನೂ ಮುಚ್ಚಿಬಿಟ್ಟುವು. (ಸೂರ್ಯನ ಪ್ರಭೆಗಳು ಭೂಮಿಯ ಮೇಲೆ ಬೀಳದಂತೆ ಕರ್ಣನ ಬಾಣಗಳು ಎಲ್ಲ ದಿಕ್ಕುಗಳಲ್ಲಿಯೂ ಆವರಿಸಿಕೊಂಡುವು.) ಕರ್ಣನ ಧನುಸ್ಸಿನಿಂದ ಚ್ಯುತವಾದ ಸುವರ್ಣಮಯವಾದ ಮೂಲಭಾಗಗಳಿದ್ದ, ಬಗ್ಗಿದ ಗಿಣ್ಣುಗಳಿದ್ದ ಬಾಣಗಳ ಸಮೂಹಗಳು ಆಕಾಶದಲ್ಲಿ ಅಪಾರಸಂಖ್ಯೆಯಲ್ಲಿ ಕಾಣಿಸಿಕೊಂಡುವು. ಅಧಿರಥನ ಮಗನಾದ ಕರ್ಣನ ಧನುಸ್ಸಿನಿಂದ ಬಾಣಗಳು ಸಾಲುಗಟ್ಟಿ ಹೊರಬರುತ್ತಿದ್ದು–ಆಕಾಶದಲ್ಲಿ ಸಾಲುಗಟ್ಟಿ ಹಾರಿಹೋಗುತ್ತಿರುವ ಕ್ರೌಂಚಪಕ್ಷಿಗಳಂತೆಯೇ–ಪ್ರಕಾಶಮಾನವಾಗಿ ಕಾಣುತ್ತಿದ್ದುವು. ಕರ್ಣನು ರಣಹದ್ದುಗಳ ರೆಕ್ಕೆಗಳನ್ನು ಹೊಂದಿದ್ದ, ಮಸೆಗಲ್ಲಿನಿಂದ ಶುಭ್ರವಾಗಿ ಮಾಡಲ್ಪಟ್ಟಿದ್ದ, ಸುವರ್ಣಭೂಷಿತವಾಗಿದ್ದ, ಮಹಾವೇಗಯುಕ್ತವಾಗಿದ್ದ, ಪ್ರದೀಪ್ತವಾದ ಅಗ್ರಭಾಗಗಳನ್ನು ಹೊಂದಿದ್ದ ಬಾಣಗಳನ್ನು ಅಪಾರ ಸಂಖ್ಯೆಯಲ್ಲಿ ಬಿಡುತ್ತಿದ್ದನು. ಧನುಸ್ಸಿನ ಬಲದಿಂದ ಹೊರಚಿಮ್ಮಿದ್ದ ಸುವರ್ಣಭೂಷಿತವಾದ ಬಾಣಗಳು, ಸತತವಾಗಿ ಭೀಮನ ರಥದ ಕಡೆಗೆ ಹೋಗಿ ಬೀಳುತ್ತಿದ್ದುವು. ಸುವರ್ಣದಿಂದ ಚಿತ್ರಿತವಾಗಿ ಮಾಡಲ್ಪಟ್ಟಿದ್ದ ಕರ್ಣನಿಂದ ಪ್ರಮುಕ್ತವಾದ ಸಾವಿರಾರು ಬಾಣಗಳು ಮಿಂಚಿನ ಹುಳುಗಳ ಸಮೂಹಗಳಂತೆ–ಆಕಾಶದಲ್ಲಿ ಪ್ರಕಾಶಿಸಿದುವು. ಅಧಿರಥನ ಮಗನಾದ ಕರ್ಣನ ಧನುಸ್ಸಿನಿಂದ ಚ್ಯುತವಾದ ಬಾಣಗಳು ಒಂದಕ್ಕೊಂದು ಅಂಟಿ ಕೊಂಡಂತೆಯೇ ಹೊರಬರುತ್ತಿದ್ದುವು. ಅದನ್ನು ನೋಡಿದರೆ ಅತ್ಯಂತ ಉದ್ದವಾದ ಒಂದೇ ಬಾಣವು ಆಕಾಶದಲ್ಲಿ ನಿಂತಿರುವುದೋ–ಎಂಬಂತೆ ಪ್ರಕಾಶಿಸುತ್ತಿದ್ದಿತು. ಮೇಘವು ಮಳೆಯ ಧಾರೆಗಳಿಂದ ಪರ್ವತವನ್ನು ಮುಚ್ಚಿ ಬಿಡುವಂತೆ–ಕ್ರುದ್ಧನಾದ ಕರ್ಣನು ಭೀಮಸೇನನನ್ನು ಬಾಣಗಳ ವೃಷ್ಟಿಯಿಂದ ಮುಚ್ಚಿಬಿಟ್ಟನು.

ಆ ಸಮಯದಲ್ಲಿ ನಿನ್ನ ಮಕ್ಕಳು ಸೈನ್ಯಸಮೇತರಾಗಿ ಭೀಮಸೇನನ ಬಲವನ್ನೂ, ವೀರ್ಯವನ್ನೂ, ಪರಾಕ್ರಮವನ್ನೂ ಮತ್ತು ಅವನ ವ್ಯವಸಾಯ

ವನ್ನೂ ನೋಡಿದರು. ಸಮುದ್ರವು ಉಕ್ಕಿಬರುವಂತೆ ತಂಡ-ತಂಡವಾಗಿ ಬರುತ್ತಿದ್ದ ಬಾಣಗಳ ವೃಷ್ಟಿಯನ್ನು ಸ್ವಲ್ಪವಾದರೂ ಗಣನೆಗೇ ತೆಗೆದುಕೊಳ್ಳದೇ ಅಚಲನಾಗಿದ್ದ ಕ್ರುದ್ಧನಾದ ಭೀಮನು ಕರ್ಣನನ್ನು ಬಾಣಗಳ ಮೂಲಕವಾಗಿಯೇ ಎದುರಿಸಿದನು. ಮಹಾರಾಜ! ಭೀಮನ ಧನುಸ್ಸು ಸುವರ್ಣಮಯವಾಗಿದ್ದಿತು. ಎಡೆಬಿಡದೇ ಎಳೆಯುತ್ತಿದ್ದುದರಿಂದ ಅದು ಮಂಡಲಾಕಾರವಾಗಿಯೇ ಇದ್ದಿತು. ಭೀಮನ ಆ ಧನುಸ್ಸು ಇಂದ್ರನ ಧನುಸ್ಸಿನಂತೆಯೇ ಇದ್ದಿತು. ಅಂತಹ ಅನುಪಮವಾದ ಧನುಸ್ಸಿನಿಂದ ಅಂತರಿಕ್ಷವನ್ನೇ ಮುಚ್ಚಿಬಿಡುವುದೋ ಎಂಬ ರೀತಿಯಲ್ಲಿ ಪುಂಖಾನುಪುಂಖವಾಗಿ ಬಾಣಗಳು ಹೊರಬರುತ್ತಿದ್ದುವು. ಸುವರ್ಣಮಯವಾದ ಮೂಲಭಾಗಗಳಿದ್ದ, ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ಬಾಣಗಳಿಂದ ಅಂತರಿಕ್ಷದಲ್ಲಿ ಸುವರ್ಣಮಯವಾದ ಮಾಲೆಯನ್ನು ರಚಿಸಿರುವನೋ ಎಂಬಂತೆ ಭೀಮನು ಬಿಟ್ಟ ಬಾಣಗಳ ಪಙ್ಕ್ತಿಗಳು ಕಂಗೊಳಿಸಿದುವು. ಅಷ್ಟುಹೊತ್ತಿನವರೆಗೂ ಆಕಾಶದಲ್ಲಿ ನಿಬಿಡವಾಗಿ ತುಂಬಿಹೋಗಿದ್ದ ಕರ್ಣನ ಬಾಣಸಮೂಹಗಳು ಭೀಮಸೇನನ ಬಾಣಗಳಿಂದ ಛಿನ್ನ-ಭಿನ್ನವಾಗಿ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಚೆಲ್ಲಾಪಿಲ್ಲಿಯಾಗಿ ಬಿದ್ದುವು. ಕರ್ಣ ಮತ್ತು ಭೀಮಸೇನರ ವೇಗಗತಿಗಳಿಂದ ಕೂಡಿದ್ದ, ಸಂಸ್ಪರ್ಶಮಾತ್ರದಿಂದಲೇ ಬೆಂಕಿಯ ಕಿಡಿಗಳನ್ನು ಸುರಿಸುತ್ತಿದ್ದ, ಸುವರ್ಣಮಯವಾದ ಮೂಲಭಾಗಗಳನ್ನು ಹೊಂದಿದ್ದ ಬಾಣಗಳ ಸಮೂಹಗಳಿಂದ ಆಕಾಶವೇ ವ್ಯಾಪ್ತವಾಗಿದ್ದಿತು. ಆ ಸಮಯದಲ್ಲಿ ಸೂರ್ಯನ ಪ್ರಕಾಶವೂ ಭೂಮಿಗೆ ಬೀಳುತ್ತಿರಲಿಲ್ಲ. ವಾಯುಸಂಚಾರವೂ ಸಹ ಸ್ತಬ್ಧವಾಗಿಹೋಗಿದ್ದಿತು. ಬಾಣಗಳ ಸಮೂಹದಿಂದ ವ್ಯಾಪ್ತವಾದ ಆಕಾಶದಲ್ಲಿ ಯಾವುದೊಂದೂ ಗೋಚರಿಸುತ್ತಿರಲಿಲ್ಲ. (ಬಾಣಗಳ ಸಮೂಹಗಳು ಆಕಾಶವನ್ನು ಆವರಿಸಿದ್ದುದರಿಂದ ಸೂರ್ಯನ ಬೆಳಕು ಭೂಮಿಯ ಮೇಲೆ ಬೀಳದೆ ಗಾಢಾಂಧಕಾರವು ಕವಿದು 'ಎಲ್ಲಿ ಏನು ನಡೆಯುತ್ತಿದೆ?' ಎಂಬುದೇ ತಿಳಿಯುತ್ತಿರಲಿಲ್ಲ.) ಸೂತಪುತ್ರನಾದ ಕರ್ಣನು ಮಹಾತ್ಮನಾದ ಭೀಮಸೇನನ ಪರಾಕ್ರಮವನ್ನು ತಿರಸ್ಕಾರದ ದೃಷ್ಟಿಯಿಂದಲೇ ನೋಡುತ್ತಾ ನಾನಾವಿಧವಾದ ಬಾಣಗಳಿಂದ ಭೀಮಸೇನನನ್ನು ಮುಚ್ಚುತ್ತಾ ಅವನಮೇಲೆ ದಾಳಿಮಾಡಿದನು. ಕರ್ಣ-ಭೀಮರಿಂದ ಪ್ರಮುಕ್ತವಾದ ಬಾಣಗಳ ಸಮೂಹಗಳು ಒಂದಕ್ಕೊಂದು ಸೇರಿ

ಕೊಂಡು ಚಂಡಮಾರುತದಿಂದ ಹಾರಿಸಲ್ಪಡುತ್ತಿವೆಯೋ ಎಂಬಂತೆ ಕಾಣು ತ್ತಿದ್ದುವು. ಆ ಮನುಜಶ್ರೇಷ್ಠರು ಅನ್ಯೋನ್ಯವಾಗಿ ಬಿಡುತ್ತಿದ್ದ ಬಾಣಗಳ ಪರಸ್ಪರಸಂಘರ್ಷಣೆಯಿಂದಾಗಿ ಆಕಾಶದಲ್ಲಿ ಬೆಂಕಿಯು ಹುಟ್ಟಿಕೊಂಡಿತು. ಕ್ರುದ್ಧನಾದ ಕರ್ಣನು ಭೀಮಸೇನನನ್ನು ವಧಿಸುವ ಇಚ್ಛೆಯಿಂದ ಕರ್ಮಾರರಿಂದ ಸಾಣೆಹಿಡಿಯಲ್ಪಟ್ಟಿದ್ದ, ಸುವರ್ಣಮಯವಾಗಿದ್ದ ನಿಶಿತವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು. ಭೀಮಸೇನನು ತನ್ನ ಕೈಚಳಕದಿಂದ ಸೂತಪುತ್ರನನ್ನೂ ಅತಿಶಯಿಸುತ್ತಾ, ತೀಕ್ಷ್ಣವಾದ ಬಾಣಗಳಿಂದ ಕರ್ಣನು ಬಿಡುತ್ತಿದ್ದ ಪ್ರತಿಯೊಂದು ಬಾಣವನ್ನೂ ಮೂರು-ಮೂರು ಚೂರುಗಳಾಗಿ ಕತ್ತರಿಸಿ, 'ನಿಲ್ಲು-ನಿಲ್ಲೆಂದು' ಕೂಗುತ್ತಾ ಗರ್ಜನೆಮಾಡಿದನು. ಅಸಹನಶೀಲನಾದ, ಬಲಿಷ್ಠನಾದ, ಕೋಪಗೊಂಡಿದ್ದ ಭೀಮಸೇನನು–ದಹಿಸುವ ಇಚ್ಛೆಯುಳ್ಳ ಅಗ್ನಿಯೋಪಾದಿಯಲ್ಲಿ–ಕರ್ಣನ ಮೇಲೆ ಉಗ್ರವಾದ ಬಾಣಗಳ ಮಳೆಗರೆದನು. ಅವರ ಧನುಸ್ಸುಗಳ ಹೆದೆಯಏಟುಗಳು ತೋಳು ಗಳಿಗೆ ಬಿಗಿದಿದ್ದ ಚರ್ಮದ ಪಟ್ಟಿಗಳಿಗೆ ತಗುಲುತ್ತಿದ್ದು ಚಟ-ಚಟಾ ಶಬ್ದಗಳು ಅವ್ಯಾಹತವಾಗಿ ಕೇಳಿಬರುತ್ತಿದ್ದುವು.

ಭೀಮ-ಕರ್ಣರ ಚಪ್ಪಾಳೆಗಳ ಶಬ್ದಗಳೂ ಸಿಂಹನಾದಗಳೂ ಭಯಂಕರ ವಾಗಿ ಕೇಳಿಸುತ್ತಿದ್ದುವು. ರಥಗಳ ಗಡ-ಗಡಾ ಶಬ್ದಗಳೂ ಭಯಂಕರವಾದ ಟೇಂಕಾರ ಶಬ್ದಗಳೂ ಅನವರತವಾಗಿ ಕೇಳಿಬರುತ್ತಿದ್ದುವು. ಒಬ್ಬರು ಮತ್ತೊಬ್ಬರನ್ನು ಕೊಲ್ಲಲಿಚ್ಛಿಸಿ ರೋಷಾವೇಷದಿಂದ ಯುದ್ಧಮಾಡುತ್ತಿದ್ದ ಕರ್ಣ-ಭೀಮರ ಪರಾಕ್ರಮವನ್ನು ವೀಕ್ಷಿಸುತ್ತಿದ್ದ ಯೋಧರು ಸ್ವಲ್ಪಕಾಲದ ವರೆಗೆ ಯುದ್ಧದಿಂದ ವಿರತರಾಗಿದ್ದರು. ದೇವರ್ಷಿ-ಸಿದ್ಧ-ಗಂಧರ್ವರೂ ಮತ್ತು ವಿದ್ಯಾಧರರೂ ಅಭೂತಪೂರ್ವವಾದ ಆ ಯುದ್ಧವನ್ನು ನೋಡಿ "ಸಾಧು-ಸಾಧು" ಎಂದು ಹೇಳುತ್ತಾ ಇಬ್ಬರು ವೀರರನ್ನೂ ಪ್ರಶಂಸೆಮಾಡಿ ಅವರ ಮೇಲೆ ಪುಷ್ಪವೃಷ್ಟಿಯನ್ನು ಕರೆದರು. ಮಹಾಕೋಪಿಷ್ಠನಾದ, ದೃಢವಿಕ್ರಮ ನಾದ, ಮಹಾಬಾಹುವಾದ ಭೀಮಸೇನನು ಕರ್ಣನು ಬಿಟ್ಟ ಅಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದಲೇ ನಿರಸ್ತಗೊಳಿಸಿ ಪುನಃ ಕರ್ಣನನ್ನು ನಿಶಿತವಾದ ಬಾಣ ಗಳಿಂದ ಪ್ರಹರಿಸಿದನು. ಮಹಾಬಲನಾದ ಕರ್ಣನೂ ಸಹ ಭೀಮಸೇನನ ಬಾಣಗಳನ್ನು ಪ್ರತಿಬಾಣಗಳಿಂದ ನಿಷ್ಫಲಗೊಳಿಸಿ ಸರ್ಪಕ್ಕೆ ಸಮಾನವಾಗಿದ್ದ

ಒಂಬತ್ತು ಬಾಣಗಳನ್ನು ಭೀಮಸೇನನ ಮೇಲೆ ಬಿಟ್ಟನು. ಸೂತಪುತ್ರನು ಬಿಟ್ಟ ಒಂಬತ್ತು ಬಾಣಗಳನ್ನು ಅಷ್ಟೇ ಸಂಖ್ಯೆಯ ಬಾಣಗಳಿಂದ ಆಕಾಶ ದಲ್ಲಿಯೇ ಕತ್ತರಿಸಿದ ಭೀಮಸೇನನು ನಿಲ್ಲು-ನಿಲ್ಲೆಂದೂ ಗರ್ಜಿಸಿದನು. ಅನಂತರ ಮಹಾಬಾಹುವಾದ ಭೀಮನು ಕೋಪಗೊಂಡ ಅಂತಕನಿಗೆ ಮತ್ತು ಮತ್ತೊಂದು ಯಮದಂಡಕ್ಕೆ ಸಮಾನವಾಗಿದ್ದ ಬಾಣವನ್ನು ಕರ್ಣನ ಮೇಲೆ ಪ್ರಯೋಗಿಸಿದನು. ಪ್ರತಾಪವಂತನಾದ ಕರ್ಣನು ತನ್ನ ಕಡೆಗೆ ರಭಸದಿಂದ ಬರುತ್ತಿದ್ದ ಪಾಂಡವನ ಬಾಣವನ್ನು ನಗು-ನಗುತ್ತಲೇ ಮೂರು ಬಾಣಗಳಿಂದ ಕತ್ತರಿಸಿದನು. ಪುನಃ ಪಾಂಡವನು ಅತ್ಯುಗ್ರವಾದ ಬಾಣಗಳ ಮಳೆಯನ್ನೇ ಕರ್ಣನ ಮೇಲೆ ಸುರಿಸಿದನು. ಆದರೆ ಕರ್ಣನು ಸ್ವಲ್ಪವಾದರೂ ಭಯಗೊಳ್ಳ ದವನಂತೆ ಆ ಎಲ್ಲ ಬಾಣಗಳನ್ನೂ (ಬಾಣಗಳ ಪ್ರಹಾರವನ್ನೂ) ತಡೆದು ಕೊಂಡನು. ಹೀಗೆಯೇ ಭೀಮನು ಅತ್ಯಂತಪರಾಕ್ರಮದಿಂದ ಯುದ್ಧ ಮಾಡುತ್ತಿದ್ದಾಗ ಕರ್ಣನು ಅಸ್ತ್ರಗಳ ಮಾಯೆಯಿಂದ (ಅಸ್ತ್ರವಿದ್ಯೆಯಲ್ಲಿ ತನಗಿದ್ದ ವಿಶೇಷ ಪ್ರಾವೀಣ್ಯದಿಂದ) ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಭೀಮನ ಬತ್ತಳಿಕೆಗಳನ್ನೂ, ಧನುಸ್ಸಿನ ಶಿಂಜಿನಿಯನ್ನೂ, ಧನುಸ್ಸನ್ನೂ, ಹಗ್ಗ ಗಳನ್ನೂ, ಕುದುರೆಗಳ ಕಡಿವಾಣಗಳನ್ನೂ ಕತ್ತರಿಸಿದನು. ಪುನಃ ಐದು ಬಾಣ ಗಳಿಂದ ಭೀಮಸೇನನ ಕುದುರೆಗಳನ್ನು ಸಂಹರಿಸಿ ಸಾರಥಿಯನ್ನೂ ಗಾಯ ಗೊಳಿಸಿದನು. ಒಡನೆಯೇ ಸಾರಥಿಯು ರಥದಿಂದಿಳಿದು ಬಹಳ ಶೀಘ್ರವಾಗಿ ಯುಧಾಮನ್ಯುವಿನ ರಥದಲ್ಲಿ ಕುಳಿತನು. ಕ್ರುದ್ಧನಾಗಿದ್ದ ಪ್ರಳಯಾಗ್ನಿಯಂತೆ ಪ್ರಜ್ವಲಿಸುತ್ತಿದ್ದ ಕರ್ಣನು ಭೀಮಸೇನನನ್ನು ನೋಡಿ ಹಾಸ್ಯಮಾಡುತ್ತಾ ರಥದ ಧ್ವಜವನ್ನು ಕತ್ತರಿಸಿದನು. ಪತಾಕೆಯನ್ನೂ ಬಾಣಗಳಿಂದ ಕತ್ತರಿಸಿ ಕೆಳಕ್ಕೆ ಬೀಳಿಸಿದನು. ಅನಂತರ ಧನುಸ್ಸಿನಿಂದ ವಿಹೀನನಾಗಿದ್ದ ಮಹಾ ಬಾಹುವಾದ ಭೀಮಸೇನನು ಶಕ್ತ್ಯಾಯುಧವನ್ನು ಬೀಸಿ ಕರ್ಣನ ರಥದ ಕಡೆಗೆ ಪ್ರಯೋಗಿಸಿದನು. ಆ ಸಮಯದಲ್ಲಿ ಸ್ವಲ್ಪ ಆಯಾಸಗೊಂಡಿದ್ದ ಕರ್ಣನು ತನ್ನ ಮೇಲೆ ಬೀಳಲಿದ್ದ, ಸುವರ್ಣಭೂಷಿತವಾಗಿದ್ದ, ದೊಡ್ಡದಾದ ಉಲ್ಕೆಯಂತೆಯೇ ಪ್ರಕಾಶಮಾನವಾಗಿದ್ದ, ಭೀಮನು ಬಿಟ್ಟ ಶಕ್ತ್ಯಾಯುಧ ವನ್ನು ಹತ್ತು ಬಾಣಗಳಿಂದ ಕತ್ತರಿಸಿದನು. ಮಿತ್ರನಾದ ದುರ್ಯೋಧನನ ಸಲುವಾಗಿ ಅವನ ಶತ್ರುವಾದ ಭೀಮನ ಮೇಲೆ ಬಾಣಗಳನ್ನು ಬಿಡುತ್ತಾ,

ವಿಚಿತ್ರರೀತಿಯಲ್ಲಿ ಯುದ್ಧಮಾಡುತ್ತಿದ್ದ ಸೂತಪುತ್ರನ ನಿಶಿತವಾದ ಬಾಣಗಳಿಂದ ಭೀಮನ ಶಕ್ತ್ಯಾಯುಧವು ಹತ್ತುಕಡೆಗಳಲ್ಲಿ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದಿತು. ಆ ಸಮಯದಲ್ಲಿ ಭೀಮಸೇನನು ಯುದ್ಧದಲ್ಲಿ ಮೃತ್ಯು ಅಥವಾ ವಿಜಯ ಇವೆರಡರಲ್ಲಿ ಯಾವುದಾದರೂ ಒಂದನ್ನು ಶೀಘ್ರವಾಗಿ ಪಡೆದುಕೊಳ್ಳಬೇಕೆಂದು ಇಚ್ಛಿಸಿ ಸುವರ್ಣಭೂಷಿತವಾದ ಖಡ್ಗವನ್ನೂ-ಗುರಾಣಿಯನ್ನೂ ಕೈಗೆತ್ತಿಕೊಂಡನು. ಅದನ್ನು ನೋಡಿದ ಕರ್ಣನು ಕ್ರುದ್ಧನಾಗಿ ಅಟ್ಟಹಾಸದಿಂದ ನಗುತ್ತಾ ಒಳ್ಳೆಯ ಪ್ರಭೆಯಿಂದ ಕೂಡಿದ್ದ ಭೀಮನ ಗುರಾಣಿಯನ್ನು ಉಗ್ರವಾದ ಅನೇಕ ಬಾಣಗಳಿಂದ ಧ್ವಂಸಮಾಡಿದನು. ಗುರಾಣಿಯಿಂದಲೂ, ರಥದಿಂದಲೂ ವಿಹೀನನಾಗಿದ್ದ ಭೀಮಸೇನನು ಕ್ರೋಧಮೂರ್ಛಿತನಾಗಿ ತನ್ನ ಕೈಲಿದ್ದ ಕತ್ತಿಯನ್ನೇ ರಭಸದಿಂದ ತಿರುಗಿಸಿ ಕರ್ಣನ ರಥದ ಕಡೆಗೆ ಬೀಸಿದನು. ಭೀಮನು ಎಸೆದ ಆ ಮಹಾಖಡ್ಗವು ಮೌರ್ವಿಯಿಂದ ಯುಕ್ತವಾಗಿದ್ದ ಸೂತಪುತ್ರನ ಧನುಸ್ಸನ್ನು ಕತ್ತರಿಸಿ–ಕೋಪಗೊಂಡ ಸರ್ಪವು ಆಕಾಶದಿಂದ ಕೆಳಕ್ಕೆ ಬೀಳುವಂತೆ ಭೂಮಿಯ ಮೇಲೆ ಬಿದ್ದಿತು. ಕ್ರುದ್ಧನಾದ ಕರ್ಣನು ಅಟ್ಟಹಾಸದಿಂದ ನಗುತ್ತಾ ಶತ್ರುಹಂತಕವಾದ, ದೃಢವಾದ ಮೌರ್ವಿಯಿಂದ ಯುಕ್ತವಾಗಿದ್ದ, ವೇಗಯುಕ್ತವಾಗಿದ್ದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ಕುಂತೀಪುತ್ರನನ್ನು ಸಂಹರಿಸುವ ಆಶಯದಿಂದ ಸುವರ್ಣಮಯವಾದ ಮೂಲಭಾಗಗಳಿಂದ ಕೂಡಿದ್ದ, ನಿಶಿತವಾಗಿ ಮಾಡಲ್ಪಟ್ಟಿದ್ದ ಸಾವಿರಾರು ಬಾಣಗಳನ್ನು ಭೀಮಸೇನನ ಮೇಲೆ ಸುರಿಸಿದನು.

(ಕರ್ಣನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ಬಹಳವಾಗಿ ಗಾಯಗೊಂಡ ಭೀಮಸೇನನು ಕರ್ಣನ ಮನಸ್ಸಿನಲ್ಲಿ ವ್ಯಥೆಯನ್ನುಂಟುಮಾಡುತ್ತಾ ಆಕಾಶಕ್ಕೆ ಹಾರಿಬಿಟ್ಟನು. ಯುದ್ಧದಲ್ಲಿ ವಿಜಯವನ್ನು ಗಳಿಸಲು ಇಚ್ಛಿಸಿದ್ದ ಭೀಮಸೇನನ ಆ ಕಾರ್ಯವನ್ನು ನೋಡಿ ಕರ್ಣನು ಶರೀರವನ್ನು ಸಂಕುಚಿಸಿಕೊಂಡು ಭೀಮಸೇನನನ್ನು ವಂಚಿಸಿದನು. ರಥದ ಹಿಂಭಾಗದಲ್ಲಿ ಅಡಗಿಕೊಂಡಿದ್ದ, ವ್ಯಥಿತಮನಸ್ಕನಾಗಿದ್ದ ಕರ್ಣನನ್ನು ನೋಡಿದ ಭೀಮಸೇನನು ಅವನ ರಥದ ಧ್ವಜಸ್ತಂಭವನ್ನು ಹಿಡಿದು ಭೂಮಿಯ ಮೇಲೆ ನಿಂತನು. ಗರುಡನು ಹಾವನ್ನು ಎತ್ತಿಕೊಂಡು ಹೋಗುವ ರೀತಿಯಲ್ಲಿ–ಭೀಮಸೇನನು ಕರ್ಣನನ್ನು ರಥದಿಂದ ಎತ್ತಿಕೊಂಡು ಹೋಗಲು ಇಚ್ಛಿಸಿ

ಅದಕ್ಕಾಗಿ ಹವಣಿಸುತ್ತಿದ್ದುದನ್ನು ನೋಡಿ ಎಲ್ಲ ಕುರುಗಳೂ ಮತ್ತು ಚಾರಣರೂ ಬಹಳವಾಗಿ ಪ್ರಶಂಸಿಸಿದರು. "ಧನುಸ್ಸು ಕತ್ತರಿಸಿಹೋಗಿದ್ದರೂ, ರಥಹೀನನಾಗಿದ್ದರೂ ಭೀಮಸೇನನು ತನ್ನ ರಥವನ್ನು ಹಿಂದೆ ಬಿಟ್ಟು ತನ್ನ ಧರ್ಮವನ್ನು ಪಾಲನೆಮಾಡುತ್ತಾ ಕರ್ಣನೊಡನೆ ಯುದ್ಧಮಾಡುವ



ಸಲುವಾಗಿಯೇ ಕರ್ಣನ ರಥದ ಬಳಿಯಲ್ಲಿ ನಿಂತಿದ್ದಾನೆ" ಎಂಬುದಾಗಿ ಅವರೆಲ್ಲರೂ ಪರಸ್ಪರವಾಗಿ ಹೇಳಿಕೊಳ್ಳುತ್ತಿದ್ದರು.

ಮಹಾರಾಜ! ರಾಧೇಯನು ಭೀಮಸೇನನ ರಥಾಶ್ವಗಳನ್ನು ಧ್ವಂಸ ಮಾಡಿದನು. ಆದರೂ ಸಹ ಕ್ರೋಧಪರವಶನಾಗಿ ತನ್ನೊಡನೆ ಯುದ್ಧ ಮಾಡಲು ತನ್ನ ಸಮೀಪಕ್ಕೇ ಆಗಮಿಸಿದ್ದ ಭೀಮಸೇನನ ಮೇಲೆ ಕರ್ಣನು ದಾಳಿಯನ್ನುಪಕ್ರಮಿಸಿದನು. ಅವರಿಬ್ಬರೂ ಮಹಾಬಲಿಷ್ಠರಾಗಿದ್ದರು. ಪರಾ

ಕ್ರಮದಲ್ಲಿ ಒಬ್ಬರು ಮತ್ತೊಬ್ಬರನ್ನು ಸ್ಪರ್ಧಿಸುತ್ತಿದ್ದರು. ಆ ಇಬ್ಬರು ನರ ಶ್ರೇಷ್ಠರೂ ಯುದ್ಧದಲ್ಲಿ ಸಮ್ಮಿಳಿತರಾಗಿ ವರ್ಷಾಕಾಲದ ಮೇಘಗಳೋಪಾದಿ ಯಲ್ಲಿ ಆರ್ಭಟಿಸುತ್ತಾ ಗರ್ಜನೆಮಾಡುತ್ತಿದ್ದರು. ಕ್ರುದ್ಧರಾಗಿದ್ದ ಅಸಹನ ಶೀಲರಾಗಿದ್ದ ನರಶ್ರೇಷ್ಠರಿಬ್ಬರ ನಡುವೆ ದೇವತೆಗಳಿಗೂ–ದಾನವರಿಗೂ ನಡೆದ ಯುದ್ಧದಂತೆಯೇ ಮಹಾಯುದ್ಧವು ಪ್ರಾರಂಭವಾಯಿತು.

ಕರ್ಣನ ದಾಳಿಗೊಳಗಾಗಿದ್ದ ಭೀಮಸೇನನು ಅಸ್ತ್ರಗಳಿಂದ ವಿಹೀನ



ನಾಗಿದ್ದನು. (ಅದಕ್ಕೂ ಮೊದಲು ಅರ್ಜುನನು ಅದೇ ಸ್ಥಳದಲ್ಲಿ ಪರ್ವತೋ ಪಮವಾದ ಅನೇಕ ಆನೆಗಳನ್ನು ಸಂಹರಿಸಿದ್ದನು. ಅವುಗಳು ಅಲ್ಲಿಯೇ ಬಿದ್ದಿದ್ದುವು. ಕರ್ಣನು ಅಸ್ತ್ರಗಳ ಮೂಲಕ ನಿರಾಯುಧನಾದ ಭೀಮಸೇನನ ಮೇಲೆ ದಾಳಿ ನಡೆಸುತ್ತಿದ್ದಾಗ ಅವನು ಮುಂದೆ ಬರದಂತೆ ಮಾಡಲು)

ಭೀಮಸೇನನು ಸತ್ತುಬಿದ್ದಿದ್ದ ಆ ಆನೆಗಳ ಮಧ್ಯದಲ್ಲಿ ಪ್ರವೇಶಿಸಿದನು. ರಥ ಸಂಚಾರಕ್ಕೆ ಬಹಳ ದುರ್ಗಮವಾಗಿದ್ದ, ಸತ್ತುಬಿದ್ದಿದ್ದ ಆನೆಗಳ ಸಮೂಹ ದೊಳಗೆ ಪ್ರವೇಶಿಸಿದ ಭೀಮಸೇನನು ತನ್ನನ್ನು ರಕ್ಷಿಸಿಕೊಳ್ಳುವ ಆಶಯದಿಂದ ಕರ್ಣನನ್ನು ಒಡನೆಯೇ ಪ್ರಹರಿಸಲು ಹೋಗಲಿಲ್ಲ. ಪರಪುರಂಜಯನಾದ ಭೀಮಸೇನನು ಕರ್ಣನನ್ನು ಎದುರಿಸಲು ಆಯಕಟ್ಟಿನ ಸ್ಥಳದಲ್ಲಿ ನಿಲ್ಲಬೇಕೆಂಬ ಆಶಯದಿಂದ ಸತ್ತುಹೋಗಿದ್ದ ಆನೆಗಳಿಂದ ನಿಬಿಡವಾಗಿದ್ದ ಸ್ಥಳದಲ್ಲಿ ನಿಂತು ಅರ್ಜುನನ ಬಾಣಗಳಿಂದ ಹತವಾಗಿದ್ದ ಆನೆಯೊಂದರ ಶರೀರವನ್ನು ಮೇಲೆತ್ತಿದನು. ಆ ಸಮಯದಲ್ಲವನು–ಮಹೌಷಧಿಗಳಿಂದ ಯುಕ್ತವಾದ ಸಂಜೀವಿನೀಪರ್ವತವನ್ನೆತ್ತಿದ್ದ ಹನುಮಂತನಂತೆಯೇ ಕಾಣುತ್ತಿದ್ದನು. ಕರ್ಣನು, ಭೀಮಸೇನನು ಮೇಲೆತ್ತಿದ್ದ ಆನೆಯ ಶರೀರವನ್ನು ಬಾಣಗಳಿಂದ ತುಂಡು-ತುಂಡುಗಳಾಗಿ ಕತ್ತರಿಸಿಬಿಟ್ಟನು. ಮರುಕ್ಷಣದಲ್ಲಿಯೇ ಭೀಮಸೇನನು ಮತ್ತೊಂದು ಸತ್ತ ಆನೆಯನ್ನೆತ್ತಿ ಕರ್ಣನ ಕಡೆಗೆ ರಭಸದಿಂದೆಸೆದನು. ಅನಂತರ ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟು ರಣಾಂಗಣದಲ್ಲಿ ಬಿದ್ದಿದ್ದ ಆನೆಯ ಸೊಂಡಿಲುಗಳು, ಕಾಲುಗಳು, ದಂತಗಳು ಇವುಗಳನ್ನೇ ಎತ್ತಿ ಕರ್ಣನಕಡೆಗೆ ರಭಸದಿಂದೆಸೆಯುತ್ತಿದ್ದನು. ಇಷ್ಟು ಮಾತ್ರವಲ್ಲ, ಯಾವುದು ಆ ಸಮಯದಲ್ಲಿ ಕೈಗೆ ಸಿಕ್ಕಿತೋ ಯಾವುದನ್ನು ಭೀಮಸೇನನು ಕಂಡನೋ ಅವುಗಳೆಲ್ಲವನ್ನೂ ಕರ್ಣನ ರಥದ ಕಡೆಗೆ ಎಸೆಯುತ್ತಿದ್ದನು. ರಥದ ಗಾಲಿಗಳು, ಅಚ್ಚಿನ ಮರಗಳು, ಮೂಕಿಗಳು ಎಲ್ಲವನ್ನೂ ಕರ್ಣನ ರಥದ ಕಡೆಗೆ ಒಗೆಯುತ್ತಿದ್ದನು. ಕರ್ಣನು ಆ ಎಲ್ಲವನ್ನೂ ಅಷ್ಟೇ ವೇಗದಿಂದ ನಿಶಿತವಾದ ಬಾಣಗಳಿಂದ ಕತ್ತರಿಸಿಹಾಕುತ್ತಿದ್ದನು.

(ಕಟ್ಟಕಡೆಯದಾಗಿ ಭೀಮಸೇನನು ವಜ್ರಾಯುಧಕ್ಕೆ ಸಮಾನವಾದ, ಸುದಾರುಣವಾದ ಮುಷ್ಟಿಯಿಂದಲೇ ಸೂತಪುತ್ರನನ್ನು ಜಜ್ಜಿ ಸಾಯಿಸಿಬಿಡ ಬೇಕೆಂದು ನಿಶ್ಚಯಿಸಿದನು. ಮುಷ್ಟಿಯಿಂದಲೇ ಕರ್ಣನನ್ನು ಗುದ್ದಿ ಸಂಹರಿಸಲು ಶಕ್ತನಾಗಿದ್ದರೂ ಹಿಂದೆ ಅರ್ಜುನನು ಮಾಡಿದ್ದ ಪ್ರತಿಜ್ಞೆಯನ್ನು ಮರುಕ್ಷಣದಲ್ಲಿಯೇ ಸ್ಮರಿಸಿಕೊಂಡು ಅವನ ಪ್ರತಿಜ್ಞೆಯನ್ನು ರಕ್ಷಣೆಮಾಡುವ ಸಲುವಾಗಿ ಭೀಮಸೇನನು ಕರ್ಣನನ್ನು ಮುಷ್ಟಿಯಿಂದ ಸಂಹರಿಸಲಿಲ್ಲ.)

ಆ ಸಮಯದಲ್ಲಿ ಭೀಮಸೇನನು ನಿರಾಯುಧನಾಗಿದ್ದುದರಿಂದ ಕರ್ಣನು

ಅನುಸ್ಯೂತನಾಗಿ ಬಿಡುತ್ತಿದ್ದ ಬಾಣಗಳ ಪ್ರಹಾರವನ್ನು ಸಹಿಸಿಕೊಳ್ಳಬೇಕಾಗಿದ್ದಿತು. ಕರ್ಣನು ಹೀಗೆ ಅತ್ಯಂತವ್ಯಾಕುಲನಾಗಿದ್ದ ಭೀಮಸೇನನನ್ನು ಪುನಃ ಪುನಃ ನಿಶಿತವಾದ ಬಾಣಗಳಿಂದ ಪ್ರಹರಿಸಿ ಮೂರ್ಛೆಗೊಳಿಸಿದನು. ಭೀಮನು ಮೂರ್ಛಿತನಾದನಂತರ ಕರ್ಣನು ಅವನನ್ನು ಪುನಃ ಪ್ರಹರಿಸಲಿಲ್ಲ.

**ವ್ಯಾಯುಧಂ ನಾವಧೀಚ್ಚೈನಂ ಕರ್ಣಃ ಕುನ್ತ್ಯಾವಚಃ ಸ್ಮರನ್ ।**

ಕುಂತಿಯ ಮಾತನ್ನು ಸ್ಮರಿಸಿದ ಕರ್ಣನು ನಿರಾಯುಧನಾಗಿದ್ದ, ಜ್ಞಾನ ತಪ್ಪಿ ಬಿದ್ದಿದ್ದ ಭೀಮಸೇನನನ್ನು ವಧೆಮಾಡಲಿಲ್ಲ.

**ಧನುಷೋಽಗ್ರೇಣ ತಂ ಕರ್ಣಃ ಸೋಽಭಿದ್ರುತ್ಯ ಪರಾಮೃಶತ್ ॥೯೨॥**

ಅವನ ಹತ್ತಿರಕ್ಕೆ ಓಡಿಹೋದ ಕರ್ಣನು ತನ್ನ ಧನುಸ್ಸಿನ ತುದಿಯಿಂದ ಅವನನ್ನು ಸ್ಪರ್ಶಿಸಿದನು (ತಿವಿದನು).

ಧನುಸ್ಸಿನ ಸ್ಪರ್ಶಮಾತ್ರದಿಂದ ಪರಮಕ್ರುದ್ಧನಾದ ಭೀಮಸೇನನು ಸರ್ಪವು ಬುಸುಗುಟ್ಟುವಂತೆ–ಸುದೀರ್ಘವಾದ ನಿಟ್ಟುಸಿರುಬಿಡುತ್ತಾ, ಕರ್ಣನ ಧನುಸ್ಸನ್ನೇ ಅವನ ಕೈಯಿಂದ ಹಾರಿಸಿಕೊಂಡು ಆ ಧನುಸ್ಸಿನಿಂದಲೇ ಅವನ ತಲೆಗೆ ಪೆಟ್ಟುಕೊಟ್ಟನು. ತನ್ನ ಧನುಸ್ಸಿನಿಂದಲೇ ಭೀಮಸೇನನಿಂದ ನೆತ್ತಿಯಲ್ಲಿ ಪ್ರಹೃತನಾದ ಕರ್ಣನು ಕೋಪಗೊಂಡು ಕೆಂಗಣ್ಣನಾಗಿ ಗಹ-ಗಹಿಸಿ ನಗುತ್ತಾ ಭೀಮಸೇನನನ್ನು ಕುರಿತು ಈ ಮಾತುಗಳನ್ನು ಹೇಳಿದನು :

**ಪುನಃ ಪುನಸ್ತೂಬರಕ ಮೂಢ ಔದರೀಕೇತಿ ಚ ।**
**ಅಕೃತಾಸ್ತ್ರಕ ಮಾ ಯೋತ್ಸೀರ್ಬಾಲ ಸಂಗ್ರಾಮಕಾತರ ॥೯೫॥**

“ಪುರುಷರಿಗಿರಬೇಕಾದ ಗಡ್ಡ-ಮೀಸೆಗಳಿಲ್ಲದ ನಪುಂಸಕನೇ! ಮೂಢನೇ! ಹೊಟ್ಟೆಬಾಕನೇ! ಅಸ್ತ್ರವಿದ್ಯಾಶೂನ್ಯನೇ! ಯುದ್ಧಭೀರುವೇ! ಬಾಲಸ್ವಭಾವದವನೇ! ನಿನಗೇಕೆ ಯುದ್ಧ? ಪುನಃ-ಪುನಃ ಹೀಗೆ ನೀನು ಯುದ್ಧಮಾಡಲು ಬರಬೇಡ.

**ಯತ್ರ ಭೋಜ್ಯಂ ಬಹುವಿಧಂ ಭಕ್ಷ್ಯಂ ಪೇಯಂ ಚ ಪಾಣ್ಡವ ।**
**ತತ್ರ ತ್ವಂ ದುರ್ಮತೇ ಯೋಗ್ಯೋ ನ ಯುದ್ಧೇಷು ಕದಾಚನ ॥೯೬॥**

ಆದರೆ ನಿನಗೆ ಎಲ್ಲಿಯೂ ಸ್ಥಾನವಿಲ್ಲವೆಂದಲ್ಲ. ಎಲ್ಲಿ ಯಥೇಚ್ಛವಾಗಿ ತಿನ್ನಲು, ಕುಡಿಯಲು, ಅಗಿಯಲು, ಚಪ್ಪರಿಸಲು ಸಿಕ್ಕುವುದೋ ಅಲ್ಲಿರಲು

ನೀನು ಯೋಗ್ಯನಾಗಿರುವೆ. ಆದರೆ ದುರ್ಮತಿಯೇ! ಯುದ್ಧಗಳಲ್ಲಿ ಭಾಗ ವಹಿಸಲು ಮಾತ್ರ ನೀನು ಖಂಡಿತವಾಗಿಯೂ ಯೋಗ್ಯನಲ್ಲ.

**ಮೂಲಪುಷ್ಪಫಲಾಹಾರೋ ವ್ರತೇಷು ನಿಯಮೇಷು ಚ ।**
**ಉಚಿತಸ್ತ್ವಂ ವನೇ ಭೀಮ ನ ತ್ವಂ ಯುದ್ಧವಿಶಾರದಃ ॥೯೭॥**

ಯಥೇಚ್ಛವಾದ ಆಹಾರವು ಸಿಕ್ಕುವ ಸ್ಥಳವಾವುದೂ ಸಿಗದಿದ್ದರೆ ಗೆಡ್ಡೆ-ಗೆಣಸುಗಳು, ಫಲ-ಪುಷ್ಪಗಳು ಇವುಗಳನ್ನೇ ಆಹಾರವನ್ನಾಗಿ ಸೇವಿಸುತ್ತಾ, ವ್ರತ-ನಿಯಮಾನುಷ್ಠಾನಗಳನ್ನು ಮಾಡುತ್ತಾ, ಅರಣ್ಯದಲ್ಲಿರಲು ನೀನು ಯೋಗ್ಯನು. ಅದು ಹೊರತಾಗಿ ನೀನು ಯುದ್ಧವಿಶಾರದನಲ್ಲದೇ ಇರುವುದ ರಿಂದ ಯುದ್ಧಮಾಡಲು ಯೋಗ್ಯನಾಗಿಲ್ಲ.

**ಕ್ವ ಯುದ್ಧಂ ಕ್ವ ಮುನಿತ್ವಂ ಚ ವನಂ ಗಚ್ಛ ವೃಕೋದರ ।**
**ನ ತ್ವಂ ಯುದ್ಧೋಚಿತಸ್ತಾತ ವನವಾಸರತಿರ್ಭವಾನ್ ॥೯೮॥**

ಮಗು! ವೀರಯೋಗ್ಯವಾದ ಯುದ್ಧವೆಲ್ಲಿ? ಮುನಿತ್ವವೆಲ್ಲಿ? ಒಂದಕ್ಕೊಂದು ಸಂಬಂಧವೇ ಇಲ್ಲ. ನೀನು ಅರಣ್ಯವಾಸದಲ್ಲಿಯೇ ಹೆಚ್ಚು ಅಭಿರುಚಿಯುಳ್ಳವನಾಗಿರುವುದರಿಂದ ಅರಣ್ಯಕ್ಕೇ ಹೊರಟುಹೋಗು. ಖಂಡಿತವಾಗಿಯೂ ನೀನು ಯುದ್ಧಕ್ಕೆ ಯೋಗ್ಯನಲ್ಲ.

**ಸೂದಾನ್ಭೃತ್ಯಜನಾನ್ದಾಸಾಂಸ್ತ್ವಂ ಗೃಹೇ ತ್ವರಯನ್ಭೃಶಮ್ ।**
**ಯೋಗ್ಯಸ್ತಾಡಯಿತುಂ ಕ್ರೋಧಾದ್ಭೋಜನಾರ್ಥಂ ವೃಕೋದರ ॥೯೯॥**

ಆದರೆ, ವೃಕೋದರ! ನೀನು ಯಾರನ್ನೂ ಪ್ರಹರಿಸಲಾರೆಯೆಂದೂ ನಾನು ಹೇಳುವುದಿಲ್ಲ. ಭೋಜನಾರ್ಥವಾಗಿ ಅಡಿಗೆಯು ಸಮಯಕ್ಕೆ ಸರಿ ಯಾಗಿ ಸಿದ್ಧವಾಗದಿದ್ದರೆ–ಅಡಿಗೆಯವರನ್ನೂ, ಸೇವಕರನ್ನೂ ಅಡಿಗೆಮನೆ ಯಲ್ಲಿ ಅವಸರಪಡಿಸುವೆ. ಆಗಲೂ ಅವರು ನಿನಗೆ ಬೇಕಾದ ಭಕ್ಷ್ಯ-ಭೋಜ್ಯ ಗಳನ್ನು ಸಮಯಕ್ಕೆ ಸರಿಯಾಗಿ ಒದಗಿಸದಿದ್ದರೆ ಕುಪಿತನಾಗುವ ನೀನು ಅವರನ್ನು ಥಳಿಸಲು ಶಕ್ತನಾಗಿರುವೆ ಮತ್ತು ಯೋಗ್ಯನೂ ಆಗಿರುವೆ.

**ಮುನಿರ್ಭೂತ್ವಾಥವಾ ಭೀಮ ಫಲಾನ್ಯಾದತ್ಸ್ವ ದುರ್ಮತೇ ।**
**ವನಾಯ ವ್ರಜ ಕೌನ್ತೇಯ ನ ತ್ವಂ ಯುದ್ಧವಿಶಾರದಃ ॥೧೦೦॥**

ಕೌಂತೇಯ! ನಿನಗೆ ಯುದ್ಧವೆಂದರೇನೆಂಬುದೇ ತಿಳಿಯದು. ನೀನು ಮುನಿಯಾಗಲು ಯೋಗ್ಯನಾಗಿರುವೆ. ಮತಿಗೆಟ್ಟವನೇ! ನೀನು ಮುನಿಯಾಗಿ

ಅರಣ್ಯಕ್ಕಾದರೂ ಹೋಗು. ಅಲ್ಲಿ ಸಿಕ್ಕುವ ಫಲಗಳನ್ನಾದರೂ ತಿಂದುಕೊಂಡು ಜೀವಿಸಿರು.

**ಫಲಮೂಲಾಶನೇ ಶಕ್ತಸ್ತ್ವಂ ತಥಾತಿಥಿಪೂಜನೇ ।**
**ನ ತ್ವಾಂ ಶಸ್ತ್ರಸಮುದ್ಯೋಗೇ ಯೋಗ್ಯಂ ಮನ್ಯೇ ವೃಕೋದರ ॥೧೦೧॥**

ವೃಕೋದರ! ನೀನು ಅರಣ್ಯದಲ್ಲಿರುವ ಕಂದ-ಮೂಲ-ಫಲಗಳನ್ನು ಯಥೇಚ್ಛವಾಗಿ ತಿನ್ನಬಲ್ಲೆ. ಅದೇ ರೀತಿಯಲ್ಲಿ ಅದೇ ಕಂದ-ಮೂಲ-ಫಲ ಗಳಿಂದ ಅತಿಥಿಸತ್ಕಾರವನ್ನೂ ಮಾಡಬಲ್ಲೆ. ಆದರೆ ಶಸ್ತ್ರಗಳನ್ನೆತ್ತಿ ಯುದ್ಧ ಮಾಡುವುದರಲ್ಲಿ ನಿನಗೆ ಪರಿಶ್ರಮವು ಸಾಲದು. ವೀರೋಚಿತವಾದ ಶಸ್ತ್ರಯುದ್ಧಕ್ಕೆ ನೀನು ಯೋಗ್ಯನೇ ಅಲ್ಲವೆಂಬುದು ನನ್ನ ಭಾವನೆಯಾಗಿದೆ.”

ಧೃತರಾಷ್ಟ್ರಮಹಾರಾಜ! ಕರ್ಣನು ಇಷ್ಟು ಮಾತ್ರವೇ ಹೇಳಿ ಸುಮ್ಮನಾಗಲಿಲ್ಲ. ಹಿಂದೆ ಪಾಂಡವರ ಬಾಲ್ಯಾವಸ್ಥೆಯಲ್ಲಿ ಯಾವ-ಯಾವ ಅಪ್ರಿಯವಾದ ವ್ಯವಹಾರಗಳು ನಡೆದಿದ್ದುವೋ ಅವುಗಳೆಲ್ಲವನ್ನೂ ಕರ್ಣನು ಎತ್ತಿಯಾಡುತ್ತಾ ಅತ್ಯಂತನಿಷ್ಠುರವಾದ ಮಾತುಗಳನ್ನು ಭೀಮನ ಮುಂದೆ ಹೇಳಿದನು. ಶರೀರವನ್ನು ಸಂಕುಚಿಸಿಕೊಂಡು ಕುಳಿತಿದ್ದ ಭೀಮಸೇನನನ್ನು ಕರ್ಣನು ಪುನಃ ಧನುಸ್ಸಿನಿಂದ ತಿವಿದನು. ಗಟ್ಟಿಯಾಗಿ ನಗುತ್ತಾ ಭೀಮಸೇನನೊಡನೆ ಪುನಃ ಕರ್ಣಕಠೋರವಾದ ಈ ಮಾತುಗಳನ್ನು ಹೇಳಿದನು:

**ಯೋದ್ಧವ್ಯಂ ಮಾರಿಷಾನ್ಯತ್ರ ನ ಯೋದ್ಧವ್ಯಂ ಚ ಮಾದೃಶೈಃ ।**
**ಮಾದೃಶೈರ್ಯುಧ್ಯಮಾನಾನಾಮೇತಚ್ಚಾನ್ಯಚ್ಚ ವಿದ್ಯತೇ ॥೧೦೪॥**

“ಆರ್ಯ! ನೀನು ಬೇರೆಯ ಕಡೆಗೆ ಹೋಗಿ ಅಲ್ಪವೀರ್ಯರೊಡನೆ ಯುದ್ಧಮಾಡುವುದು ಯೋಗ್ಯವಾಗಿದೆ. ನನ್ನಂತಹ ಪರಾಕ್ರಮಿಯೊಡನೆ ನಿನ್ನಂತಹ ಅಲ್ಪವೀರ್ಯನಾದವನು ಯುದ್ಧಮಾಡಲು ಬರಬಾರದು. ನನ್ನೊಡನೆ ಯುದ್ಧಮಾಡಲು ಬರುವವರಿಗೆ–ನಿನಗೆ ಈಗ ಆಗಿರುವ

ಅವಸ್ಥೆಯೇ ಉಂಟಾಗುತ್ತದೆ. ಇದಕ್ಕಿಂತಲೂ ಹೆಚ್ಚಿನ ದುರವಸ್ಥೆಯೂ ಉಂಟಾಗಬಹುದು (ಮರಣವೇ ಸಂಭವಿಸಬಹುದು).

**ಗಚ್ಛ ವಾ ಯತ್ರ ತೌ ಕೃಷ್ಣೌ ತೌ ತ್ವಾಂ ರಕ್ಷಿಷ್ಯತೋ ರಣೇ ।**
**ಗೃಹಂ ವಾ ಗಚ್ಛ ಕೌನ್ತೇಯ ಕಿಂ ತೇ ಯುದ್ಧೇನ ಬಾಲಕ ॥೧೦೫॥**

ಕೌಂತೇಯ! ಇದುವರೆಗೆ ನಾನು ಹೇಳಿದುದು ನಿನಗೆ ಹಿಡಿಸದಿದ್ದರೆ ಕೃಷ್ಣಾರ್ಜುನರು ಇರುವ ಸ್ಥಳಕ್ಕಾದರೂ ಹೊರಟುಹೋಗು. ಅವರು ನಿನ್ನನ್ನು ರಕ್ಷಿಸುತ್ತಾರೆ. ಅದೂ ಇಷ್ಟವಿಲ್ಲದಿದ್ದರೆ ಮನೆಗಾದರೂ ಹೊರಟು ಹೋಗು. ಬಾಲಬುದ್ಧಿಯವನೇ! ಯುದ್ಧದಿಂದ ನಿನಗೇನು ಪ್ರಯೋಜನವಿದೆ?"

ಮಹಾರಾಜ! ಕರ್ಣನು ಹೇಳಿದ ಅತಿದಾರುಣವಾದ ಮಾತುಗಳನ್ನು ಭೀಮಸೇನನು ಕೇಳಿ ಗಹ-ಗಹಿಸಿ ನಗುತ್ತಾ ಎಲ್ಲರೂ ಕೇಳುವಂತೆಯೇ ಕರ್ಣನೊಡನೆ ಈ ಮಾತುಗಳನ್ನು ಹೇಳಿದನು :

**ಜಿತಸ್ತ್ವಮಸಕೃದ್ದುಷ್ಟ ಕತ್ಥಸೇ ಕಿಂ ವೃಥಾತ್ಮನಾ ।**
**ಜಯಾಜಯೌ ಮಹೇನ್ದ್ರಸ್ಯ ಲೋಕೇ ದೃಷ್ಟೌ ಪುರಾತನೈಃ ॥೧೦೭॥**

"ದುಷ್ಟ! ಹೀಗೇಕೆ ಬಡಾಯಿಕೊಚ್ಚುತ್ತಿರುವೆ? ನಾನು ನಿನ್ನನ್ನು ಒಂದು ಬಾರಿಯಲ್ಲ ; ಹಲವು ಬಾರಿ ಪರಾಜಯಗೊಳಿಸಿದ್ದೇನೆ. (ಒಂದು ಬಾರಿ ನಿನ್ನ ಕೈ ಮೇಲಾದುದಕ್ಕೆ ಅಧಿಕಪ್ರಸಂಗವನ್ನು ತೋರಿಸುತ್ತಿರುವೆ ಯಲ್ಲವೇ!) ಮಹೇಂದ್ರನಿಗೂ ಕೂಡ ಜಯ ಮತ್ತು ಅಪಜಯ–ಎರಡೂ ಆಗುತ್ತಿದ್ದುದನ್ನು ಹಿಂದಿನವರನೇಕರು ಕೇಳಿದ್ದಾರೆ ಮತ್ತು ಕಂಡಿದ್ದಾರೆ.

**ಮಲ್ಲಯುದ್ಧಂ ಮಯಾ ಸಾರ್ಧಂ ಕುರು ದುಷ್ಕುಲಸಮ್ಭವ ।**
**ಮಹಾಬಲೋ ಮಹಾಭೋಗೀ ಕೀಚಕೋ ನಿಹತೋ ಯಥಾ ।**
**ತಥಾ ತ್ವಾಂ ಘಾತಯಿಷ್ಯಾಮಿ ಪಶ್ಯತ್ಸು ಸರ್ವರಾಜಸು ॥೧೦೮॥**

ದುಷ್ಕುಲಸಂಭೂತನೇ! ನಿನಗೇನಾದರೂ ಪರಾಕ್ರಮವಿರುವುದಾದರೆ ನನ್ನೊಡನೆ ಮಲ್ಲಯುದ್ಧಮಾಡು. ಮಹಾಬಲಿಷ್ಠನಾದ, ಮಹಾಭೋಗಿ

ಯಾದ ಕೀಚಕನನ್ನು ಸಂಹಾರಮಾಡಿದಂತೆಯೇ ನಿನ್ನನ್ನೂ ಸಹ ಈ ಎಲ್ಲ ರಾಜರೂ ನೋಡುತ್ತಿರುವಂತೆಯೇ ಸಂಹರಿಸುತ್ತೇನೆ.”

ಮಹಾರಾಜ! ಭೀಮಸೇನನ ಆಂತರ್ಯವನ್ನು ತಿಳಿದುಕೊಂಡನಂತರ ಬುದ್ಧಿವಂತರಲ್ಲಿ ಶ್ರೇಷ್ಠನಾದ ಕರ್ಣನು ಎಲ್ಲ ಧನುಷ್ಮಂತರೂ ನೋಡುತ್ತಿದ್ದಂತೆಯೇ ಯುದ್ಧದಿಂದ ವಿರಮಿಸಿದನು.

[ಮಹಾರಾಜ! ಹಿಂದೆ ನಾನು ಹೇಳಿದಂತೆ ಕರ್ಣನು ಭೀಮಸೇನನನ್ನು ರಥಹೀನನನ್ನಾಗಿ ಮಾಡಿ ಮನಬಂದಂತೆ ಅವನನ್ನು ತೆಗಳಿದ್ದನು. ವೃಷ್ಣಿಸಿಂಹನಾದ ಶ್ರೀಕೃಷ್ಣನ ಮತ್ತು ಮಹಾತ್ಮನಾದ ಪಾರ್ಥನ ಎದುರಿನಲ್ಲಿಯೇ ಭೀಮನನ್ನು ಕುರಿತು ಕರ್ಣಕಠೋರವಾದ, ನಿಂದ್ಯವಾದ ಮಾತುಗಳನ್ನಾಡಿದನು. ಆ ಮಾತುಗಳು ಕೇಶವನಿಗಾಗಲೀ ಅರ್ಜುನನಿಗಾಗಲೀ ಸಹ್ಯವಾಗಲಿಲ್ಲ. ಶ್ರೀಕೃಷ್ಣನ ಪ್ರೇರಣೆಯಂತೆ ಕಪಿಧ್ವಜನಾದ ಅರ್ಜುನನು ಮಸೆಗಲ್ಲಿನಿಂದ ಶುದ್ಧವಾಗಿ ಮಾಡಲ್ಪಟ್ಟಿದ್ದ ನಿಶಿತವಾದ ಬಾಣಗಳನ್ನು ಸೂತನ ಮಗನಾದ ಕರ್ಣನ ಮೇಲೆ ಪ್ರಯೋಗಿಸಿದನು. ಪಾರ್ಥನ ಭುಜಗಳಿಂದ ಸೆಳೆದು ಬಿಡಲ್ಪಟ್ಟ, ಸುವರ್ಣಭೂಷಿತವಾದ, ಗಾಂಡೀವಧನುಸ್ಸಿನಿಂದ ಹುಟ್ಟಿದ ಬಾಣಗಳು–ಹಂಸಗಳು ಕ್ರೌಂಚಪರ್ವತವನ್ನು ಪ್ರವೇಶಿಸುವಂತೆ–ಕರ್ಣನ ಶರೀರವನ್ನು ಪ್ರವೇಶಿಸಿದುವು. ಧನಂಜಯನು ಗಾಂಢೀವಧನುಸ್ಸಿನ ಮೂಲಕವಾಗಿ ಕಳುಹಿಸಲ್ಪಟ್ಟ ಸರ್ಪೋಪಮಗಳಾದ ಬಾಣಗಳಿಂದ ಸೂತಪುತ್ರನನ್ನು ಭೀಮಸೇನನಿಂದ ಬಹಳ ದೂರಕ್ಕೆ ಸರಿಯುವಂತೆ ಮಾಡಿದನು. ಅದಕ್ಕೂ ಮೊದಲೇ ಭೀಮಸೇನನಿಂದಲೇ ಧನುಸ್ಸನ್ನು ಕಳೆದುಕೊಂಡಿದ್ದ ಕರ್ಣನು ಧನಂಜಯನ ಬಾಣಗಳಿಂದಲೂ ಗಾಯಗೊಂಡವನಾಗಿ ಭೀಮಸೇನನನ್ನು ಅಲ್ಲಿಯೇ ಬಿಟ್ಟು ದೊಡ್ಡದಾಗಿದ್ದ ತನ್ನ ರಥದಲ್ಲಿ ಕುಳಿತು ಬಹಳ ಶೀಘ್ರವಾಗಿ ಹೊರಟು ಹೋದನು.

ನರಶ್ರೇಷ್ಠನಾದ ಭೀಮಸೇನನಾದರೋ ಸಾತ್ಯಕಿಯ ರಥವನ್ನು ಆರೋಹಣಮಾಡಿ ತಮ್ಮನಾದ ಸವ್ಯಸಾಚಿಯನ್ನು ಅನುಸರಿಸಿ ಹೊರಟು ಹೋದನು. ಅನಂತರ ಧನಂಜಯನು ಕೋಪದಿಂದ ರಕ್ತಾಕ್ಷನಾಗಿ–ಯಮರಾಜನು ಪ್ರಾಣಿಗಳ ಪ್ರಾಣಾಪಹಾರಕ್ಕಾಗಿ ಮೃತ್ಯುವನ್ನು ಕಳುಹಿಸುವಂತೆ–

ಕರ್ಣನನ್ನು ಲಕ್ಷೀಕರಿಸಿ ಮೃತ್ಯುರೂಪವಾದ–ಬಾಣವನ್ನು ಅತ್ಯಂತತ್ವರೆಯಿಂದ ಪ್ರಯೋಗಿಸಿದನು. ಆಕಾಶದಲ್ಲಿ ಹಾರಾಡುತ್ತಿರುವ ಗರುಡಪಕ್ಷಿಯು ಶ್ರೇಷ್ಠವಾದ ಸರ್ಪವನ್ನು ಹುಡುಕಿಕೊಂಡು ಹೋಗುವಂತೆ–ಗಾಂಡೀವ ಧನುಸ್ಸಿನಿಂದ ಮುಕ್ತವಾದ ಆ ನಾರಾಚವು ಕರ್ಣನ ಕಡೆಗೆ ವೇಗದಿಂದ ಧಾವಿಸಿತು. ಮಹಾರಥನಾದ ಅಶ್ವತ್ಥಾಮನು ಅರ್ಜುನನ ಭಯದಿಂದ ಕರ್ಣನನ್ನು ಉದ್ಧಾರಮಾಡುವ ಇಚ್ಛೆಯಿಂದ ಕರ್ಣನ ಕಡೆಗೆ ವೇಗದಿಂದ ಹೋಗುತ್ತಿದ್ದ ನಾರಾಚವನ್ನು ಒಂದು ಬಾಣದಿಂದ ಕತ್ತರಿಸಿದನು. ಅದರಿಂದ ಕುಪಿತನಾದ ಅರ್ಜುನನು ಅರುವತ್ತುನಾಲ್ಕು ಬಾಣಗಳಿಂದ ಅಶ್ವತ್ಥಾಮನನ್ನು ಪ್ರಹರಿಸಿ "ಓಡಿಹೋಗಬೇಡ, ಅಶ್ವತ್ಥಾಮ! ಅಲ್ಲಿಯೇ ನಿಲ್ಲು" ಎಂದು ಗರ್ಜಿಸಿ ಹೇಳಿದನು. ಧನಂಜಯನ ಬಾಣಗಳಿಂದ ಪೀಡಿತನಾದ ಅಶ್ವತ್ಥಾಮನು ರಥಗಳಿಂದಲೂ, ಮದಿಸಿದ ಆನೆಗಳ ಸಮೂಹಗಳಿಂದಲೂ ಸಮೃದ್ಧವಾಗಿದ್ದ ಸೈನ್ಯದೊಳಗೆ ನುಸುಳಿಕೊಂಡನು. ಸುವರ್ಣಮಯವಾದ ಹಿಂಭಾಗವನ್ನು ಹೊಂದಿದ್ದ, ಪ್ರತಿಕ್ಷಣದಲ್ಲಿಯೂ ಟೇಂಕರಿಸುತ್ತಿದ್ದ ಶತ್ರುಯೋಧರ ಧನುಸ್ಸುಗಳ ಶಬ್ದವನ್ನು ಕೌಂತೇಯನು ತನ್ನ ಒಂದೇ ಒಂದು ಗಾಂಡೀವ ಧನುಸ್ಸಿನ ಠೇಂಕಾರ ಶಬ್ದದಿಂದ ಅತಿಶಯಿಸಿದನು. (ಗಾಂಡೀವ ಧನುಸ್ಸಿನ ಠೇಂಕಾರಶಬ್ದವು ಮಾತ್ರವೇ ಎಲ್ಲೆಡೆಗಳಲ್ಲಿಯೂ ಕೇಳುತ್ತಿದ್ದಿತು.) ಅರ್ಜುನನು ಹಾದಿಯಲ್ಲಿ ಸಿಕ್ಕಿದ ಕೌರವಯೋಧರನ್ನು ಬಾಣಗಳ ಪ್ರಯೋಗದಿಂದ ಭಯಗೊಳಿಸುತ್ತಾ ಸೈನ್ಯದ ಮಧ್ಯದಲ್ಲಿ ನುಸುಳಿಕೊಂಡ ಅಶ್ವತ್ಥಾಮನನ್ನು ಸ್ವಲ್ಪ ದೂರದವರೆಗೆ ಹಿಂಬಾಲಿಸಿದನು. ರಣಹದ್ದುಗಳ ರೆಕ್ಕೆಗಳನ್ನೇ ವಸ್ತ್ರಗಳನ್ನಾಗಿ ಹೊಂದಿದ್ದ ಬಾಣಗಳಿಂದ ಗಜಾಶ್ವ-ಪದಾತಿಗಳ ದೇಹಗಳನ್ನು ಸೀಳಿಹಾಕುತ್ತಾ ಕೌರವ ಸೈನ್ಯವನ್ನು ವಿಧ್ವಂಸಗೊಳಿಸಿದನು. ಭರತಶ್ರೇಷ್ಠನೇ! ಆ ಸಮಯದಲ್ಲಿ ಇಂದ್ರನ ಮಗನಾದ ಪಾರ್ಥನು ಅಶ್ವ-ಗಜ-ಪದಾತಿಗಳಿಂದ ಕೂಡಿದ್ದ ಆ ಮಹಾಸೈನ್ಯವನ್ನು ಪ್ರಯತ್ನ ಪೂರ್ವಕವಾಗಿ ಧ್ವಂಸಮಾಡಿದನು.]"

ಗಿ೩೯ನೆಯ ಅಧ್ಯಾಯವು ಮುಗಿಯಿತು.

---

ಈ ಅಧ್ಯಾಯದಲ್ಲಿ [ ] ಕಂಸದಲ್ಲಿ ಹಾಕಿರುವಷ್ಟು ಪಾಠವು ಹೆಚ್ಚು ಪಾಠವೆಂದು ಭಾವಿಸಲಾಗಿದೆ. ಅಷ್ಟು ಭಾಗವನ್ನು ಬಿಟ್ಟು ಓದುವುದರಿಂದ ಯಾವ ಲೋಪವೂ

೧೪೦ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯು ಅಲಂಬುಷನನ್ನೂ ಮತ್ತು ದುಃಶಾಸನನ ಕುದುರೆಗಳನ್ನೂ ಸಂಹರಿಸಿದುದು

ಧೃತರಾಷ್ಟ್ರನು ಖಿನ್ನವಾಗಿ ಹೇಳುತ್ತಾನೆ :

"ಸಂಜಯ! ದಿವಸಗಳು ಕಳೆಯುತ್ತಿದ್ದಂತೆ ದೇದೀಪ್ಯಮಾನವಾಗಿದ್ದ ನನ್ನ ಯಶಸ್ಸೂ ಕಳೆದುಹೋಗುತ್ತಿದೆ. ನನ್ನ ಕಡೆಯ ಅನೇಕಯೋಧರು ಹತರಾಗಿ ಹೋದರು. ಇದನ್ನು ನಾನು ಕಾಲದ ವಿಪರ್ಯಾಸವೆಂದೇ ಭಾವಿಸುತ್ತೇನೆ. ಅಶ್ವತ್ಥಾಮನಿಂದಲೂ ಮತ್ತು ಕರ್ಣನಿಂದಲೂ ರಕ್ಷಿಸಲ್ಪಡುತ್ತಿದ್ದ ದೇವತೆಗಳಿಂದಲೂ ಪ್ರವೇಶಿಸಲು ಅಸಾಧ್ಯವಾಗಿದ್ದ ನನ್ನ ಸೈನ್ಯವನ್ನು ಪರಮ ಕ್ರುದ್ಧನಾದ ಧನಂಜಯನು ಪ್ರವೇಶಿಸಿದನು. ಮಹಾಪರಾಕ್ರಮಿಯಾದ ಶ್ರೀಕೃಷ್ಣ, ಭೀಮಸೇನ ಮತ್ತು ಸಾತ್ಯಕಿಗಳೊಡನೆ ಕೂಡಿಕೊಂಡ ಅರ್ಜುನನ ಪರಾಕ್ರಮವು ಮತ್ತಷ್ಟು ವೃದ್ಧಿಸಿತು. ಭೀಮ-ಸಾತ್ಯಕಿಯರೂ ಅರ್ಜುನ ನೊಡನೆ ಸೇರಿಕೊಂಡರೆಂಬ ವಾರ್ತೆಯನ್ನು ಕೇಳಿದಾಗಿನಿಂದ–ಕಟ್ಟಿಗೆಗೆ ತಗುಲಿದ ಬೆಂಕಿಯು ಆಶ್ರಯವನ್ನಿತ್ತ ಕಟ್ಟಿಗೆಯನ್ನೇ ಭಸ್ಮಮಾಡುವಂತೆ–ನನ್ನ ಮನಸ್ಸಿನಲ್ಲಿ ಉದ್ಭೂತವಾಗಿರುವ ಶೋಕವು ನನ್ನನ್ನೇ ದಹಿಸುತ್ತಿದೆ. ಸಿಂಧುರಾಜನಾದ ಜಯದ್ರಥನಿಂದ ಕೂಡಿರುವ ಸಕಲರಾಜರೂ ಕಾಲನಿಂದ ನುಂಗಲ್ಪಟ್ಟರೆಂದೇ ನಾನು ಭಾವಿಸಿದ್ದೇನೆ. ಜಯದ್ರಥನು ಕಿರೀಟಧರನಾದ ಅರ್ಜುನನ ವಿಷಯದಲ್ಲಿ ಅತ್ಯಂತ ಅಪ್ರಿಯವಾದ ಕಾರ್ಯವನ್ನೆಸಗಿ ಅವನ ಕಣ್ಣುಗಳಿಗೂ ವಿಷಯನಾದನಂತರ ಜೀವದಿಂದ ಹೇಗೆತಾನೇ ಉಳಿದಾನು? ಸಂಜಯ! ಊಹೆಯಿಂದಲೂ ನಾನು ಕಾಣುತ್ತಿದ್ದೇನೆ. ಜಯದ್ರಥನು ಇನ್ನಿಲ್ಲ. ಆ ಮಹಾಯುದ್ಧವು ಯಾವ ರೀತಿಯಲ್ಲಿ ನಡೆಯಿತೋ ಅದನ್ನು ಯಥಾವತ್ತಾಗಿ ನನಗೆ ವಿವರಿಸಿ ಹೇಳು. ಆನೆಯೊಂದು ಸರೋವರದಲ್ಲಿ ಧುಮುಕುವಂತೆ–ಒಬ್ಬನೇ ಒಬ್ಬ ಶಿನಿಪ್ರವೀರನು ಪರಮಕ್ರುದ್ಧನಾಗಿ ನನ್ನ

---

ಆದಂತಾಗುವುದಿಲ್ಲ. ಸೇರಿಸಿ ಓದುವುದರಿಂದ ಕೆಲವು ಅಸಂಗತಗಳು ಎದ್ದುಕಾಣುತ್ತವೆ. ಈ ವಿಷಯವನ್ನು ಸ್ವಲ್ಪಮಟ್ಟಿಗೆ ಯುದ್ಧವಿಶ್ಲೇಷಣೆಯಲ್ಲಿ ವಿವರಿಸಲಾಗುವುದು.

ಸೈನ್ಯದೊಳಕ್ಕೆ ಪ್ರವೇಶಿಸಿದನು. ನನ್ನ ಸೈನ್ಯವನ್ನು ಅಲ್ಲೋಲ-ಕಲ್ಲೋಲ ಗೊಳಿಸಿ ಹಲವು ಬಾರಿ ಧ್ವಂಸಮಾಡಿರುವನು. ಧನಂಜಯನ ವಿಜಯದ ಸಲುವಾಗಿ ಪ್ರಯತ್ನಿಸುತ್ತಿದ್ದ ವೃಷ್ಣಿವೀರನ ಯುದ್ಧವು ಹೇಗೆ ನಡೆಯಿತೆಂಬು ದನ್ನು ನನಗೆ ಯಥಾವತ್ತಾಗಿ ಹೇಳು. ಸಂಜಯ! ನೀನು ಯುದ್ಧವಾರ್ತೆಯ ಕಥನದಲ್ಲಿ ಅತ್ಯಂತ ಕುಶಲನಾಗಿರುವೆ."

"ಮಹಾರಾಜ! ಅರ್ಜುನನಿಗೆ ಸಹಾಯಕನಾಗಲು ಅವನ ಬಳಿಗೆ ಹೋಗುತ್ತಿದ್ದ ನಡುದಾರಿಯಲ್ಲಿ ಕರ್ಣನಿಂದ ಬಹುವಾಗಿ ಪೀಡಿತನಾದ ಭೀಮಸೇನನನ್ನು ನರವೀರರ ಮಧ್ಯದಲ್ಲಿ ನೋಡಿದ ಸಾತ್ಯಕಿಯು ರಥದಲ್ಲಿ ಕುಳಿತು ಭೀಮಸೇನನನ್ನೇ ಅನುಸರಿಸಿ ಹೋದನು. ವರ್ಷಾಕಾಲದಲ್ಲಿ ವಜ್ರ ಪಾಣಿಯಾದ ಇಂದ್ರನು ಮೇಘದ ಮೂಲಕವಾಗಿ ಗರ್ಜಿಸುವಂತೆ–ಗರ್ಜನೆ ಮಾಡುತ್ತಾ ಸೂರ್ಯನು ಶರತ್ಕಾಲವು ಕಳೆದನಂತರ ತನ್ನ ಉಗ್ರವಾದ ತೇಜಸ್ಸಿನಿಂದ ಪ್ರಜ್ವಲಿಸುವಂತೆ–ತನ್ನ ಅಮಿತವಾದ ತೇಜಸ್ಸಿನಿಂದ ಪ್ರಜ್ವಲಿ ಸುತ್ತಿದ್ದ ಸಾತ್ಯಕಿಯು ತನ್ನ ಸುದೃಢವಾದ ಧನುಸ್ಸಿನಿಂದ ಶತ್ರುಗಳನ್ನು ಸಂಹರಿಸುತ್ತಾ ನಿನ್ನ ಮಗನ ವಿಶಾಲವಾದ ಸೈನ್ಯವನ್ನೇ ನಡುಗಿಸಿಬಿಟ್ಟನು. ಬೆಳ್ಳಿಯಂತೆ ಪ್ರಕಾಶಮಾನವಾಗಿದ್ದ ಶ್ವೇತಾಶ್ವಗಳ ಮೂಲಕವಾಗಿ ರಣರಂಗ ದಲ್ಲಿ ಮುನ್ನಡೆಯುತ್ತಿದ್ದ, ಸಿಂಹಗರ್ಜನೆಮಾಡುತ್ತಿದ್ದ, ಮಧುವಂಶಶ್ರೇಷ್ಠ ನಾದ ಸಾತ್ಯಕಿಯನ್ನು ತಡೆದು ನಿಲ್ಲಿಸಲು ನಿನ್ನ ಕಡೆಯ ಎಲ್ಲ ರಥಸೈನಿಕರೂ ಒಟ್ಟಾಗಿ ಸೇರಿ ಪ್ರಯತ್ನಿಸಿದರೂ ಸಫಲರಾಗಲಿಲ್ಲ. ರಥಿಕರ ಅಸಹಾಯಕತೆ ಯನ್ನು ಕಂಡು ಒಬ್ಬನೇ ಒಬ್ಬ * ಅಲಂಬುಷನು ಸಾತ್ಯಕಿಯನ್ನು ಎದುರಿಸಲು ಮುಂದೆಬಂದನು. ಪರಮಕ್ರುದ್ಧನಾಗಿದ್ದ, ಯುದ್ಧದಲ್ಲಿ ಹಿಂದಿರುಗು ವುದೆಂಬುದನ್ನೇ ತಿಳಿಯದಿದ್ದ, ಸುವರ್ಣಮಯವಾದ ಕವಚವನ್ನು ಧರಿಸಿದ್ದ, ಧನುಷ್ಪಾಣಿಯಾದ, ರಾಜಶ್ರೇಷ್ಠನಾದ ಅಲಂಬುಷನು ಮಧುವಂಶಪ್ರದೀಪ ನಾದ ಸಾತ್ಯಕಿಯನ್ನು ಒಡನೆಯೇ ಎದುರಿಸಿದನು. ಅವರಿಬ್ಬರ ನಡುವೆ

---

* ಅಲಂಬುಷ : ಮಹಾಭಾರತಯುದ್ಧದಲ್ಲಿ ಅಲಂಬುಷ ಎಂಬ ಹೆಸರಿನವರು ನಾಲ್ಕು ಮಂದಿ ಬರುತ್ತಾರೆ. (೧) ಋಷ್ಯಶೃಂಗನ ಮಗ ಅಲಂಬುಷ. ಇವನೊಬ್ಬ ರಾಕ್ಷಸ. ಅರ್ಜುನನ ಮಗನಾದ ಇರಾವಂತನನ್ನು ಇವನು ಸಂಹರಿಸುತ್ತಾನೆ. (ಭೀಷ್ಮಪರ್ವ, ಅಧ್ಯಾಯ-೯೦) ಇವನೇ ಶಾಲಕಟಂಕಟನ ಮಗ ಅಥವಾ ಶಾಲಕಟಂಕಟ ಎಂಬ

ಘೋರವಾದ ಸಂಗ್ರಾಮವು ಪ್ರಾರಂಭವಾಯಿತು. ಭರತನಂದನ! ಅವರಿಬ್ಬ ರಿಗೂ ನಡೆದಂತಹ ಘೋರವಾದ, ರೋಮಾಂಚಕರವಾದ ಯುದ್ಧವು ಹಿಂದೆ ಎಲ್ಲಿಯೂ ಯಾವಾಗಲೂ ನಡೆದಿರಲಿಲ್ಲ. ತಮ್ಮ ಯುದ್ಧದಿಂದ ರಣಾಂಗಣಕ್ಕೆ ಮೆರುಗುಕೊಡುತ್ತಿದ್ದ (ಯುದ್ಧದಲ್ಲಿ ಪ್ರಕಾಶಿಸುವ) ಆ ಇಬ್ಬರ ಘೋರ ಯುದ್ಧವನ್ನು ನಿನ್ನ ಕಡೆಯ ಯೋಧರೂ ಮತ್ತು ಶತ್ರುಪಕ್ಷದ ಯೋಧರೂ ನೋಡುತ್ತಾ ನಿಂತುಬಿಟ್ಟರು. ರಾಜಶ್ರೇಷ್ಠನಾದ ಅಲಂಬುಷನು ಹತ್ತು ಬಾಣಗಳಿಂದ ಸಾತ್ಯಕಿಯನ್ನು ಬಲಪೂರ್ವಕವಾಗಿ ಪ್ರಹರಿಸಿದನು. ಶಿನಿ ಪುಂಗವನು ತನ್ನ ಸಮೀಪಕ್ಕೆ ಬರುವುದರೊಳಗಾಗಿಯೇ ಆ ಬಾಣಗಳೆಲ್ಲವನ್ನೂ ನಿಶಿತವಾದ ಬಾಣಗಳಿಂದ ಕತ್ತರಿಸಿಬಿಟ್ಟನು. ಪುನಃ ಅಲಂಬುಷನು ಸುಂದರವಾದ ರೆಕ್ಕೆಗಳನ್ನು ಹೊಂದಿದ್ದ ಅಗ್ನಿಸದೃಶವಾಗಿದ್ದ ಮೂರು ಬಾಣ ಗಳನ್ನು ಧನುಸ್ಸಿನಲ್ಲಿ ಯೋಜಿಸಿ ಕಿವಿಯ ತುದಿಯವರೆಗೂ ಸೆಳೆದು ಪ್ರಹರಿಸಿ ದನು. ಆ ಬಾಣಗಳು ಸಾತ್ಯಕಿಯ ಕವಚವನ್ನು ಸೀಳಿಕೊಂಡು ಶರೀರವನ್ನು ಪ್ರವೇಶಿಸಿದುವು. ಅಲಂಬುಷನು ಬೆಂಕಿ ಮತ್ತು ಗಾಳಿಗಳಿಗೆ ಸಮಾನವಾದ ಪ್ರಭಾವದಿಂದ ಕೂಡಿದ್ದ, ಪ್ರಜ್ವಲಿಸುತ್ತಿದ್ದ, ನಿಶಿತವಾಗಿದ್ದ ಆ ಮೂರು ಬಾಣಗಳಿಂದ ಸಾತ್ಯಕಿಯ ಶರೀರವನ್ನು ಸೀಳಿ ಪುನಃ ನಾಲ್ಕು ಬಾಣಗಳಿಂದ ಬೆಳ್ಳಿಯಂತೆ ಪ್ರಕಾಶಮಾನವಾದ ಸಾತ್ಯಕಿಯ ನಾಲ್ಕು ಕುದುರೆಗಳನ್ನು ಪ್ರಹರಿಸಿ ಬಹಳವಾಗಿ ಗಾಯಗೊಳಿಸಿದನು.

ಮಹಾರಾಜ! ಈ ರೀತಿಯಲ್ಲಿ ಅಲಂಬುಷನಿಂದ ಪೀಡಿತನಾದ, ವೇಗ ವಂತನಾದ, ಶಿನಿಯ ಮೊಮ್ಮಗನಾದ, ಚಕ್ರಧರನಾದ ವಿಷ್ಣುವಿಗೆ ಸಮಾನ ವಾದ ಪ್ರಭಾವದಿಂದ ಕೂಡಿದ್ದ ಸಾತ್ಯಕಿಯು ಉತ್ತಮವಾದ ವೇಗವನ್ನು ಹೊಂದಿದ್ದ ನಾಲ್ಕು ಬಾಣಗಳಿಂದ ಅಲಂಬುಷನ ನಾಲ್ಕು ಕುದುರೆಗಳನ್ನೂ

---

ಉಪನಾಮವುಳ್ಳವನು. ಇವನನ್ನು ಘಟೋತ್ಕಚನು ಸಂಹರಿಸುತ್ತಾನೆ. (ದ್ರೋಣಪರ್ವ ಅಧ್ಯಾಯ-೧೦೯) (೨) ಕೌರವಪಕ್ಷಕ್ಕೆ ಸೇರಿದ್ದ ಒಬ್ಬ ಶ್ರೇಷ್ಠರಾಜ. ಇವನನ್ನು ಸಾತ್ಯಕಿಯು ಸಂಹರಿಸುತ್ತಾನೆ. ಈ ಪ್ರಕರಣಕ್ಕೆ ಸಂಬಂಧಿಸಿದವನು. (೩) ಇವನೊಬ್ಬ ರಾಕ್ಷಸ. ಇವನು ಅರ್ಜುನನಿಂದ ಪರಾಜಿತನಾಗಿ ರಣರಂಗವನ್ನೇ ಬಿಟ್ಟು ಓಡಿಹೋಗುತ್ತಾನೆ. (ದ್ರೋಣಪರ್ವ ಅಧ್ಯಾಯ-೧೬೭) (೪) ಒಬ್ಬ ರಾಕ್ಷಸ. ಇವನು ಜಟಾಸುರನ ಮಗ. ಇವನನ್ನು ಘಟೋತ್ಕಚನು ವಧಿಸುತ್ತಾನೆ. (ದ್ರೋಣಪರ್ವ, ಅಧ್ಯಾಯ-೧೭೪)

ಸಂಹರಿಸಿದನು. ಅನಂತರ ಪ್ರಳಯಕಾಲದ ಅಗ್ನಿಗೆ ಸಮಾನವಾಗಿದ್ದ ಭಲ್ಲದಿಂದ ಅಲಂಬುಷನ ಸಾರಥಿಯ ಕತ್ತನ್ನು ಕತ್ತರಿಸಿ ಪೂರ್ಣಚಂದ್ರ ನಂತೆ ಪ್ರಕಾಶಮಾನವಾಗಿದ್ದ, ಕರ್ಣಕುಂಡಲಗಳಿಂದ ಸಮಲಂಕೃತವಾಗಿದ್ದ,



ದೇದೀಪ್ಯಮಾನವಾಗಿ ಕಾಣುತ್ತಿದ್ದ ಅಲಂಬುಷನ ತಲೆಯನ್ನು ದೇಹದಿಂದ ಪ್ರತ್ಯೇಕಿಸಿಬಿಟ್ಟನು. ಹೀಗೆ ಯದುಶ್ರೇಷ್ಠನಾದ, ಶತ್ರುಗಳನ್ನು ಮರ್ದಿಸುತ್ತಿದ್ದ ವೀರನಾದ ಸಾತ್ಯಕಿಯು–ರಾಜನ ಪುತ್ರನೂ ಪೌತ್ರನೂ ಆಗಿದ್ದ (ರಾಜವಂಶೀಯನಾದ) ಅಲಂಬುಷನನ್ನು ಸಂಹರಿಸಿ, ಮೇಲೆ ಬೀಳಲು ಬರುತ್ತಿದ್ದ ನಿನ್ನ ಸೈನಿಕರನ್ನೂ ಬಾಣಗಳ ಪ್ರಹಾರದಿಂದ ದೂರಸರಿಯುವಂತೆ ಮಾಡುತ್ತಾ ಅರ್ಜುನನಿದ್ದೆಡೆಗೆ ಶೀಘ್ರವಾಗಿ ಹೊರಟನು. ಹಸುವಿನ ಹಾಲು,

ಕುಂದಪುಷ್ಪ (ಮಲ್ಲೆಹೂವು ಅಥವಾ ಕೋಲುಮಲ್ಲಿಗೆ), ಚಂದ್ರ ಮತ್ತು ಹಿಮ–ಇವುಗಳ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ಸುವರ್ಣಮಯವಾದ ಬಲೆಗಳಿಂದ ಆಚ್ಛಾದಿತವಾಗಿದ್ದ, ಸುರಕ್ಷಿತವಾಗಿದ್ದ, ಸೈಂಧವಜಾತಿಯ ಒಳ್ಳೆಯ ಕುದುರೆಗಳು ನೃಪಶ್ರೇಷ್ಠನಾದ ಸಾತ್ಯಕಿಯು ಎಲ್ಲೆಲ್ಲಿಗೆ ಹೋಗಬೇಕೆಂದು ಇಚ್ಛಿಸುತ್ತಿದ್ದನೋ ಆಯಾ ಸ್ಥಳಗಳಿಗೇ ಅವನ ರಥವನ್ನು ಒಯ್ಯುತ್ತಿದ್ದುವು. ವಾಯುವು ಒಂದಾಗಿ ಸೇರುವ ಮೋಡಗಳನ್ನು ಪುನಃ ಪುನಃ ಚದುರಿಸುವಂತೆ–ಸಾಮೂಹಿಕವಾಗಿ ಬಂದು ತನ್ನ ಮೇಲೆ ದಾಳಿ ನಡೆಸುತ್ತಿದ್ದ ಕುರುಸೇನೆಯನ್ನು ಬಾರಿ-ಬಾರಿಗೂ ಧ್ವಂಸಮಾಡುತ್ತಿದ್ದ, ಶತ್ರು ಸೈನ್ಯದ ಮಧ್ಯದಲ್ಲಿ ಸಂಚರಿಸುತ್ತಾ ಅರ್ಜುನನನ್ನು ಅನುಸರಿಸಿ ಹೋಗುತ್ತಿದ್ದ ವೃಷ್ಣಿವೀರನಾದ ಸಾತ್ಯಕಿಯನ್ನು ನೋಡಿ ನಿನ್ನ ಎಲ್ಲ ಮಕ್ಕಳೂ ಮತ್ತು ನಿನ್ನ ಕಡೆಯ ಇತರ ಯೋಧರೂ ಒಟ್ಟಾಗಿ ಸೇರಿ ಯೋಧಮುಖ್ಯನಾದ, ನಿನ್ನ ಮಗನಾದ ದುಃಶಾಸನನನ್ನು ಮುಂದೆಮಾಡಿಕೊಂಡು ಸಾತ್ಯಕಿಯನ್ನು ಆಕ್ರಮಿಸಿದರು. ಅನೇಕ ಸೇನಾಸಮೂಹಗಳನ್ನು ಎದುರಿಸಿ ಯುದ್ಧಮಾಡಲು ಸಮರ್ಥರಾಗಿದ್ದ ದುಃಶಾಸನಪ್ರಮುಖರಾದ ಕುರುಯೋಧರು ಸಾತ್ಯಕಿಯನ್ನು ನಾಲ್ಕು ದಿಕ್ಕುಗಳಿಂದಲೂ ಆಕ್ರಮಿಸಿ ಬಾಣಗಳಿಂದ ಬಹಳವಾಗಿ ಪೀಡಿಸಿದರು. ಸಾತ್ವತಪ್ರವರನಾದ, ವೀರನಾದ ಸಾತ್ಯಕಿಯೂ ಸಹ ಆ ಎಲ್ಲ ಸೈನಿಕರನ್ನೂ ಬಾಣಗಳ ಸಮೂಹದಿಂದ ದೂರಸರಿಯುವಂತೆ ಮಾಡಿದನು. ಅಜಮೀಢ! (ಅಜಮೀಢವಂಶೀಯನೇ! ) ಶತ್ರುಘಾತಿಯಾದ ಶಿನಿಯ ಪೌತ್ರನಾದ ಸಾತ್ಯಕಿಯು ಬಹಳ ಶೀಘ್ರವಾಗಿ ಕೌರವಯೋಧರ ಉಪಟಳವನ್ನು ನಿವಾರಣೆಮಾಡಿಕೊಂಡು ಧನುಸ್ಸನ್ನು ಮೇಲೆತ್ತಿ ಅಗ್ನಿಸದೃಶವಾದ ಬಾಣಗಳಿಂದ ದುಃಶಾಸನನ ಕುದುರೆಗಳನ್ನು ಸಂಹರಿಸಿದನು. [ಸಮರಾಂಗಣದಲ್ಲಿ ಪುರುಷಪ್ರವೀರನಾದ ಸಾತ್ಯಕಿಯನ್ನು ನೋಡಿ ಕೃಷ್ಣಾರ್ಜುನರು ಆನಂದತುಂದಿಲರಾದರು.]"

೧೪೦ನೆಯ ಅಧ್ಯಾಯವು ಮುಗಿಯಿತು.

---

[ ] ಕಂಸದಲ್ಲಿರುವುದನ್ನು ಹೆಚ್ಚು ಪಾಠವೆಂದು ಪರಿಗಣಿಸಲಾಗಿದೆ.

೧೪೧ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯ ಅದ್ಭುತಪರಾಕ್ರಮ : ಶ್ರೀಕೃಷ್ಣನು ಅರ್ಜುನನಿಗೆ ಸಾತ್ಯಕಿಯ ಆಗಮನದ ಸೂಚನೆಯನ್ನಿತ್ತುದು : ಅರ್ಜುನನ ಚಿಂತೆ

ಸಂಜಯನು ಸಾತ್ಯಕಿ-ದುಃಶಾಸನರ ಯುದ್ಧವನ್ನು ಮುಂದುವರಿಸಿ ಹೇಳುತ್ತಾನೆ :

ಮಹಾರಾಜ! ಅಪಾರವಾದ ಸೇನಾಸಮುದ್ರದಲ್ಲಿ ಪ್ರವೇಶಿಸಿದ್ದ, ದುಃಶಾಸನನ ರಥದ ಮೇಲೆ ಆಕ್ರಮಣನಡೆಸಲು ಸಿದ್ಧನಾಗಿದ್ದ, ಮಹಾ ಬಾಹುವಾದ, ತ್ವರೆಯಿಂದ ಮಾಡಬೇಕಾಗಿದ್ದ ಕಾರ್ಯಗಳನ್ನು ಬಹಳ ತ್ವರೆ ಯಿಂದಲೇ ಮಾಡಿ ಮುಗಿಸುವ ಸ್ವಭಾವವುಳ್ಳವನಾಗಿದ್ದ, ಧನಂಜಯನೇ ವಿಜಯಿಯಾಗಬೇಕೆಂಬ ಆಶೆಯನ್ನು ಹೊಂದಿದ್ದ ಸಾತ್ಯಕಿಯನ್ನು ಸುವರ್ಣ ಮಯವಾದ ಧ್ವಜಗಳನ್ನು ಹೊಂದಿದ್ದ, ಮಹಾಧನುಷ್ಮಂತರಾದ, ತ್ರಿಗರ್ತ ಯೋಧರು ನಾಲ್ಕು ಕಡೆಗಳಿಂದಲೂ ಮುತ್ತಿದರು. ಶ್ರೇಷ್ಠವಾದ ಧನುಸ್ಸು ಗಳನ್ನು ಹೊಂದಿದ್ದ ಕ್ರುದ್ಧರಾದ ತ್ರಿಗರ್ತಯೋಧರು ರಥಗಳ ಸಾಲುಗಳಿಂದ ಸಾತ್ಯಕಿಯನ್ನು ನಾಲ್ಕು ಕಡೆಗಳಿಂದಲೂ ಪ್ರತಿಬಂಧಿಸಿ ಬಾಣಗಳ ಸಮೂಹ ಗಳಿಂದ ಅವನನ್ನು ಮುಚ್ಚಿಬಿಟ್ಟರು. ಸತ್ಯವಿಕ್ರಮನಾದ ಸಾತ್ಯಕಿಯೊಬ್ಬನೇ ದೇದೀಪ್ಯಮಾನರಾಗಿ ಕಾಣುತ್ತಿದ್ದ ಐವತ್ತು ಮಂದಿ ಶತ್ರುಪಕ್ಷದ ರಾಜಪುತ್ರ ರನ್ನೂ ಪರಾಜಯಗೊಳಿಸಿದನು. ಚಪ್ಪಾಳೆಗಳ ಶಬ್ದಗಳಿಂದ ತುಂಬಿ ಹೋಗಿದ್ದ, ಕತ್ತಿ-ಶಕ್ತ್ಯಾಯುಧ-ಗದೆಗಳಿಂದ ಪೂರ್ಣವಾಗಿದ್ದ, ನೌಕೆಯೇ ಇಲ್ಲದ ಸಮುದ್ರದೋಪಾದಿಯಲ್ಲಿದ್ದ (ನೌಕೆಯಿಲ್ಲದ ಸಮುದ್ರದಂತೆ ದಾಟಲು ಅತಿದುಸ್ತರವಾಗಿದ್ದ ) ಕೌರವಸೈನ್ಯದ ಮಧ್ಯಭಾಗವನ್ನು ಪ್ರವೇಶಿಸಿದ ಶೈನೇಯನು ತೋರಿಸಿದ ಅದ್ಭುತಪರಾಕ್ರಮವನ್ನು ನಾವು ನೋಡಿದೆವು. ಮಹಾರಾಜ! ಸಾತ್ಯಕಿಯು ಎಷ್ಟು ವೇಗದಿಂದ ಸಂಚರಿಸುತ್ತಿದ್ದನೆಂದರೆ : ಒಂದುಕ್ಷಣದಲ್ಲಿ ನಾವು ಅವನನ್ನು ಪಶ್ಚಿಮದಿಕ್ಕಿನಲ್ಲಿ ಕಂಡರೆ ಮರುಕ್ಷಣ ದಲ್ಲಿಯೇ ಅವನನ್ನು ನಾವು ಪೂರ್ವದಿಕ್ಕಿನಲ್ಲಿ ಕಾಣುತ್ತಿದ್ದೆವು. ಉತ್ತರ- ದಕ್ಷಿಣ ಪೂರ್ವ-ಪಶ್ಚಿಮದಿಕ್ಕುಗಳಲ್ಲಿಯೂ, ಆಗ್ನೇಯ, ನೈರ್ಋತ್ಯಾದಿ

ಉಪದಿಕ್ಕುಗಳಲ್ಲಿಯೂ ಸಾತ್ಯಕಿಯು ನೃತ್ಯಗಾರನಂತೆ ಅತ್ಯಂತಶೀಘ್ರವಾಗಿ ಸಂಚರಿಸುತ್ತಿದ್ದನು. ಅವನ ವೇಗವೆಷ್ಟಿತ್ತೆಂದರೆ : ಸಾತ್ಯಕಿಯ ನೂರಾರು ರಥಗಳೇನಾದರೂ ಅಲ್ಲಿ ಸುತ್ತುತ್ತಿವೆಯೋ–ಎಂಬ ಭ್ರಾಂತಿಯು ನಮ್ಮೆಲ್ಲರಿಗೂ ಉಂಟಾಗಿದ್ದಿತು. ಸಿಂಹಕ್ಕೆ ಸಮಾನವಾದ ಪರಾಕ್ರಮದಿಂದಲೂ ಮತ್ತು ನಡಿಗೆಯಿಂದಲೂ ಕೂಡಿದ್ದ ಸಾತ್ಯಕಿಯ ಘೋರವಾದ ಸಂಹಾರಕ್ರಿಯೆಯನ್ನು ಕಂಡು ಸಂತಪ್ತರಾದ ತ್ರಿಗರ್ತರು ನಮ್ಮ ಕಡೆಯವರು ಇದ್ದ ಸ್ಥಳಕ್ಕೇ ಹಿಂದಿರುಗಿದರು. ಅನಂತರ ಶೂರಸೇನಯೋಧರು–ಮದಿಸಿದ ಆನೆಯನ್ನು ಅಂಕುಶಗಳಿಂದ ಪ್ರಹರಿಸಿ ನಿಯಂತ್ರಿಸುವಂತೆ–ಬಾಣಗಳ ಸಮೂಹದಿಂದ ಮಾರ್ಗವನ್ನು ರೋಧಿಸುತ್ತಾ ಸಾತ್ಯಕಿಯನ್ನು ಆಕ್ರಮಿಸಿದರು. ಮನಸ್ಸಿನಿಂದ ವಿವೇಚಿಸಲಾಗದಷ್ಟು ಪರಾಕ್ರಮವನ್ನು ಹೊಂದಿದ್ದ ಮಹಾತ್ಮನಾದ ಸಾತ್ಯಕಿಯು ಶೂರಸೇನರೊಡನೆ ಯುದ್ಧಮಾಡಿ ಅವರನ್ನು ಮುಹೂರ್ತಮಾತ್ರದಲ್ಲಿ (ಸ್ವಲ್ಪಹೊತ್ತಿನಲ್ಲಿ) ಪರಾಜಯಗೊಳಿಸಿ ಅನಂತರ ತನ್ನನ್ನೆದುರಿಸಿದ ಕಳಿಂಗರೊಡನೆ ಯುದ್ಧದಲ್ಲಿ ತೊಡಗಿದನು. ಮಹಾಬಾಹುವಾದ ಸಾತ್ಯಕಿಯು ದುರ್ಭೇದ್ಯವಾದ ಕಳಿಂಗರ ಸೇನೆಯನ್ನೂ ಅತಿಕ್ರಮಿಸಿ ಕುಂತಿಯ ಮಗನಾದ ಧನಂಜಯನ ಬಳಿಗೆ ಹೋದನು. ನೀರಿನಲ್ಲಿ ಈಜಿಕೊಂಡು ಹೋಗುವವನೊಬ್ಬನು ಯಾವ ರೀತಿಯಲ್ಲಿ ಬಳಲಿದ್ದರೂ ಸಹ ನಿರ್ದಿಷ್ಟಸ್ಥಳವನ್ನು ಸೇರಿದನಂತರ ಹರ್ಷಚಿತ್ತನಾಗುವನೋ–ಅದೇ ರೀತಿ ಯಲ್ಲಿ ಅತ್ಯಂತಪ್ರಯಾಸದಿಂದ ಸೇನಾಸಮುದ್ರವನ್ನು ದಾಟಿಬಂದ ಯುಯು ಧಾನನು ಪುರುಷವ್ಯಾಘ್ರನಾದ ಅರ್ಜುನನನ್ನು ನೋಡಿ ಸಮಾಧಾನಪಟ್ಟು ಕೊಂಡನು. ಯುಯುಧಾನನು ಪಾರ್ಥನ ಕಡೆಗೆ ಬರುತ್ತಿರುವುದನ್ನು ಕಂಡು ಕೇಶವನು ಪಾರ್ಥನೊಡನೆ ಹೇಳಿದನು. “ಪಾರ್ಥ! ನಿನ್ನ ಪದಾನುಗನಾದ (ನಿನ್ನನ್ನೇ ಯಾವಾಗಲೂ ಅನುಸರಿಸುವ) ಶಿನಿಯ ಮೊಮ್ಮಗನಾದ ಸಾತ್ಯಕಿಯು ಬರುತ್ತಿದ್ದಾನೆ. ಸತ್ಯಪರಾಕ್ರಮನಾದ ಈ ಸಾತ್ಯಕಿಯು ನಿನಗೆ ಶಿಷ್ಯನೂ ಆಗಿದ್ದಾನೆ ; ಸಖನೂ ಆಗಿದ್ದಾನೆ. ಪುರುಷರ್ಷಭನಾದ ಇವನು ಶತ್ರುಪಕ್ಷದ ಎಲ್ಲ ಯೋಧರನ್ನೂ ತೃಣಕ್ಕೆ ಸಮಾನರನ್ನಾಗಿ ಭಾವಿಸಿ ಪರಾಜಯಗೊಳಿಸಿರುವನು. ನಿನಗೆ ಪ್ರಾಣಗಳಿಗಿಂತಲೂ ಪ್ರಿಯತಮನಾದ ಸಾತ್ಯಕಿಯು ಕೌರವಯೋಧರಿಗೆ ಘೋರವಾದ ಉಪದ್ರವವನ್ನುಂಟುಮಾಡಿ

ಇಲ್ಲಿಗೆ ಬರುತ್ತಿದ್ದಾನೆ. ಸಾತ್ಯಕಿಯು ಆಚಾರ್ಯರಾದ ದ್ರೋಣರನ್ನೂ ಭೋಜವಂಶೀಯನಾದ ಕೃತವರ್ಮನನ್ನೂ (ಅವರ ಪರಾಕ್ರಮವನ್ನೂ ) ಬಾಣಗಳಿಂದ ವ್ಯರ್ಥಗೊಳಿಸಿ (ತಿರಸ್ಕರಿಸಿ) ಧರ್ಮರಾಜನಿಗೆ ಪ್ರಿಯವನ್ನುಂಟು ಮಾಡುವ ಸಲುವಾಗಿ ಶತ್ರುಪಕ್ಷದ ಶ್ರೇಷ್ಠರಾದ ಯೋಧರೆಲ್ಲರನ್ನೂ ಸಂಹರಿಸಿ



ಇಲ್ಲಿಗೆ ಬರುತ್ತಿದ್ದಾನೆ. ಪಾಂಡವ! ಮಹಾಬಲನಾದ ಸಾತ್ಯಕಿಯು ಶತ್ರುಸೈನ್ಯದ ಮಧ್ಯದಲ್ಲಿ ಸುದುಷ್ಕರವಾದ ಸಂಹಾರಕ್ರಿಯೆಯನ್ನು ಮಾಡಿ ನಿನ್ನನ್ನು ಸಂದರ್ಶಿಸಬೇಕೆನ್ನುವ ಆಶಯದಿಂದ ಇತ್ತ ಕಡೆಗೇ ಬರುತ್ತಿದ್ದಾನೆ. ರಥೈಕಸಹಾಯಕನಾದ ಸಾತ್ಯಕಿಯು ಆಚಾರ್ಯಪ್ರಮುಖರಾದ ಅನೇಕ

ಯೋಧರೊಡನೆ ಯುದ್ಧಮಾಡಿ ಅವರೆಲ್ಲರನ್ನೂ ಪರಾಜಯಗೊಳಿಸಿ ನಿನ್ನ ಸಮೀಪಕ್ಕೆ ಬರುತ್ತಿದ್ದಾನೆ.

ಕೌಂತೇಯ! ಧರ್ಮಜನಿಂದ ಕಳುಹಿಸಲ್ಪಟ್ಟಿರುವ ಸಾತ್ಯಕಿಯು ತನ್ನ ಬಾಹುಬಲವನ್ನೇ ಆಶ್ರಯಿಸಿ ಶತ್ರುಪಕ್ಷದ ಸೈನ್ಯವನ್ನು ಭೇದಿಸಿಕೊಂಡು ಇಲ್ಲಿಗೇ ಬರುತ್ತಿದ್ದಾನೆ. ಪಾಂಡವ! ಸಾತ್ಯಕಿಗೆ ಸಮಾನನಾದ ಯೋಧನು ಕೌರವರ ಸೈನ್ಯದಲ್ಲಿಯೇ ಮತ್ತೊಬ್ಬನಿಲ್ಲ. ಅಂತಹ ಯುದ್ಧದುರ್ಮದನಾದ ಸಾತ್ಯಕಿಯು ನಿನ್ನನ್ನೇ ಹುಡುಕಿಕೊಂಡು ಇಲ್ಲಿಗೆ ಬರುತ್ತಿದ್ದಾನೆ. ಶತ್ರುಪಕ್ಷದ ಬಹುಸಂಖ್ಯಾತಸೈನಿಕರನ್ನು ಸಂಹರಿಸಿ–ಹಸುಗಳ ಮಧ್ಯದಿಂದ ಸಿಂಹವು ಅನಾಯಾಸವಾಗಿ ಹೊರಬರುವಂತೆ–ಕೌರವಸೈನ್ಯದಿಂದ ವಿಮುಕ್ತನಾಗಿ ಇಲ್ಲಿಗೆ ಬರುತ್ತಿದ್ದಾನೆ. ಸಾವಿರಾರು ರಾಜರ ಕಮಲಸದೃಶವಾದ ಮುಖಗಳನ್ನು ಭೂಮಿಯ ಮೇಲೆ ಹರಡಿ ಬಹಳ ಬೇಗ ಇಲ್ಲಿಗೆ ಬರುತ್ತಿದ್ದಾನೆ. ಪಾರ್ಥ! ಸಾತ್ಯಕಿಯು ಅನುಜರಿಂದೊಡಗೂಡಿದ ದುರ್ಯೋಧನನನ್ನು ಜಯಿಸಿ, ಅಲಂಬುಷನನ್ನು ಸಂಹರಿಸಿ ಇಲ್ಲಿಗೆ ಶೀಘ್ರಗತಿಯಲ್ಲಿ ಬರುತ್ತಿದ್ದಾನೆ.

ಅನೇಕಪ್ರಾಣಿಗಳ ರಕ್ತಪ್ರವಾಹದಿಂದ ಕೂಡಿದ್ದ, ರಕ್ತ-ಮಾಂಸಗಳ ಮಿಶ್ರಣದಿಂದ ಕೆಸರುಳ್ಳದ್ದಾಗಿದ್ದ ನದಿಯೊಂದನ್ನು ರಣಭೂಮಿಯಲ್ಲಿ ನಿರ್ಮಿಸಿ ಹುಲ್ಲುಮೆದೆಯನ್ನು ಧ್ವಂಸಮಾಡುವಂತೆ ಕೌರವಸೈನಿಕರನ್ನು ಧ್ವಂಸಮಾಡಿ ಸಾತ್ಯಕಿಯು ಇಲ್ಲಿಗೆ ಬರುತ್ತಿದ್ದಾನೆ."

ಶ್ರೀಕೃಷ್ಣನು ಹೇಳಿದ ಈ ಮಾತುಗಳಿಂದ ಅರ್ಜುನನು ಪ್ರಹೃಷ್ಟನಾದರೂ–ಅವನು ಬಂದುದಕ್ಕೆ ಅಸಮಾಧಾನಗೊಂಡು ಕೇಶವನೊಡನೆ ಹೇಳಿದನು :

**ನ ಮೇ ಪ್ರಿಯಂ ಮಹಾಬಾಹೋ ಯನ್ಮಾಮಭ್ಯೇತಿ ಸಾತ್ಯಕಿಃ ॥೨೬॥**

"ಕೇಶವ! ಸಾತ್ಯಕಿಯು ಇಲ್ಲಿಗೆ ಬಂದುದು ನನಗೆ ಖಂಡಿತವಾಗಿಯೂ ಇಷ್ಟವಾಗಲಿಲ್ಲ. ನಾನು ಧರ್ಮರಾಜನ ವೃತ್ತಾಂತವನ್ನು ತಿಳಿದವನಾಗಿಲ್ಲ. ಸಾತ್ಯಕಿಯಿಂದ ವಿಹೀನನಾಗಿರುವ ಧರ್ಮಜನು ಬದುಕಿರುವನೋ–ಇಲ್ಲವೋ? ಎಂಬುದೂ ನನಗೆ ತಿಳಿಯದಾಗಿದೆ. ಮಹಾಬಾಹುವೇ! ಸಾತ್ವತನು ಧರ್ಮರಾಜನನ್ನು ರಕ್ಷಿಸಿಕೊಂಡಿರಬೇಕಾಗಿದ್ದಿತು. ಹೀಗಿರುವಾಗ

ಇವನು ಧರ್ಮರಾಜನನ್ನು ಬಿಟ್ಟು ನನ್ನ ಹಿಂದೇಕೆ ಬಂದನು? ಈ ಸಮಯವು ಎಂತಹ ಸಂದಿಗ್ಧವಾಗಿದೆಯೆಂಬುದನ್ನು ನೀನೇ ನೋಡು, ಕೃಷ್ಣ! ಧರ್ಮಜನ ರಕ್ಷಣೆಗೆಂದೇ ನಿಯುಕ್ತನಾಗಿದ್ದ ಸಾತ್ಯಕಿಯು ಇಲ್ಲಿಗೆ ಬಂದುದರಿಂದ ಧರ್ಮಜನನ್ನು ದ್ರೋಣರಿಗೆ ಒಪ್ಪಿಸಿದಂತೆಯೇ ಆಗಿದೆ. ನಾನಾದರೂ ಅವನ ರಕ್ಷಣೆಗೆ ಹೋಗುವೆನೆಂದರೆ–ಸೈಂಧವನ ಸಂಹಾರಕಾರ್ಯವಿನ್ನೂ ಮುಗಿದಿರುವುದಿಲ್ಲ. ಶೈನೇಯನನ್ನೇ ಪುನಃ ಧರ್ಮಜನ ರಕ್ಷಣೆಗೆ ಕಳುಹಿ ಸೋಣವೆಂದರೆ–ಸಾತ್ಯಕಿಯನ್ನು ಆಕ್ರಮಿಸಲು ಭೂರಿಶ್ರವಸನು ಸಿದ್ಧನಾಗಿ ನಿಂತಿದ್ದಾನೆ. ಸೈಂಧವನನ್ನು ಇಂದು ಸೂರ್ಯನು ಮುಳುಗುವುದರೊಳ ಗಾಗಿಯೇ ಸಂಹರಿಸುವೆನೆಂದು ಪ್ರತಿಜ್ಞೆಮಾಡಿರುವ ಕಾರಣದಿಂದಾಗಿ ನನ್ನ ಮೇಲೆ ಹೆಚ್ಚಿನ ಹೊಣೆಯೇ ಬಿದ್ದಂತಾಗಿದೆ. ನಾನು ಮೊದಲು ರಾಜನು ಕ್ಷೇಮದಿಂದಿರುವನೇ ಎಂಬುದನ್ನು ಸಾತ್ಯಕಿಯಿಂದ ತಿಳಿಯಬೇಕಾಗಿದೆ. ಭೂರಿಶ್ರವಸನ ಬಾಣಗಳ ಪ್ರಹಾರಕ್ಕೆ ಒಳಗಾಗಲಿರುವ ಸಾತ್ಯಕಿಯನ್ನು ರಕ್ಷಿ ಸುವ ಹೊಣೆಯೂ ನನ್ನದಾಗಿದೆ. ಈಗಾಗಲೇ ಸೂರ್ಯನು ಪಶ್ಚಿಮದ ಕಡೆಗೆ ವಾಲಿದ್ದಾನೆ. ಅವನು ಅಸ್ತಮಿಸುವುದರೊಳಗಾಗಿ ಸೈಂಧವನನ್ನೂ ಸಂಹರಿಸ ಬೇಕಾಗಿದೆ. ಸಾತ್ಯಕಿಯಾದರೋ ಬಳಲಿ-ಬೆಂಡಾಗಿ ಅಲ್ಪಪ್ರಾಣನಾಗಿಬಿಟ್ಟಿ ದ್ದಾನೆ. ಅವನ ಕುದುರೆಗಳೂ ಬಹುವಾಗಿ ಬಳಲಿವೆ. ಸಾರಥಿಯೂ ಬಳಲಿ ದ್ದಾನೆ. ಇವನನ್ನು ಎದುರಿಸಲು ಸಿದ್ಧನಾಗಿರುವ ಭೂರಿಶ್ರವಸನು ಬಳಲಿಯೂ ಇಲ್ಲ ; ಮೇಲಾಗಿ ಅನೇಕ ಯೋಧರು ಅವನಿಗೆ ಬೆಂಬಲನೀಡುತ್ತಿದ್ದಾರೆ. ನಿಶ್ಚಯವಾಗಿಯೂ ಭೂರಿಶ್ರವಸನೊಡನೆ ನಡೆಯುವ ಯುದ್ಧದ ಸಮಯ ದಲ್ಲಿ ಸಾತ್ಯಕಿಯು ಕ್ಷೇಮದಿಂದ ಹೊರಬರುವನೇ? ಸತ್ಯವಿಕ್ರಮನಾದ, ಮಹಾತೇಜಸ್ವಿಯಾದ ಶಿನಿಪುಂಗವನಾದ ಸಾತ್ಯಕಿಯು ಸಮುದ್ರವನ್ನು ದಾಟಿ ಹಸುವಿನ ಗೊರಸಿನಿಂದುಂಟಾದ ಹಳ್ಳದ ನೀರಿನಲ್ಲಿ ಮುಳುಗಿ ನಾಶವಾಗುವು ದಿಲ್ಲವಷ್ಟೆ?

ಮಹಾತ್ಮನಾದ, ಅಸ್ತ್ರವಿದ್ಯಾಪರಿಣತನಾದ, ಕೌರವಮುಖ್ಯನಾದ ಭೂರಿಶ್ರವಸನೊಡನೆ ಯುದ್ಧದಲ್ಲಿ ತೊಡಗುವ ಸಾತ್ಯಕಿಯು ಕುಶಲನಾಗಿ ಬರುವನೇ? ಆಚಾರ್ಯರ ಕಡೆಯಿಂದ ಒದಗಬಹುದಾದ ಭಯವನ್ನು (ಅಪಾಯವನ್ನು) ಕಡೆಗಾಣಿಸಿ ಸಾತ್ಯಕಿಯನ್ನು ಇಲ್ಲಿಗೆ ಕಳುಹಿಸಿಕೊಟ್ಟು ಪಾಂಡವಶ್ರೇಷ್ಠನಾದ ಧರ್ಮರಾಜನು ತಪ್ಪನ್ನು ಮಾಡಿದನೆಂದೇ ನಾನು

ಭಾವಿಸುತ್ತೇನೆ. ಗಿಡಗವು ಮಾಂಸಕ್ಕೆ ಹಾತೊರೆಯುವಂತೆ–ದ್ರೋಣರು ಧರ್ಮರಾಜನ ಜೀವಗ್ರಹಣಮಾಡಬೇಕೆಂದು ನಿತ್ಯವೂ ಹಾತೊರೆಯುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಧರ್ಮರಾಜನಿನ್ನೂ ಕುಶಲಿಯಾಗಿರುವನೇ?"

೧೪೧ನೆಯ ಅಧ್ಯಾಯವು ಮುಗಿಯಿತು.

೧೪೨ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಭೂರಿಶ್ರವಸನಿಗೂ–ಸಾತ್ಯಕಿಗೂ ಕಟುಸಂಭಾಷಣೆ ಮತ್ತು ಯುದ್ಧ: ಭೂರಿಶ್ರವಸನು ಸಾತ್ಯಕಿಯ ಕತ್ತನ್ನು ಕತ್ತರಿಸಲು ಹೋದುದು : ಅರ್ಜುನನು ಭೂರಿಶ್ರವಸನ ಭುಜಗಳನ್ನು ಕತ್ತರಿಸಿದುದು

ಸಂಜಯನು ಸಾತ್ಯಕಿಯ ಪರಾಕ್ರಮವನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ಯುದ್ಧದುರ್ಮದನಾದ ಸಾತ್ಯಕಿಯು ರಭಸದಿಂದ ಬರುತ್ತಿರುವುದನ್ನು ನೋಡಿ ಭೂರಿಶ್ರವಸನು ಪರಮಕ್ರುದ್ಧನಾಗಿ ಅವನನ್ನು ಆಕ್ರಮಿಸಿದನು. ಅನಂತರ ಶಿನಿಪುಂಗವನಾದ ಸಾತ್ಯಕಿಯನ್ನು ಕುರಿತು (ಕುರುಪುಂಗವನಾದ ಭೂರಿಶ್ರವಸನು) ಹೇಳಿದನು : "ಅಚ್ಯುತ! ಈಗ ತಾನೇ ನೀನು ನನ್ನ ಕಣ್ಣಿಗೆ ಬಿದ್ದಿರುವೆ. ಬಹಳ ದಿವಸಗಳ ನನ್ನ ಅಭಿಲಾಷೆಯನ್ನು ಇಂದಿನ ಯುದ್ಧದಲ್ಲಿ ನಾನು ಪೂರೈಸಿಕೊಳ್ಳುತ್ತೇನೆ. ನೀನೇನಾದರೂ ಯುದ್ಧವನ್ನೇ ಬಿಟ್ಟು ಪಲಾಯನಮಾಡದಿದ್ದರೆ ಇಂದಿನ ಯುದ್ಧದಲ್ಲಿ ನೀನು ಜೀವದಿಂದಂತೂ ಉಳಿಯಲಾರೆ (ಜೀವಸಹಿತವಾಗಿ ನನ್ನಿಂದ ತಪ್ಪಿಸಿಕೊಂಡು ಹೋಗಲಾರೆ). ದಾಶಾರ್ಹನೇ! ನಾನೇ ಮಹಾಶೂರನೆಂದು ಸದಾಕಾಲದಲ್ಲಿಯೂ ದುರಭಿಮಾನದಿಂದಿರುವ ನಿನ್ನನ್ನು ನಾನು ಯುದ್ಧದಲ್ಲಿ ಸಂಹರಿಸಿ ಕುರುರಾಜನಾದ ದುರ್ಯೋಧನನಿಗೆ ಸಂತೋಷವನ್ನುಂಟುಮಾಡುತ್ತೇನೆ. ನನ್ನ ಬಾಣಗಳಿಂದ ಈಗಲೇ ಭಸ್ಮೀಭೂತನಾಗಿ ಭೂಮಿಯ ಮೇಲೆ ಬೀಳುವ ನಿನ್ನನ್ನು ವೀರರಾದ ಕೇಶವಾರ್ಜುನರಿಬ್ಬರೂ ಒಟ್ಟಾಗಿಯೇ ನೋಡುತ್ತಾರೆ. ನೀನು ಯಾರ ಪ್ರೇರಣೆಯಿಂದ ಇಲ್ಲಿಗೆ ಪ್ರವೇಶಿಸಿರುವೆಯೋ ಧರ್ಮಪುತ್ರನಾದ ಆ ಯುಧಿಷ್ಠಿರರಾಜನು ನೀನು ನನ್ನಿಂದ ಹತನಾದೆಯೆಂಬ ವಾರ್ತೆಯನ್ನು ಕೇಳಿ ನಾಚಿಕೆಪಟ್ಟುಕೊಳ್ಳುತ್ತಾನೆ. ನೀನು ನನ್ನಿಂದ ಹತನಾಗಿ

ಶರೀರಾದ್ಯಂತವಾಗಿ ರಕ್ತದಿಂದ ತೋಯ್ದು ಭೂಮಿಯಲ್ಲಿ ಮಲಗಿರಲಾಗಿ, ಕುಂತಿಯ ಮಗನಾದ ಧನಂಜಯನು ನನ್ನ ಪರಾಕ್ರಮವೆಷ್ಟೆಂಬುದನ್ನು ಅರಿತುಕೊಳ್ಳುತ್ತಾನೆ. ಹಿಂದೆ ದೇವಾಸುರಯುದ್ಧಸಮಯದಲ್ಲಿ ಇಂದ್ರನಿಗೂ ಮತ್ತು ಬಲಿಗೂ ಯುದ್ಧ ನಡೆದಿದ್ದಂತೆ–ನಿನ್ನೊಡನೆ ಯುದ್ಧಮಾಡ ಬೇಕೆಂಬುದು ನನ್ನ ಬಹಳ ಕಾಲದ ಆಸೆಯಾಗಿದ್ದಿತು. ಸಾತ್ವತನೇ! ಈಗ ನಾನು ನಿನಗೆ ಮಹಾಘೋರವಾದ ಯುದ್ಧವನ್ನು ಕೊಡುತ್ತೇನೆ (ನಿನ್ನೊಡನೆ ಮಹಾಘೋರವಾದ ಯುದ್ಧವನ್ನು ಮಾಡುತ್ತೇನೆ). ಅನಂತರವೇ ನೀನು ನನ್ನ ವೀರ್ಯ-ಬಲ-ಪೌರುಷಗಳೆಷ್ಟೆಂಬುದನ್ನು ನಿಶ್ಚಯರೂಪದಿಂದ ತಿಳಿಯುವೆ. ಹಿಂದೆ ಯಾವರೀತಿಯಲ್ಲಿ ರಾಮಾನುಜನಾದ ಲಕ್ಷ್ಮಣನಿಂದ ನಿಹತನಾದ ಇಂದ್ರಜಿತನು ಯಮನ ಪಟ್ಟಣವನ್ನು ಸೇರಿದನೋ–ಅದೇ ರೀತಿಯಲ್ಲಿ ನೀನೀಗಲೇ ನನ್ನಿಂದ ಹತನಾಗಿ ಯಮರಾಜನ ಸಂಯಮಿನೀಪಟ್ಟಣಕ್ಕೆ ಹೋಗುವೆ. ಮಾಧವ! ಇಂದು ನೀನು ನನ್ನಿಂದ ಹತನಾದನಂತರ ಕೃಷ್ಣಾರ್ಜುನ-ಧರ್ಮಜರು ನಿರುತ್ಸಾಹಿಗಳಾಗಿ ಯುದ್ಧವನ್ನೇ ಪರಿತ್ಯಜಿಸಿ ಹೊರಟು ಹೋಗುತ್ತಾರೆ. ಇದರಲ್ಲಿ ಸಂಶಯವೇ ಇಲ್ಲ. ಈಗ ನಾನು ನಿನಗೆ ನಿಶಿತವಾದ ಬಾಣಗಳಿಂದಲೇ ಯಥಾಯೋಗ್ಯವಾಗಿ ಪೂಜೆಮಾಡಿ ನೀನು ಇದುವರೆಗೂ ಸಂಹರಿಸಿದ ಯೋಧರ ಪತ್ನಿಯರಿಗೆ ಆನಂದವನ್ನುಂಟುಮಾಡುತ್ತೇನೆ. ಸಿಂಹದ ಕಣ್ಣಿಗೆ ಬಿದ್ದ ಕ್ಷುದ್ರಮೃಗಗಳು ಜೀವಸಹಿತವಾಗಿ ಹೋಗಲು ಸಾಧ್ಯವಾಗದಂತೆ–ನನ್ನ ಕಣ್ಣುಗಳಿಗೆ ವಿಷಯನಾಗಿರುವ ನೀನು ಖಂಡಿತವಾಗಿಯೂ ಜೀವಸಹಿತವಾಗಿ ನನ್ನಿಂದ ತಪ್ಪಿಸಿಕೊಂಡು ಹೋಗಲಾರೆ."

ಮಹಾರಾಜ! ಭೂರಿಶ್ರವಸನ ಮಾತುಗಳನ್ನು ಕೇಳಿದ ಸಾತ್ಯಕಿಯು ನಸುನಗುತ್ತಾ ಯಥಾನುರೂಪವಾಗಿಯೇ ಉತ್ತರಿಸಿದನು :

"ಕೌರವೇಯ! ಯುದ್ಧದಲ್ಲಿ ನನಗೆ ಯಾರಿಂದಲೂ ಭಯವೆಂಬುದೇ ಇಲ್ಲ. ಕೇವಲ ಮಾತಿನಿಂದಲೇ ನನ್ನನ್ನು ಭಯಪಡಿಸಲು ಯಾರಿಂದಲೂ ಖಂಡಿತವಾಗಿಯೂ ಸಾಧ್ಯವಿಲ್ಲ. ಯಾರು ನನ್ನನ್ನು ನಿರಾಯುಧನನ್ನಾಗಿ ಮಾಡುತ್ತಾರೆಯೋ–ಅವರು ನನ್ನನ್ನು ಸಂಹರಿಸಬಲ್ಲರು ; ಯಾವನು ನನ್ನನ್ನು ಯುದ್ಧದಲ್ಲಿ ಸಂಹರಿಸಬಲ್ಲನೋ ಅವನು ಸದಾಕಾಲದಲ್ಲಿಯೂ ತನ್ನ ಶತ್ರುಗಳೆಲ್ಲರನ್ನೂ ಸಂಹರಿಸಲು ಸಮರ್ಥನು. ಹೆಚ್ಚು ಮಾತನಾಡುವುದರಿಂದ

ಪ್ರಯೋಜನವೇನು? ಭೂರಿಶ್ರವಸನೇ! ಯಾವುದಿದ್ದರೂ ಕಾರ್ಯದಲ್ಲಿ ತೋರಿಸು. ಶರದೃತುವಿನ ಮೇಘದ ಗರ್ಜನೆಯಂತೆ ನಿನ್ನ ಗರ್ಜನೆಯೂ ನಿಷ್ಫಲವಾದುದೇ ಸರಿ. ನಿನ್ನ ಗರ್ಜನೆಯನ್ನು ಕೇಳುತ್ತಿದ್ದಂತೆ–ನನಗೆ ತಡೆಯಲಾರದ ನಗುವೇ ಬರುತ್ತಿದೆ. ನಾನೂ ಸಹ ನಿನ್ನೊಡನೆ ಯುದ್ಧ ಮಾಡಬೇಕೆಂದೇ ಬಹಳ ಕಾಲದಿಂದ ಆಶಿಸಿದ್ದೆನು. ಆ ಯುದ್ಧವೀಗ ನಡೆದು ಹೋಗಲಿ. ನಿನ್ನೊಡನೆ ಯುದ್ಧಮಾಡಲಿಚ್ಛಿಸಿರುವ ನನ್ನ ಬುದ್ಧಿಯು ಅತ್ಯಂತ ಶೀಘ್ರವಾಗಿ ನಿನ್ನೊಡನೆ ಯುದ್ಧಮಾಡುವಂತೆ ಆತುರಪಡಿಸುತ್ತಿದೆ. ಪುರುಷಾಧಮನೇ! ನಾನು ಈಗ ನಿನ್ನನ್ನು ಸಂಹರಿಸದೇ ಇಲ್ಲಿಂದ ಹಿಂದಿರುಗುವುದಿಲ್ಲ."

ಮಹಾರಾಜ! ಈ ರೀತಿಯಲ್ಲಿ ಪರಸ್ಪರವದ್ವೈಷಿಗಳಾಗಿದ್ದ, ಪರಮ ಕ್ರುದ್ಧರಾಗಿದ್ದ, ನರಪುಂಗವರಾದ ಸಾತ್ಯಕಿ-ಭೂರಿಶ್ರವಸರು ಪರಸ್ಪರವಾಗಿ ವಾಗ್ಬಾಣಗಳಿಂದ ಕದನವನ್ನು ಪ್ರಾರಂಭಿಸಿ, ಅನಂತರ ಬಾಣಗಳ ಮೂಲಕ ವಾಗಿ ಒಬ್ಬರು ಮತ್ತೊಬ್ಬರನ್ನು ಗಾಯಗೊಳಿಸಲು ಉಪಕ್ರಮಿಸಿದರು. ಮಹಾಧನುಷ್ಮಂತರಾದ, ಅತುಲಪರಾಕ್ರಮಿಗಳಾದ 'ನಾ ಶೂರ-ತಾ ಶೂರ' ರೆಂದು ಪರಸ್ಪರವಾಗಿ ಸ್ಪರ್ಧಿಸುತ್ತಿದ್ದ ಪರಮಕ್ರುದ್ಧರಾಗಿದ್ದ ಸಾತ್ಯಕಿ-ಭೂರಿ ಶ್ರವಸರು–ಹೆಣ್ಣಾನೆಯ ಸಲುವಾಗಿ ಪರಸ್ಪರವಾಗಿ ಕಾದಾಡುವ ಮದಿಸಿದ ಎರಡು ಸಲಗಗಳಂತೆ–ಯುದ್ಧದಲ್ಲಿ ತೊಡಗಿದರು. ಎರಡು ಮೇಘಗಳೋ ಪಾದಿಯಲ್ಲಿ ಅರಿಂದಮರಾದ ಸಾತ್ಯಕಿ-ಭೂರಿಶ್ರವಸರು ಒಬ್ಬರು ಮತ್ತೊಬ್ಬರ ಮೇಲೆ ಘೋರವಾದ ಬಾಣಗಳ ಮಳೆಯನ್ನು ಸುರಿಸುತ್ತಿದ್ದರು. ಸೋಮ ದತ್ತನ ಮಗನಾದ ಭೂರಿಶ್ರವಸನು ಶೀಘ್ರವಾಗಿ ಹೋಗುವ ಬಾಣಗಳಿಂದ ಸಾತ್ಯಕಿಯನ್ನು ಮುಚ್ಚಿ ಅವನನ್ನು ಸಂಹಾರಮಾಡುವ ಆಶಯದಿಂದ ಪುನಃ ನಿಶಿತವಾದ ಬಾಣಗಳಿಂದ ಗಾಯಗೊಳಿಸಿದನು. ಶಿನಿಶ್ರೇಷ್ಠನಾದ ಸಾತ್ಯಕಿ ಯನ್ನು ಸಂಹಾರಮಾಡುವ ಆಶಯದಿಂದ ಭೂರಿಶ್ರವಸನು ಹತ್ತು ಬಾಣ ಗಳಿಂದ ಅವನನ್ನು ಗಾಯಗೊಳಿಸಿ ಪುನಃ ಇತರ ಅನೇಕ ಬಾಣಗಳನ್ನು ಸಾತ್ಯಕಿಯ ಮೇಲೆ ಪ್ರಯೋಗಿಸಿದನು. ಪ್ರಜಾನಾಥನೇ! ಭೂರಿಶ್ರವಸನು ಪ್ರಯೋಗಿಸಿದ ತೀಕ್ಷ್ಣವಾದ ಬಾಣಗಳು ತನ್ನ ಸಮೀಪಕ್ಕಿನ್ನೂ ಬರುವುದ

ರೊಳಗಾಗಿಯೇ ಅವುಗಳಿನ್ನೂ ಅಂತರಿಕ್ಷದಲ್ಲಿದ್ದಾಗಲೇ ಸಾತ್ಯಕಿಯು ಅಸ್ತ್ರ ಮಾಯೆಯಿಂದ (ಅಸ್ತ್ರವಿದ್ಯಾಪ್ರಾವೀಣ್ಯದಿಂದ) ನುಂಗಿಹಾಕಿದನು. ಕುರು ವಂಶಕ್ಕೂ-ವೃಷ್ಣಿವಂಶಕ್ಕೂ ಯಶಸ್ಸನ್ನುಂಟುಮಾಡುವವರಾಗಿದ್ದ, ಉತ್ತಮ ವಾದ ಕುಲದಲ್ಲಿ ಜನಿಸಿದ್ದ, ವೀರರಾಗಿದ್ದ ಸಾತ್ಯಕಿ-ಭೂರಿಶ್ರವಸರು ಪ್ರತ್ಯೇಕ-ಪ್ರತ್ಯೇಕವಾಗಿ ಒಬ್ಬರು ಮತ್ತೊಬ್ಬರ ಮೇಲೆ ಬಾಣಗಳ ಮಳೆಗರೆದರು. ಎರಡು ಹುಲಿಗಳು ಉಗುರುಗಳಿಂದಲೇ ಪರಸ್ಪರವಾಗಿ ಪರಚಾಡುತ್ತಾ ಜಗಳ ವಾಡುವಂತೆ—ಎರಡು ಮಹಾಗಜಗಳು ದಂತಗಳಿಂದಲೇ ಪರಸ್ಪರವಾಗಿ ತಿವಿ ದಾಡುತ್ತಾ ಸೆಣೆಸಾಡುವಂತೆ—ಸಾತ್ಯಕಿ-ಭೂರಿಶ್ರವಸರು ರಥಶಕ್ತಿಗಳಿಂದಲೂ ಮತ್ತು ಬಾಣಗಳಿಂದಲೂ ಒಬ್ಬರು ಮತ್ತೊಬ್ಬರನ್ನು ಕ್ಷತ-ವಿಕ್ಷತಗೊಳಿಸು ತ್ತಿದ್ದರು. ಪ್ರಾಣಗಳನ್ನೇ ಪಣವನ್ನಾಗಿಟ್ಟು ಯುದ್ಧವೆಂಬ ಜೂಜಾಟದಲ್ಲಿ ತೊಡಗಿದ್ದ ಸಾತ್ಯಕಿ-ಭೂರಿಶ್ರವಸರು ಒಬ್ಬರು ಮತ್ತೊಬ್ಬರ ಶರೀರವನ್ನು ಬಾಣಗಳಿಂದ ಭೇದಿಸುತ್ತಾ, ರಕ್ತವನ್ನು ಧಾರಾಕಾರವಾಗಿ ಸುರಿಸುತ್ತಾ ಅನ್ಯೋನ್ಯವಾಗಿ ದಾಳಿನಡೆಸುತ್ತಿದ್ದರು. ಕುರುಕುಲದ ಮತ್ತು ವೃಷ್ಣಿಕುಲದ ಯಶಸ್ಸನ್ನು ವೃದ್ಧಿಗೊಳಿಸುವುದರಲ್ಲಿ ಆಸಕ್ತರಾಗಿದ್ದ, ಉತ್ತಮವಾದ (ಧರ್ಮಕ್ಕೆ ಅನುಸಾರವಾದ) ರೀತಿಯಲ್ಲಿ ಯುದ್ಧಮಾಡುತ್ತಿದ್ದ ಭೂರಿ ಶ್ರವಸ-ಶೈನೇಯರು—ಯೂಥಪತಿಗಳಾದ ಎರಡು ಮದಿಸಿದ ಸಲಗಗಳೋ ಪಾದಿಯಲ್ಲಿ—ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ಶ್ರೇಷ್ಠವಾದ ಬ್ರಹ್ಮ ಪದವಿಯ ಪ್ರಾಪ್ತಿಯನ್ನೇ ಮುಖ್ಯವಾದ ಧ್ಯೇಯವನ್ನಾಗಿಟ್ಟುಕೊಂಡು ಯುದ್ಧಮಾಡುತ್ತಿದ್ದ ಸೌಮದತ್ತಿ—ಸಾತ್ಯಕಿಯರು ಸ್ವಲ್ಪ ಹೊತ್ತಿನವರೆಗೆ ಪರಸ್ಪರವಾಗಿ ಗರ್ಜನ-ತರ್ಜನಗಳನ್ನು ಮಾಡುತ್ತಿದ್ದರು. ಧೃತರಾಷ್ಟ್ರನ ಮಕ್ಕಳು ಪರಮಹೃಷ್ಟರಾಗಿ ನೋಡುತ್ತಿರುವಂತೆಯೇ ಶೈನೇಯ-ಭೂರಿಶ್ರವಸರು ಬಾಣಗಳ ಮಳೆಯನ್ನು ಅನ್ಯೋನ್ಯವಾಗಿ ಸುರಿಸುತ್ತಿದ್ದರು.

ಹೆಣ್ಣಾನೆಯ ಸಲುವಾಗಿ ಗುಂಪುಗಳ ಒಡೆತನವನ್ನು ಹೊಂದಿರುವ ಎರಡು ಸಲಗಗಳು ಸೆಣೆಸಾಡುವಂತೆ—ಪರಸ್ಪರವಾಗಿ ಸೆಣೆಸಾಡುತ್ತಿದ್ದ ಯೋಧನಾಯಕರಾದ ಸಾತ್ಯಕಿ-ಭೂರಿಶ್ರವಸರನ್ನು ಎಲ್ಲರೂ ನೋಡುತ್ತಾ ನಿಂತುಬಿಟ್ಟರು. ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ರಥದ ಕುದುರೆಗಳನ್ನು ಸಂಹರಿಸಿದರು. (ಇಬ್ಬರೂ ರಥಹೀನರಾದರು.) ಒಬ್ಬರು ಮತ್ತೊಬ್ಬರ

ಧನುಸ್ಸನ್ನು ಕತ್ತರಿಸಿದರು. (ಇಬ್ಬರೂ ಧನುಸ್ಸುಗಳಿಂದಲೂ ವಿಹೀನರಾದರು.) ರಥಗಳಿಂದಲೂ, ಧನುಸ್ಸುಗಳಿಂದಲೂ ವಿಹೀನರಾದ ಇಬ್ಬರೂ ಖಡ್ಗ ಯುದ್ಧಕ್ಕೆ ಸಿದ್ಧರಾಗಿ ನಿಂತರು. ಎತ್ತಿನ ಚರ್ಮದಿಂದ ಮಾಡಿದ್ದ, ಚಿತ್ರಿತ ವಾಗಿದ್ದ, ವಿಶಾಲವಾಗಿಯೂ, ಶುಭಪ್ರದವಾಗಿಯೂ ಇದ್ದ ಗುರಾಣಿಗಳನ್ನು ಇಬ್ಬರೂ ಹಿಡಿದು ಕತ್ತಿಗಳನ್ನು ಒರೆಯಿಂದ ತೆಗೆದು ಖಡ್ಗಯುದ್ಧದ ವಿನ್ಯಾಸ



ವನ್ನಿಡುತ್ತಾ ರಣಾಂಗಣದಲ್ಲಿ ಸಂಚರಿಸತೊಡಗಿದರು. ಖಡ್ಗಪಾಣಿಗಳಾಗಿದ್ದ, ವಿಚಿತ್ರವಾದ ಕವಚಗಳನ್ನು ಧರಿಸಿದ್ದ, ಸುವರ್ಣಮಯವಾದ ಅಂಗದಗಳನ್ನು ತೊಟ್ಟಿದ್ದ, ಶತ್ರುಮರ್ದನರಾದ ಸಾತ್ಯಕಿ-ಭೂರಿಶ್ರವಸರು ಪರಮಕ್ರುದ್ಧರಾಗಿ ನಾನಾವಿಧವಾದ ಮಾರ್ಗಗಳನ್ನು (ವರಸೆಗಳನ್ನು) ತೋರಿಸುತ್ತಾ, ಮಂಡಲ ಗಳನ್ನೂ (ಪದವಿನ್ಯಾಸಗಳನ್ನು) ಇಡುತ್ತಾ, ಬಾರಿ-ಬಾರಿಗೂ ಒಬ್ಬರು

ಮತ್ತೊಬ್ಬರನ್ನು ಪ್ರಹರಿಸುತ್ತಿದ್ದರು. ಅರಿಂದಮರಾದ, ಯಶೋವಂತರಾದ ವೃಷ್ಣಿ-ಕೌರವವೀರರಿಬ್ಬರೂ ಭ್ರಾಂತ, ಉದ್ಭ್ರಾಂತ, ಆವಿದ್ಧ, ಆಪ್ಲುತ, ವಿಪ್ಲುತ, ಸೃತ, ಸಂಪಾತ, ಸಮುದೀರ್ಣ–ಇವೇ ಮುಂತಾದ ನಡಿಗೆಗಳನ್ನು ಪ್ರದರ್ಶಿಸುತ್ತಾ ಕತ್ತಿಗಳಿಂದ ಒಬ್ಬರು ಮತ್ತೊಬ್ಬರನ್ನು ರಂಧ್ರಾನ್ವೇಷಣೆಮಾಡಿ ಪ್ರಹರಿಸುತ್ತಿದ್ದರು. ಆ ಇಬ್ಬರು ಯೋಧರೂ ಒಬ್ಬರು ಮತ್ತೊಬ್ಬರ *ಛಿದ್ರವನ್ನೇ ನಿರೀಕ್ಷಿಸುತ್ತಿದ್ದರು. ವಿಚಿತ್ರರೀತಿಯಲ್ಲಿ ನೆಗೆದಾಡುತ್ತಿದ್ದರು. ತಮ್ಮ ಹಸ್ತಲಾಘವ ವನ್ನೂ ಮತ್ತು ಸಾಮರ್ಥ್ಯವನ್ನೂ ತೋರುತ್ತಾ ಸಾತ್ಯಕಿ-ಭೂರಿಶ್ರವಸರು ಖಡ್ಗವಿದ್ಯೆಯಲ್ಲಿ ತಮಗಾಗಿದ್ದ ಶಿಕ್ಷಣವನ್ನು ಪ್ರದರ್ಶಿಸುತ್ತಿದ್ದರು. ಈ ರೀತಿಯಲ್ಲಿ ಯೋಧಶ್ರೇಷ್ಠರಾದ ಇಬ್ಬರೂ ಒಬ್ಬರು ಮತ್ತೊಬ್ಬರನ್ನು ಇಲ್ಲಿಂದಲ್ಲಿಗೂ– ಅಲ್ಲಿಂದಿಲ್ಲಿಗೂ ನಡಿಗೆಗಳ ಮೂಲಕವಾಗಿ ಸೆಳೆದಾಡುತ್ತಾ ಯುದ್ಧಮಾಡುತ್ತಿದ್ದರು.

ಮಹಾರಾಜ! ಈ ರೀತಿಯಲ್ಲಿ ಸಾತ್ಯಕಿ-ಭೂರಿಶ್ರವಸರು ಶಸ್ತ್ರಯುದ್ಧ ದಿಂದ ವಿರತರಾಗಿ ಸರ್ವಸೈನಿಕರೂ ನೋಡುತ್ತಿದ್ದಂತೆಯೇ ಮುಹೂರ್ತ ಪರ್ಯಂತವಾಗಿ ವಿಶ್ರಮಿಸಿಕೊಂಡರು. ಅನಂತರ ಸ್ವಲ್ಪಹೊತ್ತು ಕತ್ತಿಗಳಿಂದ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಾ ಅದೇ ಕತ್ತಿಗಳಿಂದ ನೂರಾರು ಚಂದ್ರರ ಚಿಹ್ನೆಗಳಿಂದ ಶೋಭಿತವಾಗಿದ್ದ ಗುರಾಣಿಗಳನ್ನು ಕತ್ತರಿಸಿದರು. ಪುರುಷವ್ಯಾಘ್ರರಾದ ಶೈನೇಯ-ಸೌಮದತ್ತಿಗಳು ಹೀಗೆ ಒಬ್ಬರ ಗುರಾಣಿ ಯನ್ನು ಮತ್ತೊಬ್ಬರು ಕತ್ತರಿಸಿ, ಗುರಾಣಿಗಳಿಲ್ಲದೇ ಯುದ್ಧಮಾಡಲು ಸಾಧ್ಯವಾಗದೇ ಕತ್ತಿಗಳನ್ನೆಸೆದು ಬಾಹುಯುದ್ಧವನ್ನು ಪ್ರಾರಂಭಿಸಿದರು. ವಿಶಾಲವಾದ ವಕ್ಷಃಸ್ಥಳವನ್ನು ಹೊಂದಿದ್ದ, ನೀಳವಾದ ಭುಜಗಳನ್ನು ಹೊಂದಿದ್ದ, ಮಲ್ಲಯುದ್ಧದಲ್ಲಿ ಅತ್ಯಂತ ಕುಶಲರಾಗಿದ್ದ ಆ ವೀರರು ಕಬ್ಬಿಣದ ಪರಿಘಾಯುಧಗಳಂತೆಯೇ ಇದ್ದ ತಮ್ಮ ಬಾಹುಗಳಿಂದ ಒಬ್ಬರು ಮತ್ತೊಬ್ಬರನ್ನು ಪ್ರಹರಿಸಲು ಉಪಕ್ರಮಿಸಿದರು. ಮಲ್ಲ

---

* ಶಾಸ್ತ್ರೋಕ್ತರೀತಿಯಲ್ಲಿ ಕತ್ತಿಯನ್ನು ವರಸೆ-ವರಸೆಯಾಗಿ ತಿರುಗಿಸುತ್ತಿರುವಾಗ ಒಬ್ಬರು ಮತ್ತೊಬ್ಬರನ್ನು ಪ್ರಹರಿಸಲು ಸಾಧ್ಯವೇ ಆಗುವುದಿಲ್ಲ. ಪ್ರಹರಿಸಬೇಕಾದರೆ ಎದುರಾಳಿಯನ್ನು ಭ್ರಾಂತಗೊಳಿಸಿ ಅವನ ನಡಿಗೆಯ ಕ್ರಮವನ್ನು ತಪ್ಪಿಸಿ ಅಥವಾ ವರಸೆಯ ಕ್ರಮವನ್ನು ತಪ್ಪಿಸಿ ಪ್ರಹರಿಸಬೇಕು. ಇದಕ್ಕೆ 'ಛಿದ್ರಾನ್ವೇಷಣ' ಎಂದು ಹೇಳುತ್ತಾರೆ.

ಯುದ್ಧಾಭ್ಯಾಸದ ಬಲದಿಂದ ಪ್ರದರ್ಶಿತವಾಗುತ್ತಿದ್ದ ಸಾತ್ಯಕಿ-ಭೂರಿಶ್ರವಸರ *ಭುಜಾಘಾತ, ನಿಗ್ರಹ ಮತ್ತು ಪ್ರಗ್ರಹ–ಇವೇ ಮುಂತಾದ ಮಲ್ಲಯುದ್ಧದ ವರಸೆಗಳು ಪ್ರೇಕ್ಷಕರಾಗಿ ನಿಂತಿದ್ದ ಸರ್ವಯೋಧರಿಗೂ ಹರ್ಷದಾಯಕ ವಾಗಿದ್ದುವು. ನರಶ್ರೇಷ್ಠರಾದ ಸಾತ್ಯಕಿ-ಭೂರಿಶ್ರವಸರು ಯುದ್ಧಮಾಡುತ್ತಿದ್ದಾಗ ವಜ್ರಾಯುಧಕ್ಕೂ, ಪರ್ವತಕ್ಕೂ ಸಂಘರ್ಷವುಂಟಾದಾಗ ಆಗುವ ಶಬ್ದದಂತೆ–ಭಯಂಕರವಾದ ಮಹಾಶಬ್ದವುಂಟಾಯಿತು. ಎರಡು ಮದಿಸಿದ ಆನೆಗಳು ದಂತಗಳ ಅಗ್ರಭಾಗಗಳಿಂದ ತಿವಿದಾಡುವಂತೆ, ದೊಡ್ಡ ಹೋರಿಗಳು ಕೊಂಬುಗಳಿಂದ ಕಾಳಗವಾಡುವಂತೆ–ಕೆಲವು ಸಮಯಗಳಲ್ಲಿ ಭುಜಪಾಶ ಗಳಿಂದ ಒಬ್ಬರು ಮತ್ತೊಬ್ಬರನ್ನು ಬಂಧಿಸುತ್ತಾ, ಕೆಲವು ಸಮಯಗಳಲ್ಲಿ ತಲೆಗಳನ್ನು ಡಿಕ್ಕಿ ಹೊಡೆಸುತ್ತಾ, ಕೆಲವು ಸಮಯಗಳಲ್ಲಿ ಈಟಿ ಮತ್ತು ಅಂಕುಶಪ್ರಹಾರಗಳಿಗೆ ಸಮಾನವಾಗಿ ಒಬ್ಬರು ಮತ್ತೊಬ್ಬರನ್ನು ಮುಷ್ಟಿ ಗಳಿಂದಲೇ ತಿವಿದಾಡುತ್ತಾ, [1]ಪಾದಬಂಧ, ಉದರಬಂಧ, ಉದ್ಭ್ರಮಣ, ಗತ, ಪ್ರತ್ಯಾಗತ, ಆಕ್ಷೇಪ, ಪಾತನ, ಉತ್ಥಾನ ಮತ್ತು ಸಂಪ್ಲುತ–ಇವೇ ಮೊದಲಾದ ಮಲ್ಲಯುದ್ಧದ ವರಸೆಗಳನ್ನು ಪ್ರದರ್ಶಿಸುತ್ತಾ, ಮಹಾತ್ಮರಾದ ಕುರು-ಸಾತ್ವತಶ್ರೇಷ್ಠರಾದ ಭೂರಿಶ್ರವಸ-ಸಾತ್ಯಕಿಗಳು ಬಾಹುಯುದ್ಧವನ್ನು ಮಾಡಿದರು.

ಮಹಾರಾಜ! ಈ ರೀತಿಯಲ್ಲಿ ಮಹಾಬಲರಾದ ಸಾತ್ಯಕಿ-ಭೂರಿ ಶ್ರವಸರು ಯುದ್ಧಮಾಡುತ್ತಾ ಮಲ್ಲಯುದ್ಧದಲ್ಲಿರುವ ಮೂವತ್ತೆರಡು ಕರಣ ಗಳನ್ನೂ (ವಿಧಾನಗಳನ್ನೂ) ಪ್ರದರ್ಶಿಸಿದರು. ಆಯುಧಗಳೆಲ್ಲವನ್ನೂ ಕಳೆದುಕೊಂಡ ಸಾತ್ವತನು ಭೂರಿಶ್ರವಸನೊಡನೆ ಮಲ್ಲಯುದ್ಧವನ್ನು ಮಾಡುತ್ತಿರಲಾಗಿ ವಾಸುದೇವನು ಅರ್ಜುನನಿಗೆ ಹೇಳಿದನು : “ಅರ್ಜುನ! ಸರ್ವಧನುಷ್ಮಂತರಿಗೂ ಶ್ರೇಷ್ಠನಾದ ಸಾತ್ಯಕಿಯು ರಥವೇ ಇಲ್ಲದೇ ಶತ್ರುವಿ

---

* ಭುಜಾಘಾತಃ = ಬಲಗೈಯಿಂದ ಎಡಭುಜವನ್ನೂ ಎಡಗೈಯಿಂದ ಬಲಭುಜವನ್ನೂ ತಟ್ಟಿಕೊಳ್ಳುವುದು. ನಿಗ್ರಹಃ = ಎರಡು ಕೈಗಳಿಂದಲೂ ಎದುರಾಳಿಯ ಎರಡು ಕೈಗಳನ್ನೂ ಹಿಡಿದುಕೊಳ್ಳುವುದು. ಪ್ರಗ್ರಹಃ = ಕುತ್ತಿಗೆಗೆ ಕೈಹಾಕಿ ಬಗ್ಗಿಸುವುದು.

1 ಪಾದಬಂಧಃ = ತನ್ನ ಕಾಲನ್ನು ಎದುರಾಳಿಯ ಕಾಲೊಳಕ್ಕೆ ಸರಪಣಿಯಂತೆ ತೊಡಗಿಸುವುದು. ಉದರಬಂಧಃ = ಎದುರಾಳಿಯ ಹೊಟ್ಟೆಯನ್ನು ಎರಡು ಕಾಲುಗಳ ಮಧ್ಯದಲ್ಲಿ ಸಿಕ್ಕಿಸಿಕೊಳ್ಳುವುದು. ಪಾದೋದರವಿಬನ್ಧೈಶ್ಚ ಎಂಬ ಮೂಲಕ್ಕೆ = ಪಾದಾಭ್ಯಾ

ನೊಡನೆ ಯುದ್ಧಮಾಡುತ್ತಿರುವುದನ್ನು ನೋಡು. ಪಾಂಡವ! ಕೌರವಸೈನ್ಯವನ್ನು ಭೇದಿಸಿಕೊಂಡು ನಿನ್ನ ಹಿಂದೆಯೇ ಇವನು ವ್ಯೂಹವನ್ನು ಪ್ರವೇಶಿಸಿದನು. ಮಹಾವೀರ್ಯರಾದ ಎಲ್ಲ ಭರತವಂಶೀಯಯೋಧರೊಡನೆಯೂ ಇವನು ಯುದ್ಧಮಾಡಿದನು. (ಯುದ್ಧಮಾಡಿ ಜಯಗಳಿಸಿದನು.) ಅನೇಕ ಮಹಾಯೋಧರೊಡನೆ ಮಾಡಿದ ಯುದ್ಧದಿಂದ ಬಹಳವಾಗಿ ಆಯಾಸ ಗೊಂಡಿದ್ದ ಮತ್ತು ನಿನ್ನ ಕಡೆಗೇ ಬರುತ್ತಿದ್ದ ಸಾತ್ಯಕಿಯನ್ನು ಯುದ್ಧಾ ಕಾಂಕ್ಷಿಯಾದ, ಯಜ್ಞದಲ್ಲಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಕ್ಷಿಣೆಗಳನ್ನು ಕೊಡುವ ಸ್ವಭಾವವುಳ್ಳ ಭೂರಿಶ್ರವಸನು ಎದುರಿಸಿದನು. ಇವರಿಬ್ಬರ ಯುದ್ಧವನ್ನು ಈ ಸಮಯದಲ್ಲಿ ನಾನು ಸಮಾನವಾದ ಬಲ-ಪರಾಕ್ರಮ ವಿರುವವರ ಯುದ್ಧವೆಂದು ಭಾವಿಸುವುದಿಲ್ಲ."

ಮಹಾರಾಜ! ಆ ಸಮಯದಲ್ಲಿ ಯುದ್ಧದುರ್ಮದನಾದ ಕ್ರುದ್ಧನಾದ ಭೂರಿಶ್ರವಸನು ಸಾತ್ಯಕಿಯನ್ನು–ಮದಿಸಿದ ಸಲಗವು ಮತ್ತೊಂದು ಮದಿಸಿದ ಸಲಗವನ್ನು ಪ್ರಹರಿಸುವಂತೆ–ಪ್ರಯತ್ನಪೂರ್ವಕವಾಗಿ ಪ್ರಹರಿಸಿದನು. ಅನತಿ ದೂರದಲ್ಲಿಯೇ ರಥದಲ್ಲಿ ಕುಳಿತು ಕ್ರುದ್ಧರಾಗಿದ್ದ, ಯೋಧಮುಖ್ಯರಾಗಿದ್ದ ಕೃಷ್ಣಾರ್ಜುನರು ಸಾತ್ಯಕಿ-ಭೂರಿಶ್ರವಸರ ಯುದ್ಧವನ್ನು ನೋಡುತ್ತಿದ್ದರು. ಆ ಸಮಯದಲ್ಲಿ ಪುನಃ ಶ್ರೀಕೃಷ್ಣನು ಮಹಾಬಾಹುವಾದ ಅರ್ಜುನನಿಗೆ ಹೇಳಿದನು : "ಅರ್ಜುನ! ವೃಷ್ಣಿ ಮತ್ತು ಅಂಧಕವಂಶೀಯರಲ್ಲಿ ಶ್ರೇಷ್ಠನಾದ ಸಾತ್ಯಕಿಯು ಭೂರಿಶ್ರವಸನ ಹಿಡಿತಕ್ಕೆ ಸಿಕ್ಕಿಬಿದ್ದಿರುವುದನ್ನು ನೋಡು. ಸಾಮಾನ್ಯರಿಂದ ಮಾಡಲು ಅಸಾಧ್ಯವಾದ, ಸುದುಷ್ಕರವಾದ ಸಾಹಸ ಕರ್ಮವನ್ನು ಮಾಡಿ ಕಟ್ಟಕಡೆಗೆ ಸೋತು ಸೊಪ್ಪಾಗಿರುವ ಸಮಯದಲ್ಲಿ ಭೂರಿಶ್ರವಸನ ಕೈಗೆ ಸಿಕ್ಕಿ ಭೂಮಿಗೆ ಬೀಳುತ್ತಿರುವ ನಿನ್ನ ಪ್ರಿಯಶಿಷ್ಯನಾದ,

---

**ಮುದರ ಕ್ರೋಡೀಕರಣೈಃ** = ಎರಡುಕಾಲುಗಳಿಂದಲೂ ಹೊಟ್ಟೆಯನ್ನು ಅಪ್ಪಿಕೊಳ್ಳು ವುದು–ಎಂದು ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ. **ಉದ್ಭ್ರಮಣಃ** = ಭೂಮಿಯ ಮೇಲೆ ತಿರುಗಿಸುವುದು. **ಗತಃ**= ಎದುರಾಳಿಯ ಕಡೆಗೆ ಮುನ್ನುಗ್ಗಿ ಹೋಗುವುದು. **ಪ್ರತ್ಯಾಗತಃ** = ಹಿಂದಕ್ಕೆ ಬರುವುದು. **ಆಕ್ಷೇಪಃ** = ನೆಲಕ್ಕೆ ಅಪ್ಪಳಿಸುವುದು. **ಪಾತನಃ** = ನೆಲದ ಮೇಲೆ ಬೀಳಿಸುವುದು. **ಉತ್ಥಾನಃ** = ಎದ್ದು ನಿಲ್ಲುವುದು. **ಸಂಪ್ಲುತಃ** = ನೆಗೆಯುವುದು.

ವೀರನಾದ ಸಾತ್ಯಕಿಯನ್ನು ಕೂಡಲೇ ರಕ್ಷಿಸು. ಪುರುಷವ್ಯಾಘ್ರನೇ! ಅರ್ಜುನ! ಪ್ರಭೋ! ನಿನ್ನ ಸಲುವಾಗಿ ಶ್ರಮಿಸುತ್ತಿರುವ ವೀರಶ್ರೇಷ್ಠನಾದ ಈ ಸಾತ್ಯಕಿಯು ಯಜ್ಞಶೀಲನಾದ ಭೂರಿಶ್ರವಸನ ವಶನಾಗದಂತೆ ಶೀಘ್ರವಾಗಿ ಪ್ರಯತ್ನಿಸು."

ಶ್ರೀಕೃಷ್ಣನ ಮಾತುಗಳನ್ನು ಕೇಳಿ ಪ್ರಸನ್ನಚಿತ್ತನಾದ ಅರ್ಜುನನು ವಾಸುದೇವನೊಡನೆ ಹೇಳಿದನು : "ಸಿಂಹಗಳ ಸಮೂಹದ ನಾಯಕಸಿಂಹ ವೊಂದು ಮದಿಸಿದ ಮಹಾಗಜದೊಂದಿಗೆ ಅರಣ್ಯದಲ್ಲಿ ಸೆಣೆಸಾಡುವಂತೆ–ಕುರುಶ್ರೇಷ್ಠನಾದ ಭೂರಿಶ್ರವಸನು ವೃಷ್ಣಿವಂಶದ ಶ್ರೇಷ್ಠವೀರನಾದ ಸಾತ್ಯಕಿ ಯೊಡನೆ ರಣಕ್ರೀಡೆಯಾಡುತ್ತಿರುವುದನ್ನು ನೋಡು, ಕೃಷ್ಣ!"

ಧೃತರಾಷ್ಟ್ರಮಹಾರಾಜ! ಹೀಗೆ ಪಾಂಡುವಿನ ಮಗನಾದ ಧನಂಜಯನು ಶ್ರೀಕೃಷ್ಣನೊಡನೆ ಮಾತನಾಡುತ್ತಿರಲಾಗಿ, ಸೈನಿಕರ ಸಮೂಹದಲ್ಲಿ ಹಾಹಾಕಾರವುಂಟಾಯಿತು. ಮಹಾಬಾಹುವಾದ ಭೂರಿಶ್ರವಸನು ಮಲ್ಲಯುದ್ಧದ ಸಮಯದಲ್ಲಿ ಸಾತ್ಯಕಿಯನ್ನು ಮೇಲಕ್ಕೆತ್ತಿ ರಭಸದಿಂದ ನೆಲಕ್ಕಪ್ಪಳಿಸಿದನು. ಯಜ್ಞಗಳಲ್ಲಿ ಬಹಳವಾಗಿ ದಕ್ಷಿಣೆಗಳನ್ನು ಕೊಡುವ ಕುರುಶ್ರೇಷ್ಠನಾದ ಸೌಮದತ್ತಿಯು–ಸಿಂಹವು ಮದಿಸಿದ ಆನೆಯನ್ನು ಸೆಳೆದಾಡುವಂತೆ–ಸಾತ್ವತಪ್ರವರನಾದ ಸಾತ್ಯಕಿಯನ್ನು ನೆಲದ ಮೇಲೆ ಅತ್ತಲಿತ್ತ ಸೆಳೆದಾಡುತ್ತಾ ಬಹಳವಾಗಿ ಶೋಭಿಸಿದನು. (ಆ ಸಮಯದಲ್ಲಿ ಅವನ ಮುಖವು ಪ್ರಫುಲ್ಲವಾಗಿದ್ದಿತು.) ಅನಂತರ ಭೂರಿಶ್ರವಸನು ಒರೆಯಿಂದ ಕತ್ತಿಯನ್ನು ಹೊರತೆಗೆದು ಸಾತ್ಯಕಿಯ ಮುಡಿಯನ್ನು ಹಿಡಿದುಕೊಂಡು ಕಾಲಿನಿಂದ ಸಾತ್ಯಕಿಯ ಎದೆಗೊದ್ದನು. ಭೂರಿಶ್ರವಸನು ಕುಂಡಲಯುಕ್ತವಾಗಿದ್ದ ಸಾತ್ಯಕಿಯ ಶಿರಸ್ಸನ್ನು ಶರೀರದಿಂದ ಪ್ರತ್ಯೇಕಿಸಲು ಕತ್ತಿಯನ್ನು ಮೇಲೆತ್ತಿದನು. ಆ ಕ್ಷಣದಲ್ಲಿಯೇ ಸಾತ್ಯಕಿಯು ಕತ್ತಿಯ ಪೆಟ್ಟು ಶಿರಸ್ಸಿಗೆ ಬೀಳದ ರೀತಿಯಲ್ಲಿ ತಲೆಯನ್ನು ವೇಗವಾಗಿ ತಿರುಗಿಸಲು ಉಪಕ್ರಮಿಸಿದನು. ಕುಂಬಾರನು ಗೂಟದಿಂದ ಕೂಡಿದ ಚಕ್ರವನ್ನು ಗೂಟದ ಮೂಲಕವಾಗಿ ತಿರುಗಿಸುವಂತೆ–ಮುಡಿಯನ್ನು ಹಿಡಿದಿದ್ದ ಭೂರಿಶ್ರವಸನ ಬಾಹುವಿನ ಸಹಿತವಾಗಿ ಸಾತ್ಯಕಿಯು ತನ್ನ ತಲೆಯನ್ನು ಗರ-ಗರನೆ ತಿರುಗಿಸಿದನು. ಆ ರೀತಿಯಲ್ಲಿ ಕೇಶಗ್ರಹಣದ ಮೂಲಕವಾಗಿ ಸೆಳೆದಾಡ

ಲ್ಪಡುತ್ತಿದ್ದ ಸಾತ್ಯಕಿಯನ್ನು ನೋಡಿ ವಾಸುದೇವನು ಪುನಃ ಅರ್ಜುನನಿಗೆ ಹೇಳಿದನು :

**ಪಶ್ಯ ವೃಷ್ಣ್ಯನ್ಧಕವ್ಯಾಘ್ರಂ ಸೌಮದತ್ತಿವಶಂ ಗತಮ್ ।**
**ತವ ಶಿಷ್ಯಂ ಮಹಾಬಾಹೋ ಧನುಷ್ಯನವರಂ ತ್ವಯಾ ॥೬೪॥**

"ಮಹಾಬಾಹುವೇ! ಅರ್ಜುನ! ವೃಷ್ಣಿ ಮತ್ತು ಅಂಧಕವಂಶೀಯರಲ್ಲಿ ವ್ಯಾಘ್ರಪ್ರಾಯನಾದ, ನಿನ್ನ ಶಿಷ್ಯನಾದ, ಧನುರ್ವಿದ್ಯೆಯಲ್ಲಿ ನಿನಗೆ ಕಡಿಮೆ ಯವನಲ್ಲದ ಸಾತ್ಯಕಿಯು ಭೂರಿಶ್ರವಸನ ಹಿಡಿತಕ್ಕೆ ಸಿಕ್ಕಿಬಿದ್ದಿರುವುದನ್ನು ನೋಡು.

**ಅಸತ್ಯೋ ವಿಕ್ರಮಃ ಪಾರ್ಥ ಯತ್ರ ಭೂರಿಶ್ರವಾ ರಣೇ ।**
**ವಿಶೇಷಯತಿ ವಾರ್ಷ್ಣೇಯಂ ಸಾತ್ಯಕಿಂ ಸತ್ಯವಿಕ್ರಮಮ್ ॥೬೫॥**

ಪಾರ್ಥ! ಒಂದು ವೇಳೆ ಭೂರಿಶ್ರವಸನೇನಾದರೂ ವೃಷ್ಣಿವಂಶ ಸಂಭೂತನಾದ, ಸತ್ಯವಿಕ್ರಮನಾದ ಸಾತ್ಯಕಿಯನ್ನು ಅತಿಶಯಿಸಿಬಿಟ್ಟರೆ–ಆಗ ಪರಾಕ್ರಮವೆಂಬುದೇ ಅಸತ್ಯವಾಗಿಬಿಡುತ್ತದೆ. 'ಪರಾಕ್ರಮ' ಎಂಬುದಕ್ಕೆ ಬೆಲೆಯೇ ಇಲ್ಲದಂತಾಗುತ್ತದೆ. ಸಾತ್ಯಕಿಯನ್ನು ಯಾವಾಗಲೂ ಸತ್ಯಪರಾ ಕ್ರಮೀ–ಎಂದೇ ಕರೆಯುತ್ತಾರೆ. ಅವನೀಗ ಸೋತುಹೋದರೆ ಅವನು ಅಸತ್ಯಪರಾಕ್ರಮನಾಗುತ್ತಾನೆ. ಅರ್ಥಾತ್ ಪರಾಕ್ರಮವೆಂಬುದೇ ಮಿಥ್ಯೆಯಾಗಿ ಬಿಡುತ್ತದೆ. ಹೀಗಾಗಲು ಅವಕಾಶಕೊಡಬಾರದು. ಸಾತ್ಯಕಿಗೆ ಸತ್ಯಪರಾಕ್ರಮ ನೆಂಬ ಅನ್ವರ್ಥನಾಮವು ಸ್ಥಿರವಾಗಿ ಉಳಿಯುವಂತೆ ಮಾಡಬೇಕು."

ಮಹಾರಾಜ! ಮಹಾಬಾಹುವಾದ ಶ್ರೀಕೃಷ್ಣನು ಹೀಗೆ ಹೇಳಿದ ನಂತರವೂ ಅರ್ಜುನನು ಭೂರಿಶ್ರವಸನನ್ನೇ ಮನಸ್ಸಿನಲ್ಲಿ ಬಹಳವಾಗಿ ಶ್ಲಾಘಿಸಿದನು :

**ವಿಕರ್ಷನ್ಸಾತ್ವತಶ್ರೇಷ್ಠಂ ಕ್ರೀಡಮಾನ ಇವಾಹವೇ ।**
**ಸಂಹರ್ಷಯತಿ ಮಾಂ ಭೂಯಃ ಕುರೂಣಾಂ ಕೀರ್ತಿವರ್ಧನಃ ॥೬೭॥**
**ಪ್ರವರಂ ವೃಷ್ಣಿವೀರಾಣಾಂ ಯನ್ನ ಹನ್ಯಾದ್ಧಿ ಸಾತ್ಯಕಿಮ್ ।**
**ಮಹಾದ್ವಿಪಮಿವಾರಣ್ಯೇ ಮೃಗೇನ್ದ್ರ ಇವ ಕರ್ಷತಿ ॥೬೮॥**

"ಕುರುಕುಲದ ಕೀರ್ತಿವರ್ಧನನಾದ ಭೂರಿಶ್ರವಸನು ರಣರಂಗದಲ್ಲಿ ಸಾತ್ವತಕುಲಶ್ರೇಷ್ಠನಾದ ಸಾತ್ಯಕಿಯನ್ನು ಸೆಳೆದಾಡುತ್ತಾ ರಣಕ್ರೀಡೆಯಾಡು

ತ್ತಿರುವಂತೆ ಕಾಣುತ್ತಿದ್ದಾನೆ. ಮೃಗಗಳಿಗೆ ರಾಜನಾದ ಸಿಂಹವು ಅರಣ್ಯದಲ್ಲಿ ಮಹಾಗಣವನ್ನು ಅತ್ತಲಿತ್ತ ಎಳೆದಾಡುವಂತೆ–ವೃಷ್ಣಿವೀರರಲ್ಲಿ ಶ್ರೇಷ್ಠನಾದ ಸಾತ್ಯಕಿಯನ್ನು ಭೂರಿಶ್ರವಸನು ಅತ್ತಲಿತ್ತ ಎಳೆದಾಡುತ್ತಿದ್ದಾನೆ. ಆದರೆ ಅವನು ಸಾತ್ಯಕಿಯನ್ನು ಸಂಹರಿಸದಿರುವುದು ನನಗೆ ಹೆಚ್ಚಿನ ಆನಂದ ವನ್ನುಂಟುಮಾಡಿದೆ.”

ಮಹಾರಾಜ! ಹೀಗೆಂಬುದಾಗಿ ಮಹಾಬಾಹುವಾದ ಅರ್ಜುನನು ಮನಸ್ಸಿನಿಂದಲೇ ಕೌರವನನ್ನು ಶ್ಲಾಘಿಸಿ ವಾಸುದೇವನನ್ನು ಕುರಿತು ಹೇಳಿದನು:

*** ಸೈನ್ಧವೇ ಸಕ್ತದೃಷ್ಟಿತ್ವಾನ್ನೈನಂ ಪಶ್ಯಾಮಿ ಮಾಧವಮ್ ।**
**ಏತತ್ವಸುಕರಂ ಕರ್ಮ ಯಾದವಾರ್ಥೇ ಕರೋಮ್ಯಹಮ್ ॥೭೦॥**

“ಕೃಷ್ಣ! ಸೈಂಧವನ ವಧೆಯಲ್ಲಿಯೇ ನೆಟ್ಟದೃಷ್ಟಿಯುಳ್ಳವನಾಗಿದ್ದುದರಿಂದ ನಾನು ಸಾತ್ಯಕಿಯನ್ನು ಗಮನಿಸಲಿಲ್ಲ. ಈ ಸಮಯದಲ್ಲಿ ಸಾತ್ವತನನ್ನು ರಕ್ಷಿಸುವುದು ಸುಕರವಾದ (ಸುಲಭಸಾಧ್ಯವಾದ) ಕಾರ್ಯವಲ್ಲವಾದರೂ ಯದುವಂಶವೀರನಾದ ಸಾತ್ಯಕಿಯ ಸಲುವಾಗಿ ನಾನು ಕಾರ್ಯವನ್ನು ಮಾಡುತ್ತೇನೆ.”

---

* ಏತತ್ವಸುಕರಂ ಕರ್ಮ–ಎಂದು ಅರ್ಜುನನು ಹೇಳುವುದು ತನಗೆ ಈ ಕಾರ್ಯ ಮಾಡಲು ‘ಅಸಾಧ್ಯ’ ಎಂಬ ಅಭಿಪ್ರಾಯದಿಂದಲ್ಲ. ಯುದ್ಧಧರ್ಮಕ್ಕೇ ವಿರುದ್ಧವಾಗಿ ಮಾಡಬೇಕಾಗಿರುವುದರಿಂದ ‘ಈ ಕಾರ್ಯವು ಸುಲಭಸಾಧ್ಯವಲ್ಲ’ ಎಂಬ ಅಭಿಪ್ರಾಯದಿಂದ ಈ ಮಾತನ್ನವನು ಹೇಳುತ್ತಾನೆ. ಶ್ರೀಕೃಷ್ಣನೇ ಎರಡು-ಮೂರಾವರ್ತಿ ಹೇಳಿದರೂ ಸಾತ್ಯಕಿಯು ತನಗೆ ಪರಮಪ್ರಿಯನಾದ ಶಿಷ್ಯನೂ ಮತ್ತು ಗೆಳೆಯನೂ ಆಗಿದ್ದರೂ, ಶ್ರೀಕೃಷ್ಣನ ಮಾತಿಗೆ ಒಡನೆಯೇ ಲಕ್ಷ್ಯಕೊಡದೆ ಶ್ರೀಕೃಷ್ಣನು ಒತ್ತಾಯಮಾಡಿದ ಕಾರಣದಿಂದ ಕಟ್ಟಕಡೆಗೆ ಈ ಮಾತನ್ನು ಅರ್ಜುನನು ಹೇಳುತ್ತಾನೆ ಮತ್ತು ‘ಯಾದವಾರ್ಥೇ’ ಎಂದರೆ ‘ಸಾತ್ಯಕಿಯ ಸಲುವಾಗಿಯೇ ಈ ಕಾರ್ಯಮಾಡುತ್ತೇನೆ’ ಎನ್ನುತ್ತಾನೆ. ಮುಂದೆ ನಿಮಿಷಾರ್ಧದಲ್ಲಿ ಭೂರಿಶ್ರವಸನ ತೋಳನ್ನು ಕತ್ತರಿಸುತ್ತಾನೆ. ಶ್ರೀಕೃಷ್ಣನ ಮಾತಿನಂತೆ ತನ್ನ ಸ್ನೇಹಿತನನ್ನು ರಕ್ಷಿಸಲು ಅರ್ಜುನನು ಈ ಕಾರ್ಯವನ್ನು ಮಾಡಿದರೂ ಇಬ್ಬರು ಪರಸ್ಪರ ಯುದ್ಧಮಾಡುತ್ತಿರುವಾಗ ಮಧ್ಯದಲ್ಲಿ ಮತ್ತೊಬ್ಬನು ಯಾವ ಸೂಚನೆಯನ್ನೂ ಕೊಡದೇ ಪ್ರವೇಶಿಸುವುದು ಧರ್ಮವೆನಿಸುವುದಿಲ್ಲ. ಅರ್ಜುನನಿಗೆ ಈ ವಿಷಯವು ಗೊತ್ತಿದ್ದರೂ ಅನಿವಾರ್ಯವಾಗಿ ಕೆಲವು ಸಂದರ್ಭಗಳಲ್ಲಿ ಯುದ್ಧಧರ್ಮವನ್ನು ಮೀರಿ ನಡೆಯಲೇ ಬೇಕಾಗುತ್ತದೆ. ಮುಂದೆ ಪ್ರತಿಜ್ಞೆಯ ವಿಷಯವನ್ನೂ ಹೇಳುತ್ತಾನೆ.

ಪಾಂಡವನು ಹೀಗೆ ಹೇಳಿ ವಾಸುದೇವನ ಮಾತಿನಂತೆ ನಡೆದು ಕೊಳ್ಳುತ್ತಾ ನಿಶಿತವಾದ ಕ್ಷುರಪ್ರವನ್ನು ಗಾಂಡೀವಧನುಸ್ಸಿನಲ್ಲಿ ಯೋಜಿಸಿದನು. ಅರ್ಜುನನ ಬಾಹುವಿನಿಂದ ಚ್ಯುತವಾದ ಆ ಕ್ಷುರಪ್ರವು ಆಕಾಶದಿಂದ ಚ್ಯುತವಾದ ದೊಡ್ಡದಾದ ಉಲ್ಕೆಯಂತೆ ಪ್ರಜ್ವಲಿಸುತ್ತಾ ಹೋಗಿ ಯಜ್ಞ ಶೀಲನಾದ ಭೂರಿಶ್ರವಸನ ಖಡ್ಗಯುಕ್ತವಾಗಿದ್ದ ಮತ್ತು ಅಂಗದಯುಕ್ತವಾಗಿದ್ದ ತೋಳನ್ನು ತುಂಡರಿಸಿತು.

೧೪೨ನೆಯ ಅಧ್ಯಾಯವು ಮುಗಿಯಿತು.

೧೪೩ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಭೂರಿಶ್ರವಸನು ಅರ್ಜುನನನ್ನು ನಿಂದಿಸಿದುದು : ಅರ್ಜುನನ ಉತ್ತರ : ಭೂರಿಶ್ರವಸನ ಪ್ರಾಯೋಪವೇಶ : ಆ ಸಮಯದಲ್ಲಿ ಸಾತ್ಯಕಿಯು ಭೂರಿಶ್ರವಸನ ಶಿರಸ್ಸನ್ನು ಕತ್ತರಿಸಿದುದು

ಸಂಜಯನು ಭೂರಿಶ್ರವಸನ ತೋಳನ್ನು ಕತ್ತರಿಸಿದನಂತರದ ದಾರುಣ ಕಥೆಯನ್ನು ಧೃತರಾಷ್ಟ್ರನಿಗೆ ಹೇಳುತ್ತಾನೆ :

ಮಹಾರಾಜ! ಶುಭಕರವಾದ ಅಂಗದವನ್ನು ಹೊಂದಿದ್ದ, ಖಡ್ಗ ಯುಕ್ತವಾಗಿದ್ದ ಭೂರಿಶ್ರವಸನ ಉತ್ತಮವಾದ ಬಾಹುವು ಸಮಸ್ತಪ್ರಾಣಿಗಳ ಮನಸ್ಸಿನಲ್ಲಿಯೂ ಅಪಾರವಾದ ದುಃಖವನ್ನು ಹುಟ್ಟಿಸುತ್ತಾ ಭೂಮಿಯ ಮೇಲೆ ಬಿದ್ದಿತು. ಸಾತ್ಯಕಿಯ ಮುಡಿಯನ್ನು ಹಿಡಿದು ಕತ್ತಿಯ ಮೂಲಕವಾಗಿ ಪ್ರಹರಿಸುವುದರಲ್ಲಿದ್ದ ಭೂರಿಶ್ರವಸನ ಆ ಬಾಹುವು ಅದೃಶ್ಯನಾದ ಅರ್ಜುನನಿಂದ ಪ್ರಹೃತವಾಗಿ ಐದು ಹೆಡೆಗಳುಳ್ಳ ಸರ್ಪದೋಪಾದಿಯಲ್ಲಿ ಬಹಳ ವೇಗವಾಗಿ ಭೂಮಿಯ ಮೇಲೆ ಬಿದ್ದಿತು. ಕುಂತಿಯ ಮಗನಾದ ಪಾರ್ಥನು, ತನ್ನನ್ನೂ ಮತ್ತು ತನ್ನ ಪ್ರಯತ್ನವನ್ನೂ ವ್ಯರ್ಥಗೊಳಿಸಿದುದನ್ನು ಕಂಡು ಭೂರಿಶ್ರವಸನು ಸಾತ್ಯಕಿಯ ಮುಡಿಯನ್ನು ಬಿಟ್ಟು ಕೋಪದಿಂದ ಅರ್ಜುನನನ್ನು ನಿಂದಿಸಲು ತೊಡಗಿದನು.

**ನೃಶಂಸಂ ಬತ ಕೌನ್ತೇಯ ಕರ್ಮೇದಂ ಕೃತವಾನಸಿ ।**
**ಅಪಶ್ಯತೋ ವಿಷಕ್ತಸ್ಯ ಯನ್ಮೇ ಬಾಹುಮಚಿಚ್ಛಿದಃ ॥೪॥**

"ಕುಂತೀಪುತ್ರ! ನೀನೀಗ ಅತ್ಯಂತಕ್ರೂರವಾದ ಕರ್ಮವನ್ನು ಮಾಡಿರುವೆ. ನಿನ್ನನ್ನು ಕಾಣದೆ ( ನಿನ್ನ ಸಂಗಡ ಯುದ್ಧಮಾಡದೆ ) ಬೇರೆ

ಯವನೊಡನೆ ಯುದ್ಧದಲ್ಲಿ ತೊಡಗಿದ್ದ ನನ್ನ ತೋಳನ್ನು ನೀನು ಕತ್ತರಿಸಿದೆ ಯಲ್ಲವೇ?

**ಕಿಂ ನು ವಕ್ಷ್ಯಸಿ ರಾಜಾನಂ ಧರ್ಮಪುತ್ರಂ ಯುಧಿಷ್ಠಿರಮ್ ।**
**ಕಿಂ ಕುರ್ವಾಣೋ ಮಯಾ ಸಂಖ್ಯೇ ಹತೋ ಭೂರಿಶ್ರವಾ ರಣೇ ॥೫॥**

ಧರ್ಮಪುತ್ರನಾದ ಯುಧಿಷ್ಠಿರನ ಬಳಿಗೆ ಹೋಗಿ ಏನೆಂದು ಹೇಳುವೆ? "ಭೂರಿಶ್ರವಸನು ಯಾವುದೋ ಕಾರ್ಯದಲ್ಲಿ ತೊಡಗಿದ್ದನು. ಅವನಿಗೆ ತಿಳಿಯದಂತೆಯೇ ನಾನು ಅವನನ್ನು ಸಂಹರಿಸಿಬಿಟ್ಟೆನು"–ಎಂದು ತಾನೇ ಅವನೊಡನೆ ಹೇಳುವೆ?

**ಇದಮಿನ್ದ್ರೇಣ ತೇ ಸಾಕ್ಷಾದುಪದಿಷ್ಟಂ ಮಹಾತ್ಮನಾ ।**
**ಅಸ್ತ್ರಂ ರುದ್ರೇಣ ವಾ ಪಾರ್ಥ ದ್ರೋಣೇನಾಥ ಕೃಪೇಣ ವಾ ॥೬॥**

ಇಂತಹ ಅಸ್ತ್ರವಿದ್ಯೆಯನ್ನೇ ನೀನು ಸಾಕ್ಷಾತ್ ಇಂದ್ರನಿಂದ ಪಡೆದೆಯಾ? ರುದ್ರ-ದ್ರೋಣ-ಕೃಪರೇನಾದರೂ ನಿನಗೆ ಇಂತಹ ಅಸ್ತ್ರವಿದ್ಯೆಯನ್ನೇ ಉಪದೇಶಿಸಿದ್ದರೆ? (ಇಂತಹ ಒಂದು ಮಾರ್ಗವನ್ನು ಅವರು ನಿನಗೆ ಬೋಧಿಸಿದ್ದರೆ? )

**ನನು ನಾಮಾಸ್ತ್ರಧರ್ಮಜ್ಞಸ್ತ್ವಂ ಲೋಕೇಽಭ್ಯಧಿಕಂ ಪರೈಃ ।**
**ಸೋಽಯುಧ್ಯಮಾನಸ್ಯ ಕಥಂ ರಣೇ ಪ್ರಹೃತವಾನಸಿ ॥೭॥**

ನೀನಾದರೋ ಲೋಕದಲ್ಲಿರುವ ಎಲ್ಲ ಯೋಧರಿಗಿಂತಲೂ ಅಧಿಕನು ; ವಿಶೇಷವಾಗಿ ಅಸ್ತ್ರಧರ್ಮಗಳನ್ನು ತಿಳಿದವನು. ನಿನ್ನೊಡನೆ ಯುದ್ಧಮಾಡ ದೆಯೇ ಇರುವ ನನ್ನನ್ನು ಹೇಗೆ ಪ್ರಹರಿಸಿದೆ?

**ನ ಪ್ರಮತ್ತಾಯ ಭೀತಾಯ ವಿರಥಾಯ ಪ್ರಯಾಚತೇ ।**
**ವ್ಯಸನೇ ವರ್ತಮಾನಾಯ ಪ್ರಹರನ್ತಿ ಮನಸ್ವಿನಃ ॥೮॥**

ವಿದ್ವಾಂಸರಾದವರು–ಅಜಾಗರೂಕತೆಯಿಂದ ಇರುವವನನ್ನೂ, ಭಯ ಗೊಂಡಿರುವವನನ್ನೂ, ರಥದಿಂದ ಹೀನನಾಗಿರುವವನನ್ನೂ, ಪ್ರಾಣಭಿಕ್ಷೆ ಯನ್ನು ಬೇಡುವವನನ್ನೂ ಮತ್ತು ವ್ಯಸನದಲ್ಲಿ ಸಿಕ್ಕಿರುವವನನ್ನೂ–ಖಂಡಿತ ವಾಗಿಯೂ ಪ್ರಹರಿಸುವುದಿಲ್ಲ.

**ಇದಂ ತು ನೀಚಾಚರಿತಮಸತ್ಪುರುಷಸೇವಿತಮ್ ।**
**ಕಥಮಾಚರಿತಂ ಪಾರ್ಥ ಪಾಪಕರ್ಮ ಸುದುಷ್ಕರಮ್ ॥೯॥**

ನೀನು ಮಾಡಿರುವ ಈ ಕಾರ್ಯವು ನೀಚರಾದವರಿಂದ ಮಾತ್ರವೇ ಆಚರಿಸಲು ಯೋಗ್ಯವಾಗಿದೆ. ಸತ್ಪುರುಷರಾದವರು ಮಾಡದ ಕೆಲಸವಾಗಿದೆ. ಅವರು ಇಂತಹ ಕಾರ್ಯವನ್ನು ಮಾಡುವುದಿಲ್ಲ. ಏಕೆಂದರೆ : ಇದು ಅತ್ಯಂತ ಪಾಪಕರ್ಮವಾಗಿದೆ. ಇಷ್ಟು ಕುತ್ಸಿತವಾದ ಮತ್ತು ಹೇಯವಾದ ಕಾರ್ಯವನ್ನು ನೀನು ಹೇಗೆ ಮಾಡಿದೆ?

**ಆರ್ಯೇಣ ಸುಕರಂ ತ್ವಾಹುರಾರ್ಯಕರ್ಮ ಧನಂಜಯ ।**
**ಅನಾರ್ಯಕರ್ಮ ತ್ವಾರ್ಯೇಣ ಸುದುಷ್ಕರತಮಂ ಭುವಿ ॥೧೦॥**

ಧನಂಜಯ! ಶ್ರೇಷ್ಠಪುರುಷನಿಗೆ ಶ್ರೇಷ್ಠವಾದ ಕರ್ಮಮಾಡುವುದು ಸುಲಭಸಾಧ್ಯವೆಂದು ಹೇಳುತ್ತಾರೆ. ಆದರೆ ಶ್ರೇಷ್ಠಪುರುಷನು ದುಷ್ಕರ್ಮ ಮಾಡಲು ಅತ್ಯಂತದುಷ್ಕರವಾಗುವುದೆಂದೂ ಹೇಳುತ್ತಾರೆ. (ಆರ್ಯನಾದವನಿಗೆ ಒಳ್ಳೆಯ ಕಾರ್ಯವು ಎಷ್ಟೇ ಶ್ರಮಸಾಧ್ಯವಾಗಿದ್ದರೂ ಸುಲಭವಾಗಿ ಕಾಣುತ್ತದೆ. ಆದರೆ ದುಷ್ಕಾರ್ಯವು ಅಥವಾ ನೀಚಕಾರ್ಯವು ಎಷ್ಟೇ ಸುಲಭಸಾಧ್ಯವಾಗಿದ್ದರೂ ಬಹಳ ದುಷ್ಕರವಾಗಿ ಕಾಣುತ್ತದೆ.)

**ಯೇಷು ಯೇಷು ನರವ್ಯಾಘ್ರ ಯತ್ರ ಯತ್ರ ಚ ವರ್ತತೇ ।**
**ಆಶು ತಚ್ಛೀಲತಾಮೇತಿ ತದಿದಂ ತ್ವಯಿ ದೃಶ್ಯತೇ ॥೧೧॥**

ನರವ್ಯಾಘ್ರನೇ! ಒಬ್ಬ ಮನುಷ್ಯನು ಸತ್ಪುರುಷರಲ್ಲಿ ಸಂಗಮಾಡಿಕೊಂಡಿದ್ದರೆ ಅಥವಾ ದುಷ್ಟರಲ್ಲಿ ಸಂಗಮಾಡಿಕೊಂಡಿದ್ದರೆ, ಒಳ್ಳೆಯ ಪರಿಸರದಲ್ಲಿದ್ದರೆ ಅಥವಾ ಕೆಟ್ಟಪರಿಸರದಲ್ಲಿದ್ದರೆ ಅವನು ಬಹಳ ಬೇಗ ಸತ್ಪುರುಷರ ಅಥವಾ ದುಷ್ಟಮನುಷ್ಯರ ಮತ್ತು ಆಯಾ ಪರಿಸರಕ್ಕೆ ಅನುಗುಣವಾದ ಶೀಲವನ್ನೇ ಪಡೆದುಕೊಳ್ಳುತ್ತಾನೆ. ಅಂತಹ (ಸಹವಾಸಕ್ಕೆ ಮತ್ತು ಪರಿಸರಕ್ಕೆ ಅನುಗುಣವಾದ ) ಗುಣವು ನಿನ್ನಲ್ಲಿಯೂ ನನಗೆ ಕಂಡುಬರುತ್ತಿದೆ.

**ಕಥಂ ಹಿ ರಾಜವಂಶ್ಯಸ್ತ್ವಂ ಕೌರವೇಯೋ ವಿಶೇಷತಃ ।**
**ಕ್ಷತ್ರಧರ್ಮಾದಪಕ್ರಾನ್ತಃ ಸುವೃತ್ತಶ್ಚರಿತವ್ರತಃ ॥೧೨॥**

ಅರ್ಜುನ! ನೀನು ಸದ್ವೃತ್ತನಾಗಿರುವೆ. ಶ್ರೇಷ್ಠವಾದ ಅನೇಕ ವ್ರತಗಳನ್ನು ನೀನು ಆಚರಿಸಿರುವೆ. ಶ್ರೇಷ್ಠವಾದ ರಾಜವಂಶದಲ್ಲಿ ಹುಟ್ಟಿರುವೆ. ನೀನು ಎಲ್ಲಕ್ಕಿಂತಲೂ ಮಿಗಿಲಾಗಿ ಸುಪ್ರಸಿದ್ಧವಾದ ಕುರುವಂಶದಲ್ಲಿ ಹುಟ್ಟಿದವನು– ಹೀಗಿದ್ದೂ ಸಹ ಕ್ಷತ್ರಧರ್ಮವನ್ನು ನೀನು ಹೇಗೆ ಅತಿಕ್ರಮಿಸಿದೆ?

**ಇದಂ ತು ಯದತಿಕ್ಷುದ್ರಂ ವಾರ್ಷ್ಣೇಯಾರ್ಥೇ ಕೃತಂ ತ್ವಯಾ ।**
**ವಾಸುದೇವಮತಂ ನೂನಂ ನೈತತ್ತ್ವಯ್ಯುಪಪದ್ಯತೇ ॥೧೩॥**

ಸಾತ್ಯಕಿಯ ಸಲುವಾಗಿ ನೀನು ಮಾಡಿರುವ ಅತ್ಯಂತ ಕ್ಷುದ್ರವಾದ (ನೀಚವಾದ) ಈ ಕಾರ್ಯವು ನೀನೇ ಉದ್ದೇಶಿಸಿ ಮಾಡಿದುದಲ್ಲ (ನಿನ್ನ ಸ್ವಭಾವದಲ್ಲಿ ಇಂತಹ ನೀಚಕಾರ್ಯವನ್ನು ಮಾಡಲು ಸಾಧ್ಯವೇ ಆಗುವುದಿಲ್ಲ). ನಿಶ್ಚಯವಾಗಿಯೂ ಇದು ಶ್ರೀಕೃಷ್ಣನ ಅಭಿಪ್ರಾಯವೇ ಆಗಿದೆ (ಈ ಕಾರ್ಯಕ್ಕೆ ಶ್ರೀಕೃಷ್ಣನ ಪ್ರೇರಣೆಯೇ ಆಗಿದೆ ).

**ಕೋ ಹಿ ನಾಮ ಪ್ರಮತ್ತಾಯ ಪರೇಣ ಸಹ ಯುಧ್ಯತೇ ।**
**ಈದೃಶಂ ವ್ಯಸನಂ ದದ್ಯಾದ್ಯೋ ನ ಕೃಷ್ಣಸಖೋ ಭವೇತ್ ॥೧೪॥**

ಅಜಾಗರೂಕನಾಗಿರುವವನಿಗೆ, ಬೇರೆಯವನೊಡನೆ ಯುದ್ಧದಲ್ಲಿ ತೊಡಗಿರುವವನಿಗೆ ಇಂತಹ ವ್ಯಸನವನ್ನು ಶ್ರೀಕೃಷ್ಣನ ಸಖನಲ್ಲದ ಬೇರೆ ಯಾವನು ತಾನೇ ಉಂಟುಮಾಡಿಯಾನು?

**ವ್ರಾತ್ಯಾಃ ಸಂಕ್ಲಿಷ್ಟಕರ್ಮಾಣಃ ಪ್ರಕೃತ್ಯೈವ ಚ ಗರ್ಹಿತಾಃ ।**
**ವೃಷ್ಣ್ಯಂಧಕಾಃ ಕಥಂ ಪಾರ್ಥ ಪ್ರಮಾಣಂ ಭವತಾ ಕೃತಾಃ ॥೧೫॥**

ಕುಂತೀಪುತ್ರ! ವೃಷ್ಣಿ ಮತ್ತು ಅಂಧಕವಂಶೀಯರು–ಸಂಸ್ಕಾರಹೀನರೂ, ಹಿಂಸೆಯೇ ಪ್ರಧಾನವಾದ ಕರ್ಮವಾಗಿ ಉಳ್ಳವರೂ ಮತ್ತು ಸ್ವಭಾವತಃ ನಿಂದ್ಯರೂ ಆಗಿದ್ದಾರೆ. ಅಂತಹವರನ್ನು ನೀನು (ಧರ್ಮದ ವಿಷಯದಲ್ಲಿ) ಪ್ರಮಾಣಭೂತರೆಂದು ಹೇಗೆ ಒಪ್ಪಿಕೊಂಡಿರುವೆ?”

ಮಹಾರಾಜ! ಭೂರಿಶ್ರವಸನು ಇವೇ ಮುಂತಾದ ಮಾತುಗಳಿಂದ ಅರ್ಜುನನನ್ನು ನಿಂದಿಸಿದನು. ಅನಂತರ ಅರ್ಜುನನೂ ಸಹ ಯಥಾಯೋಗ್ಯ ವಾಗಿಯೇ ಉತ್ತರಿಸಿದನು :

**ವ್ಯಕ್ತಂ ಹಿ ಜೀರ್ಯಮಾಣೋಽಪಿ ಬುದ್ಧಿಂ ಜರಯತೇ ನರಃ ।**
**ಅನರ್ಥಕಮಿದಂ ಸರ್ವಂ ಯತ್ತ್ವಯಾ ವ್ಯಾಹೃತಂ ಪ್ರಭೋ ।**
**ಜಾನನ್ನೇವ ಹೃಷೀಕೇಶಂ ಗರ್ಹಸೇ ಮಾಂ ಚ ಪಾಣ್ಡವಮ್ ॥೧೬॥**

“ಪ್ರಭುವೇ! (ಮಹಾನುಭಾವನೇ!) ಮನುಷ್ಯನು ಮುದುಕ

ನಾದಂತೆ ಅವನ ಬುದ್ಧಿಯೂ ಮುದಿತನವನ್ನು ಹೊಂದುವುದೆಂಬುದು ಸ್ಪಷ್ಟವಾಗಿಯೇ ಇದೆ. ಅದರಂತೆ ವೃದ್ಧನಾದ ನಿನ್ನ ಬುದ್ಧಿಯೂ ಸಹ ಅರುಳು-ಮರುಳಾಗಿದೆ. ಆದುದರಿಂದಲೇ ನೀನು ಹೇಳಿದ ಮಾತುಗಳೆಲ್ಲವೂ ಅರ್ಥ ಹೀನವಾಗಿವೆ. ಇಂದ್ರಿಯಗಳನ್ನು ನಿಯಂತ್ರಿಸಿರುವ ಶ್ರೀಕೃಷ್ಣನ ಸ್ವಭಾವವನ್ನೂ ಮತ್ತು ಪಾಂಡುಪುತ್ರನಾದ ನನ್ನ ಸ್ವಭಾವವನ್ನೂ ನೀನು ತಿಳಿದವನಾಗಿದ್ದರೂ ವೃಥಾ ನಮ್ಮಿಬ್ಬರನ್ನೂ ನಿಂದಿಸುತ್ತಿರುವೆ.

**ಸಂಗ್ರಾಮಾಣಾಂ ಹಿ ಧರ್ಮಜ್ಞಃ ಸರ್ವಶಾಸ್ತ್ರಾರ್ಥಪಾರಗಃ ।**
**ನ ಚಾಧರ್ಮಮಹಂ ಕುರ್ಯಾಂ ಜಾನಂಶ್ಚೈವ ಹಿ ಮುಹ್ಯಸೇ ॥**

ನಾನು ಯುದ್ಧಗಳ ಧರ್ಮವನ್ನು ಸಂಪೂರ್ಣವಾಗಿ ತಿಳಿದಿರುತ್ತೇನೆ. ಸಕಲವೇದ-ಶಾಸ್ತ್ರಗಳ ಪಾರವನ್ನೂ ಕಂಡಿದ್ದೇನೆ. ಸರ್ವಶಾಸ್ತ್ರಗಳನ್ನೂ ರಹಸ್ಯಾರ್ಥಸಹಿತವಾಗಿ ತಿಳಿದುಕೊಂಡಿರುತ್ತೇನೆ. ನಾನು ಯಾವುದೇ ಕಾರಣದಿಂದಲೂ ಅಧರ್ಮವೆನಿಸುವ ಕಾರ್ಯವನ್ನು ಮಾಡತಕ್ಕವನಲ್ಲ. ಈ ಸಮಯದಲ್ಲಿ ನೀನು ವಿಮೋಹಿತನಾಗಿರುವೆ. (ನಿನಗೆ ಭ್ರಾಂತಿಯುಂಟಾಗಿದೆ.)

**ಯುಧ್ಯನ್ತಿ ಕ್ಷತ್ರಿಯಾಃ ಶತ್ರೂನ್ಸ್ವೈಃ ಸ್ವೈಃ ಪರಿವೃತಾ ನರಾಃ ।**
**ಭ್ರಾತೃಭಿಃ ಪಿತೃಭಿಃ ಪುತ್ರೈಸ್ತಥಾ ಸಮ್ಬನ್ಧಿಬಾನ್ಧವೈಃ ।**
**ವಯಸ್ಯೈರಥ ಮಿತ್ರೈಶ್ಚ ತೇ ಚ ಬಾಹುಂ ಸಮಾಶ್ರಿತಾಃ ॥೧೯॥**

ಭೂರಿಶ್ರವಸನೇ! ನಿನಗೆ ತಿಳಿದಿರುವಂತೆಯೇ ಕ್ಷತ್ರಿಯರು ತಮ- ತಮಗೆ ಸಂಬಂಧಿಸಿದ ಅಣ್ಣ-ತಮ್ಮಂದಿರೊಡನೆ, ಪಿತೃವರ್ಗದವರೊಡನೆ, ಪುತ್ರರೊಡನೆ, ಸಂಬಂಧಿಗಳೊಡನೆ, ಬಾಂಧವರೊಡನೆ, ಸಮಾನವಯಸ್ಕ ರೊಡನೆ ಮತ್ತು ಮಿತ್ರರೊಡನೆ ಪರಿವೃತರಾಗಿ ಶತ್ರುಗಳೊಡನೆ ಯುದ್ಧ ಮಾಡುತ್ತಾರೆ. ಹಾಗೆ ಯುದ್ಧಮಾಡುವಾಗ ಅವರೆಲ್ಲರೂ ಸಾಮಾನ್ಯವಾಗಿ ಪ್ರಧಾನನಾದ ಯೋಧನ ಬಾಹುಬಲವನ್ನೇ ಆಶ್ರಯಿಸಿ ಯುದ್ಧಮಾಡುತ್ತಿರು ತ್ತಾರೆ. (ಅವನ ರಕ್ಷಣೆಗೆ ಒಳಪಟ್ಟಿರುತ್ತಾರೆ.) ಸಾತ್ಯಕಿಯು ನನ್ನ ಪ್ರಿಯ ಶಿಷ್ಯನು; ಸುಖಪ್ರದನಾದ ಸಂಬಂಧಿಯೂ ಹೌದು. ಸುಲಭವಾಗಿ ಪರಿತ್ಯಜಿಸಲಾಗದ ಪ್ರಾಣಗಳನ್ನೇ ಒತ್ತೆಯಾಗಿಟ್ಟು ನಮ್ಮ ಸಲುವಾಗಿ ಯುದ್ಧಮಾಡುತ್ತಿರುವ, ಯುದ್ಧದುರ್ಮದನಾದ, ನನ್ನ ಬಲತೋಳಿಗೆ ಸಮಾನನಾದ ಅವನನ್ನು ನಾನು ಹೇಗೆ ತಾನೇ ಸಾಯಗೊಡಲಿ?

**ನ ಚಾತ಼್ಾ ರಕ್ಷಿತವ್ಯೋ ವೈ ರಾಜನ್ರಣಗತೇನ ಹಿ ।**
**ಯೋ ಯಸ್ಯ ಯುಜ್ಯತೇಽರ್ಥೇಷು ಸ ವೈ ರಕ್ಷ್ಯೋ ನರಾಧಿಪ ॥೨೨॥**

**ತೈ ರಕ್ಷ್ಯಮಾಣೈಃ ಸ ನೃಪೋ ರಕ್ಷಿತವ್ಯೋ ಮಹಾಮೃಧೇ ।**

ಯುದ್ಧಕ್ಕೆ ಹೋದವನು ತನ್ನನ್ನು ಮಾತ್ರವೇ ರಕ್ಷಿಸಿಕೊಳ್ಳಲು ಪ್ರಯತ್ನಿಸುವುದು ಖಂಡಿತವಾಗಿಯೂ ಉಚಿತವಲ್ಲ. ಆದರೆ ತನ್ನ ಸಲುವಾಗಿ ತನ್ನ ಪ್ರಯೋಜನಕ್ಕಾಗಿಯೇ ಮತ್ತೊಬ್ಬನು ಕಾರ್ಯಮಾಡುತ್ತಿದ್ದರೆ ಅಥವಾ ಒಂದು ಕಾರ್ಯಕ್ಕೆ ತಾನೇ ಅವನನ್ನು ನಿಯೋಜಿಸಿದ್ದರೆ ಅಂತಹವನನ್ನು ಯಾವುದೇ ಕಾರಣದಿಂದಲಾದರೂ ರಕ್ಷಿಸಲೇಬೇಕು. ಇದು ಯೋಧನ ಮುಖ್ಯ ಕರ್ತವ್ಯ. ಈ ರೀತಿಯಲ್ಲಿ ರಾಜನಿಂದ ರಕ್ಷಿಸಲ್ಪಡುವ ಅವನ ಸುಹೃದರು ರಾಜನನ್ನು ಸರ್ವಪ್ರಕಾರದಿಂದಲೂ ರಕ್ಷಿಸಬೇಕು. ಇದು ಅವರ ಕರ್ತವ್ಯವಾಗಿರುತ್ತದೆ.

**ಯದ್ಯಹಂ ಸಾತ್ಯಕಿಂ ಪಶ್ಯೇ ವಧ್ಯಮಾನಂ ಮಹಾರಣೇ ॥೨೩॥**

**ತತಸ್ತಸ್ಯ ವಿಯೋಗೇನ ಪಾಪಂ ಮೇಽನರ್ಥತೋ ಭವೇತ್ ।**
**ರಕ್ಷಿತಶ್ಚ ಮಯಾ ಯಸ್ಮಾತ್ತಸ್ಮಾತ್ಕ್ರುಧ್ಯಸಿ ಕಿಂ ಮಯಿ ॥೨೪॥**

ಸಾತ್ಯಕಿಯು ನಿನ್ನಿಂದ ವಧ್ಯನಾಗುವುದನ್ನು ನೋಡುತ್ತಾ ನಾನೇನಾದರೂ ಸುಮ್ಮನಿದ್ದಿದ್ದರೆ ಅಂತಹ ನನ್ನ ಮೂರ್ಖತನದ ಪರಿಣಾಮದಿಂದುಂಟಾದ ಅವನ ವಿಯೋಗದಿಂದ ನನಗೆ ಪಾಪವೂ ಸಂಘಟಿಸುತ್ತಿದ್ದಿತು. ರಕ್ಷಿಸಬೇಕಾದವನನ್ನು ಸಮಯದಲ್ಲಿ ನಾನು ರಕ್ಷಿಸಿದ ಕಾರಣದಿಂದ ನನ್ನ ಮೇಲೆ ನೀನು ಕೋಪಗೊಳ್ಳುವೆಯಾ?

**ಯಚ್ಚ ಮೇ ಗರ್ಹಸೇ ರಾಜನ್ನನ್ಯೇನ ಸಹ ಸಂಗತಮ್ ।**
**ಅಹಂ ತ್ವಯಾ ವಿನಿಕೃತಸ್ತತ್ರ ಮೇ ಬುದ್ಧಿವಿಭ್ರಮಃ ॥೨೫॥**

'ಬೇರೆಯವರೊಡನೆ ಯುದ್ಧದಲ್ಲಿ ತೊಡಗಿದ್ದ ನನ್ನನ್ನು ನೀನು ವಂಚಿಸಿದೆ'–ಎಂದೂ ಸಹ ನೀನು ನನ್ನನ್ನು ನಿಂದಿಸುತ್ತಿರುವೆ. ಈ ನಿನ್ನ ಮಾತಿನಿಂದ ನನ್ನ ಬುದ್ಧಿಯು ಭ್ರಮಿಸಿದೆ. (ನಿನ್ನಂತಹವನು ಇಂತಹ ಮಾತನ್ನು ಆಡುವನೇ?–ಎಂದು ನನ್ನ ಬುದ್ಧಿಯು ಭ್ರಮೆಗೊಂಡಿದೆ. ವಯೋವೃದ್ಧನಾದವನ ಬಾಯಲ್ಲಿ ಇಂತಹ ಮಾತು ಬರಬಾರದಾಗಿತ್ತು.)

**ಕವಚಂ ಧುನ್ವತಸ್ತುಭ್ಯಂ ರಥಂ ಚಾರೋಹತಃ ಸ್ವಯಮ್ ।**
**ಧನುರ್ಜ್ಯಾಂ ಕರ್ಷತಶ್ಚೈವ ಯುಧ್ಯತಃ ಸಹ ಶತ್ರುಭಿಃ ॥೨೬॥**

**ಏವಂ ರಥಗಜಾಕೀರ್ಣೇ ಹಯಪತ್ತಿಸಮಾಕುಲೇ ।**
**ಸಿಂಹನಾದೋದ್ಧತರವೇ ಗಮ್ಭೀರೇ ಸೈನ್ಯಸಾಗರೇ ॥೨೭॥**

**ಸ್ವೈಃ ಪರೈಶ್ಚ ಸಮೇತೇಭ್ಯಃ ಸಾತ್ವತೇನ ಚ ಸಂಗಮೇ ।**
**ಏಕಸ್ಯೈಕೇನ ಹಿ ಕಥಂ ಸಂಗ್ರಾಮಃ ಸಮ್ಭವಿಷ್ಯತಿ ॥೨೮॥**

ಕವಚವನ್ನು ಸರಿಪಡಿಸಿಕೊಳ್ಳುತ್ತಾ, ರಥವನ್ನೇರಿ ಧನುಸ್ಸಿನ ಶಿಂಜಿನಿಯನ್ನು ಸೆಳೆಯುತ್ತಾ, ಸಾವಿರಾರು ಬಾಣಗಳನ್ನು ಬಿಡುತ್ತಾ, ಶತ್ರುಗಳೊಡನೆ ನೀನು ಯುದ್ಧಮಾಡುತ್ತಿದ್ದೆ. ಹೀಗೆ ರಥ-ಗಜಾಶ್ವ-ಪದಾತಿಗಳಿಂದ ಸಮೃದ್ಧವಾದ, ಭಯಂಕರವಾದ ಸಿಂಹನಾದಗಳಿಂದ ವ್ಯಾಪ್ತವಾದ ಸೈನ್ಯಸಾಗರದಲ್ಲಿ ನಿಮ್ಮ ಕಡೆಯವರಿಗೂ–ಶತ್ರುಪಕ್ಷದವರಿಗೂ ತುಮುಲಯುದ್ಧವಾಗುತ್ತಿರುವಾಗ ಸಾತ್ವತನೊಡನೆ ನೀನು ಯುದ್ಧದಲ್ಲಿ ತೊಡಗಿದೆ. (ಮೊದಲಿನಿಂದಲೂ ನೀನು ಸಾತ್ಯಕಿಯೊಡನೆ ಮಾತ್ರವೇ ಯುದ್ಧ ಮಾಡುತ್ತಿಲ್ಲ ಅಥವಾ ಸಾತ್ಯಕಿಯೂ ನಿನ್ನೊಬ್ಬನೊಡನೆಯೇ ಯುದ್ಧದಲ್ಲಿ ತೊಡಗಿಲ್ಲ. ನೀನೂ ಸಾವಿರಾರು ಶತ್ರುಯೋಧರನ್ನು ಎದುರಿಸಿ ಯುದ್ಧಮಾಡಿರುವೆ. ಸಾತ್ವತನೂ ಅನೇಕ ಯೋಧರನ್ನು ಎದುರಿಸಿ ಯುದ್ಧಮಾಡಿದ್ದಾನೆ. ಯಾವುದೋ ಸಂದರ್ಭದಲ್ಲಿ ನೀವಿಬ್ಬರೇ ಯುದ್ಧದಲ್ಲಿ ತೊಡಗಿದ ಮಾತ್ರಕ್ಕೆ ಈ ಯುದ್ಧವು ನಿಮ್ಮಿಬ್ಬರಿಗೇ ಸೀಮಿತವಾದುದಲ್ಲ. ಇದು ಎರಡು ಪಕ್ಷಗಳ ನಡುವೆ ನಡೆಯುತ್ತಿರುವ ತುಮುಲಯುದ್ಧ.) ಒಬ್ಬ ಯೋಧನು ಒಬ್ಬ ಯೋಧನೊಡನೆಯೇ ಯುದ್ಧದಲ್ಲಿ ತೊಡಗಿರಬೇಕೆನ್ನುವುದಾದರೆ ಯುದ್ಧವಾದರೂ ನಡೆಯುವ ಬಗೆ ಹೇಗೆ? (ಆದುದರಿಂದ "ನನಗೆ ಮತ್ತು ಸಾತ್ಯಕಿಗೆ ಮಾತ್ರವೇ ದ್ವಂದ್ವಯುದ್ಧವು ಸೀಮಿತವಾದುದು"–ಎಂದು ಭಾವಿಸಿರುವುದೇ ನಿನ್ನ ಅಪರಾಧ. ಸಲ್ಲದ ಭಾವನೆಯನ್ನಿಟ್ಟುಕೊಂಡು ವೃಥಾ ನನ್ನನ್ನು ಏಕೆ ನಿಂದಿಸುತ್ತಿರುವೆ? )

ನಿನ್ನ ಪರಾಕ್ರಮವೆಷ್ಟೆಂಬುದರ ಬಗೆಗೂ ಹೇಳುತ್ತೇನೆ ; ಕೇಳು :

**ಬಹುಭಿಃ ಸಹ ಸಂಗಮ್ಯ ನಿರ್ಜಿತ್ಯ ಚ ಮಹಾರಥಾನ್ ।**
**ಶ್ರಾನ್ತಶ್ಚ ಶ್ರಾನ್ತವಾಹಶ್ಚ ವಿಮನಾಃ ಶಸ್ತ್ರಪೀಡಿತಃ ॥೨೯॥**

ಸಾತ್ಯಕಿಯು ಏಕಾಕಿಯಾಗಿ ವ್ಯೂಹದೊಳಕ್ಕೆ ನುಗ್ಗಿಬರುತ್ತಿದ್ದಾಗ ಅನೇಕರೊಡನೆ ಯುದ್ಧಮಾಡಿದನು. ಅನೇಕಮಹಾರಥರನ್ನೂ ಜಯಿಸಿದನು. ಅದರಿಂದಾಗಿ ಅವನು ಬಹಳ ಬಳಲಿದ್ದನು. ಅವನ ಕುದುರೆಗಳೂ ಬಹಳವಾಗಿ ಬಳಲಿದ್ದುವು. ಶಸ್ತ್ರಗಳಿಂದ ಬಹಳವಾಗಿ ಗಾಯಗೊಂಡಿದ್ದ ಅವನು ನಿರುತ್ಸಾಹಿಯಾಗಿಯೂ ಇದ್ದನು. (ಇಂತಹ ಸಮಯದಲ್ಲಿ ನೀನು ಅವನನ್ನೆದುರಿಸಲು ಹೋಗಿರುವೆ.)

**ಈದೃಶಂ ಸಾತ್ಯಕಿಂ ಸಂಖ್ಯೇ ನಿರ್ಜಿತ್ಯ ಚ ಮಹಾರಥಮ್ ।**
**ಅಧಿಕತ್ವಂ ವಿಜಾನೀಷೇ ಸ್ವವೀರ್ಯವಶಮಾಗತಮ್ ॥೩೦॥**

ಮಹಾರಥನಾದ ಸಾತ್ಯಕಿಯು ಇಂತಹ ಶೋಚನೀಯವಾದ ಸ್ಥಿತಿಯಲ್ಲಿದ್ದಾಗ ನೀನು ಅವನನ್ನು ಜಯಿಸಿ ನಿನ್ನ ಪರಾಕ್ರಮದಿಂದಲೇ ಅವನು ನಿನಗೆ ವಶನಾದನೆಂದೂ–ನಿನ್ನ ಪರಾಕ್ರಮವೇ ಸಾತ್ಯಕಿಯ ಪರಾಕ್ರಮ ಕ್ಕಿಂತಲೂ ಹೆಚ್ಚಿನದೆಂದೂ–ಭಾವಿಸಿಕೊಂಡಿರುವೆ.

**ಯದಿಚ್ಛಸಿ ಶಿರಶ್ಛಾಸ್ಯ ಅಸಿನಾ ಹನ್ತುಮಾಹವೇ ।**
**ತಥಾ ಕೃಚ್ಛ್ರಗತಂ ಚೈವ ಸಾತ್ಯಕಿಂ ಕಃ ಕ್ಷಮಿಷ್ಯತಿ ॥೩೧॥**

ಶ್ರಾಂತನಾದ ಸಾತ್ಯಕಿಯನ್ನು ನೀನು ಪರಾಜಯಗೊಳಿಸಿದುದಲ್ಲದೇ–ನಿರಾಯುಧನಾದ ಅವನ ಕುತ್ತಿಗೆಯನ್ನೂ ಕತ್ತಿಯಿಂದ ಕತ್ತರಿಸಲು ಇಚ್ಛಿಸಿದೆಯಾದರೆ ಅಂತಹ ಕಷ್ಟದ ಸನ್ನಿವೇಶದಲ್ಲಿರುವ ಸಾತ್ಯಕಿಯನ್ನು ಕಂಡು ನಮ್ಮ ಪಕ್ಷದ ಯಾವ ಯೋಧನು ತಾನೇ ಸಹನೆಯಿಂದಿರಲು ಸಾಧ್ಯ?

**ತ್ವಂ ವೈ ವಿಗರ್ಹಯಾತ್ಮಾನಮಾತ್ಮಾನಂ ಯೋ ನ ರಕ್ಷಸಿ ।**
**ಕಥಂ ಕರಿಷ್ಯಸೇ ವೀರ ಯೋ ವಾ ತ್ವಾಂ ಸಂಶ್ರಯೇಜ್ಜನಃ ॥೩೨॥**

ಕಷ್ಟದಶೆಯಲ್ಲಿದ್ದ ಸಾತ್ಯಕಿಯನ್ನು ರಕ್ಷಿಸಿದುದಕ್ಕಾಗಿ ನೀನು ನನ್ನನ್ನು ನಿಂದಿಸುವುದು ಧರ್ಮವಲ್ಲ. ಆ ಸಮಯದಲ್ಲಿ ನಿನ್ನ ರಕ್ಷಣೆಯ ಕಡೆಗೆ ಲಕ್ಷ್ಯ ಕೊಡದೇ ಇದ್ದುದಕ್ಕಾಗಿ ನಿನ್ನನ್ನೇ ನೀನು ನಿಂದಿಸಿಕೊಳ್ಳುವುದು ಉಚಿತವಾಗಿದೆ. ವೀರನೇ! ನಿನ್ನನ್ನೇ ನೀನು ರಕ್ಷಿಸಿಕೊಳ್ಳುವ ವಿವೇಚನೆಯಿಲ್ಲದಿರುವವನು ನಿನ್ನನ್ನಾಶ್ರಯಿಸಿದ ಜನರನ್ನು ಹೇಗೆ ತಾನೇ ರಕ್ಷಿಸುವೆ?”

ಮಹಾರಾಜ! ( ಅರ್ಜುನನಾಡಿದ ಯುಕ್ತಿಯುಕ್ತವಾದ ಮಾತುಗಳಿಗೆ

ಭೂರಿಶ್ರವಸನು ಉತ್ತರಿಸಲಾಗಲಿಲ್ಲ.) ಅರ್ಜುನನಿಂದ ಹೀಗೆ ಹೇಳಲ್ಪಟ್ಟ ಯೂಪಕೇತುವಾದ, ಮಹಾಯಶೋವಂತನಾದ ಭೂರಿಶ್ರವಸನು ಸಾತ್ಯಕಿಯನ್ನು ತ್ಯಜಿಸಿ ರಣಾಂಗಣದಲ್ಲಿಯೇ *ಪ್ರಾಯೋಪವೇಶಮಾಡಿದನು.

**ಶರಾನಾಸ್ತೀರ್ಯ ಸವ್ಯೇನ ಪಾಣಿನಾ ಪುಣ್ಯಲಕ್ಷಣಃ ।**
**ಯಿಯಾಸುರ್ಬ್ರಹ್ಮಲೋಕಾಯ ಪ್ರಾಣಾನ್ಪ್ರಾಣೇಷ್ವಥಾಜುಹೋತ್ ॥೩೪॥**

ಶುಭಲಕ್ಷಣನಾದ ಭೂರಿಶ್ರವಸನು ತನ್ನ ಎಡಗೈಯಿಂದ ಭೂಮಿಯ ಮೇಲೆ ಬಾಣಗಳನ್ನು ಹರಡಿ ಬ್ರಹ್ಮಲೋಕವನ್ನು ಪಡೆದುಕೊಳ್ಳಬೇಕೆಂಬ ಇಚ್ಛೆಯಿಂದ (ಬ್ರಹ್ಮಭೂಯಿಷ್ಠನಾಗುವ ಆಶಯದಿಂದ) ಪ್ರಾಣಾಯಾಮದ ಮೂಲಕವಾಗಿ ಪ್ರಾಣಗಳನ್ನು ಪ್ರಾಣಗಳಲ್ಲಿ ಹೋಮಮಾಡಿದನು.

**ಸೂರ್ಯೇ ಚಕ್ಷುಃ ಸಮಾಧಾಯ ಪ್ರಸನ್ನಂ ಸಲಿಲೇ ಮನಃ ।**
**ಧ್ಯಾಯನ್ಮಹೋಪನಿಷದಂ ಯೋಗಯುಕ್ತೋಽಭವನ್ಮುನಿಃ ॥೩೫॥**

ಮುನಿಯಾದ ಭೂರಿಶ್ರವಸನು ಸೂರ್ಯನಲ್ಲಿ ದೃಷ್ಟಿಯನ್ನಿರಿಸಿ, (ಅಂತಶ್ಚಕ್ಷುಸ್ಸಿನಿಂದ ಜ್ಞಾನಸೂರ್ಯನನ್ನು ನೋಡುತ್ತಾ) ನಿಷ್ಕಲ್ಮಶವಾದ ಮನಸ್ಸನ್ನು ನೀರಿನಲ್ಲಿರಿಸಿ, (ಮನಸ್ಸನ್ನು ನೀರಿನಂತೆ ವಿಕಾರರಹಿತವನ್ನಾಗಿ ಮಾಡಿ) ಉಪನಿಷದ್ವಾಕ್ಯಪ್ರತಿಪಾದ್ಯವಾದ ಪರಬ್ರಹ್ಮವಸ್ತುವನ್ನೇ ಧ್ಯಾನಮಾಡುತ್ತಾ ಯೋಗಯುಕ್ತನಾಗಿ ಕುಳಿತನು. ಅದನ್ನು ನೋಡಿದ ಸರ್ವಸೈನಿಕಜನರೂ ಕೃಷ್ಣ-ಧನಂಜಯರನ್ನು ನಿಂದಿಸಿದರು. ಪುರುಷರ್ಷಭನಾದ ಭೂರಿಶ್ರವಸನನ್ನು ಶ್ಲಾಘಿಸಿದರು. ಸೈನಿಕರಿಂದ ನಿಂದಿಸಲ್ಪಡುತ್ತಿದ್ದರೂ ಕೃಷ್ಣಾರ್ಜುನರು ಅಪ್ರಿಯವಾದ ಯಾವುದೊಂದು ಮಾತನ್ನೂ ಆಡಲಿಲ್ಲ. ಸೈನಿಕರು ಯೂಪಕೇತನನಾದ ಭೂರಿಶ್ರವಸನನ್ನು ಪ್ರಶಂಸೆಮಾಡುತ್ತಿದ್ದರೂ ಆ ಪ್ರಶಂಸಾವಚನಗಳಿಂದ ಅರ್ಜುನನು ಹರ್ಷಿತನೂ ಆಗಲಿಲ್ಲ. ಮಹಾರಾಜ! ನಿನ್ನ ಮಕ್ಕಳು ಆ ರೀತಿಯಲ್ಲಿ ತನ್ನನ್ನು ನಿಂದಿಸುತ್ತಿದ್ದುದನ್ನೂ ಮೊದಲಿನ ಭೂರಿಶ್ರವಸನ ನಿಂದೆಯನ್ನೂ ಅರ್ಜುನನು ಮನಸ್ಸಿನಿಂದ ಸಹಿಸಿಕೊಳ್ಳಲಿಲ್ಲ. (ಅವರಾಡುತ್ತಿದ್ದ ನಿಂದೆಯ ಮಾತುಗಳನ್ನು ಕೇಳುತ್ತಿದ್ದಂತೆಯೇ ಅರ್ಜುನನ

---

* ಪ್ರಾಯೋಪವೇಶವೆಂದರೆ : ಮರಣಪರ್ಯಂತವಾಗಿ ನಿರಶನವ್ರತವನ್ನು ಕೈಗೊಂಡು ಕುಳಿತಿರುವುದು. 'ಪ್ರಾಯೇಣ ಮರಣಪರ್ಯನ್ತಮನಶನೇನ ಉಪವೇಶಃ– ಪ್ರಾಯೋಪವೇಶಃ'

ಮನಸ್ಸು ಕೆರಳುತ್ತಿದ್ದಿತು.) ಆದರೆ ಅರ್ಜುನನು ಕೋಪಕ್ಕೆ ಅವಕಾಶ ಕೊಡಲಿಲ್ಲ. ಹಿಂದಿನ ವಿಷಯವನ್ನು ಸ್ಮರಣೆಗೆ ತರಲು ಇಚ್ಛಿಸಿರುವವನಂತೆ ಆಕ್ಷೇಪಪೂರ್ವಕವಾಗಿ ತನ್ನನ್ನು ನಿಂದಿಸುತ್ತಿದ್ದ ಕೌರವರನ್ನೂ ಮತ್ತು ಭೂರಿಶ್ರವಸನನ್ನೂ ಸಂಬೋಧಿಸಿ ಹೇಳಿದನು :

**ಮಮ ಸರ್ವೇಽಪಿ ರಾಜಾನೋ ಜಾನನ್ತ್ಯೇವ ಮಹಾವ್ರತಮ್ ।**
**ನ ಶಕ್ಯೋ ಮಾಮಕೋ ಹನ್ತುಂ ಯೋ ಮೇ ಸ್ಯಾದ್ಬಾಣಗೋಚರೇ ॥**

"ಇಲ್ಲಿರುವ ಎಲ್ಲ ರಾಜರೂ ನಾನು ಕೈಗೊಂಡಿರುವ ಮಹಾವ್ರತದ ವಿಷಯವನ್ನು ತಿಳಿದವರೇ ಆಗಿದ್ದೀರಿ. ನನ್ನ ಬಾಣವ್ಯಾಪ್ತಿಯ ಪರಿಸರದಲ್ಲಿರುವ ಯಾವ ನನ್ನ ಆತ್ಮೀಯರನ್ನೂ ಯಾರೂ ಸಂಹರಿಸಲಾರರು. (ನನ್ನ ಬಾಣಗಳು ಎಲ್ಲಿಯವರೆಗೆ ಹೋಗುವುದೋ ಅಲ್ಲಿಯವರೆಗೂ ನನ್ನ ಕಡೆಯವರು ಶತ್ರುಗಳಿಂದ ವಧ್ಯರಾಗಲು ನಾನು ಅವಕಾಶಕೊಡುವುದಿಲ್ಲ.) ಇದು ನಾನು ಕೈಗೊಂಡಿರುವ ಮಹಾವ್ರತವಾಗಿದೆ.

**ಯೂಪಕೇತೋ ನಿರೀಕ್ಷ್ಯೈತನ್ನ ಮಾಮರ್ಹಸಿ ಗರ್ಹಿತುಮ್ ।**
**ನ ಹಿ ಧರ್ಮಮವಿಜ್ಞಾಯ ಯುಕ್ತಂ ಗರ್ಹಯಿತುಂ ಪರಮ್ ॥೪೧॥**

ಯೂಪಕೇತುವೇ! ನನ್ನ ಈ ಮಹಾವ್ರತವನ್ನು ಸ್ಮರಿಸು. ನಾನು ಕೈಗೊಂಡ ಮಹಾವ್ರತದಂತೆ ನಡೆದುಕೊಂಡಿದ್ದೇನೆ. ಆದುದರಿಂದ ನೀನು ನನ್ನನ್ನು ನಿಂದಿಸುವುದು ಉಚಿತವಲ್ಲ. ಯಾವುದು ಮುಖ್ಯಧರ್ಮವೋ ಅದನ್ನೇ ತಿಳಿಯದೇ ಇತರರನ್ನು ನಿಂದಿಸುವುದು ಖಂಡಿತವಾಗಿಯೂ ಉಚಿತವಲ್ಲ.

**ಆತ್ತಶಸ್ತ್ರಸ್ಯ ಹಿ ರಣೇ ವೃಷ್ಣಿವೀರಂ ಜಿಘಾಂಸತಃ ।**
**ಯದಹಂ ಬಾಹುಮಚ್ಛೈತ್ಸಂ ನ ಸ ಧರ್ಮೋ ವಿಗರ್ಹಿತಃ ॥೪೨॥**

ರಣರಂಗದಲ್ಲಿ ಕತ್ತಿಯನ್ನು ಹಿಡಿದು ಸಾತ್ಯಕಿಯನ್ನು ಕೊಲ್ಲಲಿಚ್ಛಿಸಿದ್ದ ನಿನ್ನ ತೋಳನ್ನು ಕತ್ತರಿಸಿ, ಆಪ್ತರಾದವರ ರಕ್ಷಣೆಯನ್ನು ಮಾಡಿದೆನೆಂಬ ಆ ಧರ್ಮವು ಖಂಡಿತವಾಗಿಯೂ ನಿಂದ್ಯವಾದುದಲ್ಲ.

**ನ್ಯಸ್ತಶಸ್ತ್ರಸ್ಯ ಬಾಲಸ್ಯ ವಿರಥಸ್ಯ ವಿವರ್ಮಣಃ ।**
**ಅಭಿಮನ್ಯೋರ್ವಧಂ ತಾತ ಧಾರ್ಮಿಕಃ ಕೋ ನು ಪೂಜಯೇತ್ ॥**

ಬಾಲನಾದ ಅಭಿಮನ್ಯುವು ಶಸ್ತ್ರರಹಿತನಾಗಿದ್ದನು. ರಥಹೀನನಾಗಿ

ದ್ದನು. ಕವಚದಿಂದಲೂ ರಹಿತನಾಗಿದ್ದನು. ಅಂತಹ ಸ್ಥಿತಿಯಲ್ಲಿದ್ದ ಅಭಿಮನ್ಯುವಿನ ವಧೆಯನ್ನು ನೀವು ಮಾಡಿದಿರಿ. ಅಂತಹ ಸ್ಥಿತಿಯಲ್ಲಿದ್ದ ಅಭಿಮನ್ಯುವಿನ ವಧೆಯನ್ನು ಧಾರ್ಮಿಕನಾದ ಯಾವನು ತಾನೇ ಪ್ರಶಂಸೆ ಮಾಡುತ್ತಾನೆ?"

ಮಹಾರಾಜ! ಪಾರ್ಥನು ಹೀಗೆ ಹೇಳಿದನಂತರ ಭೂರಿಶ್ರವಸನು ತನ್ನ ತಲೆಯಿಂದ ಭೂಮಿಯನ್ನು ಸ್ಪರ್ಶಿಸಿದನು. ಅನಂತರ ಅರ್ಜುನನಿಂದ ಕತ್ತರಿಸಲ್ಪಟ್ಟಿದ್ದ ಬಲಗೈಯನ್ನು ಎಡಗೈಯಿಂದ ಎತ್ತಿ ಅರ್ಜುನನ ಕಡೆಗೇ ಎಸೆದನು.

ಮಹಾದ್ಯುತಿಮಂತನಾದ, ಯೂಪಕೇತುವಾದ ಭೂರಿಶ್ರವಸನು ಪಾರ್ಥನು ಹೇಳಿದ ಮಾತುಗಳನ್ನು ಕೇಳಿ ಅಧೋಮುಖನಾಗಿ ಸುಮ್ಮನೇ ಕುಳಿತನು.

ಅನಂತರ ಅರ್ಜುನನು ಪುನಃ ಭೂರಿಶ್ರವಸನನ್ನು ಕುರಿತು ಹೇಳಿದನು :

"ಶಲಾಗ್ರಜನೇ! ನನಗೆ ಯುಧಿಷ್ಠಿರ, ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮ, ನಕುಲ-ಸಹದೇವರು ಇವರ ವಿಷಯದಲ್ಲಿ ಎಷ್ಟು ಪ್ರೀತಿಯಿರುವುದೋ ಅಷ್ಟೇ ಪ್ರೀತಿಯು ನಿನ್ನ ವಿಷಯದಲ್ಲಿಯೂ ಇದೆ. ನನ್ನಿಂದಲೂ ಮತ್ತು ಶ್ರೀಕೃಷ್ಣನಿಂದಲೂ ಅನುಜ್ಞೆಯನ್ನು ಪಡೆದ ನೀನು ಉಶೀನರರ ಮಗನಾದ ಶಿಬಿಯಂತೆ ಪುಣ್ಯಪುರುಷರ ಲೋಕಗಳಿಗೆ ಹೋಗು."

ಅನಂತರ ಶ್ರೀಕೃಷ್ಣನೂ ಭೂರಿಶ್ರವಸನನ್ನು ಕುರಿತು ಹೇಳಿದನು :

**ಯೇ ಲೋಕಾ ಮಮ ವಿಮಲಾಃ ಸಕೃದ್ವಿಭಾತಾ**
**ಬ್ರಹ್ಮಾದ್ಯೈಃ ಸುರವೃಷಭೈರಪೀಕ್ಷ್ಯಮಾಣಾಃ ।**
**ತಾನ್ಕ್ಷಿಪ್ರಂ ವ್ರಜ ಸತತಾಗ್ನಿಹೋತ್ರಯಾಜಿ-**
**ನ್ಮತ್ತುಲ್ಯೋ ಭವ ಗರುಡೋತ್ತಮಾಙ್ಗಯಾನಃ ॥೪೮॥**

"ಸತತವಾಗಿ ಅಗ್ನಿಹೋತ್ರವನ್ನು ಮಾಡುವ ಭೂರಿಶ್ರವಸನೇ! ನಿರಂತರವಾಗಿ ಪ್ರಕಾಶಿಸುವ ನಿರ್ಮಲವಾದ ಯಾವ ನನ್ನ ಲೋಕಗಳಿವೆಯೋ ಮತ್ತು ಬ್ರಹ್ಮನೇ ಮೊದಲಾದ ದೇವೇಶ್ವರರೂ ಸಹ ಯಾವ ಲೋಕಗಳಿಗೆ ಹೋಗಲು ನಿರಂತರವಾಗಿ ಇಚ್ಛಿಸುತ್ತಾರೆಯೋ–ಆ ನನ್ನ ಲೋಕಗಳಿಗೆ ನೀನು ಬಹಳ ಬೇಗನೆ ಹೋಗು. ಗರುಡನ ಹೆಗಲ ಮೇಲೆ ಕುಳಿತು ಪ್ರಯಾಣಮಾಡುತ್ತಾ ನನಗೆ ಸಮಾನನಾಗಿರು."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಸೋಮದತ್ತನ ಮಗನಾದ ಭೂರಿಶ್ರವಸನಿಂದ ವಿಮುಕ್ತನಾದ ಸಾತ್ಯಕಿಯು ಒಡನೆಯೇ ಮೇಲೆದ್ದು ಖಡ್ಗವನ್ನು ತೆಗೆದುಕೊಂಡು ಮಹಾತ್ಮನಾದ ಭೂರಿಶ್ರವಸನ ಕತ್ತನ್ನು ಕತ್ತರಿಸಲು ನಿಶ್ಚಯಿಸಿದನು.



ಸೊಂಡಿಲನ್ನು ಕತ್ತರಿಸಿದ ಆನೆಯಂತೆ ಬಲಭುಜವನ್ನು ಕಳೆದುಕೊಂಡು ಕುಳಿತಿದ್ದ, ಅರ್ಜುನನಿಂದಲೇ ಅರ್ಧಹತನಾಗಿ ಹೋಗಿದ್ದ, ಪ್ರಾಯೋಪವೇಶ ವ್ರತದಲ್ಲಿಯೇ ಆಸಕ್ತನಾಗಿದ್ದ, ಪಾಪರಹಿತನಾದ ಭೂರಿಶ್ರವಸನನ್ನು ಸಾತ್ಯಕಿಯು ಕೊಲ್ಲಲಿಚ್ಛಿಸಿದನು.

ಆ ಸಮಯದಲ್ಲಿ ಎಲ್ಲ ಸೈನಿಕರೂ ಗಟ್ಟಿಯಾಗಿ ಕಿರುಚುತ್ತಾ ಸಾತ್ಯಕಿಯನ್ನು ನಿಂದಿಸುತ್ತಿದ್ದರು. ಆದರೂ ಸಾತ್ಯಕಿಯ ಮನಸ್ಸು ಬಹಳವಾಗಿ

ಕೆಟ್ಟುಹೋಗಿದ್ದಿತು. ಕೃಷ್ಣ, ಮಹಾತ್ಮನಾದ ಪಾರ್ಥ, ಭೀಮಸೇನ, ಚಕ್ರರಕ್ಷಕರಾದ ಯುಧಾಮನ್ಯು ಮತ್ತು ಉತ್ತಮೌಜಸರು, ಅಶ್ವತ್ಥಾಮಾ, ಕೃಪರು, ಕರ್ಣ, ವೃಷಸೇನ, ಸೈಂಧವ–ಇವರೆಲ್ಲರೂ ಸಾತ್ಯಕಿಯನ್ನು ತಡೆದರು. ಆದರೂ ಸಹ ಸಾತ್ಯಕಿಯು ಸೈನಿಕರು ಕಿರುಚಿಕೊಳ್ಳುತ್ತಿರುವಂತೆಯೇ ಪ್ರಾಯೋಪವೇಶವ್ರತನಿಷ್ಠನಾಗಿದ್ದ ಭೂರಿಶ್ರವಸನನ್ನು ಸಂಹರಿಸಿದನು. ಅರ್ಜುನನಿಂದ ಬಲತೋಳನ್ನು ಕಳೆದುಕೊಂಡಿದ್ದ, ಆಮರಣಾಂತವಾಗಿ ಉಪವಾಸಮಾಡಿ ಪ್ರಾಣಗಳನ್ನು ತೊರೆಯಲು ನಿಶ್ಚಯಿಸಿದ್ದ ಭೂರಿಶ್ರವಸನ ತಲೆಯನ್ನು ಸಾತ್ಯಕಿಯು ಖಡ್ಗದಿಂದ ಕತ್ತರಿಸಿದನು. ಅರ್ಜುನನಿಂದಲೇ ಅರ್ಧಹತನಾಗಿದ್ದ ಕುರುಪುಂಗವನ ತಲೆಯನ್ನು ಕಡಿದುದಕ್ಕಾಗಿ ಸೈನಿಕರು ಸಾತ್ಯಕಿಯನ್ನು ಗೌರವಿಸಲಿಲ್ಲ. ಇಂದ್ರನಿಗೆ ಸಮಾನನಾಗಿದ್ದ, ಪ್ರಾಯೋಪವೇಶವ್ರತದಲ್ಲಿ ಕುಳಿತಿದ್ದ, ಸಾತ್ಯಕಿಯಿಂದ ಹತನಾದ ಭೂರಿಶ್ರವಸನನ್ನು ಕಂಡು ಸಿದ್ಧ-ಚಾರಣ-ಮಾನವರೂ ಮತ್ತು ದೇವತೆಗಳೂ ಬಹಳವಾಗಿ ಪ್ರಶಂಸಿಸಿದರು. ಅವನ ಪರಮಾದ್ಭುತವಾದ ಸಾಹಸಕರ್ಮಗಳಿಂದ ವಿಸ್ಮಿತರೂ ಆದರು. ಆ ಸಮಯದಲ್ಲಿ ನಿನ್ನ ಸೈನಿಕರಲ್ಲಿ ಕೆಲವರು ಸಾತ್ಯಕಿಯ ಕಾರ್ಯವನ್ನು ಸಮರ್ಥಿಸುತ್ತಲೂ ಇದ್ದರು. ಮತ್ತೆ ಕೆಲವರು ಅವನ ಕಾರ್ಯವನ್ನು ನಿಂದಿಸುತ್ತಲೂ ಇದ್ದರು :

**ನ ವಾರ್ಷ್ಣೇಯಸ್ಯಾಪರಾಧೋ ಭವಿತವ್ಯಂ ಹಿ ತತ್ತಥಾ ।**
**ತಸ್ಮಾನ್ಮನ್ಯುರ್ನವಃ ಕಾರ್ಯಃ ಕ್ರೋಧೋ ದುಃಖತರೋ ನೃಣಾಮ್ ॥೫೮॥**

"ಇದರಲ್ಲಿ ಸಾತ್ಯಕಿಯ ಅಪರಾಧವೇನೂ ಇರುವುದಿಲ್ಲ. ಯಾವುದು ಹೇಗೆ ಆಗಬೇಕಾಗಿದ್ದಿತೋ ಅದು ಹಾಗೆಯೇ ಆಯಿತು. ಆದುದರಿಂದ ಈ ವಿಷಯದಲ್ಲಿ ಯಾರೂ ಕೋಪಗೊಳ್ಳುವ ಕಾರಣವಿಲ್ಲ. ಕ್ರೋಧವು ಮಾನವನ ದುಃಖಕ್ಕೆ ಕಾರಣವಾಗುತ್ತದೆ"–ಎಂಬುದಾಗಿ ಕೆಲವರು ಹೇಳುತ್ತಿದ್ದರು.

**ಹನ್ತವ್ಯಶ್ಚೈವ ವೀರೇಣ ನಾತ್ರ ಕಾರ್ಯಾ ವಿಚಾರಣಾ ।**
**ವಿಹಿತೋ ಹ್ಯಸ್ಯ ಧಾತ್ರೈವ ಮೃತ್ಯುಃ ಸಾತ್ಯಕಿರಾಹವೇ ॥೫೯॥**

"ವೀರಸ್ವರ್ಗವನ್ನು ಪಡೆಯಬೇಕಾದರೆ–ವೀರನಾದವನಿಂದ ಹತನಾಗಲೇಬೇಕು. ಅದು ಹಾಗೆಯೇ ಆಗಿದೆ. ಈ ವಿಷಯವೀಗ ಪರಿಶೀಲನೆಗೂ

ಅರ್ಹವಾದುದಲ್ಲ. ಯುದ್ಧದಲ್ಲಿ ಭೂರಿಶ್ರವಸನಿಗೆ ಸಾತ್ಯಕಿಯೇ ಮೃತ್ಯುವೆಂದು ಬ್ರಹ್ಮನೇ ವಿಧಾಯಕಮಾಡಿದ್ದನು. ಆದುದರಿಂದಲೇ ಸಾತ್ಯಕಿಯು ಭೂರಿಶ್ರವಸನನ್ನು ಸಂಹರಿಸಿದನು"–ಎಂಬುದಾಗಿ ಮತ್ತೆ ಕೆಲವರು ಹೇಳುತ್ತಾ ಸಮಾಧಾನಪಟ್ಟುಕೊಳ್ಳುತ್ತಿದ್ದರು.

ಅನಂತರ ಸಾತ್ಯಕಿಯು ಕುರುಪುಂಗವರನ್ನು ಕುರಿತು ಹೇಳಿದನು :

**ನ ಹನ್ತವ್ಯೋ ನ ಹನ್ತವ್ಯ ಇತಿ ಯನ್ಮಾಂ ಪ್ರಭಾಷತ ।**
**ಧರ್ಮವಾದೈರಧರ್ಮಿಷ್ಠಾ ಧರ್ಮಕಞ್ಚುಕಮಾಸ್ಥಿತಾಃ ॥೬೦॥**

"ಸಂಹಾರಮಾಡಬಾರದು ; ಸಂಹಾರಮಾಡಬಾರದು"–ಎಂದು ಧರ್ಮದ ಸೋಗಿನಿಂದ ನೀವೆಲ್ಲರೂ ಮಾತನಾಡುತ್ತಿದ್ದೀರಿ. ಆದರೆ ನೀವೆಲ್ಲರೂ ಅಧರ್ಮಿಷ್ಠರು. ಕೇವಲ ಧರ್ಮದ ಹೊದ್ದಿಕೆಯನ್ನು ಧರಿಸಿರ ತಕ್ಕವರು.

**ಯದಾ ಬಾಲಃ ಸುಭದ್ರಾಯಾಃ ಸುತಃ ಶಸ್ತ್ರವಿನಾಕೃತಃ ।**
**ಯುಷ್ಮಾಭಿರ್ನಿಹತೋ ಯುದ್ಧೇ ತದಾ ಧರ್ಮ ಕ್ವ ವೋ ಗತಃ ॥**

ಸುಭದ್ರೆಯ ಮಗನಾದ ಬಾಲನಾದ ಅಭಿಮನ್ಯುವು ಶಸ್ತ್ರಾಸ್ತ್ರಗಳೆಲ್ಲವನ್ನೂ ಕಳೆದುಕೊಂಡಿದ್ದನು. ಆ ಸಮಯದಲ್ಲಿ ನೀವೆಲ್ಲರೂ ಸೇರಿ ಅವನನ್ನು ಸಂಹರಿಸಿದಿರಿ. ಆಗ ನಿಮ್ಮ ಧರ್ಮವು ಎಲ್ಲಿಗೆ ಹೋಗಿದ್ದಿತು?

ನಾನು ಬಹಳ ಹಿಂದೆಯೇ ಈ ಒಂದು ಪ್ರತಿಜ್ಞೆಯನ್ನು ಮಾಡಿದ್ದೆನು. ಯಾವನು ನನ್ನನ್ನು ಯುದ್ಧದಲ್ಲಿ ಬಹಳವಾಗಿ ಪೀಡಿಸಿ, ಜೀವಿಸಿರುವಾಗಲೇ ಕೋಪಗೊಂಡು ಕಾಲಿನಿಂದ ಒದೆಯುತ್ತಾನೆಯೋ–ಅವನನ್ನು ನಾನು ಕೊಲ್ಲುತ್ತೇನೆ. ಅವನು ಯಾರಾಗಿದ್ದರೂ ಸರಿಯೇ. ಆ ನನ್ನ ಶತ್ರುವು ಮುನಿಯ ವ್ರತವನ್ನು ಕೈಗೊಂಡಿದ್ದರೂ ನನ್ನನ್ನು ಅಪಮಾನಿಸಿದ ಆ ಶತ್ರುವನ್ನು ಸಂಹರಿಸಿಯೇ ತೀರುವೆನು-ಹೀಗೆ ನಾನು ಪ್ರತಿಜ್ಞೆಯನ್ನು ಮಾಡಿದ್ದೆನು.

ಭೂರಿಶ್ರವಸನನ್ನು ಪ್ರಹರಿಸಲು ಬಹಳವಾಗಿ ಪ್ರಯತ್ನಿಸುತ್ತಿದ್ದ, ಬಲಿಷ್ಠವಾದ ಭುಜಗಳಿಂದ ಕೂಡಿದ್ದ ನನ್ನನ್ನು ನೀವೆಲ್ಲರೂ ನಿಮ್ಮ ಕಣ್ಣುಗಳಿಂದಲೇ ನೋಡುತ್ತಿದ್ದರೂ ನನ್ನನ್ನು ಮೃತನಾದನೆಂದೇ ಭಾವಿಸಿಬಿಟ್ಟಿದ್ದಿರಿ. ಇದು ನಿಮ್ಮ ಬುದ್ಧಿಮಾಂದ್ಯವನ್ನು ತೋರಿಸುವುದಾಗಿದೆ. ಕುರುಪುಂಗವರೇ

ಭೂರಿಶ್ರವಸನು ಮಾಡಿದುದಕ್ಕೆ ಪ್ರತಿಮಾಡಿರುವುದು ಯುಕ್ತವಾಗಿಯೇ ಇದೆ. ಯುಕ್ತವಾದ ಕಾರ್ಯವನ್ನೇ ನಾನು ಮಾಡಿದ್ದೇನೆ. ಸಂಕಟದಲ್ಲಿ ಸಿಕ್ಕಿಬಿದ್ದ ತನ್ನವರನ್ನು ಬಾಣಪ್ರಹಾರದ ಪರಿಸರದಲ್ಲಿದ್ದರೆ ರಕ್ಷಿಸುತ್ತೇನೆಂದು ಪ್ರತಿಜ್ಞೆಯನ್ನು ಮಾಡಿದ್ದ ಪಾರ್ಥನು ನನ್ನನ್ನು ನೋಡಿ ಭೂರಿಶ್ರವಸನ ಖಡ್ಗಯುಕ್ತವಾಗಿದ್ದ ಕೈಯನ್ನು ಕತ್ತರಿಸಿದನು. ಅದರಿಂದ ನಾನು ವಂಚಿತನೇ ಆದೆನು. ಏಕೆಂದರೆ : ಇವನನ್ನು ಸಂಹಾರಮಾಡಿದ ಪೂರ್ಣಯಶಸ್ಸು ನನಗೆ ಲಭ್ಯವಾಗಲಿಲ್ಲ. ಯಾವುದು ಹೇಗೆ ಆಗಬೇಕಾಗಿದೆಯೋ ಅದು ಹಾಗೆಯೇ ಆಗುತ್ತದೆ. ದೈವವೇ ಹಾಗೆ ಮಾಡಿಸುತ್ತದೆ. ಈ ಮಹಾಸಂಗ್ರಾಮ ದಲ್ಲಿ ಭೂರಿಶ್ರವಸನು ಹತನಾದನು. ಇದರಲ್ಲಿ ಅಧರ್ಮದ ಕಾರ್ಯವೇನಿದೆ?

ಹಿಂದೆ ವಾಲ್ಮೀಕಿಯೂ ಪ್ರಪಂಚದಲ್ಲಿ ಈ ಗೀತ* ವನ್ನು ಹಾಡಿದ್ದನು :

**ನ ಹನ್ತವ್ಯಾಃ ಸ್ತ್ರಿಯ ಇತಿ ಯದ್ಬ್ರವೀಷಿ ಪ್ಲವಙ್ಗಮ ।**
**ಸರ್ವಕಾಲಂ ಮನುಷ್ಯೇಣ ವ್ಯವಸಾಯವತಾ ಸದಾ ।**
**ಪೀಡಾಕರಮಮಿತ್ರಾಣಾಂ ಯತ್ಸ್ಯಾತ್ಕರ್ತವ್ಯಮೇವ ತತ್ ॥೬೮॥**

"ವಾನರ! ಸ್ತ್ರೀಯರ ವಧೆಯನ್ನು ಮಾಡಕೂಡದೆಂದು ನೀನೇನೋ ಹೇಳುವೆ. ಅದಕ್ಕೆ ಉತ್ತರವಾಗಿ ನಾನು ಈ ಮಾತುಗಳನ್ನು ಹೇಳುತ್ತೇನೆ. ಉದ್ಯೋಗಶೀಲನಾದ ಮನುಷ್ಯನು ಎಲ್ಲ ಕಾಲಗಳಲ್ಲಿಯೂ ಶತ್ರುವಿಗೆ ತೊಂದರೆಯನ್ನು ಕೊಡುತ್ತಲೇ ಇರಬೇಕು. ವೀರಪುರುಷನ ಕರ್ತವ್ಯವೇ ಇದಾಗಿರುತ್ತದೆ."

---

* ರಣಾಂಗಣದಲ್ಲಿ ರಾಮನ ಸೈನ್ಯವನ್ನು ಮೋಹಗೊಳಿಸಲು ಇಂದ್ರಜಿತುವು ಮಾಯಾಸೀತೆಯನ್ನು ನಿರ್ಮಿಸಿ ಅವಳನ್ನು ಸಂಹರಿಸಲು ತೊಡಗುತ್ತಾನೆ. ಆಗ ಹನುಮಂತನು 'ಇದು ಪಾಪಕಾರ್ಯ ; ನೀನು ಮಾಡುತ್ತಿರುವುದು ಹೇಡಿಯ ಕೆಲಸ ; ಈಕೆ ನಿರಪರಾಧಿನಿ; ಮೇಲಾಗಿ ಹೆಂಗಸು. ಈಕೆಯನ್ನು ಸಂಹರಿಸಿದರೆ ಸ್ತ್ರೀಘಾತಕರು ಹೊಂದುವ ನರಕಕ್ಕೆ ನೀನು ಹೋಗುತ್ತೀಯೆ'–ಎಂದು ಕೂಗಿ ಹೇಳುತ್ತಾನೆ ಮತ್ತು ಇಂದ್ರಜಿತುವಿನ ಕಡೆ ನುಗ್ಗುತ್ತಾನೆ. ಆಗ ಇಂದ್ರಜಿತುವು ಸಾವಿರಾರು ಬಾಣಗಳಿಂದ ಕಪಿಸೇನೆಯನ್ನು ನೋಯಿಸಿ ಹನುಮಂತನ ಆಕ್ಷೇಪಣೆಗೆ ಮೇಲೆ ಹೇಳಿದ ಶ್ಲೋಕರೂಪದ ಉತ್ತರನೀಡುತ್ತಾನೆ.

(ವಾಲ್ಮೀಕಿರಾಮಾಯಣ-ಯುದ್ಧಕಾಂಡ-ಸರ್ಗ ೮೧ ಮಾಯಾಸೀತಾವಧಪ್ರಕರಣ.)

ಮಹಾರಾಜ! ಸಾತ್ಯಕಿಯು ಹೀಗೆಂದು ಹೇಳಿದನಂತರ ಕೌರವ ಪುಂಗವರು ಯಾವ ಮಾತನ್ನೂ ಆಡಲಿಲ್ಲ. ಸಾತ್ಯಕಿಯನ್ನು ಮನಸ್ಸಿನಿಂದಲೇ ಶ್ಲಾಘಿಸಿದರು. ದೊಡ್ಡ-ದೊಡ್ಡ ಯಜ್ಞಗಳಲ್ಲಿ ಮಂತ್ರಯುಕ್ತವಾದ ಅವಭೃತ ಗಳಿಂದ ಪೂತನಾದ, ಯಶೋವಂತನಾದ, ಯಜ್ಞಗಳಲ್ಲಿ ಸಾವಿರಾರು ಸುವರ್ಣನಾಣ್ಯಗಳನ್ನು ದಕ್ಷಿಣಾರೂಪದಲ್ಲಿ ಕೊಡುತ್ತಿದ್ದ, ವನವಾಸಿಯಾದ ಮುನಿಯಂತೆಯೇ ಮೌನಧರಿಸಿ ರಣಾಂಗಣದಲ್ಲಿ ಕುಳಿತಿದ್ದ ಭೂರಿಶ್ರವಸನ ವಧೆಯನ್ನು ಅಲ್ಲಿದ್ದ ಯೋಧರಾರೂ ಪ್ರಶಂಸೆಮಾಡಲಿಲ್ಲ. ವರದನಾದ ಶೂರನಾದ ಭೂರಿಶ್ರವಸನ ನೀಲಕೇಶಯುಕ್ತವಾದ ಮತ್ತು ಕಪೋತದಂತೆ ಕೆಂಪಾದ ಕಣ್ಣುಗಳನ್ನು ಹೊಂದಿದ್ದ ಶಿರಸ್ಸು–ಅಶ್ವಮೇಧಯಾಗದಲ್ಲಿ ಕತ್ತರಿಸಿದ ಕುದುರೆಯ ತಲೆಯು ಹವಿರ್ಧಾನಮಂಟಪದ ಮಧ್ಯಭಾಗದಲ್ಲಿ ಇಡ ಲ್ಪಡುವಂತೆ–ಭೂಮಿಯ ಮೇಲೆ ಸಾತ್ಯಕಿಯಿಂದ ಇಡಲ್ಪಟ್ಟಿತು.

ವರದಾಯಕನಾದ ಮತ್ತು ವರಪಡೆಯಲು ಯೋಗ್ಯನಾದ ಭೂರಿ ಶ್ರವಸನು ಆ ಮಹಾಯುದ್ಧದಲ್ಲಿ ಶಸ್ತ್ರದ ತೇಜಸ್ಸಿನಿಂದ ಪೂತನಾಗಿ ತನ್ನ ದೇಹವನ್ನು ಪರಿತ್ಯಜಿಸಿ, ಶ್ರೇಷ್ಠವಾದ ಧರ್ಮದ ಮೂಲಕವಾಗಿ ಪೃಥ್ವಿಯನ್ನೂ ಮತ್ತು ಆಕಾಶವನ್ನೂ ಅತಿಕ್ರಮಿಸಿ ಊರ್ಧ್ವಲೋಕಕ್ಕೆ ಪ್ರಯಾಣಮಾಡಿದನು.”

೧೪೩ನೆಯ ಅಧ್ಯಾಯವು ಮುಗಿಯಿತು.

೧೪೪ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯು ಭೂರಿಶ್ರವಸನಿಂದ ಅಪಮಾನಿತನಾದುದಕ್ಕೆ ಕಾರಣ : ವೃಷ್ಣಿವಂಶದ ವೀರರ ಪ್ರಶಂಸೆ

ಸಾತ್ಯಕಿಯು ಭೂರಿಶ್ರವಸನಿಂದ ಪರಾಜಯಗೊಂಡುದನ್ನು ಕೇಳಿ ಅಚ್ಚರಿಗೊಂಡ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

“ಸಂಜಯ! ಅರ್ಜುನನ ಬಳಿಗೆ ಹೋಗುವೆನೆಂದು ಯುಧಿಷ್ಠಿರನಿಗೆ ಪ್ರತಿಜ್ಞಾವಚನವನ್ನಿತ್ತು , ಅಲ್ಲಿಂದ ಹೊರಟ ವೀರನಾದ ಸಾತ್ಯಕಿಯು ದ್ರೋಣ-ರಾಧೇಯ-ಕರ್ಣ-ಕೃತವರ್ಮಾದಿಗಳಿಂದಲೂ ಪರಾಜಿತನಾಗದೇ ಕುರುಸೇನಾಸಮುದ್ರವನ್ನು ದಾಟಿದನು. ಕುರುಯೋಧರಲ್ಲಿ ಯಾರೂ ಸಹ ಅವನನ್ನು ತಡೆಯಲು ಸಮರ್ಥರಾಗಿರಲಿಲ್ಲ. ಹೀಗಿರುವಾಗ ಕೌರವೇಯನಾದ

ಭೂರಿಶ್ರವಸನು ಸಾತ್ಯಕಿಯನ್ನು ಹೇಗೆ ಆಕ್ರಮಿಸಿದನು ಮತ್ತು ಅವನನ್ನು ಬಲಪೂರ್ವಕವಾಗಿ ಭೂಮಿಗೆ ಹೇಗೆ ಕೆಡವಿದನು?–ಇದರ ರಹಸ್ಯ ವೇನೆಂಬುದನ್ನು ನನಗೆ ವಿಸ್ತರಿಸಿ ಹೇಳು."

"ಮಹಾರಾಜ! ನಿನಗೆ ಯಾವ ವಿಷಯದಲ್ಲಿ ಸಂಶಯವಿದೆಯೋ–ಅದರ ನಿವಾರಣೆಗಾಗಿ ಹಿಂದೆ ಶೈನೇಯ-ಭೂರಿಶ್ರವಸರು ಹೇಗೆ ಹುಟ್ಟಿದ ರೆಂಬುದನ್ನು ಹೇಳುತ್ತೇನೆ ; ಕೇಳು. ಇದರಿಂದಲೇ ನಿನ್ನ ಸಂಶಯವು ನಿವಾರಣೆಯಾಗುತ್ತದೆ.

**ಅತ್ರೇಃ ಪುತ್ರೋಽಭವತ್ಸೋಮಃ ಸೋಮಸ್ಯ ತು ಬುಧಃ ಸ್ಮೃತಃ ।**
**ಬುಧಸ್ಯೈಕೋ ಮಹೇನ್ದ್ರಾಭಃ ಪುತ್ರ ಆಸೀತ್ಪುರೂರವಾಃ ॥೪॥**

ಸೋಮ ಅಥವಾ ಚಂದ್ರನು ಅತ್ರಿಮಹರ್ಷಿಯ ಮಗ. ಸೋಮನ ಮಗ ಬುಧ. ಬುಧನಿಗೆ ಮಹೇಂದ್ರಸದೃಶನಾದ ಪುರೂರವನೆಂಬ ಮಗನಿದ್ದನು.

**ಪುರೂರವಸ ಆಯುಸ್ತು ಆಯುಷೋ ನಹುಷಃ ಸುತಃ ।**
**ನಹುಷಸ್ಯ ಯಯಾತಿಸ್ತು ರಾಜಾ ದೇವರ್ಷಿಸಮ್ಮತಃ ॥೫॥**

ಪುರೂರವನ ಮಗನ ಹೆಸರು ಆಯು. ಆಯುವಿನ ಮಗ ನಹುಷ. ನಹುಷನಿಗೆ ಯಯಾತಿಯೆಂಬ ಮಗನಿದ್ದನು. ಅವನು ದೇವತೆಗಳಿಗೂ–ಋಷಿಗಳಿಗೂ ಬಹಳ ಪ್ರಿಯನಾಗಿದ್ದನು.

**ಯಯಾತೇರ್ದೇವಯಾನ್ಯಾಂ ತು ಯದುರ್ಜ್ಯೇಷ್ಠೋಽಭವತ್ಸುತಃ ।**
**ಯದೋರಭೂದನ್ವವಾಯೇ ದೇವಮೀಢ ಇತಿ ಸ್ಮೃತಃ ॥೬॥**
**ಯಾದವಸ್ತಸ್ಯ ತು ಸುತಃ ಶೂರಸ್ತ್ರೈಲೋಕ್ಯಸಮ್ಮತಃ ।**
**ಶೂರಸ್ಯ ಶೌರಿರ್ನೃವರೋ ವಸುದೇವೋ ಮಹಾಯಶಾಃ ॥೭॥**

ಯಯಾತಿಮಹಾರಾಜನಿಗೆ ದೇವಯಾನೀ ಎಂಬ ಭಾರ್ಯೆಯಲ್ಲಿ ಯದು ಎಂಬುವನು ಹುಟ್ಟಿದನು. ಅವನೇ ಹಿರಿಯ ಮಗನು. ಯದುವಿನ ವಂಶದಲ್ಲಿ ದೇವಮೀಢನೆಂಬುವನು ಹುಟ್ಟಿದನು. ಯದುವಿನ ವಂಶದಲ್ಲಿ ಹುಟ್ಟಿದ್ದರಿಂದ ಯಾದವನೆಂದೂ ಪ್ರಥಿತನಾದ ತ್ರೈಲೋಕ್ಯಸಮ್ಮತನಾದ ಶೂರನು ದೇವಮೀಢನ ಮಗ. ಶೂರನಿಗೆ ನರಶ್ರೇಷ್ಠನಾದ ಶೌರಿ ಎಂಬುವನು ಹುಟ್ಟಿದನು. ಮಹಾಯಶೋವಂತನಾದ ಶೌರಿಯನ್ನು ವಸುದೇವ ಎಂದೂ ಕರೆಯುತ್ತಿದ್ದರು.

ವಸುದೇವನು ಧನುರ್ವಿದ್ಯೆಯಲ್ಲಿ ಯಾರಿಗೂ ಕಡಿಮೆಯವನಾಗಿರಲಿಲ್ಲ. ಮಹಾಶೂರನಾಗಿದ್ದನು. ಯುದ್ಧದಲ್ಲಿ ಕಾರ್ತವೀರ್ಯನಿಗೆ ಸಮನಾಗಿ ಯುದ್ಧಮಾಡುತ್ತಿದ್ದನು. ಯಾದವಕುಲದಲ್ಲಿಯೇ ಶಿನಿ ಎಂಬುವನೂ ಹುಟ್ಟಿದನು. ಅವನೂ ಸಹ ವಸುದೇವನಷ್ಟೇ ವೀರ್ಯಪರಾಕ್ರಮವುಳ್ಳವನಾಗಿದ್ದನು.

ಅದೇ ಕಾಲದಲ್ಲಿ ಮಹಾತ್ಮನಾದ ದೇವಕ ಎಂಬುವನ ಮಗಳ ಸ್ವಯಂವರಕ್ಕೆ ಸರ್ವಕ್ಷತ್ರಿಯರೂ ಆಗಮಿಸಿದ್ದರು. ಆ ಸಮಯದಲ್ಲಿ ಶಿನಿಯು ಸ್ವಯಂವರಕ್ಕೆ ಆಗಮಿಸಿದ್ದ ಎಲ್ಲ ರಾಜರನ್ನೂ ಜಯಿಸಿ, ತನ್ನ ಅಣ್ಣನಾದ ವಸುದೇವನ ಸಲುವಾಗಿ ದೇವಕನ ಮಗಳಾದ ದೇವಕಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡನು. ದೇವಕೀದೇವಿಯು ಶಿನಿಯ ರಥದಲ್ಲಿದ್ದುದನ್ನು ಕಂಡು ಮಹಾತೇಜಸ್ವಿಯಾದ, ಶೂರನಾದ ಸೋಮದತ್ತನು ಶಿನಿಯ ಪರಾಕ್ರಮದ ವಿಷಯವಾಗಿ ಸಹನೆಯನ್ನು ತಾಳಲಿಲ್ಲ. ಸೋಮದತ್ತನು ಶಿನಿಯ ಪರಾಕ್ರಮವನ್ನು ಕುಗ್ಗಿಸಬೇಕೆಂದು ನಿರ್ಧರಿಸಿದನು. ಮಹಾಬಲಿಷ್ಠರಾದ ಸೋಮದತ್ತ ಮತ್ತು ಶಿನಿಗಳಿಗೆ ಅರ್ಧದಿನಪರ್ಯಂತವಾಗಿ ವಿಚಿತ್ರವಾದ ಮತ್ತು ಪರಮಾದ್ಭುತವಾದ ಯುದ್ಧವು ನಡೆಯಿತು. ಶಿನಿಯು ಸೋಮದತ್ತನನ್ನು ಬಲಪೂರ್ವಕವಾಗಿ ಭೂಮಿಗೆ ಕೆಡವಿದನು.

ಅಷ್ಟಕ್ಕೇ ಬಿಡಲಿಲ್ಲ. ಶಿನಿಯು ಕತ್ತಿಯನ್ನು ಮೇಲೆತ್ತಿ ಸೋಮದತ್ತನ ಮುಡಿಯನ್ನು ಹಿಡಿದು ಅವನನ್ನು ಕಾಲಿನಿಂದ ಒದೆದನು. ಸಾವಿರಾರು ರಾಜರ ಮಧ್ಯದಲ್ಲಿ ಮತ್ತು ಸಾವಿರಾರು ಪ್ರೇಕ್ಷಕರು ಸುತ್ತಲೂ ನಿಂತು ನೋಡುತ್ತಿದ್ದಾಗ ಆ ಘಟನೆಯು ನಡೆಯಿತು. ಕಟ್ಟಕಡೆಗೆ ಶಿನಿಯು 'ಹೋಗು. ಎಲ್ಲಿಯಾದರೂ ಬದುಕಿಕೋ'—ಎಂದು ಹೇಳಿ ಕರುಣೆಯಿಂದ ಸೋಮದತ್ತನನ್ನು ಬಿಟ್ಟುಬಿಟ್ಟನು. ಶಿನಿಯು ಸೋಮದತ್ತನನ್ನು ಇಂತಹ ದುರವಸ್ಥೆಗೆ ಈಡುಮಾಡಿ ಅವಮಾನಗೊಳಿಸಿ ಕಳುಹಿಸಿದನು. ಸೋಮದತ್ತನು ತನಗಾದ ಅವಮಾನವನ್ನು ನೆನೆದು ಕೋಪಪರವಶನಾಗಿ ಶಿನಿಗೆ ಪ್ರತೀಕಾರಮಾಡುವ ಇಚ್ಛೆಯಿಂದ ಘೋರವಾದ ತಪಸ್ಸುಮಾಡಿ ಮಹಾದೇವನನ್ನು ಒಲಿಸಿಕೊಂಡನು. ಸೋಮದತ್ತನ ತಪಸ್ಸಿನಿಂದ ತುಷ್ಟನಾದ, ಶ್ರೇಷ್ಠರಿಗೆ ವರದನಾದ, ಪ್ರಭುವಾದ ಮಹಾದೇವನು ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿ ಅವನನ್ನು ತೃಪ್ತಿಗೊಳಿಸಿದನು. ಪರಮಹೃಷ್ಟನಾದ ಸೋಮದತ್ತನು ಈ ವರವನ್ನು ಕೇಳಿದನು :

**ಪುತ್ರಮಿಚ್ಛಾಮಿ ಭಗವನ್ಯೋ ನಿಪಾತ್ಯ ಶಿನೇಃ ಸುತಮ್ ।**
**ಮಧ್ಯೇ ರಾಜಸಹಸ್ರಾಣಾಂ ಪದಾ ಹನ್ಯಾಚ್ಚ ಸಂಯುಗೇ ॥೧೭॥**

"ಭಗವನ್ ಮಹಾದೇವ! ಸಾವಿರಾರು ರಾಜರ ಮಧ್ಯದಲ್ಲಿ ಶಿನಿಯ ಮಗನನ್ನು ಭೂಮಿಗೆ ಕೆಡವಿ ಕಾಲಿನಿಂದ ಒದೆಯುವ ಸಾಮರ್ಥ್ಯವನ್ನು ಹೊಂದಿರುವ ಪುತ್ರನನ್ನು ನಿನ್ನ ಅನುಗ್ರಹದಿಂದ ಪಡೆದುಕೊಳ್ಳಲು ಇಚ್ಛಿಸು ತ್ತೇನೆ."

ಮಹಾರಾಜ! ಸೋಮದತ್ತನ ಆ ಮಾತನ್ನು ಕೇಳಿ ಮಹಾದೇವನು 'ಹಾಗೆಯೇ ಆಗಲಿ' ಎಂದು ಹೇಳಿ ಅಂತರ್ಧಾನಹೊಂದಿದನು.

ಮಹಾದೇವನ ಆ ವರದಾನದಿಂದಲೇ ಸೋಮದತ್ತನು ಯಜ್ಞಗಳಲ್ಲಿ ಹೇರಳವಾಗಿ ದಾನ-ದಕ್ಷಿಣೆಗಳನ್ನು ಕೊಡುವ ಸ್ವಭಾವದಿಂದ ಕೂಡಿದ್ದ ಭೂರಿಶ್ರವಸನನ್ನು ಮಗನನ್ನಾಗಿ ಪಡೆದುಕೊಂಡನು. ಸೋಮದತ್ತನ ಅಭೀಷ್ಟದಂತೆಯೇ ಭೂರಿಶ್ರವಸನು ಶಿನಿಯ ಮಗನನ್ನು ಯುದ್ಧದಲ್ಲಿ ಭೂಮಿಗೆ ಕೆಡವಿದನು. ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಸಾತ್ಯಕಿಯನ್ನು ಕಾಲಿನಿಂದಲೂ ಒದೆದನು.

ಮಹಾರಾಜ! ನಿನ್ನ ಪ್ರಶ್ನೆಗೆ ಉತ್ತರವಾಗಿ ನಾನು ಹಿಂದೆ ನಡೆದ ಈ ವೃತ್ತಾಂತವನ್ನು ನಿನಗೆ ಹೇಳಿದೆನು. ಮನುಜಶ್ರೇಷ್ಠರಿಂದ ಸಾತ್ವತನನ್ನು ಜಯಿಸಲು ಸಾಧ್ಯವಾಗುವುದಿಲ್ಲ. ಲಕ್ಷ್ಯಭೇದನದಲ್ಲಿ ಕುಶಲರಾಗಿರುವುದ ರಿಂದಲೂ, ಅನೇಕರೀತಿಯಲ್ಲಿ ಚಿತ್ರ-ವಿಚಿತ್ರವಾಗಿ ಯುದ್ಧಮಾಡುವುದನ್ನು ತಿಳಿದುಕೊಂಡಿರುವುದರಿಂದಲೂ ವೃಷ್ಣಿವಂಶೀಯರಾದ ವೀರರು ದೇವ-ದಾನವ-ಗಂಧರ್ವರನ್ನೂ ಜಯಿಸತಕ್ಕವರು. ಆದರೂ ವಿಸ್ಮಯವನ್ನಾಗಲೀ, ಗರ್ವವನ್ನಾಗಲೀ ಪಡದೇ ಇರತಕ್ಕವರು. ತಮ್ಮ ಬಲವನ್ನು ಆಶ್ರಯಿಸಿಯೇ ವಿಜಯವನ್ನು ಅಭಿಲಷಿಸತಕ್ಕವರು. ಪರಾವಲಂಬನೆಯಿಂದ ವಿಜಯಗಳಿ ಸಲು ಅವರು ಇಚ್ಛಿಸತಕ್ಕವರಲ್ಲ. ಅವರೆಂದಿಗೂ ಪರಾಧೀನರಾಗತಕ್ಕವರಲ್ಲ. ಸ್ವಾತಂತ್ರ್ಯಪ್ರಿಯರು.

ಬಲದಲ್ಲಿ ವೃಷ್ಣಿವಂಶದ ಯೋಧರಿಗೆ ಸಮಾನವಾದ ಬಲವಿರತಕ್ಕವ ರನ್ನು ನಾನು ಹಿಂದೆಯೂ ನೋಡಿಲ್ಲ. ಈಗಲೂ ಯಾರೂ ಕಾಣುತ್ತಿಲ್ಲ.

ಮುಂದೆಯೂ ಇರಲಾರರು. ವೃಷ್ಣಿವಂಶೀಯರು ಯಾವಾಗಲೂ ತಮ್ಮ ಜ್ಞಾತಿ-ಬಾಂಧವರನ್ನು ಅವಮಾನಿಸತಕ್ಕವರಲ್ಲ. ವಯೋವೃದ್ಧ-ಜ್ಞಾನವೃದ್ಧರ ಆಜ್ಞೆಯಂತೆ ನಡೆಯತಕ್ಕವರು. ವೃಷ್ಣಿವೀರರನ್ನು ದೇವಾಸುರ-ಗಂಧರ್ವ ರಾಗಲೀ, ಯಕ್ಷೋರಗ-ರಾಕ್ಷಸರಾಗಲೀ ಯುದ್ಧದಲ್ಲಿ ಜಯಿಸಲಾರರು. ಹೀಗಿರುವಾಗ ಮಾನವರಾದವರು ವೃಷ್ಣಿವಂಶೀಯರನ್ನು ಹೇಗೆ ತಾನೇ ಜಯಿಸಬಲ್ಲರು? ಬ್ರಾಹ್ಮಣ, ಗುರು ಮತ್ತು ಜ್ಞಾತಿಗಳ ಸ್ವತ್ತಿಗಾಗಿ ಆಸೆಪಟ್ಟು ಹಿಂಸೆಮಾಡಲು ಹೋಗತಕ್ಕವರಲ್ಲ. ಬ್ರಾಹ್ಮಣ-ಗುರು-ಜ್ಞಾತಿಗಳನ್ನು ಆಪತ್ಕಾಲಗಳಲ್ಲಿ ರಕ್ಷಿಸತಕ್ಕವರು. ಧನವಂತರಾಗಿದ್ದರೂ ಸಹ ಅಭಿಮಾನ ಶೂನ್ಯರು. ಬ್ರಾಹ್ಮಣಪ್ರಿಯರೂ ಮತ್ತು ಸತ್ಯವಾದಿಗಳೂ ಆಗಿರುತ್ತಾರೆ. ಸಮರ್ಥರಾದವರನ್ನು ಅವಮಾನಿಸಲು ಹೋಗತಕ್ಕವರಲ್ಲ. ದೀನರಾದ ವರನ್ನು ಉದ್ಧರಿಸುವ ಸ್ವಭಾವವಿರತಕ್ಕವರು. ಯಾವಾಗಲೂ ದೈವದಲ್ಲಿ ಭಕ್ತಿ ಯುಳ್ಳವರು ; ಜಿತೇಂದ್ರಿಯರು ; ಆಶ್ರಿತರನ್ನು ರಕ್ಷಿಸತಕ್ಕವರು. ಇಷ್ಟು ಅಪಾರಗುಣಗಳಿಂದ ಕೂಡಿದ್ದರೂ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳು ವವರಲ್ಲ. ಈ ಕಾರಣದಿಂದಲೇ ವೃಷ್ಣಿವೀರರ ಸಮೂಹವು ಯಾವ ಕಾರಣ ದಿಂದಲೂ ವಿನಾಶಹೊಂದುವುದಿಲ್ಲ. ಒಬ್ಬನೇ ಮೇರುಪರ್ವತವನ್ನಾದರೂ ಎತ್ತಿಬಿಡಬಹುದು ; ಸಮುದ್ರವನ್ನಾದರೂ ಈಜಿಕೊಂಡು ದಾಟಬಹುದು. ಆದರೆ ವೃಷ್ಣಿವೀರರ ಬಳಿಗೆ ಹೋಗಿ ಆ ವೀರರ ಸಮೂಹದ ಕಡೆಯನ್ನು ನೋಡುವೆನೆಂದು ಪ್ರಯತ್ನಿಸಿದರೆ ಅದು ಮಾತ್ರ ಅವನಿಂದ ಸಾಧ್ಯವಾಗು ವುದಿಲ್ಲ. ಅಷ್ಟು ಅಪಾರವಾಗಿ ವೃಷ್ಣಿವಂಶವು ಬೆಳೆದು ಹೋಗಿದೆ. ಮಹಾ ರಾಜ! ನಿನಗೆ ಎಲ್ಲಿ ಸಂಶಯವಿದ್ದಿತೋ ಆ ಸಂಶಯದ ನಿವಾರಣೆಗಾಗಿ ನಿನಗೆ ಈ ಎಲ್ಲ ವಿಷಯಗಳನ್ನೂ ಹೇಳಿದ್ದೇನೆ. ಕುರುರಾಜನೇ! ನರಶ್ರೇಷ್ಠನೇ! ಈ ಘೋರಯುದ್ಧವು ಪ್ರಾರಂಭವಾಗಲು ನೀನು ಮಾಡಿದ ಅನ್ಯಾಯವೇ ಮೂಲಕಾರಣವಾಗಿದೆ.”

೧೪೪ನೆಯ ಅಧ್ಯಾಯವು ಮುಗಿಯಿತು.

---

* ಈ ಅಧ್ಯಾಯದಲ್ಲಿ ಸಾತ್ಯಕಿಯು 'ಶಿನಿಯ ಪುತ್ರ' ಎಂಬ ಉಲ್ಲೇಖವು ನಾಲ್ಕಾರು ಸಲ ಬರುತ್ತದೆ. ಒಮ್ಮೆಯಾದರೂ ಪೌತ್ರ ಎಂಬ ಉಲ್ಲೇಖವಿಲ್ಲ. ಶಿನಿಯ ಮಗ ಸತ್ಯಕ. ಸತ್ಯಕನ ಮಗ ಸಾತ್ಯಕಿ. ಈ ಅಧ್ಯಾಯದಲ್ಲಿ ಈ ಅಸಂಗತವು ಹೇಗೆ ನುಸು ಳಿತೋ ತಿಳಿಯದು. ಸುತ ಎಂಬುದಕ್ಕೆ ಪೌತ್ರನೆಂಬ ಅರ್ಥವನ್ನು ಯಾರೂ ಮಾಡಿರು

## ಅರ್ಜುನನು ಜಯದ್ರಥನನ್ನು ಆಕ್ರಮಿಸಿದುದು: ಕರ್ಣ-ದುರ್ಯೋಧನರ ಸಂಭಾಷಣೆ : ಅರ್ಜುನನೊಡನೆ ಕರ್ಣನ ಯುದ್ಧ: ಕರ್ಣನ ಪರಾಜಯ : ಎಲ್ಲ ಯೋಧರೊಡನೆಯೂ ಅರ್ಜುನನ ಘೋರಯುದ್ಧ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಅಂತಹ ದುರವಸ್ಥೆಯಲ್ಲಿದ್ದ, ಕುರುವಂಶಸಂಭೂತನಾದ ಭೂರಿಶ್ರವಸನು ಹತನಾಗಲಾಗಿ ಮುಂದೆ ಯುದ್ಧವು ಯಾವ ರೀತಿಯಲ್ಲಿ ನಡೆಯಿತು ಎಂಬುದನ್ನು ಹೇಳು."

"ಮಹಾರಾಜ! ಭೂರಿಶ್ರವಸನು ಸಾತ್ಯಕಿಯಿಂದ ಹತನಾಗಿ ಪರಲೋಕಕ್ಕೆ ಹೊರಟುಹೋದನಂತರ ಮಹಾಬಾಹುವಾದ ಅರ್ಜುನನು ವಾಸುದೇವನನ್ನು ಮುಂದೆ ಹೋಗಲು ಪ್ರೇರಿಸುತ್ತಾ ಹೇಳಿದನು :

---

ವುದಿಲ್ಲ. ಈ ಅಸಂಗತವನ್ನು ಸುಸಂಗತವಾಗಿಸಲು ಮಧ್ಯದಲ್ಲಿ ಮೂರೂವರೆ ಶ್ಲೋಕಗಳು ದಾಕ್ಷಿಣಾತ್ಯಪಾಠದಲ್ಲಿವೆ. ಆ ಶ್ಲೋಕಗಳ ತಾತ್ಪರ್ಯಾರ್ಥವು ಹೀಗಿದೆ : ಸೋಮದತ್ತನು ವರ ಕೇಳಿದುದಕ್ಕೆ ಶಿವನು ಹೀಗೆ ಹೇಳುತ್ತಾನೆ : ತಲೆಯನ್ನಳ್ಳಾಡಿಸುತ್ತಾ ಶಿವನು 'ನೀನು ಕೇಳಿದ ಈ ವರವನ್ನು ಕೊಡಲು ಸಾಧ್ಯವಿಲ್ಲ' ಎಂದು ಹೇಳಿದನು. ಅದಕ್ಕೆ ಕಾರಣವನ್ನೂ ಸಹ ಶಿವನು ವಿವರಿಸಿ ಹೇಳಿದನು. "ಶಿನಿಯ ಮಗನು (ಸತ್ಯಕನು) ಈ ಮೊದಲೇ ನನ್ನನ್ನು ಕುರಿತು ತಪಸ್ಸುಮಾಡಿ ಮೂರು ಲೋಕಗಳಲ್ಲಿ ಯಾರಿಂದಲೂ ವಧ್ಯನಾಗಕೂಡದೆಂಬ ಉತ್ತಮ ವರವನ್ನು ನನ್ನಿಂದಲೇ ಪಡೆದುಕೊಂಡಿದ್ದಾನೆ. ಆದರೆ ನೀನು ಮಾಡಿರುವ ಈ ತಪಸ್ಸೂ ವ್ಯರ್ಥವಾಗಬಾರದು. ನಿನ್ನ ಮಗನು ಶಿನಿಯ ಪೌತ್ರನನ್ನು (ಸಾತ್ಯಕಿಯನ್ನು ) ನಿನ್ನ ಇಚ್ಛೆಗೆ ಅನುಸಾರವಾಗಿ ರಣಾಂಗಣದಲ್ಲಿ ಮೂರ್ಛೆಗೊಳಿಸುತ್ತಾನೆ. ಆದರೆ ಅವನನ್ನು ಸಂಹರಿಸಲು ನಿನ್ನ ಮಗನಿಗೆ ಸಾಧ್ಯವಾಗುವುದಿಲ್ಲ. ಏಕೆಂದರೆ : ಅವನು ಶ್ರೀಕೃಷ್ಣನಿಂದ ಸಂರಕ್ಷಿತನಾಗಿರತಕ್ಕವನು. ನಾನೇ ಶ್ರೀಕೃಷ್ಣನೂ ಆಗಿರುತ್ತೇನೆ. ನಮ್ಮಿಬ್ಬರಲ್ಲಿ ಯಾವ ಭೇದವೂ ಇಲ್ಲ."

ದೇವಕೀ-ವಸುದೇವರ ಸ್ವಯಂವರದ ವೃತ್ತಾಂತವು ಭಾಗವತದಲ್ಲಾಗಲೀ, ಹರಿವಂಶದಲ್ಲಾಗಲೀ ಬಂದಿರುವುದಿಲ್ಲ. ಈ ಕಥೆಗೆ ಮಹಾಭಾರತವೇ ಮೂಲ ಎಂದು ಭಾವಿಸಬೇಕಾಗಿದೆ. ಉಪಲಬ್ಧವಿರುವ ಎಲ್ಲ ಪುಸ್ತಕಗಳಲ್ಲಿಯೂ ಈ ಅಧ್ಯಾಯವು ಇರುತ್ತದೆ. ಅಧಿಕಪಾಠವು ದಾಕ್ಷಿಣಾತ್ಯ ಪಾಠವಿರುವ ಒಂದು ಪುಸ್ತಕದಲ್ಲಿ ಮಾತ್ರವೇ ಇರುತ್ತದೆ. (ಈ ಅಧ್ಯಾಯವೇ ಹೆಚ್ಚಿನ ಪಾಠವಾಗಿರಬಹುದೆಂಬುದು ನಮ್ಮ ಅಭಿಪ್ರಾಯ.)

"ಕೃಷ್ಣ! ಜಯದ್ರಥನಿರುವ ಕಡೆಗೆ ಕುದುರೆಗಳನ್ನು ಬೇಗ ಓಡಿಸು, *ಪುಂಡರೀಕಾಕ್ಷ! ಅವನೀಗ ಮೂರು ಧರ್ಮಗಳಲ್ಲಿದ್ದಾನೆಂದು ಕೇಳಿದೆನು (ಮೂರು ಧರ್ಮಗಳು ಅವನ ಮುಂದಿವೆ. ಯಾವುದನ್ನು ಆರಿಸಿಕೊಳ್ಳು ತ್ತಾನೆಂಬುದು ತಿಳಿಯದು). ಅನಘನೇ! ಅವನು ಯಾವ ಧರ್ಮವನ್ನಾದರೂ ಆರಿಸಿಕೊಳ್ಳಲಿ–ನನ್ನ ಪ್ರತಿಜ್ಞೆಯು ಸಫಲವಾಗುವಂತೆ ಮಾಡು. ಸೂರ್ಯನು ಬಹಳ ತೀವ್ರಗತಿಯಿಂದ ಅಸ್ತಾಚಲದ ಕಡೆಗೆ ಹೋಗುತ್ತಿದ್ದಾನೆ. ಪುರುಷ ಸಿಂಹನೇ! ನಾನು ದೊಡ್ಡ ಕಾರ್ಯವನ್ನು ಮಾಡಲು ಪ್ರಾರಂಭಿಸಿಬಿಟ್ಟಿದ್ದೇನೆ. (ಸೈಂಧವನನ್ನು ವಧೆಮಾಡಲು ಮಹಾಪ್ರತಿಜ್ಞೆಯನ್ನು ಮಾಡಿ ಕಾರ್ಯವನ್ನು ಆರಂಭಿಸಿಬಿಟ್ಟಿದ್ದೇನೆ.) ಕುರುಸೈನ್ಯದಲ್ಲಿರುವ ಮಹಾರಥರೆಲ್ಲರೂ ಅವನನ್ನೀಗ ಸಂರಕ್ಷಿಸುತ್ತಿದ್ದಾರೆ.

**ತಥಾ ನಾಭ್ಯೇತಿ ಸೂರ್ಯೋಽಸ್ತಂ ಯಥಾ ಸತ್ಯಂ ಭವೇದ್ವಚಃ ।**
**ಚೋದಯಾಶ್ವಾಂಸ್ತಥಾ ಕೃಷ್ಣ ಯಥಾ ಹನ್ಯಾಂ ಜಯದ್ರಥಮ್ ॥**

ನಾನು ಹೇಳಿರುವ ಮಾತು ಸತ್ಯವಚನವಾಗಿ ಪರಿಣಮಿಸುವಂತೆ ಸೂರ್ಯನು ಅಸ್ತಮಿಸುವುದರೊಳಗಾಗಿ ನಾನು ಜಯದ್ರಥನನ್ನು ಸಂಹರಿ ಸಲು ಅನುಕೂಲವಾಗುವ ರೀತಿಯಲ್ಲಿ ಕುದುರೆಗಳನ್ನು ನಡೆಸು."

ಮಹಾರಾಜ! ಅರ್ಜುನನಿಂದ ಪ್ರೇರಿತನಾದ, ಅಶ್ವವಿದ್ಯೆಯನ್ನು ಪರಿಪೂರ್ಣವಾಗಿ ತಿಳಿದಿದ್ದ, ಮಹಾಬಾಹುವಾದ ಶ್ರೀಕೃಷ್ಣನು ಜಯದ್ರಥನ

---

* **ಶ್ರೂಯತೇ ಪುಣ್ಡರೀಕಾಕ್ಷ ತ್ರಿಷು ಧರ್ಮೇಷು ವರ್ತತೇ ।** ಎಂಬ ಶ್ಲೋಕಾರ್ಧವು ಇಲ್ಲಿದೆ. ಇದು ಕೆಲವು ಪುಸ್ತಕಗಳಲ್ಲಿಲ್ಲ. 'ಅವನು (ಜಯದ್ರಥನು) ಮೂರು ಧರ್ಮ ಗಳಲ್ಲಿದ್ದಾನೆಂದು ಕೇಳಲ್ಪಟ್ಟಿದೆ' ಎಂದು ಇದರ ನೇರವಾದ ಅರ್ಥವಾಗುತ್ತದೆ. ಮೂರು ಧರ್ಮಗಳು ಯಾವುವು?–ಎಂಬುದನ್ನು ವ್ಯಾಖ್ಯಾನಕಾರರ ವಿವರಣೆಯಿಂದ ಮಾತ್ರ ತಿಳಿದುಕೊಳ್ಳಬಹುದಾಗಿದೆ. **ಯದಿ ಯುಧ್ಯಮಾನೋ ಹನ್ಯತೇ ತದಾ ಪೂರ್ಣ ಸ್ವರ್ಗಪ್ರಾಪ್ತಿರೇವ ತಸ್ಯ ಧರ್ಮಃ** = ಯುದ್ಧಮಾಡುವಾಗ ಅವನು ಕೊಲ್ಲಲ್ಪಟ್ಟರೆ ಶೀಘ್ರವಾಗಿ ಸ್ವರ್ಗಪ್ರಾಪ್ತಿಯಾಗುವುದೇ ಅವನ ಧರ್ಮ. **ಅಥ ಪಲಾಯಮಾನೋ ಹನ್ಯತೇ ನರಕಪ್ರಾಪ್ತಿರೇವ ತಸ್ಯ ಧರ್ಮಃ** = ಪಲಾಯನಮಾಡುವಾಗ ಕೊಲ್ಲಲ್ಪಟ್ಟರೆ ನರಕಪ್ರಾಪ್ತಿಯೇ ಅವನ ಧರ್ಮವಾಗುತ್ತದೆ. **ಅಥ ಮದ್ಭಯಾತ್ ಸ್ವದೇಶಂ ಗಚ್ಛತಿ ತದಾ ಯಶಃಶರೀರನಾಶ ಏವ ತಸ್ಯ ಧರ್ಮಃ** = ನನ್ನ ಭಯದಿಂದ ಸ್ವದೇಶಕ್ಕೆ ಹೋದರೆ ಯಶಸ್ಸಿನ ನಾಶವೇ ಅವನ ಧರ್ಮವಾಗುತ್ತದೆ.

ವಧೆಯ ಸಲುವಾಗಿ ಬೆಳ್ಳಿಗೆ ಸಮಾನವಾದ ಬಣ್ಣದಿಂದ ಕೂಡಿದ್ದ, ಶ್ವೇತಾಶ್ವಗಳನ್ನು ಚಪ್ಪರಿಸಿದನು.

ಅಮೋಘವಾದ ಬಾಣಗಳಿಂದ ಕೂಡಿದ್ದ, ನೆಗೆ-ನೆಗೆದುಕೊಂಡು ಬಹಳ ವೇಗವಾಗಿ ಹೋಗುವ ಕುದುರೆಗಳ ಮೂಲಕವಾಗಿ ಜಯದ್ರಥನ ವಧೆಮಾಡಲು ಬರುತ್ತಿದ್ದ ಅರ್ಜುನನನ್ನು ನೋಡಿ ಕೌರವಸೈನ್ಯದ ನಾಯಕರು ಬಹಳ ವೇಗವಾಗಿ ಅರ್ಜುನನನ್ನು ಎದುರಿಸಲು ಮುಂದೆ ಧಾವಿಸಿದರು. ದುರ್ಯೋಧನ, ಕರ್ಣ, ವೃಷಸೇನ, ಮದ್ರರಾಜನಾದ ಶಲ್ಯ, ಅಶ್ವತ್ಥಾಮಾ, ಕೃಪ ಮತ್ತು ಜಯದ್ರಥ–ಇವರೆಲ್ಲರೂ ಅರ್ಜುನನೊಡನೆ ಯುದ್ಧಮಾಡಲು ಸಿದ್ಧರಾಗಿ ನಿಂತರು. ಅರ್ಜುನನು ಕೌರವಯೋಧರ ಬಳಿಗೆ ಬಂದು ದುರ್ಯೋಧನಾದಿಗಳ ಮಧ್ಯದಲ್ಲಿ ನಿಂತಿದ್ದ ಜಯದ್ರಥನನ್ನು ಕ್ರೋಧದಿಂದ ಪ್ರದೀಪ್ತವಾದ ಕಣ್ಣುಗಳಿಂದ ದಹಿಸಿಯೇ ಬಿಡುತ್ತಾನೆಯೋ ಎಂಬಂತೆ ದುರುಗುಟ್ಟಿಕೊಂಡು ನೋಡಿದನು. ಜಯದ್ರಥನನ್ನು ವಧೆಮಾಡುವ ಸಲುವಾಗಿ ಅವನ ಕಡೆಗೆ ಹೋಗುತ್ತಿದ್ದ ಅರ್ಜುನನನ್ನು ನೋಡಿ ಅತ್ಯವಸರದಿಂದ ದುರ್ಯೋಧನರಾಜನು ಕರ್ಣನೊಡನೆ ಹೇಳಿದನು :

> ಅಯಂ ಸ ವೈಕರ್ತನ ಯುದ್ಧ ಕಾಲೋ
> ವಿದರ್ಶಯಸ್ವಾತ್ಮಬಲಂ ಮಹಾತ್ಮನ್ ।
> ಯಥಾ ನ ವಧ್ಯೇತ ರಣೇಽರ್ಜುನೇನ
> ಜಯದ್ರಥಃ ಕರ್ಣ ತಥಾ ಕುರುಷ್ವ ॥೧೨॥

"ವೈಕರ್ತನ! ನಾವು ಬಹಳ ದಿವಸಗಳಿಂದ ನಿರೀಕ್ಷಿಸಿದ್ದ ನಿರ್ಣಾಯಕವಾದ ಯುದ್ಧಕಾಲವು (ಯುದ್ಧಮಾಡಬೇಕಾದ ಆ ಸಮಯವು) ಇದೀಗ ಪ್ರಾಪ್ತವಾಗಿದೆ. ಮಹಾತ್ಮನೇ! ಆತ್ಮಬಲವೆಷ್ಟಿರುವುದೆಂಬುದನ್ನು ಈಗ ನೀನು ಪ್ರದರ್ಶಿಸು. ಅರ್ಜುನನು ರಣರಂಗದಲ್ಲಿ ಜಯದ್ರಥನನ್ನು ವಧಿಸಲಾಗದ ರೀತಿಯಲ್ಲಿ ನೀನು ಅರ್ಜುನನೊಡನೆ ಯುದ್ಧಮಾಡಬೇಕಾಗಿದೆ.

> ಅಲ್ಪಾವಶೇಷೋ ದಿವಸೋ ನೃವೀರ
> ವಿಘಾತಯಸ್ವಾದ್ಯ ರಿಪುಂ ಶರೌಘೈಃ ।
> ದಿನಕ್ಷಯಂ ಪ್ರಾಪ್ಯ ನರಪ್ರವೀರ
> ಧ್ರುವೋ ಹಿ ನಃ ಕರ್ಣ ಜಯೋ ಭವಿಷ್ಯತಿ ॥೧೩॥

ನರಶ್ರೇಷ್ಠನೇ! ಹಗಲಿನಲ್ಲಿ ಸ್ವಲ್ಪ ಭಾಗವು ಮಾತ್ರವೇ ಉಳಿದಿದೆ. ಈ ಸಮಯದಲ್ಲಿ ನೀನು ನಮ್ಮ ಶತ್ರುವನ್ನು ಬಾಣಗಳ ಸಮೂಹದಿಂದ ಬಲವಾಗಿ ಗಾಯಗೊಳಿಸು. ದಿನದ ಪೂರ್ತಿಯಾಗಿ ಅರ್ಜುನನನ್ನು ನಿನ್ನೊಡನೆಯೇ ಯುದ್ಧದಲ್ಲಿ ತೊಡಗಿಸಿಕೊಂಡು ಅವನು ಜಯದ್ರಥನ ಗೊಡವೆಗೆ ಹೋಗದಂತೆ ಮಾಡು. ಹಾಗೆ ಈ ದಿನವನ್ನು ನಾವು ಕಳೆದುಬಿಟ್ಟೆವೆಂದರೆ– ನಮಗೇ ವಿಜಯವು ಖಂಡಿತವಾಗಿಯೂ ಲಭಿಸುತ್ತದೆ.

ಸೂರ್ಯನು ಅಸ್ತಮಿಸುವವರೆಗೆ ನಾವು ಹೇಗಾದರೂ ಮಾಡಿ ಸೈಂಧವನನ್ನು ರಕ್ಷಿಸಿಬಿಟ್ಟೆವೆಂದರೆ ಮಿಥ್ಯಾಪ್ರತಿಜ್ಞನಾದ ಅರ್ಜುನನು ಒಡನೆಯೇ ಅಗ್ನಿಪ್ರವೇಶಮಾಡುತ್ತಾನೆ. ಮಾನದ! ಅರ್ಜುನನಿಲ್ಲದ ಈ ಪೃಥಿವಿಯಲ್ಲಿ ಅವನ ಸಹೋದರರೂ ಮತ್ತು ಅನುಯಾಯಿಗಳೂ ಮುಹೂರ್ತಮಾತ್ರವಾದರೂ ಜೀವಿಸಿರಲು ಇಚ್ಛಿಸುವುದಿಲ್ಲ.

**ವಿನಷ್ಟೈಃ ಪಾಣ್ಡವೇಯೈಶ್ಚ ಸಶೈಲವನಕಾನನಾಮ್ ।**
**ವಸುನ್ಧರಾಮಿಮಾಂ ಕರ್ಣ ಭೋಕ್ಷ್ಯಾಮೋ ಹತಕಣ್ಟಕಾಮ್ ॥೧೬॥**

ಪಾಂಡವರು ಸಂಪೂರ್ಣವಾಗಿ ವಿನಾಶವಾಗಿ ಹೋದನಂತರ ಪರ್ವತ-ವನ-ಕಾನನಗಳಿಂದ ಯುಕ್ತವಾದ ನಿಷ್ಕಂಟಕವಾದ ಈ ವಸುಂಧರೆಯನ್ನು ನಾವು ಆಮೋದದಿಂದ ಉಪಭುಂಜಿಸೋಣ. ಕರ್ಣ! ನಿಶ್ಚಯವಾಗಿಯೂ ದೈವವೇ ಪಾರ್ಥನ ವಿನಾಶಕ್ಕೆ ಕಾರಣವಾಗಿದೆ. ಇಲ್ಲದಿದ್ದರೆ ಅವನಿಗೆ ಇಂತಹ ವಿಪರೀತವಾದ ಬುದ್ಧಿಯು ಬರುತ್ತಿರಲಿಲ್ಲ. ಕರ್ತವ್ಯಾಕರ್ತವ್ಯಗಳನ್ನು ವಿಚಾರ ಮಾಡದೆಯೇ ಅರ್ಜುನನು ಗಡುವನ್ನೂ ಮಾಡಿಕೊಂಡು ಜಯದ್ರಥನ ವಧೆಮಾಡಲು ಪ್ರತಿಜ್ಞೆಮಾಡಿರುವನು.

**ನೂನಮಾತ್ಮವಿನಾಶಾಯ ಪಾಣ್ಡವೇನ ಕಿರೀಟಿನಾ ।**
**ಪ್ರತಿಜ್ಞೇಯಂ ಕೃತಾ ಕರ್ಣ ಜಯದ್ರಥವಧಂ ಪ್ರತಿ ॥೧೮॥**

ಕರ್ಣ! ನಿಶ್ಚಯವಾಗಿಯೂ ಪಾಂಡುವಿನ ಮಗನಾದ ಕಿರೀಟಿಯು ಆತ್ಮವಿನಾಶಕ್ಕಾಗಿಯೇ ಜಯದ್ರಥನ ವಧೆಗಾಗಿ ಈ ಘೋರಪ್ರತಿಜ್ಞೆಯನ್ನು ಮಾಡಿರುವನು.

**ಕಥಂ ಜೀವತಿ ದುರ್ಧರ್ಷೇ ತ್ವಯಿ ರಾಧೇಯ ಫಾಲ್ಗುನಃ ।**
**ಅನಸ್ತಂಗತ ಆದಿತ್ಯೇ ಹನ್ಯಾತ್ಸೈನ್ಧವಕಂ ನೃಪಮ್ ॥೧೯॥**

ರಾಧೇಯ! ಎದುರಿಸಲು ಅಸಾಧ್ಯನಾದ ನೀನಿನ್ನೂ ಬದುಕಿರುವಾಗ ಅರ್ಜುನನು ಸೂರ್ಯನು ಅಸ್ತನಾಗುವ ಮೊದಲು ಜಯದ್ರಥರಾಜನನ್ನು ಹೇಗೆ ತಾನೇ ಕೊಲ್ಲಬಲ್ಲನು?

ಮೇಲಾಗಿ ಮದ್ರರಾಜನಾದ ಶಲ್ಯನೂ, ಮಹಾತ್ಮರಾದ ಕೃಪರೂ ಜಯದ್ರಥನ ರಕ್ಷಣೆಗೆ ಟೊಂಕಕಟ್ಟಿ ನಿಂತಿದ್ದಾರೆ. ಹೀಗಿರುವಾಗ ಅರ್ಜುನನು ರಣಭೂಮಿಯಲ್ಲಿ ಜಯದ್ರಥನನ್ನು ಸೂರ್ಯನು ಮುಳುಗುವುದರೊಳಗಾಗಿ ಹೇಗೆ ಕೊಲ್ಲುತ್ತಾನೆ? ದ್ರೋಣರ ಮಗ ಅಶ್ವತ್ಥಾಮಾ, ನಾನು ಮತ್ತು ದುಃಶಾಸನ ಈ ಎಲ್ಲರೂ ಜಯದ್ರಥನ ರಕ್ಷಣೆಯಲ್ಲಿಯೇ ಬದ್ಧಕಟಿಗಳಾಗಿದ್ದೇವೆ. ನಾವೆಲ್ಲರೂ ಅವನನ್ನು ಎಡೆಬಿಡದೇ ರಕ್ಷಿಸುತ್ತಿರುವಾಗ ಅರ್ಜುನನು ಸೈಂಧವನ ಹತ್ತಿರಕ್ಕಾದರೂ ಹೇಗೆ ಬರುವನು? ಪಾಪ ; ಅರ್ಜುನನು ಕಾಲ ಚೋದಿತನಾಗಿಯೇ ಇಂತಹ ಆತ್ಮವಿನಾಶಕವಾದ ಪ್ರತಿಜ್ಞೆಯನ್ನು ಮಾಡಿರುವನು. ಅರ್ಜುನನೊಡನೆ ಯುದ್ಧಮಾಡಲು ಅನೇಕ ವೀರರು ಸಿದ್ಧರಾಗಿದ್ದಾರೆ. ಈಗಾಗಲೇ ಸೂರ್ಯನು ಬಹಳ ಕೆಳಕ್ಕೆ ಇಳಿದು ಹೋಗಿದ್ದಾನೆ. ಇಂತಹ ಸಂದರ್ಭದಲ್ಲಿ ಅರ್ಜುನನು ಜಯದ್ರಥನನ್ನು ಸಂಹರಿಸುವುದು ಒತ್ತಟ್ಟಿಗಿರಲಿ; ಅವನ ಸಮೀಪಕ್ಕಾದರೂ ಹೋಗುವನೇ? ಎಂಬುದರಲ್ಲಿಯೇ ನನಗೆ ಸಂದೇಹವಿದೆ. ಖಂಡಿತವಾಗಿಯೂ ಪಾರ್ಥನು ಸೈಂಧವನ ಹತ್ತಿರಕ್ಕೂ ಹೋಗಲಾರನು ; ಕರ್ಣ? (ಅರ್ಜುನನ ಪ್ರತಿಜ್ಞೆಯು ಭಂಗವಾಗುವುದೆಂದು ನಮಗೆ ಸ್ಪಷ್ಟವಾಗಿ ಕಾಣುತ್ತಿದ್ದರೂ ನಮ್ಮ ಪ್ರಯತ್ನದಲ್ಲಿ ನಾವು ಕುಂಠಿತರಾಗಬಾರದು.)

ಕರ್ಣ! ಆದುದರಿಂದ ನೀನು ನನ್ನೊಡನೆಯೂ, ಶೂರರಾದ ಇತರ ಮಹಾರಥರೊಡನೆಯೂ, ಅಶ್ವತ್ಥಾಮನೊಡನೆಯೂ, ಶಲ್ಯ-ಕೃಪರೊಡನೆಯೂ ಸೇರಿಕೊಂಡು ಅರ್ಜುನನು ಸೈಂಧವನ ಸಮೀಪಕ್ಕೆ ಹೋಗಲು ಅವಕಾಶವೇ ಆಗದ ರೀತಿಯಲ್ಲಿ ವಿಶೇಷಪ್ರಯತ್ನದಿಂದ ಪಾರ್ಥನೊಡನೆ ಯುದ್ಧಮಾಡು.”

ಮಹಾರಾಜ! ನಿನ್ನ ಮಗನು ಕರ್ಣನೊಡನೆ ಹೀಗೆ ಹೇಳಿದನಂತರ

ಕುರೂತ್ತಮನಾದ ದುರ್ಯೋಧನನನ್ನು ಕುರಿತು ಕರ್ಣನು ಈ ಮಾತುಗಳನ್ನು ಹೇಳಿದನು :

"ಮಾನದನೇ! ಸುದೃಢವಾಗಿ ಲಕ್ಷ್ಯವನ್ನು ಭೇದಿಸುವ, ಧನುಷ್ಮಂತನಾದ, ವೀರನಾದ ಭೀಮಸೇನನು ಬಾಣಗಳ ಸಮೂಹದಿಂದ ನನ್ನನ್ನು ಹಲವು ಬಾರಿ ಪ್ರಹರಿಸಿದುದರಿಂದ ನನ್ನ ಶರೀರಾದ್ಯಂತವಾಗಿ ಗಾಯಗಳಾಗಿವೆ. ಈ ಸಮಯದಲ್ಲಿ ನಾನು ನಿಮ್ಮ ಜೊತೆಯಲ್ಲಿರಬೇಕು. ಆದುದರಿಂದ ಇದ್ದೇನೆ. (ನಿಶ್ಚಯವಾಗಿಯೂ ನನಗೆ ಯುದ್ಧಮಾಡಲು ತ್ರಾಣವೇ ಇಲ್ಲವಾಗಿದೆ.) ಭೀಮನು ಬಿಟ್ಟ ಬಾಣಗಳಿಂದ ಬಹಳವಾಗಿ ತಾಪಗೊಂಡಿರುವ ನನ್ನ ಅವಯವಗಳೊಂದೂ ಸರಿಯಾಗಿ ಕಾರ್ಯಮಾಡುತ್ತಿಲ್ಲ. ನನ್ನ ಜೀವಿತವು ನಿನಗೇ ಮುಡಿಪಾಗಿದೆ. ಆದುದರಿಂದ ಯಥಾಶಕ್ತಿ ಯುದ್ಧಮಾಡುತ್ತೇನೆ.

**ಯಥಾ ಪಾಣ್ಡವಮುಖ್ಯೋಽಸೌ ನ ಹನಿಷ್ಯತಿ ಸೈನ್ಧವಮ್ ।**
**ನ ಹಿ ಮೇ ಯುಧ್ಯಮಾನಸ್ಯ ಸಾಯಕಾನಸ್ಯತಃ ಶಿತಾನ್ ।**
**ಸೈನ್ಧವಂ ಪ್ರಾಪ್ಸ್ಯತೇ ವೀರಃ ಸವ್ಯಸಾಚೀ ಧನಂಜಯಃ ॥೨೯॥**

ಪಾಂಡವಮುಖ್ಯನಾದ ಪಾರ್ಥನು ಜಯದ್ರಥನನ್ನು ವಧಿಸದ ರೀತಿಯಲ್ಲಿ ನಾನು ಯುದ್ಧಮಾಡುತ್ತೇನೆ. ನಾನು ಯುದ್ಧಮಾಡುತ್ತಿರುವಾಗ–ನಿಶಿತವಾದ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಿರುವಾಗ–ವೀರನಾದ, ಸವ್ಯಸಾಚಿಯಾದ ಧನಂಜಯನು ಸೈಂಧವನ ಬಳಿಗೆ ಹೋಗಲಾರನು. (ಹೋಗದ ರೀತಿಯಲ್ಲಿ ನಾನು ಯುದ್ಧಮಾಡುತ್ತೇನೆ.)

ಸರ್ವದಾ ಒಬ್ಬನ ವಿಷಯದಲ್ಲಿ ಭಕ್ತಿಭಾವದಿಂದಿರತಕ್ಕವನು ಯಾವ ಕಾರ್ಯಮಾಡಬೇಕೋ ಮತ್ತು ಸತತವೂ ಮಿತ್ರನ ಹಿತವನ್ನೇ ಬಯಸತಕ್ಕವನು ಯಾವ ಕಾರ್ಯಮಾಡಬೇಕೋ–ಆ ಕಾರ್ಯವನ್ನೇ ನಾನೂ ಮಾಡುತ್ತೇನೆ. ಆದರೆ 'ಜಯೋ ದೈವೇ ಪ್ರತಿಷ್ಠಿತಃ'–'ವಿಜಯವು ಮಾತ್ರ ದೈವದಲ್ಲಿ ಪ್ರತಿಷ್ಠಿತವಾಗಿದೆ' (ದೈವದ ಅಧೀನವಾಗಿದೆ).

**ಸೈನ್ಧವಾರ್ಥೇ ಪರಂ ಯತ್ನಂ ಕರಿಷ್ಯಾಮ್ಯದ್ಯ ಸಂಯುಗೇ ।**
**ತ್ವತ್ಪ್ರಿಯಾರ್ಥಂ ಮಹಾರಾಜ ಜಯೋ ದೈವೇ ಪ್ರತಿಷ್ಠಿತಃ ॥೩೦॥**

ಸೈಂಧವನನ್ನು ಉಳಿಸುವ ಸಲುವಾಗಿ ಮತ್ತು ನಿನಗೆ ಪ್ರಿಯವನ್ನುಂಟು

ಮಾಡುವ ಸಲುವಾಗಿ ಸಂಪೂರ್ಣವಾಗಿ ಪ್ರಯತ್ನಿಸುತ್ತೇನೆ. ಆದರೆ ವಿಜಯ ವೆಂಬುದು ದೈವಕ್ಕೆ ಅಧೀನವಾದುದು.

ಪುರುಷಸಿಂಹನೇ! ಈಗ ನಾನು ನನ್ನ ಪೌರುಷವನ್ನೇ ಆಶ್ರಯಿಸಿ ನಿನ್ನ ಸಲುವಾಗಿ ಅರ್ಜುನನೊಡನೆ ಯುದ್ಧಮಾಡುತ್ತೇನೆ. ಆದರೆ ವಿಜಯವು ಮಾತ್ರ ದೈವಾಧೀನವಾದುದು.

ಕುರುಶ್ರೇಷ್ಠನೇ! ಈಗ ನನಗೂ ಮತ್ತು ಪಾರ್ಥನಿಗೂ ನಡೆಯುವ ದಾರುಣವಾದ ಮತ್ತು ರೋಮಾಂಚಕಾರಕವಾದ ಯುದ್ಧವನ್ನು ಎಲ್ಲ ಸೈನಿಕರೂ ನೋಡಲಿ.”

ಮಹಾರಾಜ! ಕರ್ಣ-ದುರ್ಯೋಧನರಿಬ್ಬರೂ ಹೀಗೆ ಸಂಭಾಷಣೆ ಮಾಡುತ್ತಿದ್ದಾಗ ಅರ್ಜುನನು ನಿಶಿತವಾದ ಬಾಣಗಳಿಂದ ನಿನ್ನ ಸೈನ್ಯವನ್ನು ಸಂಹರಿಸಲು ಉಪಕ್ರಮಿಸಿದನು. ಆನೆಯ ಸೊಂಡಿಲುಗಳಂತಿದ್ದ, ಪರಿಘಾ ಯುಧಕ್ಕೆ ಸಮಾನವಾಗಿದ್ದ, ಯುದ್ಧದಲ್ಲಿ ಹಿಂದಿರುಗದೇ ಇರುವ ಶೂರರ ತೋಳುಗಳನ್ನು ಅರ್ಜುನನು ನಿಶಿತವಾದ ಬಾಣಗಳಿಂದ ಕತ್ತರಿಸಿದನು. ಮಹಾಬಾಹುವಾದ ಅರ್ಜುನನು ವೀರಯೋಧರ ಶಿರಸ್ಸುಗಳನ್ನೂ ನಿಶಿತ ವಾದ ಬಾಣಗಳಿಂದ ಕತ್ತರಿಸಿದನು. ಆನೆಗಳ ಸೊಂಡಿಲುಗಳನ್ನೂ, ಕುದುರೆ ಗಳ ಕತ್ತುಗಳನ್ನೂ, ರಥದ ಅಚ್ಚುಮಣೆಗಳನ್ನೂ ನಿಶಿತವಾದ ಬಾಣಗಳಿಂದ ಕತ್ತರಿಸಿ ಹಾಕಿದನು. ಪ್ರಾಸಾಯುಧಗಳನ್ನೂ–ತೋಮರಗಳನ್ನೂ ಹಿಡಿದಿದ್ದ, ರಕ್ತಸಿಕ್ತರಾಗಿದ್ದ, ಸೈಂಧವನ ರಕ್ಷಣೆಯ ಸಲುವಾಗಿ ಸನ್ನದ್ಧರಾಗಿದ್ದ ಅಶ್ವಾ ರೋಹಿಗಳನ್ನೂ ಕ್ಷುರಗಳಿಂದ ಕತ್ತರಿಸಿದನು. ಹಾಗೆ ಕತ್ತರಿಸುವಾಗ ಕೆಲವ ರನ್ನು ಮೂರು-ಮೂರು ತುಂಡುಗಳಾಗುವಂತೆ, ಮತ್ತೆ ಕೆಲವರನ್ನು ಎರಡು ತುಂಡುಗಳಾಗುವಂತೆ ಕತ್ತರಿಸಿದನು. ಅರ್ಜುನನ ಬಾಣಗಳಿಂದ ಹತವಾದ ಕುದುರೆಗಳೂ ಮತ್ತು ಸಲಗಗಳೂ, ಛಿನ್ನ-ಭಿನ್ನವಾದ ಧ್ವಜಗಳೂ, ಛತ್ರ ಗಳೂ, ಧನುಸ್ಸುಗಳೂ, ಚಾಮರಗಳೂ, ಯೋಧರ ಶಿರಸ್ಸುಗಳೂ ರಣಾಂಗ ಣದ ಸುತ್ತಲೂ ಬಿದ್ದಿದ್ದುವು. ದಾವಾಗ್ನಿಯು ಅರಣ್ಯದಲ್ಲಿರುವ ಪೊದೆಗಳನ್ನು ಯಾವ ರೀತಿಯಲ್ಲಿ ಭಸ್ಮಮಾಡುತ್ತದೆಯೋ–ಅದೇ ರೀತಿಯಲ್ಲಿ ಅರ್ಜುನನು ನಿನ್ನ ಸೈನ್ಯವನ್ನು ಧ್ವಂಸಮಾಡುತ್ತಾ ಸ್ವಲ್ಪಹೊತ್ತಿನಲ್ಲಿಯೇ ರಣಾಂಗಣ ವನ್ನು ರಕ್ತದಿಂದ ಮುಳುಗಿಸಿಬಿಟ್ಟನು. ಬಲಿಷ್ಠನಾದ, ದುರಾಧರ್ಷನಾದ, ಸತ್ಯ

ವಿಕ್ರಮನಾದ ಅರ್ಜುನನು ನಿನ್ನ ಸೈನ್ಯದಲ್ಲಿ ಹೆಚ್ಚುಭಾಗವನ್ನು ಸಂಹರಿಸಿ ಸೈಂಧವನನ್ನು ಆಕ್ರಮಿಸಿದನು. ಒಂದು ಪಾರ್ಶ್ವದಲ್ಲಿ ಭೀಮಸೇನನಿಂದಲೂ ಮತ್ತೊಂದು ಪಾರ್ಶ್ವದಲ್ಲಿ ಸಾತ್ಯಕಿಯಿಂದಲೂ ರಕ್ಷಿಸಲ್ಪಡುತ್ತಿದ್ದ ಅರ್ಜುನನು ಪ್ರಜ್ವಲಿಸುತ್ತಿರುವ ಅಗ್ನಿಯೋಪಾದಿಯಲ್ಲಿ ಪ್ರಕಾಶಿಸುತ್ತಿದ್ದನು. ವೀರ್ಯಸಂಪತ್ತಿನಿಂದ ಯುಕ್ತನಾಗಿ, ಯುದ್ಧಸನ್ನದ್ಧನಾಗಿ ನಿಂತಿದ್ದ ಅರ್ಜುನ ನನ್ನು ನೋಡಿ ಮಹಾಧನುಷ್ಮಂತರಾದ, ಪುರುಷರ್ಷಭರಾದ ನಿನ್ನ ಕಡೆಯ ಯೋಧರ ಸಹನೆಯು ಮೀರಿತು. ದುರ್ಯೋಧನ, ಕರ್ಣ, ವೃಷಸೇನ, ಶಲ್ಯ, ಅಶ್ವತ್ಥಾಮಾ, ಕೃಪರು ಮತ್ತು ಸೈಂಧವರು ಅರ್ಜುನನನ್ನು ಎಲ್ಲ ಕಡೆ ಗಳಿಂದಲೂ ಮುತ್ತಿದರು. ರಥಮಾರ್ಗಗಳಲ್ಲಿ ಧನುಷ್ಟೇಂಕಾರಗಳಿಂದ ನೃತ್ಯ ವನ್ನಾಡುತ್ತಿರುವನೋ ಎಂಬಂತೆ ಕಾಣುತ್ತಿದ್ದ, ಸಂಗ್ರಾಮಕೋವಿದನಾದ, ಬಾಯ್ದೆರೆದು ನಿಂತಿರುವ ಯಮರಾಜನೋಪಾದಿಯಲ್ಲಿ ಬಹಳ ಭಯಂಕರ ನಾಗಿ ಕಾಣುತ್ತಿದ್ದ ಅರ್ಜುನನನ್ನು ಭಯರಹಿತರಾದ, ಯುದ್ಧವಿಶಾರದರಾದ ಎಲ್ಲ ಕೌರವಯೋಧರೂ ಆಕ್ರಮಿಸಿದರು. ಮಹಾರಾಜ! ಸೂರ್ಯನು ಕೆಂಪುಬಣ್ಣಕ್ಕೆ ತಿರುಗುತ್ತಿರಲಾಗಿ, ಶೀಘ್ರವಾಗಿ ಸೂರ್ಯಾಸ್ತವಾಗಬೇಕೆಂದು ಕಾತರಪಡುತ್ತಿದ್ದ ಕೌರವಯೋಧರು ಸೈಂಧವನನ್ನು ಹಿಂಬದಿಯಲ್ಲಿ ನಿಲ್ಲಿಸಿ ಕೊಂಡು ಕೃಷ್ಣಾರ್ಜುನರನ್ನು ಪ್ರಹರಿಸುತ್ತಿದ್ದರು. ಆ ಕೌರವಯೋಧರು ಸರ್ಪಗಳ ಶರೀರಗಳಂತೆ ಸುದೀರ್ಘವಾಗಿದ್ದ ತೋಳುಗಳಿಂದ ಧನುಸ್ಸುಗಳನ್ನು ಬಗ್ಗಿಸಿ, ಸೂರ್ಯನ ರಶ್ಮಿಗಳಂತೆ ಕಾಂತಿಯುಕ್ತವಾಗಿದ್ದ ನೂರಾರು ಬಾಣಗಳನ್ನು ಅರ್ಜುನನ ಮೇಲೆ ಸುರಿಸಿದರು. ಯುದ್ಧದುರ್ಮದನಾದ ಕಿರೀಟಿಯು ಕೌರವಯೋಧರು ಬಿಟ್ಟ ನೂರಾರು ಬಾಣಗಳಲ್ಲಿ ಪ್ರತಿ ಯೊಂದು ಬಾಣವನ್ನೂ ಎರಡೆರಡು, ಮೂರು-ಮೂರು ಮತ್ತು ಎಂಟೆಂಟು ತುಂಡುಗಳನ್ನಾಗಿ ಕತ್ತರಿಸಿ, ಅನಂತರ ಕೌರವರಥಿಕರೆಲ್ಲರನ್ನೂ ಅನೇಕ ಬಾಣಗಳಿಂದ ಗಾಯಗೊಳಿಸಿದನು. ಸಿಂಹದ ಬಾಲವನ್ನೇ ಧ್ವಜದ ಚಿಹ್ನೆಯನ್ನಾಗಿ ಹೊಂದಿದ್ದ ಶಾರದ್ವತನ ಮಕ್ಕಳಾದ ಕೃಪಾಚಾರ್ಯರೂ ತಮ್ಮ ಭುಜಬಲ–ಪರಾಕ್ರಮಗಳನ್ನು ತೋರಿಸುತ್ತಾ ಅರ್ಜುನನನ್ನು ಎದುರಿಸಿದರು. ಹತ್ತು ಬಾಣಗಳಿಂದ ಅರ್ಜುನನನ್ನೂ ಏಳು ಬಾಣಗಳಿಂದ ವಾಸುದೇವನನ್ನೂ ಪ್ರಹರಿಸಿ ಸೈಂಧವನನ್ನು ರಕ್ಷಿಸುತ್ತಾ ರಥಮಾರ್ಗದಲ್ಲಿ

ಅರ್ಜುನನು ಮುಂದೆಹೋಗಲು ಸಾಧ್ಯವಾಗದಂತೆ ಅಡ್ಡವಾಗಿ ನಿಂತರು. ಅನಂತರ ಮಹಾರಥರಾದ ಎಲ್ಲ ಕೌರವಶ್ರೇಷ್ಠರೂ ದೊಡ್ಡದಾದ ರಥ ಸಮೂಹದೊಡನೆ ಎಲ್ಲ ಕಡೆಗಳಿಂದಲೂ ಅರ್ಜುನನನ್ನು ಸುತ್ತುಗಟ್ಟಿದರು. ನಿನ್ನ ಮಗನ ಆಜ್ಞಾನುಸಾರವಾಗಿ ಎಲ್ಲ ರಥಿಗಳೂ ಧನುಸ್ಸುಗಳನ್ನು ಟೇಂಕರಿಸುತ್ತಾ, ಪುಂಖಾನುಪುಂಖವಾಗಿ ಬಾಣಗಳನ್ನು ಬಿಡುತ್ತಾ ಸೈಂಧವನನ್ನು ಸಂರಕ್ಷಿಸುತ್ತಿದ್ದರು. ಆ ಸಮಯದಲ್ಲಿ ಅರ್ಜುನನನ್ನು ಸುತ್ತುವರಿದು ನಿಂತಿದ್ದ ಯೋಧರಿಗೆ ಅವನ ಬಾಹುಗಳ ಬಲದ, ಗಾಂಡೀವದ ದೃಢತೆಯ ಮತ್ತು ಬಾಣಗಳ ಅಕ್ಷಯತ್ವದ ಪರಿಚಯವಾಯಿತು. ಅರ್ಜುನನು ಅಶ್ವತ್ಥಾಮನೂ ಮತ್ತು ಕೃಪರೂ ತನ್ನ ಮೇಲೆ ಪ್ರಯೋಗಿಸಿದ ಅಸ್ತ್ರಗಳನ್ನು ಅಸ್ತ್ರಗಳಿಂದಲೇ ನಿವಾರಣೆಮಾಡಿಕೊಂಡು ತನ್ನ ಮೇಲೆ ಆಕ್ರಮಣನಡೆಸುತ್ತಿದ್ದ ಪ್ರತಿಯೊಬ್ಬ ಯೋಧನನ್ನೂ ಹತ್ತು-ಹತ್ತು ಬಾಣಗಳಿಂದ ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಅಶ್ವತ್ಥಾಮನು ಅರ್ಜುನನನ್ನು ಇಪ್ಪತ್ತೈದು ಬಾಣಗಳಿಂದಲೂ ವೃಷಸೇನನು ಏಳು ಬಾಣಗಳಿಂದಲೂ, ದುರ್ಯೋಧನನು ಇಪ್ಪತ್ತು ಬಾಣಗಳಿಂದಲೂ, ಕರ್ಣ-ಶಲ್ಯರು ಮೂರು-ಮೂರು ಬಾಣಗಳಿಂದಲೂ ಪ್ರಹರಿಸಿದರು. ಆ ಕುರುಯೋಧರು ಅರ್ಜುನನನ್ನು ಅನುಲಕ್ಷಿಸಿ ಬಾರಿ-ಬಾರಿಗೂ ಗರ್ಜಿಸುತ್ತಾ, ಪುನಃ ಪುನಃ ಅನೇಕ ಬಾಣಗಳಿಂದ ಗಾಯಗೊಳಿಸುತ್ತಾ, ಧನುಸ್ಸುಗಳನ್ನು ಹಿಂದಕ್ಕೂ-ಮುಂದಕ್ಕೂ ಅಳ್ಳಾಡಿಸುತ್ತಾ ಅರ್ಜುನನನ್ನು ಎಲ್ಲ ಕಡೆಗಳಿಂದಲೂ ತಡೆದು ನಿಲ್ಲಿಸಿದರು. ಬಹಳ ಬೇಗ ಸೂರ್ಯಾಸ್ತವಾಗಬೇಕೆಂದು ಕಾತರಿಸುತ್ತಿದ್ದ ಕೌರವಮಹಾರಥರು ರಥಗಳ ಮಂಡಲವನ್ನು ಒಂದಕ್ಕೊಂದಕ್ಕೆ ತಾಗಿರುವಂತೆಯೇ ನಿಲ್ಲಿಸಿಕೊಂಡರು. (ಅರ್ಜುನನು ಕೌರವರಥಮಂಡಲದ ಮಧ್ಯಭಾಗದಲ್ಲಿದ್ದನು.) ಕೌರವಮಹಾರಥರು ಅರ್ಜುನನನ್ನು ಅನುಲಕ್ಷಿಸಿ ಗರ್ಜನೆಮಾಡುತ್ತಾ ಮೇಘಗಳು ವಾರಿಧಾರೆಗಳಿಂದ ಪರ್ವತದ ಶಿಖರವನ್ನು ತೋಯಿಸುವಂತೆ–ತೀಕ್ಷ್ಣವಾದ ಬಾಣಗಳಿಂದ ಅರ್ಜುನನನ್ನು ಮುಳುಗಿಸಿಬಿಟ್ಟರು. ಪರಿಘಾಯುಧದಂತಹ ತೋಳುಗಳನ್ನು ಹೊಂದಿದ್ದ ಕೌರವಶೂರರು ಧನಂಜಯನ ಶರೀರದ ಮೇಲೆ ದೊಡ್ಡ-ದೊಡ್ಡ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದರು. ಕೌರವಯೋಧರು ಅಷ್ಟು ಉಗ್ರವಾಗಿ ತಮ್ಮ ಪರಾಕ್ರಮವನ್ನು ಪ್ರದರ್ಶಿಸಿದರೂ ಸಹ ಸತ್ಯ

ವಿಕ್ರಮನಾದ, ದುರಾಧರ್ಷನಾದ ಅರ್ಜುನನು ನಿನ್ನ ಸೈನ್ಯದಲ್ಲಿ ಹೆಚ್ಚುಭಾಗ ಸೈನಿಕರನ್ನು ಸಂಹರಿಸಿ ಸೈಂಧವನನ್ನು ಸಮೀಪಿಸಿದನು. ಆ ಸಮಯದಲ್ಲಿ ಕರ್ಣನು ಭೀಮ-ಸಾತ್ಯಕಿಗಳು ನೋಡುತ್ತಿದ್ದಂತೆಯೇ ತೀಕ್ಷ್ಣವಾದ ಬಾಣ ಗಳಿಂದ ಅರ್ಜುನನನ್ನು ಪ್ರತಿರೋಧಿಸಿದನು. ಎಲ್ಲ ಸೈನಿಕರೂ ನೋಡು ತ್ತಿದ್ದಂತೆಯೇ ಮಹಾಬಾಹುವಾದ ಅರ್ಜುನನು ಸೂತಪುತ್ರನಾದ ಕರ್ಣ ನನ್ನು ಹತ್ತು ಬಾಣಗಳಿಂದ ಪ್ರಹರಿಸಿದನು. ಅರ್ಜುನನನ್ನೇ ಅನುಸರಿಸಿ ಸಾತ್ಯಕಿಯು ಮೂರು ಬಾಣಗಳಿಂದಲೂ, ಭೀಮಸೇನನು ಮೂರು ಬಾಣಗಳಿಂದಲೂ, ಕರ್ಣನನ್ನು ಪ್ರಹರಿಸಿದರು. ಪುನಃ ಅರ್ಜುನನು ಏಳು ಬಾಣಗಳಿಂದ ಪ್ರಹರಿಸಿದನು. ಮಹಾರಥನಾದ ಕರ್ಣನು ಆ ಮೂವರನ್ನೂ ಆರಾರು ಬಾಣಗಳಿಂದ ಪ್ರಹರಿಸಿದನು. ಆ ಸಮಯದಲ್ಲಿ ಕರ್ಣನು ಭೀಮ-ಪಾರ್ಥ-ಸಾತ್ಯಕಿಗಳನ್ನು ಎದುರಿಸಿ ಏಕಾಕಿಯಾಗಿಯೇ ಯುದ್ಧಮಾಡುತ್ತಿದ್ದನು. ಒಬ್ಬನೇ ಒಬ್ಬ ಕರ್ಣನು ಕ್ರುದ್ಧರಾಗಿದ್ದ ಮೂವರು ಮಹಾರಥರನ್ನೂ ತಡೆದು ನಿಲ್ಲಿಸಿದನು. ಆ ಸಮಯದಲ್ಲಿ ಸೂತಪುತ್ರನ ಪರಾಕ್ರಮವು ನಮಗೆ ಪರಮಾದ್ಭುತವಾಗಿ ಕಂಡಿತು. ಮಹಾಬಾಹುವಾದ ಅರ್ಜುನನು ಸೂರ್ಯನ ಮಗನಾದ ಕರ್ಣನನ್ನು ನೂರು ಬಾಣಗಳಿಂದ ಅವನ ಎಲ್ಲ ಮರ್ಮಸ್ಥಳಗಳಲ್ಲಿಯೂ ಪ್ರಹರಿಸಿದನು. ರಕ್ತದಿಂದ ಎಲ್ಲ ಅವಯವಗಳೂ ನೆನೆದುಹೋಗಿದ್ದರೂ ಸಹ ಪ್ರತಾಪವಂತನಾದ, ವೀರನಾದ ಕರ್ಣನು ಐವತ್ತು ಬಾಣಗಳಿಂದ ಅರ್ಜುನನನ್ನು ಪ್ರತಿಯಾಗಿ ಪ್ರಹರಿಸಿದನು. ಕರ್ಣನ ಆ ಹಸ್ತಲಾಘವವನ್ನು ಅರ್ಜುನನು ಸಹಿಸಿಕೊಳ್ಳಲಿಲ್ಲ. ಕ್ರುದ್ಧನಾದ ಅವನು ಕರ್ಣನ ಧನುಸ್ಸನ್ನು ಕತ್ತರಿಸಿ, ಪುನಃ ತ್ವರೆಯಿಂದ ಒಂಬತ್ತು ಬಾಣಗಳನ್ನು ಕರ್ಣನ ವಕ್ಷಃಸ್ಥಳದಲ್ಲಿ ಪ್ರಯೋಗಿಸಿದನು. ಪ್ರತಾಪವಂತ ನಾದ ಸೂತಪುತ್ರನು ಕ್ಷಣಾರ್ಧದಲ್ಲಿ ಮತ್ತೊಂದು ಧನುಸ್ಸನ್ನು ತೆಗೆದು ಕೊಂಡು ಎಂಟು ಸಾವಿರ ಬಾಣಗಳಿಂದ ಅರ್ಜುನನನ್ನು ಮುಚ್ಚಿಬಿಟ್ಟನು. ಪಾರ್ಥನು ಕರ್ಣನ ಧನುಸ್ಸಿನಿಂದ ಸಮುದ್ಭೂತವಾದ ಅಪಾರವಾದ ಆ ಬಾಣಗಳ ವೃಷ್ಟಿಯನ್ನು ಚಂಡಮಾರುತವು ಶಲಭದ ಹುಳುಗಳನ್ನು ಹಾರಿಸಿ ಕೊಂಡು ಹೋಗುವಂತೆ–ಅನೇಕ ಬಾಣಗಳನ್ನು ಪ್ರಯೋಗಿಸಿ ವ್ಯರ್ಥಗೊಳಿಸಿ ದನು. ಅನಂತರ ಅರ್ಜುನನು ಯುದ್ಧಪ್ರೇಕ್ಷಕರಾಗಿದ್ದ ಯೋಧರಿಗೆ ತನ್ನ

ಕೈಚಳಕವನ್ನು ಪ್ರದರ್ಶಿಸುತ್ತಾ ಅನೇಕ ಬಾಣಗಳಿಂದ ಕರ್ಣನನ್ನು ಮುಚ್ಚಿಬಿಟ್ಟನು. ಅವಸರದಿಂದ ಕಾರ್ಯಮಾಡಬೇಕಾಗಿದ್ದ ಆ ಸಮಯದಲ್ಲಿ ತ್ವರಾಶೀಲನಾಗಿದ್ದ ಅರ್ಜುನನು ಕರ್ಣನನ್ನು ವಧೆಮಾಡುವ ಸಲುವಾಗಿ ಸೂರ್ಯನ ತೇಜಸ್ಸಿಗೆ ಸಮಾನವಾಗಿದ್ದ ಬಾಣವೊಂದನ್ನು ಕರ್ಣನ ಮೇಲೆ ಪ್ರಯೋಗಿಸಿದನು. ಅರ್ಜುನನು ಬಿಟ್ಟ ಬಾಣವು ವೇಗವಾಗಿ ಬಂದು ಕರ್ಣನ ಮೇಲೆ ಬೀಳುವುದರಲ್ಲಿದ್ದುದನ್ನು ಗಮನಿಸಿದ ಅಶ್ವತ್ಥಾಮನು ತೀಕ್ಷ್ಣವಾದ ಅರ್ಧಚಂದ್ರವೆಂಬ ಬಾಣದಿಂದ ಆ ಬಾಣವನ್ನು ಕತ್ತರಿಸಿದನು. ಛಿನ್ನ-ಭಿನ್ನವಾದ ಆ ಬಾಣವು ಭೂಮಿಯ ಮೇಲೆ ಬಿದ್ದಿತು.

ಶತ್ರುಹಂತಕನಾದ ಕರ್ಣನು ಅರ್ಜುನನು ಮಾಡಿದುದಕ್ಕೆ ಪ್ರತಿಮಾಡಬೇಕೆಂಬ ಇಚ್ಛೆಯಿಂದ ಅನೇಕ ಸಾವಿರ ಬಾಣಗಳಿಂದ ಅರ್ಜುನನನ್ನು ಮುಚ್ಚಿದನು.

ಗೂಳಿಗಳೋಪಾದಿಯಲ್ಲಿ ಗುಟುರುಹಾಕುತ್ತಿದ್ದ, ನರಶ್ರೇಷ್ಠರಾದ, ಮಹಾರಥರಾದ ಕರ್ಣಾರ್ಜುನರು ನೇರವಾಗಿ ಹೋಗುವ ತಮ್ಮ ಬಾಣಗಳಿಂದ ಅಂತರಿಕ್ಷವನ್ನು ಮುಚ್ಚಿದರು. ಪರಸ್ಪರವಾಗಿ ಬಿಟ್ಟ ಸಾವಿರಾರು ಬಾಣಗಳಿಂದ ಕರ್ಣಾರ್ಜುನರಿಬ್ಬರೂ ಅದೃಶ್ಯರಾದರು. ಆ ಸಮಯದಲ್ಲಿ 'ಕರ್ಣ! ನಾನು ಪಾರ್ಥನಾಗಿದ್ದೇನೆ, ನಿಲ್ಲು. ನನ್ನೊಡನೆ ಯುದ್ಧಮಾಡು' ಎಂದು ಪಾರ್ಥನು ಹೇಳುತ್ತಿದ್ದನು. 'ಪಾರ್ಥ! ನಾನು ಕರ್ಣನಾಗಿದ್ದೇನೆ, ನಿಲ್ಲು. ನನ್ನೊಡನೆ ಯುದ್ಧಮಾಡು' ಎಂದು ಕರ್ಣನು ಕೂಗುತ್ತಿದ್ದನು. ಹೀಗೆ ಪರಸ್ಪರವಾಗಿ ಕೂಗಿಕೊಳ್ಳುತ್ತಾ ಒಬ್ಬರು ಮತ್ತೊಬ್ಬರನ್ನು ಗಾಯಗೊಳಿಸುತ್ತಿದ್ದರು. ಈ ರೀತಿಯಾಗಿ ಒಬ್ಬರು ಮತ್ತೊಬ್ಬರನ್ನು ಹೆದರಿಸುತ್ತಲೂ, ಮಾತುಗಳೆಂಬ ಬಾಣಗಳಿಂದ ಚುಚ್ಚುತ್ತಲೂ, ಚಿತ್ರ-ವಿಚಿತ್ರವಾಗಿ, ಒಮ್ಮೆ ಲಘುವಾಗಿ ( ಮೃದುತ್ವದಿಂದ ) ಮತ್ತೊಮ್ಮೆ ದೃಢವಾಗಿ ( ಕ್ರೌರ್ಯದಿಂದ ) ಯುದ್ಧಮಾಡುತ್ತಲೂ ಇದ್ದರು. ಸರ್ವಯೋಧರ ಆ ಮಹಾಸಮಾಗಮದಲ್ಲಿ ಕರ್ಣಾರ್ಜುನರು ಪ್ರೇಕ್ಷಣೀಯರಾಗಿದ್ದರು. ಸಿದ್ಧ-ಚಾರಣ-ಪನ್ನಗರಿಂದ ಶ್ಲಾಘಿಸಲ್ಪಡುತ್ತಿದ್ದರು. ಒಬ್ಬರು ಮತ್ತೊಬ್ಬರನ್ನು ವಧಿಸಬೇಕೆಂಬ ಇಚ್ಛೆಯನ್ನು ಹೊಂದಿ ಬಹುಘೋರವಾಗಿ ಯುದ್ಧ ಮಾಡುತ್ತಿದ್ದರು.

ಆ ಸಮಯದಲ್ಲಿ ದುರ್ಯೋಧನನು ನಿನ್ನ ಕಡೆಯ ಯೋಧರಿಗೆ ಹೇಳಿದನು : “ಕುರುಯೋಧರೇ! ಪ್ರಯತ್ನಪೂರ್ವಕವಾಗಿ ನೀವೆಲ್ಲರೂ ಒಟ್ಟಾಗಿ ಸೇರಿ ರಾಧೇಯನನ್ನು ರಕ್ಷಿಸಿರಿ. ರಾಧೇಯನು ಅರ್ಜುನನನ್ನು ಸಂಹರಿಸದೇ ಯುದ್ಧದಿಂದ ಹಿಂದಿರುಗುವುದಿಲ್ಲ. ಅವನೇ ನನಗೆ ಹೀಗೆಂದು ಹೇಳಿರುವನು.”

ಮಹಾರಾಜ! ದುರ್ಯೋಧನನು ತನ್ನ ಕಡೆಯ ಯೋಧರಿಗೆ ಹೀಗೆ ಹೇಳುತ್ತಿದ್ದ ಆ ಸಮಯದಲ್ಲಿ ಕರ್ಣನ ಪರಾಕ್ರಮವನ್ನು ನೋಡಿ ಅರ್ಜುನನು



ಬಹಳ ಕುಪಿತನಾಗಿ ಆಕರ್ಣವಾಗಿ ಸೆಳೆದು ಬಿಟ್ಟ ನಾಲ್ಕು ಬಾಣಗಳಿಂದ ಕರ್ಣನ ನಾಲ್ಕು ಕುದುರೆಗಳನ್ನೂ ಪ್ರೇತಲೋಕಕ್ಕೆ ಕಳುಹಿಸಿಕೊಟ್ಟನು.

ಕರ್ಣನ ಸಾರಥಿಯನ್ನು ಸಹ ಭಲ್ಲದಿಂದ ಸಂಹರಿಸಿ ರಥದ ಆಸನದಿಂದ ಕೆಳಕ್ಕೆ ಬೀಳಿಸಿದನು. ಪುನಃ ಅರ್ಜುನನು ನಿನ್ನ ಮಗನು ನೋಡುತ್ತಿದ್ದಂತೆಯೇ ಕರ್ಣನನ್ನು ಬಾಣಗಳಿಂದ ಮುಚ್ಚಿದನು. ಹತಾಶ್ವನಾಗಿದ್ದ ಮತ್ತು ಹತಸಾರಥಿಯಾಗಿದ್ದ ಕರ್ಣನು ಬಾಣಗಳಿಂದಲೂ ಆಚ್ಛಾದಿತನಾಗಿ ಭ್ರಾಂತನಾದನು. ಮುಂದೇನು ಮಾಡಬೇಕೆಂಬುದೇ ಅವನಿಗೆ ತಿಳಿಯದೇ ಹೋಯಿತು.

ರಥಹೀನನಾಗಿ ಅಂತಹ ಅವಸ್ಥೆಯಲ್ಲಿದ್ದ ರಾಧೇಯನನ್ನು ನೋಡಿ, ಅಶ್ವತ್ಥಾಮನು ಅವನನ್ನು ತನ್ನ ರಥಕ್ಕೆ ಹತ್ತಿಸಿಕೊಂಡು ಪುನಃ ಅರ್ಜುನನೊಡನೆ ಯುದ್ಧಮಾಡಲು ಉಪಕ್ರಮಿಸಿದನು. ಮದ್ರರಾಜನಾದ ಶಲ್ಯನು ಕೌಂತೇಯನನ್ನು ಮೂವತ್ತು ಬಾಣಗಳಿಂದ ಪ್ರಹರಿಸಿದನು. ಕೃಪರು ಇಪ್ಪತ್ತು ಬಾಣಗಳಿಂದ ಕೃಷ್ಣನನ್ನು ಪ್ರಹರಿಸಿದರು. ಅನಂತರ ಧನಂಜಯನನ್ನೂ ಸಹ ಹನ್ನೆರಡು ಬಾಣಗಳಿಂದ ಪ್ರಹರಿಸಿದರು. ಸಿಂಧುರಾಜನು ಅರ್ಜುನನನ್ನು ನಾಲ್ಕು ಬಾಣಗಳಿಂದಲೂ, ವೃಷಸೇನನು ಏಳು ಬಾಣಗಳಿಂದಲೂ ಕೃಷ್ಣಾರ್ಜುನರನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಪ್ರಹರಿಸಿದರು. ಅದೇ ರೀತಿಯಲ್ಲಿ ಅರ್ಜುನನೂ ಸಹ ಆ ಎಲ್ಲ ಕುರುಯೋಧರನ್ನೂ ಬಾಣಗಳಿಂದ ಪ್ರಹರಿಸಿದನು. ಅಶ್ವತ್ಥಾಮನನ್ನು ಅರುವತ್ತುನಾಲ್ಕು ಬಾಣಗಳಿಂದಲೂ, ಶಲ್ಯನನ್ನು ನೂರು ಬಾಣಗಳಿಂದಲೂ, ಕೃಪರನ್ನು ಇಪ್ಪತ್ತು ಬಾಣಗಳಿಂದಲೂ ಪ್ರಹರಿಸಿ ಪಾರ್ಥನು ಗಟ್ಟಿಯಾಗಿ ಗರ್ಜಿಸಿದನು.

ಸವ್ಯಸಾಚಿಯು ಮಾಡಿರುವ ಪ್ರತಿಜ್ಞೆಗೆ ಭಂಗವನ್ನುಂಟುಮಾಡಬೇಕೆನ್ನುವ ಆಶಯದಿಂದ ಕುರುಯೋಧರೆಲ್ಲರೂ ಸಂಘಟಿತರಾಗಿ ಪುನಃ ಅರ್ಜು ನನ ಮೇಲೆ ಆಕ್ರಮಣವನ್ನು ನಡೆಸಿದರು. ಅನಂತರ ಅರ್ಜುನನು ಧೃತರಾಷ್ಟ್ರನ ಮಕ್ಕಳನ್ನು ಭಯಪಡಿಸುತ್ತಾ ಸರ್ವತ್ರ ವಾರುಣಾಸ್ತ್ರವನ್ನು ಪ್ರಕಟಪಡಿಸಿದನು. ಕುರುಯೋಧರು ಬಹುಮೂಲ್ಯವಾದ ರಥಗಳಲ್ಲಿ ಕುಳಿತು ಮುನ್ನುಗ್ಗಿ ಪಾಂಡುಪುತ್ರನ ಮೇಲೆ ಬಾಣಗಳ ಮಳೆಗರೆದರು. ಸಮಸ್ತರಿಗೂ ಭ್ರಾಂತಿಯನ್ನುಂಟುಮಾಡುವ, ಸುದಾರುಣವಾದ, ಭಯಂಕರವಾದ ಯುದ್ಧವು ಪ್ರಾರಂಭವಾಗಲಾಗಿ, ರಾಜಪುತ್ರನಾದ, ಕಿರೀಟಧರನಾದ ಅರ್ಜುನನೊಬ್ಬನು ಸ್ವಲ್ಪವಾದರೂ ಭ್ರಾಂತನಾಗಲಿಲ್ಲ. ಬಾಣಗಳ ಸಮೂಹವನ್ನು ಶತ್ರುಗಳ ಮೇಲೆ ಪ್ರಯೋಗಿಸುತ್ತಲೇ ಇದ್ದನು. ಜ್ಞಾತಿಗಳು ಅಪಹರಿಸಿದ್ದ

ರಾಜ್ಯವನ್ನು ಪುನಃ ಪಡೆದುಕೊಳ್ಳಬೇಕೆಂಬ ಅಭಿಲಾಷೆಯಿಂದಿದ್ದ, ಮಹಾತ್ಮನಾದ, ಅಪ್ರಮೇಯನಾದ ಸವ್ಯಸಾಚಿಯು ಕೌರವರು ಕೊಟ್ಟ ಕ್ಲೇಶಗಳನ್ನೂ, ಹನ್ನೆರಡು ವರ್ಷಗಳ ಪರ್ಯಂತವಾಗಿ ಅರಣ್ಯದಲ್ಲಿ ಅನುಭವಿಸಿದ ಕಷ್ಟಗಳನ್ನೂ ಸ್ಮರಿಸುತ್ತಾ ಗಾಂಡೀವದಿಂದ ಮುಕ್ತವಾದ ಬಾಣಗಳ ಸಮೂಹಗಳಿಂದ ಎಲ್ಲ ದಿಕ್ಕುಗಳನ್ನೂ ಮುಚ್ಚಿದನು. ಅಂತರಿಕ್ಷವೆಲ್ಲವೂ ಪ್ರದೀಪ್ತವಾದ ಬಾಲಚುಕ್ಕಿಗಳಿಂದ ತುಂಬಿರುವಂತೆ ಕಾಣುತ್ತಿದ್ದಿತು. ಕ್ರುದ್ಧನಾದ ಅರ್ಜುನನು ಪಿಂಗಳವರ್ಣದ ಮೌರ್ವಿಯಿಂದ ಕೂಡಿದ್ದ ಧನುಸ್ಸಿನಿಂದ ಶತ್ರುಗಳನ್ನು ಸಂಹರಿಸುತ್ತಿದ್ದನು. ಅರ್ಜುನನಿಂದ ಹತರಾಗಿ ಕೆಳಕ್ಕೆ ಬಿದ್ದಿದ್ದ ಗಜಾಶ್ವ-ಪದಾತಿಗಳ ಶರೀರಗಳ ಮೇಲೆ ಮಾಂಸಾಶಿಗಳಾದ ಪಕ್ಷಿಗಳು ಬೀಳುತ್ತಿದ್ದುವು. ಶತ್ರುಗಳ ಅನೀಕಗಳನ್ನು ಜಯಿಸುವ ಸಾಮರ್ಥ್ಯದಿಂದ ಕೂಡಿದ್ದ, ಕಿರೀಟಧರನಾದ, ಮಹಾಯಶೋವಂತನಾದ  ಅರ್ಜುನನು ತನ್ನ ಮಹಾಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ಶ್ರೇಷ್ಠವಾದ ಕುದುರೆಗಳ ಮೇಲೆ ಮತ್ತು ಶ್ರೇಷ್ಠವಾದ ಆನೆಗಳ ಮೇಲೆ ಕುಳಿತಿದ್ದ ಕುರುಶ್ರೇಷ್ಠರನ್ನು ಕೆಳಕ್ಕೆ ಕೆಡವಿದನು. ಅದಕ್ಕೆ ಪ್ರತಿಯಾಗಿ ಕೌರವಪಕ್ಷದ ರಾಜರು ಭಾರವಾದ ಗದೆಗಳನ್ನೂ, ಲೋಹಮಯವಾದ ಪರಿಘಾಯುಧಗಳನ್ನೂ, ಕತ್ತಿಗಳನ್ನೂ, ಶಕ್ತ್ಯಾಯುಧಗಳನ್ನೂ ಮತ್ತು ದೊಡ್ಡ-ದೊಡ್ಡ ಅಸ್ತ್ರ-ಶಸ್ತ್ರಗಳನ್ನೂ ಹಿಡಿದುಕೊಂಡು ಪಾರ್ಥನನ್ನು ವೇಗದಿಂದ ಆಕ್ರಮಿಸಿದರು.

ಅನಂತರ ಯಮರಾಷ್ಟ್ರವರ್ಧಕನಾದ ಅರ್ಜುನನು ಪ್ರಳಯಕಾಲದ ಮೇಘಕ್ಕೆ ಸಮಾನವಾದ ಧ್ವನಿಯಿಂದ ಕೂಡಿದ್ದ, ಇಂದ್ರನ ಧನುಸ್ಸಿಗೆ ಸದೃಶವಾಗಿದ್ದ ಗಾಂಡೀವಧನುಸ್ಸನ್ನು ಎರಡು ಕೈಗಳಿಂದಲೂ ಸುದೀರ್ಘವಾಗಿ ಸೆಳೆದನು. ಬಳಿಕ ನಗು-ನಗುತ್ತಲೇ ಸಾವಿರಾರು ಬಾಣಗಳಿಂದ ನಿನ್ನ ಕಡೆಯ ಸೈನಿಕರನ್ನು ಭಸ್ಮೀಭೂತರನ್ನಾಗಿ ಮಾಡುತ್ತಾ ಬಹಳ ಶೀಘ್ರವಾಗಿ ಮುಂದೆ ನಡೆದನು. ಮಹಾಧನುರ್ಧರನಾದ, ವೀರನಾದ ಅರ್ಜುನನು ತನ್ನ ಮೇಲೆ ನುಗ್ಗಿಬರುತ್ತಿದ್ದ ಗಜ-ರಥಸಹಿತವಾದ ಪದಾತಿಸೈನಿಕರನ್ನು ಆಯುಧರಹಿತರನ್ನಾಗಿಯೂ ಪ್ರಾಣರಹಿತರನ್ನಾಗಿಯೂ ಮಾಡಿ ಯಮನ ರಾಷ್ಟ್ರದ ಜನಗಣತಿಯನ್ನು ಹೆಚ್ಚಿಸುವವರನ್ನಾಗಿಯೂ ಮಾಡಿದನು.”

ರಿಳ೫ನೆಯ ಅಧ್ಯಾಯವು ಮುಗಿಯಿತು.

## ಅರ್ಜುನನ ಅದ್ಭುತಪರಾಕ್ರಮ ಮತ್ತು ಸೈಂಧವನ ವಧೆ

ಸಂಜಯನು ಅರ್ಜುನನ ಪರಾಕ್ರಮವರ್ಣನೆಯನ್ನು ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಧನಂಜಯನಿಂದ ಬಾರಿ-ಬಾರಿಗೂ ಸೆಳೆಯಲ್ಪಡುತ್ತಿದ್ದ, ಅಂತಕನ ಸುಸ್ಪಷ್ಟವಾದ ಗರ್ಜನೆಯಂತೆಯೇ ಕೇಳಿಬರುತ್ತಿದ್ದ, ಇಂದ್ರನ ವಜ್ರಾಯುಧದ ಶಬ್ದಕ್ಕೆ ಸಮಾನವಾದ ಶಬ್ದದಿಂದ ಕೂಡಿದ್ದ, ಸುಘೋರವಾದ ಗಾಂಡೀವದ ಧ್ವನಿಯನ್ನು ಕೇಳಿ ನಿನ್ನ ಸೈನ್ಯವು ಪ್ರಳಯಕಾಲದಲ್ಲಿ ಹುಟ್ಟಿದ ಚಂಡಮಾರುತದಿಂದ ಅಲ್ಲೋಲಕಲ್ಲೋಲವಾಗುವ, ಚಲಿಸುತ್ತಿರುವ ದೊಡ್ಡ-ದೊಡ್ಡ ಅಲೆಗಳಿಂದ ಪರಿಪೂರ್ಣವಾಗಿರುವ, ಮೀನುಗಳನ್ನೂ, ಮೊಸಳೆಗಳನ್ನೂ ಅಂತರಾಳದಲ್ಲಿ ಹೊಂದಿರುವ ಸಮುದ್ರದ ನೀರಿನಂತೆ–ಭಯದಿಂದ ಸಂಭ್ರಾಂತವೂ ಉದ್ವಿಗ್ನವೂ ಆಯಿತು.

ಆ ರಣಕ್ಷೇತ್ರದಲ್ಲಿ ಕುಂತಿಯ ಮಗನಾದ ಅರ್ಜುನನು ಒಂದೇ ಸಮಯದಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ಕಾಣಿಸಿಕೊಳ್ಳುತ್ತಾ ಸರ್ವಮಹಾಸ್ತ್ರಗಳನ್ನೂ ಪ್ರದರ್ಶಿಸುತ್ತಾ ಸಂಚರಿಸುತ್ತಿದ್ದನು.

ಮಹಾರಾಜ! ಅರ್ಜುನನು ಬತ್ತಳಿಕೆಯಿಂದ ಬಾಣಗಳನ್ನು ತೆಗೆದುಕೊಳ್ಳುತ್ತಿದ್ದುದನ್ನಾಗಲೀ, ಧನುಸ್ಸಿನಲ್ಲಿ ಸಂಧಾನಮಾಡುತ್ತಿದ್ದುದನ್ನಾಗಲೀ, ಆಕರ್ಣವಾಗಿ ಸೆಳೆಯುತ್ತಿದ್ದುದನ್ನಾಗಲೀ ಮತ್ತು ಬಾಣಗಳನ್ನು ಬಿಡುತ್ತಿದ್ದುದನ್ನಾಗಲೀ ನಾವು ಕಾಣುತ್ತಿರಲಿಲ್ಲ. ('ಸೊಯ್' ಎಂಬ ಶಬ್ದದೊಡನೆ ಮಂಡಲಾಕಾರದ ಧನುಸ್ಸಿನಿಂದ ಪುಂಖಾನುಪುಂಖವಾಗಿ ಬಾಣಗಳು ಹೊರಬರುತ್ತಿದ್ದುದು ಮಾತ್ರವೇ ಕಾಣಿಸುತ್ತಿದ್ದಿತು.) ಬಾಣಪ್ರಯೋಗದಲ್ಲಿ ಅಂತಹ ಹಸ್ತಲಾಘವವನ್ನು ಅರ್ಜುನನು ಹೊಂದಿದ್ದನು.

ಅನಂತರ ಪರಮಕ್ರುದ್ಧನಾದ ಮಹಾಬಾಹುವಾದ ಅರ್ಜುನನು ಸರ್ವ ಕೌರವಸೈನ್ಯವನ್ನೂ ಭಯಗೊಳಿಸುತ್ತಾ ದುರಾಸದವಾದ ಐಂದ್ರಾಸ್ತ್ರವನ್ನು ಪ್ರಕಟಪಡಿಸಿದನು. ಕಿವಿಯವರೆಗೂ ಪೂರ್ಣವಾಗಿ ಧನುಸ್ಸಿನ ಮೌರ್ವಿಯನ್ನು ಸೆಳೆದುಬಿಡಲ್ಪಟ್ಟ, ಅಗ್ನಿಯ ಜ್ವಾಲೆಗಳಿಗೆ ಮತ್ತು ಸೂರ್ಯಕಿರಣಗಳಿಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಬಾಣಗಳಿಂದ ಅಂತರಿಕ್ಷವು ಉಲ್ಕೆ

ಗಳಿಂದಲೇ ತುಂಬಿಹೋಗಿರುವುದೋ ಎಂಬಂತೆ–ನೋಡಲು ಬಹಳ ಕಷ್ಟ ಸಾಧ್ಯವಾಗಿದ್ದಿತು.

ಅನಂತರ ಕೌರವಯೋಧರು ಸಾವಿರಾರು ಬಾಣಗಳನ್ನು ಪ್ರಯೋಗಿಸಿ ಕತ್ತಲೆಯನ್ನೇ ಸೃಷ್ಟಿಸಿದರು. ಶಸ್ತ್ರಾಂಧಕಾರವನ್ನು ನೀಗುವುದು ಅನ್ಯಮನುಷ್ಯರ ಕಲ್ಪನೆಗೂ ಮೀರಿದುದಾಗಿದ್ದಿತು. ಅಂತಹ ಶಸ್ತ್ರಾಂಧಕಾರವನ್ನು ಸ್ವಲ್ಪ ಹೊತ್ತಿನಲ್ಲಿಯೇ ಅರ್ಜುನನು ದಿವ್ಯಾಸ್ತ್ರಗಳ ಮಂತ್ರದಿಂದ ಅಭಿಮಂತ್ರಿತವಾದ ಬಾಣಗಳ ಸಹಾಯದಿಂದ–ರಾತ್ರಿಗೆ ಸಂಬಂಧಿಸಿದ ಕತ್ತಲೆಯನ್ನು ದಿನದ ಆದಿಯಲ್ಲಿ ಸೂರ್ಯನು ತನ್ನ ಕಿರಣಗಳಿಂದ ಬಹಳ ಶೀಘ್ರವಾಗಿ ವಿನಾಶಗೊಳಿಸುವಂತೆ–ವಿನಾಶಗೊಳಿಸಿದನು. ಗ್ರೀಷ್ಮಕಾಲದ ಸೂರ್ಯನು ಯಾವ ರೀತಿಯಲ್ಲಿ ತನ್ನ ಪ್ರಚಂಡಕಿರಣಗಳಿಂದ ಜಲಾಶಯಗಳಲ್ಲಿರುವ ನೀರನ್ನು ಶೋಷಿಸಿಬಿಡುತ್ತಾನೆಯೋ–ಅದೇ ರೀತಿಯಲ್ಲಿ ಅರ್ಜುನನು ಪ್ರದೀಪ್ತವಾದ ಬಾಣರೂಪದ ಕಿರಣಗಳಿಂದ ನಿನ್ನ ಸೈನ್ಯವನ್ನು ಶೋಷಿಸಿ ಬಿಟ್ಟನು (ವಿಧ್ವಂಸಮಾಡಿದನು). ದಿವ್ಯಾಸ್ತ್ರಗಳನ್ನು ತಿಳಿದಿದ್ದ ಅರ್ಜುನನಿಂದ ಪ್ರಮುಕ್ತವಾದ ಬಾಣರೂಪವಾದ ಕಿರಣಗಳು–ಸೂರ್ಯನ ಕಿರಣಗಳು ಜಗತ್ತನ್ನೇ ವ್ಯಾಪಿಸುವಂತೆ–ಶತ್ರುಸೈನ್ಯವನ್ನೇ ಮುಳುಗಿಸಿಬಿಟ್ಟುವು (ಶತ್ರು ಸೈನಿಕರು ಅರ್ಜುನನು ಬಿಟ್ಟ ಬಾಣಗಳಿಂದ ಸಂಪೂರ್ಣವಾಗಿ ಮುಚ್ಚಿಹೋದರು). ಅರ್ಜುನನಿಂದ ಬಿಡಲ್ಪಟ್ಟ ತೀಕ್ಷ್ಣವಾದ ತೇಜಸ್ಸಿನಿಂದ ಕೂಡಿದ್ದ ಇತರ ಬಾಣಗಳು ಪ್ರಿಯಬಂಧುವಿನೋಪಾದಿಯಲ್ಲಿ ಕೌರವವೀರರ ಹೃದಯಗಳನ್ನು ಹೊಕ್ಕುವು. ತಾವೇ ಮಹಾಶೂರರೆಂಬ ಅಭಿಮಾನವನ್ನಿಟ್ಟುಕೊಂಡು ಯಾರು-ಯಾರು ಅರ್ಜುನನನ್ನೆದುರಿಸಿ ಯುದ್ಧ ಮಾಡಲು ಹೋಗುತ್ತಿದ್ದರೋ–ಅವರೆಲ್ಲರೂ ದೀಪದ ಹುಳುಗಳು ಪ್ರದೀಪ್ತ ವಾದ ಅಗ್ನಿಯ ಬಳಿಗೆ ಹೋಗಿ ಸ್ವೇಚ್ಛೆಯಿಂದ ಬಿದ್ದು ಪ್ರಾಣತೊರೆಯುವಂತೆ ಪ್ರಾಣತೊರೆಯುತ್ತಿದ್ದರು (ಅರ್ಜುನನನ್ನು ಎದುರಿಸಲು ಹೋದವನೊಬ್ಬನೂ ಪ್ರಾಣಸಹಿತನಾಗಿ ಹಿಂದಿರುಗುತ್ತಿರಲಿಲ್ಲ). ಮೂರ್ತಿಮತ್ತಾಗಿ ಬಂದ ಮೃತ್ಯುವಿನೋಪಾದಿಯಲ್ಲಿದ್ದ ಪಾರ್ಥನು ಈ ರೀತಿಯಲ್ಲಿ ಶತ್ರುಗಳ ಪ್ರಾಣಗಳನ್ನೂ, ಯಶಸ್ಸುಗಳನ್ನೂ ಧೂಳೀಪಟಲಮಾಡುತ್ತಾ ಸಮರಾಂಗಣ ದಲ್ಲಿ ಸಂಚರಿಸುತ್ತಿದ್ದನು. ಅರ್ಜುನನು ಕೆಲವು ಯೋಧರ ಕಿರೀಟಯುಕ್ತ

ವಾದ ಶಿರಸ್ಸುಗಳನ್ನೂ, ಕೆಲವು ಯೋಧರ ಅಂಗದಾಭರಣಯುಕ್ತವಾದ ವಿಶಾಲವಾದ ಭುಜಗಳನ್ನೂ, ಕೆಲವು ಯೋಧರ ಕುಂಡಲಗಳಿಂದ ಯುಕ್ತ ವಾದ ಕಿವಿಗಳನ್ನೂ ಬಾಣಗಳಿಂದ ಕತ್ತರಿಸಿಹಾಕುತ್ತಿದ್ದನು. ಆನೆಗಳ ಮೇಲೆ ಕುಳಿತಿದ್ದ ಗಜಯೋಧರ ತೋಮರಯುಕ್ತವಾದ ತೋಳುಗಳನ್ನೂ ಅಶ್ವಯೋಧರ ಪ್ರಾಸಯುಕ್ತವಾದ ತೋಳುಗಳನ್ನೂ, ಪದಾತಿಗಳ ಗುರಾಣಿ ಗಳಿಂದ ಯುಕ್ತವಾದ ತೋಳುಗಳನ್ನೂ, ರಥಿಗಳ ಧನುಸ್ಸಿನಿಂದ ಯುಕ್ತವಾದ ತೋಳುಗಳನ್ನೂ, ಚಾವಟಿಗಳನ್ನು ಹಿಡಿದಿರುವ ಸಾರಥಿಗಳ ತೋಳುಗಳನ್ನೂ ಬಾಣಗಳಿಂದ ಕತ್ತರಿಸಿದನು. ಪ್ರದೀಪ್ತವಾದ ಮತ್ತು ಉಗ್ರವಾದ ಬಾಣಗಳನ್ನೇ ಜ್ವಾಲೆಗಳ ರೂಪದಲ್ಲಿ ಹೊಂದಿದ್ದ ಧನಂಜಯನು ಕಿಡಿಗಳಿಂದಲೂ, ಜ್ವಾಲೆಗಳಿಂದಲೂ ಕೂಡಿದ ಯಜ್ಞೇಶ್ವರನಂತೆಯೇ ಪ್ರಕಾಶಿಸುತ್ತಿದ್ದನು. ಮಹಾರಾಜ! ಇಂದ್ರಸದೃಶನಾದ, ಎಲ್ಲ ಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠನಾದ, ರಥದಲ್ಲಿ ಕುಳಿತಿದ್ದ, ಒಂದೇ ಸಮಯದಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ಕಾಣಿಸಿಕೊಳ್ಳುತ್ತಿದ್ದ, ಪುರುಷಶ್ರೇಷ್ಠನಾದ, ಮಹಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದ, ಪ್ರೇಕ್ಷಣೀಯನಾದ, ರಥದ ಹಾದಿಗಳಲ್ಲಿ ನೃತ್ಯಮಾಡುತ್ತಿರುವನೋ ಎಂಬಂತೆ ಕಾಣುತ್ತಿದ್ದ, ಧನುಸ್ಸನ್ನು ಬಾರಿ-ಬಾರಿಗೂ ಠೇಂಕರಿಸುತ್ತಿದ್ದ ಅರ್ಜುನನನ್ನು–ಮಧ್ಯಾಹ್ನದ ಸಮಯದಲ್ಲಿ ಪರಿತಪಿಸುವ, ಆಕಾಶದಲ್ಲಿರುವ ಸೂರ್ಯನನ್ನು ನೋಡಲು ಸಾಧ್ಯವಾಗದಂತೆ–ಕೌರವರ ಕಡೆಯ ರಾಜರು ಎಷ್ಟೇ ಪ್ರಯತ್ನಿಸಿದರೂ ದಿಟ್ಟಿಸಿನೋಡಲು ಕೂಡ ಸಾಧ್ಯವಾಗುತ್ತಿರಲಿಲ್ಲ. ಪ್ರದೀಪ್ತವಾದ ಮತ್ತು ಉಗ್ರವಾದ ಬಾಣಗಳನ್ನು ಹೊಂದಿದ್ದ ಅರ್ಜುನನು–ವರ್ಷಾಕಾಲದಲ್ಲಿ ಅಧಿಕ ಜಲದಿಂದಲೂ, ಕಾಮನಬಿಲ್ಲಿನಿಂದಲೂ ಕೂಡಿ ರುವ ಮಹಾಮೇಘದಂತೆಯೇ ಪ್ರಕಾಶಿಸಿದನು. ಅರ್ಜುನನಿಂದ ಪ್ರವರ್ತಿತ ವಾದ, ದಾಟಲು ಅಸಾಧ್ಯವಾದ, ಮಹಾಘೋರವಾದ, ಮಹಾಸ್ತ್ರರೂಪ ವಾದ ಪ್ರವಾಹದಲ್ಲಿ ಕೌರವರ ಕಡೆಯ ಬಹುಸಂಖ್ಯಾತಯೋಧರು ಮುಳುಗಿ ಹೋದರು.

ಕತ್ತರಿಸಲ್ಪಟ್ಟ ಶಿರಸ್ಸುಗಳುಳ್ಳ ಮುಂಡಗಳಿಂದಲೂ, ತೋಳುಗಳಿಂದ ರಹಿತವಾದ ಶರೀರಗಳಿಂದಲೂ, ಕೈಗಳಿಲ್ಲದ ಭುಜಗಳಿಂದಲೂ, ಬೆರಳುಗಳಿ ಲ್ಲದ ಕೈಗಳಿಂದಲೂ, ಸೊಂಡಿಲುಗಳಿಂದ ರಹಿತವಾದ ಆನೆಗಳಿಂದಲೂ,

ಕತ್ತರಿಸಲ್ಪಟ್ಟ ದಂತಗಳುಳ್ಳ ಮದಿಸಿದ ಸಲಗಗಳಿಂದಲೂ, ತಲೆಯಿಲ್ಲದ ಕುದುರೆಗಳಿಂದಲೂ, ಚೂರು-ಚೂರು ಮಾಡಲ್ಪಟ್ಟ ರಥಗಳಿಂದಲೂ, ಕತ್ತರಿಸಲ್ಪಟ್ಟು ಹೊರಗೆ ಕಾಣುತ್ತಿದ್ದ ಕರುಳುಗಳಿಂದಲೂ, ಛಿನ್ನವಾದ ಪಾದ ಗಳಿಂದಲೂ, ಭಿನ್ನವಾದ ಸಂಧಿಪ್ರದೇಶಗಳಿಂದಲೂ, ನಿಶ್ಚೇಷ್ಟಿತರಾಗಿ ಬಿದ್ದಿದ್ದ ಪದಾತಿಗಳಿಂದಲೂ, ನೆಲದ ಮೇಲೆ ಬಿದ್ದು ಚಡಪಡಿಸುತ್ತಿದ್ದ ನೂರಾರು-ಸಾವಿರಾರು ಯೋಧರಿಂದಲೂ ನಿಬಿಡವಾಗಿದ್ದ ರಣರಂಗವನ್ನು ನಾವು ನೋಡಿದೆವು. ಪಾರ್ಥನು ಮಾಡುತ್ತಿದ್ದ ಆ ಮಹಾಯುದ್ಧವು ಮೃತ್ಯುವಿನ ಆಘಾತದಂತೆ ಬಹಳ ಸುಂದರವಾಗಿಯೇ ಕಾಣುತ್ತಿದ್ದಿತು. ಪ್ರಳಯಕಾಲದಲ್ಲಿ ಪ್ರಾಣಿಗಳನ್ನು ಧ್ವಂಸಮಾಡುವ ರುದ್ರನ ವಿಹಾರಭೂಮಿಯಂತಿದ್ದ ಆ ರಣರಂಗವು ಭೀರುಗಳಿಗೆ ಭಯವರ್ಧಕವಾಗಿದ್ದಿತು. ಅರ್ಜುನನು ಬಿಟ್ಟ ಕ್ಷುರಗಳಿಂದ ಕತ್ತರಿಸಲ್ಪಟ್ಟ ಆನೆಯ ಸೊಂಡಿಲುಗಳು ಭೂಮಿಯ ಮೇಲೆ ತಂಡೋಪತಂಡವಾಗಿ ಬಿದ್ದಿರುವುದನ್ನು ನೋಡಿದರೆ ಭೂಮಿಯೇನಾದರೂ ಸರ್ಪಗಳಿಂದ ತುಂಬಿಹೋಗಿದೆಯೋ–ಎಂಬಂತೆ ಕಾಣುತ್ತಿದ್ದಿತು. ಮತ್ತೆ ಕೆಲವೆಡೆಗಳಲ್ಲಿ ರಾಜರ ಮುಖಕಮಲಗಳಿಂದ ವ್ಯಾಪ್ತವಾಗಿದ್ದ ಭೂಮಿಯು–ಕಮಲದ ಮಾಲೆಯಿಂದ ಸಮಲಂಕೃತವಾಗಿರುವಂತೆಯೇ–ಕಾಣುತ್ತಿದ್ದಿತು. ವಿಚಿತ್ರವಾದ ಉಷ್ಣೀಷ ಮತ್ತು ಮುಕುಟಗಳಿಂದಲೂ, ಕೇಯೂರ-ಅಂಗದ ಮತ್ತು ಕುಂಡಲಗಳಿಂದಲೂ, ಸುವರ್ಣಮಯವಾಗಿಯೂ–ಚಿತ್ರಿತ ವಾಗಿಯೂ ಇದ್ದ ಕವಚಗಳಿಂದಲೂ, ಆನೆ ಮತ್ತು ಕುದುರೆಗಳ ಆಭರಣ ಗಳಿಂದಲೂ, ನೂರಾರು ಕಿರೀಟಗಳಿಂದಲೂ ಆಚ್ಛಾದಿತವಾಗಿದ್ದ ರಣರಂಗವು ಸರ್ವಾಭರಣಭೂಷಿತೆಯಾದ ನೂತನವಧುವಿನಂತೆಯೇ ರಾರಾಜಿಸು ತ್ತಿದ್ದಿತು.

ಮಹಾರಾಜ! ಅರ್ಜುನನು ಹೇಡಿಗಳಿಗೆ ಭಯವನ್ನು ಹೆಚ್ಚಿಸುವ ವೈತರಣೀನದಿಯಂತೆ–ಮಹಾಭಯಂಕರವಾದ, ಘೋರವಾದ ನದಿಯನ್ನು ರಣರಂಗದಲ್ಲಿ ಹರಿಸಿದನು. ಪ್ರಾಣಗಳನ್ನು ಕಳೆದುಕೊಂಡು ನಿಶ್ಚೇಷ್ಟರಾಗಿ ಬಿದ್ದಿದ್ದ ನೂರಾರು ಯೋಧರ ಶರೀರಗಳಿಂದ ಆ ನದಿಯು ಪ್ರವಹಿಸುತ್ತಿ ದ್ದಿತು. ಮಜ್ಜೆ ಮತ್ತು ಮೇದಸ್ಸುಗಳು ಆ ನದಿಯ ಕೆಸರಾಗಿದ್ದಿತು. ರಕ್ತವೇ ಆ ನದಿಯಲ್ಲಿ ನೀರಿನ ರೂಪದಲ್ಲಿ ಪ್ರವಹಿಸುತ್ತಿದ್ದಿತು. ರಕ್ತವೇ ಅಲೆ ಗಳ ರೂಪದಲ್ಲಿಯೂ ಇದ್ದಿತು. ವೀರರ ಮರ್ಮಸ್ಥಳಗಳಿಂದಲೂ ಮತ್ತು

ಮೂಳೆಗಳಿಂದಲೂ ಕೂಡಿದ್ದ ಆ ರಕ್ತನದಿಯು ಅಗಾಧವಾಗಿದ್ದಿತು. ಯೋಧರ ಕೇಶರಾಶಿಗಳೇ ಆ ನದಿಯ ಪಾಚಿ ಮತ್ತು ಗರಿಕೆಗಳಾಗಿದ್ದುವು. ಅರ್ಜುನನಿಂದ ಕತ್ತರಿಸಲ್ಪಟ್ಟ ಯೋಧರ ತಲೆಗಳೂ ಮತ್ತು ತೋಳುಗಳೂ ಎರಡು ದಂಡೆಗಳಲ್ಲಿಯೂ ಇರುವ ಬಂಡೆಗಳಂತೆ ಕಾಣುತ್ತಿದ್ದುವು. ಮುರಿದು ಹೋಗಿದ್ದ ಯೋಧರ ಎದೆಗಳ ಮೂಳೆಗಳಿಂದ ವ್ಯಾಪ್ತವಾಗಿದ್ದ ಆ ನದಿಯು ದಾಟಲು ಅಸಾಧ್ಯವಾಗಿದ್ದಿತು.



ವಿಚಿತ್ರವಾದ ಧ್ವಜ-ಪತಾಕೆಗಳು ಆ ನದಿಯ ತಳಭಾಗದಲ್ಲಿದ್ದುವು. ಛತ್ರಗಳೂ ಮತ್ತು ಧನುಸ್ಸುಗಳೂ ಅಲೆಗಳಂತಿದ್ದುವು. ಪ್ರಾಣರಹಿತವಾದ ಪ್ರಾಣಿಗಳೇ ಆ ವಿಶಾಲನದಿಯ ಅವಯವಗಳಂತಿದ್ದುವು. ಸತ್ತುಹೋದ ಆನೆಗಳ ಶರೀರಗಳಿಂದ ಆ ನದಿಯು ತುಂಬಿಹೋಗಿದ್ದಿತು. ರಥರೂಪದ

ನೂರಾರು ದೋಣಿಗಳು ಆ ರಕ್ತನದಿಯಲ್ಲಿ ತೇಲಾಡುತ್ತಿದ್ದುವು. ಸತ್ತಕುದುರೆ ಗಳ ಸಮೂಹಗಳೇ ಆ ನದಿಯ ದಂಡೆಗಳ ರೂಪದಲ್ಲಿದ್ದುವು. ರಥದ ಚಕ್ರ ಗಳೂ, ನೊಗಗಳೂ, ಈಷಾದಂಡಗಳೂ, ಅಚ್ಚುಮರಗಳೂ, ತೋಳುಮರ ಗಳೂ ರಾಶಿ-ರಾಶಿಯಾಗಿ ಬಿದ್ದಿದ್ದು ನದಿಯು ಅತಿದುರ್ಗಮವಾಗಿದ್ದಿತು. ಸರ್ಪಗಳ ರೂಪದಲ್ಲಿದ್ದ ಪ್ರಾಸ, ಶಕ್ತಿ, ಖಡ್ಗ, ಗಂಡುಗೊಡಲಿ ಮತ್ತು ಬಾಣಗಳಿಂದಲೂ ಆ ರಕ್ತನದಿಯು ಪ್ರವೇಶಿಸಲು ದುಃಸಾಧ್ಯವಾಗಿದ್ದಿತು. ಹದ್ದುಗಳು ಮತ್ತು ಕಾಗೆಗಳೇ ದೊಡ್ಡ-ದೊಡ್ಡ ಮೊಸಳೆಗಳಂತಿದ್ದುವು. ಗುಳ್ಳೇನರಿಗಳು ಆ ನದಿಯಲ್ಲಿ ದೊಡ್ಡಮೀನುಗಳಂತಿದ್ದುವು. ಹೆಣ್ಣು ಗುಳ್ಳೇ ನರಿಗಳ ಅಪಸ್ವರ ಕೂಗುವಿಕೆಯಿಂದಾಗಿ ಆ ನದಿಯು ಮಹಾಭಯಂಕರ ವಾಗಿ ಕಾಣುತ್ತಿದ್ದಿತು. ನೃತ್ಯಮಾಡುತ್ತಿದ್ದ ಸಾವಿರಾರು ಪ್ರೇತ-ಪಿಶಾಚ-ಭೂತಗಣಗಳಿಂದ ಆ ನದಿಯು ಸಂಕೀರ್ಣವಾಗಿದ್ದಿತು. ನದಿಯ ಪ್ರವಾಹವು ದಡದ ಮರಗಳನ್ನು ಕೊಚ್ಚಿಕೊಂಡು ಪ್ರವಹಿಸುವಂತೆ ಈ ನದಿಯು ಸತ್ತಪ್ರಾಣಿಗಳ ನಿಶ್ಶೇಷ್ಟವಾದ ದೇಹಗಳನ್ನು ಒಯ್ಯುತ್ತಾ ಪ್ರವಹಿಸುತ್ತಿದ್ದಿತು. ಇಂತಹ ಸುಘೋರವಾದ ವೈತರಣೀನದಿಯಂತಿರುವ, ಹೇಡಿಗಳ ಭಯ ವನ್ನು ಹೆಚ್ಚಿಸುವ ನದಿಯನ್ನು ಅರ್ಜುನನು ಸೃಷ್ಟಿಸಿದನು.

ಸಮರಾಂಗಣದಲ್ಲಿ ಮೂರ್ತಿಮತ್ತಾಗಿ ಬಂದ ಯಮರಾಜನಂತೆಯೇ ಕಾಣುತ್ತಿದ್ದ ಅರ್ಜುನನ ಅಭೂತಪೂರ್ವವಾದ ಪರಾಕ್ರಮವನ್ನು ನೋಡಿ ಕುರುಗಳಲ್ಲಿ ಭಯವು ಆವರಿಸಿತು. ಭಯಂಕರಕರ್ಮದಲ್ಲಿ ತೊಡಗಿದ್ದ ಅರ್ಜುನನು ಕೌರವವೀರರು ಪ್ರಯೋಗಿಸುತ್ತಿದ್ದ ಅಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದ ಎದುರಿಸುತ್ತಾ ತನ್ನ ಆಕಾರವನ್ನು ರೌದ್ರಾಕಾರವನ್ನಾಗಿ ಮಾಡಿಕೊಂಡನು. (ಅರ್ಜುನನು ಆ ಸಮಯದಲ್ಲಿ ಘೋರಸ್ವರೂಪಿಯಾದನು.) ಅನಂತರ ಅರ್ಜುನನು ರಥಶ್ರೇಷ್ಠರೆಲ್ಲರನ್ನೂ ಅತಿಕ್ರಮಿಸಿ ಮುಂದೆ ನಡೆದನು. ನಡುಹಗಲಿನಲ್ಲಿ ಪ್ರತಪಿಸುತ್ತಿರುವ ಸೂರ್ಯನನ್ನು ನೋಡಲು ಸಾಧ್ಯವಾಗ ದಂತೆ–ಆ ಸಮಯದಲ್ಲಿ ಎಲ್ಲ ಪ್ರಾಣಿಗಳೂ ಅರ್ಜುನನನ್ನು ನೋಡಲು ಅಸಮರ್ಥವಾದುವು. ಮಹಾತ್ಮನಾದ ಅರ್ಜುನನ ಗಾಂಡೀವಧನುಸ್ಸಿನಿಂದ ಹೊರಬಂದು ಶತ್ರುಗಳ ಕಡೆಗೆ ಹೋಗುತ್ತಿದ್ದ ಬಾಣಗಳನ್ನು–ಆಕಾಶದಲ್ಲಿ

ಹಾರುವ ಹಂಸಪಕ್ಷಿಗಳ ಸಾಲಿನಂತೆ ನಾವು ನೋಡಿದೆವು. ಕಿರೀಟಿಯು ಕೌರವವೀರರು ಬಿಡುತ್ತಿದ್ದ ಅಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದಲೇ ನಿವಾರಣೆಮಾಡಿ, ತನ್ನ ಭಯಂಕರರೂಪವನ್ನು ಶತ್ರುಗಳಿಗೆ ತೋರಿಸುತ್ತಾ, ಉಗ್ರವಾದ ಸಂಹಾರಕ್ರಿಯೆಯಲ್ಲಿ ನಿರತನಾಗಿದ್ದನು. ಸೂರ್ಯಾಸ್ತದೊಳಗಾಗಿ ಜಯದ್ರಥ ನನ್ನು ಸಂಹರಿಸಬೇಕೆಂಬ ಇಚ್ಛೆಯಿಂದ ಅರ್ಜುನನು ಬಾಣಗಳಿಂದ ಕೌರವ ರಥಶ್ರೇಷ್ಠರನ್ನು ವಿಮೋಹಗೊಳಿಸುತ್ತಿರುವನೋ ಎಂಬಂತೆ–ಅವರೆಲ್ಲರನ್ನೂ ಅತಿಕ್ರಮಿಸಿ ಮುಂದೆ ನಡೆದನು. ಪ್ರೇಕ್ಷಣೀಯನಾದ ಶ್ರೀಕೃಷ್ಣಸಾರಥಿಯಾದ ಧನಂಜಯನು ಎಲ್ಲ ದಿಕ್ಕುಗಳಲ್ಲಿಯೂ ಬಾಣಗಳನ್ನು ಪ್ರಯೋಗಿಸುತ್ತಾ ಬಹಳ ವೇಗವಾಗಿ ರಣರಂಗದಲ್ಲಿ ಸಂಚರಿಸುತ್ತಿದ್ದನು.

ಮಹಾತ್ಮನಾದ, ಶೂರನಾದ ಅರ್ಜುನನಿಂದ ಪ್ರಮುಕ್ತವಾಗಿ ಅಂತರಿಕ್ಷ ದಲ್ಲಿದ್ದ ನೂರಾರು-ಸಾವಿರಾರು ಬಾಣಗಳ ಸಮೂಹಗಳು ಅಲ್ಲಲ್ಲಿಯೇ ಸುತ್ತುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. ಮಹಾಧನುಷ್ಮಂತನಾದ ಅರ್ಜುನನು ಬಾಣಗಳನ್ನು ಬತ್ತಳಿಕೆಯಿಂದ ತೆಗೆದುಕೊಳ್ಳುವುದನ್ನಾಗಲೀ, ಧನುಸ್ಸಿನಲ್ಲಿ ಸಂಧಾನಮಾಡುವುದನ್ನಾಗಲೀ, ಶಿಂಜಿನಿಯನ್ನು ಕಿವಿಯವರೆಗೂ ಸೆಳೆದುಬಿಡುತ್ತಿದ್ದುದನ್ನಾಗಲೀ–ನಾವು ಆ ಸಮಯದಲ್ಲಿ ಕಾಣುತ್ತಲೇ ಇರ ಲಿಲ್ಲ. ಈ ರೀತಿಯಲ್ಲಿ ಅರ್ಜುನನು ಎಲ್ಲ ದಿಕ್ಕುಗಳನ್ನೂ ಮತ್ತು ಎಲ್ಲ ರಥಿಕ ರನ್ನೂ ಬಾಣಗಳ ಸಮೂಹಗಳಿಂದ ಒಗ್ಗೂಡಿಸಿ ಅವರನ್ನು ವಿಮೋಹಿತರನ್ನಾಗಿ ಮಾಡಿ, ಜಯದ್ರಥನ ಸಮೀಪಕ್ಕೆ ಹೊರಟೇ ಹೋದನು. ಸೈಂಧವನನ್ನು ಎದುರಿನಲ್ಲಿ ಕಂಡೊಡನೆಯೇ ಅರ್ಜುನನು ಬಗ್ಗಿದ ಗಿಣ್ಣುಗಳಿದ್ದ ಅರುವತ್ತು ನಾಲ್ಕು ಬಾಣಗಳಿಂದ ಅವನನ್ನು ಪ್ರಹರಿಸಿದನು. ಸೈಂಧವನಿಗೆ ಅಭಿ ಮುಖನಾಗಿ ಅರ್ಜುನನು ಹೋದುದನ್ನು ಕಂಡು ಕೌರವಯೋಧರು ಜಯ ದ್ರಥನ ಬದುಕಿನಲ್ಲಿಯೇ ನಿರಾಶೆಯನ್ನು ಹೊಂದಿದವರಾಗಿ ಯುದ್ಧಭೂಮಿ ಯಿಂದ ಹಿಂದಿರುಗಿದರು. ಆ ಘೋರಸಂಗ್ರಾಮದಲ್ಲಿ ನಿನ್ನ ಪಕ್ಷದ ಯಾವ ಯೋಧನು ಅರ್ಜುನನನ್ನು ಎದುರಿಸಲು ಹೋಗುತ್ತಿದ್ದನೋ–ಅವನ ಶರೀರ ದಲ್ಲಿ ಪ್ರಾಣಾಂತಕರವಾದ ಬಾಣಗಳು ಒಡನೆಯೇ ಬಂದು ಬೀಳುತ್ತಿದ್ದುವು. ವಿಜಯಿಗಳಲ್ಲಿ ಶ್ರೇಷ್ಠನಾದ, ಮಹಾರಥನಾದ ಅರ್ಜುನನು ಅಗ್ನಿಯ ಜ್ವಾಲೆ ಗಳಿಗೆ ಸಮಾನವಾದ, ತೀಕ್ಷ್ಣವಾದ ಬಾಣಗಳಿಂದ ನಿನ್ನ ಸೈನ್ಯವನ್ನು ಕೇವಲ

ಮುಂಡಗಳಿಂದಲೇ ನಿಬಿಡವನ್ನಾಗಿ ಮಾಡಿದನು. (ನಿನ್ನ ಸೈನ್ಯಸಮೂಹದಲ್ಲಿ ಎತ್ತ ಕಡೆ ನೋಡಿದರೂ ರುಂಡವಿಲ್ಲದ ಮುಂಡಗಳೇ ಕಾಣುತ್ತಿದ್ದುವು.) ರಾಜೇಂದ್ರ! ಈ ರೀತಿಯಾಗಿ ಕೌಂತೇಯನು ನಿನ್ನ ಚತುರಂಗಬಲಕ್ಕೂ ವ್ಯಾಕುಲವನ್ನುಂಟುಮಾಡಿ ಜಯದ್ರಥನನ್ನು ಆಕ್ರಮಿಸಿದನು. ಜಯದ್ರಥನ ರಕ್ಷಣೆಯಲ್ಲಿಯೇ ನಿರತನಾಗಿದ್ದ ಅಶ್ವತ್ಥಾಮನನ್ನು ಐವತ್ತು ಬಾಣಗಳಿಂದ ಪ್ರಹರಿಸಿದನು. ಅನಂತರ ವೃಷಸೇನನನ್ನು ಮೂರು ಬಾಣಗಳಿಂದ ಪ್ರಹರಿಸಿದನು. ಕೃಪರ ವಿಷಯದಲ್ಲಿ ಕೃಪಾವಿಷ್ಟನಾಗಿದ್ದ ಅರ್ಜುನನು ಅವರನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಬಳಿಕ ಅರ್ಜುನನು ಶಲ್ಯನನ್ನು ಹದಿನಾರು ಬಾಣಗಳಿಂದಲೂ, ಕರ್ಣನನ್ನು ಮೂವತ್ತೆರಡು ಬಾಣಗಳಿಂದಲೂ, ಸೈಂಧವನನ್ನು ಅರುವತ್ತುನಾಲ್ಕು ಬಾಣಗಳಿಂದಲೂ ಪ್ರಹರಿಸಿ ಸಿಂಹದಂತೆ ಗರ್ಜಿಸಿದನು. ಗಾಂಡೀವಧನ್ವನಾದ ಅರ್ಜುನನ ಬಾಣಗಳಿಂದ ಹಾಗೆ ಪ್ರಹೃತನಾದ ಸೈಂಧವನ ಸಹನೆಯು ಮೀರಿತು. ಅಂಕುಶದಿಂದ ಚುಚ್ಚಲ್ಪಟ್ಟ ಆನೆಯಂತೆ ಪರಮಕ್ರುದ್ಧನಾದನು.

ವರಾಹಧ್ವಜನಾದ ಸೈಂಧವನು ಹದ್ದಿನ ರೆಕ್ಕೆಗಳನ್ನು ಹೊಂದಿದ್ದ, ನೇರವಾಗಿ ಹೋಗುವ, ಕೋಪಗೊಂಡ ವಿಷಸರ್ಪಗಳಿಗೆ ಸಮಾನವಾಗಿದ್ದ, ಕಮ್ಮಾರರಿಂದ ಹದಮಾಡಲ್ಪಟ್ಟಿದ್ದ ಬಾಣಗಳನ್ನು ಧನುಸ್ಸಿನಲ್ಲಿ ಯೋಜಿಸಿ ಆಕರ್ಣವಾಗಿ ಸೆಳೆದು ಅರ್ಜುನನ ರಥದ ಕಡೆಗೆ ಬಿಟ್ಟನು. ಜಯದ್ರಥನು ಮೂರು ಬಾಣಗಳಿಂದ ಗೋವಿಂದನನ್ನೂ, ಆರು ಬಾಣಗಳಿಂದ ಅರ್ಜುನನನ್ನೂ, ಎಂಟು ಬಾಣಗಳಿಂದ ಕುದುರೆಗಳನ್ನೂ, ಮತ್ತೊಂದು ಬಾಣದಿಂದ ಧ್ವಜವನ್ನೂ ಪ್ರಹರಿಸಿದನು. ಸೈಂಧವನಿಂದ ಪ್ರಮುಕ್ತವಾದ ಬಾಣಗಳನ್ನು ಅರ್ಜುನನು ಬಹಳ ಬೇಗ ತನ್ನ ಬಾಣಗಳಿಂದ ನಿರಸನಗೊಳಿಸಿ ಒಂದೇ ಬಾರಿಗೆ ಎರಡು ಬಾಣಗಳಿಂದ ಸೈಂಧವನ ಸಾರಥಿಯ ಶಿರಸ್ಸನ್ನು ಶರೀರದಿಂದ ಪ್ರತ್ಯೇಕಿಸಿ, ಅಲಂಕಾರಗಳಿಂದ ಸುಶೋಭಿತವಾಗಿದ್ದ ಧ್ವಜವನ್ನೂ ಸಹ ಕತ್ತರಿಸಿದನು. ಧನಂಜಯನ ಬಾಣದಿಂದ ಪ್ರಹೃತವಾಗಿ ಭಿನ್ನವಾದ ದಂಡದಿಂದ ಕೂಡಿದ್ದ, ದೊಡ್ಡದಾಗಿದ್ದ, ಅಗ್ನಿಯ ಜ್ವಾಲೆಗೆ ಸಮಾನವಾಗಿದ್ದ ಸಿಂಧುರಾಜನ ವರಾಹಧ್ವಜವು ಕೆಳಕ್ಕೆ ಬಿದ್ದಿತು.

ಭಾಸ್ಕರನು ಪಶ್ಚಿಮಾಂಬುಧಿಯನ್ನು ಕುರಿತು ಬಹಳ ಶೀಘ್ರಗತಿ

ಯಿಂದ ಹೋಗುತ್ತಿದ್ದ ಆ ಸಮಯದಲ್ಲಿ (ಸೂರ್ಯನು ಮುಳುಗುವ ಸಮಯವು ಸಮೀಪಿಸುತ್ತಿರಲಾಗಿ) ಜನಾರ್ದನನು ವೀರನಾದ ಪಾಂಡವನನ್ನು ಕುರಿತು ಬಹಳ ತ್ವರೆಯಿಂದ ಹೇಳಿದನು :

["ಪಾರ್ಥ! ಆರು ಮಂದಿ ಮಹಾವೀರರು ಜಯದ್ರಥನನ್ನು ತಮ್ಮ ಮಧ್ಯದಲ್ಲಿ ನಿಲ್ಲಿಸಿಕೊಂಡು ರಕ್ಷಿಸುತ್ತಿದ್ದಾರೆ. ಮಹಾಬಾಹುವೇ! ಜೀವವನ್ನು ಉಳಿಸಿಕೊಳ್ಳಬೇಕೆಂಬ ಆಸೆಯಿಂದಿರುವ ಜಯದ್ರಥನು ಅವರ ಮಧ್ಯದಲ್ಲಿ ಭೀತನಾಗಿ ನಿಂತಿದ್ದಾನೆ. ಪುರುಷರ್ಷಭನೇ! ಈ ಆರು ಮಂದಿ ಮಹಾರಥರನ್ನೂ ನೀನು ಪರಾಜಯಗೊಳಿಸದೇ ಸೈಂಧವನನ್ನು ಸಂಹಾರಮಾಡಲು ಸಾಧ್ಯವಾಗುವುದಿಲ್ಲ. ವ್ಯಾಜ್ಯಾಂತರವಿಲ್ಲದೇ ಅಥವಾ ಮೋಸಗೊಳಿಸದೇ ಸೈಂಧವನ ವಧೆಯಂತೂ ಸಾಧ್ಯವಾಗುವುದಿಲ್ಲ ಆದುದರಿಂದ :

**ಯೋಗಮತ್ರ ವಿಧಾಸ್ಯಾಮಿ ಸೂರ್ಯಸ್ಯಾವರಣಂ ಪ್ರತಿ ।**
**ಅಸ್ತಂಗತ ಇತಿ ವ್ಯಕ್ತಂ ದ್ರಕ್ಷ್ಯತ್ಯೇಕಃ ಸ ಸಿನ್ಧುರಾಟ್ ॥೬೪॥**

ಸೂರ್ಯನು ಅಸ್ತಮಿಸುವ ಮೊದಲಾಗಿಯೇ ಅವನು ಅಸ್ತಮಿಸಿರುವಂತೆ ಕಾಣಲು ಸೂರ್ಯನಿಗೊಂದು ಆವರಣವನ್ನು ಕಲ್ಪಿಸಲು ಒಂದು ಉಪಾಯವನ್ನು ಮಾಡುತ್ತೇನೆ. ಸಿಂಧುರಾಜನು ಸೂರ್ಯನು ಅಸ್ತಮಿಸಿದನೆಂಬುದನ್ನು ಮನಗಾಣಬೇಕು. ಹಾಗೆ ಮಾಡುತ್ತೇನೆ. ಜೀವಿಸಿರಬೇಕೆಂದು ಹೆಚ್ಚು ಆಕಾಂಕ್ಷೆಯಿಂದಿರುವ ದುರಾಚಾರಿಯಾದ ಸೈಂಧವನು ಕೃತಕವಾದ ಸೂರ್ಯಾಸ್ತವನ್ನು ನೋಡಿದೊಡನೆಯೇ ನಿನ್ನ ವಿನಾಶವನ್ನೂ (ನೀನು ಅಗ್ನಿ ಪ್ರವೇಶಮಾಡುವುದನ್ನು ನೋಡಬೇಕೆಂಬ ಆಶಯದಿಂದ ತನ್ನನ್ನು ಯಾವ ರೀತಿಯಿಂದಲೂ ರಕ್ಷಿಸಿಕೊಳ್ಳುವುದಿಲ್ಲ. ಅಂತಹ ಅವಕಾಶವು ಸಿಕ್ಕಿದೊಡನೆಯೇ ಅವನನ್ನು ನೀನು ಪ್ರಹರಿಸಬೇಕು. ಸೂರ್ಯನು ಅಸ್ತನಾಗಿಬಿಟ್ಟನೆಂದು ನೀನು ಯೋಚಿಸಲೇಬಾರದು."

ಮಹಾರಾಜ! ಅರ್ಜುನನು ಹಾಗೆಯೇ ಆಗಲೆಂದು ಹೇಳಿ ಶ್ರೀಕೃಷ್ಣನ ಮಾತಿಗೆ ಸಮ್ಮತಿಸಿದನು. ಒಡನೆಯೇ ಯೋಗಿಯಾದ, ಯೋಗಿಗಳಿಗೂ ಈಶ್ವರನಾದ ಶ್ರೀಕೃಷ್ಣನು ಯೋಗದಿಂದ ಕೂಡಿದವನಾಗಿ ಸೂರ್ಯನಿಗೆ ಆವರಣವನ್ನು ಕಲ್ಪಿಸುವುದಕ್ಕೋಸ್ಕರ ಗಾಢವಾದ ಅಂಧಕಾರವನ್ನು ಸೃಷ್ಟಿಸಿದನು. ಶ್ರೀಕೃಷ್ಣನು ಕತ್ತಲೆಯನ್ನು ಸೃಷ್ಟಿಸಿದನಂತರ ಸೂರ್ಯನು ಕಾಣಲಿಲ್ಲ.

ಒಡನೆಯೇ ಸೂರ್ಯನು ಅಸ್ತಮಿಸಿಬಿಟ್ಟನೆಂದೂ, ಅರ್ಜುನನ ವಿನಾಶವು ಸನ್ನಿಹಿತವಾಯಿತೆಂದೂ ನಿನ್ನ ಕಡೆಯ ಯೋಧರೆಲ್ಲರೂ ಸಂತಸಗೊಂಡರು. ಪ್ರಹೃಷ್ಟರಾದ ನಿನ್ನ ಕಡೆಯ ಸೈನಿಕರೂ–ಜಯದ್ರಥನೂ ತಲೆಗಳನ್ನೆತ್ತಿ ನೋಡಿದರೂ ಸೂರ್ಯನನ್ನು ಕಾಣಲಿಲ್ಲ. ಸಿಂಧುರಾಜನು ಸ್ವಾಭಾವಿಕವಾದ



ಕುತೂಹಲದಿಂದ ದಿವಾಕರನನ್ನು ಪುನಃ ಪುನಃ ನೋಡುತ್ತಿರಲಾಗಿ, ಶ್ರೀಕೃಷ್ಣನು ಧನಂಜಯನನ್ನು ಕುರಿತು ಹೇಳಿದನು :

"ಭರತಸತ್ತಮನೇ! ಈಗ ಸಿಂಧುಪತಿಯು ನಿನ್ನ ಸಂಬಂಧವಾದ ಭಯವನ್ನು ಪರಿತ್ಯಜಿಸಿ ಸೂರ್ಯನನ್ನೇ ಕ್ಷಣ-ಕ್ಷಣಕ್ಕೂ ವೀಕ್ಷಿಸುತ್ತಿರುವುದನ್ನು ನೋಡು. ಮಹಾಬಾಹುವೇ! ದುರಾತ್ಮನಾದ ಇವನ ಸಂಹಾರಕ್ಕೆ

ಇದು ಸಕಾಲವಾಗಿದೆ. ಇವನ ತಲೆಯನ್ನು ಶೀಘ್ರವಾಗಿ ಕತ್ತರಿಸು. ನೀನು ಮಾಡಿದ ಪ್ರತಿಜ್ಞೆಯನ್ನು ಸಫಲಗೊಳಿಸು."

ಕೇಶವನು ಹೇಳಿದುದನ್ನು ಕೇಳಿ ಪ್ರತಾಪವಂತನಾದ ಅರ್ಜುನನು ಸೂರ್ಯಾಗ್ನಿಗಳ ತೇಜಸ್ಸಿಗೆ ಸಮಾನವಾದ ತೇಜಸ್ಸನ್ನು ಹೊಂದಿದ್ದ ಬಾಣ ಗಳಿಂದ ನಿನ್ನ ಸೈನ್ಯವನ್ನು ಪುನಃ ಸಂಹರಿಸಲು ಉಪಕ್ರಮಿಸಿದನು. ಕೃಪರನ್ನು ಇಪ್ಪತ್ತು ಬಾಣಗಳಿಂದಲೂ, ಕರ್ಣನನ್ನು ಐವತ್ತು ಬಾಣಗಳಿಂದಲೂ, ಶಲ್ಯನನ್ನು ಮತ್ತು ದುರ್ಯೋಧನನನ್ನು ಆರಾರು ಬಾಣಗಳಿಂದಲೂ, ವೃಷ ಸೇನನನ್ನು ಎಂಟು ಬಾಣಗಳಿಂದಲೂ, ಸೈಂಧವನನ್ನು ಅರುವತ್ತು ಬಾಣ ಗಳಿಂದಲೂ ಪ್ರಹರಿಸಿದನು. ಅದೇ ರೀತಿಯಲ್ಲಿ ಪಾಂಡುನಂದನನು ನಿನ್ನ ಕಡೆಯ ಇತರ ಸೈನಿಕರನ್ನೂ ಬಾಣಗಳಿಂದ ಗಾಢವಾಗಿ ಪ್ರಹರಿಸಿ ಜಯದ್ರಥನ ಕಡೆಗೆ ನುಗ್ಗಿದನು. ಜ್ವಾಲೆಗಳಿಂದ ಸಮಸ್ತವನ್ನೂ ಭಸ್ಮಮಾಡುವ ಯಜ್ಞೇ ಶ್ವರನಂತೆ–ಜಯದ್ರಥನ ಸಮೀಪಕ್ಕೆ ಬಂದ ಅರ್ಜುನನನ್ನು ನೋಡಿ ಅವನ ರಕ್ಷಕರು 'ಜಯದ್ರಥನಿನ್ನು ಉಳಿಯುವನೇ?'–ಎಂಬ ಮಹಾಸಂಶಯ ಕ್ಕೊಳಗಾದರು. ಅನಂತರ ವಿಜಯೇಚ್ಛುಗಳಾದ ನಿನ್ನ ಕಡೆಯ ಯೋಧ ರೆಲ್ಲರೂ ಒಟ್ಟಾಗಿ ಸೇರಿ ಬಾಣಗಳ ಧಾರೆಗಳಿಂದ ಅರ್ಜುನನನ್ನು ಅಭಿ ಷೇಚಿಸಿದರು. ಹಲವುಬಾರಿ ಕುರುಯೋಧರ ಬಾಣಗಳ ಸಮೂಹಗಳಿಂದ ಮುಚ್ಚಲ್ಪಟ್ಟ, ಅಪರಾಜಿತನಾದ, ಕುರುನಂದನನಾದ, ಮಹಾಬಾಹುವಾದ ಅರ್ಜುನನು ಬಹಳವಾಗಿ ಕೋಪಗೊಂಡನು. ಅನಂತರ ಪುರುಷವ್ಯಾಘ್ರನಾದ ಪಾಕಶಾಸನಿಯು ನಿನ್ನ ಸೈನಿಕರೆಲ್ಲರನ್ನೂ ಸಂಹರಿಸಬೇಕೆನ್ನುವ ಇಚ್ಛೆಯಿಂದ ಶರಮಯವಾದ ಜಾಲವನ್ನೇ ಸೈನಿಕರ ಮೇಲೆ ಹರಡಿದನು. ವೀರನಾದ ಅರ್ಜುನನಿಂದ ಪ್ರಹೃತರಾದ ನಿನ್ನ ಕಡೆಯ ಯೋಧರು ಭಯಗೊಂಡು ಸೈಂಧವನನ್ನು ಅಲ್ಲಿಯೇ ಬಿಟ್ಟು ಒಬ್ಬೊಬ್ಬರಾಗಿ ಪಲಾಯನಮಾಡಿದರು. ಆ ಸಮಯದಲ್ಲಿ ನಾವು ಅರ್ಜುನನ ಪರಮಾದ್ಭುತವಾದ ಪರಾಕ್ರಮವನ್ನು ಕಂಡೆವು. ಯಶೋವಂತನಾದ ಅರ್ಜುನನು ತೋರಿದ ಆಗಿನ ಪರಾಕ್ರಮವನ್ನು ನಾವು ಯಾರಲ್ಲಿಯೂ ಹಿಂದೆ ನೋಡಿರಲಿಲ್ಲ. ಮುಂದೆಯೂ ನೋಡ ಲಾರೆವು. ಪ್ರಳಯಕಾಲದಲ್ಲಿ ರುದ್ರನು ಸಮಸ್ತಪ್ರಾಣಿಗಳನ್ನೂ ಸಂಹರಿಸು ವಂತೆ–ಅರ್ಜುನನು ಆನೆಗಳನ್ನೂ, ಗಜಾರೋಹಿಗಳನ್ನೂ, ಕುದುರೆಗಳನ್ನೂ,

ಅಶ್ವಾರೋಹಿಗಳನ್ನೂ, ಅದೇ ರೀತಿಯಲ್ಲಿ ರಥಿಕರನ್ನೂ ಸಾವಿರಾರು ಸಂಖ್ಯೆಯಲ್ಲಿ ಸಂಹರಿಸಿದನು. ಅರ್ಜುನನ ಬಾಣಗಳಿಂದ ಪ್ರಹೃತವಾಗದಿದ್ದ ಒಂದೇ ಒಂದು ಆನೆಯನ್ನಾಗಲೀ, ಕುದುರೆಯನ್ನಾಗಲೀ, ಪದಾತಿಯನ್ನಾಗಲೀ ನಾನು ಕಾಣಲೇ ಇಲ್ಲ. ಆ ಸಮಯದಲ್ಲಿ ಧೂಳಿನಿಂದಲೂ, ಕತ್ತಲೆಯಿಂದಲೂ ಯೋಧರ ಕಣ್ಣುಗಳು ಮುಚ್ಚಿಹೋಗಿದ್ದುವು. ಅವರೆಲ್ಲರೂ ಘೋರವಾದ ಸಂಕಟಕ್ಕೊಳಗಾಗಿದ್ದರು. ಆಗ ಅವರಿಗೆ ತಮ್ಮ ಪಕ್ಷದಲ್ಲಿ ಯಾರಿದ್ದಾರೆಂಬುದೂ ತಿಳಿಯುತ್ತಿರಲಿಲ್ಲ. ಪಾರ್ಥನು ಬಿಡುತ್ತಿದ್ದ ಬಾಣಗಳಿಂದ ಕವಚಗಳನ್ನು ಕಳೆದುಕೊಂಡಿದ್ದ ಸೈನಿಕರಲ್ಲಿ ಕೆಲವರು ಗಿರ-ಗಿರನೆ ಸುತ್ತುತ್ತಿದ್ದರು ; ಕೆಲವರು ತತ್ತರಿಸುತ್ತಿದ್ದರು ; ಕೆಲವರು ಕೆಳಗೆ ಬೀಳುತ್ತಿದ್ದರು ; ಕೆಲವರು ಗೋಳಾಡುತ್ತಿದ್ದರು ; ಮತ್ತೆ ಕೆಲವರು ಪ್ರಾಣಶೂನ್ಯರಾಗಿದ್ದರು. ಪ್ರಳಯಕಾಲದಲ್ಲಿ ಪ್ರಜೆಗಳಿಗೆ ಉಂಟಾಗುವ ದುರವಸ್ಥೆಯಂತೆ–ಸೈನಿಕರಿಗೆ ದುರವಸ್ಥೆಯನ್ನುಂಟುಮಾಡುವ ಮಹಾಭಯಂಕರವಾದ, ದಾಟಲು ಅಸಾಧ್ಯವಾದ, ಸುದಾರುಣವಾದ ಆ ಮಹಾಯುದ್ಧವು ನಡೆಯುತ್ತಿರಲಾಗಿ, ಅಪಾರವಾದ ರಕ್ತದ ಸೇಚನೆಯಿಂದಲೂ, ಗಾಳಿಯು ವೇಗವಾಗಿ ಬೀಸುತ್ತಿದ್ದುದರಿಂದಲೂ ಸರ್ವತ್ರ ವ್ಯಾಪಿಸಿದ್ದ ಧೂಳಿಯು ಉಡುಗಿತು. ರಕ್ತಸಿಕ್ತವಾಗಿದ್ದ ಭೂಮಿಯ ಮೇಲೆ ಓಡಾಡುತ್ತಿದ್ದ ರಥಗಳ ಚಕ್ರಗಳು ಗುಂಭದವರೆಗೂ ಹೂತುಕೊಳ್ಳುತ್ತಿದ್ದುವು. ಆ ರಣಾಂಗಣದಲ್ಲಿ ನಿನ್ನ ಕಡೆಯ ಮದಿಸಿದ ಆನೆಗಳು ಮಾವಟಿಗರನ್ನು ಕಳೆದುಕೊಂಡು (ನಿಯಂತೃಗಳಿಲ್ಲದೆ) ಅರ್ಜುನನ ಬಾಣಗಳಿಂದ ಸೀಳಲ್ಪಟ್ಟ ಅಂಗಗಳಿಂದ ಕೂಡಿ ಆರ್ತನಾದಮಾಡುತ್ತಾ ನಿನ್ನ ಕಡೆಯ ಸೈನಿಕರನ್ನೇ ತುಳಿದು ಧ್ವಂಸಮಾಡುತ್ತಾ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದುವು. ಧನಂಜಯನ ಬಾಣಗಳಿಂದ ಪ್ರಹೃತವಾದ ಕುದುರೆಗಳು ತಮ್ಮ ಮೇಲಿದ್ದ ಸವಾರರು ಕೆಳಕ್ಕೆ ಬಿದ್ದುಹೋಗಿರಲು ನಾಗಾಲೋಟದಿಂದ ರಣಾಂಗಣವನ್ನು ಬಿಟ್ಟು ಓಡಿಹೋಗುತ್ತಿದ್ದುವು. ಅಂತೆಯೇ ಪದಾತಿಗಳೂ ಸಹ ಅರ್ಜುನನ ಭಯದಿಂದ ಚದುರಿ ಓಡಿಹೋಗುತ್ತಿದ್ದರು. ಬಿಚ್ಚಿದ ತಲೆಗೂದಲಿನಿಂದ ಕೂಡಿದವರಾಗಿ, ಕವಚರಹಿತರಾಗಿ, ಅರ್ಜುನನಿಂದ ಪ್ರಮುಕ್ತವಾದ ಬಾಣಗಳ ಗಾಯದಿಂದ ರಕ್ತವನ್ನು ಸುರಿಸುತ್ತಾ ಭಯಗೊಂಡವರಾಗಿ, ಯುದ್ಧರಂಗವನ್ನು ಬಿಟ್ಟು ಓಡಿಹೋಗುತ್ತಿದ್ದರು.

ಕೆಲವು ಪದಾತಿಗಳು ವಾತರೋಗದಿಂದ ಪೀಡಿತರಾದವರಂತೆ ಕಾಲುಗಳನ್ನು ಅಲ್ಲಾಡಿಸುವುದಕ್ಕೂ ಆಗದೇ ಸ್ತಬ್ಧರಾಗಿ ನಿಂತಿದ್ದರು. ಮತ್ತೆ ಕೆಲವರು ಸತ್ತುಬಿದ್ದಿದ್ದ ಆನೆಗಳ ಮಧ್ಯದಲ್ಲಿ ನುಸುಳಿಕೊಂಡಿದ್ದರು. ಮಹಾರಾಜ! ಹೀಗೆ ನಿನ್ನ ಚತುರಂಗಸೈನ್ಯವನ್ನೂ ಅರ್ಜುನನು ಪಲಾಯನಗೊಳಿಸಿ ಘೋರವಾದ ಬಾಣಗಳಿಂದ ಜಯದ್ರಥನ ರಕ್ಷಕರನ್ನು ಪ್ರಹರಿಸಲು ಉಪಕ್ರಮಿಸಿದನು. ಅರ್ಜುನನು ಅಶ್ವತ್ಥಾಮನನ್ನೂ, ಕೃಪರನ್ನೂ, ಕರ್ಣ-ಶಲ್ಯರನ್ನೂ, ವೃಷಸೇನನನ್ನೂ, ಸುಯೋಧನನನ್ನೂ ತೀಕ್ಷ್ಣವಾದ ಬಾಣಗಳ ಸಮೂಹದಿಂದ ಮುಚ್ಚಿಬಿಟ್ಟನು. ಅರ್ಜುನನು ಶೀಘ್ರಾತಿಶೀಘ್ರವಾಗಿ ಬಾಣಗಳನ್ನು ಪ್ರಯೋಗಿಸುತ್ತಿದ್ದುದರಿಂದ ಅವನು ಬಾಣಗಳನ್ನು ಬತ್ತಳಿಕೆಯಿಂದ ತೆಗೆದುಕೊಳ್ಳುವುದು, ಧನುಸ್ಸಿನಲ್ಲಿ ಅನುಸಂಧಾನಮಾಡುವುದು, ಮೌರ್ವಿಯನ್ನು ಸೆಳೆಯುವುದು ಮತ್ತು ಬಿಡುವುದು–ಇವು ಯಾವುವೂ ಯಾರಿಗೂ ಕಾಣಿಸುತ್ತಲೇ ಇರಲಿಲ್ಲ. ಅರ್ಜುನನ ಧನುಸ್ಸು ಮಂಡಲಾಕಾರ ವಾಗಿರುವುದು ಮಾತ್ರವೇ ಕಾಣಿಸುತ್ತಿದ್ದಿತು. ಧನುರ್ಮಂಡಲದಿಂದ ಬಾಣ ಗಳು ಸರ-ಸರನೆ ಹೊರಬರುತ್ತಿರುವುದೂ ಮತ್ತು ನಾಲ್ಕು ದಿಕ್ಕುಗಳಿಗೂ ಹೋಗುತ್ತಿರುವುದೂ ಕಾಣಿಸುತ್ತಿದ್ದಿತು. ಅರ್ಜುನನು ಕರ್ಣನ ಮತ್ತು ವೃಷಸೇನನ ಧನುಸ್ಸುಗಳನ್ನು ಕತ್ತರಿಸಿದನು. ಶಲ್ಯನ ಸೂತನನ್ನೂ ಭಲ್ಲವನ್ನು ಪ್ರಯೋಗಿಸಿ ಸಾರಥಿಯ ಆಸನದಿಂದ ಕೆಳಕ್ಕೆ ಬೀಳಿಸಿದನು. ವಿಜಯಿಗಳಲ್ಲಿ ಶ್ರೇಷ್ಠನಾದ ಅರ್ಜುನನು, ಸೋದರಮಾವ-ಸೋದರಳಿಯಂದಿರಾದ ಅಶ್ವತ್ಥಾಮ-ಕೃಪರನ್ನೂ ಬಾಣಗಳಿಂದ ಬಹಳ ಗಾಢವಾಗಿ ಗಾಯಗೊಳಿಸಿ ದನು. ಈ ರೀತಿಯಲ್ಲಿ ಅರ್ಜುನನು ನಿನ್ನ ಕಡೆಯ ಮಹಾರಥರೆಲ್ಲರನ್ನೂ ವ್ಯಾಕುಲಿತರನ್ನಾಗಿ ಮಾಡಿ ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಭಯಂಕರವಾಗಿದ್ದ ಒಂದು ಬಾಣವನ್ನು ಬತ್ತಳಿಕೆಯಿಂದ ತೆಗೆದನು. ಆ ಬಾಣವು ದಿವ್ಯಾಸ್ತ್ರದ ಮಹಾಮಂತ್ರದಿಂದ ಅಭಿಮಂತ್ರಿತವಾಗಿ ಇಂದ್ರನ ವಜ್ರಾಯುಧಕ್ಕೆ ಸಮಾನವಾಗಿದ್ದಿತು. ಎಂತಹ ಭಾರವನ್ನಾದರೂ ಸಹಿಸಿ ಕೊಳ್ಳಲು ಸಮರ್ಥವಾಗಿದ್ದಿತು. ಗಂಧ-ಮಾಲ್ಯಾದಿಗಳಿಂದ ಸಂಪೂಜಿತವಾಗಿ ದ್ದಿತು ಮತ್ತು ದೊಡ್ಡದಾಗಿಯೂ ಇದ್ದಿತು.

ಅರ್ಜುನನು ಆ ಬಾಣವನ್ನು ವಿಧಿವತ್ತಾಗಿ ವಜ್ರಾಸ್ತ್ರದಿಂದ ಸಂಯೋಜಿಸಿ

ಬಹಳ ಬೇಗ ಗಾಂಡೀವಧನುಸ್ಸಿನಲ್ಲಿ ಅನುಸಂಧಾನಮಾಡಿದನು. ಉಜ್ಜ್ವಲ ತೇಜಸ್ಸಿನಿಂದ ಕೂಡಿದ್ದ ಆ ಬಾಣವನ್ನು ಅನುಸಂಧಾನಮಾಡುತ್ತಿರುವಾಗ ಅಂತರಿಕ್ಷದಲ್ಲಿ ಆಕಾಶಗಾಮಿಗಳಾದ ಪ್ರಾಣಿಗಳ ಮಹಾನಿನಾದವುಂಟಾಯಿತು. "ಧನಂಜಯ! ಮಹಾತ್ಮನಾದ ಸೈಂಧವನ ತಲೆಯನ್ನು ಕತ್ತರಿಸಿಬಿಡು" ಎಂದು ಜನಾರ್ದನನು ತ್ವರೆಯಿಂದ ಪುನಃ ಅರ್ಜುನನಿಗೆ ಹೇಳಿದನು. ಶ್ರೀಕೃಷ್ಣನು ಮುಂದುವರಿದು ಹೇಳಿದನು : "ದಿವಾಕರನು ಪರ್ವತಶ್ರೇಷ್ಠವಾದ ಅಸ್ತಾಚಲವನ್ನು ಕುರಿತು ಹೋಗಲು ಇಚ್ಛಿಸಿದ್ದಾನೆ. (ಸೂರ್ಯನು ಅಸ್ತಂಗತನಾಗಲಿದ್ದಾನೆ.)]

ಜಯದ್ರಥನ ಸಂಹಾರದ ವಿಷಯದಲ್ಲಿ ನಾನು ಹೇಳಲಿರುವ ಮತ್ತೊಂದು ಮಾತನ್ನೂ ಕೇಳು : ಅರ್ಜುನ! ಸೈಂಧವನ ತಂದೆಯಾದ ವೃದ್ಧ ಕ್ಷತ್ರನು ಪ್ರಪಂಚದಲ್ಲಿ ಅತ್ಯಂತ ವಿಖ್ಯಾತನಾದವನು. ವೃದ್ಧಕ್ಷತ್ರನು ಬಹಳ ಕಾಲಾನಂತರದಲ್ಲಿ ಸೈಂಧವನನ್ನು ಮಗನನ್ನಾಗಿ ಪಡೆದುಕೊಂಡನು. ಜಯ ದ್ರಥನ ಜನ್ಮಕಾಲದಲ್ಲಿ ಮೇಘದ ಮತ್ತು ದುಂದುಭಿಯ ಶಬ್ದಕ್ಕೆ ಸಮಾನವಾದ ಶಬ್ದದಿಂದ ಕೂಡಿದ್ದ ಅಶರೀರವಾದ ಆಕಾಶವಾಣಿಯು ಶತ್ರುಸೂದನನಾದ ಜಯದ್ರಥನ ವಿಷಯವಾಗಿ ಹೀಗೆ ಹೇಳಿತು : "ಮನುಷ್ಯೇಂದ್ರನೇ! ನಿನ್ನ ಈ ಪುತ್ರನು ಕುಲ-ಶೀಲ-ಸಂಯಮಾದಿ ಸದ್ಗುಣಗಳಿಂದ ಪಿತೃ-ಮಾತೃ ಕುಲಗಳೆರಡಕ್ಕೂ ಸದೃಶನಾಗಿಯೇ ಇರುತ್ತಾನೆ. ಲೋಕದಲ್ಲಿರುವ ಕ್ಷತ್ರಿಯ ಶ್ರೇಷ್ಠನೆಂದು ಪ್ರಸಿದ್ಧಿಹೊಂದುತ್ತಾನೆ. ಶೂರರಾದ ಕ್ಷತ್ರಿಯರೂ ಇವನನ್ನು ಸತ್ಕರಿಸುತ್ತಾರೆ. ಆದರೆ ಇವನು ಯುದ್ಧದಲ್ಲಿ ತೊಡಗಿರುವಾಗ ಕ್ಷತ್ರಿಯ ಶಿರೋಮಣಿಯೊಬ್ಬನು ಇವನಿಗೆ ಶತ್ರುವಾಗಿ ಪರಮಕ್ರುದ್ಧನಾಗಿ ಈ ನಿನ್ನ ಮಗನ ತಲೆಯನ್ನು ಕತ್ತರಿಸುತ್ತಾನೆ."

ಅರ್ಜುನ! ಅಶರೀರವಾಣಿಯು ಹೇಳಿದ ಮಾತನ್ನು ಕೇಳಿ ಸಿಂಧು ರಾಜನಾದ ಅರಿಂದಮನಾದ ವೃದ್ಧಕ್ಷತ್ರನು ಬಹಳ ಹೊತ್ತಿನವರೆಗೂ ಚಿಂತಿಸು ತ್ತಿದ್ದು ನಂತರ ಪುತ್ರಸ್ನೇಹದಿಂದ ಪ್ರೇರಿತನಾಗಿ ತನ್ನ ಸಮಸ್ತಜ್ಞಾತಿ-ಬಾಂಧವರೊಡನೆ ಈ ಮಾತುಗಳನ್ನು ಹೇಳಿದನು : "ಸಂಗ್ರಾಮಭೂಮಿ ಯಲ್ಲಿ ವಿಶೇಷವಾದ ಹೊಣೆಯನ್ನು ಹೊತ್ತು ಯುದ್ಧಮಾಡುವ ನನ್ನ ಮಗನ ತಲೆಯನ್ನು ಯಾವನು ನೆಲದ ಮೇಲೆ ಬೀಳಿಸುತ್ತಾನೆಯೋ ಅವನ ತಲೆಯೂ ಸಹ ನೂರು ವಿಭಾಗವಾಗುತ್ತದೆ. ಇದರಲ್ಲಿ ಸಂಶಯವಿಲ್ಲ."

ಅರ್ಜುನ! ವೃದ್ಧಕ್ಷತ್ರನು ಹೀಗೆ ಹೇಳಿ ಜಯದ್ರಥನನ್ನು ರಾಜ್ಯಸಿಂಹಾಸನದಲ್ಲಿ ಕುಳ್ಳಿರಿಸಿ ಅರಣ್ಯಕ್ಕೆ ಹೊರಟುಹೋದನು ಮತ್ತು ಅಲ್ಲಿ ಉಗ್ರವಾದ ತಪಸ್ಸಿನಲ್ಲಿ ತೊಡಗಿದನು. ತೇಜಸ್ವಿಯಾದ ಆ ವೃದ್ಧಕ್ಷತ್ರನು ಈಗ ಈ ಸಮಂತಪಂಚಕದ ಹೊರಭಾಗದಲ್ಲಿ ಘೋರವಾದ ಮತ್ತು ದುರಾಸದವಾದ ತಪಸ್ಸನ್ನು ಮಾಡುತ್ತಿದ್ದಾನೆ. ಶತ್ರುಸೂದನನೇ! ವಾಯುಸುತಾನುಜನೇ! ಆದುದರಿಂದ ಇಂದಿನ ಮಹಾಸಂಗ್ರಾಮದಲ್ಲಿ ಘೋರವಾದ ಮತ್ತು ಅದ್ಭುತ



ವಾದ ಕರ್ಮವನ್ನು ಸಾಧಿಸುವ ದಿವ್ಯಾಸ್ತ್ರದಿಂದ ಸಿಂಧುರಾಜನ ಆ ತಲೆಯನ್ನು ಕತ್ತರಿಸಿ, ಕುಂಡಲಗಳಿಂದ ಯುಕ್ತವಾದ ಸಿಂಧುರಾಜನ ಆ ಶಿರಸ್ಸನ್ನು ತಪಸ್ಸು ಮಾಡುತ್ತಿರುವ ಇವನ ತಂದೆಯಾದ ವೃದ್ಧಕ್ಷತ್ರನ ತೊಡೆಯ ಮೇಲೆ ಬೀಳುವಂತೆ ಮಾಡು. ಹಾಗೆ ಮಾಡದೇ ನೀನೇನಾದರೂ ಸೈಂಧವನ ತಲೆಯನ್ನು

ಕತ್ತರಿಸಿ ನೆಲದ ಮೇಲೆಯೇ ಬೀಳಿಸಿದ್ದಾದರೆ ನಿನ್ನ ತಲೆಯೂ ನೂರು ಹೋಳಾಗುವುದರಲ್ಲಿ ಸಂಶಯವೇ ಇಲ್ಲ. ತಪಸ್ಸಿಗೆ ಕುಳಿತಿರುವ ವೃದ್ಧಕ್ಷತ್ರನಿಗೆ ಈ ವಿಷಯವು ತಿಳಿಯದ ರೀತಿಯಲ್ಲಿ ದಿವ್ಯಾಸ್ತ್ರದ ಆಶ್ರಯವನ್ನು ಹೊಂದಿದವನಾಗಿ ಈ ಕಾರ್ಯವನ್ನು ಸಾಧಿಸು. ಇಂದ್ರಕುಮಾರ! ಸಮಸ್ತವಾದ ಈ ಮೂರು ಲೋಕಗಳಲ್ಲಿಯೂ ನಿನಗೆ ಅಸಾಧ್ಯವಾದ ಅಥವಾ ಮಾಡಲಾಗದ ಕಾರ್ಯವೇ ಯಾವುದೂ ಇರುವುದಿಲ್ಲ.”

ಮಹಾರಾಜ! ಶ್ರೀಕೃಷ್ಣನ ಮಾತುಗಳನ್ನು ಕೇಳಿ ಅರ್ಜುನನು ಕಟವಾಯಿಗಳನ್ನು ಸವರಿಕೊಳ್ಳುತ್ತಾ ಇಂದ್ರನ ವಜ್ರಾಯುಧದಂತೆ ಕಠಿಣಸ್ಪರ್ಶಿಯಾದ, ದಿವ್ಯವಾದ ಮಹಾಸ್ತ್ರದ ಮಂತ್ರದಿಂದ ಅಭಿಮಂತ್ರಿತವಾದ, ಸರ್ವಭಾರವನ್ನೂ ಹೊರಲು ಸಮರ್ಥವಾದ (ಮಹಾಲಕ್ಷ್ಯವನ್ನೂ ಭೇದಿಸಲು ಸಮರ್ಥವಾದ), ಗಂಧ-ಮಾಲ್ಯಾದಿಗಳಿಂದ ಸಮರ್ಚಿತವಾದ, ಸೈಂಧವನ ವಧೆಗಾಗಿಯೇ ಧನುಸ್ಸಿನಲ್ಲಿ ಅನುಸಂಧಾನಮಾಡಿದ್ದ ಬಾಣವನ್ನು ಶೀಘ್ರವಾಗಿ ಆಕರ್ಣವಾಗಿ ಸೆಳೆದು ಬಿಟ್ಟುಬಿಟ್ಟನು. ಗಾಂಡೀವಧನುಸ್ಸಿನಿಂದ ನಿರ್ಮುಕ್ತವಾದ ಆ ಬಾಣವು ಸೈಂಧವನ ಶಿರಸ್ಸನ್ನು ಕತ್ತರಿಸಿ, ಗಿಡಗದ ಹಕ್ಕಿಯೋಪಾದಿಯಲ್ಲಿ ಆಕಾಶಕ್ಕೆ ಚಿಮ್ಮಿತು. ಪುನಃ ಅರ್ಜುನನು ಬಾಣಗಳು ಪ್ರಯೋಗದಿಂದ ಸೈಂಧವನ ಆ ತಲೆಯನ್ನು ಕೆಳಕ್ಕೆ ಬೀಳುವುದರ ಬದಲಾಗಿ ಮೇಲು-ಮೇಲಕ್ಕೆ ಹೋಗುವಂತೆ ಮಾಡಿದನು. ಅರ್ಜುನನ ಆ ಅದ್ಭುತಪರಾಕ್ರಮ ಪ್ರದರ್ಶನವು ಶತ್ರುಗಳಿಗೆ ದುಃಖದಾಯಕವೂ–ಮಿತ್ರರಿಗೆ ಸಂತೋಷದಾಯಕವೂ ಆಗಿದ್ದಿತು. ಆ ಸಮಯದಲ್ಲಿ ಅರ್ಜುನನು ಬಾಣಗಳಿಂದ ತನ್ನ ಎದುರಿನಲ್ಲಿದ್ದ ಆರು ಮಂದಿ ಯೋಧರನ್ನೂ ಗುಂಪುಗೂಡಿಸಿ ಅವರೊಡನೆಯೂ ಯುದ್ಧಮಾಡಿದನು. ಅರ್ಜುನನ ಬಾಣವು ಸೈಂಧವನ ಶಿರಸ್ಸನ್ನು ಸಮಂತಪಂಚಕ ಪ್ರದೇಶದಿಂದ ಹೊರಕ್ಕೆ ಒಯ್ಯುತ್ತಿದ್ದಾಗ ಒಂದು ಆಶ್ಚರ್ಯಕರವಾದ ಘಟನೆಯನ್ನು ನಾವಲ್ಲಿ ಕಂಡೆವು. ಅದೇ ಸಮಯದಲ್ಲಿಯೇ ನಿನ್ನ ಸಂಬಂಧಿಯಾದ (ಬೀಗನಾದ) ಮಹೀಪತಿಯಾದ, ತೇಜಸ್ವಿಯಾದ ವೃದ್ಧಕ್ಷತ್ರನು ಸಾಯಂಸಂಧ್ಯಾವಂದನೆಯನ್ನು ಮಾಡುತ್ತಿದ್ದನು. ಅರ್ಜುನನ ಬಾಣವು ಸಂಧ್ಯೋಪಾಸನೆಯನ್ನು ಮಾಡುತ್ತಿದ್ದ ವೃದ್ಧಕ್ಷತ್ರನ ತೊಡೆಯ ಮೇಲೆ ಕಪ್ಪು ಕೂದಲಿನಿಂದ ಯುಕ್ತವಾಗಿದ್ದ ಮತ್ತು ಕುಂಡಲಯುಕ್ತವಾಗಿದ್ದ ಸಿಂಧುರಾಜ

ನಾದ ಜಯದ್ರಥನ ಶಿರಸ್ಸನ್ನು ಕೆಡವಿತು. ಸುಂದರವಾದ ಕುಂಡಲಗಳಿಂದ ಯುಕ್ತವಾಗಿದ್ದ, ತನ್ನ ತೊಡೆಯ ಮೇಲೆ ಬಿದ್ದಿದ್ದ ಜಯದ್ರಥನ ಶಿರಸ್ಸನ್ನು ಜಪದಲ್ಲಿಯೇ ಮನಸ್ಸನ್ನು ಲೀನಗೊಳಿಸಿದ್ದ ವೃದ್ಧಕ್ಷತ್ರನು ಲಕ್ಷಿಸಲೇ ಇಲ್ಲ. ಸ್ವಲ್ಪಹೊತ್ತಾದನಂತರ ವೃದ್ಧಕ್ಷತ್ರನು ಜಪವನ್ನು ಮುಗಿಸಿ ಉಪಸ್ಥಾನಮಾಡು ವುದಕ್ಕಾಗಿ ಮೇಲೆದ್ದು ನಿಂತೊಡನೆಯೇ ಜಯದ್ರಥನ ಶಿರಸ್ಸು ಅವನ ತೊಡೆ ಯಿಂದ ಭೂಮಿಯ ಮೇಲೆ ಬಿದ್ದಿತು. ಸೈಂಧವನ ತಲೆಯು ಭೂಮಿಯ



ಮೇಲೆ ಬಿದ್ದೊಡನೆಯೇ ವೃದ್ಧಕ್ಷತ್ರನ ತಲೆಯೂ ನೂರು ಭಾಗಗಳಾಗಿ ಸೀಳಿಹೋಯಿತು.

ಅನಂತರ ಸರ್ವಸೈನಿಕರೂ ಆಶ್ಚರ್ಯಭರಿತರಾದರು. ವಾಸುದೇವ ನನ್ನೂ ಮಹಾರಥನಾದ ಅರ್ಜುನನನ್ನೂ ಬಹಳವಾಗಿ ಪ್ರಶಂಸಿಸಿದರು.

[ಅರ್ಜುನನು ಸಿಂಧುರಾಜನನ್ನು ಸಂಹರಿಸಿದನಂತರ ತಾನು ಸೃಷ್ಟಿಸಿದ್ದ ತಮಸ್ಸನ್ನು ಶ್ರೀಕೃಷ್ಣನು ಉಪಶಮನಗೊಳಿಸಿದನು. ನಿನ್ನ ಮಕ್ಕಳಿಗೂ ಮತ್ತು ಅವರ ಅನುಯಾಯಿಗಳಿಗೂ ಅದು ಶ್ರೀಕೃಷ್ಣನ ಮಾಯಾಕಲ್ಪಿತವಾದ ಕತ್ತಲೆ ಯೆಂಬುದು ಅನಂತರವೇ ತಿಳಿಯಿತು.] ಮಹಾರಾಜ! ಹೀಗೆ ಅಮಿತ ತೇಜಸ್ವಿಯಾದ ಪಾರ್ಥನು ನಿನ್ನ ಕಡೆಯ ಎಂಟು ಅಕ್ಷೌಹಿಣೀಸೈನ್ಯವನ್ನೂ ಸಂಹರಿಸಿ ನಿನ್ನ ಅಳಿಯನಾದ ಜಯದ್ರಥನನ್ನೂ ಸಂಹರಿಸಿದನು. ಜಯದ್ರಥನು ಹತನಾದುದನ್ನು ಕಂಡು ನಿನ್ನ ಮಕ್ಕಳು ಕಂಬನಿಗರೆದರು. ವಿಜಯದ ವಿಷಯದಲ್ಲಿ ನಿರಾಶೆಯನ್ನೂ ಹೊಂದಿದರು.

ಮಹಾರಾಜ! ಜಯದ್ರಥನು ಅರ್ಜುನನಿಂದ ಹತನಾದನಂತರ ಶ್ರೀಕೇಶವನು ಪಾಂಚಜನ್ಯಶಂಖವನ್ನೂದಿದನು. ಮಹಾಬಾಹುವಾದ ಅರ್ಜುನನೂ ದೇವದತ್ತಶಂಖವನ್ನೂದಿದನು. ಭೀಮನೂ, ವೃಷ್ಣಿಶ್ರೇಷ್ಠನಾದ ಯುಯುಧಾನನೂ, ಯುಧಾಮನ್ಯುವೂ, ಮಹಾಪರಾಕ್ರಮಿಯಾದ ಉತ್ತಮೌಜಸನೂ ತಮ್ಮ-ತಮ್ಮ ಶಂಖಗಳನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಊದಿದರು. ಆ ಮಹಾಶಬ್ದವನ್ನು ಕೇಳಿದ ಧರ್ಮಾತ್ಮಜನಾದ ಯುಧಿಷ್ಠಿರನು ಮಹಾತ್ಮನಾದ ಫಾಲ್ಗುನನಿಂದ ಸೈಂಧವನು ಹತನಾಗಿರುವನೆಂದು ನಿಶ್ಚಯಿಸಿ ದನು. ಅನಂತರ ಯುಧಿಷ್ಠಿರನು ರಣವಾದ್ಯಗಳ ಘೋಷಗಳಿಂದ ತನ್ನ ಕಡೆಯ ಯೋಧರನ್ನು ಹರ್ಷೋತ್ಸಾಹಿಗಳನ್ನಾಗಿ ಮಾಡುತ್ತಾ ದ್ರೋಣರೊಡನೆ ಯುದ್ಧಮಾಡುವ ಇಚ್ಛೆಯಿಂದ ಅವರ ಕಡೆಗೆ ಧಾವಿಸಿದನು. ಸೂರ್ಯನು ಅಸ್ತನಾಗುತ್ತಿರುವ ಆ ಸಮಯದಲ್ಲಿ ದ್ರೋಣರಿಗೂ ಮತ್ತು ಸೋಮಕರಿಗೂ ರೋಮಾಂಚಕರವಾದ ಯುದ್ಧವು ನಡೆಯಿತು. ಸೈಂಧವನು ಹತನಾದನಂತರ ದ್ರೋಣರನ್ನು ಸಂಹರಿಸುವ ಆಶಯದಿಂದ ಎಲ್ಲ ಮಹಾರಥರೂ ಸೇರಿ ಪ್ರಯತ್ನಪೂರ್ವಕವಾಗಿ ಅವರೊಡನೆ ಯುದ್ಧಮಾಡುತ್ತಿದ್ದರು. ಸೈಂಧವನನ್ನು ಸಂಹರಿಸಿ ಜಯವನ್ನು ಪಡೆದು ವಿಜಯೋನ್ಮತ್ತರಾಗಿದ್ದ ಪಾಂಡವರು ಎಲ್ಲ ಕಡೆಗಳಿಂದಲೂ ಬಂದು ಒಟ್ಟಾಗಿ ಸೇರಿಕೊಂಡು ದ್ರೋಣರೊಡನೆ ಯುದ್ಧಮಾಡುತ್ತಿದ್ದರು. ಮಹಾಬಾಹುವಾದ ಅರ್ಜುನನೂ ಸಹ ಸೈಂಧವನನ್ನು ಸಂಹರಿಸಿದನಂತರ ಶ್ರೇಷ್ಠರಾದ ನಿನ್ನ ಕಡೆಯ ರಥಯೋಧರೊಡನೆ ಯುದ್ಧಮಾಡಿದನು.

ದೇವತೆಗಳ ಶತ್ರುಗಳನ್ನು ದೇವರಾಜನು ಸಂಹರಿಸುವಂತೆ, ತಮೋಘ್ನನಾದ ಸೂರ್ಯನು ಉದಯಿಸಿದೊಡನೆಯೇ ಕತ್ತಲನ್ನು ಹೋಗಲಾಡಿಸುವಂತೆ–ವೀರನಾದ, ಕಿರೀಟಮಾಲಿಯಾದ ಅರ್ಜುನನು ತಾನು ಹಿಂದೆ ಮಾಡಿದ್ದ ಪ್ರತಿಜ್ಞೆಯನ್ನು ಪೂರ್ಣಮಾಡಿ ಎಲ್ಲ ಕಡೆಗಳಲ್ಲಿಯೂ ಶತ್ರು ಸೈನ್ಯವನ್ನು ಧ್ವಂಸಮಾಡುತ್ತಿದ್ದನು.”

೧೪೬ನೆಯ ಅಧ್ಯಾಯವು ಮುಗಿಯಿತು.

೧೪೭ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಅರ್ಜುನನ ಬಾಣಗಳ ಪ್ರಹಾರದಿಂದ ಕೃಪರು ಮೂರ್ಛೆ ಹೋದುದು : ಅರ್ಜುನನ ಖೇದ : ಕರ್ಣ-ಸಾತ್ಯಕಿಯರ ಯುದ್ಧ: ಕರ್ಣನ ಪರಾಜಯ

ಜಯದ್ರಥನ ವಧೆಯ ವೃತ್ತಾಂತವನ್ನು ಕೇಳಿ ಖಿನ್ನನಾದ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

“ಸಂಜಯ! ವೀರನಾದ ಜಯದ್ರಥನು ಸವ್ಯಸಾಚಿಯಿಂದ ಹತನಾಗಲಾಗಿ ನಮ್ಮವರೇನು ಮಾಡಿದರೆಂಬುದನ್ನು ಹೇಳು.”

“ಮಹಾರಾಜ! ಪಾರ್ಥನು ಯುದ್ಧದಲ್ಲಿ ಸೈಂಧವನನ್ನು ಸಂಹರಿಸಿದುದನ್ನು ಕಂಡು ಕ್ರೋಧಪರವಶರಾದ, ಶರದ್ವಂತನ ಮಕ್ಕಳಾದ ಕೃಪರು ಬಾಣಗಳ ದೊಡ್ಡ ಮಳೆಯಿಂದ ಅರ್ಜುನನನ್ನು ಆಚ್ಛಾದಿಸಿದರು. ಆ ಸಮಯದಲ್ಲಿ ಅಶ್ವತ್ಥಾಮನೂ ಸಹ ರಥದಲ್ಲಿ ಕುಳಿತು ಅರ್ಜುನನ ಮೇಲೆ ದಾಳಿಮಾಡಲು ಬಂದನು. ರಥಿಶ್ರೇಷ್ಠರಾದ, ರಥಸತ್ತಮರಾದ ಕೃಪಾಶ್ವತ್ಥಾಮರು ಎರಡು ದಿಕ್ಕುಗಳಿಂದಲೂ ಅರ್ಜುನನ ಮೇಲೆ ತೀಕ್ಷ್ಣವಾದ ಬಾಣಗಳ ಮಳೆಗರೆದರು. ಮಹಾಭುಜನಾದ, ರಥಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಎರಡು ದಿಕ್ಕುಗಳಿಂದಲೂ ಅವ್ಯಾಹತವಾಗಿ ಸುರಿಯುತ್ತಿದ್ದ ಬಾಣಗಳ ಮಹಾವರ್ಷದಿಂದ ಪೀಡಿಸಲ್ಪಟ್ಟವನಾಗಿ ಮಹಾಸಂಕಟಕ್ಕೆ ಗುರಿಯಾದನು. ಅರ್ಜುನನಿಗೆ ಯುದ್ಧದಲ್ಲಿ ತನ್ನ ಗುರುಗಳಾದ ಕೃಪರನ್ನಾಗಲೀ, ಗುರುಗಳ ಮಗನಾದ ಅಶ್ವತ್ಥಾಮನನ್ನಾಗಲೀ ಸಂಹರಿಸಲು ಇಚ್ಛೆಯಿರಲಿಲ್ಲ. ಆದುದರಿಂದ ಕುಂತಿಯ ಮಗನಾದ ಧನಂಜಯನು ಶಿಕ್ಷಣದ ನೈಪುಣ್ಯವನ್ನು ಮಾತ್ರವೇ ತೋರಿಸುತ್ತಿದ್ದನು.

ಕೃಪಾಶ್ವತ್ಥಾಮರು ಬಿಡುತ್ತಿದ್ದ ಅಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದ ನಿರಸನಗೊಳಿಸುತ್ತಾ ಅವರನ್ನು ಕೊಲ್ಲಲಿಚ್ಛೆಯಿಲ್ಲದ ಅರ್ಜುನನು ಮಂದ ವೇಗದ ಬಾಣಗಳನ್ನು ಮಾತ್ರವೇ ಅವರ ಮೇಲೆ ಪ್ರಯೋಗಿಸುತ್ತಿದ್ದನು. ಆದರೆ ಪಾರ್ಥನು ಎಷ್ಟೇ ಮಂದವೇಗದಿಂದ ಬಾಣಗಳನ್ನು ಬಿಡುತ್ತಿದ್ದರೂ ಗಾಂಡೀವಧನುಸ್ಸಿನಿಂದ ನಿಃಸೃತವಾದ ಆ ಬಾಣಗಳು ಅವರ ಶರೀರಗಳಲ್ಲಿ ಬಹಳ ಆಳದವರೆಗೂ ನಾಟಿ ಗಾಯಗಳನ್ನುಂಟುಮಾಡಿದುವು. ಅರ್ಜುನನು ಬಿಡುತ್ತಿದ್ದ ಬಾಣಗಳು ಬಹುಸಂಖ್ಯಾತವಾಗಿದ್ದುದರಿಂದ ಕೃಪಾಶ್ವತ್ಥಾಮರು ಬಾಣಗಳ ಪ್ರಹಾರದಿಂದ ಬಹಳವಾದ ವೇದನೆಯನ್ನೇ ಅನುಭವಿಸಿದರು. ಪಾರ್ಥನ ಬಾಣಗಳಿಂದ ಸತತವಾಗಿ ಪೀಡಿಸಲ್ಪಟ್ಟ ಕೃಪರು ಮೂರ್ಛೆಹೊಂದಿ ಆಸನದ ಪಕ್ಕಕ್ಕೆ ಒರಗಿದರು. ಶರಪೀಡಿತರಾಗಿದ್ದ ಮತ್ತು ಅದರಿಂದಲೇ ಮೂರ್ಛೆಹೊಂದಿದ್ದ ತನ್ನ ಒಡೆಯರಾದ ಕೃಪರು ಹತರಾದರೆಂದೇ ಭಾವಿಸಿದ ಸಾರಥಿಯು ರಥವನ್ನು ರಣಾಂಗಣದಿಂದ ಬಹಳ ದೂರಕ್ಕೆ ಒಯ್ದನು. ಶಾರದ್ವತರು ಮೂರ್ಛಿತರಾದನಂತರ ಅಶ್ವತ್ಥಾಮನೂ ಸಹ ಅರ್ಜುನನೊಡನೆ ಯುದ್ಧವನ್ನು ನಿಲ್ಲಿಸಿ ಮತ್ತೊಬ್ಬ ಯೋಧನೊಡನೆ ಯುದ್ಧಮಾಡಲು ಹೊರಟುಹೋದನು.

ಬಾಣಗಳಿಂದ ಗಾಯಗೊಂಡು ಮೂರ್ಛೆಹೊಂದಿದ ಶಾರದ್ವತರನ್ನು ನೋಡಿ ಮಹಾಧನುಷ್ಮಂತನಾದ ಅರ್ಜುನನು ರಥದಲ್ಲಿ ಕುಳಿತುಕೊಂಡೇ ಕೃಪಾವಿಷ್ಟನಾಗಿ ವಿಲಪಿಸಿದನು. ಕಂಬನಿದುಂಬಿದ ಕಣ್ಣುಗಳಿಂದ ಕೂಡಿದ್ದ ಅರ್ಜುನನು ಈ ಮಾತುಗಳನ್ನು ಹೇಳಿದನು :

**ಪಶ್ಯನ್ನಿದಂ ಮಹಾಪ್ರಾಜ್ಞಃ ಕ್ಷತ್ತಾ ರಾಜಾನಮುಕ್ತವಾನ್ ।**
**ಕುಲಾನ್ತಕರಣೇ ಪಾಪೇ ಜಾತಮಾತ್ರೇ ಸುಯೋಧನೇ ॥೧೩॥**

**ನೀಯತಾಂ ಪರಲೋಕಾಯ ಸಾಧ್ವಯಂ ಕುಲಪಾಂಸನಃ ।**
**ಅಸ್ಮಾದ್ಧಿ ಕುರುಮುಖ್ಯಾನಾಂ ಮಹದುತ್ಪತ್ಸ್ಯತೇ ಭಯಮ್ ॥೧೪॥**

"ಇಂತಹ ಅನರ್ಥಗಳಾಗುವುವೆಂಬುದನ್ನು ಹಿಂದೆಯೇ ಕಂಡು ಕೊಂಡಿದ್ದ ಮಹಾಪ್ರಾಜ್ಞನಾದ ವಿದುರನು ಕುಲಾಂತಕರನಾದ, ಪಾಪಿಷ್ಠನಾದ ಸುಯೋಧನನು ಹುಟ್ಟಿದೊಡನೆಯೇ–'ಈ ಕುಲಪಾಂಸನನನ್ನು ಈಗಲೇ ಪರಲೋಕಕ್ಕೆ ಕಳುಹಿಸಿಬಿಡು. ಹೀಗೆ ಮಾಡುವುದು ನಿಶ್ಚಯವಾಗಿಯೂ

ಸಾಧುವೆನಿಸುತ್ತದೆ. ನೀನು ಹಾಗೆ ಮಾಡದಿದ್ದರೆ ನಿಶ್ಚಯವಾಗಿಯೂ ಮುಂದೆ ಇವನಿಂದಲೇ ಕುರುಮುಖ್ಯರಿಗೆ ಮಹತ್ತರವಾದ ಭಯವುಂಟಾಗುತ್ತದೆ"– ಎಂದು ಧೃತರಾಷ್ಟ್ರನಿಗೆ ಹೇಳಿದ್ದನು.

ಸತ್ಯವಾದಿಯಾದ ವಿದುರನು ಅಂದು ಹೇಳಿದ್ದ ಮಾತು ಇಂದು ಕಾರ್ಯರೂಪಕ್ಕೆ ಬಂದಿದೆ. ದುರ್ಯೋಧನನ ಕಾರಣದಿಂದಲೇ ಈಗ ನಾನು ನನ್ನ ಗುರುವಾದ ಭೀಷ್ಮನು ಶರತಲ್ಪದಲ್ಲಿ ಮಲಗಿರುವುದನ್ನೂ ನೋಡುತ್ತಿದ್ದೇನೆ.

**ಧಿಗಸ್ತು ಕ್ಷಾತ್ರಮಾಚಾರಂ ಧಿಗಸ್ತು ಬಲಪೌರುಷಮ್ ॥೧೬॥**

ಕ್ಷತ್ರಿಯಾಚಾರಕ್ಕೂ ಧಿಕ್ಕಾರವಿರಲಿ! ಬಲ-ಪೌರುಷಗಳಿಗೂ ಧಿಕ್ಕಾರವಿರಲಿ! ನನ್ನಂತಹ ಯಾವನು ತಾನೇ ಬ್ರಾಹ್ಮಣರೂ–ಆಚಾರ್ಯರೂ ಆಗಿರತಕ್ಕವರಿಗೆ ದ್ರೋಹವೆಸಗುತ್ತಾನೆ? ನನ್ನ ಆಚಾರ್ಯರು ಋಷಿಪುತ್ರರು. ದ್ರೋಣರಿಗೆ ಅತ್ಯಂತಮಿತ್ರರಾದವರು. ಅಂತಹ ಕೃಪರು ಈಗ ನನ್ನ ಬಾಣಗಳಿಂದ ಪೀಡಿತರಾಗಿ ರಥದ ಪೀಠಭಾಗದಲ್ಲಿ ಮೂರ್ಛೆಹೊಂದಿ ಬಿದ್ದಿದ್ದಾರೆ. ಅವರನ್ನು ಪೀಡಿಸಬೇಕೆಂಬ ಇಚ್ಛೆಯಿಲ್ಲದಿದ್ದರೂ ನಾನೂ ಅವರನ್ನು ಬಾಣಗಳಿಂದ ಬಹುವಾಗಿ ಪೀಡಿಸಿದೆನು. ಅವರು ರಥಪೀಠದ ಬಳಿಯಲ್ಲಿ ಮೂರ್ಛಿತರಾಗಿ ಬಿದ್ದಿದ್ದು ನನ್ನ ಪ್ರಾಣಗಳನ್ನೇ ಪೀಡಿಸುತ್ತಿರುವರೋ ಎಂಬ ಭಾವನೆಯು ನನಗುಂಟಾಗುತ್ತಿದೆ. (ಅವರ ಸಂಕಟವನ್ನು ನೋಡಿ ನನ್ನ ಪ್ರಾಣಗಳು ಹಿಂಡಿಹೋಗುತ್ತಿವೆ. ನನ್ನ ಮನಸ್ಸಿಗೆ ಬಹಳ ನೋವುಂಟಾಗಿದೆ.) ನನಗೆ ಮನಸ್ಸಿಲ್ಲದಿದ್ದರೂ ನನ್ನ ಬಾಣಗಳು ಬಹಳ ತೀಕ್ಷ್ಣವಾಗಿಯೇ ಇದ್ದುವು. ಇದಕ್ಕೆ ಕಾರಣವೇನೆಂದರೆ : ನಾನು ಪುತ್ರಶೋಕಾಭಿತಪ್ತನಾಗಿದ್ದೆನು. ಅಶ್ವತ್ಥಾಮ-ಕೃಪರು ಬಿಟ್ಟ ಬಾಣಗಳಿಂದ ಬಹಳವಾಗಿ ಗಾಯಗೊಂಡು ಬಹಳ ದುರವಸ್ಥೆಯಲ್ಲಿಯೇ ಇದ್ದೆನು. ಆ ಸಮಯದಲ್ಲಿ ನಾನು ಆತ್ಮರಕ್ಷಣೆಗಾಗಿ ಅನೇಕ ಬಾಣಗಳಿಂದ ಅವರನ್ನು ಅನೇಕಬಾರಿ ಗಾಯಗೊಳಿಸಿದೆನು. ಹಾಗೆ ನೋಡಲು ಹೋದರೆ ಕೃಪರು ಹಲವು ಬಾಣಗಳ ಪ್ರಹಾರದಿಂದ ಪುತ್ರಶೋಕಕ್ಕಿಂತಲೂ ಅಧಿಕವಾದ ಶೋಕವನ್ನೇ ನನಗೆ ಉಂಟುಮಾಡಿದ್ದಾರೆ. ಆದರೆ ಈ ಸ್ಥಿತಿಯಲ್ಲಿರುವ ಅವರನ್ನು ನೋಡಿದರೆ ನನಗೆ ಬಹಳ ದುಃಖವಾಗುತ್ತದೆ. ಕೃಪರು ಹೇಗೆ ಬಹಳ ದೀನತೆಯಿಂದ ತಮ್ಮ ರಥದಲ್ಲಿದ್ದಾರೆಂಬುದನ್ನು ನೋಡು ಕೃಷ್ಣ!

**ಉಪಾಕೃತ್ಯ ತು ವೈ ವಿದ್ಯಾಮಾಚಾರ್ಯೇಭ್ಯೋ ನರರ್ಷಭಾಃ ।**
**ಪ್ರಯಚ್ಛನ್ತೀಹ ಯೇ ಕಾಮಾನ್ದೇವತ್ವಮುಪಯಾನ್ತಿ ತೇ ॥೨೧॥**

ಆಚಾರ್ಯರಿಂದ ವಿದ್ಯೆಯನ್ನು ಮೊದಲುಮಾಡಿ ಕಲಿತು ಉಪಕೃತರಾದ ಶ್ರೇಷ್ಠಪುರುಷರು, ಗುರುಗಳಿಗೆ ಬೇಕಾದ ವಸ್ತುಗಳನ್ನು ಗುರುದಕ್ಷಿಣೆಯನ್ನಾಗಿ ಅರ್ಪಿಸಿ ದೇವತ್ವವನ್ನೇ ಹೊಂದುತ್ತಾರೆ.

**ಯೇ ಚ ವಿದ್ಯಾಮುಪಾದಾಯ ಗುರುಭ್ಯಃ ಪುರುಷಾಧಮಾಃ ।**
**ಘ್ನನ್ತಿ ತಾನೇವ ದುರ್ವೃತ್ತಾಸ್ತೇ ವೈ ನಿರಯಗಾಮಿನಃ ॥೨೨॥**

ಆಚಾರ್ಯರಿಂದ ಯಾರು ವಿದ್ಯೆಯನ್ನು ಕಲಿತು ಆ ಗುರುಗಳನ್ನೇ ಹಿಂಸೆಮಾಡುತ್ತಾರೆಯೋ–ಅವರು ದುಷ್ಟವಾದ ಆಚಾರವುಳ್ಳವರೆಂಬುದರಲ್ಲಿ ಸಂಶಯವೇ ಇಲ್ಲ. ಅಂತಹವರು ನಿಶ್ಚಯವಾಗಿಯೂ ನರಕಕ್ಕೇ ಹೋಗುತ್ತಾರೆ.

ರಥದಲ್ಲಿ ಕುಳಿತಿದ್ದ ಕೃಪಾಚಾರ್ಯರನ್ನು ಬಾಣಗಳ ವರ್ಷದಿಂದ ಬಹಳವಾಗಿ ಗಾಯಗೊಳಿಸಿದ ನಾನು ನರಕವನ್ನು ಪಡೆಯುವ ಸಲುವಾಗಿಯೇ ಈ ದುಷ್ಕಾರ್ಯವನ್ನು ಮಾಡಿರುವೆನೆಂಬುದು ಸತ್ಯ.

ಹಿಂದೆ ನನಗೆ ಅಸ್ತ್ರವಿದ್ಯೆಯನ್ನು ಕಲಿಸುತ್ತಿದ್ದ ಕಾಲದಲ್ಲಿ ಕೃಪರು ನನ್ನೊಡನೆ ಈ ಮಾತನ್ನು ಹೇಳಿದ್ದರು :

**ನ ಕಥಂಚನ ಕೌರವ್ಯ ಪ್ರಹರ್ತವ್ಯಂ ಗುರಾವಿತಿ ॥೨೪॥**

'ಕೌರವ್ಯ! ಯಾವುದೇ ಕಾರಣದಿಂದಲೂ ಅಸ್ತ್ರವನ್ನು ಗುರುವಿನ ಮೇಲೆ ಪ್ರಯೋಗಿಸಬಾರದು.'

ಸಾಧುಗಳಾದ, ಮಹಾತ್ಮರಾದ ಆಚಾರ್ಯರ ಆ ಮಾತಿನಂತೆ ನಾನು ನಡೆದುಕೊಳ್ಳಲಿಲ್ಲ. ಅವರ ಮೇಲೆಯೇ ನಾನು ಬಾಣಗಳ ಮಳೆಗರೆದೆನು.

**ನಮಸ್ತಸ್ಮೈ ಸುಪೂಜ್ಯಾಯ ಗೌತಮಾಯಾಪಲಾಯಿನೇ ।**
**ಧಿಗಸ್ತು ಮಮ ವಾರ್ಷ್ಣೇಯ ಯದಸ್ಮೈ ಪ್ರಹರಾಮ್ಯಹಮ್ ॥೨೬॥**

ಯುದ್ಧದಲ್ಲಿ ಪಲಾಯನಮಾಡದ ಸುಪೂಜ್ಯರಾದ ಗೌತಮರಿಗೆ ನಮಸ್ಕರಿಸುತ್ತೇನೆ. ಕೃಷ್ಣ! ವಿದ್ಯಾಪ್ರದಾನವನ್ನು ಮಾಡಿದ ಆಚಾರ್ಯರನ್ನೇ ನಾನು ಪ್ರಹರಿಸಿದೆನು. ಇದರಿಂದ ನನಗೆ ಧಿಕ್ಕಾರವಿರಲಿ."

ಈ ರೀತಿ ಸವ್ಯಸಾಚಿಯು ಕೃಪರನ್ನು ಪ್ರಹರಿಸಿದ ಕಾರಣದಿಂದ ವಿಲಪಿಸುತ್ತಿರಲಾಗಿ, ಸೈಂಧವನು ಹತನಾದುದನ್ನು ಕಂಡು ಕರ್ಣನು ಅರ್ಜುನನ ಕಡೆಗೆ ಧಾವಿಸಿದನು. ಅರ್ಜುನನ ರಥದ ಕಡೆಗೆ ರಭಸದಿಂದ ಕರ್ಣನು ನುಗ್ಗುತ್ತಿದ್ದುದನ್ನು ನೋಡಿದ ಯುಧಾಮನ್ಯು, ಉತ್ತಮೌಜಸ ಮತ್ತು ಸಾತ್ಯಕಿಗಳು ಕರ್ಣನಿಗೆ ಎದುರಾಗಿ ಧಾವಿಸಿದರು. ತನ್ನ ಮೇಲೆ ಬೀಳಲು ರಭಸದಿಂದ ಬರುತ್ತಿದ್ದ ಕರ್ಣನನ್ನು ನೋಡಿ ಮಹಾರಥನಾದ ಪಾರ್ಥನು ಗಹಗಹಿಸಿ ನಗುತ್ತಾ ದೇವಕೀಪುತ್ರನಾದ ಶ್ರೀಕೃಷ್ಣನನ್ನು ಕುರಿತು ಈ ಮಾತುಗಳನ್ನು ಹೇಳಿದನು : "ಕೃಷ್ಣ! ಅಧಿರಥನ ಮಗನಾದ ಕರ್ಣನು ಸಾತ್ಯಕಿಯ ರಥದ ಕಡೆಗೇ ಹೋಗುತ್ತಿದ್ದಾನೆ. ಯುದ್ಧಭೂಮಿಯಲ್ಲಿ ಸಾತ್ಯಕಿಯು ಭೂರಿಶ್ರವಸನನ್ನು ಸಂಹರಿಸಿದುದು ಇವನಿಗೆ ಸಹ್ಯವಾಗಲಿಲ್ಲ. ಜನಾರ್ದನ! ಆದುದರಿಂದ ಈ ರಾಧೇಯನು ಎಲ್ಲೆಲ್ಲಿಗೆ ಹೋಗುತ್ತಾನೆಯೋ ಅಲ್ಲಲ್ಲಿಗೇ ಕುದುರೆಗಳನ್ನು ಓಡಿಸು. ಕರ್ಣನು ಸಾತ್ಯಕಿಯನ್ನು ಭೂರಿಶ್ರವಸನು ಹೋದಸ್ಥಳಕ್ಕೇ ಕಳುಹಿಸುವಂತಾಗಬಾರದು. (ಸಾತ್ವತನಿಗೆ ಯಾವ ಅನಿಷ್ಟವೂ ಆಗಬಾರದು.)"

ಸವ್ಯಸಾಚಿಯಾದ ಅರ್ಜುನನು ಹೀಗೆ ಹೇಳಿದನಂತರ ಮಹಾಬಾಹುವಾದ, ಮಹಾತೇಜಸ್ವಿಯಾದ ಶ್ರೀಕೃಷ್ಣನು ತತ್ಕಾಲೋಚಿತವಾದ ಈ ಮಾತುಗಳನ್ನು ಅವನೊಡನೆ ಹೇಳಿದನು :

**ಅಲಮೇಷ ಮಹಾಬಾಹುಃ ಕರ್ಣಾಯೈಕೋಽಪಿ ಪಾಣ್ಡವ ।**
**ಕಿಂ ಪುನರ್ದ್ರೌಪದೇಯಾಭ್ಯಾಂ ಸಹಿತಃ ಸಾತ್ವತರ್ಷಭಃ ॥೩೩॥**

"ಕರ್ಣನನ್ನೆದುರಿಸಲು ಸಾತ್ವತಶ್ರೇಷ್ಠನಾದ ಈ ಒಬ್ಬ ಸಾತ್ಯಕಿಯೇ ಸಾಕಾಗಿದ್ದಿತು. ಆದರೆ ಅವನೀಗ ದ್ರೌಪದೇಯರಾದ (ದ್ರುಪದನ ಮಕ್ಕಳಾದ) ಯುಧಾಮನ್ಯು ಮತ್ತು ಉತ್ತಮೌಜಸರಿಂದಲೂ ಸಹಿತನಾಗಿದ್ದಾನೆ. (ಆದುದರಿಂದ ನಿನ್ನ ಸಹಕಾರವು ಸಾತ್ವತನಿಗೆ ಈಗ ಅಗತ್ಯವಿಲ್ಲ.)

**ನ ಚ ತಾವತ್ಕ್ಷಮಃ ಪಾರ್ಥ ತವ ಕರ್ಣೇನ ಸಙ್ಗರಃ ।**
**ಪ್ರಜ್ವಲನ್ತೀ ಮಹೋಲ್ಕೇವ ತಿಷ್ಠತ್ಯಸ್ಯ ಹಿ ವಾಸವೀ ॥೩೪॥**

ಪಾರ್ಥ! ಮುಖ್ಯವಾಗಿ ನೀನು ಈ ಸಮಯದಲ್ಲಿ ಕರ್ಣನೊಡನೆ

ಯುದ್ಧದಲ್ಲಿ ತೊಡಗುವುದೂ ಉಚಿತವಾಗಿ ಕಾಣುವುದಿಲ್ಲ. ಅವನ ಬಳಿಯಲ್ಲಿ ಈಗ ಉಲ್ಕೆಗೆ ಸಮಾನವಾಗಿ ಪ್ರಜ್ವಲಿಸುವ ಇಂದ್ರನು ಕೊಟ್ಟ ಶಕ್ತ್ಯಾಯುಧವಿದೆ.

**ತ್ವದರ್ಥಂ ಪೂಜ್ಯಮಾನೈಷಾ ರಕ್ಷ್ಯತೇ ಪರವೀರಹನ್ ।**
**ಅತಃ ಕರ್ಣಃ ಪ್ರಯಾತ್ವತ್ರ ಸಾತ್ವತಸ್ಯ ಯಥಾತಥಾ ॥೩೫॥**

ಶತ್ರುವೀರಹಂತಕನೇ! ನಿನ್ನ ಸಲುವಾಗಿಯೇ (ನಿನ್ನನ್ನು ಸಂಹರಿಸುವ ಸಲುವಾಗಿಯೇ) ಕರ್ಣನು ಆ ಶಕ್ತ್ಯಾಯುಧವನ್ನು ಅನುದಿನವೂ ಪೂಜಿಸುತ್ತಾ ಸುರಕ್ಷಿತವಾಗಿಟ್ಟುಕೊಂಡಿದ್ದಾನೆ. ಆದುದರಿಂದ ಕರ್ಣನೀಗ ಯಾವ ರೀತಿಯಲ್ಲಿ ಸಾತ್ಯಕಿಯ ಬಳಿಗೆ ಹೋಗುತ್ತಿದ್ದಾನೆಯೋ ಹಾಗೆಯೇ ಅವನು ಹೊರಟುಹೋಗಲಿ. (ಮಧ್ಯದಲ್ಲಿ ನೀನು ಪ್ರವೇಶಿಸುವುದು ಉಚಿತವಲ್ಲ.)

**ಅಹಂ ಜ್ಞಾಸ್ಯಾಮಿ ಕೌನ್ತೇಯ ಕಾಲಮಸ್ಯ ದುರಾತ್ಮನಃ ।**
**ಯತ್ರೈನಂ ವಿಶಿಖೈಸ್ತೀಕ್ಷ್ಣೈಃ ಪಾತಯಿಷ್ಯಸಿ ಭೂತಲೇ ॥೩೬॥**

ಇವನ ಅಂತ್ಯಕಾಲವು ಯಾವಾಗ?–ಎಂಬುದನ್ನು ನಾನು ತಿಳಿದುಕೊಂಡಿರುತ್ತೇನೆ. ಆ ಸಮಯವು ಬಂದಾಗ ನೀನು ಇವನನ್ನು ತೀಕ್ಷ್ಣವಾದ ಬಾಣಗಳಿಂದ ಸಂಹರಿಸಿ ಭೂಮಿಯ ಮೇಲೆ ಕೆಡಹುವೆ."

ಈ ಸಮಯದಲ್ಲಿ ಧೃತರಾಷ್ಟ್ರನು ಸಂಶಯದ ನಿವಾರಣೆಗಾಗಿ ಸಂಜಯನನ್ನು ಕೇಳುತ್ತಾನೆ :

**ಯೋಽಸೌ ಕರ್ಣೇನ ವೀರಸ್ಯ ವಾರ್ಷ್ಣೇಯಸ್ಯ ಸಮಾಗಮಃ ।**
**ಹತೇ ತು ಭೂರಿಶ್ರವಸಿ ಸೈನ್ಧವೇ ಚ ನಿಪಾತಿತೇ ॥೩೭॥**

"ಸಂಜಯ! ಭೂರಿಶ್ರವಸನು ಹತನಾದನಂತರ ಮತ್ತು ಸೈಂಧವನೂ ಬಿದ್ದ ನಂತರ ಕರ್ಣನೊಡನೆ ಸಾತ್ಯಕಿಯ ಸಮಾಗಮವು ಹೇಗೆ ನಡೆಯಿತು?

**ಸಾತ್ಯಕಿಶ್ಚಾಪಿ ವಿರಥಃ ಕಂ ಸಮಾರೂಢವಾನ್ರಥಮ್ ।**
**ಚಕ್ರರಕ್ಷೌ ಚ ಪಾಞ್ಚಾಲ್ಯೌ ತನ್ಮಮಾಚಕ್ಷ್ವ ಸಂಜಯ ॥೩೮॥**

ಸಾತ್ಯಕಿಯು ರಥಹೀನನಾಗಿದ್ದನು. ಮುಂದೆ ಅವನು ಯಾವ ರಥವನ್ನು ಹತ್ತಿಕೊಂಡು ಯುದ್ಧಮಾಡುತ್ತಿದ್ದನು? ಚಕ್ರರಕ್ಷಕರಾದ ಯುಧಾಮನ್ಯೂತ್ತಮೌಜಸರು ಯಾವ ರಥವನ್ನು ಹತ್ತಿ ಯಾರೊಡನೆ ಯುದ್ಧ ಮಾಡುತ್ತಿದ್ದರು? ಈ ಎಲ್ಲವನ್ನೂ ನನಗೆ ವಿವರವಾಗಿ ತಿಳಿಸು."

“ಮಹಾರಾಜ! ನಾನು ಆ ಮಹಾಸಂಗ್ರಾಮದಲ್ಲಿ ನಡೆದ ವೃತ್ತಾಂತ ಗಳೆಲ್ಲವನ್ನೂ ಬಹಳ ಖೇದದಿಂದ ಯಥಾವತ್ತಾಗಿ ಹೇಳುತ್ತೇನೆ. ಮನಸ್ಸನ್ನು ಗಟ್ಟಿಮಾಡಿಕೊಂಡು ಹಿಂದೆ ನೀನು ಮಾಡಿದ ದುರಾಚಾರದ ಪರಿಣಾಮವನ್ನು ಕೇಳು.

ಭೂರಿಶ್ರವಸನಿಂದ ವೀರನಾದ ಸಾತ್ಯಕಿಯು ಹೇಗೆ ಸೋಲಿಸಲ್ಪಡುವ ನೆಂಬ ವಿಷಯವು ಮೊದಲೇ ಶ್ರೀಕೃಷ್ಣನ ಮನಸ್ಸಿನಲ್ಲಿ ಮೂಡಿದ್ದಿತು. ಜನಾರ್ದನನು ಭೂತ-ಭವಿಷ್ಯದ್ವರ್ತಮಾನಗಳೆಲ್ಲವನ್ನೂ ಸಂಪೂರ್ಣವಾಗಿ ತಿಳಿದಿರತಕ್ಕವನು. ಮಹಾಬಲನಾದ ಶ್ರೀಕೃಷ್ಣನು ಹಿಂದಿನ ದಿನವೇ ತನ್ನ ಸಾರಥಿಯಾದ ದಾರುಕನನ್ನು ಕರೆದು–‘ದಾರುಕ! ನಾಳೆ ನನ್ನ ರಥವನ್ನು ಸಜ್ಜುಗೊಳಿಸು’–ಎಂದು ಆಜ್ಞಾಪಿಸಿದ್ದನು. ಧೃತರಾಷ್ಟ್ರಮಹಾರಾಜ! ಕೃಷ್ಣರಿಬ್ಬರೂ ಸೇರಿರುವಾಗ ಅವರನ್ನು ಜಯಿಸುವವರು ದೇವತೆಗಳಲ್ಲಾ ಗಲೀ, ಗಂಧರ್ವರಲ್ಲಾಗಲೀ, ಯಕ್ಷೋರಗ-ರಾಕ್ಷಸರಲ್ಲಾಗಲೀ, ಮನುಷ್ಯ ರಲ್ಲಾಗಲೀ ಯಾರೂ ಇರುವುದಿಲ್ಲ. ಪಿತಾಮಹನೇ ಮೊದಲಾದ ಎಲ್ಲ ದೇವತೆಗಳೂ, ಸಿದ್ಧರೂ, ಮಹರ್ಷಿಗಳೂ ಮತ್ತು ಚಾರಣರೂ ಕೃಷ್ಣಾರ್ಜು ನರ ಪ್ರಭಾವವನ್ನು ತಿಳಿದಿರುತ್ತಾರೆ. ಕೃಷ್ಣಾರ್ಜುನರ ಪ್ರಭಾವವು ಹೋಲಿಕೆಗೆ ಮೀರಿದುದು. ಯುದ್ಧವು ಹೇಗೆ ನಡೆಯಿತೆಂಬುದನ್ನು ಹೇಳುವೆನು, ಕೇಳು. ಸಾತ್ಯಕಿಯು ರಥಹೀನನಾಗಿರುವುದನ್ನೂ ಮತ್ತು ಕರ್ಣನು ಅವನ ಮೇಲೆ ಯುದ್ಧಮಾಡಲು ಹೊರಟುದನ್ನೂ ಕಂಡು ಶ್ರೀಕೃಷ್ಣನು ಮಹಾನಾದ ವನ್ನುಂಟುಮಾಡುವ ಪಾಂಚಜನ್ಯಶಂಖವನ್ನು ಋಷಭಧ್ವನಿಯಲ್ಲಿ ಊದಿದನು. ದಾರುಕನು ಪಾಂಚಜನ್ಯಶಂಖದ ಧ್ವನಿಯನ್ನು ಕೇಳಿ ಶ್ರೀಕೃಷ್ಣನ ಸಂದೇಶವನ್ನು ಸ್ಮರಿಸಿಕೊಂಡು, ಏರಿಸಿರುವ ಗರುಡಧ್ವಜದಿಂದ ಕೂಡಿದ್ದ ರಥವನ್ನು ಕೃಷ್ಣನ ಸಮೀಪಕ್ಕೆ ಒಯ್ದನು. ಶ್ರೀಕೇಶವನ ಅನುಮತಿಯನ್ನು ಪಡೆದು ಶಿನಿಯ ಮೊಮ್ಮಗನಾದ ಸಾತ್ಯಕಿಯು ದಾರುಕನಿಂದ ಕೂಡಿದ್ದ, ಅಗ್ನಿಗೆ ಮತ್ತು ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ರಥವನ್ನು ಹತ್ತಿದನು. ಸಾರಥಿಯು ಇಚ್ಛಿಸಿದ ಕಡೆಗೆ ಧಾವಿಸುತ್ತಿದ್ದ, ಮಹಾವೇಗಯುಕ್ತವಾಗಿದ್ದ, ಸುವರ್ಣಾಭರಣಗಳಿಂದ ಸಮಲಂಕೃತವಾಗಿದ್ದ ಶೈಬ್ಯ-ಸುಗ್ರೀವ-ಮೇಘಪುಷ್ಪ-ಬಲಾಹಕಗಳೆಂಬ ಅಶ್ವಶ್ರೇಷ್ಠಗಳಿಂದ ಯುಕ್ತ

ವಾಗಿದ್ದ, ವಿಮಾನಪ್ರತಿಮವಾದ ರಥದಲ್ಲಿ ಕುಳಿತಿದ್ದ ಸಾತ್ಯಕಿಯು ಅಸಂಖ್ಯಾತವಾದ ಬಾಣಗಳನ್ನು ಸುರಿಸುತ್ತಾ ಕರ್ಣನ ಮೇಲೆ ದಾಳಿಮಾಡಿದನು. ಧನಂಜಯನ ಚಕ್ರರಕ್ಷಕರಾಗಿದ್ದ ಯುಧಾಮನ್ಯು ಮತ್ತು ಉತ್ತಮೌಜಸರು ಆ ಸಮಯದಲ್ಲಿ ಧನಂಜಯನ ರಥವನ್ನು ಬಿಟ್ಟು ರಾಧೇಯನ ಮೇಲೆಯೇ ಯುದ್ಧಮಾಡಲು ಹೋದರು. ಮಹಾರಾಜ! ರಾಧೇಯನೂ ಸಹ ಮಹಾಕ್ರುದ್ಧನಾಗಿ ಬಾಣಗಳ ಮಳೆಗರೆಯುತ್ತಾ ಅಚ್ಯುತನಾದ ಶೈನೇಯನ ಮೇಲೆ ದಾಳಿನಡೆಸಿದನು. ದೇವ-ಗಂಧರ್ವಾಸುರ-ರಾಕ್ಷಸರಿಗೆ ಸಂಬಂಧಿಸಿದಂತೆ ಹಿಂದೆ ಅಂತಹ ಯುದ್ಧವೇ ನಡೆದಿರಲಿಲ್ಲ. ಭೂಮಿಯಲ್ಲಿಯೂ ಸಹ ಅಂತಹ ಅದ್ಭುತಯುದ್ಧವು ನಡೆದಿರಲಿಲ್ಲ. ಸ್ವರ್ಗದಲ್ಲಾದರೂ ಅಂತಹ ಯುದ್ಧವು ನಡೆದಿತ್ತೆಂಬುದನ್ನು ನಾವು ಕೇಳಿಲ್ಲ. ರಥ-ಗಜಾಶ್ವ-ಪದಾತಿಸೈನಿಕರು ಸಾತ್ಯಕಿ-ಕರ್ಣರ ಯುದ್ಧಕರ್ಮವನ್ನು ನೋಡಿ ಮೋಹಗೊಂಡು ತಾವು ಮಾಡುತ್ತಿದ್ದ ಯುದ್ಧದಿಂದ ವಿರಮಿತರಾದರು. ನರಶ್ರೇಷ್ಠರಾದ ಸಾತ್ಯಕಿ-ಕರ್ಣರು ಮಾಡುತ್ತಿದ್ದ ಅತಿಮಾನುಷವಾದ ಯುದ್ಧವನ್ನೂ–ದಾರುಕನ ಸಾರಥ್ಯದ ವೈಖರಿಯನ್ನೂ ಎಲ್ಲ ಸೈನಿಕರೂ ಚೆನ್ನಾಗಿ ನೋಡಿದರು. ಮಾಧವನ ರಥದಲ್ಲಿ ಕುಳಿತಿದ್ದ ಕಾಶ್ಯಪಗೋತ್ರೋದ್ಭವನಾದ ಸಾರಥಿಯಾದ ದಾರುಕನು ಗತ-ಪ್ರತ್ಯಾಗತ-ಆವೃತ್ತ-ಮಂಡಲ-ಸನ್ನಿವರ್ತನ–ಇವೇ ಮೊದಲಾದ ಕ್ರಮದಲ್ಲಿ ರಥವನ್ನು ನಡೆಸುತ್ತಿದ್ದುದನ್ನು ನೋಡಿ ಆಕಾಶದಲ್ಲಿದ್ದ ದೇವ-ಗಂಧರ್ವ-ದಾನವರು ವಿಸ್ಮಿತರಾದರು. ಒಬ್ಬರೊಡನೆ ಮತ್ತೊಬ್ಬರು ಸ್ಪರ್ಧಿಸುತ್ತಾ ತಮ್ಮ-ತಮ್ಮ ಮಿತ್ರರ ಸಲುವಾಗಿ ಪರಾಕ್ರಮದಿಂದ ಕಾದಾಡುತ್ತಿದ್ದ ಮಹಾಬಲಿಷ್ಠರಾದ ಕರ್ಣ-ಶೈನೇಯರ ಯುದ್ಧವನ್ನು ನೋಡಲು ಅಂತರಿಕ್ಷದಲ್ಲಿದ್ದ ದೇವ-ದಾನವ-ರಾಕ್ಷಸರು ಸಾವಧಾನಚಿತ್ತರಾಗಿ ಕುಳಿತಿದ್ದರು. ದೇವಸದೃಶನಾದ ಕರ್ಣನೂ ಸತ್ಯಕನ ಮಗನಾದ ಯುಯುಧಾನನೂ ಅನ್ಯೋನ್ಯವಾಗಿ ಒಬ್ಬರು ಮತ್ತೊಬ್ಬರ ಮೇಲೆ ಬಾಣಗಳ ಮಳೆಗರೆದರು. ಭೂರಿಶ್ರವಸ ಮತ್ತು ಜಲಸಂಧರು ಸಾತ್ಯಕಿಯಿಂದ ನಿಧನಹೊಂದಿದುದನ್ನು ಸಹಿಸಿಕೊಳ್ಳಲಾರದ ಕರ್ಣನು ಶಿನಿಯ ಪೌತ್ರನನ್ನು ಬಾಣಗಳ ವೃಷ್ಟಿಯಿಂದ ಮಥಿಸಿಬಿಟ್ಟನು. ಕರ್ಣನು ಕೌರವ್ಯನಾದ ಭೂರಿಶ್ರವಸನ ಮತ್ತು ಜಲಸಂಧನ ಮರಣದಿಂದ

ಶೋಕತಪ್ತನಾಗಿದ್ದನು. ದೊಡ್ಡ ಘಟಸರ್ಪವು ಬುಸುಗುಟ್ಟುವಂತೆ ನಿಟ್ಟುಸಿರು ಬಿಡುತ್ತಾ ಸಾತ್ಯಕಿಯನ್ನು ಕ್ರೂರದೃಷ್ಟಿಯಿಂದ ಸುಟ್ಟುಬಿಡುವಂತೆ ನೋಡುತ್ತಾ ಪುನಃ ಪುನಃ ಶೈನೇಯನ ಮೇಲೆ ರಭಸದಿಂದ ದಾಳಿಮಾಡುತ್ತಿದ್ದನು. ಸಾತ್ಯಕಿಯು ಕ್ರೋಧಾವಿಷ್ಟನಾಗಿ ಕರ್ಣನನ್ನು ನೋಡಿ ಅಪಾರವಾದ ಬಾಣಗಳನ್ನು ಕರ್ಣನ ಮೇಲೆ ಸುರಿಸುತ್ತಾ–ಸಲಗವು ಮತ್ತೊಂದು ಸಲಗದೊಡನೆ ಕಾದಾಡುವಂತೆ–ಕರ್ಣನೊಡನೆ ಯುದ್ಧಮಾಡುತ್ತಿದ್ದನು. ವೇಗಯುಕ್ತವಾದ ವ್ಯಾಘ್ರಗಳಿಗೆ ಅನುರೂಪರಾಗಿದ್ದ, ಪುರುಷಸಿಂಹರಾದ, ಅನುಪಮಪರಾಕ್ರಮಿಗಳಾದ ಕರ್ಣ-ಸಾತ್ಯಕಿಗಳು ಅನ್ಯೋನ್ಯವಾಗಿ ಒಬ್ಬರು ಮತ್ತೊಬ್ಬರನ್ನು ಕ್ಷತ-ವಿಕ್ಷತಗೊಳಿಸಿದರು. ಅನಂತರ ಸಾತ್ಯಕಿಯು ಲೋಹ ಮಯವಾದ ಬಾಣಗಳಿಂದ ಕರ್ಣನನ್ನು ಅಂಗಾಂಗಗಳಲ್ಲಿಯೂ ಗಾಯ ಗೊಳಿಸಿದನು. ಅನಂತರ ಭಲ್ಲದಿಂದ ಕರ್ಣನ ಸಾರಥಿಯನ್ನೂ ರಥದ ಆಸನದಿಂದ ಕೆಳಕ್ಕುರುಳಿಸಿದನು. ಬಳಿಕ ಕರ್ಣನ ರಥದಲ್ಲಿದ್ದ ನಾಲ್ಕು ಶ್ವೇತಾಶ್ವಗಳನ್ನೂ ನಿಶಿತವಾದ ಬಾಣಗಳಿಂದ ಸಂಹರಿಸಿದನು. ಅವನ ರಥ ಧ್ವಜವನ್ನೂ, ರಥವನ್ನೂ ನೂರಾರು ಚೂರುಗಳಾಗುವಂತೆ ಛಿದ್ರ-ವಿಚ್ಛಿದ್ರ ಗೊಳಿಸಿ ನಿನ್ನ ಮಗನು ನೋಡುತ್ತಿದ್ದಂತೆಯೇ ಕರ್ಣನನ್ನು ರಥಹೀನನನ್ನಾಗಿ ಮಾಡಿದನು. ಆದರಿಂದ ಖಿನ್ನಮನಸ್ಕರಾದ ನಿನ್ನ ಕಡೆಯ ಮಹಾರಥರೂ ಮತ್ತು ಕರ್ಣನ ಮಗನಾದ ವೃಷಸೇನ, ಮದ್ರಾಧಿಪತಿಯಾದ ಶಲ್ಯ, ಅಶ್ವತ್ಥಾಮಾ–ಇವರೆಲ್ಲರೂ ಒಟ್ಟಾಗಿ ಸೇರಿ ಶೈನೇಯನನ್ನು ಎಲ್ಲ ಕಡೆ ಗಳಿಂದಲೂ ಆಕ್ರಮಿಸಿದರು. ಸಾತ್ಯಕಿಯು ವೀರನಾದ ಕರ್ಣನನ್ನು ರಥ ಹೀನನನ್ನಾಗಿ ಮಾಡಿದನೆಂಬ ವಾರ್ತೆಯನ್ನು ಕೇಳಿದೊಡನೆಯೇ ಎಲ್ಲ ಸೈನಿಕರೂ ವ್ಯಾಕುಲಗೊಂಡರು. ಅವರಿಗೆ ಮುಂದೇನುಮಾಡಬೇಕೆಂಬುದೇ ತಿಳಿಯಲಿಲ್ಲ. ಕೌರವರ ಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. ಕರ್ಣನೂ ಸಹ ಸಾತ್ವತನ ಬಾಣಗಳಿಂದ ರಥಹೀನನಾದನಂತರ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ದುರ್ಯೋಧನನ ರಥವನ್ನು ಬೇಗ ಹತ್ತಿ ಕುಳಿತನು. ಬಾಲ್ಯದಿಂದಲೂ ಕರ್ಣನು ನಿನ್ನ ಮಗನ ಸ್ನೇಹವನ್ನು ಮಾನ್ಯಮಾಡಿದ್ದನು. ಅಂಗರಾಜ್ಯಪ್ರದಾನದಿಂದ ಸಂತುಷ್ಟನಾದ ಕರ್ಣನು ಆ ಸಮಯದಲ್ಲಿ ತಾನು ಮಾಡಿದ್ದ ಪ್ರತಿಜ್ಞೆಯನ್ನೂ ಪಾಲಿಸುತ್ತಿದ್ದನು.

ಕರ್ಣ-ದುಃಶಾಸನಾದಿಗಳನ್ನು ಸಂಹರಿಸಲು ಅವಕಾಶಸಿಕ್ಕಿದರೂ ಜಿತೇಂದ್ರಿಯನಾದ ಸಾತ್ಯಕಿಯು ರಥಹೀನನಾಗಿದ್ದ ಕರ್ಣನನ್ನೂ ದುಃಶಾಸನ ಪ್ರಮುಖರಾದ ನಿನ್ನ ವೀರಪುತ್ರರನ್ನೂ–ಹಿಂದೆ ಭೀಮಾರ್ಜುನರು ಮಾಡಿದ್ದ ಪ್ರತಿಜ್ಞೆಯನ್ನು ರಕ್ಷಿಸುವ ಆಶಯದಿಂದ–ಸಂಹರಿಸಲಿಲ್ಲ. ಸಾತ್ಯಕಿಯು ಕರ್ಣನೇ ಮೊದಲಾದ ನಿನ್ನ ಕಡೆಯ ಯೋಧರನ್ನು ರಥಹೀನರನ್ನಾಗಿ ಮಾಡಿದನೇ ಹೊರತು ಪ್ರಾಣಹೀನರನ್ನಾಗಿ ಮಾಡಲಿಲ್ಲ. ಏಕೆಂದರೆ : ಭೀಮಸೇನನು ನಿನ್ನ ಎಲ್ಲ ಮಕ್ಕಳನ್ನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿದ್ದನು. ಅನುದ್ಯೂತವಾದನಂತರ ಕರ್ಣನ ತೆಗಳಿಕೆಯಿಂದ ಸಿಟ್ಟಾದ ಪಾರ್ಥನು ಕರ್ಣನನ್ನು ವಧೆಮಾಡುವುದಾಗಿ ಪ್ರತಿಜ್ಞೆಮಾಡಿದ್ದನು. ಕರ್ಣನೇ ಮೊದಲಾದ ಮಹಾರಥರು ಸಾತ್ಯಕಿಯನ್ನು ಸಂಹರಿಸಬೇಕೆಂದು ಬಹಳವಾಗಿ ಪ್ರಯತ್ನಿಸಿದರು. ಆದರೆ ರಥಶ್ರೇಷ್ಠರು ಎಷ್ಟೇ ಪ್ರಯತ್ನಿಸಿದರೂ ಸಾತ್ಯಕಿಯನ್ನು ಸಂಹರಿಸಲು ಅವರಿಂದ ಸಾಧ್ಯವಾಗಲಿಲ್ಲ. ಧರ್ಮರಾಜನಿಗೆ ಪ್ರಿಯವಾದ ಕಾರ್ಯಮಾಡಲು ಇಚ್ಛಿಸಿದ್ದ, ಪರಲೋಕವನ್ನು ಬಯಸಿದ್ದ ಸಾತ್ಯಕಿಯು ಅಶ್ವತ್ಥಾಮಾ, ಕೃತವರ್ಮಾ ಮತ್ತು ಇತರ ನೂರಾರು ಮಹಾರಥರೆಲ್ಲರನ್ನೂ ಏಕಮಾತ್ರ ಧನುಸ್ಸಿನಿಂದ ಪರಾಜಯಗೊಳಿಸಿದನು. ಪರಾಕ್ರಮದಲ್ಲಿ ಕೃಷ್ಣಾರ್ಜುನರಿಗೆ ಸಮಾನನಾದ, ಶತ್ರುತಾಪನನಾದ ಸಾತ್ಯಕಿಯು ನಿನ್ನ ಎಲ್ಲ ಸೈನ್ಯಗಳನ್ನೂ ನಗು-ನಗುತ್ತಲೇ ಪರಾಜಯಗೊಳಿಸಿದನು.

**ಕೃಷ್ಣೋ ವಾಪಿ ಭವೇಲ್ಲೋಕೇ ಪಾರ್ಥೋ ವಾಪಿ ಧನುರ್ಧರಃ ।**
**ಶೈನೇಯೋ ವಾ ನರವ್ಯಾಘ್ರ ಚತುರ್ಥಸ್ತು ನ ವಿದ್ಯತೇ ॥೭೭॥**

ಈ ಪ್ರಪಂಚದಲ್ಲಿ ಉತ್ತಮಧನುರ್ಧರನೆಂದರೆ ಶ್ರೀಕೃಷ್ಣನಾಗಬಹುದು. ಅರ್ಜುನನೂ ಉತ್ತಮಧನುರ್ಧರನೆನಿಸಬಹುದು. ಸಾತ್ಯಕಿಯಾದರೂ ಆಗಬಹುದು. ಆದರೆ ಇವರು ಮೂವರನ್ನು ಬಿಟ್ಟು ಇವರಿಗೆ ಸಮಾನನಾದ ನಾಲ್ಕನೆಯ ಉತ್ತಮಧನುರ್ಧರನಿರುವುದಿಲ್ಲ."

ಸಾತ್ಯಕಿಯ ಪರಾಕ್ರಮವನ್ನು ಮತ್ತೂ ಕೇಳಬೇಕೆಂಬ ಆಶಯದಿಂದ ಧೃತರಾಷ್ಟ್ರನು ಹೇಳುತ್ತಾನೆ :

"ಸಂಜಯ! ವಾಸುದೇವನಿಗೆ ಸಮಾನನಾದ ಸಾತ್ಯಕಿಯು ಯುದ್ಧದಲ್ಲಿ ಶತ್ರುಗಳಿಂದ ಜಯಿಸಲು ಅಸಾಧ್ಯವಾದ ವಾಸುದೇವನ ರಥದಲ್ಲಿಯೇ

ಕುಳಿತು ಶ್ರೀಕೃಷ್ಣನ ಸಾರಥಿಯಾದ ದಾರುಕನಿಂದ ಕೂಡಿದವನಾಗಿ, ತನ್ನ ಬಾಹುಬಲದಿಂದ ದರ್ಪಿತನಾಗಿ ಕರ್ಣನನ್ನು ರಥಹೀನನನ್ನಾಗಿ ಮಾಡಿದನು. ಶತ್ರುತಾಪನನಾದ ಸಾತ್ಯಕಿಯು ಶ್ರೀಕೃಷ್ಣನ ರಥವಲ್ಲದೇ ಬೇರೆಯ ರಥ ದಲ್ಲಿಯೂ ಕುಳಿತು ಯುದ್ಧಮಾಡಿದನೇ? ನೀನು ವಿಷಯಗಳನ್ನು ಯಥಾ ವತ್ತಾಗಿ ತಿಳಿಸಲು ಬಹಳ ಕುಶಲನಾಗಿರುವೆ. ಆದುದರಿಂದ ಈ ವಿಷಯವನ್ನು ನಿನ್ನಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ. ಸಾತ್ಯಕಿಗೆ ಸಂಬಂಧಿಸಿದ ಈ ವಿಷಯವನ್ನು ನನಗೆ ಹೇಳು. ನಾನು ಅವನನ್ನು ಸಹಿಸಿಕೊಳ್ಳಲು ಅಸಾಧ್ಯ ನಾದವನೆಂದೇ ಭಾವಿಸಿದ್ದೇನೆ.”

“ಮಹಾರಾಜ! ಅಲ್ಲಿಯ ವಿದ್ಯಮಾನಗಳು ಯಾವ ರೀತಿ ನಡೆದು ವೆಂಬುದನ್ನು ಹೇಳುವೆನು ; ಕೇಳು : ಮಹಾಬುದ್ಧಿವಂತನಾದ ದಾರುಕನ ತಮ್ಮನು ಬಹಳ ಶೀಘ್ರವಾಗಿ ಕಲ್ಪನಾವಿಧಿಯಿಂದ ಸಜ್ಜಾಗಿದ್ದ ಮತ್ತೊಂದು ರಥವನ್ನು ತಂದು ನಿಲ್ಲಿಸಿದನು. ಕಬ್ಬಿಣದ ಮತ್ತು ಚಿನ್ನದ ಪಟ್ಟಿಗಳಿಂದ ಆ ರಥದ ಮೂಕಿಯು ನಿರ್ಮಿತವಾಗಿದ್ದಿತು. ಆ ರಥವು ಸಾವಿರಾರು ನಕ್ಷತ್ರ ಗಳಿಂದ ಸಮಲಂಕೃತವಾಗಿದ್ದಿತು. ಆ ರಥದ ಧ್ವಜ-ಪತಾಕೆಗಳು ಸಿಂಹದ ಚಿಹ್ನೆಯನ್ನು ಹೊಂದಿದ್ದುವು. ಚಂದ್ರಸದೃಶವಾದ, ಶಬ್ದಗಳನ್ನೂ ಅತಿ ಕ್ರಮಿಸಿ ಹೋಗುವ, ವೇಗಯುಕ್ತವಾದ, ದೃಢವಾದ ಮತ್ತು ಸುವರ್ಣಾ ಭರಣಗಳಿಂದ ಸಮಲಂಕೃತವಾದ ಸೈಂಧವಜಾತಿಯ ಕುದುರೆಗಳಿಂದ ಆ ರಥವು ಯುಕ್ತವಾಗಿದ್ದಿತು. ಆ ಕುದುರೆಗಳು ವಿಚಿತ್ರವಾದ ಸುವರ್ಣ ಮಯವಾದ ಕವಚಗಳಿಂದ ಸನ್ನದ್ಧವಾಗಿದ್ದುವು. ಅವು ಶ್ರೇಷ್ಠಶ್ರೇಣಿಯ ಕುದುರೆಗಳಾಗಿದ್ದುವು. ಅಂತಹ ಕುದುರೆಗಳಿಂದ ಯುಕ್ತವಾಗಿದ್ದ ಆ ರಥವು ಚಿಕ್ಕ-ಚಿಕ್ಕ ಗಂಟೆಗಳ ಸಮೂಹಗಳಿಂದ ಸಮಲಂಕೃತವಾಗಿದ್ದು ಆ ಗಂಟೆ ಗಳಿಂದ ಹೊರಡುತ್ತಿದ್ದ ಸುಮಧುರಧ್ವನಿಯಿಂದ ನಿನದಿತವಾಗಿದ್ದಿತು. ರಥ ದಲ್ಲಿಟ್ಟಿದ್ದ ಶಕ್ತಿ-ತೋಮರಾದಿ ಆಯುಧಗಳು ಮಿಂಚಿನಂತೆ ಬೆಳಗುತ್ತಿದ್ದುವು. ಆ ರಥವು ಯುದ್ಧಕ್ಕೆ ಸಂಬಂಧಿಸಿದ ಅನೇಕಸಾಮಗ್ರಿಗಳಿಂದಲೂ, ಅನೇಕ ವಿಧವಾದ ಅಸ್ತ್ರ-ಶಸ್ತ್ರಗಳಿಂದಲೂ, ಛತ್ರ-ಚಾಮರಗಳಿಂದಲೂ ತುಂಬಿದ್ದಿತು. ಮೇಘದ ಗರ್ಜನೆಗೆ ಸಮಾನವಾದ ಶಬ್ದದಿಂದ ಕೂಡಿದ್ದ ರಥವನ್ನು ದಾರುಕನ ತಮ್ಮನು ಸಾತ್ಯಕಿಯ ಸಮೀಪಕ್ಕೆ ತಂದು ನಿಲ್ಲಿಸಿದನು. ಶೈನೇ

ಯನು ಆ ರಥವನ್ನು ಹತ್ತಿ ಕುಳಿತು ನಿನ್ನ ಸೈನ್ಯವನ್ನು ಪುನಃ ಆಕ್ರಮಿಸಿದನು. ಅನಂತರ ದಾರುಕನು ತನ್ನ ಇಚ್ಛಾನುಸಾರವಾಗಿ ಶ್ರೀಕೇಶವನ ಬಳಿಗೆ ಹೊರಟುಹೋದನು.

ನಿನ್ನ ಕಡೆಯ ಯೋಧರು ಕರ್ಣನಿಗೂ ಸಹ ನೂತನರಥವನ್ನು ಸಜ್ಜು ಗೊಳಿಸಿ ತಂದರು. ಆ ರಥವು ಶಂಖ ಮತ್ತು ಗೋಕ್ಷೀರಗಳಂತೆ ಬಿಳುಪಾಗಿದ್ದ, ಚಿತ್ರಿತವಾದ ಮತ್ತು ಸುವರ್ಣಮಯವಾದ ಕವಚಗಳನ್ನು ಹೊಂದಿದ್ದ, ವೇಗಶಾಲಿಗಳಾಗಿದ್ದ, ಒಳ್ಳೆಯ ಜಾತಿಯ ಕುದುರೆಗಳಿಂದ ಯುಕ್ತವಾಗಿದ್ದಿತು. ಆ ರಥವು ಯಾಂತ್ರಿಕವಾದ ಪತಾಕೆಗಳಿಂದ ಕೂಡಿದ್ದಿತು. ಅನೇಕಶಸ್ತ್ರ ಗಳಿಂದಲೂ ಯುದ್ಧಸಾಮಗ್ರಿಗಳಿಂದಲೂ ತುಂಬಿದ್ದಿತು. ಶ್ರೇಷ್ಠವಾದ ಆ ರಥವು ಚತುರನಾದ ಸಾರಥಿಯನ್ನು ಹೊಂದಿದ್ದಿತು. ಅಂತಹ ಅನುಪಮವಾದ ರಥದಲ್ಲಿ ಕುಳಿತು ಕರ್ಣನು ಶತ್ರುಗಳ ಮೇಲೆ ದಾಳಿನಡೆಸಿದನು. ಮಹಾರಾಜ! ನೀನು ಯಾವ ವಿಷಯವಾಗಿ ಕೇಳಿದೆಯೋ ಆ ವಿಷಯವನ್ನು ನಿನಗೆ ಸವಿಸ್ತರವಾಗಿ ಹೇಳಿದ್ದೇನೆ. ನಿನ್ನ ಅನ್ಯಾಯದ ಕಾರಣದಿಂದ ಉಂಟಾದ ವಿನಾಶವನ್ನು ಪುನಃ ಹೇಳುವೆನು ; ಕೇಳು. ಸರ್ವಕಾಲದಲ್ಲಿಯೂ ಚಿತ್ರ-ವಿಚಿತ್ರವಾದ ರೀತಿಯಲ್ಲಿ ಯುದ್ಧಮಾಡುತ್ತಿದ್ದ ದುರ್ಮುಖನನ್ನು ಮುಂದೆ ಮಾಡಿಕೊಂಡು ನಿನ್ನ ಮೂವತ್ತೊಂದು ಮಕ್ಕಳು ಭೀಮಸೇನನಿಂದ ಹತರಾಗಿ ಕೆಳಗುರುಳಿದರು. ಭೀಷ್ಮ-ಭಗದತ್ತಪ್ರಮುಖರಾದ ನೂರಾರು ಯೋಧರು ಸಾತ್ಯಕಿಯಿಂದಲೂ, ಅರ್ಜುನನಿಂದಲೂ ಹತರಾದರು. ಮಹಾರಾಜ! ನಿನ್ನ ದುರ್ಮಂತ್ರಿತ್ವದ ಕಾರಣದಿಂದಾಗಿ ಈ ವಿಧವಾದ ಜನಕ್ಷಯವುಂಟಾಯಿತು.”

೧೪೭ನೆಯ ಅಧ್ಯಾಯವು ಮುಗಿಯಿತು.

೧೪೮ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಅರ್ಜುನನು ಕರ್ಣನನ್ನು ನಿಂದಿಸಿದುದು : ವೃಷಸೇನನನ್ನು ವಧೆ ಮಾಡುವೆನೆಂದು ಅರ್ಜುನನು ಪ್ರತಿಜ್ಞೆಮಾಡಿದುದು : ಶ್ರೀಕೃಷ್ಣನು ಅರ್ಜುನನಿಗೆ ಭಯಾನಕವಾದ ದೃಶ್ಯವನ್ನು ತೋರಿಸುತ್ತಾ ಯುಧಿಷ್ಠಿರನ ಸಮೀಪಕ್ಕೆ ಕರೆದುಕೊಂಡು ಹೋದುದು

ಧೃತರಾಷ್ಟ್ರನು ಭೀಮಸೇನನ ವಿಷಯವಾಗಿ ಸಂಜಯನನ್ನು ಪ್ರಶ್ನಿಸು ತ್ತಾನೆ :

"ಸಂಜಯ! ಅವರ ಕಡೆಯ ಮತ್ತು ನಮ್ಮ ಕಡೆಯ ಶೂರರು ಯುದ್ಧಕ್ಕೆ ಉದ್ಯತರಾಗಿರಲಾಗಿ, ಆ ಸಮಯದಲ್ಲಿ ಭೀಮಸೇನನು ಏನು ಮಾಡುತ್ತಿದ್ದನೆಂಬುದನ್ನು ನನಗೆ ಹೇಳು."

"ಮಹಾರಾಜ! ಕರ್ಣನ ಮಾತುಗಳೆಂಬ ಅಲಗುಗಳಿಂದ ಬಹಳವಾಗಿ ಪೀಡಿತನಾಗಿದ್ದ, ರಥಹೀನನಾಗಿದ್ದ ಭೀಮಸೇನನು ಕ್ರೋಧಪರವಶನಾಗಿ ಫಾಲ್ಗುನನನ್ನು ಕುರಿತು ಹೇಳಿದನು : "ಧನಂಜಯ! ಕರ್ಣನು ನಿನ್ನ ಸಮ್ಮುಖದಲ್ಲಿಯೇ ನನ್ನನ್ನು–'ಗಡ್ಡ-ಮೀಸೆಗಳಿಲ್ಲದವನೇ! ಮೂರ್ಖ! ಹೊಟ್ಟೇಬಾಕ! ಅಸ್ತ್ರವಿದ್ಯೆಯ ಗಂಧವೂ ಇಲ್ಲದವನೇ! ಬಾಲಸ್ವಭಾವದವನೇ! ಸಂಗ್ರಾಮಭೀರೋ! ನಿನಗೇಕೆ ಯುದ್ಧ?'–ಇವೇ ಮುಂತಾದ ಅವಾಚ್ಯಶಬ್ದಗಳಿಂದ ಹಲವು ಬಾರಿ ನಿಂದಿಸಿದನು. 'ಹೀಗೆ ನಿಂದಿಸುವವನನ್ನು ನಾನು ವಧೆಮಾಡುತ್ತೇನೆ'–ಎಂದು ನಿನ್ನೊಡನೆಯೇ ಪ್ರತಿಜ್ಞೆಮಾಡಿದ್ದೆನು. ಕರ್ಣನ ವಧೆಮಾಡುವುದು ನನ್ನ ಕರ್ತವ್ಯವೂ ಆಗಿದೆ. ಅಂತೆಯೇ ನಿನ್ನ ಕರ್ತವ್ಯವೂ ಆಗಿದೆ. (ನೀನೂ ಸಹ ಕರ್ಣನನ್ನು ವಧೆಮಾಡುವುದಾಗಿ ಪ್ರತಿಜ್ಞೆ ಮಾಡಿರುವೆ.) ಈ ವಿಷಯದಲ್ಲಿ ಸಂಶಯವಿಲ್ಲ. ಕರ್ಣನ ವಧೆಗಾಗಿ ನೀನು ಈ ನನ್ನ ಮಾತುಗಳನ್ನು ಸ್ಮರಿಸು. (ಕರ್ಣನು ನನ್ನನ್ನು ನಿಂದನೆಮಾಡಿದುದನ್ನು ಸ್ಮರಿಸು.) ಯಾವ ರೀತಿಯಲ್ಲಿ ನಮ್ಮ ಪ್ರತಿಜ್ಞೆಯು ಸತ್ಯವಾಗುವುದೋ–ಆ ರೀತಿಯಲ್ಲಿ ನೀನು ಪ್ರಯತ್ನವನ್ನು ಮಾಡು."

ಮಹಾರಾಜ! ಭೀಮಸೇನನ ಮಾತುಗಳನ್ನು ಕೇಳಿ ಅಮಿತವಿಕ್ರಮನಾದ ಅರ್ಜುನನು ಕರ್ಣನ ಬಳಿಗೆ ಹೋಗಿ ಅವನೊಡನೆ ಹೇಳಿದನು :

**ಕರ್ಣ ಕರ್ಣ ವೃಥಾದೃಷ್ಟೇ ಸೂತಪುತ್ರಾತ್ಮಸಂಸ್ತುತ ।**
**ಅಧರ್ಮಬುದ್ಧೇ ಶೃಣು ಮೇ ಯತ್ತ್ವಾಂ ವಕ್ಷ್ಯಾಮಿ ಸಾಮ್ಪ್ರತಮ್ ॥**

"ಕರ್ಣ! ಕರ್ಣ! ವ್ಯರ್ಥವಾದ ದೃಷ್ಟಿಯುಳ್ಳವನೇ! (ಕಣ್ಣುಗಳಿದ್ದರೂ ಕುರುಡನಂತಿರುವವನೇ!) ಸೂತನ ಮಗನೇ! (ನೀಚಜಾತಿಯವನೇ!) ಆತ್ಮಶ್ಲಾಘಿಯೇ! ಅಧರ್ಮದಲ್ಲಿಯೇ ಬುದ್ಧಿಯಿರತಕ್ಕವನೇ! ನಾನು ಈಗ ಏನು ಹೇಳುವೆನೆಂಬುದನ್ನು ಕೇಳು :"

**ದ್ವಿವಿಧಂ ಕರ್ಮ ಶೂರಾಣಾಂ ಯುದ್ಧೇ ಜಯಪರಾಜಯೌ ।**
**ತೌ ಚಾಪ್ಯನಿತ್ಯೌ ರಾಧೇಯ ವಾಸವಸ್ಯಾಪಿ ಯುಧ್ಯತಃ ॥೯॥**

ರಾಧೇಯ! ಯುದ್ಧದಲ್ಲಿ ಶೂರರಿಗೆ ಎರಡು ವಿಧವಾದ ಪರಿಣಾಮಗಳಾಗುತ್ತವೆ. ಜಯ ಮತ್ತು ಅಪಜಯ ಎಂಬುದೇ ಈ ಪರಿಣಾಮಗಳು. ಈ ಜಯಾಪಜಯಗಳು ಯುದ್ಧದಲ್ಲಿ ತೊಡಗಿದ ಇಂದ್ರನಿಗೂ ಸಹ ಅನಿತ್ಯವಾದುವುಗಳೇ. (ಇಂದ್ರನೂ ಸಹ ಕೆಲವು ಸಮಯಗಳಲ್ಲಿ ಜಯವನ್ನೂ, ಕೆಲವು ಸಮಯಗಳಲ್ಲಿ ಅಪಜಯವನ್ನೂ ಅನುಭವಿಸಲೇ ಬೇಕಾಗುತ್ತದೆ.) ಇಂದ್ರನಿಗೇ ಇಂತಹ ಪರಿಣಾಮವಾಗುವಾಗ ಮನುಷ್ಯರ ವಿಷಯದಲ್ಲಿ ಹೇಳಬೇಕಾದುದೇ ಇಲ್ಲ.

ನಿನಗೆ ತಿಳಿದಿರುವಂತೆ ಸಾತ್ಯಕಿಯು ನಿನ್ನನ್ನು ರಥಹೀನನನ್ನಾಗಿ ಮಾಡಿದ್ದನು. ನಿನ್ನ ಇಂದ್ರಿಯಗಳೆಲ್ಲವೂ ವ್ಯಾಕುಲಗೊಂಡಿದ್ದುವು. ನೀನು ಆಗ ಮೃತ್ಯುಮುಖನಾಗಿಯೇ ಇದ್ದೆ. ಆದರೆ ನೀನು ನನ್ನಿಂದ ವಧ್ಯನಾಗಬೇಕೆಂಬುದನ್ನು ಸ್ಮರಿಸಿ ಸಾತ್ಯಕಿಯು ನಿನ್ನನ್ನು ಜಯಿಸಿದರೂ ಪ್ರಾಣಸಹಿತನಾಗಿ ಬಿಟ್ಟುಬಿಟ್ಟನು. ಸ್ವೇಚ್ಛೆಯಿಂದ ರಣರಂಗದಲ್ಲಿ ಯುದ್ಧಮಾಡುತ್ತಿದ್ದ ಮಹಾಬಲನಾದ ಭೀಮಸೇನನನ್ನು ಹೇಗೋ ಕಷ್ಟಪಟ್ಟು ರಥಹೀನನನ್ನಾಗಿ ಮಾಡಿದ ನೀನು ಅನಂತರ ಅವನನ್ನು ಕಠಿನೋಕ್ತಿಗಳಿಂದ ನಿಂದಿಸಿದುದು ಅಧರ್ಮ. ಅನಾರ್ಯರು ಮಾಡುವ ಕಾರ್ಯವನ್ನು ನೀನು ಮಾಡಿರುವೆ.

**ನಾರಿಂ ಜಿತ್ವಾತಿಕತ್ಥನ್ತೇ ನ ಚ ಜಲ್ಪನ್ತಿ ದುರ್ವಚಃ ।**
**ನ ಚ ಕಞ್ಚಿನ ನಿನ್ದನ್ತಿ ಸನ್ತಃ ಶೂರಾ ನರರ್ಷಭಾಃ ॥೧೨॥**

ಸತ್ಪುರುಷರಾದ, ಶೂರರಾದ ನರಶ್ರೇಷ್ಠರು ಶತ್ರುಗಳನ್ನು ಗೆದ್ದು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವುದಿಲ್ಲ. ಕೆಟ್ಟ ಮಾತುಗಳನ್ನೂ ಆಡುವುದಿಲ್ಲ. ಯಾರೊಬ್ಬರ ನಿಂದನೆಯನ್ನೂ ಮಾಡುವುದಿಲ್ಲ.

ನೀನು ಬಹಳ ನೀಚಬುದ್ಧಿಯವನು. ಈ ಕಾರಣದಿಂದ ನೀನು ಯಾವುದನ್ನು ಹೇಳಬೇಕು ; ಯಾವುದನ್ನು ಹೇಳಬಾರದು–ಎಂಬ ವಿವೇಚನೆಯೇ ಇಲ್ಲದೇ ಬಹಳ ಅಪದ್ಧವಾದ ಮತ್ತು ಕಿವಿಯಿಂದ ಕೇಳಲೂ ಅಸಹ್ಯವಾದ ಮಾತುಗಳನ್ನಾಡಿರುವೆ. ಭೀಮಸೇನನು ನಿನ್ನೊಡನೆಯೇ ಪರಾಕ್ರಮದಿಂದ ಯುದ್ಧಮಾಡುತ್ತಿದ್ದನು. ಅವನು ಮಹಾಶೂರನು. ಶ್ರೇಷ್ಠವಾದ ವ್ರತಗಳ ಪಾಲನೆಯಲ್ಲಿ ತತ್ಪರನಾಗಿರತಕ್ಕವನು. ಅಂತಹವನ ವಿಷಯದಲ್ಲಿ ನೀನಾಡಿದ

ಅಪ್ರಿಯವಾದ ಮಾತುಗಳು ಸತ್ಯದಿಂದ ದೂರವಾದುವುಗಳು. ಎಲ್ಲ ಸೈನಿ ಕರೂ ನೋಡುತ್ತಿದ್ದಂತೆ ನನ್ನ ಮತ್ತು ಕೇಶವನ ಸಮ್ಮುಖದಲ್ಲಿ ಭೀಮಸೇನನು ನಿನ್ನನ್ನು ಎಷ್ಟೋ ಬಾರಿ ರಥಹೀನನನ್ನಾಗಿ ಮಾಡಿದ್ದಾನೆ. ತನ್ನ ಪರಾಕ್ರಮದಿಂದ ನಿನ್ನನ್ನು ಹಲವುಬಾರಿ ರಥಹೀನನನ್ನಾಗಿ ಮಾಡಿದರೂ ಭೀಮಸೇನನು ನಿನ್ನ ವಿಷಯದಲ್ಲಿ ಕಠಿಣವಾದ ಮಾತುಗಳನ್ನಾಡಿರುವುದಿಲ್ಲ. ಹೀಗಿದ್ದರೂ ನೀನು ಕೇವಲ ಒಮ್ಮೆ ಮಾತ್ರ ಅವನನ್ನು ರಥಹೀನನನ್ನಾಗಿ ಮಾಡಿದ ಕಾರಣದಿಂದ ಅವನ ವಿಷಯದಲ್ಲಿ ಬಹಳ ಕಠೋರವಾದ ಮಾತುಗಳನ್ನಾಡಿರುವೆ. ಎರಡನೆಯದಾಗಿ : ನನ್ನ ಪರೋಕ್ಷದಲ್ಲಿ ನೀವೆಲ್ಲರೂ ಸೇರಿ ನನ್ನ ಮಗನಾದ ಅಭಿಮನ್ಯುವಿನ ಸಂಹಾರವನ್ನು ಮಾಡಿರುತ್ತೀರಿ. ಆದುದರಿಂದ ಈ ನಿನ್ನ ದುರಹಂಕಾರಕ್ಕೆ ತಕ್ಕುದಾದ ಫಲವನ್ನು ನೀನು ಬಹಳ ಬೇಗ ಪಡೆಯಲಿರುವೆ. ದುರ್ಮತಿಯೇ! ನಿನ್ನ ಆತ್ಮನಾಶಕ್ಕೋಸ್ಕರವೇ ನೀನು ಅಭಿಮನ್ಯುವಿನ ಧನುಸ್ಸನ್ನು ಕತ್ತರಿಸಿದೆ. ಮೂಢನೇ! ಈ ಕಾರಣದಿಂದಲೇ ಭೃತ್ಯ-ಸುತ-ಬಾಂಧವಸಹಿತನಾದ ನೀನು ವಧೆಗೆ ಅರ್ಹನಾಗಿರುವೆ. ಈಗಲೇ ನೀನು ಮಾಡಬೇಕಾದ ಸತ್ಕಾರ್ಯಗಳೆಲ್ಲವನ್ನೂ ಮಾಡಿ ಮುಗಿಸಿಬಿಡು. ಮಹತ್ತರ ವಾದ ಭಯವು ಸನ್ನಿಹಿತವಾಗಿದೆ. ನಿನ್ನ ಪುತ್ರನಾದ ವೃಷಸೇನನನ್ನು ನಿನ್ನ ಸಮ್ಮುಖದಲ್ಲಿಯೇ ನಾನು ಸಂಹಾರಮಾಡುತ್ತೇನೆ. ಮೋಹಪರವಶರಾಗಿ ಇನ್ನೂ ಯಾವ-ಯಾವ ರಾಜರು ನನ್ನೊಡನೆ ಯುದ್ಧಕ್ಕೆ ಬರುತ್ತಾರೆಯೋ– ಅವರೆಲ್ಲರನ್ನೂ ನಾನು ಸಂಹರಿಸುತ್ತೇನೆ. ಈ ಮಾತನ್ನು ನಾನು ಆಯುಧವನ್ನು ಹಿಡಿದು ಶಪಥಮಾಡಿ ಹೇಳುತ್ತಿದ್ದೇನೆ. ಮೂಢನೇ! ಬುದ್ಧಿಹೀನನಾದ, ದುರಭಿಮಾನಿಯಾದ ನೀನು ಯುದ್ಧದಲ್ಲಿ ನನ್ನಿಂದ ಹತನಾಗಿ ಬಿದ್ದುದನ್ನು ನೋಡಿ ಮಂದನಾದ ದುರ್ಯೋಧನನು ಬಹಳವಾಗಿ ಪರಿತಪಿಸುತ್ತಾನೆ."

ಮಹಾರಾಜ! ಕರ್ಣನ ಮಗನಾದ ವೃಷಸೇನನನ್ನೂ ಸಂಹರಿಸುವುದಾಗಿ ಅರ್ಜುನನು ಪ್ರತಿಜ್ಞೆಮಾಡಲಾಗಿ, ಆ ಸಮಯದಲ್ಲಿ ರಥಿಗಳ ಮಧ್ಯದಲ್ಲಿ ಭಯಂಕರವಾದ ದೊಡ್ಡ ಕೋಲಾಹಲವೆದ್ದಿತು.

ಮಹಾಭಯಂಕರವಾದ ಯುದ್ಧವು ಸರ್ವತ್ರ ವ್ಯಾಪಕವಾಗಿ ನಡೆಯು ತ್ತಿರಲಾಗಿ, ಮಂದರಶ್ಮಿಯಾಗಿದ್ದ ಸೂರ್ಯದೇವನು ಅಸ್ತಾಚಲವನ್ನು ಸೇರಿದನು.

ಮಹಾರಾಜ! ಅನಂತರ ಶ್ರೀಕೃಷ್ಣನು–ಸಂಗ್ರಾಮದ ಅಗ್ರಭಾಗದಲ್ಲಿದ್ದ ಸೈಂಧವನನ್ನು ಸೂರ್ಯನು ಅಸ್ತಮಿಸುವುದರೊಳಗಾಗಿ ಸಂಹರಿಸುವೆನೆಂದು ಮಾಡಿದ್ದ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದ್ದ ಅರ್ಜುನನನ್ನು ಗಾಢವಾಗಿ ಆಲಿಂಗಿಸಿಕೊಂಡು ಈ ಮಾತುಗಳನ್ನು ಹೇಳಿದನು :

"ಜಿಷ್ಣುವೇ! ಅದೃಷ್ಟವಶಾತ್ ನೀನು ಮಾಡಿದ ಮಹಾಪ್ರತಿಜ್ಞೆಯನ್ನು ಪೂರ್ಣಗೊಳಿಸಿರುವೆ. ಅದೃಷ್ಟವಶಾತ್ ಪಾಪಿಷ್ಠನಾದ ವೃದ್ಧಕ್ಷತ್ರನು ತನ್ನ ಮಗನೊಡನೆ ಹತನಾದನು. ದುರ್ಯೋಧನನ ಸೈನ್ಯದೊಡನೆ ಯುದ್ಧದಲ್ಲಿ ತೊಡಗಿದ ದೇವಸೇನೆಯೂ ಸಹ ವಿನಾಶಹೊಂದುತ್ತದೆ. ಈ ವಿಷಯವನ್ನು ವಿಮರ್ಶಿಸುವ ಅಗತ್ಯವೇ ಇಲ್ಲ. (ದುರ್ಯೋಧನನ ಸೈನ್ಯವು ನಿಶ್ಚಯ ವಾಗಿಯೂ ಅಷ್ಟು ಅಭೇದ್ಯವಾದುದು.)

ಪುರುಷವ್ಯಾಘ್ರನೇ! ನಾನು ಎಷ್ಟೇ ಯೋಚಿಸಿದರೂ ನಿನ್ನನ್ನು ಬಿಟ್ಟರೆ ಈ ದುರ್ಯೋಧನನ ಸೈನ್ಯದೊಡನೆ ಯುದ್ಧಮಾಡಬಲ್ಲ ಪುರುಷನೊಬ್ಬನನ್ನೂ ನಾನು ಕಾಣುತ್ತಿಲ್ಲ. ನಿನಗೆ ಸಮಾನರಾದವರೂ ಮತ್ತು ನಿನಗಿಂತಲೂ ಅಧಿಕವಾದ ಪರಾಕ್ರಮವುಳ್ಳವರೂ, ಮಹಾಪ್ರಭಾವಶಾಲಿಗಳೂ ಆದ ಅನೇಕರಾಜ್ಯಪಾಲರು ದುರ್ಯೋಧನನ ಸಲುವಾಗಿ ಇಲ್ಲಿ ಒಟ್ಟಾಗಿ ಸೇರಿದ್ದಾರೆ. ಅವರೆಲ್ಲರೂ ಕವಚಗಳನ್ನು ಧರಿಸಿ ಕ್ರುದ್ಧರಾಗಿ ನಿನ್ನೊಡನೆ ಯುದ್ಧಕ್ಕೆ ಬಂದರೂ ನಿನ್ನನ್ನು ಅತಿಕ್ರಮಿಸಿ ಹೋಗಲು ಅವರಿಂದ ಸಾಧ್ಯವಾಗಲಿಲ್ಲ. ರುದ್ರೇಂದ್ರ ಯಮರ ಬಲ-ವೀರ್ಯಗಳಿಗೆ ಸಮಾನವಾದ ವೀರ್ಯ-ಪರಾಕ್ರಮಗಳು ನಿನ್ನಲ್ಲಿವೆ. ಶತ್ರುತಾಪನನಾದ ನೀನೊಬ್ಬನೇ ನಿಂತು ಇಂದಿನ ಯುದ್ಧದಲ್ಲಿ ಯಾವ ವಿಧವಾದ ಪರಾಕ್ರಮವನ್ನು ತೋರಿದೆಯೋ–ಅಂತಹ ಪರಾಕ್ರಮವನ್ನು ಯಾವನೊಬ್ಬನೂ ತೋರಲಾರನು. ಇದೇ ರೀತಿಯಲ್ಲಿ ಬಂಧುಗಳಿಂದ ಕೂಡಿದ, ದುರಾತ್ಮನಾದ ಕರ್ಣನೂ ಹತನಾದನಂತರ ಶತ್ರುವನ್ನು ಜಯಿಸಿದ ಹತಶತ್ರುವಾದ ನಿನ್ನನ್ನು ಪುನಃ ಅಭಿನಂದಿಸುತ್ತೇನೆ."

ಹೀಗೆ ತನ್ನನ್ನು ಅಭಿನಂದಿಸಿದ ಶ್ರೀಕೃಷ್ಣನಿಗೆ ಅರ್ಜುನನು ಯಥಾನು ರೂಪವಾಗಿ ಉತ್ತರಿಸಿದನು :

"ಮಾಧವ! ನಿನ್ನ ಅನುಗ್ರಹದಿಂದಲೇ ನಾನು ದೇವತೆಗಳಿಂದಲೂ ಸಹ ದುಸ್ತರವಾದ ಈ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದೆನು.

**ಅನಾಶ್ಚರ್ಯೋ ಜಯಸ್ತೇಷಾಂ ಯೇಷಾಂ ನಾಥೋಽಸಿ ಕೇಶವ ।**
**ತ್ವತ್ಪ್ರಸಾದಾನ್ಮಹೀಂ ಕೃತ್ಸ್ನಾಂ ಸಮ್ಪ್ರಾಪ್ಸ್ಯತಿ ಯುಧಿಷ್ಠಿರಃ ॥೩೩॥**

**ತವ ಪ್ರಭಾವೋ ವಾರ್ಷ್ಣೇಯ ತವೈವ ವಿಜಯಃ ಪ್ರಭೋ ।**
**ವರ್ಧನೀಯಾಸ್ತವ ವಯಂ ಸದೈವ ಮಧುಸೂದನ ॥೩೪॥**

ಕೇಶವ! ನೀನು ಯಾರಿಗೆ ನಾಥನಾಗಿರುವೆಯೋ ಅವರಿಗೆ ಜಯವು ಲಭಿಸಿರುವುದರಲ್ಲಿ ಆಶ್ಚರ್ಯವೇನಿಲ್ಲ. ನಿನ್ನ ಅನುಗ್ರಹದಿಂದಲೇ ಯುಧಿಷ್ಠಿರನು ಈ ಅಖಂಡವಾದ ಪೃಥ್ವಿಯನ್ನೂ ಪಡೆದುಕೊಳ್ಳುತ್ತಾನೆ. ಎಲ್ಲವೂ ನಿನ್ನ ಪ್ರಭಾವದಿಂದಲೇ ನಡೆಯುತ್ತಿದೆ ಮತ್ತು ಇಂದಿನ ವಿಜಯವೂ ನಿನ್ನ ವಿಜಯವೇ ಆಗಿದೆ. ಮಧೂಸೂದನ! ಸರ್ವಕಾಲದಲ್ಲಿಯೂ ನಿನ್ನಿಂದಲೇ ವೃದ್ಧಿಗೊಳಿಸಲ್ಪಡತಕ್ಕವರಾಗಿದ್ದೇವೆ. (ನಿನ್ನಿಂದಲೇ ನಾವು ವೃದ್ಧಿಸುತ್ತಿದ್ದೇವೆ.)"

ಮಹಾರಾಜ! ಅರ್ಜುನನು ಹೀಗೆ ಹೇಳಿದನಂತರ ಶ್ರೀಕೃಷ್ಣನು ಕುದುರೆಗಳನ್ನು ಮೆಲ್ಲ-ಮೆಲ್ಲನೆ ನಡೆಸುತ್ತಾ ಘೋರವಾದ ದೃಶ್ಯದಿಂದ ಕೂಡಿದ್ದ ರಣರಂಗವನ್ನು ಅರ್ಜುನನಿಗೆ ತೋರಿಸುತ್ತಾ ಹೇಳಿದನು :

"ಅರ್ಜುನ! ಶೂರರಾದ ರಾಜರು ಯುದ್ಧದಲ್ಲಿ ವಿಜಯವನ್ನೂ–ಸರ್ವತ್ರವ್ಯಾಪಿಸಿರುವ ಮಹಾಯಶಸ್ಸನ್ನೂ ಗಳಿಸುವ ಸಲುವಾಗಿ ನಿನ್ನೊಡನೆ ಯುದ್ಧಮಾಡಿ ನಿನ್ನ ಬಾಣಗಳಿಂದ ಹತರಾಗಿ ಭೂಮಿಯ ಮೇಲೆ ಮಲಗಿದ್ದಾರೆ. ಈ ರಾಜರ ಶಸ್ತ್ರಗಳೂ ಮತ್ತು ಇವರು ತೊಟ್ಟಿದ್ದ ಆಭರಣಗಳೂ ಸುತ್ತಲೂ ಚೆಲ್ಲಾ-ಪಿಲ್ಲಿಯಾಗಿ ಬಿದ್ದಿವೆ. ಇವರ ಕುದುರೆಗಳು, ರಥಗಳು ಮತ್ತು ಆನೆಗಳೆಲ್ಲವೂ ನಾಶಹೊಂದಿವೆ. ಇವರ ಮರ್ಮಸ್ಥಳಗಳು ಕ್ಷತ-ವಿಕ್ಷತವಾಗಿರುವುದರಿಂದ ಈ ರಾಜರು ಬಹಳವಾಗಿ ವ್ಯಾಕುಲಗೊಂಡು ನರಳುತ್ತಿದ್ದಾರೆ.

ಇವರಲ್ಲಿ ಕೆಲವರು ಸಪ್ರಾಣರೂ ಮತ್ತೆ ಕೆಲವರು ಗತಪ್ರಾಣರೂ ಆಗಿದ್ದಾರೆ. ಪ್ರಾಣಗಳನ್ನು ಕಳೆದುಕೊಂಡಿರುವ ರಾಜರೂ ಸಹ ಶ್ರೇಷ್ಠವಾದ ಪ್ರಭೆಯಿಂದ ಯುಕ್ತರಾಗಿದ್ದು ಸಜೀವರಾಗಿಯೇ ಇರುವರೋ ಎಂಬಂತೆ

ಕಾಣುತ್ತಿದ್ದಾರೆ. ಸುವರ್ಣದ ಮೂಲಭಾಗಗಳುಳ್ಳ ಇವರ ಬಾಣಗಳಿಂದಲೂ, ವಿಧ-ವಿಧವಾದ ನಿಶಿತವಾದ ಶಸ್ತ್ರಗಳಿಂದಲೂ, ಆನೆ-ಕುದುರೆ ಇವೇ ಮೊದಲಾದ ವಾಹನಗಳಿಂದಲೂ, ಪ್ರಾಸ-ತೋಮರಾದಿ ಆಯುಧಗಳಿಂದಲೂ ರಣರಂಗವು ತುಂಬಿಹೋಗಿರುವುದನ್ನು ನೋಡು. ಭಾರತನೇ! ಈ



ರಣಾಂಗಣವು ರಾಜರ ಕವಚಗಳಿಂದಲೂ, ಗುರಾಣಿಗಳಿಂದಲೂ, ಕುಂಡಲಗಳಿಂದ ಯುಕ್ತವಾದ ಶಿರಸ್ಸುಗಳಿಂದಲೂ, ಉಷ್ಣೀಷಗಳಿಂದಲೂ, ಕಿರೀಟಗಳಿಂದಲೂ, ಮಾಲೆಗಳಿಂದಲೂ, ಚೂಡಾಮಣಿಗಳಿಂದಲೂ, ವಸ್ತ್ರಗಳಿಂದಲೂ, ಕಂಠಸೂತ್ರಗಳಿಂದಲೂ, ಕನಕಾಂಗದಗಳಿಂದಲೂ, ಥಳ-ಥಳಿಸುವ ಸುವರ್ಣಾಭರಣಗಳಿಂದಲೂ, ಚಿತ್ರಿತವಾದ ಇನ್ನೂ ಅನೇಕ ಆಭರಣ

ಗಳಿಂದಲೂ ಬಹಳವಾಗಿ ಶೋಭಿಸುತ್ತಿದೆ. ರಥಗಳ ತೋಳುಮರ ಗಳಿಂದಲೂ, ಬತ್ತಳಿಕೆಗಳಿಂದಲೂ, ಧ್ವಜ-ಪತಾಕೆಗಳಿಂದಲೂ, ಅನೇಕ ಯುದ್ಧಸಾಮಗ್ರಿಗಳಿಂದಲೂ, ಪೀಠೋಪಕರಣಗಳಿಂದಲೂ, ಈಷಾದಂಡ ಗಳಿಂದಲೂ, ಮೂಕೀಮರಗಳಿಂದಲೂ, ರಥಚಕ್ರಗಳಿಂದಲೂ, ತುಂಡು-ತುಂಡಾಗಿರುವ ಅಚ್ಚುಮರಗಳಿಂದಲೂ, ನೊಗಗಳಿಂದಲೂ, ನೊಗಪಟ್ಟಿ ಗಳಿಂದಲೂ, ಲಗಾಮುಗಳಿಂದಲೂ, ಧನುಸ್ಸುಗಳಿಂದಲೂ, ಬಾಣ ಗಳಿಂದಲೂ, ಆನೆಗಳ ಮೇಲೆ ಹೊದ್ದಿಸುವ ರತ್ನಗಂಬಳಿಗಳಿಂದಲೂ, ಆನೆ ಗಳ ಅಂಬಾರಿಗಳ ಮೇಲೆ ಹಾಸುವ ಚಿತ್ರಗಂಬಳಿಗಳಿಂದಲೂ, ಪರಿಘಾಯುಧ ಗಳಿಂದಲೂ, ಅಂಕುಶಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ಭಿಂದಿಪಾಲ ಗಳಿಂದಲೂ, ಬತ್ತಳಿಕೆಗಳಿಂದಲೂ, ಶೂಲಗಳಿಂದಲೂ, ಗಂಡುಗೊಡಲಿ ಗಳಿಂದಲೂ, ಪ್ರಾಸ-ತೋಮರಗಳಿಂದಲೂ, ಕುಂತಾಯುಧಗಳಿಂದಲೂ, ಯಷ್ಟಿಗಳಿಂದಲೂ, ಶತಘ್ನಿಗಳಿಂದಲೂ, ಭುಶುಂಡಿಗಳಿಂದಲೂ, ಕತ್ತಿ ಗಳಿಂದಲೂ, ಪರಶುಗಳಿಂದಲೂ ಮುಸಲ-ಮುದ್ಗರಗಳಿಂದಲೂ, ಗದೆ ಗಳಿಂದಲೂ, ಈಟಿ-ಭರ್ಜಿಗಳಿಂದಲೂ, ಸುವರ್ಣಮಯವಾದ ಚಾವಟಿ ಗಳಿಂದಲೂ, ಘಂಟೆಗಳಿಂದಲೂ, ಗಜೇಂದ್ರಗಳ ನಾನಾವಿಧವಾದ ಆಭರಣ ಗಳಿಂದಲೂ, ಸುವರ್ಣಮಾಲೆಗಳಿಂದಲೂ, ನಾನಾವಿಧವಾದ ಆಭರಣ ಗಳಿಂದಲೂ, ಬಹುಮೂಲ್ಯವಾದ ವಸ್ತ್ರಗಳಿಂದಲೂ ವ್ಯಾಪ್ತವಾಗಿರುವ ಈ ರಣಾಂಗಣವು ಶರತ್ಕಾಲದಲ್ಲಿ ನಕ್ಷತ್ರಗಳಿಂದ ಪ್ರಕಾಶಿಸುವ ಆಕಾಶದಂತೆಯೇ ಕಾಣುತ್ತಿರುವುದನ್ನು ನೋಡು ; ಅರ್ಜುನ!

**ಪೃಥಿವ್ಯಾಂ ಪೃಥಿವೀಹೇತೋಃ ಪೃಥಿವೀಪತಯೋ ಹತಾಃ ।**
**ಪೃಥಿವೀಮುಪಗುಹ್ಯಾಙ್ಗೈಃ ಸುಪ್ತಾಃ ಕಾನ್ತಾಮಿವ ಪ್ರಿಯಾಮ್ ॥**

ಪೃಥಿವಿಯನ್ನು ಜಯಿಸುವ ಕಾರಣದಿಂದಾಗಿ ಈ ರಣಾಂಗಣದಲ್ಲಿ ಹತ ರಾಗಿ ಬಿದ್ದಿರುವ ಪೃಥಿವೀಪಾಲರು ಪ್ರಿಯಳಾದ ಕಾಂತೆಯನ್ನು ಆಲಿಂಗನ ಮಾಡಿಕೊಂಡು ಮಲಗುವಂತೆ–ಪೃಥಿವಿಯನ್ನೇ ಬಲವಾಗಿ ತಬ್ಬಿಕೊಂಡು ಮಲಗಿದ್ದಾರೆ.

ಪರ್ವತಗಳ ಶಿಖರಗಳಂತೆಯೇ ಕಾಣುತ್ತಿರುವ, ಐರಾವತೋಪಮ ಗಳಾದ ಈ ಆನೆಗಳನ್ನು ನೋಡು, ಅರ್ಜುನ! ಶಸ್ತ್ರಚ್ಛೇದದಿಂದ ಉಂಟಾದ ಆಳವಾದ ಗಾಯಗಳ ಮುಖಗಳಿಂದ–ಪರ್ವತಗಳಲ್ಲಿರುವ ಗುಹೆಗಳ ಮುಖ

ಗಳಿಂದ ಗೈರಿಕಾದಿಧಾತುಮಿಶ್ರಿತವಾದ ನೀರು ಪ್ರಸ್ರವಿಸುವಂತೆ–ಶಸ್ತ್ರಾಘಾತ ಗಳಿಂದ ಶರೀರಗಳಲ್ಲಿ ಉಂಟಾದ ಗಾಯಗಳಿಂದ ಧಾರಾಕಾರವಾಗಿ ರಕ್ತವನ್ನು ಸುರಿಸುತ್ತಿರುವ ಆನೆಗಳನ್ನು ನೋಡು. ಹಲವು ಆನೆಗಳು ನಿನ್ನ ಬಾಣಗಳ ಆಘಾತಗಳಿಂದ ಅಸುನೀಗಿ ಭೂಮಿಯ ಮೇಲೆ ಪರ್ವತೋಪಮವಾಗಿ ಬಿದ್ದಿವೆ.

ಸುವರ್ಣಾಭರಣಗಳಿಂದ ಸಮಲಂಕೃತವಾದ ನೂರಾರು ಕುದುರೆಗಳು ಸತ್ತುಬಿದ್ದಿರುವುದನ್ನು ನೋಡು ; ಪಾರ್ಥ! ಈ ರಥಗಳಂತೂ ಗಂಧರ್ವ ನಗರಿಗಳಿಗೆ ಸಮಾನವಾಗಿದ್ದುವು. ಕೆಲವು ರಥಗಳ ಕುದುರೆಗಳು ಸತ್ತು ಹೋಗಿವೆ. ಕೆಲವು ರಥಗಳಿಗೆ ಚಕ್ರಗಳೇ ಇಲ್ಲ. ಕೆಲವು ರಥಗಳು ಸಾರಥಿ ಯಿಂದ ವಿಹೀನವಾಗಿವೆ. ಕೆಲವು ರಥಗಳ ತೋಮರಗಳು ಮುರಿದಿವೆ. ಕೆಲವು ರಥಗಳ ಈಷಾದಂಡಗಳು ಭಗ್ನವಾಗಿ ಹೋಗಿವೆ. ನೊಗಗಳು ಚೂರು-ಚೂರಾಗಿವೆ. ಭೂಮಿಯ ಮೇಲೆ ಪ್ರಾಣಗಳನ್ನು ತೊರೆದು ಬಿದ್ದಿ ರುವ ಈ ಕುದುರೆಗಳನ್ನಾದರೂ ನೋಡು ; ಪಾರ್ಥ! ಇವುಗಳು ವಿಮಾನ ಗಳಂತೆಯೇ ಕಾಣುತ್ತಿವೆ. ನೂರಾರು ಸಾವಿರಾರು ಸಂಖ್ಯೆಯಲ್ಲಿ ಪದಾತಿಗಳು ಸತ್ತುಬಿದ್ದಿರುವುದನ್ನು ನೋಡು. ಅರ್ಜುನ! ಕೆಲವರು ಧನುಸ್ಸುಗಳೊಡನೆ, ಕೆಲವರು ಗುರಾಣಿಗಳೊಡನೆ ರಕ್ತದಲ್ಲಿ ತೋಯ್ದು ಭೂಮಿಯ ಮೇಲೆ ಸತ್ತುಬಿದ್ದಿದ್ದಾರೆ. ನಿನ್ನ ಬಾಣಗಳಿಂದ ಛಿನ್ನ-ಭಿನ್ನವಾದ ದೇಹಗಳಿಂದ ಕೂಡಿರುವ ಯೋಧರನ್ನು ನೋಡು. ಇವರ ತಲೆಗೂದಲುಗಳು ಧೂಳಿನಿಂದ ಆವೃತವಾಗಿ ಹಾಳಾಗಿಹೋಗಿವೆ. ಇವರು ತಮ್ಮ ಎಲ್ಲ ಅಂಗಗಳಿಂದಲೂ ಭೂಮಿಯನ್ನು ಆಲಿಂಗಿಸಿಕೊಂಡು ಗತಪ್ರಾಣರಾಗಿ ಮಲಗಿದ್ದಾರೆ. ನರ ಶ್ರೇಷ್ಠನೇ! ಈ ರಣಾಂಗಣವನ್ನು ನೋಡು. ಇದನ್ನು ನೋಡಲು ಬಹಳ ಕಷ್ಟವೇ ಆಗುತ್ತದೆ. ಹತವಾಗಿ ಕೆಳಗೆ ಬಿದ್ದಿರುವ ಗಜಾಶ್ವ-ರಥಗಳಿಂದ ಈ ರಣಾಂಗಣವು ತುಂಬಿಹೋಗಿದೆ. ರಕ್ತ, ವಸೆ ಮತ್ತು ಮಾಂಸಗಳ ಸಮ್ಮಿಶ್ರಣ ದಿಂದ ಉಂಟಾದ ಕೆಸರಿನಿಂದ ರಣಾಂಗಣವು ತುಂಬಿಹೋಗಿದೆ. ಈ ರಣಾಂಗಣವು ರಾಕ್ಷಸರಿಗೂ, ನಾಯಿ-ತೋಳಗಳಿಗೂ, ಪಿಶಾಚಿಗಳಿಗೂ ಆನಂದದಾಯಕವಾಗಿದೆ. ಪ್ರಭುವೇ! ರಣಾಂಗಣದಲ್ಲಿ ಇಂತಹ ಯಶೋ ವರ್ಧಕವಾದ ಸಾಹಸಕರ್ಮವನ್ನು ಮಾಡುವ ಶಕ್ತಿಯು ನಿನ್ನಲ್ಲಿದೆ ಮತ್ತು

ಮಹಾಯುದ್ಧದಲ್ಲಿ ದೈತ್ಯ-ದಾನವರನ್ನು ವಿಧ್ವಂಸಮಾಡುವ ದೇವಶ್ರೇಷ್ಠನಾದ ಇಂದ್ರನಲ್ಲಿಯೂ ಸಹ ಇದೇ ಶಕ್ತಿಯಿದೆ (ಮತ್ತಾರಲ್ಲಿಯೂ ನಾನು ಇಂತಹ ಅಮೋಘಶಕ್ತಿಯನ್ನು ಕಂಡಿಲ್ಲ )."

ಮಹಾರಾಜ! ಹೀಗೆ ಶ್ರೀಕೃಷ್ಣನು ಅರ್ಜುನನಿಗೆ ರಣಭೂಮಿಯನ್ನು ತೋರಿಸುತ್ತಾ, ಅಲ್ಲಿ ಸೇರಿದ್ದ ತನ್ನ ಬಂಧುಜನರೊಡನೆ ಕೂಡಿಕೊಂಡು ಪಾಂಚಜನ್ಯವನ್ನೂದಿದನು. ಶತ್ರುಹಂತಕನಾದ ಜನಾರ್ದನನು–ಸತ್ತು ಹೋಗಿದ್ದ ಶತ್ರುಸೈನಿಕರಿಂದ ವ್ಯಾಪ್ತವಾಗಿದ್ದ ಆ ರಣಭೂಮಿಯನ್ನು ಅರ್ಜುನನಿಗೆ ತೋರಿಸುತ್ತಾ ಅಜಾತಶತ್ರುವಿನ ಸಮೀಪಕ್ಕೆ ಬೇಗನೆ ಬಂದು ಜಯದ್ರಥನು ಹತನಾದನೆಂಬ ವಾರ್ತೆಯನ್ನು ನಿವೇದಿಸಿದನು.

ಗಳಲನೆಯ ಅಧ್ಯಾಯವು ಮುಗಿಯಿತು.

ಗ೪೯ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಯುಧಿಷ್ಠಿರನಿಗೆ ವಿಜಯದ ವಾರ್ತೆಯನ್ನು ತಿಳಿಸಿದುದು : ಯುಧಿಷ್ಠಿರನು ಶ್ರೀಕೃಷ್ಣನನ್ನು ಸುತ್ತಿಗೈಯ್ದುದು ಮತ್ತು ಭೀಮಾರ್ಜುನ-ಸಾತ್ಯಕಿಗಳನ್ನೂ ಅಭಿನಂದಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಅರ್ಜುನನು ಸೈಂಧವನನ್ನು ಸಂಹರಿಸಿದನಂತರ ಆನಂದತುಂದಿಲನಾಗಿದ್ದ ಶ್ರೀಕೃಷ್ಣನು ಧರ್ಮಪುತ್ರನಾದ ಯುಧಿಷ್ಠಿರನ ಬಳಿಗೆ ಬಂದು ರಾಜನಿಗೆ ನಮಸ್ಕರಿಸಿ ಹೇಳಿದನು :

**ದಿಷ್ಟ್ಯಾ ವರ್ಧಸಿ ರಾಜೇನ್ದ್ರ ಹತಶತ್ರುರ್ನರೋತ್ತಮ ।**
**ದಿಷ್ಟ್ಯಾ ನಿಸ್ತೀರ್ಣವಾಂಶ್ಚೈವ ಪ್ರತಿಜ್ಞಾಮನುಜಸ್ತವ ॥೨॥**

"ರಾಜೇಂದ್ರ! ಸೌಭಾಗ್ಯವಶದಿಂದ ನೀನು ಅಭಿವೃದ್ಧಿಹೊಂದುತ್ತಿರುವೆ. ನೀನೀಗ ಹತಶತ್ರುವಾಗಿರುವೆ (ನಿನ್ನ ಶತ್ರುವು ಮರಣಹೊಂದಿದ್ದಾನೆ). ಅದೃಷ್ಟವಿಶೇಷದಿಂದಲೇ ನಿನ್ನ ತಮ್ಮನೂ ತಾನು ಮಾಡಿದ್ದ ಪ್ರತಿಜ್ಞೆಯನ್ನು ದಾಟಿದ್ದಾನೆ (ಪ್ರತಿಜ್ಞೆಯನ್ನು ಮುಗಿಸಿ ಬಂದಿದ್ದಾನೆ)."

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿದೊಡನೆಯೇ ಪರಪುರಂಜಯ

ನಾದ ಧರ್ಮರಾಜನು ಪರಮಹೃಷ್ಟನಾಗಿ ತಾನು ಕುಳಿತಿದ್ದ ರಥದಿಂದ ಧುಮುಕಿ ಎರಡು ಕಣ್ಣುಗಳಿಂದಲೂ ಆನಂದಾಶ್ರುಗಳನ್ನು ಸುರಿಸುತ್ತಾ, ಕೃಷ್ಣಾರ್ಜುನರಿಬ್ಬರನ್ನೂ ಆಲಿಂಗಿಸಿಕೊಂಡನು. ಯುಧಿಷ್ಠಿರನು ಕಮಲದ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ಅಶ್ರುಪೂರ್ಣವಾಗಿದ್ದ ತನ್ನ ಸುಂದರವಾದ ಮುಖವನ್ನು ಒರೆಸಿಕೊಂಡು, ವಾಸುದೇವನನ್ನೂ ಮತ್ತು ಪಾರ್ಥನನ್ನೂ ಕುರಿತು ಹೇಳಿದನು :



"ಪದ್ಮಾಕ್ಷನೇ! ನಿನ್ನಿಂದ ಅತ್ಯಂತಪ್ರಿಯವಾದ ಈ ಮಾತನ್ನು ಕೇಳಿದನಂತರ ನನ್ನ ಸಂತೋಷಕ್ಕೆ ಪಾರವೇ ಇಲ್ಲವಾಗಿದೆ. ಸಮುದ್ರವನ್ನು ದಾಟಲು ಇಚ್ಛಿಸುವವನು ಅದರ ಪಾರವನ್ನು ಕಾಣದಿರುವಂತೆ–ನಾನು ಈ

ಸಂತೋಷದ ಪಾರವನ್ನೇ ಕಾಣುತ್ತಿಲ್ಲ. ಕೃಷ್ಣ! ಧೀಮಂತನಾದ ಅರ್ಜುನನು ನಿಶ್ಚಯವಾಗಿಯೂ ಪರಮಾದ್ಭುತವಾದ ಕಾರ್ಯವನ್ನೇ ಮಾಡಿರುವನು. ಸೌಭಾಗ್ಯವಶಾತ್ ಯುದ್ಧದಲ್ಲಿ ಮಹಾರಥರಾದ ನೀವಿಬ್ಬರೂ ಪ್ರತಿಜ್ಞೆಯನ್ನು ಪೂರ್ಣಮಾಡಿ ಮಹಾಭಾರದಿಂದ ಮುಕ್ತರಾಗಿರುವುದನ್ನು ನಾನು ಕಾಣುತ್ತಿದ್ದೇನೆ. ಸೌಭಾಗ್ಯವಶಾತ್ ಪುರುಷಾಧಮನಾದ, ಪಾಪಿಷ್ಠನಾದ ಸೈಂಧವನು ಹತನಾದನು. ಕೃಷ್ಣ! ಗೋವಿಂದ! ನಿನ್ನಿಂದ ಸುಗುಪ್ತನಾಗಿದ್ದ ಅರ್ಜುನನು ಅದೃಷ್ಟವಿಶೇಷದಿಂದಲೇ ಜಯದ್ರಥನನ್ನು ಸಂಹರಿಸಿ ನನಗೆ ಪರಮಾನಂದವನ್ನುಂಟುಮಾಡಿದ್ದಾನೆ.

**ಕಿಂ ತು ನಾತ್ಯದ್ಭುತಂ ತೇಷಾಂ ಯೇಷಾಂ ನಸ್ತ್ವಂ ಸಮಾಶ್ರಯಃ ।**
**ನ ತೇಷಾಂ ದುಷ್ಕೃತಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ॥೯॥**

**ಸರ್ವಲೋಕಗುರುರ್ಯೇಷಾಂ ತ್ವಂ ನಾಥೋ ಮಧುಸೂದನ ।**
**ತ್ವತ್ಪ್ರಸಾದಾದ್ಧಿ ಗೋವಿನ್ದ ವಯಂ ಜೇಷ್ಯಾಮಹೇ ರಿಪೂನ್ ॥೧೦॥**

ಆದರೆ ನೀನು ಯಾರಿಗೆ ಆಶ್ರಯನಾಗಿರುವೆಯೋ–ಅಂತಹ ನಮಗೆ ವಿಜಯವು ಲಭಿಸುವುದರಲ್ಲಿ ಅದ್ಭುತವೇನಿಲ್ಲ. ಮಧುಸೂದನ! ಸರ್ವ ಲೋಕಗಳಿಗೂ ಗುರುವಾಗಿರುವ ನೀನು ಯಾರಿಗೆ ನಾಥನಾಗಿರುವೆಯೋ– ಅವರಿಗೆ ಮೂರು ಲೋಕಗಳಲ್ಲಿಯೂ ಅಸಾಧ್ಯವಾದ (ದುಷ್ಕರವಾದ) ಕಾರ್ಯವೆಂಬುದೇ ಇರುವುದಿಲ್ಲ. (ನಿನ್ನ ಆಶ್ರಿತರು ಮೂರು ಲೋಕಗಳ ಲ್ಲಿಯೂ ಯಾವುದೇ ಕಾರ್ಯವನ್ನಾದರೂ ಸಾಧಿಸಬಲ್ಲರು.) ಗೋವಿಂದ! ನಿನ್ನ ಅನುಗ್ರಹವಿಶೇಷದಿಂದ ಮಾತ್ರವೇ ನಾವು ಶತ್ರುಗಳನ್ನು ಜಯಿಸುವೆವು.

**ಸ್ಥಿತಿಃ ಸರ್ವಾತ್ಮನಾ ನಿತ್ಯಂ ಪ್ರಿಯೇಷು ಚ ಹಿತೇಷು ಚ ।**
**ತ್ವಾಂ ಚೈವಾಸ್ಮಾಭಿರಾಶ್ರಿತ್ಯ ಕೃತಃ ಶಸ್ತ್ರಸಮುದ್ಯಮಃ ।**
**ಸುರೈರಿವಾಸುರವಧೇ ಶಕ್ರಂ ಶಕ್ರಾನುಜಾಹವೇ ॥೧೧॥**

ಉಪೇಂದ್ರನೇ! ನೀನು ಸರ್ವಾತ್ಮನಾ (ಸರ್ವಪ್ರಕಾರದಿಂದಲೂ) ಎಲ್ಲ ಕಾಲಗಳಲ್ಲಿಯೂ ನಮಗೆ ಪ್ರಿಯವನ್ನುಂಟುಮಾಡುವುದರಲ್ಲಿಯೂ, ಹಿತ ವನ್ನುಂಟುಮಾಡುವುದರಲ್ಲಿಯೂ ನಿರತನಾಗಿರುವೆ. ನಾವೂ ಸಹ ನಿನ್ನನ್ನೇ ಸಂಪೂರ್ಣವಾಗಿ ಅವಲಂಬಿಸಿ ಶಸ್ತ್ರಾಸ್ತ್ರಗಳ ಮೂಲಕವಾಗಿ ಯುದ್ಧದ ಸಿದ್ಧತೆ

ಯನ್ನು ಮಾಡಿದೆವು. ಯಾವ ರೀತಿಯಲ್ಲಿ ದೇವತೆಗಳು ಇಂದ್ರನನ್ನು ಅವಲಂಬಿಸಿ ಅಸುರರ ಸಂಹಾರಕ್ಕಾಗಿ ಅವರೊಡನೆ ಯುದ್ಧಕ್ಕೆ ಹೋಗುತ್ತಾರೆಯೋ–ಅದೇ ರೀತಿಯಲ್ಲಿ ನಾವೂ ಸಹ ನಿನ್ನನ್ನೇ ಅವಲಂಬಿಸಿ ನಮ್ಮ ಶತ್ರುಗಳೊಡನೆ ಯುದ್ಧಮಾಡುತ್ತಿದ್ದೇವೆ.

ಜನಾರ್ದನ! ನಿಜವಾಗಿ ಹೇಳುವುದಾದರೆ ಅರ್ಜುನನು ಈಗ ಮಾಡಿರುವ ಅದ್ಭುತಕರ್ಮವು ದೇವತೆಗಳಿಂದಲೂ ಸಾಧ್ಯವಾಗತಕ್ಕುದಲ್ಲ. ಆದರೆ ನಿನ್ನ ಬುದ್ಧಿ-ಬಲ-ವೀರ್ಯಗಳ ಸಹಕಾರದಿಂದಲೇ ಅರ್ಜುನನು ಈ ಅದ್ಭುತಕಾರ್ಯವನ್ನು ಮಾಡಿ ಮುಗಿಸಿದ್ದಾನೆ.

ಕೃಷ್ಣ! ಚಿಕ್ಕಂದಿನಿಂದಲೂ ನೀನು ಮಾಡಿರುವ ಅತಿಮಾನುಷವಾದ, ದಿವ್ಯವಾದ, ಅತ್ಯದ್ಭುತವಾದ ಅನೇಕ ಕರ್ಮಗಳನ್ನು ನಾನು ಕೇಳಿದ್ದೇನೆ. ಆಗಿನಿಂದಲೇ ನಾನು ನಿನ್ನ ಅವಲಂಬನೆಯಿಂದಾಗಿ ನನ್ನ ಶತ್ರುಗಳೆಲ್ಲರೂ ಹತರಾಗಿ ಹೋದರೆಂದೂ, ರಾಜ್ಯವನ್ನು ನಾನು ಮತ್ತೆ ಪಡೆದುಕೊಂಡೆನೆಂದೂ ಭಾವಿಸಿರುವೆನು. ಶತ್ರುಸೂದನನೇ! ನಿನ್ನ ಅನುಗ್ರಹದಿಂದಲೇ ಪ್ರಾಪ್ತವಾದ ಪರಾಕ್ರಮದಿಂದ ಇಂದ್ರನು ಸಾವಿರಾರು ದೈತ್ಯರನ್ನು ಸಂಹರಿಸಿ ದೇವರಾಜನ ಪದವಿಯಲ್ಲಿ ಪ್ರತಿಷ್ಠಿತನಾದನು. ಹೃಷೀಕೇಶ! ವೀರನೇ! ನಿನ್ನ ಪ್ರಸನ್ನತೆಯಿಂದಲೇ ಸ್ಥಾವರ-ಜಂಗಮಾತ್ಮಕವಾದ ಈ ಜಗತ್ತು ತನ್ನ ಮಾರ್ಗದಲ್ಲಿ ಸ್ಥಿರವಾಗಿ ನಿಂತಿದೆ ಮತ್ತು ಜಪ-ಹೋಮಾದಿಕರ್ಮಗಳಲ್ಲಿ ನಿರತವಾಗಿದೆ. ಮೊದಲು ಈ ಪ್ರದೇಶವೆಲ್ಲವೂ ನೀರಿನಿಂದಲೇ ಸಂಪೂರ್ಣವಾಗಿ ತುಂಬಿ ಹೋಗಿದ್ದಿತು. ಭೂಭಾಗವೇ ಇರಲಿಲ್ಲ. ಸರ್ವತ್ರ ಕತ್ತಲೆಯೇ ಆವರಿಸಿದ್ದಿತು. ಮಹಾಬಾಹುವೇ! ನರೋತ್ತಮನೇ! ನಿನ್ನ ಪ್ರಸನ್ನತೆಯಿಂದಲೇ ಈ ಸ್ಥಾವರ-ಜಂಗಮಾತ್ಮಕವಾದ ಜಗತ್ತಿನ ಪ್ರತಿಷ್ಠಾನವಾಯಿತು. ಸರ್ವಲೋಕಗಳ ಸೃಷ್ಟಿಗೂ ಕಾರಣನಾದ, ಪರಮಾತ್ಮನಾದ, ಅವಿನಾಶಿಯಾದ, ಹೃಷೀಕೇಶನಾದ ನಿನ್ನನ್ನು ಯಾರು ಸಂದರ್ಶಿಸುತ್ತಾರೆಯೋ–ಅವರೆಂದಿಗೂ ಮೋಹಪರವಶರಾಗುವುದಿಲ್ಲ. ಪುರಾಣಪುರುಷನಾದ, ಪರದೇವತೆಯಾದ, ದೇವದೇವನಾದ, ಸನಾತನನಾದ, ಸುರಗುರುವಾದ ನಿನಗೆ ಯಾರು ಶರಣಾಗುತ್ತಾರೆಯೋ ಅವರೆಂದಿಗೂ ಮೋಹಕ್ಕೆ ವಶರಾಗುವುದಿಲ್ಲ. ಹೃಷೀಕೇಶನೇ! ಆದಿ ಮತ್ತು ಅಂತ್ಯಗಳಿಂದ ರಹಿತನಾದ, ದೇವದೇವನಾದ, ಲೋಕಕರ್ತ

ನಾದ, ಅವ್ಯಯನಾದ ನಿನ್ನನ್ನು ಯಾರು ಭಕ್ತಿಭಾವದಿಂದ ಕಾಣುತ್ತಾರೆಯೋ–ಅವರು ದಾಟಲು ಅಸಾಧ್ಯವಾದ ಕಷ್ಟಗಳನ್ನೂ ದಾಟುತ್ತಾರೆ. ಸಕಲವಿಧವಾದ ಸಂಕಟಗಳಿಂದಲೂ ಪಾರಾಗುತ್ತಾರೆ.

ಶ್ರೇಷ್ಠವಾದುದೂ, ಪುರಾತನಪುರುಷಸ್ವರೂಪವಾದುದೂ, ಶ್ರೇಷ್ಠವಾದುದೆಲ್ಲಕ್ಕೂ ಶ್ರೇಷ್ಠವಾದುದು ಯಾವುದಿದೆಯೋ (ಯಾವ ಪರಬ್ರಹ್ಮವಸ್ತುವಿದೆಯೋ)–ಅಂತಹ ಶ್ರೇಷ್ಠವಾದ ಪರಬ್ರಹ್ಮವಸ್ತುವನ್ನು ಹೊಂದಿದವನಿಗೆ (ಆತ್ಮಜ್ಞಾನಿಗೆ) ಶ್ರೇಷ್ಠವಾದ ಪರಮಸುಖವು ಲಭಿಸುತ್ತದೆ. (ಅಂತಹ ಪರಬ್ರಹ್ಮಸ್ವರೂಪನು ನೀನೇ ಆಗಿರುವೆ.)

ಯಾವನನ್ನು ಕುರಿತು ನಾಲ್ಕು ವೇದಗಳೂ ಗಾನಮಾಡುತ್ತವೆಯೋ, ಯಾವನು ವೇದಗಳಲ್ಲಿ ಗಾನಮಾಡಲ್ಪಡುತ್ತಾನೆಯೋ (ವೇದಪ್ರತಿಪಾದ್ಯನೋ )–ಅಂತಹ ಮಹಾತ್ಮನಾದ ಶ್ರೀಕೃಷ್ಣನಿಗೆ ಶರಣುಹೊಂದಿ ಸರ್ವೋತ್ತಮವಾದ ಸುಖವನ್ನು ಅನುಭವಿಸುತ್ತೇನೆ. ಐಶ್ವರ್ಯವನ್ನೂ ಪಡೆಯುತ್ತೇನೆ.

**ಪರಮೇಶ ಪರೇಶೇಶ ತಿರ್ಯಗೀಶ ನರೇಶ್ವರ ।**
**ಸರ್ವೇಶ್ವರೇಶ್ವರೇಶೇಶ ನಮಸ್ತೇ ಪುರುಷೋತ್ತಮ ॥೨೩॥**

ಪುರುಷೋತ್ತಮನೇ! ಪರಮೇಶ್ವರನೇ! ತಿರ್ಯಕ್ಪ್ರಾಣಿಗಳಿಗೂ ಈಶ್ವರನಾಗಿರತಕ್ಕವನೇ! ನರೇಶ್ವರನೇ! ಸರ್ವೇಶ್ವರನಾಗಿ, ಇಂದ್ರಾದಿ ಲೋಕಪಾಲರಿಗೂ ಈಶ್ವರನಾಗಿ, ಬ್ರಹ್ಮನಿಗೂ ಸ್ವಾಮಿಯಾಗಿರತಕ್ಕವನೇ! ನಿನಗೆ ನಮಸ್ಕಾರವು.

**ತ್ವಮೀಶೇಶೇಶ್ವರೇಶಾನ ಪ್ರಭೋ ವರ್ಧಸ್ವ ಮಾಧವ ।**
**ಪ್ರಭವಾಪ್ಯಯ ಸರ್ವಸ್ಯ ಸರ್ವಾತ್ಮನ್ಪೃಥುಲೋಚನ ॥೨೪॥**

ವಿಶಾಲನೇತ್ರನೇ! ಮಾಧವನೇ! ಈಶ್ವರರಿಗೂ ಈಶ್ವರನೇ! ಶಾಸಕನೇ! ಪ್ರಭುವೇ! ನೀನು ಪ್ರವರ್ಧಿಸು. (ನಿನ್ನ ಕೀರ್ತಿಯು ದಿಗಂತದವರೆಗೂ ಮೊಳಗಲಿ.) ಎಲ್ಲರಲ್ಲಿಯೂ ಆತ್ಮಸ್ವರೂಪದಿಂದ ಇರತಕ್ಕವನೇ! ಸೃಷ್ಟಿ-ಸ್ಥಿತಿ-ಲಯಗಳೆಲ್ಲಕ್ಕೂ ನೀನೇ ಕಾರಣನಾಗಿರುವೆ. (ನಿನಗೆ ನಮಸ್ಕಾರವು.)

**ಧನಂಜಯಸಖಾ ಯಶ್ಚ ಧನಂಜಯಹಿತಶ್ಚ ಯಃ ।**
**ಧನಂಜಯಸ್ಯ ಗೋಪ್ತಾ ತಂ ಪ್ರಪದ್ಯ ಸುಖಮೇಧತೇ ॥೨೫॥**

ಧನಂಜಯನಿಗೆ ಯಾವನು ಸ್ನೇಹಿತನೋ, ಹಿತೈಷಿಯೋ, ರಕ್ಷಕನೋ–ಅವನನ್ನು (ಅಂತಹ ಶ್ರೀಕೃಷ್ಣನನ್ನು) ಆಶ್ರಯಿಸಿ ಮನುಷ್ಯನು ಸುಖವನ್ನು ಹೊಂದುತ್ತಾನೆ.

ಅನಘನೇ! ಶ್ರೀಕೃಷ್ಣ! ಪ್ರಾಚೀನಮಹರ್ಷಿಗಳಾದ ಮಾರ್ಕಂಡೇಯರು ನಿನ್ನ ಚರಿತ್ರೆಯನ್ನು ಸಂಪೂರ್ಣವಾಗಿ ತಿಳಿದಿರುತ್ತಾರೆ. ಅವರು ಈ ಹಿಂದೆಯೇ (ವನವಾಸಕಾಲದಲ್ಲಿ) ನಿನ್ನ ಪ್ರಭಾವವನ್ನೂ ಮತ್ತು ಮಾಹಾತ್ಮ್ಯವನ್ನೂ ನನ್ನೊಡನೆ ಹೇಳಿದ್ದಾರೆ. ಅಸಿತರೂ, ದೇವಲರೂ, ಮಹಾತಪಸ್ವಿಗಳಾದ ನಾರದರೂ, ನನ್ನ ಪಿತಾಮಹರಾದ ವ್ಯಾಸರೂ ನಿನ್ನನ್ನು ಸರ್ವೋತ್ತಮವಾದ ಪರಬ್ರಹ್ಮವಸ್ತುವೆಂದೇ ಹೇಳಿರುತ್ತಾರೆ.

**ತ್ವಂ ತೇಜಸ್ತ್ವಂ ಪರಂ ಬ್ರಹ್ಮ ತ್ವಂ ಸತ್ಯಂ ತ್ವಂ ಮಹತ್ತಪಃ ।**
**ತ್ವಂ ಶ್ರೇಯಸ್ತ್ವಂ ಯಶಶ್ಚಾಗ್ರ್ಯಂ ಕಾರಣಂ ಜಗತಸ್ತಥಾ ॥೨೮॥**

**ತ್ವಯಾ ಸೃಷ್ಟಮಿದಂ ಸರ್ವಂ ಜಗತ್ಸ್ಥಾವರಜಙ್ಗಮಮ್ ।**
**ಪ್ರಲಯೇ ಸಮನುಪ್ರಾಪ್ತೇ ತ್ವಾಂ ವೈ ನಿವಿಶತೇ ಪುನಃ ॥೨೯॥**

ಕೃಷ್ಣ! ನೀನು ತೇಜಸ್ಸಾಗಿರುವೆ. ಪರಬ್ರಹ್ಮನಾಗಿರುವೆ. ನೀನು ಸತ್ಯಸ್ವರೂಪನು. ಮಹಾತಪಸ್ಸೂ ನೀನೇ ಆಗಿರುವೆ. ನೀನು ಶ್ರೇಯಸ್ಸಿನ ಸ್ವರೂಪನು. ಶ್ರೇಷ್ಠವಾದ ಯಶಸ್ಸಿನ ಸಾಕಾರಮೂರ್ತಿಯು ನೀನು. ಈ ಜಗತ್ತಿಗೆ ಕಾರಣನಾದವನೂ ನೀನೇ. ಸ್ಥಾವರ-ಜಂಗಮಾತ್ಮಕವಾದ ಈ ಜಗತ್ತು ನಿನ್ನಿಂದಲೇ ಸೃಷ್ಟಿಸಲ್ಪಟ್ಟಿತು. ಪ್ರಳಯಕಾಲವು ಪ್ರಾಪ್ತವಾದೊಡನೆಯೇ ಈ ಜಗತ್ತು ಪುನಃ ನಿನ್ನಲ್ಲಿಯೇ ಲೀನವಾಗಿಬಿಡುತ್ತದೆ.

**ಅನಾದಿನಿಧನಂ ದೇವಂ ವಿಶ್ವಸ್ಯೇಶಂ ಜಗತ್ಪತೇ ।**
**ಧಾತಾರಮಜಮವ್ಯಕ್ತಮಾಹುರ್ವೇದವಿದೋ ಜನಾಃ ॥೩೦॥**

ಜಗತ್ಪತಿಯೇ! ವೇದವಿದರಾದ ಪುರುಷರು ನಿನ್ನನ್ನು ಆದಿಮಧ್ಯಾಂತರಹಿತನೆಂದೂ, ದಿವ್ಯಸ್ವರೂಪನೆಂದೂ, ವಿಶ್ವಕ್ಕೇ ಈಶನೆಂದೂ, ಧಾತನೆಂದೂ, ಹುಟ್ಟು-ಸಾವುಗಳಿಲ್ಲದವನೆಂದೂ, ಅವ್ಯಕ್ತನೆಂದೂ ಹೇಳುತ್ತಾರೆ.

**ಭೂತಾತ್ಮಾನಂ ಮಹಾತ್ಮಾನಮನನ್ತಂ ವಿಶ್ವತೋಮುಖಮ್ ।**

**ಅಪಿ ದೇವಾ ನ ಜಾನನ್ತಿ ಗುಹ್ಯಮಾದ್ಯಂ ಜಗತ್ಪತಿಮ್ ।**
**ನಾರಾಯಣಂ ಪರಂ ದೇವಂ ಪರಮಾತ್ಮಾನಮೀಶ್ವರಮ್ ॥೩೧॥**

**ಜ್ಞಾನಯೋನಿಂ ಹರಿಂ ವಿಷ್ಣುಂ ಮುಮುಕ್ಷೂಣಾಂ ಪರಾಯಣಮ್ ।**
**ಪರಂ ಪುರಾಣಂ ಪುರುಷಂ ಪುರಾಣಾನಾಂ ಪರಂ ಚ ಯತ್ ॥೩೨॥**

ವಾಸುದೇವ! ಸರ್ವಭೂತಗಳಲ್ಲಿಯೂ ಆತ್ಮಸ್ವರೂಪನಾಗಿರತಕ್ಕ, ಮಹಾತ್ಮನಾದ, ಅಂತವಿಲ್ಲದ, ವಿಶ್ವವೇ ಮುಖಸ್ವರೂಪನಾಗಿರತಕ್ಕ (ಸರ್ವತ್ರ ಮುಖಗಳುಳ್ಳ ), ನಿಗೂಢನಾದ, ಆದಿಪುರುಷನಾದ, ಜಗತ್ಪತಿಯಾದ, ನೀರೇ ಆಶ್ರಯವಾಗಿರುವ (ನಾರಾಯಣನಾದ), ಪರದೇವತೆಯಾದ, ಪರಮಾತ್ಮನಾದ, ಈಶ್ವರನಾದ, ಜ್ಞಾನಯೋನಿಯಾದ, ಹರಿ-ವಿಷ್ಣುನಾಮಕನಾದ ; ಮೋಕ್ಷೇಚ್ಛುಗಳಿಗೆ ಆಶ್ರಯಸ್ಥಾನನಾದ, ಶ್ರೇಷ್ಠಪುರಾಣಪುರುಷನಾದ, ಪುರಾಣಪುರುಷರೆಲ್ಲರಿಗೂ ಶ್ರೇಷ್ಠನಾದ ನಿನ್ನ ನಿಜಸ್ವರೂಪವನ್ನು ದೇವತೆಗಳೂ ಕೂಡ ತಿಳಿದಿರುವುದಿಲ್ಲ. ದೇವಕೀನಂದನ! ಇವೇ ಮುಂತಾದ ನಿನ್ನ ಗುಣಗಳ ಮತ್ತು ದೇವಲೋಕದಲ್ಲಿ ಮತ್ತು ಭೂಲೋಕದಲ್ಲಿ ಹಿಂದೆ, ಈಗ ಮತ್ತು ಮುಂದೆ ನೀನು ಮಾಡಿದ, ಮಾಡುತ್ತಿರುವ ಮತ್ತು ಮಾಡಲಿರುವ ಕರ್ಮಗಳ ಎಣಿಕೆಮಾಡಿರತಕ್ಕವರು ಯಾರೂ ಇರುವುದಿಲ್ಲ. ಇಂದ್ರನಿಂದ ದೇವತೆಗಳು ರಕ್ಷಿತರಾಗಿರುವಂತೆ–ನಿನ್ನಿಂದ ನಾವು ಸರ್ವಪ್ರಕಾರಗಳಿಂದಲೂ ರಕ್ಷಿಸಲ್ಪಡುತ್ತಿದ್ದೇವೆ. ಸರ್ವಗುಣಸಂಪನ್ನನಾದ ಸನ್ಮಿತ್ರನ ರೂಪದಲ್ಲಿ ನೀನು ನಮಗೆ ಲಭಿಸಿರುವೆ."

ಧರ್ಮರಾಜನು ಮಹಾಯಶೋವಂತನಾದ ಹರಿಯನ್ನು ಹೀಗೆ ಸ್ತೋತ್ರಮಾಡಲಾಗಿ–ಜನಾರ್ದನನು ಧರ್ಮರಾಜನ ಮಾತಿಗೆ ಅನುರೂಪವಾದ ಈ ಮಾತುಗಳಿಂದ ಪ್ರತ್ಯುತ್ತರಿಸಿದನು :

"ಧರ್ಮಜ! ನಿನ್ನ ಉಗ್ರತಪಸ್ಸಿನ ಫಲದಿಂದಲೂ, ಪರಮಧಾರ್ಮಿಕತೆಯಿಂದಲೂ, ಸಾಧುತ್ವದಿಂದಲೂ ಮತ್ತು ಸರಳತೆಯಿಂದಲೂ ಜಯದ್ರಥನು ಹತನಾದನು. ಪುರುಷವ್ಯಾಘ್ರನೇ! ನಿನ್ನ ಶುಭಚಿಂತನವೆಂಬ ವಜ್ರಕವಚದಿಂದಲೇ ಸರ್ವದಾ ಸಂವೃತನಾಗಿರುವ (ರಕ್ಷಿತನಾಗಿರುವ) ಅರ್ಜುನನು ಸಾವಿರಾರು ಯೋಧರನ್ನು ಸಂಹರಿಸಿ ಅನಂತರ ಜಯದ್ರಥ ನನ್ನೂ ಸಂಹರಿಸಿದನು.

**ಕೃತಿತ್ವೇ ಬಾಹುವೀರ್ಯೇ ಚ ತಥೈವಾಸಮ್ಭ್ರಮೇಽಪಿ ಚ ।**
**ಶೀಘ್ರತಾಮೋಘಬುದ್ಧಿತ್ವೇ ನಾಸ್ತಿ ಪಾರ್ಥಸಮಃ ಕ್ವಚಿತ್ ॥೩೮॥**

ಅಸ್ತ್ರವಿದ್ಯೆಯಲ್ಲಿ, ಬಾಹುಬಲದಲ್ಲಿ, ಗಾಬರಿಗೊಳ್ಳದೇ ಇರುವುದರಲ್ಲಿ (ಸ್ಥಿರತೆಯಲ್ಲಿ ), ಹಸ್ತಲಾಘವದಲ್ಲಿ, ಅಮೋಘವಾದ ಬುದ್ಧಿಯಲ್ಲಿ–ಅರ್ಜುನ ನಿಗೆ ಸಮಾನನಾದವನು ಮತ್ತಾರೂ ಇರುವುದಿಲ್ಲ ; ಧರ್ಮಜ!

ಅಂತಹ ಅರ್ಜುನನು ಧರ್ಮಮೂರ್ತಿಯಾದ ನಿನ್ನ ತಮ್ಮನೂ ಆಗಿರುವುದರಿಂದಲೇ ರಣರಂಗದಲ್ಲಿ ಅಪಾರಸಂಖ್ಯೆಯಲ್ಲಿ ಸೈನಿಕರನ್ನೂ ಸಂಹರಿಸಿ, ಸಿಂಧುರಾಜನ ಶಿರಸ್ಸನ್ನೂ ಅಪಹರಿಸಿದನು."

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿದನಂತರ ಆನಂದತುಂದಿಲನಾದ ಧರ್ಮಸುತನು ಅರ್ಜುನನನ್ನು ಗಾಢವಾಗಿ ಆಲಿಂಗಿಸಿಕೊಂಡು ಅವನ ಮುಖವನ್ನು ಒರೆಸುತ್ತಾ ಸುಮಧುರವಚನಗಳಿಂದ ಸಮಾಶ್ವಾಸಿಸುತ್ತಾ ಹೇಳಿದನು :

"ಪಾರ್ಥ! ಅತಿಮಹತ್ತಾದ ಕಾರ್ಯವನ್ನು ಮಾಡಿರುವೆ. ಈ ಕಾರ್ಯದ ಮಹತ್ತ್ವವೆಷ್ಟೆಂದರೆ : ಇಂದ್ರಸಹಿತರಾದ ದೇವತೆಗಳಿಂದಲೂ ಸಾಧಿಸಲು ಸಾಧ್ಯವಾಗದಿರುವ ಮತ್ತು ಹೊಣೆಯನ್ನು ಹೊರಲಾಗದಿರುವ ಕಾರ್ಯವಿದು. ಅಂತಹ ಪರಮದುಃಸಾಧ್ಯವಾದ ಕಾರ್ಯವನ್ನು ನೀನು ಮಾಡಿರುವೆ. ಶತ್ರುಸೂದನನೇ! ಭಾಗ್ಯವಶಾತ್ ನೀನು ನಿನ್ನ ಪರಮಶತ್ರುವನ್ನು ಸಂಹರಿಸಿ ಪ್ರತಿಜ್ಞೆಯ ಭಾರದಿಂದ ಮುಕ್ತನಾಗಿರುವೆ. ಅದೃಷ್ಟವಶಾತ್ ಜಯದ್ರಥನನ್ನು ಸಂಹರಿಸಿ ನೀನು ಮಾಡಿದ್ದ ಪ್ರತಿಜ್ಞೆಯನ್ನು ಸತ್ಯಪ್ರತಿಜ್ಞೆಯನ್ನಾಗಿಸಿರುವೆ."

ಯಶೋವಂತನಾದ ಧರ್ಮರಾಜನು ಗುಡಾಕೇಶನಿಗೆ ಹೀಗೆ ಹೇಳಿ ಪುಣ್ಯಗಂಧಯುಕ್ತವಾದ ತನ್ನ ಹಸ್ತದಿಂದ ಅರ್ಜುನನ ಬೆನ್ನನ್ನು ನೇವರಿಸಿದನು.

ಯುಧಿಷ್ಠಿರನು ಈ ರೀತಿಯಲ್ಲಿ ಕೃಷ್ಣಾರ್ಜುನರನ್ನು ಯಥಾಯೋಗ್ಯವಾಗಿ ಪ್ರಶಂಸೆಮಾಡಿದನಂತರ ಮಹಾತ್ಮರಾದ ಕೇಶವಾರ್ಜುನರಿಬ್ಬರೂ ಧರ್ಮರಾಜನಿಗೆ ಹೇಳಿದರು : "ಮಹಾರಾಜ! ಪಾಪಿಷ್ಠನಾದ ಜಯದ್ರಥ ರಾಜನು ನಿನ್ನ ಕೋಪಾಗ್ನಿಯಿಂದಲೇ ದಗ್ಧನಾಗಿಹೋಗಿದ್ದನು. (ಮೊದಲೇ

ದಗ್ಧನಾಗಿ ಹೋಗಿದ್ದವನನ್ನು ನಾವು ನಿಮಿತ್ತಮಾತ್ರರಾಗಿದ್ದು ಸಂಹರಿಸಿದೆವು.) ನಿನ್ನ ಕೃಪೆಯಿಂದಲೇ ನಮಗೆ ದುರ್ಯೋಧನನ ಸೈನ್ಯಸಾಗರವನ್ನು ದಾಟಿ ಸೈಂಧವನಿದ್ದೆಡೆಗೆ ಹೋಗಲು ಸಾಧ್ಯವಾಯಿತು.

**ಹನ್ಯನ್ತೇ ನಿಹತಾಶ್ಚೈವ ವಿನಂಕ್ಷ್ಯನ್ತಿ ಚ ಭಾರತ ।**
**ತವ ಕ್ರೋಧಹತಾ ಹ್ಯೇತೇ ಕೌರವಾಃ ಶತ್ರುಸೂದನ ॥೪೬॥**

ಶತ್ರುಸೂದನನೇ! ನಿನ್ನ ಕ್ರೋಧಾಗ್ನಿಯಿಂದ ಈ ಮೊದಲೇ ಹತರಾಗಿದ್ದ ಕೌರವಯೋಧರಲ್ಲಿ ಅನೇಕರು ಅಸುನೀಗಿದ್ದಾರೆ. ಅಸುನೀಗುವುದರಲ್ಲಿದ್ದಾರೆ. ಮುಂದಿನ ಕೆಲವು ದಿವಸಗಳಲ್ಲಿ ಎಲ್ಲರೂ ನಿಃಶೇಷವಾಗಿ ವಿನಾಶ ಹೊಂದುತ್ತಾರೆ.

**ತ್ವಾಂ ಹಿ ಚಕ್ಷುರ್ಹಣಂ ವೀರಂ ಕೋಪಯಿತ್ವಾ ಸುಯೋಧನಃ ।**
**ಸಮಿತ್ರಬನ್ಧುಃ ಸಮರೇ ಪ್ರಾಣಾಂಸ್ತ್ಯಕ್ಷ್ಯತಿ ದುರ್ಮತಿಃ ॥೪೭॥**

ಕ್ರೋಧಪೂರ್ವಕವಾದ ದೃಷ್ಟಿಕ್ಷೇಪಮಾತ್ರದಿಂದಲೇ ಶತ್ರುಗಳನ್ನು ಸಂಹಾರಮಾಡುವ ಸಾಮರ್ಥ್ಯವುಳ್ಳ, ವೀರನಾದ ನಿನ್ನನ್ನು ಕೋಪಗೊಳಿಸಿರುವುದರಿಂದಲೇ ದುರ್ಮತಿಯಾದ ಸುಯೋಧನನು ಬಂಧು-ಮಿತ್ರರಿಂದ ಸಮೇತನಾಗಿ ಯುದ್ಧದಲ್ಲಿ ಪ್ರಾಣಗಳನ್ನು ಪರಿತ್ಯಜಿಸುವನು.

**ತವ ಕ್ರೋಧಹತಃ ಪೂರ್ವಂ ದೇವೈರಪಿ ಸುದುರ್ಜಯಃ ।**
**ಶರತಲ್ಪಗತಃ ಶೇತೇ ಭೀಷ್ಮಃ ಕುರುಪಿತಾಮಹಃ ॥೪೮॥**

ದೇವತೆಗಳಿಂದಲೂ ಜಯಿಸಲಸಾಧ್ಯನಾದ, ಕುರುಕುಲಪಿತಾಮಹನಾದ ಭೀಷ್ಮನು ಹಿಂದೆಯೇ ನಿನ್ನ ಕ್ರೋಧಾಗ್ನಿಯಿಂದ ಹತನಾಗಿ ಈಗ ಶರತಲ್ಪದಲ್ಲಿ ಮಲಗಿದ್ದಾನೆ.

**ದುರ್ಲಭೋ ವಿಜಯಸ್ತೇಷಾಂ ಸಂಗ್ರಾಮೇ ರಿಪುಸೂದನ ।**
**ಯಾತಾ ಮೃತ್ಯುವಶಂ ತೇ ವೈ ಯೇಷಾಂ ಕ್ರುದ್ಧೋಽಸಿ ಪಾಣ್ಡವ ॥**

ರಿಪುಸೂದನನೇ! ನೀನು ಯಾರ ವಿಷಯದಲ್ಲಿ ಕ್ರುದ್ಧನಾಗಿರುವೆಯೋ–ಅವರಿಗೆ ಯುದ್ಧದಲ್ಲಿ ವಿಜಯಗಳಿಸುವುದು ದುಃಸಾಧ್ಯವೇ ಸರಿ. ಅವರೆಲ್ಲರೂ ಈಗಾಗಲೇ ಮೃತ್ಯುವಶರಾಗಿಬಿಟ್ಟಿದ್ದಾರೆ.

**ರಾಜ್ಯಂ ಪ್ರಾಣಾಃ ಶ್ರಿಯಃ ಪುತ್ರಾಃ ಸೌಖ್ಯಾನಿ ವಿವಿಧಾನಿ ಚ ।**
**ಅಚಿರಾತ್ತಸ್ಯ ನಶ್ಯನ್ತಿ ಯೇಷಾಂ ಕ್ರುದ್ಧೋಽಸಿ ಮಾನದ ॥೫೦॥**

ಮಾನದನೇ! ನೀನು ಯಾರ ವಿಷಯದಲ್ಲಿ ಕುಪಿತನಾಗುವೆಯೋ–ಅವನ ರಾಜ್ಯ, ಪ್ರಾಣಗಳು, ಸಂಪತ್ತು, ಪುತ್ರರು, ವಿಧ-ವಿಧವಾದ ಸೌಖ್ಯಗಳು ಎಲ್ಲವೂ ಬಹಳ ಬೇಗ ವಿನಾಶಹೊಂದುತ್ತವೆ.

**ವಿನಷ್ಟಾನ್ಕೌರವಾನ್ಮನ್ಯೇ ಸಪುತ್ರಪಶುಬಾನ್ಧವಾನ್ ।**
**ರಾಜಧರ್ಮಪರೇ ನಿತ್ಯಂ ತ್ವಯಿ ಕ್ರುದ್ಧೇ ಪರಂತಪ ॥೫೧॥**

ಪರಂತಪನೇ! ರಾಜಧರ್ಮದಲ್ಲಿಯೇ ಸದಾ ನಿರತನಾಗಿರುವ ನೀನು ಕುಪಿತನಾಗಲಾಗಿ, ಪುತ್ರ-ಪಶು-ಬಂಧುಗಳಿಂದ ಸಮೇತರಾದ ಕೌರವರು ವಿನಾಶವಾಗಿ ಹೋದರೆಂದೇ ನಾನು ಭಾವಿಸುತ್ತೇನೆ. (ಆದುದರಿಂದ ನಮ್ಮ ಈ ವಿಜಯಕ್ಕೆ ನಿನ್ನ ಕೋಪವೇ ಸಾಧನವಾಗಿದೆ. ನಾವು ನೆಪಕ್ಕೆ ಮಾತ್ರ ಯುದ್ಧಮಾಡಿದ್ದೇವೆ.)"

ಮಹಾರಾಜ! ಅನಂತರ ಬಾಣಗಳಿಂದ ಕ್ಷತ-ವಿಕ್ಷತರಾಗಿದ್ದ, ಮಹಾ ಧನುಷ್ಮಂತರಾದ, ಮಹಾಬಾಹುಗಳಾದ, ಮಹಾರಥರಾದ ಭೀಮ-ಸಾತ್ಯಕಿಯರು ಪಾಂಡವಜ್ಯೇಷ್ಠನಾದ, ಗುರುವಾದ ಯುಧಿಷ್ಠಿರನಿಗೆ ಅಭಿವಾದನ ಪೂರ್ವಕವಾಗಿ ನಮಸ್ಕಾರಮಾಡಿ ಪಾಂಚಾಲರಿಂದ ಪರಿವೃತರಾಗಿ ನೆಲದ ಮೇಲೆ ಕುಳಿತರು. ಸಂತೋಷಭರಿತರಾಗಿದ್ದ, ಬದ್ಧಾಂಜಲಿಗಳಾಗಿದ್ದ, ತನ್ನ ಎದುರಿನಲ್ಲಿ ಕುಳಿತಿದ್ದ ವೀರರಾದ ಭೀಮ-ಸಾತ್ಯಕಿಯರನ್ನು ನೋಡಿ ಯುಧಿಷ್ಠಿರನು ಅವರಿಬ್ಬರನ್ನೂ ಅಭಿನಂದಿಸಿದನು :

"ಶೂರರೇ! ಸೌಭಾಗ್ಯವಶದಿಂದ ನೀವಿಬ್ಬರೂ ಶತ್ರುಸೈನ್ಯಸಾಗರದಿಂದ ಪಾರಾಗಿ ಬಂದಿರುವುದನ್ನು ಕಾಣುತ್ತಿದ್ದೇನೆ. ಆ ಸೈನ್ಯಸಾಗರವು ಸಾಧಾರಣ ವಾದುದಲ್ಲ. ದ್ರೋಣರೆಂಬ ತಿಮಿಂಗಿಲದಿಂದ ಕೂಡಿದ್ದು ಎದುರಿಸಲು ಅಸಾಧ್ಯವಾಗಿದ್ದಿತು. ಆ ಸೇನಾಸಮುದ್ರವು ಕೃತವರ್ಮನೆಂಬ ಮೊಸಳೆಗೆ ವಾಸಸ್ಥಾನವಾಗಿದ್ದಿತು. ಅದೃಷ್ಟವಶಾತ್ ಪೃಥ್ವಿಯ ಎಲ್ಲ ರಾಜರೂ ನಿರ್ಜಿತರಾದರು. ಯುದ್ಧದಲ್ಲಿ ವಿಜಯಗಳಿಸಿ ಬಂದಿರುವ ನಿಮ್ಮನ್ನು ನಾನು ನೋಡುತ್ತಿದ್ದೇನೆ. ಇದು ನಿಶ್ಚಯವಾಗಿಯೂ ಸೌಭಾಗ್ಯದ ವಿಷ

ಯವೇ ಸರಿ. ಸೌಭಾಗ್ಯವಶಾತ್ ನೀವು ದ್ರೋಣರನ್ನೂ, ಮಹಾಬಲನಾದ ಹಾರ್ದಿಕ್ಯನನ್ನೂ ಜಯಿಸಿರುವಿರಿ. ಕರ್ಣನೂ ಸಹ ನೀವು ಬಿಟ್ಟ ಬಾಣಗಳಿಂದ ಪರಾಭವವನ್ನು ಹೊಂದಿದನು. ಪುರುಷರ್ಷಭನಾದ ಶಲ್ಯನೂ ನಿಮ್ಮ ಬಾಣಗಳ ಪ್ರಹಾರವನ್ನು ತಾಳಲಾರದೇ ಯುದ್ಧದಿಂದ ವಿಮುಖನಾಗಿ ಹೋದನು. ಯುದ್ಧವಿಶಾರದರಾದ, ರಥಿಗಳಲ್ಲಿ ಶ್ರೇಷ್ಠರಾದ ನೀವಿಬ್ಬರೂ ರಣಾಂಗಣದಿಂದ ಕುಶಲಿಗಳಾಗಿ ಬಂದಿರುವುದನ್ನು ನಾನು ನೋಡುತ್ತಿದ್ದೇನೆ. ನಾನು ಹೇಳಿದಂತೆ ಕಾರ್ಯಮಾಡುವ, ವೀರರಾದ, ನನ್ನ ಮೇಲಿನ ಗೌರವದಿಂದ ನನ್ನ ಆಜ್ಞೆಗೆ ಕಟ್ಟುಬಿದ್ದ ನೀವು ಸೈನ್ಯಸಾಗರವನ್ನು ದಾಟಿ ಬಂದಿರುವುದನ್ನು ಅದೃಷ್ಟವಶಾತ್ ಕಾಣುತ್ತಿದ್ದೇನೆ." ಮಹಾರಾಜ! ಹೀಗೆಂಬುದಾಗಿ ಯುಧಿಷ್ಠಿರನು ಯುಯುಧಾನ-ವೃಕೋದರರರನ್ನೂ ಪ್ರಶಂಸಿಸಿ, ಸಂತೋಷಾಧಿಕ್ಯದಿಂದ ಪುರುಷವ್ಯಾಘ್ರರಾದ ಇಬ್ಬರನ್ನೂ ಬಾಚಿ ತಬ್ಬಿಕೊಂಡು ಆನಂದಬಾಷ್ಪಗಳನ್ನು ಸುರಿಸಿದನು. ಅನಂತರ ಪಾಂಡವರ ವಿಜಯದಿಂದಾಗಿ ಸರ್ವಸೈನ್ಯವೂ ಹೃಷ್ಟವೂ-ಸಂತೋಷಭರಿತವೂ ಆಯಿತು. ಪಾಂಡವರ ಆ ಸೈನ್ಯವು ಪುನಃ ಯುದ್ಧಮಾಡಲು ಮನಸ್ಸುಮಾಡಿತು."

೧೪೯ನೆಯ ಅಧ್ಯಾಯವು ಮುಗಿಯಿತು.

೧೫೦ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ವ್ಯಾಕುಲಿತನಾದ ದುರ್ಯೋಧನನು ಖೇದಗೊಂಡು ದ್ರೋಣರನ್ನು ನಿಂದಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಸೈಂಧವನು ಹತನಾದನಂತರ ನಿನ್ನ ಮಗನಾದ ದುರ್ಯೋಧನನು ಕಂಬನಿದುಂಬಿದ ಕಣ್ಣುಗಳಿಂದ ಕೂಡಿದವನೂ, ದೀನನೂ, ಶತ್ರುಗಳನ್ನು ಜಯಿಸುವುದರಲ್ಲಿ ನಿರುತ್ಸಾಹಿಯೂ ಆದನು. ಸರ್ವಲೋಕಗಳಿಗೂ ಅಪರಾಧವನ್ನೆಸಗಿದ, ಕುಗ್ಗಿದ ಮನಸ್ಸಿನಿಂದ ಕೂಡಿದ್ದ, ದುಷ್ಟನಾದ ನಿನ್ನ ಮಗನು ಭಗ್ನವಾದ ವಿಷದ ಹಲ್ಲುಳ್ಳ ಸರ್ಪದಂತೆ–ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಬಹಳವಾದ ಮಾನಸಿಕಸಂಕಟಕ್ಕೊಳಗಾದನು. ರಣರಂಗದಲ್ಲಿ ಭೀಮಾರ್ಜುನ-ಸಾತ್ಯಕಿಯರು ತನ್ನ ಸೈನ್ಯದಲ್ಲೆಸಗಿದ ಘೋರ

ವಾದ ಸಂಹಾರಕ್ರಿಯೆಯನ್ನು ಕಂಡ ದುರ್ಯೋಧನನು ಕಾಂತಿಹೀನನೂ, ಕೃಶನೂ, ದೀನನೂ ಆಗಿದ್ದನು. ಅವನ ಎರಡು ಕಣ್ಣುಗಳಲ್ಲಿಯೂ ನೀರು ತುಂಬಿಕೊಂಡಿದ್ದಿತು. "ಅರ್ಜುನನಿಗೆ ಸಮಾನರಾದ ಯೋಧರು ಪ್ರಪಂಚ ದಲ್ಲಿಯೇ ಯಾರೂ ಇರುವುದಿಲ್ಲ"–ಎಂದು ದುರ್ಯೋಧನನು ಆಗ ಭಾವಿ ಸಿದನು. "ದ್ರೋಣರಾಗಲೀ, ಕರ್ಣನಾಗಲೀ, ಅಶ್ವತ್ಥಾಮನಾಗಲೀ, ಕೃಪರಾಗಲೀ–ಕ್ರುದ್ಧನಾದ ಅರ್ಜುನನ ಎದುರಿನಲ್ಲಿ ನಿಂತು ಯುದ್ಧಮಾಡಲು ಸಮರ್ಥರಲ್ಲ"–ಎಂಬ ಅರಿವು ಆಗ ಅವನಿಗುಂಟಾಯಿತು.

ದುರ್ಯೋಧನನ ಮನಸ್ಸಿನಲ್ಲಿ ವಿಷಯಗಳು ಹೀಗೆ ಸುಳಿದಾಡಿದುವು : "ನನ್ನ ಎಲ್ಲ ಮಹಾರಥರನ್ನೂ ಪಾರ್ಥನು ಜಯಿಸಿ ಯುದ್ಧದಲ್ಲಿ ಸೈಂಧವನನ್ನೂ ಸಂಹರಿಸಿದನು. ಆಗ ಅವನನ್ನು ಯಾರೂ ತಡೆಯಲಾಗಲಿಲ್ಲ.

**ಸರ್ವಥಾ ಹತಮೇವೇದಂ ಕೌರವಾಣಾಂ ಮಹದ್ಬಲಮ್ ।**
**ನ ಹ್ಯಸ್ಯ ವಿದ್ಯತೇ ತ್ರಾತಾ ಸಾಕ್ಷಾದಪಿ ಪುರಂದರಃ ॥೭॥**

ಕೌರವರ ಈ ಮಹಾಸೈನ್ಯವು ಸರ್ವಥಾ ನಾಶವಾಗಿಹೋಯಿತು. ಈ ಸಮಯದಲ್ಲಿ ಸಾಕ್ಷಾತ್ ಇಂದ್ರನೇ ಬಂದರೂ ಈ ನನ್ನ ಸೈನ್ಯವನ್ನು ರಕ್ಷಿಸಲು ಸಾಧ್ಯವಾಗುವುದಿಲ್ಲ.

**ಯಮುಪಾಶ್ರಿತ್ಯ ಸಂಗ್ರಾಮೇ ಕೃತಃ ಶಸ್ತ್ರಸಮುದ್ಯಮಃ ।**
**ಸ ಕರ್ಣೋ ನಿರ್ಜಿತಃ ಸಂಖ್ಯೇ ಹತಶ್ಚೈವ ಜಯದ್ರಥಃ ॥೮॥**

ಯಾವನ ಮೇಲೆ ಭರವಸೆಯನ್ನಿಟ್ಟುಕೊಂಡು ನಾನು ಈ ಯುದ್ಧಕ್ಕಾಗಿ ಶಸ್ತ್ರಸಂಗ್ರಹಮಾಡಲು ಪ್ರಾರಂಭಿಸಿದೆನೋ–ಅಂತಹ ಕರ್ಣನೂ ಯುದ್ಧದಲ್ಲಿ ಪರಾಜಿತನಾದನು. ಜಯದ್ರಥನೂ ಹತನಾದನು.

**ಯಸ್ಯ ವೀರ್ಯಂ ಸಮಾಶ್ರಿತ್ಯ ಶಮಂ ಯಾಚನ್ತಮಚ್ಯುತಮ್ ।**
**ತೃಣವತ್ತಮಹಂ ಮನ್ಯೇ ಸ ಕರ್ಣೋ ನಿರ್ಜಿತೋ ಯುಧಿ ॥೯॥**

ಯಾರ ವೀರ್ಯ-ಪರಾಕ್ರಮಗಳನ್ನವಲಂಬಿಸಿ ನಾನು ಶಾಂತಿಗಾಗಿ ಯಾಚಿಸಲು ಬಂದ ಅಚ್ಯುತನನ್ನು ತೃಣಕ್ಕಿಂತಲೂ ಕಡೆಯಾಗಿ ಕಂಡೆನೋ– ಅಂತಹ ಕರ್ಣನೇ ಅರ್ಜುನನಿಂದ ನಿರ್ಜಿತನಾಗಿ ಹೋದನು."

ಭರತಶ್ರೇಷ್ಠನೇ! ಧೃತರಾಷ್ಟ್ರ! ಸರ್ವಲೋಕಾಪರಾಧಿಯಾದ ನಿನ್ನ

ಮಗನು ವ್ಯಾಕುಲಚಿತ್ತನಾಗಿ ಹೀಗೆ ಸ್ವಲ್ಪಕಾಲ ಯೋಚಿಸುತ್ತಿದ್ದು ಅನಂತರ ದ್ರೋಣರನ್ನು ಕಾಣಲು ಹೋದನು. ಆಚಾರ್ಯರನ್ನು ಕಂಡು ಅವರಿಗೆ ಕೌರವರು ಬಹುಸಂಖ್ಯೆಯಲ್ಲಿ ಹತರಾದ ವಿಷಯವನ್ನೂ ವಿವರಿಸಿ ಹೇಳಿ, ಶತ್ರುಗಳು ವಿಜಯಗಳಿಸುತ್ತಿರುವುದನ್ನೂ, ಧೃತರಾಷ್ಟ್ರನ ಮಕ್ಕಳು ವಿಪತ್ತೆಂಬ ಸಮುದ್ರದಲ್ಲಿ ಮುಳುಗಿಹೋಗುತ್ತಿರುವುದನ್ನು ತಿಳಿಸಿದನು.

**ಪಶ್ಯ ಮೂರ್ಧಾಭಿಷಿಕ್ತಾನಾಮಾಚಾರ್ಯ ಕದನಂ ಮಹತ್ ।**
**ಕೃತ್ವಾ ಪ್ರಮುಖತಃ ಶೂರಂ ಭೀಷ್ಮಂ ಮಮ ಪಿತಾಮಹಮ್ ॥೧೨॥**

"ಆಚಾರ್ಯರೇ! ನನ್ನ ಪಿತಾಮಹನಾದ, ಶೂರನಾದ ಭೀಷ್ಮನನ್ನು ಮೊದಲು ಮಾಡಿಕೊಂಡು ಮೂರ್ಧಾಭಿಷಿಕ್ತರಾದ ಅನೇಕರಾಜರ ಸಂಹಾರ ವಾಗಿರುವುದನ್ನು ನೋಡಿರಿ. ಅತ್ಯಂತಲುಬ್ಧನಾದ ಶಿಖಂಡಿಯು ಪಿತಾಮಹ ನನ್ನು ಕೊಂದು ಉಲ್ಲಾಸಹೊಂದಿದ ಮನಸ್ಸಿನಿಂದ ಕೂಡಿದವನಾಗಿ ಎಲ್ಲ ಪಾಂಚಾಲರೊಡನೆ ಸೈನ್ಯದ ಅಗ್ರಭಾಗದಲ್ಲಿ ನಿಂತಿದ್ದಾನೆ. ಸವ್ಯಸಾಚಿಯಾದ ಅರ್ಜುನನು ನನ್ನ ಏಳು ಅಕ್ಷೌಹಿಣೀಸೈನ್ಯವನ್ನೂ ಸಂಹಾರಮಾಡಿ ನಿಮ್ಮ ಮತ್ತೊಬ್ಬ ಶಿಷ್ಯನಾದ, ದುರ್ಧರ್ಷನಾದ ಜಯದ್ರಥರಾಜನನ್ನೂ ಸಂಹರಿಸಿ ದನು. ನಮಗೆ ವಿಜಯವನ್ನು ಗಳಿಸಿಕೊಡಬೇಕೆಂದು ಇಚ್ಛೆಸಿ ಬಂದಿದ್ದ, ಉಪ ಕಾರಶೀಲರಾದ, ಯುದ್ಧದಲ್ಲಿ ಪ್ರಾಣಗಳನ್ನು ತೊರೆದು ಯಮನ ಪಟ್ಟಣಕ್ಕೆ ಹೊರಟುಹೋದ ಸುಹೃದರ ಋಣಗಳಿಂದ ನಾನು ಹೇಗೆ ಮುಕ್ತನಾಗಲಿ?

ಯಾವ ವಸುಧಾಧಿಪರು ನನಗೆ ವಸುಧೆಯನ್ನು ಜಯಿಸಿಕೊಡಲಿಚ್ಛೆಸಿ ದ್ದರೋ–ಆ ವಸುಧಾಧಿಪರೇ ಈಗ ವಸುಧೆಯ ಐಶ್ವರ್ಯವೆಲ್ಲವನ್ನೂ ಪರಿ ತ್ಯಜಿಸಿ ವಸುಧೆಯ ಮೇಲೆ ಮಲಗಿದ್ದಾರೆ. ಹೇಡಿಯಾದ ನಾನು ನನ್ನ ಸುಹೃದರ ಈ ವಿಧವಾದ ವಿನಾಶಕ್ಕೆ ಕಾರಣನಾಗಿ ಸಾವಿರ ಅಶ್ವಮೇಧಯಾಗಗಳನ್ನು ಮಾಡಿದರೂ ಈ ಪಾಪವನ್ನು ತೊಳೆದುಕೊಂಡು ಪವಿತ್ರನಾಗಲಾರೆನು. ಲುಬ್ಧನಾದ, ಪಾಪಿಷ್ಠನಾದ, ಧರ್ಮನಾಶಕನಾದ ನನಗೆ ಯುದ್ಧದ ಮೂಲಕವಾಗಿ ವಿಜಯವನ್ನು ಗಳಿಸಿಕೊಡಬೇಕೆಂದು ಇಚ್ಛೆಸಿದ್ದ ನನ್ನ ಮಿತ್ರರೆಲ್ಲರೂ ಯಮಾಲಯಕ್ಕೆ ಹೊರಟುಹೋದರು. ಆಚಾರಭ್ರಷ್ಟನಾದ, ಮಿತ್ರದ್ರೋಹಿಯಾದ ನನಗೆ ರಾಜರ ಸಭೆಯಲ್ಲಿ ಭೂಮಿಯು ಸೀಳಿಹೋಗಿ ಒಳಹೋಗಲು ಏಕೆ ಅವಕಾಶಮಾಡಿಕೊಡಲಿಲ್ಲ? (ಭೂಮಿಯೇನಾ

ದರೂ ನನ್ನನ್ನು ನುಂಗಿಬಿಟ್ಟಿದ್ದರೆ ಈ ವಿಧವಾದ ಸಂಕಟಕ್ಕೆ ಅವಕಾಶವೇ ಇರುತ್ತಿರಲಿಲ್ಲ.) ನನ್ನ ಪಿತಾಮಹನಾದ ಭೀಷ್ಮನು ರಾಜರ ಮಧ್ಯದಲ್ಲಿದ್ದಾಗಲೇ ರಣಾಂಗಣದಲ್ಲಿ ಹತನಾದನು. ರಕ್ತದಿಂದ ನೆನೆಸಲ್ಪಟ್ಟ ಅಂಗಾಂಗಗಳುಳ್ಳ, ಶರತಲ್ಪದ ಮೇಲೆ ಮಲಗಿರುವ ಭೀಷ್ಮನನ್ನು ಆ ಸಮಯದಲ್ಲಿ ರಕ್ಷಿಸಲು ನಾನು ಸಮರ್ಥನಾಗಲಿಲ್ಲ. ತನ್ನ ಪುಣ್ಯಕರ್ಮಗಳಿಂದ ಪರಲೋಕವನ್ನು ಜಯಿಸಿರುವ, ದುರ್ಧರ್ಷನಾದ, ವೀರನಾದ ಭೀಷ್ಮನು–ನಾನು ಅವನ ಬಳಿಗೆ ಹೋದುದಾದರೆ, ನೀಚಪುರುಷನಾದ, ಮಿತ್ರದ್ರೋಹಿಯಾದ, ಧರ್ಮಬಾಹಿರನಾದ ನನ್ನೊಡನೆ ಏನು ಹೇಳಿಯಾನು? (ಸಮಯದಲ್ಲಿ ರಕ್ಷಣೆಮಾಡದೇ ಇದ್ದುದಕ್ಕಾಗಿ ತೆಗಳುವನಲ್ಲವೇ? ) ನನ್ನ ಸಲುವಾಗಿ ಪ್ರಾಣಗಳನ್ನೇ ಪಣವನ್ನಾಗಿಟ್ಟು ನನಗೆ ರಾಜ್ಯವನ್ನು ಜಯಿಸಿಕೊಡುವ ಸಲುವಾಗಿ ಪ್ರಯತ್ನಿಸುತ್ತಿದ್ದ ಮಹಾರಥನಾದ, ಮಹಾಧನುರ್ಧರನಾದ ಜಲಸಂಧನನ್ನು ಸಾತ್ಯಕಿಯು ಸಂಹರಿಸಿದನು. ಆಚಾರ್ಯರೇ! ಇದನ್ನಾದರೂ ತಾವು ಗಮನಿಸಿರಿ. ಕಾಂಬೋಜರಾಜ, ಅಲಂಬುಷ ಮತ್ತು ಇನ್ನೂ ಅನೇಕ ಸುಹೃದರು ಹತರಾಗಿಹೋದನಂತರ ನಾನು ಜೀವಿಸಿ ಮಾಡುವುದಾದರೂ ಏನಿದೆ? (ನಾನು ಜೀವಿಸಿರುವುದೂ ವ್ಯರ್ಥವೇ ಸರಿ.) ಶತ್ರುಸಂತಾಪಕರಾದ ಆಚಾರ್ಯರೇ! ನಮಗೆ ಅಹಿತರಾದವರನ್ನು (ನಮ್ಮ ಶತ್ರುಗಳನ್ನು ) ಜಯಿಸಬೇಕೆಂಬ ಇಚ್ಛೆಯಿಂದ, ನನ್ನ ಸಲುವಾಗಿ ತಮ್ಮ ಶಕ್ತಿಯೆಲ್ಲವನ್ನೂ ಕೇಂದ್ರೀಕರಿಸಿ ಎಂತಹ ದಾರುಣವಾದ ಪರಿಸ್ಥಿತಿಯಲ್ಲಿಯೂ ಪರಾಙ್ಮುಖರಾಗದೇ ಪ್ರಯತ್ನಪೂರ್ವಕವಾಗಿ ಯುದ್ಧಮಾಡುತ್ತಿದ್ದ ಶೂರರಾದ ನನ್ನ ಅನೇಕಸುಹೃದರು ಹತರಾಗಿಹೋದರು. ನನ್ನ ಸಂಪೂರ್ಣವಾದ ಶಕ್ತಿಯನ್ನೂ ಯೋಜಿಸಿ ನನ್ನ ಸುಹೃದರನ್ನು ಸಂಹರಿಸಿದವರನ್ನು ಧ್ವಂಸಮಾಡುವುದರ ಮೂಲಕ ಮಿತ್ರರ ಋಣದಿಂದ ವಿಮುಕ್ತನಾಗಿ, ನಂತರ ಯಮುನೆಯ ಸಮೀಪಕ್ಕೆ ಹೋಗಿ ಅವರೆಲ್ಲರಿಗೂ ಜಲತರ್ಪಣವನ್ನೂ ಕೊಡುತ್ತೇನೆ. ಸರ್ವಶಸ್ತ್ರಧಾರಿಗಳಿಗೂ ಶ್ರೇಷ್ಠರಾದ ಆಚಾರ್ಯರೇ! ನಾನು ಈವರೆಗೆ ಆಚರಿಸಿರುವ ಅಗ್ನಿಹೋತ್ರ, ತಪಸ್ಸು, ವೇದಾನುಪಾಲನ, ಆತಿಥ್ಯ, ವೈಶ್ವದೇವ– ಇವುಗಳ ಮೇಲೂ, ನಾನು ಪ್ರಜೆಗಳ ಉಪಯೋಗಕ್ಕಾಗಿ ಕಟ್ಟಿಸಿರುವ ಬಾವಿ, ಕೆರೆ, ದೇವಾಲಯ, ಅನ್ನಸತ್ರ–ಇವುಗಳ ಮೇಲೂ,

ನನ್ನ ಪರಾಕ್ರಮದ ಮೇಲೂ, ಮಕ್ಕಳ ಮೇಲೂ ಆಣೆಯಿಟ್ಟು ನಿಮ್ಮ ಮುಂದೆ ಸತ್ಯಪ್ರತಿಜ್ಞೆಯನ್ನು ಮಾಡುತ್ತೇನೆ :

**ನಿಹತ್ಯ ತಾನ್ರಣೇ ಸರ್ವಾನ್ಪಾಞ್ಚಾಲಾನ್ಪಾಣ್ಡವೈಃ ಸಹ ।**
**ಶಾನ್ತಿಂ ಲಬ್ಧಾಸ್ಮಿ ತೇಷಾಂ ವಾ ರಣೇ ಗನ್ತಾ ಸಲೋಕತಾಮ್ ॥೨೭॥**

ಪಾಂಡವರೊಡನೆ ಎಲ್ಲ ಪಾಂಚಾಲರನ್ನೂ ಸಂಹರಿಸಿ ಮನಃಶಾಂತಿಯನ್ನು ಪಡೆದುಕೊಳ್ಳುತ್ತೇನೆ. ಅಥವಾ ಕಡೆಯವರೆಗೂ ಹೋರಾಡಿ ಯುದ್ಧದಲ್ಲಿಯೇ ಮಡಿದು ನನ್ನ ಸುಹೃದರು ಹೋಗಿರುವ ಲೋಕಗಳಿಗಾದರೂ ಹೊರಟುಹೋಗುತ್ತೇನೆ. ನನ್ನ ಸಲುವಾಗಿ ಅರ್ಜುನನೊಡನೆ ಯುದ್ಧಮಾಡುತ್ತಾ ಅಸುನೀಗಿದ ಪುರುಷರ್ಷಭರಾದ ನನ್ನ ಸುಹೃದರು ಯಾವ ಲೋಕಗಳಿಗೆ ಹೋಗಿದ್ದಾರೆಯೋ–ಆ ಲೋಕಗಳಿಗೇ ನಾನೂ ಹೊರಟುಹೋಗುತ್ತೇನೆ.

ಮಹಾಭುಜರಾದ ಆಚಾರ್ಯರೇ! ನನಗೆ ಸಹಾಯಮಾಡಲು ಬಂದವರಲ್ಲಿ ಅಳಿದು-ಉಳಿದಿರುವವರೂ ಸಹ ಈಗ ನನಗೆ ಸಹಾಯಮಾಡಲು ಇಚ್ಛಿಸುತ್ತಿಲ್ಲ. ಏಕೆಂದರೆ : ನಾವು ಯುದ್ಧದಲ್ಲಿ ಸಾಹಸವನ್ನು ತೋರಿಸಿ ನಮ್ಮ ಸಹಾಯಕರ ಮನಸ್ಸಿನಲ್ಲಿ ಧೈರ್ಯವನ್ನು ಮೂಡಿಸದಿದ್ದರೆ ಅವರು ನಮಗಾಗಿ ಯುದ್ಧಮಾಡಲಾರರು. ಅವರೀಗ ಪಾಂಡವರನ್ನೇ ಶ್ರೇಷ್ಠರೆಂದು ಭಾವಿಸುತ್ತಿದ್ದಾರೆ. ನಮ್ಮನ್ನು ಹಾಗೆ ತಿಳಿಯುತ್ತಿಲ್ಲ. ರಣರಂಗದಲ್ಲಿ ಸತ್ಯಪ್ರತಿಜ್ಞನಾದ ಭೀಷ್ಮನು ತನ್ನ ಮೃತ್ಯುವನ್ನು ತಾನೇ ತಂದುಕೊಂಡನು. (ಅವನು ಇಚ್ಛಾಮರಣಿಯಾದುದರಿಂದ ಅವನು ಇಚ್ಛಿಸದಿದ್ದರೆ ಮೃತ್ಯುವು ಅವನ ಹತ್ತಿರ ಸುಳಿಯುತ್ತಲೂ ಇರಲಿಲ್ಲ.) ನೀವಾದರೋ ಅರ್ಜುನನು ತಮ್ಮ ಪ್ರಿಯಶಿಷ್ಯನಾದುದರಿಂದ ನಮ್ಮ ಹಿತವನ್ನು ಉಪೇಕ್ಷಿಸುತ್ತಿರುವಿರಿ. ಅಯ್ಯೋ! ನನ್ನ ದುರ್ದೈವವನ್ನು ಏನೆಂದು ಬಣ್ಣಿಸಲಿ? ನನಗೆ ವಿಜಯವನ್ನು ಗಳಿಸಿಕೊಡಬೇಕೆಂದು ಇಚ್ಛಿಸಿದವರೆಲ್ಲರೂ ಹತರಾಗಿಹೋದರು. ಈ ಸಮಯದಲ್ಲಿ ನನಗೆ ಜಯವನ್ನು ಗಳಿಸಿಕೊಡಬೇಕೆಂಬ ಆಶಯವನ್ನು ಕರ್ಣನೊಬ್ಬನಲ್ಲಿ ಮಾತ್ರವೇ ನಾನು ಕಾಣುತ್ತಿದ್ದೇನೆ.

**ಯೋ ಹಿ ಮಿತ್ರಮವಿಜ್ಞಾಯ ಯಾಥಾತಥ್ಯೇನ ಮನ್ದಧೀಃ ।**
**ಮಿತ್ರಾರ್ಥೇ ಯೋಜಯತ್ಯೇನಂ ತಸ್ಯ ಸೋಽರ್ಥೋಽವಸೀದತಿ ॥೩೨॥**

ಮಂದಬುದ್ಧಿಯಾದ ಯಾವ ಮನುಷ್ಯನು ಮಿತ್ರನ ಹೃದಯವನ್ನು ಯಥಾವತ್ತಾಗಿ ತಿಳಿಯದೇ ಮಿತ್ರನು ಮಾಡಬೇಕಾಗಿರುವ ಆಪ್ತಕಾರ್ಯದಲ್ಲಿ ಅವನನ್ನು (ತೋರಿಕೆಯ ಮಿತ್ರನನ್ನು ) ಯೋಜಿಸುತ್ತಾನೆಯೋ–ಅಂತಹವನ ಕೆಲಸವು ಹಾಳಾಗಿಹೋಗುತ್ತದೆ. ಮೋಹಪರವಶನಾದ, ಲಬ್ಧನಾದ, ಪಾಪಿಷ್ಠನಾದ, ಕುಟಿಲನಾದ, ಧನಲೋಭಿಯಾದ (ರಾಜ್ಯಲೋಭಿಯಾದ) ನನ್ನ ಕಾರ್ಯವೂ ಸಹ ಸುಹೃದರೆಂದು ಹೇಳಿಸಿಕೊಳ್ಳುವವರಿಂದ (ಸುಹೃದ ರೆಂದು ಹೇಳಿಸಿಕೊಳ್ಳುವ ನಿಮ್ಮಂತಹವರಿಂದ) ಹೀಗೆಯೇ ಹಾಳಾಯಿತು.

ಜಯದ್ರಥನು ಹತನಾದನು. ವೀರ್ಯವಂತನಾದ ಭೂರಿಶ್ರವಸನೂ ಹತನಾದನು. ಅಭೀಷಾಹರು, ಶೂರಸೇನರು, ಶಿಬಿಗಳು, ವಸಾತಿಗಳು– ಎಲ್ಲರೂ ಶತ್ರುಗಳಿಂದ ವಿಧ್ವಂಸಿತರಾದರು. ನನ್ನ ಸಲುವಾಗಿ ಯುದ್ಧ ಮಾಡುತ್ತಾ ಕಿರೀಟಿಯಿಂದ ಹತರಾದ ಆ ಪುರುಷರ್ಷಭರು ಎಲ್ಲಿಗೆ ಹೋಗಿ ದ್ದಾರೆಯೋ–ಅಲ್ಲಿಗೆ ನಾನೂ ಹೊರಟುಹೋಗುತ್ತೇನೆ. ಆ ಪುರುಷರ್ಷಭರನ್ನು ಬಿಟ್ಟು ನಾನು ಮಾತ್ರ ಜೀವಿಸಿರುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ಪಾಂಡುಪುತ್ರರಿಗೆ ಆಚಾರ್ಯರಾಗಿರುವ ತಾವು ನಾನು ಹೋಗಲು ಅನುಮತಿಯನ್ನು ನೀಡಿರಿ.”

೧೫೦ನೆಯ ಅಧ್ಯಾಯವು ಮುಗಿಯಿತು.

೧೫೧ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದ್ರೋಣರು ದುರ್ಯೋಧನನಿಗೆ ಉತ್ತರಿಸಿದುದು : ದುರ್ಯೋಧನನು ಪುನಃ ಯುದ್ಧಕ್ಕೆ ಹೊರಟುದು

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

“ಮಗು ಸಂಜಯ! ಸಿಂಧುರಾಜನು–ಅರ್ಜುನನಿಂದಲೂ, ಭೂರಿ ಶ್ರವಸನು–ಸಾತ್ಯಕಿಯಿಂದಲೂ ಹತನಾದನಂತರ ನಿನ್ನ ಮನಸ್ಸಿನಲ್ಲಿ ಯಾವ ವಿಧವಾದ ಪರಿಣಾಮವುಂಟಾಯಿತು? ಕೌರವರ ಸಭೆಯಲ್ಲಿ ದ್ರೋಣರನ್ನು

ಉದ್ದೇಶಿಸಿ ದುರ್ಯೋಧನನು ಹೇಳಿದ ಮಾತಿಗೆ ದ್ರೋಣರು ಏನು ಹೇಳಿದರು? ಈ ಎಲ್ಲ ವಿಷಯಗಳನ್ನೂ ನನಗೆ ವಿವರಿಸಿ ಹೇಳು."

"ಮಹಾರಾಜ! ಅರ್ಜುನನು ಸೈಂಧವನನ್ನು ಸಂಹರಿಸಿದುದನ್ನೂ ಮತ್ತು ಸಾತ್ಯಕಿಯು ಭೂರಿಶ್ರವಸನನ್ನು ಸಂಹರಿಸಿದುದನ್ನೂ ಕಂಡು ನಿನ್ನ ಸೈನಿಕರಲ್ಲಿ ದೊಡ್ಡ ಆರ್ತನಾದವುಂಟಾಯಿತು. ದುರ್ಯೋಧನನ ಮಂತ್ರಾಲೋಚನೆಯ ಫಲವಾಗಿ ನೂರಾರು ಕ್ಷತ್ರಿಯರ್ಷಭರು ಹತರಾದ ಕಾರಣ ಅಳಿದುಳಿದ ಕ್ಷತ್ರಿಯಯೋಧರು ದುರ್ಯೋಧನನ ಸಲಹೆಯನ್ನು ಅನಾದರಣೆಮಾಡಿದರು. ದ್ರೋಣರು ನಿನ್ನ ಮಗನು ಹೇಳಿದ ಮಾತುಗಳನ್ನು ಕೇಳಿ ಕುಗ್ಗಿದ ಮನಸ್ಸಿನಿಂದ ಕೂಡಿದವರಾಗಿ, ಸ್ವಲ್ಪಹೊತ್ತು ಅವನು ಹೇಳಿದ ಮಾತುಗಳ ವಿಷಯವಾಗಿಯೇ ಚಿಂತಿಸುತ್ತಿದ್ದು, ಬಹಳ ಸಂಕಟದಿಂದ ದುರ್ಯೋಧನನನ್ನು ಕುರಿತು ಹೇಳಿದರು :

"ದುರ್ಯೋಧನ! ಮಾತುಗಳೆಂಬ ಬಾಣಗಳಿಂದ ನನ್ನನ್ನೇಕೆ ತುಂಡು-ತುಂಡಾಗಿ ಕತ್ತರಿಸುತ್ತಿರುವೆ? ಅರ್ಜುನನು ಯುದ್ಧದಲ್ಲಿ ಅಜಯ್ಯನೆಂಬ ವಿಷಯವನ್ನು ನಿನಗೆ ನಾನು ಯಾವಾಗಲೂ ಹೇಳುತ್ತಲೇ ಇದ್ದೇನೆ. ಕೌರವ! ಅರ್ಜುನನಿಂದ ರಕ್ಷಿತನಾದ ಶಿಖಂಡಿಯು ಭೀಷ್ಮನನ್ನು ಸಂಹರಿಸಿದನು. ಅರ್ಜುನನ ಪೌರುಷವೆಷ್ಟೆಂಬುದನ್ನು ಮನಗಾಣುವುದಕ್ಕೆ ಈ ಒಂದು ದೃಷ್ಟಾಂತವೇ ಸಾಕಾಗಿದೆ. ದೇವ-ದಾನವರಿಂದಲೂ ಅವಧ್ಯನಾದ ಭೀಷ್ಮನು ಅರ್ಜುನನ ರಕ್ಷಣೆಯನ್ನು ಪಡೆದಿದ್ದ ಶಿಖಂಡಿಯಿಂದ ಹತನಾದುದನ್ನು ಕಂಡು ಆಗಲೇ ನಾನು ಕೌರವರ ಸೈನ್ಯವು ಉಳಿಯಲಾರದೆಂಬ ನಿಶ್ಚಯವನ್ನು ಮಾಡಿದೆನು. ಮೂರು ಲೋಕಗಳಲ್ಲಿಯೂ ಇರುವ ಪುರುಷರಲ್ಲಿ ಯಾವನನ್ನು ನಾವು ಶೂರಶ್ರೇಷ್ಠನೆಂದು ಭಾವಿಸಿದ್ದೆವೋ–ಅಂತಹ ಶೂರನಾದ ಭೀಷ್ಮನೇ ಹತನಾಗಿ ಹೋದನಂತರ ಉಳಿದವರಲ್ಲಿ ಯಾರನ್ನು ತಾನೇ ಆಶ್ರಯಿಸೋಣ? (ಅಂತಹ ಮಹಾವೀರನೇ ಹೋದನಂತರ ನಮ್ಮನ್ನು ಶತ್ರುಗಳಿಂದ ರಕ್ಷಿಸುವವರು ಯಾರೂ ಇರುವುದಿಲ್ಲ.)

'ಶಕುನಿಯು ಕೌರವರ ಸಭೆಯಲ್ಲಿ ಯಾವ ಪಗಡೇಕಾಯಿಗಳನ್ನು ನಡೆಸುತ್ತಾ ಜೂಜಾಡುತ್ತಿದ್ದನೋ–ಅವುಗಳು ನಿಜವಾದ ಪಗಡೇಕಾಯಿಗಳಲ್ಲ. ಶತ್ರುಗಳಿಗೆ ಪರಿತಾಪವನ್ನುಂಟುಮಾಡುವ ನಿಶಿತವಾದ ಬಾಣಗಳು'–ಎಂಬು

ದಾಗಿ ವಿದುರನು ಹೇಳುತ್ತಿದ್ದ ಮಾತುಗಳನ್ನು ನೀನು ಆಗ ಅರ್ಥಮಾಡಿಕೊಳ್ಳಲಿಲ್ಲ. ಆ ಪಗಡೇಕಾಯಿಗಳೇ ಅರ್ಜುನನಿಂದ ಬಿಡಲ್ಪಡುವ ಬಾಣಗಳಾಗಿ ಪರಿವರ್ತನೆಹೊಂದಿ ಇಂದು ನಮ್ಮನ್ನು ಸಂಹಾರಮಾಡುತ್ತಿವೆ. ಪಗಡೆಯಾಟದಲ್ಲಿ ಗಳಿಸಿದ ವಿಜಯದ ಉಲ್ಲಾಸದಿಂದಿದ್ದ ನೀನು–ಧೀರನಾದ, ಮಹಾತ್ಮನಾದ ವಿದುರನು ನಿನ್ನ ಕ್ಷೇಮಕ್ಕಾಗಿ ಹೇಳಿದ ಮಂಗಳಕರವಾದ ಮಾತುಗಳನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ. ದುರ್ಯೋಧನ! ಅಂದು ನೀನು ಧರ್ಮಾತ್ಮನಾದ ವಿದುರನನ್ನೂ ಮತ್ತು ಅವನ ಮಾತುಗಳನ್ನೂ ಅನಾದರಣೆಮಾಡಿದ ಪರಿಣಾಮವಾಗಿಯೇ ಈ ಭಯಂಕರಯುದ್ಧವು ನಡೆಯುತ್ತಿದೆ ಮತ್ತು ನಿನ್ನ ಸಲುವಾಗಿಯೇ ಈ ಘೋರವಾದ ಸಂಹಾರ ಕಾರ್ಯವೂ ಅವ್ಯಾಹತವಾಗಿ ಸಾಗುತ್ತಿದೆ.

**ಯೋಽವಮನ್ಯ ವಚಃ ಪಥ್ಯಂ ಸುಹೃದಾಮಾಪ್ತಕಾರಿಣಾಮ್ ।**
**ಸ್ವಮತಂ ಕುರುತೇ ಮೂಢಃ ಸ ಶೋಚ್ಯೋ ನ ಚಿರಾದಿವ ॥೧೪॥**

ಯಾವ ಮೂರ್ಖನು ಹಿತವನ್ನು ಬಯಸುವ ಸುಹೃದರ ಪಥ್ಯವಾದ ಮಾತುಗಳನ್ನು ಅನಾದರಿಸಿ ತನ್ನ ಇಚ್ಛೆಯಂತೆಯೇ ಕಾರ್ಯವನ್ನು ನಡೆಸುತ್ತಾನೆಯೋ–ಅವನು ಅತ್ಯಲ್ಪಕಾಲದಲ್ಲಿಯೇ ಶೋಚನೀಯವಾದ ಸ್ಥಿತಿಯನ್ನು ಹೊಂದುತ್ತಾನೆ.

ಅವಮಾನಪಡಿಸಲು ಯೋಗ್ಯಳಲ್ಲದ, ಸತ್ಕುಲಪ್ರಸೂತಳಾದ, ಸಕಲ ವಿಧವಾದ ಸದ್ಧರ್ಮಗಳನ್ನೂ ಆಚರಿಸುತ್ತಿದ್ದ ದ್ರೌಪದಿಯನ್ನು ನಾವೆಲ್ಲರೂ ನೋಡುತ್ತಿದ್ದಂತೆಯೇ ಸಭೆಗೆ ಸೆಳೆದು ತರಿಸಿ ಅವಮಾನಪಡಿಸಿದೆ. ಅಂದು ನೀನು ಮಾಡಿದ ಆ ಮಹಾಪರಾಧಕ್ಕೆ ಇಂದು ನಿನಗೆ ಈ ಫಲವು ಪ್ರಾಪ್ತವಾಗಿದೆ. ಒಂದು ವೇಳೆ ನೀನು ಮಾಡಿರುವ ಪಾಪಕ್ಕೆ ಈಗ ನಿನಗೆ ಈ ಫಲವು ಲಭ್ಯವಾಗದಿದ್ದರೆ ಆ ಪಾಪಕ್ಕೆ ಪರಲೋಕದಲ್ಲಿ ಇದಕ್ಕಿಂತಲೂ ಅಧಿಕವಾದ ಕ್ಲೇಶವನ್ನೇ ಅನುಭವಿಸಬೇಕಾಗಿದ್ದಿತು. ಮೋಸದಿಂದ ಪಾಂಡವರನ್ನು ಜೂಜಿನಲ್ಲಿ ಗೆದ್ದು ರಾಜಕುಮಾರರನ್ನು ಮೃಗಚರ್ಮಧರರನ್ನಾಗಿ ಮಾಡಿ ಅರಣ್ಯಕ್ಕೆ ಅಟ್ಟಿದೆ. (ಆ ಅಧರ್ಮಕಾರ್ಯದ ಫಲವನ್ನೂ ನೀನು ಅನುಭವಿಸಬೇಕಾಗಿದೆ.)

**ಪುತ್ರಾಣಾಮಿವ ಚೈತೇಷಾಂ ಧರ್ಮಮಾಚರತಾಂ ಸದಾ ।**
**ದ್ರುಹ್ಯೇತ್ಕೋನು ನರೋ ಲೋಕೇ ಮದನ್ಯೋ ಬ್ರಾಹ್ಮಣಬ್ರುವಃ ॥**

ಪಾಂಡವರು ನನಗೆ ಪುತ್ರಸಮಾನರಾಗಿದ್ದಾರೆ. ಮೇಲಾಗಿ ಅವರು ನಿರಂತರವಾಗಿ ಧರ್ಮಾಚರಣೆಯನ್ನು ಮಾಡುತ್ತಿದ್ದಾರೆ. ಅಂತಹವರಿಗೆ ನಾನು ದ್ರೋಹಮಾಡುತ್ತಿದ್ದೇನೆ. ನಾನಲ್ಲದೇ ಬ್ರಾಹ್ಮಣನೆಂದು ಹೇಳಿಕೊಳ್ಳುವ ಬೇರೆ ಯಾವ ಮನುಷ್ಯನು ತಾನೇ ಅಂತಹವರಿಗೆ ದ್ರೋಹವನ್ನೆಸಗುತ್ತಾನೆ? (ಅವರು ನನಗೆ ಪುತ್ರಸಮಾನರಾಗಿದ್ದರೂ ನಿನ್ನ ಪಕ್ಷಕ್ಕೆ ಸೇರಿರುವ ನಾನು ಅವರಿಗೆ ದ್ರೋಹವನ್ನೆಸಗುತ್ತಿದ್ದೇನೆ.) ನಿಮ್ಮನ್ನು ವಿನಾಶಮಾಡಬೇಕೆಂಬ ಪಾಂಡವರ ಕೋಪಕ್ಕೆ ಮುಖ್ಯಕಾರಣರು ನೀವೇ ಆಗಿದ್ದೀರಿ. ಕುರುರಾಜರ ಸಭೆಯಲ್ಲಿ ಧೃತರಾಷ್ಟ್ರನ ಅನುಮತಿಯನ್ನೂ ಪಡೆದು, ಶಕುನಿಯೊಡನೆ ಸೇರಿಕೊಂಡು ಪಾಂಡವರ ಕೋಪವನ್ನು ನೀನೇ ಬರಮಾಡಿಕೊಂಡೆ. ಆ ಕಾರ್ಯದಲ್ಲಿ ನಿನಗೆ ದುಃಶಾಸನನು ಸಂಪೂರ್ಣವಾಗಿ ಸಹಕಾರವನ್ನಿತ್ತನು. (ಪಾಂಡವರ ಕೋಪಾಗ್ನಿಯನ್ನು ಪ್ರಜ್ವಲಿಸಿದನು.) ಕರ್ಣನು ನೀನು ಬರಮಾಡಿಕೊಂಡಿದ್ದ ಪಾಂಡವರ ಕೋಪವನ್ನು ಮತ್ತಷ್ಟು ವರ್ಧಿಸಿದನು. ಕೋಪೋಪಶಮನಕ್ಕೆ ಸಹಕಾರಿಯಾಗಿದ್ದ ವಿದುರನ ಮಾತನ್ನು ನೀನು ಸಂಪೂರ್ಣವಾಗಿ ಅನಾದರಣೆ ಮಾಡಿದೆ. ಆ ಕೋಪವನ್ನು ವೃದ್ಧಿಗೊಳಿಸಲು ನೀನು ಪುನಃ ಪುನಃ ವ್ಯವಸಾಯಮಾಡಿದೆ. (ಆ ಕೋಪದ ಪ್ರಖರತೆಯನ್ನು ನೀನೀಗ ಅನುಭವಿಸಲೇ ಬೇಕು.)

ಸೈಂಧವನ ರಕ್ಷಣೆಯ ಭಾರವು ಸಂಪೂರ್ಣವಾಗಿ ನಿಮ್ಮ ಮೇಲೆಯೇ ಇದ್ದಿತು. ಆದುದರಿಂದ ನನ್ನನ್ನು ಮಾತ್ರವೇ ಆಕ್ಷೇಪಿಸುವುದು ಯುಕ್ತವಲ್ಲ.

**ಯತ್ತಾಃ ಸರ್ವೇ ಪರಾಭೂತಾಃ ಪರ್ಯವಾರಯತಾರ್ಜುನಮ್ ।**
**ಸಿನ್ಧುರಾಜಾನಮಾಶ್ರಿತ್ಯ ಸ ವೋ ಮಧ್ಯೇ ಕಥಂ ಹತಃ ॥೨೧॥**

ಸಿಂಧುರಾಜನನ್ನು ಆಶ್ರಯಿಸಿ (ಅವನನ್ನು ಸೇರಿಸಿಕೊಂಡು) ಮಹಾರಥರಾದ ನೀವೆಲ್ಲರೂ ಅರ್ಜುನನನ್ನು ಸುತ್ತುವರಿದಿರಿ. ಪ್ರಯತ್ನಪೂರ್ವಕವಾಗಿ ಯುದ್ಧಮಾಡಿದಿರಿ. ಆದರೂ ಎಲ್ಲರೂ ಪರಾಭವಹೊಂದಿದಿರಿ. ಆ ಮಹಾರಥರೆಲ್ಲರ ಮಧ್ಯದಲ್ಲಿದ್ದ ಜಯದ್ರಥನನ್ನು ಸಂಹರಿಸಲು ಅರ್ಜುನನಿಗೆ ಹೇಗೆ ಸಾಧ್ಯವಾಯಿತು? (ನೀನು ಮಾಡಿದ ಪಾಪದ ಫಲವಿದು. ಬೇರೆ ಯಾವ ಕಾರಣವನ್ನೂ ಹೇಳಲು ಸಾಧ್ಯವಾಗುವುದಿಲ್ಲ.)

**ಕಥಂ ತ್ವಯಿ ಚ ಕರ್ಣೇ ಚ ಕೃಪೇ ಶಲ್ಯೇ ಚ ಜೀವತಿ ।**
**ಅಶ್ವತ್ಥಾಮ್ನಿ ಚ ಕೌರವ್ಯ ನಿಧನಂ ಸೈನ್ಧವೋಽಗಮತ್ ॥೨೨॥**

(ಸೈಂಧವನನ್ನು ರಕ್ಷಿಸಲು ಸಾಧ್ಯವಾಗದೇ ಇದ್ದುದಕ್ಕೆ ದ್ರೋಣರು ಕೊಡುವ ಕಾರಣಗಳು ಎರಡು. ಮೊದಲನೆಯದು : ಅರ್ಜುನನ ಪರಾಕ್ರಮ ಎರಡನೆಯದು : ದುರ್ಯೋಧನನು ಮಾಡಿದ ಪಾಪ. ಸೈಂಧವನನ್ನು ರಕ್ಷಿಸ ಬೇಕಾಗಿದ್ದ ಹೊಣೆಯು ಎಲ್ಲರ ಮೇಲೂ ಇದ್ದಿತು–ಎಂಬುದು ಅವರ ವಾದ. ಈ ಅಭಿಪ್ರಾಯದ ಹಿನ್ನೆಲೆಯಲ್ಲಿ ಅವರು ಹೇಳುತ್ತಾರೆ.) ಸೈಂಧವನನ್ನು ರಕ್ಷಿಸುವುದರಲ್ಲಿಯೇ ನಿರತನಾಗಿದ್ದ ನೀನು, ಕರ್ಣ, ಕೃಪ, ಶಲ್ಯ, ಅಶ್ವತ್ಥಾಮಾ–ಇವರೆಲ್ಲರೂ ಜೀವಿಸಿರುವಾಗಲೇ ಜಯದ್ರಥನು ಹೇಗೆ ನಿಧನ ಹೊಂದಿದನು?

**ಯುಧ್ಯನ್ತಃ ಸರ್ವರಾಜಾನಸ್ತೇಜಸ್ತಿಗ್ಮಮುಪಾಸತೇ ।**
**ಸಿನ್ಧುರಾಜಂ ಪರಿತ್ರಾತುಂ ಸ ವೋ ಮಧ್ಯೇ ಕಥಂ ಹತಃ ॥೨೩॥**

ಅರ್ಜುನನೊಡನೆ ಯುದ್ಧದಲ್ಲಿ ತೊಡಗಿದ್ದ ಸಮಸ್ತರಾಜರೂ ಜಯದ್ರಥನನ್ನು ರಕ್ಷಿಸುವ ಸಲುವಾಗಿ ತೀಕ್ಷ್ಣವಾದ ತೇಜಸ್ಸನ್ನು ಆಶ್ರಯಿ ಸಿದ್ದರು. (ಬಹಳ ರೊಚ್ಚಿನಿಂದ ಯುದ್ಧಮಾಡುತ್ತಿದ್ದರು.) ಆ ಮಹಾ ರಥರೆಲ್ಲರೂ ಅಷ್ಟು ತೀಕ್ಷ್ಣತೆಯಿಂದ ಯುದ್ಧಮಾಡುತ್ತಿದ್ದರೂ ನಿಮ್ಮ ಮಧ್ಯದಲ್ಲಿದ್ದ ಜಯದ್ರಥನು ಹೇಗೆ ಹತನಾದನು?

ಮಹೀಪತಿಯಾದ ಸೈಂಧವನು ವಿಶೇಷವಾಗಿ ನನ್ನಿಂದಲೂ ಮತ್ತು ನಿನ್ನಿಂದಲೂ ಅರ್ಜುನನ ದೆಸೆಯಿಂದ ರಕ್ಷಣೆಯನ್ನು ಅಪೇಕ್ಷಿಸಿದ್ದನು. ಸೈಂಧವನು ಅರ್ಜುನನ ದೆಸೆಯಿಂದ ರಕ್ಷಣೆಯನ್ನು ಪಡೆಯದೇ ಇರಲಾಗಿ ನನ್ನ ಜೀವನದ ರಕ್ಷಣೆಗೂ ಸಹ ನಾನು ಯಾವ ಅವಕಾಶವನ್ನೂ ಕಾಣೆನು. (ಆಶ್ರಿತನನ್ನೇ ರಕ್ಷಿಸಲು ನಮಗೆ ಸಾಧ್ಯವಾಗದೇ ಇರುವಾಗ ನಮ್ಮ ರಕ್ಷಣೆ ಯನ್ನಾದರೂ ನಾವು ಹೇಗೆ ಮಾಡಿಕೊಂಡೇವು? ಈಗ ನಾವು ಅರಕ್ಷಕ ರಾಗಿಯೇ ಇದ್ದೇವೆ.) ಧೃಷ್ಟದ್ಯುಮ್ನನನ್ನೂ, ಶಿಖಂಡೀಸಹಿತವಾಗಿ ಸಮಸ್ತ ಪಾಂಚಾಲರನ್ನೂ ನಾನು ವಧೆಮಾಡದೇ ಇರುವುದರಿಂದ ಧೃಷ್ಟದ್ಯುಮ್ನನ ಪಾಪಪೂರ್ಣವಾದ ಸಂಕಲ್ಪದಲ್ಲಿ ನಾನು ಮುಳುಗಿಹೋಗುತ್ತಿರುವೆನೋ ಎಂಬ ಭಾವನೆಯಿಂದಿದ್ದೇನೆ. (ಧೃಷ್ಟದ್ಯುಮ್ನನು ಮಾಡಿರುವ ಪ್ರತಿಜ್ಞೆ

ಯನ್ನು ನೆನೆಸಿಕೊಂಡು ನಾನೂ ಸಹ ನನ್ನ ದಿವಸಗಳನ್ನು ಎಣಿಸುತ್ತಿದ್ದೇನೆ.) ಸಿಂಧುರಾಜನಾದ ಜಯದ್ರಥನ ರಕ್ಷಣೆಯನ್ನು ಮಾಡಲು ಅಸಮರ್ಥನಾದ ನೀನು, ನಿನ್ನ ರಕ್ಷಣೆಯ ವಿಷಯವಾಗಿಯೇ ಪರಿತಪಿಸುತ್ತಿರುವ ನನ್ನನ್ನು ವಾಗ್ಬಾಣಗಳಿಂದ ಚುಚ್ಚುತ್ತಿರುವೆಯೇಕೆ? ಅತ್ಯಂತ ಕ್ಲಿಷ್ಟವಾದ ಕಾರ್ಯಗಳನ್ನೂ ಅನಾಯಾಸವಾಗಿಯೇ ಮಾಡುವ ಭೀಷ್ಮನ ಸುವರ್ಣಮಯವಾದ ಧ್ವಜವನ್ನು ರಣರಂಗದಲ್ಲಿನ್ನು ಕಾಣದೆಯೇ ಇರುವಾಗ ವಿಜಯವನ್ನು ಹೇಗೆ ಆಶಿಸುವೆ? ಮಹಾರಥರ ಮಧ್ಯದಲ್ಲಿದ್ದ ಸೈಂಧವನು ಹತನಾದನು. ಎಲ್ಲ ರಾಜರೂ ನೋಡುತ್ತಿರುವಂತೆಯೇ ಭೂರಿಶ್ರವಸನೂ ಹತನಾದನು. ಇಷ್ಟು ಜಾಗರೂಕತೆಯಿಂದಿದ್ದರೂ ಇವರನ್ನೇ ರಕ್ಷಿಸಲು ಸಾಧ್ಯವಾಗದಿರುವಾಗ ಉಳಿದವರನ್ನು ರಕ್ಷಿಸಬಹುದೆಂದು ನೀನು ಹೇಗೆ ಭಾವಿಸುವೆ? ಒಂದು ವೇಳೆ ಇನ್ನೂ ಜೀವಿಸಿರುವುದಾದರೆ ಕೃಪನನ್ನೇ ನಾವು ದುರ್ಧರ್ಷನೆಂದು ಹೇಳಬಹುದಾಗಿದೆ. ಸಿಂಧುರಾಜನನ್ನು ರಕ್ಷಿಸಲು ಹೋಗಿ ಸಿಂಧುರಾಜನ ಮಾರ್ಗವನ್ನೇ ಹಿಡಿದು ಹೋಗದೇ ಇರುವುದಕ್ಕಾಗಿ ಅವನ ಬಲ ಮತ್ತು ಸಾಮರ್ಥ್ಯಗಳನ್ನು ನಾನು ಪ್ರಶಂಸೆಮಾಡುತ್ತೇನೆ.

ಕುರುನಂದನ! ಇಂದ್ರಸಹಿತರಾದ ದೇವತೆಗಳಿಂದಲೂ ಯುದ್ಧದಲ್ಲಿ ಸಂಹರಿಸಲು ಅಸಾಧ್ಯನಾಗಿದ್ದ, ಅತ್ಯಂತದುಷ್ಕರವಾದ ಕರ್ಮವನ್ನು ಮಾಡುವವನಾಗಿದ್ದ ಭೀಷ್ಮನು ನಿನ್ನ ಅನುಜನಾದ ದುಃಶಾಸನನ ಎದುರಿನಲ್ಲಿಯೇ ಹತನಾದುದನ್ನು ನೋಡಿ ನಿನಗೆ ಈ ವಸುಂಧರೆಯು ಸಿಗಲಾರದೆಂದು ಆಗಲೇ ನಾನು ಚಿಂತಿಸಿದೆನು. ಅಲ್ಲಿ ನೋಡು ದುರ್ಯೋಧನ! ಪಾಂಡವ- ಸೃಂಜಯರ ಆ ಸೈನ್ಯಗಳು ಒಟ್ಟಾಗಿ ನನ್ನ ಮೇಲೆ ದಾಳಿಮಾಡಲು ರಭಸದಿಂದ ಬರುತ್ತಿವೆ. ಧಾರ್ತರಾಷ್ಟ್ರ! ಈ ಯುದ್ಧದಲ್ಲಿ ನಾನು ನಿನಗೆ ಅತ್ಯಂತಹಿತವಾದ ಕಾರ್ಯವನ್ನು ಮಾಡುತ್ತೇನೆ. ಎಲ್ಲ ಪಾಂಚಾಲರನ್ನೂ ಸಂಹರಿಸಿದಲ್ಲದೇ ನಾನು ತೊಟ್ಟಿರುವ ಈ ಕವಚವನ್ನು ಬಿಚ್ಚುವುದಿಲ್ಲ. ನೀನು ನನ್ನ ಮಗನಾದ ಅಶ್ವತ್ಥಾಮನ ಬಳಿಗೆ ಹೋಗಿ ಅವನೊಡನೆ ಹೀಗೆ ಹೇಳಬೇಕು :

**ನ ಸೋಮಕಾಃ ಪ್ರಮೋಕ್ತವ್ಯಾ ಜೀವಿತಂ ಪರಿರಕ್ಷತಾ ॥೩೫॥**

'ಜೀವವನ್ನು ರಕ್ಷಿಸಿಕೊಳ್ಳುವ ಆಶಯದಿಂದ ಸೋಮಕರನ್ನು ವಧಿಸದೇ ಬಿಟ್ಟುಬಿಡಕೂಡದು.

**ಯಚ್ಚ ಪಿತ್ರಾನುಶಿಷ್ಟೋಽಸಿ ತದ್ವಚಃ ಪರಿಪಾಲಯ ।**
**ಆನೃಶಂಸ್ಯೇ ದಮೇ ಸತ್ಯೇ ಚಾರ್ಜವೇ ಚ ಸ್ಥಿರೋ ಭವ ॥೩೬॥**

ನಿನ್ನ ತಂದೆಯಿಂದಲೇ ನೀನು ಹೀಗೆ ಅನುಶಾಸಿತನಾಗಿರುವೆ. ನಿನ್ನ ತಂದೆಯ ಮಾತನ್ನು ಪರಿಪಾಲಿಸು. ದಯೆ, ಜಿತೇಂದ್ರಿಯತೆ, ಸತ್ಯನಿಷ್ಠೆ, ಋಜುತ್ವ–ಈ ಗುಣಗಳಲ್ಲಿ ನಿನ್ನ ಬುದ್ಧಿಯು ಸ್ಥಿರವಾಗಿರಲಿ.

**ಧರ್ಮಾರ್ಥಕಾಮಕುಶಲೋ ಧರ್ಮಾರ್ಥಾವಪ್ಯಪೀಡಯನ್ ।**
**ಧರ್ಮಪ್ರಧಾನಕಾರ್ಯಾಣಿ ಕುರ್ಯಾಶ್ಚೇತಿ ಪುನಃ ಪುನಃ ॥೩೭॥**

ಧರ್ಮಾರ್ಥ-ಕಾಮಗಳ ಸಾಧನೆಯಲ್ಲಿ ಕುಶಲನಾಗಿರುವೆ. ಧರ್ಮಾರ್ಥಗಳನ್ನು ಯಾವಾಗಲೂ ಪೀಡಿಸಬಾರದು. ಪುನಃ-ಪುನಃ ಧರ್ಮಪ್ರಧಾನವಾದ ಕಾರ್ಯಗಳನ್ನೇ ಮಾಡುತ್ತಿರು'–ಎಂಬುದಾಗಿ ಹೇಳು.

**ಚಕ್ಷುರ್ಮನೋಭ್ಯಾಂ ಸಂತೋಷ್ಯಾ ವಿಪ್ರಾಃ ಪೂಜ್ಯಾಶ್ಚ ಶಕ್ತಿತಃ ।**
**ನ ಚೈಷಾಂ ವಿಪ್ರಿಯಂ ಕಾರ್ಯಂ ತೇ ಹಿ ವಹ್ನಿಶಿಖೋಪಮಾಃ ॥೩೮॥**

'ವಿನಯಪೂರ್ವಕವಾದ ದೃಷ್ಟಿಯಿಂದಲೂ, ಶ್ರದ್ಧಾಯುಕ್ತವಾದ ಹೃದಯದಿಂದಲೂ ಬ್ರಾಹ್ಮಣರನ್ನು ಸಂತುಷ್ಟರನ್ನಾಗಿ ಮಾಡಬೇಕು. ಯಥಾಶಕ್ತಿ ಅವರನ್ನು ಸತ್ಕರಿಸಬೇಕು. ಯಾವುದೇ ಕಾರಣದಿಂದಲೂ ಅವರಿಗೆ ಅಪ್ರಿಯವಾದ ಕಾರ್ಯವನ್ನು ಮಾಡಬಾರದು. ಏಕೆಂದರೆ : ಬ್ರಾಹ್ಮಣರು ಅಗ್ನಿಯ ಜ್ವಾಲೆಗಳಿಗೆ ಸಮಾನವಾದ ತೇಜಸ್ವಿಗಳು.' (ದುರ್ಯೋಧನ! ಈ ನನ್ನ ಉಪದೇಶವನ್ನು ಅವನಿಗೆ ತಿಳಿಯಹೇಳಬೇಕು.)

ಶತ್ರುಸೂದನನೇ! ನಿನ್ನ ವಾಗ್ಬಾಣಗಳಿಂದ ಪೀಡಿತನಾಗಿರುವ ನಾನು ಈಗಲೇ ಮಹಾಯುದ್ಧಕ್ಕಾಗಿ ಶತ್ರುಗಳ ಸೈನ್ಯವನ್ನು ಪ್ರವೇಶಿಸುತ್ತೇನೆ. ನಿನಗೆ ಶಕ್ತಿಯಿರುವುದಾದರೆ ನಮ್ಮ ಸೈನ್ಯವನ್ನು ರಕ್ಷಿಸು. ಕೋಪಗೊಂಡಿರುವ ಕುರು-ಸೃಂಜಯರು ರಾತ್ರಿಯಲ್ಲೂ ಯುದ್ಧಮಾಡುತ್ತಾರೆ.”

ಮಹಾರಾಜ! ದ್ರೋಣರು ದುರ್ಯೋಧನನೊಡನೆ ಹೀಗೆ ಹೇಳಿ ಸೂರ್ಯನು ನಕ್ಷತ್ರಗಳ ಬೆಳಕನ್ನು ಅಪಹರಿಸುವಂತೆ–ಕ್ಷತ್ರಿಯರ ತೇಜಸ್ಸನ್ನು ಅಪಹರಿಸುತ್ತಾ (ನಾಶಗೊಳಿಸುತ್ತಾ) ಪಾಂಡವ-ಸೃಂಜಯರ ಬಳಿಗೆ ಹೊರಟುಹೋದರು.

೧೫೧ನೆಯ ಅಧ್ಯಾಯವು ಮುಗಿಯಿತು.

## ದುರ್ಯೋಧನ-ಕರ್ಣರ ಸಂಭಾಷಣೆ: ಯುದ್ಧದ ಪುನರಾರಂಭ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

ಮಹಾರಾಜ! ದ್ರೋಣರಿಂದ ಹೀಗೆ ಪ್ರಚೋದಿತನಾದ ದುರ್ಯೋಧನರಾಜನು ಕೋಪಾವಿಷ್ಟನಾಗಿ ತಾನೂ ಸಹ ಸರ್ವಶಕ್ತಿಯಿಂದಲೂ ಯುದ್ಧಮಾಡಬೇಕೆಂದೇ ನಿಶ್ಚಯಿಸಿದನು. ಅದೇ ವೇಳೆಗೆ ತನ್ನ ಸಮೀಪದಲ್ಲಿಯೇ ನಿಂತಿದ್ದ ಕರ್ಣನನ್ನು ಕುರಿತು ಹೇಳಿದನು :



"ನೋಡು, ಕರ್ಣ! ಕೃಷ್ಣಸಹಾಯನಾದ ಕಿರೀಟಿಯು ದೇವತೆಗಳಿಂದಲೂ ಭೇದಿಸಲು ಅಸಾಧ್ಯವಾಗಿದ್ದ ಆಚಾರ್ಯರಿಂದ ನಿರ್ಮಿತ

ವಾಗಿದ್ದ ವ್ಯೂಹವನ್ನು ಭೇದಿಸಿ, ನೀನೂ ಮತ್ತು ಮಹಾತ್ಮರಾದ ದ್ರೋಣರೂ ಯುದ್ಧದಲ್ಲಿ ತತ್ಪರರಾಗಿದ್ದಾಗ ಸೈಂಧವನನ್ನು ರಕ್ಷಿಸುತ್ತಿದ್ದ ನಮ್ಮ ಕಡೆಯ ಯೋಧಮುಖ್ಯರು ನೋಡುತ್ತಿದ್ದಂತೆಯೇ ಸೈಂಧವನನ್ನು ಸಂಹರಿಸಿ ಕೆಳಕ್ಕೆ ಕೆಡವಿದನು. ಸಿಂಹದಿಂದ ಇತರ ಸಾಧಾರಣಮೃಗಗಳು ಲೀಲಾಜಾಲವಾಗಿ ಸಂಹರಿಸಲ್ಪಡುವಂತೆ–ಭೂಮಂಡಲದ ಶ್ರೇಷ್ಠಭೂಪಾಲರು ಅರ್ಜುನನೊಬ್ಬ ನಿಂದಲೇ ಹತರಾಗಿ ರಣರಂಗದಲ್ಲಿ ಬಿದ್ದಿದ್ದಾರೆ. ನಾನೂ ಮತ್ತು ಮಹಾತ್ಮ ರಾದ ದ್ರೋಣರೂ ಪರಿಶ್ರಮಪೂರ್ವಕವಾಗಿ ಯುದ್ಧಮಾಡುತ್ತಿದ್ದರೂ ಇಂದ್ರನ ಮಗನಾದ ಅರ್ಜುನನು ನನ್ನ ಸೈನ್ಯದಲ್ಲಿ ಸ್ವಲ್ಪಭಾಗವನ್ನು ಮಾತ್ರವೇ ಉಳಿಸಿದ್ದಾನೆ. ಯುದ್ಧದಲ್ಲಿ ಆಚಾರ್ಯದ್ರೋಣರು ಅರ್ಜುನನನ್ನು ವ್ಯೂಹ ದೊಳಗೆ ನುಗ್ಗದಂತೆ ತಡೆಯಲು ಸಂಪೂರ್ಣವಾಗಿ ಪ್ರಯತ್ನಿಸಿದ್ದರೆ–ಅರ್ಜುನನು ಎಷ್ಟೇ ಪ್ರಯತ್ನಿಸಿದ್ದರೂ–ದೇವತೆಗಳಿಂದಲೂ ಭೇದಿಸಲು ಅಸಾಧ್ಯವಾಗಿದ್ದ ವ್ಯೂಹವನ್ನು ಹೇಗೆ ಭೇದಿಸುತ್ತಿದ್ದನು? ಅರ್ಜುನನು ಸಿಂಧು ರಾಜನನ್ನು ಸಂಹರಿಸಿ ತಾನು ಮಾಡಿದ್ದ ಪ್ರತಿಜ್ಞೆಯಿಂದ ಪಾರಾದನು. ಮಹೇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮದಿಂದ ಕೂಡಿದ್ದ ಅನೇಕ ಭೂಪಾಲರು ಪಾರ್ಥನಿಂದ ಹತರಾಗಿ ರಣಾಂಗಣದಲ್ಲಿ ಮಲಗಿರುವುದನ್ನು ನೋಡು, ಕರ್ಣ! ಮಹಾಬಲಿಷ್ಠರಾದ ದ್ರೋಣರು ಅರ್ಜುನನು ವ್ಯೂಹ ದೊಳಗೆ ಪ್ರವೇಶಿಸುವುದನ್ನು ಇಚ್ಛಿಸದೇ, ಸಂಪೂರ್ಣವಾಗಿ ಪ್ರಯತ್ನಮಾಡಿ ಅವನನ್ನು ತಡೆದಿದ್ದರೆ ಪಾಂಡವನು ದುರ್ಭೇದ್ಯವಾದ ಆ ವ್ಯೂಹವನ್ನು ಭೇದಿಸಲು ಸಾಧ್ಯವಾಗುತ್ತಿರಲಿಲ್ಲ.

**ದಯಿತಃ ಫಾಲ್ಗುನೋ ನಿತ್ಯಮಾಚಾರ್ಯಸ್ಯ ಮಹಾತ್ಮನಃ ।**
**ತತೋಽಸ್ಯ ದತ್ತವಾನ್ದ್ವಾರಮಯುದ್ಧೇನೈವ ಶತ್ರುಹನ್ ॥೧೦॥**

ಶತ್ರುಹಂತಕನೇ! ಅರ್ಜುನನನ್ನು ದ್ರೋಣರು ತಡೆಯದೇ ಇರಲು ಕಾರಣವಿಷ್ಟೆ. ಮಹಾತ್ಮರಾದ ಆಚಾರ್ಯರಿಗೆ ಅರ್ಜುನನು ಬಹಳ ಪ್ರಿಯ ನಾದವನು. ಆದುದರಿಂದ ದ್ರೋಣರು ಯುದ್ಧಮಾಡದೆಯೇ ಅರ್ಜುನನಿಗೆ ವ್ಯೂಹದ ದ್ವಾರವನ್ನು ತೆರೆದುಕೊಟ್ಟರು.

**ಅಭಯಂ ಸಿನ್ಧುರಾಜಾಯ ದತ್ತ್ವಾ ದ್ರೋಣಃ ಪರಂತಪಃ ।**
**ಪ್ರಾದಾತ್ಕಿರೀಟಿನೇ ದ್ವಾರಂ ಪಶ್ಯ ನಿರ್ಗುಣತಾಂ ಮಯಿ ॥೧೧॥**

ಪರಂತಪರಾದ ದ್ರೋಣರು ರಕ್ಷಣೆಮಾಡುವುದಾಗಿ ಸಿಂಧುರಾಜನಾದ ಜಯದ್ರಥನಿಗೆ ಅಭಯವನ್ನಿತ್ತು ಅರ್ಜುನನಿಗೆ ವ್ಯೂಹದ ದ್ವಾರವನ್ನು ತೆರೆದುಬಿಟ್ಟರು. (ನನಗೂ ಸಹ ಸೈಂಧವನನ್ನು ರಕ್ಷಿಸಲು ಸಾಧ್ಯವಾಗಲಿಲ್ಲ.) ನಿಶ್ಚಯವಾಗಿಯೂ ದ್ರೋಣರು ನನ್ನ ವಿಷಯದಲ್ಲಿ ಗುಣಹೀನರಂತೆ ನಡೆದುಕೊಂಡುದುದನ್ನು ನೀನೇ ನೋಡು. ಕರ್ಣ! ಒಂದು ವೇಳೆ ದ್ರೋಣ ರೇನಾದರೂ ಜಯದ್ರಥನ ಆಶಯದಂತೆ ಮೊದಲೇ ಅವನಿಗೆ ತನ್ನ ದೇಶಕ್ಕೆ ಹೋಗಲು ಅನುಜ್ಞೆಯನ್ನಿತ್ತಿದ್ದರೆ ಈ ಜನಕ್ಷಯವಾದರೂ ಆಗುತ್ತಿರಲಿಲ್ಲ. ಜಯದ್ರಥನು ತನ್ನ ಜೀವಿತದ ರಕ್ಷಣಾರ್ಥವಾಗಿ ತನ್ನ ದೇಶಕ್ಕೆ ಹೋಗುವುದ ರಲ್ಲಿದ್ದನು. ಆದರೆ ಮನುಷ್ಯಾಧಮನಾದ ನಾನು ದ್ರೋಣರಿಂದ ಅಭಯವನ್ನು ಪಡೆದು ಅವನು ತನ್ನ ರಾಜ್ಯಕ್ಕೆ ಹೋಗದಂತೆ ತಡೆದೆನು. ದುರಾತ್ಮರಾದ ನಾವೆಲ್ಲರೂ ನೋಡುತ್ತಿದ್ದಂತೆಯೇ ಇಂದಿನ ಯುದ್ಧದಲ್ಲಿ ಚಿತ್ರಸೇನನೇ ಮೊದಲಾದ ನನ್ನ ಸಹೋದರರು ಭೀಮಸೇನನೊಡನೆ ಯುದ್ಧ ಮಾಡಲು ಹೋಗಿ ಅಸುನೀಗಿದರು."

"ದುರ್ಯೋಧನ! ಆಚಾರ್ಯರನ್ನು ನಿಂದಿಸಬೇಡ. ತಮಗೆ ಬಲವಿರು ವಷ್ಟು, ಉತ್ಸಾಹವಿರುವಷ್ಟು ತಮ್ಮ ಸಂಪೂರ್ಣಶಕ್ತಿಯನ್ನೂ ಯೋಜಿಸಿ ತಮ್ಮ ಜೀವಿತವನ್ನೇ ಪಣವನ್ನಾಗಿಟ್ಟು ಆ ಬ್ರಾಹ್ಮಣರು ಯುದ್ಧಮಾಡಿದ್ದಾರೆ. ಅವರನ್ನು ಅತಿಕ್ರಮಿಸಿ ಶ್ವೇತವಾಹನನು ವ್ಯೂಹವನ್ನು ಪ್ರವೇಶಿಸಿದರೆ ಇದರಲ್ಲಿ ಆಚಾರ್ಯರ ದೋಷವು ಕಿಂಚಿನ್ಮಾತ್ರವೂ ಇರುವುದಿಲ್ಲ.

**ಕೃತೀ ದಕ್ಷೋ ಯುವಾ ಶೂರಃ ಕೃತಾಸ್ತ್ರೋ ಲಘುವಿಕ್ರಮಃ ।**
**ದಿವ್ಯಾಸ್ತ್ರಯುಕ್ತಮಾಸ್ಥಾಯ ರಥಂ ವಾನರಲಕ್ಷಣಮ್ ॥೧೭॥**

**ಕೃಷ್ಣೇನ ಚ ಗೃಹೀತಾಶ್ವಮಭೇದ್ಯಕವಚಾವೃತಃ ।**
**ಗಾಣ್ಡೀವಮಜರಂ ದಿವ್ಯಂ ಧನುರಾದಾಯ ವೀರ್ಯವಾನ್ ॥೧೮॥**

**ಪ್ರವರ್ಷನ್ನಿಶಿತಾನ್ಬಾಣಾನ್ಬಾಹುದ್ರವಿಣದರ್ಪಿತಃ ।**
**ಯದರ್ಜುನೋಽಭ್ಯಯಾದ್ದ್ರೋಣಮುಪಪನ್ನಂ ಹಿ ತಸ್ಯ ತತ್ ॥೧೯॥**

ದುರ್ಯೋಧನ! ಅರ್ಜುನನು ಅಸ್ತ್ರವಿದ್ಯಾಪಾರಂಗತನು ; ಇನ್ನೂ

ಯುವಕನು ; ಅಸ್ತ್ರಗಳ ಪ್ರಯೋಗದಲ್ಲಿ ಚೆನ್ನಾಗಿ ಪಳಗಿದವನು ; ಬಹಳ ಶೀಘ್ರವಾಗಿ ಪರಾಕ್ರಮವನ್ನು ತೋರಿಸುವವನು. ಅಂತಹ ಅರ್ಜುನನು ಆ ಸಮಯದಲ್ಲಿ ಅನೇಕದಿವ್ಯಾಸ್ತ್ರಗಳಿಂದ ಸಂಪನ್ನವಾದ ವಾನರಧ್ವಜದಿಂದ ಉಪಲಕ್ಷಿತವಾದ ರಥದಲ್ಲಿ ಕುಳಿತಿದ್ದನು. ಅಭೇದ್ಯವಾದ ಕವಚವನ್ನು ಧರಿಸಿದ್ದನು. ಕೃಷ್ಣನೇ ಅರ್ಜುನನ ರಥದ ಕುದುರೆಗಳ ನಿಯಂತೃವಾಗಿದ್ದನು. ಅಂತಹ ಪರಿಸರದಲ್ಲಿ ವೀರ್ಯವಂತನಾದ, ಬಾಹುಬಲದರ್ಪಿತನಾದ ಅರ್ಜುನನು ಸುಭದ್ರವಾದ, ದಿವ್ಯವಾದ ಗಾಂಡೀವಧನುಸ್ಸನ್ನೆತ್ತಿಕೊಂಡು ನಿಶಿತವಾದ ಬಾಣಗಳನ್ನು ಸುರಿಸುತ್ತಾ ದ್ರೋಣರನ್ನು ಅತಿಕ್ರಮಿಸಿಹೋದ ನೆಂಬುದು ಅವನಿಗಿರುವ ಅತುಲಪರಾಕ್ರಮಕ್ಕೆ ಅನುಗುಣವಾಗಿಯೇ ಇದೆ.

ದುರ್ಯೋಧನ! ಆಚಾರ್ಯರ ವಿಷಯವಾಗಿ ಹೇಳುವುದಾದರೆ : ಅವರು ವೃದ್ಧರು. ಶೀಘ್ರವಾಗಿ ಹೋಗಲು ಅಸಮರ್ಥರು. ಬಾಣಗಳ ಆದಾನ-ಪ್ರಹಾರಗಳಿಗೆ ಬಹುಮುಖ್ಯವಾದ ಬಾಹುಗಳ ವ್ಯಾಯಾಮ (ಹಿಂದಕ್ಕೂ-ಮುಂದಕ್ಕೂ ಆಡಿಸುವುದು), ಚೇಷ್ಟೆ (ಮೌರ್ವಿಯನ್ನು ಆಕರ್ಣವಾಗಿ ಸೆಳೆದು ಬಿಡುವುದು) ಇವುಗಳಲ್ಲಿ ಶಕ್ತಿಗುಂದಿದವರಾಗಿದ್ದಾರೆ. ಈ ಕಾರಣದಿಂದಲೇ ಕೃಷ್ಣಸಾರಥಿಯಾದ ಶ್ವೇತಾಶ್ವನು ದ್ರೋಣರನ್ನು ಅತಿಕ್ರಮಿಸಿಹೋಗಿದ್ದಾನೆ. ಅರ್ಜುನನು ಅತಿಕ್ರಮಿಸಿಹೋದನೆಂಬ ಈ ಒಂದು ಕಾರಣದಿಂದಲೇ ದ್ರೋಣರಲ್ಲಿ ಯಾವ ದೋಷವನ್ನೂ ನಾನು ಕಾಣುತ್ತಿಲ್ಲ.

ಅಸ್ತ್ರವಿದರಾದ ದ್ರೋಣರು ಯುದ್ಧದಲ್ಲಿ ಪಾಂಡವರನ್ನು ಜಯಿಸ ಲಾರರೆಂದೇ ನಾನು ತಿಳಿದಿದ್ದೇನೆ. ಏಕೆಂದರೆ : ಸುಯೋಧನ! ನಾವೆಲ್ಲರೂ ಶಕ್ತಿಮೀರಿ ಯುದ್ಧಮಾಡುತ್ತಿದ್ದರೂ ಸಿಂಧುರಾಜನು ಯುದ್ಧದಲ್ಲಿ ಹತನಾದನು. ಆದುದರಿಂದ ದೈವದ ಇಚ್ಛೆಯೇ ಮನುಷ್ಯನ ಪ್ರಯತ್ನಕ್ಕಿಂತಲೂ ವಿಶಿಷ್ಟವಾದುದೆಂದು ಹೇಳುತ್ತಾರೆ.

ಪರಂ ಯತ್ನಂ ಕುರ್ವತಾಂ ಚ ತ್ವಯಾ ಸಾರ್ಧಂ ರಣಾಜಿರೇ ।<br>
ಹತ್ವಾಸ್ಮಾಕಂ ಪೌರುಷಂ ವೈ ದೈವಂ ಪಶ್ಚಾತ್ಕರೋತಿ ನಃ ।<br>
ಸತತಂ ಚೇಷ್ಟಮಾನಾನಾಂ ನಿಕೃತ್ಯಾ ವಿಕ್ರಮೇಣ ಚ ॥೨೫॥

ಸಮರಾಂಗಣದಲ್ಲಿ ನಿನ್ನೊಡನೆ ಸೇರಿಕೊಂಡು ವಿಜಯಗಳಿಸುವ ಸಲುವಾಗಿ ಮಿತಿಮೀರಿ ಪ್ರಯತ್ನಿಸುತ್ತಿರುವ, ಕಪಟಮಾರ್ಗದಿಂದಲೂ–ಪರಾಕ್ರಮದಿಂದಲೂ ಸತತವಾಗಿ ಕಾರ್ಯಮಾಡುತ್ತಿರುವ ನಮ್ಮ ಪೌರುಷವನ್ನು ನಷ್ಟಗೊಳಿಸಿ ದೈವವು ನಮ್ಮನ್ನು ಹಿಂದಕ್ಕಟ್ಟುತ್ತಿದೆ.

**ದೈವೋಪಸೃಷ್ಟಃ ಪುರುಷೋ ಯತ್ಕರ್ಮ ಕುರುತೇ ಕ್ವಚಿತ್ ।**
**ಕೃತಂ ಕೃತಂ ಹಿ ತತ್ಕರ್ಮ ದೈವೇನ ವಿನಿಪಾತ್ಯತೇ ॥೨೬॥**

ದೈವದಿಂದ ಪೀಡಿತನಾದ ಮನುಷ್ಯನು ಯಾವುದೇ ಕಾರ್ಯಮಾಡಲು ಹೋದರೂ ಅವನು ಮಾಡುವ ಒಂದೊಂದು ಕೆಲಸವನ್ನೂ ದೈವವು ಹಾಳುಮಾಡುತ್ತದೆ.

**ಯತ್ಕರ್ತವ್ಯಂ ಮನುಷ್ಯೇಣ ವ್ಯವಸಾಯವತಾ ಸದಾ ।**
**ತತ್ಕಾರ್ಯಮವಿಶಙ್ಕೇನ ಸಿದ್ಧಿರ್ದೈವೇ ಪ್ರತಿಷ್ಠಿತಾ ॥೨೭॥**

ಮನುಷ್ಯನು ಸದಾ ಉದ್ಯೋಗಶೀಲನಾಗಿ, ಕಾರ್ಯದ ಫಲವು ಸಿದ್ಧಿಸುವುದೇ, ಇಲ್ಲವೇ–ಎಂಬ ಶಂಕೆಯನ್ನಿಟ್ಟುಕೊಳ್ಳದೇ ಮಾಡಬೇಕಾದ ಕೆಲಸ ವನ್ನು ಮಾಡುತ್ತಲೇ ಇರಬೇಕು. ಆದರೆ ಕಾರ್ಯದ ಸಿದ್ಧಿಯು ಮಾತ್ರ ದೈವಾಧೀನವೆಂಬುದರಲ್ಲಿ ಸಂಶಯವೇ ಇಲ್ಲ.

**ನಿಕೃತ್ಯಾ ವಞ್ಚಿತಾಃ ಪಾರ್ಥಾ ವಿಷಯೋಗೈಶ್ಚ ಭಾರತ ।**
**ದಗ್ಧಾ ಜತುಗೃಹೇ ಚಾಪಿ ದ್ಯೂತೇನ ಚ ಪರಾಜಿತಾಃ ॥೨೮॥**

**ರಾಜನೀತಿಂ ವ್ಯಪಾಶ್ರಿತ್ಯ ಪ್ರಹಿತಾಶ್ಚೈವ ಕಾನನಮ್ ।**
**ಯತ್ನೇನ ಚ ಕೃತಂ ತತ್ತದ್ದೈವೇನ ವಿನಿಪಾತಿತಮ್ ॥೨೯॥**

ನಾವು ಕುಂತಿಯ ಮಕ್ಕಳನ್ನು ಮೋಸದಿಂದ ಹಲವು ಬಾರಿ ವಂಚಿಸಿದೆವು. ವಿಷವನ್ನೂ ಪ್ರಯೋಗಿಸಿದೆವು. ಅರಗಿನ ಅರಮನೆಯಲ್ಲಿ ಅವರನ್ನು ಸುಟ್ಟುಹಾಕಲೂ ಪ್ರಯತ್ನಿಸಿದೆವು. ಕಪಟದ್ಯೂತದ ಮೂಲಕವಾಗಿ ಅವರನ್ನು ಪರಾಜಯಗೊಳಿಸಿದುದೂ ಆಯಿತು. ರಾಜನೀತಿಯನ್ನು ಆಶ್ರಯಿಸಿ ಅವರನ್ನು ಅರಣ್ಯಕ್ಕೂ ಕಳುಹಿಸಿದೆವು. ನಾವು ಪ್ರಯತ್ನಪೂರ್ವಕವಾಗಿಯೇ ಮಾಡಿದ ಆ ಕಾರ್ಯಗಳೆಲ್ಲವನ್ನೂ ದೈವವು ಮಣ್ಣುಗೂಡಿಸಿತು.

**ಯುಧ್ಯಸ್ವ ಯತ್ನಮಾಸ್ಥಾಯ ದೈವಂ ಕೃತ್ವಾ ನಿರರ್ಥಕಮ್ ।**
**ಯತತಸ್ತವ ತೇಷಾಂ ಚ ದೈವಂ ಮಾರ್ಗೇಣ ಯಾಸ್ಯತಿ ॥೩೦॥**

ಆದರೆ ಇದಕ್ಕಾಗಿಯೇ ನೀನು ಹತಾಶನಾಗಬೇಕಾಗಿಲ್ಲ. ದೈವವನ್ನೇ ನಿರರ್ಥಕವನ್ನಾಗಿ ಭಾವಿಸಿ ಸಂಪೂರ್ಣಪ್ರಯತ್ನದಿಂದ ಯುದ್ಧಮಾಡು. ವಿಜಯಕ್ಕಾಗಿ ಪ್ರಯತ್ನಿಸುವ ನಿನ್ನ ದಾರಿಯಿಂದಲೂ ಮತ್ತು ಪಾಂಡವರ ದಾರಿಯಿಂದಲೂ ದೈವವು ಹೋಗುವುದು. ಇಬ್ಬರ ಪ್ರಯತ್ನಗಳಿಗೂ ದೈವದ ಸಂಬಂಧವಿದ್ದೇ ಇರುತ್ತದೆ. ಒಮ್ಮೆ ದೈವವು ನಿನಗೂ ವಿಜಯವನ್ನು ಸಾಧಿಸಿ ಕೊಡಬಹುದು.

**ನ ತೇಷಾಂ ಮತಿಪೂರ್ವಂ ಹಿ ಸುಕೃತಂ ದೃಶ್ಯತೇ ಕ್ವಚಿತ್ ।**
**ದುಷ್ಕೃತಂ ತವ ವಾ ವೀರ ಬುದ್ಧ್ಯಾ ಹೀನಂ ಕುರೂದ್ವಹ ॥೩೧॥**

ಪಾಂಡವರು ಬುದ್ಧಿಪೂರ್ವಕವಾಗಿ ಮಾಡಿರಬಹುದಾದ ಸುಕೃತವು ನಮಗೆ ಎಲ್ಲಿಯೂ ಕಾಣುವುದಿಲ್ಲ. ಅಥವಾ ಬುದ್ಧಿಹೀನತೆಯಿಂದ ನೀನು ಮಾಡಿರುವ ದುಷ್ಕೃತವೂ ಸಹ ಯಾರಿಗೂ ಕಾಣುವುದಿಲ್ಲ. ಆದುದರಿಂದ ಪಾಂಡವರಿಗೇ ದೈವವು ಯಾವಾಗಲೂ ಅನುಕೂಲವಾಗಿರುವುದೆಂದು ಭಾವಿಸಬೇಕಾಗಿಲ್ಲ.

**ದೈವಂ ಪ್ರಮಾಣಂ ಸರ್ವಸ್ಯ ಸುಕೃತಸ್ಯೇತರಸ್ಯ ವಾ ।**
**ಅನನ್ಯಕರ್ಮ ದೈವಂ ಹಿ ಜಾಗರ್ತಿ ಸ್ವಪತಾಮಪಿ ॥೩೨॥**

ಮನುಷ್ಯನ ಸುಕೃತಕ್ಕಾಗಲೀ–ದುಷ್ಕೃತಕ್ಕಾಗಲೀ ದೈವವೊಂದೇ ಪ್ರಮಾಣಭೂತವಾಗಿರುತ್ತದೆ. ಸುಕೃತ-ದುಷ್ಕೃತಗಳ ಫಲವನ್ನೂ ಸಹ ಅದೇ ಕೊಡುವುದಾಗಿದೆ. ದೈವವು ಎಡೆಬಿಡದೇ ಕೆಲಸಮಾಡಿಕೊಂಡೇ ಇರುತ್ತದೆ. ಪ್ರಾಣಿಗಳು ಮಲಗಿರುವಾಗಲೂ ದೈವವು ಎಚ್ಚರದಿಂದಲೇ ಇರುತ್ತದೆ.

ನಿನ್ನ ಕಡೆಯಲ್ಲಿ ಅಪಾರವಾದ ಹನ್ನೊಂದು ಅಕ್ಷೌಹಿಣೀಸೈನ್ಯವಿದ್ದಿತು. ಯೋಧರೂ ಅಗಣಿತಸಂಖ್ಯೆಯಲ್ಲಿಯೇ ಇದ್ದರು. ಪಾಂಡವರ ಬಳಿ ಕೇವಲ ಏಳು ಅಕ್ಷೌಹಿಣೀಸೈನ್ಯವಿದ್ದಿತು. ನಿನ್ನ ಕಡೆಯಲ್ಲಿದ್ದಷ್ಟು ಯೋಧರೂ ಅವರ ಪಕ್ಷದಲ್ಲಿರಲಿಲ್ಲ. ಇಂತಹ ವಿಷಮಸ್ಥಿತಿಯಲ್ಲಿ ಯುದ್ಧವು ಪ್ರಾರಂಭವಾಯಿತು.

ಅಲ್ಪಸಂಖ್ಯಾತಯೋಧರಿಂದ ಕೂಡಿದ್ದ ಪಾಂಡವಸೈನ್ಯದಿಂದ ಬಹುಸಂಖ್ಯಾತ ಯೋಧರಿಂದ ಕೂಡಿದ್ದ ನಮ್ಮ ಸೈನ್ಯವು ಕ್ಷೀಣಿಸಿಹೋಯಿತು. ಇದನ್ನು ನಾನು ದೈವದ ಕಾರ್ಯವೆಂದೇ ಭಾವಿಸುತ್ತೇನೆ. ಏಕೆಂದರೆ : ನಿನ್ನ ಪೌರುಷವೆಲ್ಲವೂ ದೈವದಿಂದಲೇ ವಿನಾಶವಾಗಿಹೋಗಿದೆ."

ಮಹಾರಾಜ! ಹೀಗೆ ಕರ್ಣ-ದುರ್ಯೋಧನರು ಬಹಳವಾಗಿ ಮಾತ ನಾಡುತ್ತಿದ್ದಾಗ ರಣರಂಗದಲ್ಲಿ ಪಾಂಡವರ ಸೈನಿಕರ ಚಲನ-ವಲನಗಳು ಕಂಡುಬಂದುವು. ಅನಂತರ ನಿನ್ನ ದುರ್ಮಂತ್ರದ ಕಾರಣದಿಂದ ನಿನ್ನ ಕಡೆ ಯವರಿಗೂ ಮತ್ತು ಪಾಂಡವರ ಕಡೆಯವರಿಗೂ ರಥ-ಗಜಗಳ ಸಮ್ಮಿಶ್ರ ಯುದ್ಧವು ಪ್ರಾರಂಭವಾಯಿತು."

೧೫೨ನೆಯ ಅಧ್ಯಾಯವು ಮುಗಿಯಿತು.

---

## ಹದಿನಾಲ್ಕನೆಯ ದಿವಸದ ಯುದ್ಧದ ವಿಶ್ಲೇಷಣೆ

ಹದಿನಾಲ್ಕನೆಯ ದಿವಸದ ಯುದ್ಧವು ಯಾವಾಗ ಮುಗಿಯಿತು? ಯುದ್ಧಾನಂತರ ಎಲ್ಲ ಸೈನಿಕರೂ ತಮ್ಮ-ತಮ್ಮ ಶಿಬಿರಗಳಿಗೆ ಹೋಗಿದ್ದರೇ? ಬೆಳಗಾಗುತ್ತಲೇ ಪುನಃ ಬಂದರೆ?–ಎಂಬ ಪ್ರಶ್ನೆಗಳಿಗೆ ಮೂಲದಲ್ಲಿ ಉತ್ತರವು ಸಿಕ್ಕುವುದಿಲ್ಲ. ಹದಿನಾಲ್ಕನೆಯ ದಿವಸದ ರಾತ್ರಿಯಲ್ಲೇ ಪುನಃ ಯುದ್ಧವು ಪ್ರಾರಂಭವಾಯಿತೇ?–ಎಂಬುದೂ ಸ್ಪಷ್ಟವಾಗಿಲ್ಲ. ೧೫೧ನೆಯ ಅಧ್ಯಾಯದ ೪೦ನೆಯ ಶ್ಲೋಕದಲ್ಲಿ ದ್ರೋಣರು **'ರಾತ್ರಾವಪಿ ಚ ಯೋತ್ಸ್ಯನ್ತೇ ಸಂರಬ್ಧಾಃ ಕುರುಸೃಂಜಯಾಃ'**–'ಕ್ರುದ್ಧರಾದ ಕುರು-ಸೃಂಜಯರು ರಾತ್ರಿಯಲ್ಲಿಯೂ ಯುದ್ಧಮಾಡುತ್ತಾರೆ'–ಎಂದು ಹೇಳಿರುವುದರಿಂದ ಮುಂದೆ ನಡೆಯುವುದು ರಾತ್ರಿಯ ಯುದ್ಧವೆಂದು ಊಹಿಸಬಹುದಾಗಿದೆ.

ಹದಿನಾಲ್ಕನೆಯ ದಿವಸದ ಯುದ್ಧವನ್ನು ೫೧ನೆಯ ಅಧ್ಯಾಯದಿಂದ ೧೫೧ನೆಯ ಅಧ್ಯಾಯದವರೆಗೆ ವಿಶ್ಲೇಷಿಸಬೇಕಾಗಿದೆ. ಈ ಪ್ರಕರಣದಲ್ಲಿ ಭಂಡಾರ್‌ಕರ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನವರು ಪ್ರಕಟಿಸಿರುವ ಪುಸ್ತಕ ದಲ್ಲಿ ಕೇವಲ ೭೮ ಅಧ್ಯಾಯಗಳು ಮಾತ್ರ ಇವೆ. ೨೨ ಅಧ್ಯಾಯಗಳ ವ್ಯತ್ಯಾಸವಿದೆ. ೫೨ನೆಯ ಅಧ್ಯಾಯದಿಂದ ೭೨ನೆಯ ಅಧ್ಯಾಯದವರೆಗಿರುವ

೨೦ ಅಧ್ಯಾಯಗಳು ಭಂ. ರಿ. ಇನ್‌ಸ್ಟಿಟ್ಯೂಟ್ ಅವರ ಪುಸ್ತಕದಲ್ಲಿರುವುದಿಲ್ಲ. ಉಳಿದೆಲ್ಲ ಪುಸ್ತಕಗಳಲ್ಲಿಯೂ ಈ ಅಧ್ಯಾಯಗಳಿವೆ. ಪರ್ವಸಂಗ್ರಹ ಪರ್ವದಲ್ಲಿ **ಅತ್ರಾಧ್ಯಾಯಾಃ ಶತಂ ಪ್ರೋಕ್ತಂ ತಥಾಧ್ಯಾಯಾಶ್ಚ ಸಪ್ತತಿಃ**–ಎಂದರೆ ೧೭೦ ಅಧ್ಯಾಯಗಳು ದ್ರೋಣಪರ್ವದಲ್ಲಿರುವುದೆಂದು ಹೇಳಿದೆ. ಎಲ್ಲ ಪುಸ್ತಕಗಳಲ್ಲಿಯೂ ೨೦೨ ಅಧ್ಯಾಯಗಳಿವೆ. ಭಂ. ರಿ. ಇನ್. ಪುಸ್ತಕದಲ್ಲಿ ಮಾತ್ರ ೧೭೩ ಅಧ್ಯಾಯಗಳಿವೆ. ಈ ಹೆಚ್ಚಿನ ೩೨ ಅಥವಾ ೩ ಅಧ್ಯಾಯಗಳು ಯಾವುದೆಂದು ತಿಳಿಯುವುದು ಕಷ್ಟ. ಆದರೂ ಹದಿನಾರು ರಾಜರ ಕಥನವನ್ನು ನೋಡಿದರೆ ಇಲ್ಲಿರುವ ೨೨ ಅಧ್ಯಾಯಗಳು ಹೆಚ್ಚಿನ ಅಧ್ಯಾಯಗಳಿರಬಹುದೇ?–ಎಂಬ ಸಂಶಯವುಂಟಾಗುತ್ತದೆ. ಮೂಲ ಕಥೆಗೂ ಇಲ್ಲಿರುವ ಕಥೆಗಳಿಗೂ ನೇರವಾದ ಸಂಬಂಧವೇನೂ ಕಾಣುವುದಿಲ್ಲ. ಪ್ರಕರಣವನ್ನೇ ನೂತನವಾಗಿ ಕಲ್ಪಿಸಿರುವಂತೆ ಕಾಣುತ್ತದೆ. ಈ ಅಧ್ಯಾಯಗಳಲ್ಲಿ ಕಾಣುವ ಮತ್ತೊಂದು ವೈಶಿಷ್ಟ್ಯವೆಂದರೆ : ಧೃತರಾಷ್ಟ್ರನು ಹೇಳಿದ ಮಾತು ಒಂದೂ ಇಲ್ಲ. ಎರಡನೆಯದಾಗಿ : ೫೬ನೆಯ ಅಧ್ಯಾಯದಿಂದ ೭೦ನೆಯ ಅಧ್ಯಾಯದವರೆಗೆ ಸಂಜಯನ ಮಾತೂ ಇಲ್ಲ. ಇಲ್ಲಿ ಬರುವ ೧೬ ರಾಜರ ಗುಣಕಥನವು ನಮಗೆ ಬೇರೆ ಯಾವ ಪುರಾಣಗಳಲ್ಲಿಯೂ ಕಂಡುಬರುವುದಿಲ್ಲ. ಇಲ್ಲಿರುವ ಶಿಬಿ, ಭಗೀರಥ ಮುಂತಾದವರ ಕಥೆಗಳು ಪುರಾಣಾಂತರಗಳಲ್ಲಿರುವ ಅವರ ಕಥೆಗಳಿಗಿಂತ ಭಿನ್ನವಾಗಿದೆ.

೭೨ನೆಯ ಅಧ್ಯಾಯದಲ್ಲಿ ಸಾಯಂಕಾಲವಾಗುತ್ತಲೇ ಸಂಶಪ್ತಕರೊಡನೆ ಯುದ್ಧಮಾಡುತ್ತಿದ್ದ ಅರ್ಜುನನು ಶಿಬಿರಕ್ಕೆ ಹಿಂದಿರುಗುತ್ತಾನೆ. ಹಾದಿಯಲ್ಲಿ ಅಪಶಕುನಗಳು ಕಾಣಿಸಿಕೊಳ್ಳುತ್ತವೆ. **ಬಹುಪ್ರಕಾರಾ ದೃಶ್ಯಂತೇ ಸರ್ವ ಏವಾಘಶಂಸಿನಃ । ಅಪಿ ಸ್ವಸ್ತಿ ಭವೇದ್ರಾಜ್ಞಃ ಸಾಮಾತ್ಯಸ್ಯ ಗುರೋರ್ಮಮ ॥೬॥** ಅಮಂಗಳದ ಸೂಚನೆಗಳು ಕಂಡುಬರುತ್ತಿವೆ. ನನ್ನ ಗುರುವಾದ ರಾಜನು ಕುಶಲಿಯಾಗಿರುವನೇ?–ಎಂದು ಅರ್ಜುನನು ಪ್ರಶ್ನಿಸುತ್ತಾನೆ. ಅದಕ್ಕುತ್ತರವಾಗಿ ಶ್ರೀಕೃಷ್ಣನು "ರಾಜನು ಕುಶಲಿಯಾಗಿದ್ದಾನೆ. ಬೇರೆ ಯಾವುದೋ ಅನಿಷ್ಟವು ಸಂಭವಿಸಿರಬಹುದು" ಎನ್ನುತ್ತಾನೆ. ಶಿಬಿರವನ್ನು ಪ್ರವೇಶಿಸಿದನಂತರ ಅವನಿಗೆ ಅಭಿಮನ್ಯುವಿನ ವಧೆಯಾಗಿದೆಯೆಂಬುದು ತಿಳಿಯುತ್ತದೆ. ಬಹಳವಾಗಿ ದುಃಖಪಡುತ್ತಾನೆ. ಮುಂದೆ ೫೯ನೆಯ ಶ್ಲೋಕ

ದಲ್ಲಿ 'ದೃಪ್ತರಾದ ಧೃತರಾಷ್ಟ್ರನ ಮಕ್ಕಳ ಸಿಂಹನಾದವು ನನಗೆ ಕೇಳಿಸಿತು' 'ಯುಯುತ್ಸುವು ಹೇಳಿದುದು ಶ್ರೀಕೃಷ್ಣನಿಗೆ ಕೇಳಿಸಿತು'–ಎಂದು ಹೇಳಿ ಯುಯುತ್ಸುವು ರಣರಂಗದಲ್ಲಿ ಹೇಳಿದ ಮೂರು ಶ್ಲೋಕಗಳು ಇಲ್ಲಿ ಬರುತ್ತವೆ. ಮುಂದಿನ ಶ್ಲೋಕದಲ್ಲಿ (೬೪) ಈ ವಿಷಯವನ್ನು ನೀನು ರಣರಂಗದಲ್ಲಿಯೇ ಏಕೆ ಹೇಳಲಿಲ್ಲ?–ಎಂದು ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ. ೫೯ ರಿಂದ ೬೫ರ ವರೆಗಿರುವ ಶ್ಲೋಕಗಳು ಹಿಂದಿನ ಕಥಾಸಂದರ್ಭಕ್ಕೆ ಹೊಂದಿಕೆಯಾಗುವುದಿಲ್ಲ. ಇಬ್ಬರೂ ಒಂದೇ ರಥದಲ್ಲಿ ಕುಳಿತಿರುವಾಗ ಅರ್ಜುನನಿಗೆ ಸಿಂಹನಾದವು ಕೇಳಿಸಿತು ; ಯುಯುತ್ಸುವು ಹೇಳಿದುದು ಶ್ರೀಕೃಷ್ಣನಿಗೆ ಕೇಳಿಸಿತು. ಯುಯುತ್ಸುವಿನ ಮಾತು ಅರ್ಜುನನಿಗೆ ಏಕೆ ಕೇಳಿಸಲಿಲ್ಲ? ಎಂಬ ಪ್ರಶ್ನೆಯು ಹುಟ್ಟುತ್ತದೆ. ಎರಡನೆಯದಾಗಿ : ಈ ಹಿಂದೆ ಅಪಶಕುನವಾದ ಸಮಯದಲ್ಲಿ ಅರ್ಜುನನು ಶ್ರೀಕೃಷ್ಣನನ್ನು ಕೇಳಿದಾಗ ಈ ಪ್ರಸ್ತಾಪವೇ ಬರುವುದಿಲ್ಲ. ಮುಂದೆ ಶಿಬಿರಪ್ರವೇಶಮಾಡಿದಾಗಲೂ 'ಅಭಿಮನ್ಯುವು ನನ್ನನ್ನು ಸ್ವಾಗತಿಸಲು ನನ್ನ ಸಹೋದರರೊಡನೆ ಪ್ರತಿನಿತ್ಯವೂ ಬರುತ್ತಿದ್ದನು. ಇಂದೇಕೆ ಬರಲಿಲ್ಲ?' (೧೬) ಎಂಬುದಾಗಿ ಹೇಳುತ್ತಾನೆ. ಇದರಿಂದ ಅರ್ಜುನನಿಗೆ ಅಭಿಮನ್ಯುವಿನ ಮರಣವಾರ್ತೆಯು ಶಿಬಿರಕ್ಕೆ ಪ್ರವೇಶಿಸುವವರೆಗೂ ತಿಳಿದಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಈ ಮಧ್ಯದಲ್ಲಿ ಶ್ರೀಕೃಷ್ಣನು ಒಂದು ಮಾತನ್ನೂ ಆಡುವುದಿಲ್ಲ. ಹೀಗಿರುವಾಗ ಯುಯುತ್ಸುವು ಹೇಳಿದನೆಂದು ಅರ್ಜುನನು ನಿರೂಪಿಸಿರುವುದನ್ನು ಶ್ರೀಕೃಷ್ಣನು ಅರ್ಜುನನಿಗೆ ಯಾವಾಗ ಹೇಳಿದನು? ಎಂಬ ಪ್ರಶ್ನೆಯು ಹುಟ್ಟುತ್ತದೆ. ಈ ಶ್ಲೋಕಗಳು ಎಲ್ಲ ಪುಸ್ತಕಗಳಲ್ಲಿಯೂ ಇರುವುದಾದರೂ ಪೂರ್ವಾಪರಸಮನ್ವಯವಾಗದೇ ಇರುವುದರಿಂದ ೫೯ ರಿಂದ ೬೪ರ ವರೆಗಿನ ಶ್ಲೋಕಗಳನ್ನು ಹೆಚ್ಚು ಶ್ಲೋಕಗಳೆಂದು ಭಾವಿಸಬಹುದಾಗಿದೆ. ಈ ಶ್ಲೋಕಗಳನ್ನು ಬಿಟ್ಟರೂ ಕಥೆಯ ಸುಸಂಗತನಿರೂಪಣೆಗೆ ಯಾವ ಕುಂದೂ ಉಂಟಾಗುವುದಿಲ್ಲ.

೭೩ನೆಯ ಅಧ್ಯಾಯದಲ್ಲಿರುವ ಅರ್ಜುನನ ಪ್ರತಿಜ್ಞಾಪ್ರಕರಣವು ಪರ್ಯಾಯಾಂತರವಾಗಿ ಯಥಾರ್ಥವಾದ ಧರ್ಮನಿರೂಪಣೆಯೇ ಆಗಿದೆ. ಧರ್ಮರಹಿತವಾದ ಕಾರ್ಯಗಳು ಯಾವುವು–ಎಂಬುದನ್ನು ಸ್ಪಷ್ಟಪಡಿಸುತ್ತದೆ. ಪ್ರತಿಜ್ಞಾಪ್ರಕರಣದಲ್ಲಿ ಇದು ಬಹುಮುಖ್ಯವಾಗಿ ಗಮನಿಸಬೇಕಾದ

ವಿಷಯ. **"ನಗ್ನಸ್ಯ ಸ್ನಾಯಮಾನಸ್ಯ ॥೩೨॥** 'ಪ್ರತಿಜ್ಞೆಯ ಭಂಗವಾದರೆ ನಗ್ನನಾಗಿ ಸ್ನಾನಮಾಡಿದವನಿಗೆ ಪ್ರಾಪ್ತವಾಗುವ ದುರ್ಗತಿಯುಂಟಾಗಲಿ' ಎನ್ನುತ್ತಾನೆ ಅರ್ಜುನ. ಅರ್ಥಾತ್ ನಗ್ನನಾಗಿ ಸ್ನಾನಮಾಡಿದರೆ ಎಷ್ಟು ಪಾಪವೆಂಬುದನ್ನು ತಿಳಿದುಕೊಳ್ಳಬೇಕಾಗಿದೆ. ಎಲ್ಲ ಅಂಶಗಳೂ ಹೀಗೆಯೇ ನಿರೂಪಿತವಾಗಿವೆ.

೭೮ನೆಯ ಅಧ್ಯಾಯದಲ್ಲಿ ಸುಭದ್ರೆಯು ತನ್ನ ಪುತ್ರನಿಗೆ ಸದ್ಗತಿಯಾಗಲೆಂದು ಆಶಿಸಿ ಹೇಳುವಾಗ ಎಂತಹವರಿಗೆ ಸಿಗುವ ಸದ್ಗತಿ ಎಂಬುದನ್ನು ನಿರೂಪಿಸುತ್ತಾ ಹೇಳುವ ಮಾತುಗಳು ಬಹಳ ರಮ್ಯವಾಗಿವೆ. ಸದ್ಗತಿಯನ್ನು ಪಡೆಯಲು ಅರ್ಹರಾದವರು ಯಾರೆಂಬುದನ್ನು ಸುಭದ್ರೆಯ ಮಾತಿನಿಂದ ನಾವು ಗುರುತಿಸಬಹುದಾಗಿದೆ. **ಮಾತಾಪಿತ್ರೋಶ್ಚ ಶುಶ್ರೂಷಾಂ ಕಲ್ಪಯನ್ತೀಹ ಯೇ ಸದಾ ॥೩೧॥** 'ಮಾತಾ-ಪಿತೃಗಳ ಶುಶ್ರೂಷೆಯನ್ನು ಯಾರು ನಿರಂತರವಾಗಿ ಮಾಡುತ್ತಾರೆಯೋ–ಅವರಿಗೆ ಲಭ್ಯವಾಗುವ ಪುಣ್ಯಲೋಕಗಳು ನಿನಗೂ ಲಭಿಸಲಿ.' ಅನವರತವಾಗಿ ತಂದೆ-ತಾಯಿಗಳನ್ನು ಶುಶ್ರೂಷೆಮಾಡುವುದರಿಂದ ಸದ್ಗತಿಯು ಸಿಕ್ಕುವುದೆಂಬುದು ಸಿದ್ಧಾಂತವಾದಂತಾಯಿತು. ಹೀಗೆಯೇ ಪುಣ್ಯಕರ್ಮಗಳೆಲ್ಲವನ್ನೂ ಸುಭದ್ರೆಯು ನಿರೂಪಿಸುತ್ತಾ ಹೋಗುತ್ತಾಳೆ. ಅರ್ಜುನನ ಪ್ರತಿಜ್ಞಾಧ್ಯಾಯದಂತೆಯೇ ಧರ್ಮದ ರಹಸ್ಯವನ್ನರಿಯಲು ಈ ಅಧ್ಯಾಯವೂ ಸಹ ಸಾಧಕವಾಗಿದೆ.

೭೯ನೆಯ ಅಧ್ಯಾಯವು ಬಹಳ ರಸವತ್ತಾದುದು. ಶ್ರೀಕೃಷ್ಣನಿಗೆ ಅರ್ಜುನನ ಮೇಲಿರುವ ಅಪಾರವಾದ ಪ್ರೀತಿಯನ್ನು ಈ ಅಧ್ಯಾಯದಲ್ಲಿ ವ್ಯಾಸರು ಸಾರವತ್ತಾಗಿ ನಿರೂಪಿಸಿದ್ದಾರೆ. 'ಅರ್ಜುನನಿಲ್ಲದ ಈ ಲೋಕವನ್ನು ನಾನು ಮುಹೂರ್ತಮಾತ್ರವೂ ನೋಡಲು ಶಕ್ತನಾಗಿಲ್ಲ. ಹಾಗೆ ಆಗುವುದೂ ಇಲ್ಲ' (೨೭) ಎನ್ನುತ್ತಾನೆ ಶ್ರೀಕೃಷ್ಣ. ಅರ್ಜುನನ ವಿಜಯಕ್ಕಾಗಿಯೇ ಈಶ್ವರನನ್ನು ರಾತ್ರಿಯಲ್ಲಿ ಪೂಜಿಸುತ್ತಾನೆ. 'ಅವನೇ ನಾನು. ನಾನೇ ಅವನು'– ಎಂಬುದನ್ನು ಶ್ರೀಕೃಷ್ಣನು ಪ್ರತಿಪಾದನೆಮಾಡುತ್ತಾನೆ.

**ಶರೀರಾರ್ಧಂ ಮಮಾರ್ಜುನಃ** = ಅರ್ಜುನನು ನನ್ನ ಅರ್ಧಶರೀರ ಎಂದು ಹೇಳುತ್ತಾನೆ (೩೩). ೮೦ನೆಯದು ಅರ್ಜುನನ ಸ್ವಪ್ನಾಧ್ಯಾಯ.

ಇದು ಬಹಳ ಸುಂದರವಾದ ಅಧ್ಯಾಯ. ಸ್ವಪ್ನಸಮಯದಲ್ಲಿ ಅಂತರಂಗದಲ್ಲಿರುವ ವಿಷಯಗಳು ಯಥಾವತ್ತಾಗಿ ಹೊರಹೊಮ್ಮುವುದೆಂದು ಹೇಳುತ್ತಾರೆ. ಸ್ವಪ್ನದಲ್ಲಿ ಶ್ರೀಕೃಷ್ಣನೊಡನೆ ತನ್ನ ಪ್ರತಿಜ್ಞೆಯು ನೆರವೇರಲಾರದೆಂಬ ಆತಂಕವನ್ನು ಅರ್ಜುನನು ವ್ಯಕ್ತಪಡಿಸುತ್ತಾನೆ. **ಪ್ರತಿಜ್ಞಾಪಾರಣಂ ಚಾಪಿ ನ ಭವಿಷ್ಯತಿ ಕೇಶವ** (೧೫) ಪ್ರತಿಜ್ಞೆಯು ಪೂರ್ಣವಾಗುವುದಿಲ್ಲ–ಎಂದು ಹೇಳುತ್ತಾನೆ. ೭೫ನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಬಲಾಬಲಗಳನ್ನು ಪ್ರಸ್ತಾಪಿಸಿದಾಗ ೭೬ನೆಯ ಅಧ್ಯಾಯದಲ್ಲಿ ತನ್ನ ಪೌರುಷವನ್ನು ಹೇಳಿಕೊಳ್ಳುತ್ತಾ **ತೇಷಾಂ ವೀರ್ಯಂ ಮಮಾರ್ಧೇನ ನ ತುಲ್ಯಂ** = ಅವರ ಪರಾಕ್ರಮಗಳೆಲ್ಲವೂ ಒಟ್ಟಾಗಿ ಸೇರಿದರೂ ನನ್ನ ಪರಾಕ್ರಮದ ಅರ್ಧದಷ್ಟಾಗುವುದಿಲ್ಲ (೧) ಎನ್ನುತ್ತಾನೆ ಅರ್ಜುನ. ಅರ್ಜುನನು ಬಹಿರಂಗದಲ್ಲಿ ಪರಾಕ್ರಮದ ಮಾತನ್ನಾಡುತ್ತಿದ್ದರೂ ಅಂತರಂಗದಲ್ಲಿ ಪ್ರತಿಜ್ಞೆಯು ಪೂರ್ಣವಾಗುವುದೋ–ಇಲ್ಲವೋ ಎಂಬ ಸಂಶಯವು ಅರ್ಜುನನಿಗೆ ಇದ್ದಿತೆಂಬುದನ್ನು ಅವನ ಕನಸಿನ ಪ್ರಕರಣವು ನಿರೂಪಿಸುತ್ತದೆ. ಈ ಅಧ್ಯಾಯದಲ್ಲಿ ಕೃಷ್ಣಾರ್ಜುನರು ಮಾಡುವ ಶಿವಸ್ತುತಿಯು ರುದ್ರಾಧ್ಯಾಯದ ಪದಗಳಿಂದಲೇ ಕೂಡಿದ್ದು ಬಹಳ ಸುಂದರವಾಗಿದೆ. ೮೧ನೆಯ ಅಧ್ಯಾಯದಲ್ಲಿ ಅರ್ಜುನನು ಕನಸಿನಲ್ಲಿಯೇ ಪುನಃ ಪಾಶುಪತಾಸ್ತ್ರವನ್ನು ಪಡೆದುಕೊಳ್ಳುವ ಪ್ರಕರಣವು ಬರುತ್ತದೆ. ಆದರೆ ಜಯದ್ರಥನ ವಧೆಗೆ ಅರ್ಜುನನು ಪಾಶುಪತಾಸ್ತ್ರವನ್ನು ಉಪಯೋಗಿಸುವುದಿಲ್ಲ.

೮೫ನೆಯ ಅಧ್ಯಾಯವು ಪೂರ್ತಿಯಾಗಿ ಧೃತರಾಷ್ಟ್ರನ ಮಾತುಗಳಿಂದಲೇ ತುಂಬಿಹೋಗಿದೆ. ಇದರಲ್ಲೊಂದು ಸ್ವಾರಸ್ಯವಿದೆ. ಪ್ರತಿಜ್ಞಾಪರ್ವವು ೭೨ನೆಯ ಅಧ್ಯಾಯದಿಂದ ಪ್ರಾರಂಭವಾಗಿ ೮೪ನೆಯ ಅಧ್ಯಾಯಕ್ಕೆ ಮುಗಿಯುತ್ತದೆ. ಈ ಪ್ರತಿಜ್ಞಾಪರ್ವದಲ್ಲಿ ಅರ್ಜುನನು ಜಯದ್ರಥನನ್ನು ಸಂಹರಿಸುವುದಾಗಿ ಘೋರಪ್ರತಿಜ್ಞೆಯನ್ನು ಮಾಡುವುದು ; ಅರ್ಜುನನ ಪ್ರತಿಜ್ಞೆಯನ್ನು ಕೇಳಿದ ಕೌರವರು ಜಯದ್ರಥನ ರಕ್ಷಣೆಗೆ ದ್ರೋಣರೊಡನೆ ಸಮಾಲೋಚಿಸಿ ವ್ಯವಸ್ಥೆಮಾಡುವುದು ; ಅರ್ಜುನನ ಕನಸು ; ಪಾಶುಪತಾಸ್ತ್ರದ ಪುನಃಪ್ರಾಪ್ತಿ–ಇತ್ಯಾದಿ ಅನೇಕ ಮುಖ್ಯಾಂಶಗಳು ಉಕ್ತವಾಗಿವೆ. ಪ್ರತಿಜ್ಞಾಪರ್ವದ ಪೂರ್ತಿಯಾಗಿ ಧೃತರಾಷ್ಟ್ರನು ಒಂದು ಪ್ರಶ್ನೆಯನ್ನೂ

ಕೇಳುವುದಿಲ್ಲ. ಆದರೆ ಧೃತರಾಷ್ಟ್ರನು ಅರ್ಜುನನ ಪ್ರತಿಜ್ಞೆಯ ವಿಷಯ ವನ್ನಾಗಲೀ–ಜಯದ್ರಥನನ್ನು ರಕ್ಷಿಸಲು ಕೌರವರು ಮಾಡಿಕೊಂಡ ವ್ಯವಸ್ಥೆ ಯನ್ನಾಗಲೀ ಪ್ರಸ್ತಾಪಿಸುವುದಿಲ್ಲ. ಅವುಗಳೊಂದೂ ತನಗೆ ತಿಳಿಯದಂತೆಯೇ ಇಲ್ಲಿ ಇವನು ಮಾತನಾಡಿದ್ದಾನೆ.

**ಶ್ವೋಭೂತೇ ಕಿಮಕಾರ್ಷುಸ್ತೇ ದುಃಖಶೋಕಸಮನ್ವಿತಾಃ ।**
**ಅಭಿಮನ್ಯೌ ಹತೇ ತತ್ರ ಕೇ ವಾ ಯುಧ್ಯಂತ ಮಾಮಕಾಃ ॥೧॥**

**ಜಾನನ್ತಸ್ತಸ್ಯ ಕರ್ಮಾಣಿ ಕುರವಃ ಸವ್ಯಸಾಚಿನಃ ।**
**ಕಥಂ ತತ್ಕಿಲ್ಬಿಷಂ ಕೃತ್ವಾ ನಿರ್ಭಯಾ ಬ್ರೂಹಿ ಮಾಮಕಾಃ ॥೨॥**

'ಅಭಿಮನ್ಯುವು ಹತನಾದನಂತರ ದುಃಖದಿಂದಲೂ–ಶೋಕದಿಂದಲೂ ಕೂಡಿದ್ದ ಪಾಂಡವರು ಬೆಳಗಾಗುತ್ತಲೇ ಏನು ಮಾಡಿದರು? ಸವ್ಯಸಾಚಿ ಯಾದ ಅರ್ಜುನನ ಅದ್ಭುತಕರ್ಮಗಳನ್ನು ತಿಳಿದಿದ್ದ ಕುರುಗಳು ಅವನಿಗೆ ಮಹಾಪರಾಧವನ್ನೆಸಗಿದ್ದರೂ ನಿರ್ಭಯರಾಗಿ ಹೇಗಿದ್ದರು?' ಧೃತರಾಷ್ಟ್ರನ ಈ ಪ್ರಶ್ನೆಗಳನ್ನು ವಿಶ್ಲೇಷಿಸಿದರೆ ಅವನಿಗೆ ಅರ್ಜುನನು ಪ್ರತಿಜ್ಞೆಮಾಡಿದ ವಿಷಯವಾಗಲೀ–ಕೌರವರು ಜಯದ್ರಥನನ್ನು ರಕ್ಷಿಸಲು ಸಿದ್ಧಪಡಿಸಿದ್ದ ವ್ಯವಸ್ಥೆಯಾಗಲೀ ತಿಳಿದಿರಲಿಲ್ಲವೇ? ಎಂಬ ಸಂಶಯವುಂಟಾಗುತ್ತದೆ. ಆದರೆ ಪ್ರತಿಜ್ಞಾಪರ್ವವೇ ಪ್ರಕ್ಷಿಪ್ತವೆಂದು ಸಂಶಯಪಡಬೇಕಾಗಿಲ್ಲ. ಅರ್ಜುನನು ಮಾಡಿದ ಪ್ರತಿಜ್ಞೆಯನ್ನು ಮುಂದೆ ಹಲವು ಬಾರಿ ಅನೇಕರು ಪ್ರಸ್ಥಾಪಿಸುತ್ತಾರೆ. ೮೫ನೆಯ ಅಧ್ಯಾಯವು ಧೃತರಾಷ್ಟ್ರನ ಮಾತಿನಿಂದ ಪೂರ್ಣವಾಗಿದ್ದರೆ ೮೬ನೆಯ ಅಧ್ಯಾಯವು ಸಂಜಯನೊಬ್ಬನ ಮಾತಿನಿಂದಲೇ ಪೂರ್ಣ ವಾಗಿದೆ. ಆದುದರಿಂದ ಈ ಎರಡು ಅಧ್ಯಾಯಗಳೂ ಸ್ಥಾನವ್ಯತ್ಯಾಸವಾಗಿರ ಬಹುದು. ೭೧ನೆಯ ಅಧ್ಯಾಯದ ನಂತರ ಈ ಎರಡು ಅಧ್ಯಾಯಗಳೂ ಇದ್ದಿರಬಹುದೆಂದು ನಮ್ಮ ಊಹೆಯಾಗಿದೆ. ಈ ಎರಡು ಅಧ್ಯಾಯಗಳನ್ನೂ ಅಲ್ಲಿ ಓದಿಕೊಂಡರೆ ಯಾವ ವಿಧವಾದ ಅಸಾಮಂಜಸ್ಯವೂ ಇರುವುದಿಲ್ಲ. 'ಬೆಳಗಾಗುತ್ತಲೇ ಏನಾಯಿತು?' ಎಂದು ಧೃತರಾಷ್ಟ್ರನು ಕೇಳಿದಾಗ ರಾತ್ರಿ ನಡೆದುದೆಲ್ಲವನ್ನೂ ಸಂಜಯನು ತಿಳಿಸುವುದು ಅಸಂಗತವಾಗುವುದಿಲ್ಲ. ೭೨ನೆಯ ಅಧ್ಯಾಯದ ಮೊದಲಿನಲ್ಲಿ ಪಾಠಾಂತರಾನುಸಾರ ಧೃತರಾಷ್ಟ್ರನು

ಹೇಳಿದ 3 ಶ್ಲೋಕಗಳೇನೋ ಇವೆ. ಆ ಶ್ಲೋಕಗಳಲ್ಲಿ ಸುತಪಾವಕನು (ಅಭಿಮನ್ಯುವು) ಶಾಂತನಾದುದನ್ನು ಅರ್ಜುನನಿಗೆ ಯಾರು ಹೇಳಿದರೆಂದು ಧೃತರಾಷ್ಟ್ರನು ಪ್ರಶ್ನಿಸುತ್ತಾನೆ. ಆದರೆ ಈ ಶ್ಲೋಕಗಳು ದಾಕ್ಷಿಣಾತ್ಯಪಾಠದಲ್ಲಿವೆ. ಮತ್ತಾವ ಪುಸ್ತಕದಲ್ಲಿಯೂ ಇರುವುದಿಲ್ಲ.

ಹದಿನಾಲ್ಕನೆಯ ದಿವಸ ದ್ರೋಣರು ಚಕ್ರಶಟಕವ್ಯೂಹವನ್ನು ರಚಿಸುತ್ತಾರೆ. ಇದೊಂದು ಮಹಾವ್ಯೂಹ. ಇದರ ವಿನ್ಯಾಸವನ್ನು ಸಾಮಾನ್ಯ ರೀತಿಯಲ್ಲಿ ಹೇಳಿದ್ದಾರೆ. ಈ ವ್ಯೂಹದೊಳಗೆ ಪದ್ಮವ್ಯೂಹ ಮತ್ತು ಅದರೊಳಗೆ ಸೂಚೀವ್ಯೂಹವಿದ್ದಿತು. ಅರ್ಜುನ, ಭೀಮ, ಸಾತ್ಯಕಿ, ಯುಧಾಮನ್ಯೂತ್ತಮೌಜಸರು–ಈ ಐದು ಮಂದಿಗೆ ಮಾತ್ರವೇ ವ್ಯೂಹವನ್ನು ಪ್ರವೇಶಿಸಲು ಸಾಧ್ಯವಾಯಿತೆಂದರೆ ವ್ಯೂಹದ ಭದ್ರತೆಯು ಎಷ್ಟಿತ್ತೆಂಬುದನ್ನು ಊಹಿಸಬಹುದಾಗಿದೆ.

೮೮, ೮೯, ೯೦, ೯೧ನೇ ಅಧ್ಯಾಯಗಳಲ್ಲಿ–ಅರ್ಜುನನ ಪರಾಕ್ರಮದ ಅದ್ಭುತವರ್ಣನೆಯಿದೆ. ೯೧ನೆಯ ಅಧ್ಯಾಯದಲ್ಲಿ ಅರ್ಜುನನು ದ್ರೋಣರೊಡನೆ ಹೇಳುವ ಮಾತು ಹೃದಯಂಗಮವಾಗಿದೆ. 'ನಿಮ್ಮ ಮಗನನ್ನು ರಕ್ಷಿಸುವಂತೆಯೇ ನನ್ನನ್ನೂ ತಾವು ರಕ್ಷಿಸಬೇಕು' (೫) ಎಂದು ಅರ್ಜುನನು ಕೇಳಿಕೊಳ್ಳುತ್ತಾನೆ. ಆಚಾರ್ಯರೊಡನೆ ಕಾಠಿಣ್ಯದಿಂದ ಯುದ್ಧಮಾಡುವುದಾಗಲೀ–ವರ್ತಿಸುವುದಾಗಲೀ ಅವನಿಗೆ ಇಷ್ಟವಿಲ್ಲ. ಯುದ್ಧಮಾಡುತ್ತಿದ್ದಾಗ ಶ್ರೀಕೃಷ್ಣನ ಸಲಹೆಯಂತೆ ಮಧ್ಯದಲ್ಲಿಯೇ ಯುದ್ಧವನ್ನು ನಿಲ್ಲಿಸಿ ವ್ಯೂಹದೊಳಕ್ಕೆ ನುಗ್ಗಿ ಹೊರಟುಹೋಗುತ್ತಾನೆ.

೯೨ನೆಯ ಅಧ್ಯಾಯದಲ್ಲಿ–ಶ್ರುತಾಯುಧನೆಂಬುವನು ತನ್ನ ಗದೆಯಿಂದ ತಾನೇ ಹತನಾಗುವ ಬಹಳ ಸ್ವಾರಸ್ಯವಾದ ಪ್ರಕರಣವು ಬರುತ್ತದೆ. ೯೩ನೆಯ ಅಧ್ಯಾಯದಲ್ಲಿ–ಶ್ರುತಾಯು ಮತ್ತು ಅಚ್ಯುತಾಯುಗಳು ಅರ್ಜುನನನ್ನು ಮೂರ್ಛೆಗೊಳಿಸುತ್ತಾರೆ. ಪ್ರಜ್ಞೆಯನ್ನು ಪುನಃ ಪಡೆದುಕೊಂಡ ನಂತರ ಅರ್ಜುನನು ಅವರ ಸಂಹಾರಕ್ಕಾಗಿ ಐಂದ್ರಾಸ್ತ್ರವನ್ನು ಪ್ರಯೋಗಿಸುತ್ತಾನೆ. ೯೪ನೆಯ ಅಧ್ಯಾಯದಲ್ಲಿ–ದ್ರೋಣರು ಅರ್ಜುನನನ್ನು ವ್ಯೂಹದೊಳಗೆ ಬಿಟ್ಟುದಕ್ಕಾಗಿ ದುರ್ಯೋಧನನು ಅವರನ್ನು ತೆಗಳುತ್ತಾನೆ. ದ್ರೋಣರು ಯುಕ್ತಿಯುಕ್ತವಾಗಿಯೇ ಉತ್ತರಕೊಟ್ಟು ಅರ್ಜುನನೊಡನೆ

ಯುದ್ಧಮಾಡಲು ದುರ್ಯೋಧನನನಿಗೆ ಸಾಧ್ಯವಾಗುವಂತೆ ಕವಚವೊಂದನ್ನು ತೊಡಿಸುತ್ತಾರೆ. ಆ ಕವಚದ ವರ್ಣನೆಯಿಂದಲೇ ಈ ಅಧ್ಯಾಯವು ತುಂಬಿ ಹೋಗಿದೆ. ೯೫ನೆಯ ಅಧ್ಯಾಯದಲ್ಲಿ ದ್ರೋಣ-ಧೃಷ್ಟದ್ಯುಮ್ನರ ಭಯಂಕರ ಯುದ್ಧದ ವರ್ಣನೆಯಿದೆ. ೯೬-೯೭ನೆಯ ಅಧ್ಯಾಯಗಳಲ್ಲಿಯೂ ದ್ರೋಣ-ಧೃಷ್ಟದ್ಯುಮ್ನರ ಯುದ್ಧದ ವರ್ಣನೆಯೇ ಇದೆ. ಅಧ್ಯಾಯದ ಕಡೆಯಲ್ಲಿ ಸಾತ್ಯಕಿಯು ಧೃಷ್ಟದ್ಯುಮ್ನನನ್ನು ಪ್ರಾಣಾಪಾಯದಿಂದ ಪಾರು ಮಾಡುತ್ತಾನೆ. ೯೮ನೆಯ ಅಧ್ಯಾಯದಲ್ಲಿ–ದ್ರೋಣ-ಸಾತ್ಯಕಿಯರ ಯುದ್ಧದ ವರ್ಣನೆಯಿದೆ. ೯೯ನೆಯ ಅಧ್ಯಾಯದಲ್ಲಿ–ವ್ಯೂಹವನ್ನು ಪ್ರವೇಶಿಸಿದ ಅರ್ಜುನನ ಪರಾಕ್ರಮದ ವರ್ಣನೆಯಿದೆ. ಈ ಅಧ್ಯಾಯದಲ್ಲಿಯೇ ವಿಂದಾನುವಿಂದರ ಸಂಹಾರವಾಗುತ್ತದೆ. ಅರ್ಜುನನು ರಣರಂಗದಲ್ಲಿ ಕುದುರೆಗಳಿಗಾಗಿ ಜಲಾಶಯವನ್ನು ನಿರ್ಮಿಸುತ್ತಾನೆ. ಶ್ರೀಕೃಷ್ಣನು ಕುದುರೆ ಗಳನ್ನು ಉಪಚರಿಸುತ್ತಿರುವ ಸಮಯದಲ್ಲಿ ಅರ್ಜುನನು ನೆಲದ ಮೇಲೆಯೇ ನಿಂತು ಮಹಾಯೋಧರೊಡನೆ ಯುದ್ಧಮಾಡುವ ಸನ್ನಿವೇಶವು ರೋಮಾಂಚಕಾರಿಯಾಗಿದೆ. ೧೦೦ನೆಯ ಅಧ್ಯಾಯದಲ್ಲಿ–ಅರ್ಜುನನು ಕುದುರೆಗಳು ಕ್ಷಣಕಾಲ ತಂಗಲು ಬಾಣಗಳಿಂದಲೇ ಅಶ್ವಶಾಲೆಯನ್ನು ನಿರ್ಮಿ ಸುತ್ತಾನೆ. ಕುದುರೆಗಳು ದಣಿವಾರಿಸಿಕೊಂಡನಂತರ ಅರ್ಜುನನು ರಥದಲ್ಲಿ ಕುಳಿತು ಎದುರಿಗೆ ಸಿಕ್ಕಿದ ಸೈನಿಕರನ್ನು ಧ್ವಂಸಮಾಡುತ್ತಾ ಜಯದ್ರಥನ ಬಳಿಗೆ ಹೋಗುತ್ತಾನೆ. ೧೦೧ನೆಯ ಅಧ್ಯಾಯದಲ್ಲಿ–ದುರ್ಯೋಧನನು ಅರ್ಜುನ ನೊಡನೆ ಯುದ್ಧಕ್ಕೆ ಹೋಗುತ್ತಾನೆ. ೧೦೨ನೆಯ ಅಧ್ಯಾಯದಲ್ಲಿ–ದುರ್ಯೋಧನನ ಮೇಲೆ ಯುದ್ಧಮಾಡಲು ಶ್ರೀಕೃಷ್ಣನು ಅರ್ಜುನನನ್ನು ಪ್ರೋತ್ಸಾಹಿಸುತ್ತಾನೆ. ದುರ್ಯೋಧನನು ಅರ್ಜುನನೊಡನೆ ಯುದ್ಧದಲ್ಲಿ ತೊಡಗಿದುದನ್ನು ಕಂಡು ಕೌರವಯೋಧರು ಭಯಪಡುತ್ತಾರೆ. ಅವರೆಲ್ಲ ರನ್ನೂ ಆಶ್ವಾಸಿಸುತ್ತಾ ಧೈರ್ಯವಾಗಿ ದುರ್ಯೋಧನನು ಅರ್ಜುನನೊಡನೆ ಯುದ್ಧಕ್ಕೆ ತೊಡಗುತ್ತಾನೆ. ೧೦೩ನೆಯ ಅಧ್ಯಾಯದಲ್ಲಿ–ದ್ರೋಣರು ತೊಡಿಸಿದ್ದ ಕವಚದ ಪ್ರಭಾವದಿಂದ ದುರ್ಯೋಧನನ ಮೇಲೆ ಅರ್ಜುನನ ಬಾಣಗಳು ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡುವುದಿಲ್ಲ. ಅಭೇದ್ಯವಾದ ಆ ಕವಚವನ್ನು ಕತ್ತರಿಸಲು ಅರ್ಜುನನು ಮಾನವಾಸ್ತ್ರ

ವನ್ನು ಪ್ರಯೋಗಿಸುತ್ತಾನೆ. ಆದರೆ ಆ ಮಹಾಸ್ತ್ರವನ್ನು ಮಧ್ಯದಲ್ಲಿಯೇ ಅಶ್ವತ್ಥಾಮನು ಕತ್ತರಿಸಿಬಿಡುತ್ತಾನೆ. ಮುಂದೆ ಅರ್ಜುನನು ಕವಚದ ಆವರಣ ವಿಲ್ಲದ ಸ್ಥಳವನ್ನು ಗುರುತಿಸಿ ಗಾಯಗೊಳಿಸಿ ದುರ್ಯೋಧನನನ್ನು ಪಲಾ ಯನ ಮಾಡುವಂತೆ ಮಾಡುತ್ತಾನೆ. ೧೦೪ನೆಯ ಅಧ್ಯಾಯದಲ್ಲಿ–ಅರ್ಜು ನನು ಕೌರವರೊಡನೆ ಮಾಡಿದ ಭೀಕರಯುದ್ಧದ ವರ್ಣನೆಯಿದೆ. ೧೦೫ ನೆಯ ಅಧ್ಯಾಯದಲ್ಲಿಯೂ ಇದೇ ಮುಂದುವರಿಯುತ್ತದೆ. ಇಲ್ಲಿ ಮಹಾರಥರ ಧ್ವಜಗಳ ವರ್ಣನೆಯಿದೆ. ೧೦೬ನೆಯ ಅಧ್ಯಾಯದಲ್ಲಿ–ವ್ಯೂಹದ ಮುಂಭಾಗದಲ್ಲಿ ದ್ರೋಣರಿಗೂ–ಯುಧಿಷ್ಠಿರನಿಗೂ ನಡೆದ ಯುದ್ಧದ ವರ್ಣನೆಯಿದೆ. ಯುಧಿಷ್ಠಿರನು ರಥವನ್ನು ಕಳೆದುಕೊಂಡು ಪಲಾಯನ ಮಾಡುತ್ತಾನೆ. ೧೦೭ನೆಯ ಅಧ್ಯಾಯದಲ್ಲಿ–ದ್ರೋಣರಿದ್ದ ಕಡೆಯಲ್ಲಿಯೇ ನಾಲ್ಕು ಕೌರವಯೋಧರ ಸಂಹಾರವಾಗುತ್ತದೆ. ದುರ್ಮುಖ-ವಿಕರ್ಣರು ಪರಾಜಯಹೊಂದುತ್ತಾರೆ. ೧೦೮ನೆಯ ಅಧ್ಯಾಯದಲ್ಲಿ–ದ್ರೌಪದಿಯ ಮಕ್ಕಳು ಶಲನನ್ನು ಸಂಹಾರಮಾಡುತ್ತಾರೆ. ಭೀಮಸೇನನು ಅಲಂಬುಷ ನನ್ನು ಪರಾಜಯಗೊಳಿಸುತ್ತಾನೆ. ೧೦೯ನೆಯ ಅಧ್ಯಾಯದಲ್ಲಿ–ರಾಕ್ಷಸನಾದ ಅಲಂಬುಷನನ್ನು ಘಟೋತ್ಕಚನು ಸಂಹರಿಸುತ್ತಾನೆ. ೧೧೦ನೆಯ ಅಧ್ಯಾಯ ದಲ್ಲಿ–ದ್ರೋಣ-ಸಾತ್ಯಕಿಯರಿಗೆ ಘೋರಯುದ್ಧವು ನಡೆಯುತ್ತದೆ. ಯುಧಿಷ್ಠಿ ರನು ಸಾತ್ಯಕಿಯನ್ನು ಪ್ರಶಂಸಿಸಿ ಅರ್ಜುನನ ಸಹಾಯಕ್ಕೆ ಹೋಗುವಂತೆ ಪ್ರೇರಿಸುತ್ತಾನೆ. ಹುರಿದುಂಬಿಸುವ ಕಲೆಯನ್ನು ಈ ಅಧ್ಯಾಯ ಮತ್ತು ೧೧೧ನೇ ಅಧ್ಯಾಯಗಳಲ್ಲಿ ಯುಧಿಷ್ಠಿರನಿಂದ ನಾವು ಕಲಿಯಬಹುದಾಗಿದೆ. ೧೧೨ನೆಯ ಅಧ್ಯಾಯದಲ್ಲಿ–ಸಾತ್ಯಕಿಯು ಯುಧಿಷ್ಠಿರನ ರಕ್ಷಣಾಭಾರವನ್ನು ಭೀಮನಿಗೊಪ್ಪಿಸಿ ಅರ್ಜುನನ ಹತ್ತಿರಕ್ಕೆ ಹೋಗಲು ಸಿದ್ಧತೆಯನ್ನು ಮಾಡಿಕೊಳ್ಳುತ್ತಾನೆ. ೧೧೩ನೆಯ ಅಧ್ಯಾಯದಲ್ಲಿ–ಸಾತ್ಯಕಿಯು ದ್ರೋಣ ರೊಡನೆ ಯುದ್ಧಮಾಡದೇ ವ್ಯೂಹದೊಳಕ್ಕೆ ನುಗ್ಗುತ್ತಾನೆ. ಮುಂದೆ ಕೃತವರ್ಮನಿಗೂ-ಸಾತ್ಯಕಿಗೂ ಭಯಂಕರವಾದ ಯುದ್ಧವಾಗುತ್ತದೆ, ೧೧೪ ನೆಯ ಅಧ್ಯಾಯದಲ್ಲಿ–ಧೃತರಾಷ್ಟ್ರನು ತನ್ನ ಸೈನಿಕರನ್ನು ಆರಿಸಲು ಆಗಿನ ಕಾಲದಲ್ಲಿ ಅನುಸರಿಸುತ್ತಿದ್ದ ವಿಧಾನ, ಅವರನ್ನು ನೋಡಿಕೊಳ್ಳುತ್ತಿದ್ದ ಬಗೆ, ಎಲ್ಲವನ್ನೂ ನಾವು ಈ ಅಧ್ಯಾಯದಲ್ಲಿ ಧೃತರಾಷ್ಟ್ರನು ಹೇಳಿರುವ

ಮಾತುಗಳಿಂದ ತಿಳಿದುಕೊಳ್ಳಬಹುದಾಗಿದೆ. ಕೆಲವು ವಿಷಯಗಳು ಇಂದೂ ಸಹ ಅನುಸರಿಸಲು ಯೋಗ್ಯವಾಗಿವೆ. ಇಂತಹ ಸರ್ವಲಕ್ಷಣಸಂಪನ್ನವಾದ ಸೈನ್ಯವಿದ್ದರೂ ತನ್ನ ಕಡೆಯವರು ಪರಾಜಯಹೊಂದುತ್ತಿರುವುದಕ್ಕಾಗಿ ಧೃತರಾಷ್ಟ್ರನು ವಿಷಾದಿಸುತ್ತಾನೆ. ಆದರೆ ಸಂಜಯನು 'ಇಷ್ಟು ಅನಾಹುತಕ್ಕೂ ನೀನೇ ಕಾರಣ' ಎಂದು ಹೇಳುತ್ತಾನೆ. ರಾಜನನ್ನು ಮೂದಲಿಸುತ್ತಾನೆ. ಮುಂದೆ ಕೃತವರ್ಮನಿಗೂ–ಪಾಂಡವರಿಗೂ ನಡೆಯುವ ಘೋರಯುದ್ಧದ ವರ್ಣನೆಯಿದೆ. ಕಡೆಯಲ್ಲಿ ಪಾಂಡವರು ಪರಾಜಯಹೊಂದುತ್ತಾರೆ. ೧೧೫ ನೆಯ ಅಧ್ಯಾಯದಲ್ಲಿ–ಸಾತ್ಯಕಿ-ಕೃತವರ್ಮರ ಯುದ್ಧದ ವರ್ಣನೆಯಿದೆ. ಕೃತವರ್ಮನು ಪರಾಜಯಹೊಂದುತ್ತಾನೆ. ಇದೇ ಅಧ್ಯಾಯದಲ್ಲಿಯೇ ಸಾತ್ಯಕಿಯಿಂದ ಜಲಸಂಧನ ವಧೆಯೂ ಆಗುತ್ತದೆ. ಮುಂದಿನ ಅಧ್ಯಾಯ ದಲ್ಲಿ–ಸಾತ್ಯಕಿಯು ದುರ್ಯೋಧನ-ಕೃತವರ್ಮರಿಬ್ಬರನ್ನೂ ಪರಾಜಯ ಗೊಳಿಸುತ್ತಾನೆ. ದ್ರೋಣರು ಕಟ್ಟಿದ್ದ ಕವಚದ ಪ್ರಭಾವವು ಇಲ್ಲಿ ಕಾಣುವುದಿಲ್ಲ. ಮರ್ಮಭೇದಿಗಳಾದ ಬಾಣಗಳಿಂದ ಸಾತ್ಯಕಿಯು ದುರ್ಯೋಧನನನ್ನು ಮರ್ಮಸ್ಥಾನಗಳಲ್ಲಿಯೂ ಗಾಯಗೊಳಿಸಿದನೆಂದು ಇಲ್ಲಿ ಉಕ್ತವಾಗಿದೆ.

೧೧೩-೧೧೪-೧೧೫ನೇ ಅಧ್ಯಾಯಗಳಲ್ಲಿರುವ ಒಂದು ಅಂಶವನ್ನು ಇಲ್ಲಿ ವಿಶ್ಲೇಷಿಸಬೇಕಾದ ಆವಶ್ಯಕತೆಯಿದೆ. ೧೧೩ನೆಯ ಅಧ್ಯಾಯದಲ್ಲಿ–ಸಾತ್ಯಕಿಯು ದ್ರೋಣರೊಡನೆ ಹೆಚ್ಚು ಹೊತ್ತು ಯುದ್ಧಮಾಡಲು ನಿಲ್ಲದೇ ಅವರಿಂದ ತಪ್ಪಿಸಿಕೊಂಡು ಮುಂದೆ ಕೃತವರ್ಮನೊಡನೆ ಯುದ್ಧಮಾಡಿ ಅವನ ಸಾರಥಿಯನ್ನು ಸಂಹರಿಸಿ, ಹಾರ್ದಿಕ್ಯನು ಪುನಃ ಸಜ್ಜಾಗುವುದರೊಳಗಾಗಿಯೇ ಕಾಂಬೋಜಸೇನೆಯ ಕಡೆಗೆ ಹೊರಟುಹೋಗುತ್ತಾನೆ.

ಇದೇ ಅಧ್ಯಾಯದ ಕಡೆಯಲ್ಲಿ ದ್ರೋಣರು ವ್ಯೂಹದ ಮುಂಭಾಗದ ರಕ್ಷಣಾಭಾರವನ್ನು ಹಾರ್ದಿಕ್ಯನಿಗೆ ಒಪ್ಪಿಸಿ ತಾವು ಯುಯುಧಾನನನ್ನೇ ಬೆನ್ನಟ್ಟಿದರೆಂಬ ವಾಕ್ಯವಿದೆ. **ಅಭ್ಯಧಾವದ್ರಣೇ ಯತ್ತೋ ಯುಯುಧಾನಂ ಯುಯುತ್ಸಯಾ ||೬೨||** ೧೧೪ನೆಯ ಅಧ್ಯಾಯದಲ್ಲಿ–ದ್ರೋಣರಿಗೆ ಬದಲಾಗಿ ಕೃತವರ್ಮನು ಭೀಮಸೇನ-ಶಿಖಂಡಿಗಳೊಡನೆ ಯುದ್ಧಮಾಡಿ ಪಾಂಡವರನ್ನು ಪರಾಜಯಗೊಳಿಸುತ್ತಾನೆ. ೧೧೫ನೆಯ ಅಧ್ಯಾಯದ

ಮೊದಲನೆಯ ೧೧ ಶ್ಲೋಕಗಳಲ್ಲಿ ಸಾತ್ಯಕಿಯು ಪುನಃ ವ್ಯೂಹದ ಮುಂಭಾಗಕ್ಕೆ ಬಂದು ಹಾರ್ದಿಕ್ಯನೊಡನೆ ಯುದ್ಧಮಾಡಿ ಅವನನ್ನು ಪರಾಜಯ ಗೊಳಿಸಿದನೆಂಬ ಉಲ್ಲೇಖವಿದೆ. ಮೊದಲನೆಯ ಶ್ಲೋಕದಲ್ಲಿಯೇ ಸಂಜಯನು 'ಶೃಣುಷ್ವೈಕಮನಾ ರಾಜನ್ಯನ್ಮಾಂ ತ್ವಂ ಪರಿಪೃಚ್ಛಸಿ' 'ನೀನು ಯಾವುದನ್ನು ಪ್ರಶ್ನಿಸಿದೆಯೋ–ಅದನ್ನೇ ವಿವರಿಸಿ ಹೇಳುತ್ತೇನೆ ಕೇಳು' ಎಂದಿದೆ. ಆದರೆ ಧೃತರಾಷ್ಟ್ರನಿಲ್ಲಿ ಯಾವ ಪ್ರಶ್ನೆಯನ್ನೂ ಕೇಳಿರುವುದಿಲ್ಲ. ಎರಡನೆಯದಾಗಿ–ಸಾತ್ಯಕಿಯು ವ್ಯೂಹದೊಳಕ್ಕೆ ಬಹಳ ದೂರ ನುಗ್ಗಿ ಹೋಗಿರುತ್ತಾನೆ. ದ್ರೋಣರೂ ಅವನನ್ನು ಬೆನ್ನಟ್ಟಿರುತ್ತಾರೆ. ಹೀಗಿರುವಾಗ ಕ್ಷಣಮಾತ್ರದಲ್ಲಿ ಸಾತ್ಯಕಿಯು ವ್ಯೂಹದ ಮುಂಭಾಗಕ್ಕೆ ಕೃತವರ್ಮನೊಡನೆ ಯುದ್ಧಮಾಡಲು ಬಂದನೆಂಬುದು ಸಮಂಜಸವಾಗಿ ಕಾಣುವುದಿಲ್ಲ. ಈ ಅಧ್ಯಾಯದ ೧೨ಯ ಶ್ಲೋಕದಲ್ಲಿ ಶೃಣು ರಾಜನ್ಯದಕರೋತ್ತವ ಸೈನ್ಯೇಷು ವೀರ್ಯವಾನ್ । ಅತೀತ್ಯ ಸ ಮಹಾರಾಜ ದ್ರೋಣಾನೀಕ ಮಹಾರ್ಣ ವಮ್ ॥೧೨॥ ಮಹಾರಾಜ! ಮಹಾಪರಾಕ್ರಮಿಯಾದ ಸಾತ್ಯಕಿಯು ದ್ರೋಣರ ಸೇನಾಸಮುದ್ರವನ್ನು ದಾಟಿದ ನಂತರ ನಿನ್ನ ಸೈನ್ಯದಲ್ಲಿ ಮಾಡಿದ ವಿಧ್ವಂಸನಕ್ರಿಯೆಯನ್ನು ವರ್ಣಿಸಿ ಹೇಳುವೆನು ಕೇಳು." ಇದು ಅಧ್ಯಾಯದ ಮೊದಲನೆಯ ಶ್ಲೋಕವಾಗಬೇಕಾಗಿದ್ದಿತು. ಮುಂದೆ ಕಥೆಯು ಸುಸಂಗತವಾಗಿ ಮುಂದುವರಿಯುತ್ತದೆ. ಮೊದಲಿನ ೧೧ ಶ್ಲೋಕಗಳು ಹೇಗೆ ನುಸುಳಿಬಂದುವೋ ತಿಳಿಯದು. ಎಲ್ಲ ಪುಸ್ತಕಗಳಲ್ಲಿಯೂ ಈ ಶ್ಲೋಕಗಳಿವೆ.

೧೧೬ನೆಯ ಅಧ್ಯಾಯವೂ ಸಾತ್ಯಕಿಯ ಪರಾಕ್ರಮಕಥನಕ್ಕೇ ಮೀಸಲಾಗಿದೆ. ಈ ಅಧ್ಯಾಯದಲ್ಲಿ ದುರ್ಯೋಧನ-ಕೃತವರ್ಮರ ಪರಾಜಯವನ್ನು ವಿವರಿಸಿ ಹೇಳಲಾಗಿದೆ. ನಾವು ಯುದ್ಧರಂಗದ ಒಂದು ಚಿತ್ರವನ್ನು ಮನಸ್ಸಿಗೆ ತೆಗೆದುಕೊಂಡರೆ ಹೀಗೆ ಕಾಣುತ್ತದೆ. ಕೃತವರ್ಮನು ದ್ರೋಣರಿಗೆ ಬದಲಾಗಿ ವ್ಯೂಹದ ಮುಂಭಾಗದಲ್ಲಿದ್ದಾನೆ. ದ್ರೋಣರು ಸಾತ್ಯಕಿಯನ್ನು ಬೆನ್ನಟ್ಟಿ ಹೋಗಿ ಅವನನ್ನು ತಡೆದು ಅವನೊಡನೆ ಯುದ್ಧಕ್ಕೆ ತೊಡಗಿದ್ದಾರೆ. ಏತಸ್ಮಿನ್ನನ್ತರೇ ರಾಜನ್ದ್ರೋಣಃ ಶಸ್ತ್ರಭೃತಾಂ ವರಃ ।ಅಭ್ಯಯಾ ಜ್ಜವನೈರಶ್ವೈರ್ಯುಯುಧಾನಂ ಮಹಾರಥಮ್ ॥೧೧೫.೫೯॥

ದುರ್ಯೋಧನನು ಜಯದ್ರಥನನ್ನು ಎದುರಿಸಲು ಹೋಗುತ್ತಿದ್ದ ಪಾರ್ಥ ನೊಡನೆ ಯುದ್ಧಮಾಡುತ್ತಿದ್ದನು ||೧೦೩||. ವ್ಯೂಹದ ಮುಂಭಾಗಕ್ಕೂ ಜಯದ್ರಥನಿರುವೆಡೆಗೂ ಸುಮಾರು ಮೂರು ಗಾವುದ. ಹೀಗಿರುವಾಗ ದುರ್ಯೋಧನ-ಕೃತವರ್ಮರು ಸಾತ್ಯಕಿಯೊಡನೆ ಯುದ್ಧಮಾಡಲು ವ್ಯೂಹದ ಮಧ್ಯಭಾಗಕ್ಕೆ ಹೇಗೆ ಬಂದರು? ೧೧೫ನೆಯ ಅಧ್ಯಾಯದಲ್ಲಿ– ಸಾತ್ಯಕಿಯು ತ್ರಿಗರ್ತರೊಡನೆ ಯುದ್ಧಮಾಡುವಾಗ ದುರ್ಯೋಧನನ ಅಥವಾ ಅವನ ಅನುಜರ ಪ್ರಸ್ತಾಪ ಬರುವುದಿಲ್ಲ. ಆ ಸ್ಥಳಕ್ಕೆ ಶೀಘ್ರವಾಗಿ ಹೋಗುವ ಕುದುರೆಗಳ ಮೂಲಕ ದ್ರೋಣರು ಹೋದರೆಂದು ಅಧ್ಯಾಯದ ಕಡೆಯಲ್ಲಿ ಉಲ್ಲೇಖವಿದೆ. ಆದರೆ ೧೧೬ನೆಯ ಅಧ್ಯಾಯವು ಪ್ರಾರಂಭವಾದೊಡನೆಯೇ ಸಾತ್ಯಕಿಯು-ದ್ರೋಣರು, ದುರ್ಮರ್ಷಣ, ವಿಕರ್ಣ, ದುರ್ಮುಖ, ದುಃಶಾಸನ, ದುರ್ಯೋಧನ, ದುಃಸಹ, ಚಿತ್ರಸೇನ, ವಿವಿಂಶತಿ, ಸತ್ಯವ್ರತ, ವಿಜಯ–ಇವರೆಲ್ಲರನ್ನೂ ಎದುರಿಸಿ ಯುದ್ಧವನ್ನು ಪ್ರಾರಂಭಿಸಿದನು ಎಂದಿದೆ.

ಸಾತ್ಯಕಿಯು ದುರ್ಯೋಧನನೊಡನೆ ನೇರವಾಗಿ ಯುದ್ಧಮಾಡುತ್ತಾನೆ. ಸಾತ್ಯಕಿಯ ಬಾಣಗಳಿಂದ ಕ್ಷತ-ವಿಕ್ಷತನಾದ ದುರ್ಯೋಧನನು ಓಡಿ ಹೋಗುತ್ತಾನೆ. ಸೈನ್ಯದಲ್ಲಿ ಹಾಹಾಕಾರವೇಳುತ್ತದೆ. ಅದನ್ನು ಕೇಳಿದ ಕೃತ ವರ್ಮನು ಪುನಃ ಸಾತ್ಯಕಿಯನ್ನು ಎದುರಿಸಿ ಯುದ್ಧಮಾಡಲು ಬರುತ್ತಾನೆ. ಅವನನ್ನೂ ಸಾತ್ಯಕಿಯು ಪರಾಜಯಗೊಳಿಸುತ್ತಾನೆ. ಕಡೆಗೆ ಕೃತವರ್ಮನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಪಾಂಡವರು ಮುಂದೆ ಹೋಗದಂತೆ ತಡೆ ಯುತ್ತಾ ವ್ಯೂಹದ ಮುಂಭಾಗದಲ್ಲೇ ನಿಲ್ಲುತ್ತಾನೆ. ದುರ್ಯೋಧನನು ಪರಾಜಯಗೊಂಡನಂತರ ದ್ರೋಣರೇನು ಮಾಡಿದರೆನ್ನುವ ಬಗೆಗೆ ಇಲ್ಲಿ ಉಲ್ಲೇಖವಿಲ್ಲ. ಅಧ್ಯಾಯದ ಮೊದಲ ಭಾಗವನ್ನು ನೋಡಿದರೆ ಎಲ್ಲರೂ ಒಟ್ಟಾಗಿಯೇ ಸೇರಿ ಯುದ್ಧಮಾಡುತ್ತಿರುತ್ತಾರೆ. ಈ ಕಾರಣಗಳಿಂದ ಈ ಅಧ್ಯಾಯವು ಹೆಚ್ಚಿನದೆಂದು ಊಹಿಸಬಹುದಾಗಿದೆ. ದ್ರೋಣರೊಬ್ಬರೇ ಸಾತ್ಯಕಿಯನ್ನು ಬೆನ್ನಟ್ಟಿಹೋದರು. ಆ ಸ್ಥಳದಲ್ಲಿ ದುರ್ಯೋಧನನಿರಲು ಸಾಧ್ಯವಿಲ್ಲ. ಅವನು ಅರ್ಜುನನ ಸಮೀಪದಲ್ಲಿದ್ದನು. ಕೃತವರ್ಮನೂ ಸಹ ಸಾತ್ಯಕಿಯಿಂದ ಬಹಳ ದೂರದಲ್ಲಿ ವ್ಯೂಹದ ಮುಂಭಾಗದಲ್ಲಿದ್ದನು. ವ್ಯೂಹ ದೊಳಕ್ಕೆ ನುಗ್ಗುತ್ತಿದ್ದ ಪಾಂಡವರನ್ನು ತಡೆಯುವುದೇ ಅವನ ಮುಖ್ಯಕರ್ತವ್ಯ

ವಾಗಿದ್ದಿತು. ಈ ಅಧ್ಯಾಯವನ್ನು ಬಿಟ್ಟು ಮುಂದಿನ ಅಧ್ಯಾಯವನ್ನು ಓದಿದರೆ ಕಥೆಯು ಬಹಳ ಸುಸಂಗತವಾಗಿ ಓಡುತ್ತದೆ. ಬೆನ್ನಟ್ಟಿಬಂದ ದ್ರೋಣರಿಗೂ–ಸಾತ್ಯಕಿಗೂ ಯುದ್ಧವಾಗುತ್ತದೆ. ಆದರೆ ಈ ಅಧ್ಯಾಯವು ಎಲ್ಲ ಪುಸ್ತಕಗಳಲ್ಲಿಯೂ ಇದೆ. ೧೧೭ನೆಯ ಅಧ್ಯಾಯದಲ್ಲಿ–ಸಾತ್ಯಕಿಗೂ-ದ್ರೋಣರಿಗೂ ಘೋರಯುದ್ಧವಾಗುತ್ತದೆ. ದ್ರೋಣರು ಪರಾಜಿತರಾಗುತ್ತಾರೆ. ೧೧೮ನೆಯ ಅಧ್ಯಾಯದಲ್ಲಿ–ಸಾತ್ಯಕಿಯು ಸುದರ್ಶನನನ್ನು ವಧೆಮಾಡುತ್ತಾನೆ. ಈ ಸುದರ್ಶನನು ಕೌರವಪಕ್ಷದವನು ಎಂಬ ಉಲ್ಲೇಖವಿದೆಯೇ ಹೊರತು ಯಾವ ಪಂಗಡಕ್ಕೆ ಸೇರಿದವನು ಎಂಬ ಉಲ್ಲೇಖವಿಲ್ಲ. ೧೧೯ನೆಯ ಅಧ್ಯಾಯದಲ್ಲಿ–ಸಾತ್ಯಕಿಯು ಕಾಂಬೋಜರ ಮತ್ತು ಯವನರ ಸೇನೆಯನ್ನು ಪರಾಜಯಗೊಳಿಸುತ್ತಾನೆ. ೧೨೦ನೆಯ ಅಧ್ಯಾಯದಲ್ಲಿ–ಸಾತ್ಯಕಿಯು ದುರ್ಯೋಧನನನ್ನು ಎದುರಿಸಿ ಯುದ್ಧಮಾಡಿ ಅವನನ್ನು ಪರಾಜಯಗೊಳಿಸುತ್ತಾನೆ. ೧೨೧ನೆಯ ಅಧ್ಯಾಯದಲ್ಲಿ–ಸಾತ್ಯಕಿಯು ಪಾಷಾಣಯೋಧಿಗಳನ್ನೂ–ಮ್ಲೇಚ್ಛರನ್ನೂ ಸಂಹರಿಸಿ ದುಃಶಾಸನನನ್ನು ಜಯಿಸುತ್ತಾನೆ. (ಇವಿಷ್ಟೂ ೧೬ನೆಯ ಸಂಪುಟದಲ್ಲಿ ಬರುವ ಯುದ್ಧದ ವಿಶ್ಲೇಷಣೆ.)

೧೨೨ನೆಯ ಅಧ್ಯಾಯದಲ್ಲಿ–ಸೋತುಹೋದ ದುಃಶಾಸನನು ದ್ರೋಣರ ಬಳಿಗೆ ಬರುತ್ತಾನೆ. ದ್ರೋಣರು ಅವನನ್ನು ಬಹಳವಾಗಿ ನಿಂದಿಸುತ್ತಾರೆ. ರೋಷಪೂರಿತನಾದ ದುಃಶಾಸನನು ಪುನಃ ಸಾತ್ಯಕಿಯ ಬಳಿಗೆ ಯುದ್ಧಮಾಡಲು ಹೋಗುತ್ತಾನೆ. ದ್ರೋಣರಿಗೂ-ಪಾಂಚಾಲರಿಗೂ ಭಯಂಕರವಾದ ಯುದ್ಧವಾಗುತ್ತದೆ. ಕಡೆಯಲ್ಲಿ ಧೃಷ್ಟದ್ಯುಮ್ನನು ಪಲಾಯನಮಾಡುತ್ತಾನೆ. ೧೨೩ನೆಯ ಅಧ್ಯಾಯದಲ್ಲಿ–ಸಾತ್ಯಕಿಯೊಡನೆ ಯುದ್ಧಮಾಡಲು ಹೋದ ದುಃಶಾಸನನು ಪುನಃ ಪರಾಜಿತನಾಗುತ್ತಾನೆ. ೧೨೪ನೆಯ ಅಧ್ಯಾಯದಲ್ಲಿ–ಸಾತ್ಯಕಿಯ ಪರಾಕ್ರಮದ ವಿಷಯವಾಗಿ ಧೃತರಾಷ್ಟ್ರನು ಅಚ್ಚರಿಯನ್ನು ವ್ಯಕ್ತಪಡಿಸುತ್ತಾನೆ. ಅವನನ್ನು ತಡೆಯಲು ತನ್ನ ಕಡೆಯಲ್ಲಿ ಯೋಧರೇ ಇರಲಿಲ್ಲವೇ?–ಎಂದವನು ಸಂಶಯಿಸುತ್ತಾನೆ. ಸಂಜಯನು ಎರಡು ಕಡೆಗಳ ಸೈನಿಕರನ್ನೂ ಪ್ರಶಂಸೆಮಾಡುತ್ತಾನೆ. ಮುಂದೆ ಇದ್ದಕ್ಕಿದ್ದಂತೆಯೇ ದುರ್ಯೋಧನನು ಪಾಂಡವರ ಸೈನ್ಯದೊಳಗೆ ನುಗ್ಗಿಹೋಗುತ್ತಾನೆ. ಅವನ ಪರಾಕ್ರಮಕಥನವಿದೆ. ಆಗ ಅವನು ಏಕಾಕಿಯಾಗಿ ಭೀಮ

ಸೇನ, ಧರ್ಮಜ, ವಿರಾಟ-ದ್ರುಪದರು, ಶಿಖಂಡಿ, ಧೃಷ್ಟದ್ಯುಮ್ನ, ದ್ರೌಪದಿಯ ಐವರು ಮಕ್ಕಳು–ಇವರೆಲ್ಲರನ್ನೂ ಏಕಕಾಲದಲ್ಲಿಯೇ ಎದುರಿಸುತ್ತಾನೆ. ಪರಾಕ್ರಮದಿಂದ ಯುದ್ಧಮಾಡುತ್ತಿರುವಾಗ ಯುಧಿಷ್ಠಿರನು ದುರ್ಯೋಧನನ ಧನುಸ್ಸನ್ನು ಕತ್ತರಿಸುತ್ತಾನೆ. ಪುನಃ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಯುಧಿಷ್ಠಿರನ ಮೇಲೆ ಬೀಳಲು ದುರ್ಯೋಧನನು ಬರುತ್ತಾನೆ. ಆಗ ಅವನನ್ನು ಪಾಂಚಾಲರು ಎದುರಿಸುತ್ತಾರೆ. **'ತಿಷ್ಠ ತಿಷ್ಠ'**–ಎಂದು ಹೇಳಿಕೊಂಡು ಯುಧಿಷ್ಠಿರನ ಕಡೆಗೆ ಬಂದ ದುರ್ಯೋಧನನು ಒಂದು ಬಾಣವನ್ನೂ ಬಿಡುವುದಿಲ್ಲ. ದುರ್ಯೋಧನನನ್ನು ಪಾಂಚಾಲರು ಎದುರಿಸಿದೊಡನೆಯೇ ದ್ರೋಣರ ಪ್ರವೇಶವಾಗುತ್ತದೆ. ಅನಂತರ ದುರ್ಯೋಧನನು ಏನಾದನೆಂಬ ವಿಷಯವಿಲ್ಲ. ತಿಷ್ಠ-ತಿಷ್ಠ ಎನ್ನುವಲ್ಲಿಗೇ ಅವನ ವಿಷಯವು ನಿಂತು ಹೋಗುತ್ತದೆ. ಮುಂದೆ ಪರಸ್ಪರಯುದ್ಧದ ವರ್ಣನೆಯು ಬರುತ್ತದೆ. ನಮ್ಮ ಅಭಿಪ್ರಾಯದಲ್ಲಿ ಇಲ್ಲಿ ದುರ್ಯೋಧನನ ಪ್ರಕರಣ ಹೆಚ್ಚುಪಾಠ. ಮೂರು ಗಾವುದ ದೂರದಲ್ಲಿ ಸಾತ್ಯಕಿಯೊಡನೆ ಯುದ್ಧಮಾಡುತ್ತಿದ್ದವನು ಕ್ಷಣಮಾತ್ರದಲ್ಲಿ ಇಲ್ಲಿಗೆ ಬಂದಿರಲಾರನು. ೨೪ನೆಯ ಶ್ಲೋಕ **'ತಥಾ ಪ್ರಯತಮಾನಾನಾಂ'**–'ಹಾಗೆ ಸತತವಾಗಿ ಪ್ರಯತ್ನಿಸುತ್ತಿದ್ದ'–ಎಂದಿದೆ. ಇದರ ಹಿಂದಿನ ಶ್ಲೋಕದಲ್ಲಿ ಪಾಂಡವರು ಯುದ್ಧಮಾಡುತ್ತಿದ್ದ ಪ್ರಸಂಗ ವೇನೂ ಇರುವುದಿಲ್ಲ. ಆದುದರಿಂದ **ಜಿತ್ವಾ ಸರ್ವಾಣಿ ಸೈನ್ಯಾನಿ ಪ್ರಾಯಾತ್ಸಾತ್ಯಕಿರರ್ಜುನಮ್ ॥೨೨॥** 'ಎಲ್ಲ ಸೈನಿಕರನ್ನೂ ಜಯಿಸಿ ಸಾತ್ಯಕಿಯು ಅರ್ಜುನನ ಬಳಿಗೆ ಹೋದನು'–ಎಂಬ ಶ್ಲೋಕವಾದನಂತರ **ತತಃ ಶಬ್ದೋ ಮಹಾನಾಸೀತ್** ಎಂಬ ೪೫ನೆಯ ಶ್ಲೋಕದಿಂದ ಮುಂದುವರಿಸಿದರೆ ಕಥೆಯು ಸರಸವಾಗುತ್ತದೆ. ಸಲ್ಲದ ಜಿಜ್ಞಾಸೆಗೆ ಅವಕಾಶವಿರುವುದಿಲ್ಲ.

೧೨೫ನೆಯ ಅಧ್ಯಾಯದಲ್ಲಿ–ದ್ರೋಣರ ಅತುಲಪರಾಕ್ರಮದ ವರ್ಣನೆಯಿದೆ. ಅನೇಕಯೋಧರನ್ನು ಅವರು ಸಂಹರಿಸುತ್ತಾರೆ.

೧೨೬ನೆಯ ಅಧ್ಯಾಯದಲ್ಲಿ–ಸಾತ್ಯಕಿಯನ್ನು ಹುಡುಕುವ ಸಲುವಾಗಿ ಯುಧಿಷ್ಠಿರನು ಭೀಮಸೇನನನ್ನು ಕಳುಹಿಸುತ್ತಾನೆ. ನಾವು ಮೇಲೆ ಸೂಚಿಸಿ ರುವ ಕೆಲವು ಸಂಶಯಗಳಿಗೆ ಯುಧಿಷ್ಠಿರನೇ ಸಾಕ್ಷೀಭೂತನಾಗಿದ್ದಾನೆ. ಸಾತ್ಯಕಿಯನ್ನು ಕಳುಹಿಸಿಕೊಟ್ಟನಂತರ ಅವನು ಎಲ್ಲಿಗೆ ಹೋದನೆಂಬುದೇ

ಯುಧಿಷ್ಠಿರನಿಗೆ ತಿಳಿಯುವುದಿಲ್ಲ. ಸಾತ್ಯಕಿಯೊಡನೆ ಯುದ್ಧಮಾಡಿದ ದುರ್ಯೋಧನನು ಯುಧಿಷ್ಠಿರನೊಡನೆ ಯುದ್ಧಮಾಡಲು ಬಂದನೆಂಬ ಉಲ್ಲೇಖ ೧೨೪ನೆಯ ಅಧ್ಯಾಯದಲ್ಲಿ ಬಂದಿದೆ. ಹಾಗೆ ಬರುವ ಸಾಧ್ಯತೆ ಯಿದ್ದಿದ್ದರೆ ಸಾತ್ಯಕಿಯು ಯುಧಿಷ್ಠಿರನಲ್ಲಿಗೆ ಬಂದು ಹೋಗುತ್ತಿದ್ದನು. ಸಾತ್ಯಕಿಯು ಸ್ವಲ್ಪ ದೂರದಲ್ಲಿದ್ದಿದ್ದರೂ ರಾಜನಾದ ಯುಧಿಷ್ಠಿರನಿಗೆ ಅವನ ಸುಳಿವನ್ನು ತಿಳಿದುಕೊಳ್ಳಲು ಸಾಧ್ಯವಾಗದೇ ಇರುತ್ತಿರಲಿಲ್ಲ. ಆದುದರಿಂದ ಮೂರು ಗಾವುದ ದೂರದಲ್ಲಿರುವ ಸಾತ್ಯಕಿಯಾಗಲೀ–ದುರ್ಯೋಧನ ನಾಗಲೀ ಯುಧಿಷ್ಠಿರನ ಸಮೀಪಕ್ಕೆ ಬರುವ ಸಾಧ್ಯತೆಯಿಲ್ಲ. ಈ ಕಾರಣ ದಿಂದಲೇ ೧೨೪ನೆಯ ಅಧ್ಯಾಯದಲ್ಲಿ ಬಂದಿರುವ ದುರ್ಯೋಧನನ ಯುದ್ಧಪರ್ಯಾಯವು ಹೆಚ್ಚು ಪಾಠವೆಂದು ತೋರುತ್ತದೆ. ಯುಧಿಷ್ಠಿರನು ಅರ್ಜುನ-ಸಾತ್ಯಕಿಯರನ್ನು ಹುಡುಕಿಕೊಂಡು ಬರಲು ಭೀಮಸೇನನನ್ನು ಕಳುಹಿಸುತ್ತಾನೆ. ೧೨೭ನೆಯ ಅಧ್ಯಾಯದಲ್ಲಿ–ಭೀಮಸೇನನು ಯುಧಿಷ್ಠಿರನ ರಕ್ಷಣಾಭಾರವನ್ನು ಧೃಷ್ಟದ್ಯುಮ್ನನಿಗೊಪ್ಪಿಸಿ ಹೊರಡುತ್ತಾನೆ. ದ್ರೋಣರೊಡನೆ ಯುದ್ಧಮಾಡುತ್ತಾ ಅವರ ರಥವನ್ನು ಧ್ವಂಸಗೊಳಿಸುತ್ತಾನೆ. ಧೃತರಾಷ್ಟ್ರನ ಹನ್ನೊಂದು ಮಕ್ಕಳನ್ನೂ ಸಂಹರಿಸುತ್ತಾನೆ. ಕೌರವರು ಪಲಾಯನ ಮಾಡುತ್ತಾರೆ. ೧೨೮ನೆಯ ಅಧ್ಯಾಯದಲ್ಲಿ–ಭೀಮನು ದ್ರೋಣರ ರಥವನ್ನು ಎಂಟು ಬಾರಿ ಹಿಂದಕ್ಕೆ ದೂಡುತ್ತಾನೆ. ಕೃಷ್ಣಾರ್ಜುನರ ಸಮೀಪಕ್ಕೆ ಹೋಗಿ ಘೋರಗರ್ಜನೆಯನ್ನು ಮಾಡುತ್ತಾನೆ. ಯುಧಿಷ್ಠಿರನಿಗೆ ಸಾತ್ಯಕಿ ಮತ್ತು ಅರ್ಜುನರು ಕುಶಲಿಗಳಾಗಿರುವರೆಂಬ ಸೂಚನೆಯನ್ನು ಕೊಡುತ್ತಾನೆ. ಅದ ರಿಂದ ಯುಧಿಷ್ಠಿರನು ಪರಮಹೃಷ್ಟನಾಗುತ್ತಾನೆ. ಸಾತ್ಯಕಿಯು ಅರ್ಜುನನನ್ನು ಸಂಧಿಸುವ ಮೊದಲೇ ಭೀಮಸೇನನು ಅರ್ಜುನನನ್ನು ನೋಡುತ್ತಾನೆ. ೧೨೯ನೆಯ ಅಧ್ಯಾಯದಲ್ಲಿ–ಕರ್ಣ-ಭೀಮರ ಯುದ್ಧ. ಕರ್ಣನ ಪರಾಜಯ. ಧೃತರಾಷ್ಟ್ರನು ಭೀಮನ ವಿಷಯದಲ್ಲಿ ತನಗಿರುವ ಭಯವನ್ನು ಸಂಜಯನಿಗೆ ಸ್ಪಷ್ಟಪಡಿಸುತ್ತಾನೆ. ಕರ್ಣ-ಭೀಮರಿಬ್ಬರೂ ಸಮ-ಸಮವಾಗಿಯೇ ಯುದ್ಧ ಮಾಡುತ್ತಿರುತ್ತಾರೆ. ಒಮ್ಮೆ ಭೀಮನು ಕುದುರೆಗಳನ್ನೂ, ಸಾರಥಿಯನ್ನೂ ಸಂಹರಿಸುವುದರಿಂದ ಕರ್ಣನು ರಥಹೀನನಾಗಿ ವೃಷಸೇನನ ರಥವನ್ನು ಹತ್ತಿಕೊಳ್ಳುತ್ತಾನೆ. ಮುಂದೆ ಅವನು ನೂತನರಥವನ್ನು ಪಡೆದುಕೊಂಡ

ನೆಂಬುದಕ್ಕೆ ಶ್ಲೋಕಗಳಿಲ್ಲದಿದ್ದರೂ ಪುನಃ ಇಬ್ಬರೂ ಯುದ್ಧಕ್ಕೆ ತೊಡಗುತ್ತಾರೆಂದು ಈ ಅಧ್ಯಾಯದ ೩೯ನೆಯ ಶ್ಲೋಕದಲ್ಲಿ ಹೇಳಿದೆ. ಆ ಶ್ಲೋಕದಲ್ಲಿ ಕರ್ಣನು ಮೃದುವಾಗಿಯೂ, ಭೀಮನು ದೃಢಪೂರ್ವಕವಾಗಿಯೂ ಯುದ್ಧ ಮಾಡುತ್ತಿದ್ದರೆಂದು ಹೇಳಿದೆ. **ಮೃದುಪೂರ್ವಂ ತು ರಾಧೇಯೋ ದೃಢಪೂರ್ವಂ ತು ಪಾಣ್ಡವಃ ॥** ಕರ್ಣನು ಭೀಮನಿಂದ ಸೋಲುತ್ತಿದ್ದರೂ ಮೃದುಪೂರ್ವಕವಾಗಿ ಏಕೆ ಯುದ್ಧಮಾಡುತ್ತಿದ್ದನೆಂಬ ಪ್ರಶ್ನೆಗೆ ಉತ್ತರ ಸಿಗುವುದಿಲ್ಲ.

೧೩೦ನೆಯ ಅಧ್ಯಾಯದಲ್ಲಿ–ದ್ರೋಣರು ಅಭೇದ್ಯವಾದ ವ್ಯೂಹವನ್ನು ರಚಿಸಿದ್ದರೂ ಮೂವರು ಮಹಾಯೋಧರೂ ವ್ಯೂಹದೊಳಕ್ಕೆ ನುಗ್ಗಿ ಬಹಳವಾಗಿ ಹಾವಳಿಮಾಡುತ್ತಾರೆ. ಅದನ್ನು ಸಹಿಸಲಾಗದೇ ದುರ್ಯೋಧನನು ಮನೋವೇಗ-ವಾಯುವೇಗಗಳಿಂದ ಕೂಡಿರುವ ರಥದಲ್ಲಿ ದ್ರೋಣರ ಬಳಿಗೆ ಬಂದು ಅರ್ಜುನ-ಸಾತ್ಯಕಿ-ಭೀಮಸೇನರು ಜಯದ್ರಥನ ಸಮೀಪಕ್ಕೆ ಬಂದುಬಿಟ್ಟರೆಂದು ಹೇಳುತ್ತಾನೆ. ದ್ರೋಣರು ದುರ್ಯೋಧನನ ಹಿಂದಿನ ದುಷ್ಕರ್ಮಗಳೆಲ್ಲವನ್ನೂ ಸ್ಮರಣೆಗೆ ತಂದುಕೊಟ್ಟು ಸೈಂಧವನ ರಕ್ಷಣಾಭಾರ ವನ್ನು ಅವನ ಮೇಲೆಯೇ ಹೊರಿಸಿ ಕಳುಹಿಸುತ್ತಾರೆ. ದುರ್ಯೋಧನನು ಅರ್ಜುನನ ಚಕ್ರರಕ್ಷಕರಾಗಿದ್ದ ಯುಧಾಮನ್ಯೂತ್ತಮೌಜಸರೊಡನೆ ಯುದ್ಧ ಮಾಡುತ್ತಾನೆ. ಉತ್ತಮೌಜಸನು ದುರ್ಯೋಧನನ ಸಾರಥಿಯನ್ನು ಕೊಲ್ಲು ತ್ತಾನೆ. (೩೫) ಸಾಮಾನ್ಯವಾಗಿ ಸಾರಥಿಯು ಸತ್ತುಹೋದರೆ ಕುದುರೆಗಳು ನಿಯಂತ್ರಣವಿಲ್ಲದೇ ಓಡಿಹೋಗುತ್ತವೆ ಅಥವಾ ಯೋಧನೇ ಅಶ್ವ ನಿಯಂತ್ರಣವನ್ನೂ ಮಾಡುತ್ತಾ ಶತ್ರುಗಳನ್ನೂ ಎದುರಿಸುತ್ತಾನೆ. ಆದರೆ ಈ ಸಂದರ್ಭದಲ್ಲಿ ದುರ್ಯೋಧನನ ಕುದುರೆಗಳು ಓಡಿಹೋದುವೆಂದಾಗಲೀ-ದುರ್ಯೋಧನನೇ ಕುದುರೆಗಳನ್ನು ನಿಯಂತ್ರಿಸುತ್ತಿದ್ದನೆಂದಾಗಲೀ ಹೇಳಿರುವುದಿಲ್ಲ. ಹತಸಾರಥಿಯಾದ ದುರ್ಯೋಧನನು ಉತ್ತಮೌಜಸನ ಕುದುರೆಗಳನ್ನೂ–ಪಾರ್ಷ್ಣಿಸಾರಥಿಗಳನ್ನೂ ಸಂಹರಿಸುತ್ತಾನೆ. (೩೬) ಈ ಸಂದರ್ಭದಲ್ಲಿ ದುರ್ಯೋಧನನೇ ಕುದುರೆಗಳನ್ನು ನಿಯಂತ್ರಿಸುತ್ತಿದ್ದನೆಂದು ಅಧ್ಯಾಹಾರಮಾಡಿಕೊಳ್ಳಬೇಕಾಗಿದೆ. ಯುಧಾಮನ್ಯೂತ್ತಮೌಜಸರೂ ಅರ್ಜುನನ ಸಮೀಪಕ್ಕೆ ಹೋಗುತ್ತಾರೆ.

೧೩೧ನೆಯ ಅಧ್ಯಾಯದಲ್ಲಿ–ಕರ್ಣ-ಭೀಮರ ಯುದ್ಧವು ವರ್ಣಿತವಾಗಿದೆ. ಮಹಾಧನುಷ್ಮಂತನಾದ ಕರ್ಣನೊಡನೆ ಭೀಮನು ಹೇಗೆ ಯುದ್ಧ

ಮಾಡಿದನು? ಎಂಬುದು ಧೃತರಾಷ್ಟ್ರನ ಪ್ರಶ್ನೆ. ಅವನೇ ಒಂದು ಸಮಾಧಾನವಾಕ್ಯವನ್ನೂ ಹೇಳುತ್ತಾನೆ. **ಭ್ರಾತೃತ್ವಂ ದರ್ಶಿತಂ ಪೂರ್ವಂ ಘೃಣೀ ಚಾಪಿ ಸ ಸೂತಜಃ। ಕಥಂ ಭೀಮೇನ ಯುಯುಧೇ ಕುನ್ತ್ಯಾ ವಾಕ್ಯಮನುಸ್ಮರನ್ ॥೧೦॥** 'ಹಿಂದೆಯೂ ಸಹ ಸೂತಪುತ್ರನು ಅರ್ಜುನನೊಬ್ಬನನ್ನುಳಿದು ಉಳಿದ ನಾಲ್ವರೊಡನೆ ಭ್ರಾತೃತ್ವದ ಮಮತೆಯನ್ನೇ ಇಟ್ಟುಕೊಂಡು ಯುದ್ಧಮಾಡುತ್ತಿದ್ದನು. ಇಂತಹವನು ತಾಯಿಗೆ ಕೊಟ್ಟ ಅಭಿವಚನವನ್ನು ಸ್ಮರಿಸುತ್ತಾ ಭೀಮಸೇನನೊಡನೆ ಹೇಗೆ ಯುದ್ಧಮಾಡಿ ದನು?' ತಾಯಿಗೆ ಕೊಟ್ಟ ಅಭಿವಚನವಾಗಲೀ–ಕರ್ಣನು ಕುಂತಿಯ ಪುತ್ರನೆಂದಾಗಲೀ ಯಾರಿಗೂ ತಿಳಿದಿಲ್ಲ. ಇದನ್ನು ಕಡೆಯವರೆಗೂ ತಿಳಿಸಬಾರದೆಂದು ಕರ್ಣನು ಕೃಷ್ಣನನ್ನು ಕೇಳಿಕೊಳ್ಳುತ್ತಾನೆ. (ಉದ್ಯೋಗ ೧೪೪-೨೦-೨೧) ಕುಂತಿಗೆ ಮಾತು ಕೊಟ್ಟಿರುವುದೂ ಸಹ ರಹಸ್ಯವಾಗಿಯೇ ಇರುತ್ತದೆ. ಧರ್ಮರಾಜನಿಗಂತೂ ಈ ವಿಷಯವು ತಿಳಿದೇ ಇರುವುದಿಲ್ಲ. ಹೀಗಿರುವಾಗ ಈ ವಿಷಯವು ಧೃತರಾಷ್ಟ್ರನಿಗೆ ಹೇಗೆ ತಿಳಿಯಿತು? ಒಂದು ವೇಳೆ ಸಂಜಯನಾದರೂ ಈ ಮಾತನ್ನು ಹೇಳಿದ್ದರೆ ವ್ಯಾಸರ ಅನುಗ್ರಹದಿಂದ ಕರ್ಣನ ಮನಸ್ಸಿನಲ್ಲಿದ್ದುದೂ ತಿಳಿಯಿತೆಂದು ಹೇಳಬಹುದಾಗಿದ್ದಿತು. ಅರ್ಜುನನ ಕನಸಿನ ವಿಷಯವೇ ತಿಳಿದ ಮೇಲೆ ಮತ್ತಾವುದು ತಾನೇ ತಿಳಿಯ ದಿದ್ದೀತು? ಆದರೆ ಧೃತರಾಷ್ಟ್ರನು ಹೇಗೆ ಈ ಮಾತನ್ನು ಹೇಳಿದನೆಂಬುದೊಂದು ಸಮಸ್ಯೆಯಾಗಿದೆ. ಈ ಶ್ಲೋಕವು ಎಲ್ಲ ಪುಸ್ತಕಗಳಲ್ಲಿಯೂ ಇದೆ. ಘೋರವಾದ ಯುದ್ಧವು ನಡೆದನಂತರ ಪುನಃ ಕರ್ಣನೇ ಪರಾಜಿತನಾಗುತ್ತಾನೆ.

೧೩೨ನೆಯ ಅಧ್ಯಾಯದಲ್ಲಿ– ಕರ್ಣ-ಭೀಮರ ಯುದ್ಧವರ್ಣನೆಯಿದೆ. ರಥಹೀನನಾಗಿ ಹೊರಟುಹೋಗಿದ್ದ ಕರ್ಣನು ಪುನಃ ಮತ್ತೊಂದು ರಥದಲ್ಲಿ ಕುಳಿತು ಭೀಮನೊಡನೆ ಯುದ್ಧಮಾಡುತ್ತಾನೆ. ಇವರಿಬ್ಬರ ಬಾಣ ಗಳಿಂದಲೂ ಕೌರವರ ಸೈನ್ಯವು ಧ್ವಂಸವಾಗುವುದು ಈ ಅಧ್ಯಾಯದಲ್ಲಿ ಕಾಣುವ ಒಂದು ವಿಶೇಷ. ೧೩೩ನೆಯ ಅಧ್ಯಾಯದಲ್ಲಿ–ಭೀಮ-ಕರ್ಣರ ಯುದ್ಧ. ಕರ್ಣನ ಸಾರಥಿಸಹಿತವಾದ ರಥವನ್ನು ಭೀಮಸೇನನು ವಿನಾಶ ಮಾಡುತ್ತಾನೆ. ಧೃತರಾಷ್ಟ್ರನಿಗೆ ಪುನಃ ಅದೇ ಸಮಸ್ಯೆ. ಧನುರ್ವಿದ್ಯೆಯಲ್ಲಿ

ಅಪ್ರತಿಮನಾದ ಕರ್ಣನು ಭೀಮನಿಂದಲೇ (ಅರ್ಜುನನಿಂದಲ್ಲ) ಎರಡು-ಮೂರು ಬಾರಿ ಪರಾಜಯಹೊಂದಿದನು. ಇದು ಹೇಗಾಯಿತು? ವಾಚಕರ ಸಮಸ್ಯೆಯೂ ಇದೇ ಆಗಿರಬಹುದು. ಈ ಹಿಂದೆ ಸಂಜಯನು ಹೇಳಿದಂತೆ **ಮೃದುಪೂರ್ವಂ ಚ ರಾಧೇಯಃ ಕ್ರೋಧಪೂರ್ವಂ ತಥಾ ಭೀಮಃ।** ರಾಧೇಯನಿಗೆ ಭೀಮನು ತಮ್ಮನೆಂಬುದು ತಿಳಿದುಬಿಟ್ಟಿದೆ. ಅರ್ಜುನನನ್ನು ಬಿಟ್ಟು ಉಳಿದವರನ್ನು ಕೊಲ್ಲುವುದಿಲ್ಲವೆಂದು ತಾಯಿಗೆ ಮಾತುಕೊಟ್ಟಿದ್ದಾನೆ. ಅಂತಹವನು ಕ್ರೋಧಪೂರ್ವಕವಾಗಿ ಹೇಗೆ ತಾನೇ ಯುದ್ಧಮಾಡಿಯಾನು? ಭೀಮನಿಗೆ ಕರ್ಣನು ಅಗ್ರಜನೆಂಬ ವಿಷಯವು ತಿಳಿಯದು. ಅವನೊಬ್ಬ ಪರಮಶತ್ರುವೆಂದು ಅವನ ಭಾವನೆ. ಅವನನ್ನು ನಿರ್ಮೂಲನಮಾಡುವುದೇ ಅವನ ಪರಮೋದ್ದೇಶ. ಆದುದರಿಂದಲೇ ಅವನು ಕ್ರೋಧಪೂರ್ವಕವಾಗಿಯೇ ಯುದ್ಧಮಾಡುತ್ತಿದ್ದನು. ಈ ಅಧ್ಯಾಯ ಮತ್ತು ಮುಂದಿನ ಅಧ್ಯಾಯಗಳಲ್ಲಿ ಕರ್ಣನಿಗೆ ಬಹಳ ದುಃಖಕರವಾದ ಪ್ರಸಂಗಗಳು ಒದಗುತ್ತವೆ. ಕರ್ಣನು ರಥ-ಸಾರಥಿಗಳಿಂದ ಹೀನನಾಗುತ್ತಾನೆ. ಅದನ್ನು ಕಂಡ ದುರ್ಯೋಧನನು ಕರ್ಣನ ಸಹಾಯಕ್ಕೆ ತನ್ನ ತಮ್ಮನಾದ ದುರ್ಜಯನನ್ನು ಕಳುಹಿಸುತ್ತಾನೆ. ಕರ್ಣನ ಎದುರಿನಲ್ಲಿಯೇ ದುರ್ಜಯನನ್ನು ಭೀಮನು ಸಂಹರಿಸುತ್ತಾನೆ. ಕರ್ಣನು ಅದರಿಂದ ಬಹಳ ಖಿನ್ನನಾಗುತ್ತಾನೆ.

೧೩೪ನೆಯ ಅಧ್ಯಾಯದಲ್ಲಿ–ಇಂತಹುದೇ ಪ್ರಕರಣವು ಬರುತ್ತದೆ. ಇಲ್ಲಿಯೂ ಕರ್ಣನು ರಥಹೀನನಾಗುತ್ತಾನೆ. ಸಹಾಯಕ್ಕೆಂದು ದುರ್ಯೋಧನನು ದುರ್ಮುಖನನ್ನು ಕಳುಹಿಸುತ್ತಾನೆ. ಕರ್ಣನ ಎದುರಿನಲ್ಲಿಯೇ ಭೀಮನು ದುರ್ಮುಖನನ್ನೂ ಸಂಹರಿಸುತ್ತಾನೆ. ಕರ್ಣನು ಪುನಃ ಯುದ್ಧವನ್ನು ಪ್ರಾರಂಭಿಸಿ ಭೀಮನಿಂದ ಪರಾಜಿತನಾಗಿ ಪಲಾಯನಮಾಡುತ್ತಾನೆ. ೧೩೫ನೆಯ ಅಧ್ಯಾಯದಲ್ಲಿ–ಭೀಮಸೇನನ ಪರಾಕ್ರಮವನ್ನು ಖಿನ್ನನಾದ ಧೃತರಾಷ್ಟ್ರನು ಬಗೆ-ಬಗೆಯಾಗಿ ವರ್ಣಿಸುತ್ತಾನೆ. ದುರ್ಜಯ-ದುರ್ಮುಖರು ಹತರಾದುದನ್ನು ಕಂಡು ದುರ್ಮರ್ಷಣನೇ ಮೊದಲಾದ ಐವರು ಭೀಮಸೇನನ ಮೇಲೆ ಯುದ್ಧಕ್ಕೆ ಹೋಗುತ್ತಾರೆ. ಅದನ್ನು ನೋಡಿ ಪರಾಜಿತನಾಗಿದ್ದ ಕರ್ಣನು ಪುನಃ ಭೀಮಸೇನನೊಡನೆ ಯುದ್ಧಮಾಡಲು ಬರುತ್ತಾನೆ. ಕರ್ಣ

ನೆದುರಿನಲ್ಲಿಯೇ ಭೀಮನು ಆ ಐವರನ್ನೂ ಸಂಹಾರಮಾಡುತ್ತಾನೆ. ೧೩೬ನೆಯ ಅಧ್ಯಾಯದಲ್ಲಿ–ಕರ್ಣ-ಭೀಮರ ಯುದ್ಧವು ಮುಂದುವರಿಯುತ್ತದೆ. ಕರ್ಣನು ಪಲಾಯನಮಾಡುತ್ತಾನೆ. ಅದನ್ನು ನೋಡಿದ ದುರ್ಯೋಧನನು ತನ್ನ ಏಳು ಮಂದಿ ತಮ್ಮಂದಿರನ್ನು ರಾಧೇಯನ ಸಹಾಯಕ್ಕಾಗಿ ಕಳುಹಿಸಿಕೊಡುತ್ತಾನೆ. ಆ ಏಳು ಮಂದಿಯನ್ನೂ ಭೀಮಸೇನನು ಕ್ಷಣಮಾತ್ರದಲ್ಲಿ ಸಂಹರಿಸುತ್ತಾನೆ. ಆ ಸಮಯದಲ್ಲಿ ಕರ್ಣನು ಗಳ-ಗಳನೆ ಅಳುತ್ತಾನೆ. ಕರ್ಣ-ಭೀಮರ ಯುದ್ಧವು ಮುಂದುವರಿಯುತ್ತದೆ. ೧೩೭ನೆಯ ಅಧ್ಯಾಯದಲ್ಲಿ–ಭೀಮನಿಗೂ-ಕರ್ಣನಿಗೂ ಸುಘೋರವಾದ ಯುದ್ಧವು ನಡೆಯುತ್ತಲೇ ಇರುತ್ತದೆ. ಪುನಃ ದುರ್ಯೋಧನನು ತನ್ನ ತಮ್ಮಂದಿರನ್ನು ಕರ್ಣನ ಸಹಾಯಕ್ಕೆ ಹೋಗುವಂತೆ ಪ್ರೇರಿಸುತ್ತಾನೆ. ಶತ್ರುಂಜಯನೇ ಮೊದಲಾದ ಏಳು ಮಂದಿ ದುರ್ಯೋಧನನ ಸಹೋದರರು ಕರ್ಣನ ಸಹಾಯಕ್ಕಾಗಿ ಹೋಗಿ ಎಲ್ಲರೂ ಭೀಮಸೇನನಿಂದ ಹತರಾಗುತ್ತಾರೆ. ಹೀಗೆ ಧೃತರಾಷ್ಟ್ರನ ೩೨ ಮಂದಿ ಮಕ್ಕಳೂ ಪ್ರಾಣತೊರೆಯುತ್ತಾರೆ. ಕರ್ಣನು ತುಂಬಿದ್ದ ಸಭೆಯಲ್ಲಿ ದ್ರೌಪದಿಯನ್ನು ಕಠಿನವಾದ ಮಾತುಗಳಿಂದ ಅವಮಾನಪಡಿಸಿದುದರ ಫಲವಿದೆಂದು ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ. ೧೩೮ನೆಯ ಅಧ್ಯಾಯದಲ್ಲಿ–ಈ ಅಧ್ಯಾಯವನ್ನು ಸಮನ್ವಯಿಸಲು ಸ್ವಲ್ಪ ಕಷ್ಟವೇ ಆಗುತ್ತದೆ. ಈ ಅಧ್ಯಾಯದಲ್ಲಿಯೂ ಕರ್ಣ-ಭೀಮರ ಯುದ್ಧವೇ ಮುಂದುವರಿಯುತ್ತದೆ. ಕರ್ಣನು ಕ್ಷಣಕಾಲ ಮೂರ್ಛಿತನಾಗುತ್ತಾನೆ. ಅನಂತರ ಘೋರಯುದ್ಧವು ನಡೆದು ಕರ್ಣನ ಕೈಮೇಲಾಗುತ್ತದೆ. ಕರ್ಣನು ಭೀಮಸೇನನ ಧನುಸ್ಸನ್ನೂ, ಶಕ್ತ್ಯಾಯುಧವನ್ನೂ, ಖಡ್ಗವನ್ನೂ, ಗುರಾಣಿಯನ್ನೂ ಕತ್ತರಿಸಿ ಬಿಡುತ್ತಾನೆ. ಅರ್ಥಾತ್ ಭೀಮಸೇನನು ನಿರಾಯುಧನಾಗುತ್ತಾನೆ. ಭೀಮಸೇನನು ಪ್ರಹರಿಸಿದ ಕತ್ತಿಯಿಂದ ಕರ್ಣನು ಧನುಸ್ಸನ್ನು ಕಳೆದುಕೊಂಡರೂ ಮತ್ತೊಂದು ಧನುಸ್ಸನ್ನು ಒಡನೆಯೇ ತೆಗೆದುಕೊಂಡು ಭೀಮಸೇನನ ಮೇಲೆ ಸಾವಿರಾರು ಬಾಣಗಳನ್ನು ಬಿಡುತ್ತಾನೆ (೭೩). ಈ ಶ್ಲೋಕದಿಂದ ೮೧ನೆಯ ಶ್ಲೋಕದವರೆಗೆ ಅರ್ಥನಯನಮಾಡುವುದು ಸ್ವಲ್ಪ ಕಷ್ಟವೇ ಸರಿ. "ಭೀಮಸೇನನು ಆಕಾಶಕ್ಕೆ ಹಾರುತ್ತಾನೆ. ಕರ್ಣನು ಬಚ್ಚಿಟ್ಟುಕೊಂಡು ಭೀಮಸೇನನನ್ನು ವಂಚಿಸುತ್ತಾನೆ. ರಥದ ಪೀಠದ

ಹಿಂಬದಿಯಲ್ಲಿ ಬಚ್ಚಿಟ್ಟುಕೊಂಡಿರುವುದನ್ನು ನೋಡಿ ಭೀಮನು ಧ್ವಜವನ್ನು ಹಿಡಿದುಕೊಂಡು ಭೂಮಿಯ ಮೇಲೆ ನಿಲ್ಲುತ್ತಾನೆ. ಅದನ್ನು ನೋಡಿ ಕೌರವ ಸೈನಿಕರೂ ಚಾರಣರೂ ಅವನನ್ನು ಶ್ಲಾಘಿಸುತ್ತಾರೆ. ರಥಹೀನನಾದ, ಧನುಸ್ಸಿನಿಂದಲೂ ವಿಹೀನನಾದ ಭೀಮಸೇನನು ಪುನಃ ತನ್ನ ರಥವನ್ನು ಹಿಂಬದಿಯಲ್ಲಿಟ್ಟುಕೊಂಡು ಯುದ್ಧಕ್ಕೆ ನಿಲ್ಲುತ್ತಾನೆ. ಯುದ್ಧಕ್ಕೆ ಸಿದ್ಧನಾಗಿರುವ ಭೀಮಸೇನನ ಮೇಲೆ ಕರ್ಣನು ಪುನಃ ಆಕ್ರಮಣ ನಡೆಸುತ್ತಾನೆ. ಇಬ್ಬರೂ ಗರ್ಜನೆಮಾಡುತ್ತಾರೆ. ದೇವ-ದಾನವರ ಯುದ್ಧದಂತೆ ಅವರಿಬ್ಬರಿಗೂ ಘೋರವಾದ ಯುದ್ಧವಾಗುತ್ತದೆ. ಇದು ಈ ಶ್ಲೋಕಗಳ ತಾತ್ಪರ್ಯ. ಇಲ್ಲಿ ಮೂಡುವ ಪ್ರಶ್ನೆಗಳು : ಭೀಮಸೇನನು ಹಾರಿದ್ದೇಕೆ? ಹಾರಿದ್ದರಿಂದ ಧನುರ್ಧಾರಿಯಾದ ಕರ್ಣನು ಭಯಪಟ್ಟುದೇಕೆ? ಒಂದು ವೇಳೆ ಅವನು ಬಚ್ಚಿಟ್ಟುಕೊಂಡರೆ ವಂಚನೆಮಾಡಿದಂತಾಯಿತೇ? ಗರುಡನು ಹಾವನ್ನು ಎತ್ತಿಕೊಂಡು, ಹೋಗುವ ರೀತಿಯಲ್ಲಿ ಕರ್ಣನನ್ನು ರಥದಿಂದ ಎತ್ತಿಕೊಂಡು ಹೋಗಲು ಹವಣಿಸುತ್ತಿದ್ದುದನ್ನು ನೋಡಿ ಕೌರವರು ಭೀಮಸೇನನನ್ನು ಶ್ಲಾಘಿಸಲು ಸಾಧ್ಯವೇ?

ರಥದ ಬಳಿಗೆ ಬಂದಿದ್ದವನು ಪುನಃ ಹಿಂದಿರುಗಿದುದೇತಕ್ಕೆ? ಆಯುಧ ವಿಲ್ಲದವನು ಯುದ್ಧಕ್ಕೆ ಹೇಗೆ ನಿಂತನು? ನಿರಾಯುಧನಾದ ಭೀಮಸೇನ ನಿಗೂ–ಕರ್ಣನಿಗೂ ದೇವಾಸುರರ ಯುದ್ಧಕ್ಕೆ ಸಮಾನವಾದ ಯುದ್ಧವು ಹೇಗೆ ನಡೆಯಿತು?–ಇಷ್ಟು ಪ್ರಶ್ನೆಗಳು ಉದ್ಭವಿಸುತ್ತದೆ. ದೇವ-ದಾನವರ ಯುದ್ಧದಂತೆ ಯುದ್ಧವು ನಡೆಯಿತೆಂದು ಹೇಳಿದನಂತರ 'ನಿರಾಯುಧನಾದ ಭೀಮನು ಕರ್ಣನ ಬಾಣಗಳ ಪ್ರಹಾರವನ್ನು ತಪ್ಪಿಸಿಕೊಳ್ಳಲು ಸತ್ತು ಹೋಗಿದ್ದ ಆನೆಗಳ ಮಧ್ಯೆ ಪ್ರವೇಶಿಸಿದನು'–ಎಂದು ಕಥೆಯು ಮುಂದು ವರಿಯುತ್ತದೆ. ಆದುದರಿಂದ–**ವ್ಯಾಯಚ್ಛತ್ಸಶರಾನ್ಕರ್ಣಃ ಕುನ್ತೀಪುತ್ರ ಜಿಘಾಂಸಯಾ । ಸಹಸ್ರಶೋ ಮಹಾರಾಜ ರುಕ್ಮಪುಙ್ಖಾನ್ಸುತೇಜ ಸಾನ್ ॥೭೩॥** ಈ ಶ್ಲೋಕದನಂತರ-**ಕ್ಷೀಣಶಸ್ತ್ರಸ್ತು ಕೌನ್ತೇಯಃ ಕರ್ಣೇನ ಸಮಭಿದ್ರುತಃ ॥೮೨॥** ಎಂಬ ಶ್ಲೋಕವನ್ನು ಮುಂದುವರಿಸಿದರೆ ಸುಸಂಗತವಾಗಿ ಕಾಣುತ್ತದೆ. ಇದೇ ಅಧ್ಯಾಯದಲ್ಲಿ ಕಥೆಯು ಮುಂದೆ ಹೀಗೆ

ಸಾಗುತ್ತದೆ : “ಪ್ರಾಣವನ್ನು ಉಳಿಸಿಕೊಳ್ಳಲು ಇಚ್ಛಿಸಿದ ಭೀಮಸೇನನು ರಥಗಳ ಮಧ್ಯಭಾಗದಲ್ಲಿ ನುಸುಳಿಕೊಂಡನು. ಕರ್ಣನನ್ನು ಪುನಃ ಪ್ರಹರಿಸಲು ಹೋಗಲಿಲ್ಲ. ಕರ್ಣನ ಬಾಣಗಳನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಸತ್ತುಬಿದ್ದಿದ್ದ ಆನೆಯನ್ನು ಮೇಲೆತ್ತಿ ಹಿಡಿದುಕೊಂಡಿದ್ದನು. ಅದನ್ನೂ ಕರ್ಣನು ತುಂಡರಿಸಿದನು. ಅನಂತರ ಭೀಮಸೇನನು ಅಲ್ಲಿ ಬಿದ್ದಿದ್ದ ಚಕ್ರಗಳು, ಸತ್ತ ಕುದುರೆಗಳು, ಏನೇನು ಕಂಡನೋ ಅದನ್ನೆಲ್ಲಾ ಕರ್ಣನ ಕಡೆಗೆ ಎಸೆಯು ತ್ತಿದ್ದನು. ಅವುಗಳೆಲ್ಲವನ್ನೂ ಕರ್ಣನು ಕತ್ತರಿಸುತ್ತಿದ್ದನು. (೮೮) ಈ ಶ್ಲೋಕದನಂತರ ‘ಭೀಮನು ಮುಷ್ಟಿಯನ್ನು ಮೇಲೆತ್ತಿ ಕರ್ಣನನ್ನು ಕೊಲ್ಲಲು ನಿಶ್ಚಯಿಸಿದನು. ಆದರೆ ಅರ್ಜುನನು ಮಾಡಿದ ಪ್ರತಿಜ್ಞೆಯನ್ನು ಸ್ಮರಿಸಿ ಕರ್ಣನನ್ನು ಕೊಲ್ಲಲಿಲ್ಲ’–ಎಂಬ ತಾತ್ಪರ್ಯಾರ್ಥಕೊಡುವ ಎರಡು ಶ್ಲೋಕಗಳಿವೆ (೮೯-೯೦). ಕರ್ಣನು ರಥದ ಮೇಲಿದ್ದಾನೆ. ಧನುಷ್ಪಾಣಿ ಯಾಗಿ ಬಾಣಗಳನ್ನು ಬಿಡುತ್ತಿದ್ದಾನೆ. ಸತ್ತ ಆನೆಗಳ ಮಧ್ಯದಲ್ಲಿ ನುಸುಳಿ ಕೊಂಡಿರುವ ಭೀಮನು ಅವನನ್ನು ಮುಷ್ಟಿಯಿಂದ ಸಂಹರಿಸುವುದಾದರೂ ಹೇಗೆ? ಇಲ್ಲಿರುವ ಶ್ಲೋಕಗಳು ಕೆಲವು ಪುಸ್ತಕಗಳಲ್ಲಿರುವುದಿಲ್ಲ. ಇದೊಂದು ಸಮಾಧಾನ.

ಮುಂದೆ ಕಥೆಯು ಹೀಗೆ ಸಾಗುತ್ತದೆ : ‘ಕುಂತಿಯ ಮಾತನ್ನು ಸ್ಮರಿಸಿದ ಕರ್ಣನು ನಿರಾಯುಧನಾಗಿದ್ದ ಭೀಮಸೇನನನ್ನು ಸಂಹರಿಸಲಿಲ್ಲ. ಕರ್ಣನು ಭೀಮನ ಸಮೀಪಕ್ಕೆ ಹೋಗಿ ಧನುಸ್ಸಿನ ಅಗ್ರಭಾಗದಿಂದ ಭೀಮಸೇನನನ್ನು ತಿವಿದನು. ಅದೇ ಧನುಸ್ಸನ್ನು ಕಿತ್ತುಕೊಂಡು ಭೀಮನು ಕರ್ಣನ ತಲೆಗೆ ಅಪ್ಪಳಿಸಿದನು. ಕ್ರೋಧದಿಂದ ಕೆಂಗಣ್ಣನಾದ ಕರ್ಣನು ನಗು-ನಗುತ್ತಲೇ ಈ ಮಾತುಗಳನ್ನು ಹೇಳಿದನು :’

ಇಲ್ಲಿ ಕರ್ಣನು ರಥದಿಂದ ಇಳಿದು ಬಂದನು–ಎಂಬುದಕ್ಕೆ ವಾಕ್ಯವಿಲ್ಲ. ದಾರಿಯಲ್ಲಿ ಆನೆಗಳು ಸತ್ತುಬಿದ್ದಿದ್ದುದರಿಂದ ರಥವು ಭೀಮಸೇನನ ಬಳಿಗೆ ಬರಲು ಸಾಧ್ಯವಿಲ್ಲ. ಕರ್ಣನು ಕಾಲ್ನಡಿಗೆಯಲ್ಲಿಯೇ ಬಂದನೇ? ಬಂದು ಧನುಸ್ಸಿನಿಂದ ತಿವಿದನೇ? ಆ ಧನುಸ್ಸನ್ನೇ ಸೆಳೆದುಕೊಂಡು ಭೀಮಸೇನನು ಕರ್ಣನನ್ನು ಪ್ರಹರಿಸಿದನೇ?–ಇದರ ಯಥಾರ್ಥವನ್ನು ತೆಗೆದುಕೊಂಡರೆ ಕರ್ಣನೂ ನಿರಾಯುಧನೇ ಆಗುತ್ತಾನೆ. ಭೀಮಸೇನನ ಮುಷ್ಟಿಪ್ರಹಾರವೇ

ಕರ್ಣನು ಅಸುನೀಗಲು ಸಮರ್ಥವಾಗಿರುವಾಗ ಧನುಸ್ಸಿನ ಪ್ರಹಾರವು ಅವನನ್ನು ಮೂರ್ಛೆಗೊಳಿಸಲು ಸಾಕು. ಮೇಲಾಗಿ ನಿರಾಯುಧನಾದ ರಥಹೀನನಾದ ಕರ್ಣನನ್ನು ಭೀಮಸೇನನು ಕ್ಷಣಮಾತ್ರದಲ್ಲಿ ನಿರ್ವೀರ್ಯನನ್ನಾಗಿ ಮಾಡಬಲ್ಲನು. ಶತ್ರುವಿನ ಪರಾಕ್ರಮವೆಷ್ಟೆಂಬುದು ತಿಳಿದಿರುವಾಗ ಕರ್ಣನು ರಥದಿಂದಿಳಿದು ಭೀಮಸೇನನನ್ನು ಧನುಸ್ಸಿನ ತುದಿಯಿಂದ ಚುಚ್ಚಲು ಹೋಗುವನೇ? ಭೀಮಸೇನನು ನಿರಾಯುಧನಾಗಿ ತನ್ನ ಸಮೀಪಕ್ಕೆ ಬಂದಿದ್ದಾಗಲೇ ಆಯುಧಸಹಿತನಾದ ಕರ್ಣನು ಬಚ್ಚಿಟ್ಟುಕೊಂಡಿದ್ದನು–**ಲಯಮಾಸ್ಥಾಯ** (೭೫). ಹೀಗಿರುವಾಗ ಧನುಸ್ಸಿನಿಂದ ಅವನನ್ನು ಚುಚ್ಚಲು ಹೋಗುವನೇ? ಇಂತಹ ಕ್ರಮಬದ್ಧ ಸಂಶಯಗಳಿಗೆ ಸಮಾಧಾನವೇ ಸಿಗುವುದಿಲ್ಲ. ಕೆಲವು ಪುಸ್ತಕಗಳಲ್ಲಿ ಧನುಸ್ಸನ್ನು ಕಿತ್ತುಕೊಂಡು ಭೀಮನು ಕರ್ಣನ ತಲೆಯಲ್ಲಿ ಪ್ರಹರಿಸಿದನೆಂಬ ಮತ್ತು ಅದರಿಂದ ಕರ್ಣನು ಕುಪಿತನಾದನೆಂಬ (೯೩ ಮತ್ತು ೯೪ ಪೂರ್ವಾರ್ಧ) ಶ್ಲೋಕಗಳಿರುವುದಿಲ್ಲ. ನಮ್ಮ ಅಭಿಪ್ರಾಯದಲ್ಲಿ ಕುಂತಿಯ ಮಾತನ್ನು ಸ್ಮರಿಸಿ ಕರ್ಣನು ನಿರಾಯುಧನಾದ ಭೀಮಸೇನನನ್ನು ಸಂಹರಿಸಲಿಲ್ಲ (೯೨ನೆಯ ಶ್ಲೋಕದ ಪೂರ್ವಾರ್ಧ). ಅನಂತರ ರಾಧೇಯನು ಗಹ-ಗಹಿಸಿ ನಗುತ್ತಾ ಭೀಮಸೇನನೊಡನೆ ಈ ಮಾತನ್ನು ಹೇಳಿದನು (೯೪ನೆಯ ಶ್ಲೋಕದ ಉತ್ತರಾರ್ಧ). ಎಂದು ಸೇರಿಸಿ ಹೇಳಬಹುದಾಗಿದೆ. ಅಥವಾ

**ವ್ಯಾಯುಧಂ ನಾವಧೀಚ್ಚೈನಂ ಕರ್ಣಃ ಕುನ್ತ್ಯಾ ವಚಃ ಸ್ಮರನ್ ।**

ಇಲ್ಲಿಗೇ ಅಧ್ಯಾಯವು ಮುಗಿದಿದ್ದರೂ ಚೆನ್ನಾಗಿದ್ದಿತು. ಮುಗಿದಿರಲೂ ಬಹುದು. ಮುಂದಿನದು ಅಧಿಕಪಾಠವಿರಬಹುದು.

ಈ ಅಧ್ಯಾಯದ ಮುಂದಿನ ಕಥಾಭಾಗ ಹೀಗಿದೆ :

**ವಾಕ್ಯಮೇತದುವಾಚ ಹ**–ರಾಧೇಯನು ಭೀಮಸೇನನನ್ನು ಕುರಿತು ಈ ಮಾತುಗಳನ್ನು ಹೇಳಿದನು–ಎಂದು ಸಂಜಯನು ಹೇಳಿದನಂತರ–

**ಪುನಃ ಪುನಸ್ತೂಬರಕ**–ಎಂದು ಶ್ಲೋಕವು ಪ್ರಾರಂಭವಾಗುತ್ತದೆ. ಒಂದು ವಾಕ್ಯವನ್ನು ಹೇಳಿದನಂತರ ಪುನಃ ಪುನಃ ಅದನ್ನೇ ಹೇಳಿದನೆಂಬುದು ಅಸಮಂಜಸವಾಗಿ ಕಾಣುತ್ತದೆ. ವಾಕ್ಯವನ್ನು ಹೇಳುವ ಮೊದಲೇ ಪುನಃ ಪುನಃ ಹೇಳಿದನೆಂದರೆ, ಯಾವುದನ್ನು ಹೇಳಿದನು? **‘ತೂಬರಕ’** ಎಂಬುದನ್ನು

ಪುನಃ ಪುನಃ ಹೇಳಿದನೇ? ಪುನಃ ಪುನಃ ಮಾ ಯೋತ್ಸೀಃ–ಪುನಃ ಪುನಃ ಯುದ್ಧಮಾಡಲು ಬರಬೇಡ ಎಂದು ಅರ್ಥಮಾಡಬೇಕೇ? ಎಂಟು ಬಾರಿ ಸೋತು ಒಂಬತ್ತನೆಯ ಬಾರಿ ಗೆದ್ದವನು ಇಂತಹ ಮಾತುಗಳನ್ನಾಡುವನೇ? ೯೫ನೆಯ ಶ್ಲೋಕದಿಂದ ೧೦೫ನೆಯ ಶ್ಲೋಕದವರೆಗಿನ ೧೧ ಶ್ಲೋಕಗಳು ಮುಂದೆ ಭೀಮನನ್ನು ಬಹಳ ಹೀನಾಯವಾಗಿ ತೆಗಳುವ ಶ್ಲೋಕಗಳಾಗಿವೆ. ಕರ್ಣನು ದುರ್ಯೋಧನನೊಡನೆ ಮಾತನಾಡುವಾಗ 'ನಾನು ಭೀಮನ ಬಾಣಗಳ ಪ್ರಹಾರದಿಂದ ಬಹಳವಾಗಿ ಗಾಯಗೊಂಡಿದ್ದೇನೆ. ನನಗೆ ಯುದ್ಧಭೂಮಿಯಲ್ಲಿ ನಿಲ್ಲಲೂ ಸಹ ಚೈತನ್ಯವಿಲ್ಲ. ಇರಬೇಕು ; ಇದ್ದೇನೆ' (೧೪೫=೨೫-೨೬-೨೭) ಎಂದೇ ಹೇಳುತ್ತಾನೆ. ಭೀಮಸೇನನನ್ನು ಜಯಿಸಿದೆ ನೆಂದೂ ಸಹ ಹೇಳಿಕೊಳ್ಳುವುದಿಲ್ಲ. ಹೀಗಿರುವಾಗ ಕರ್ಣನು ಈ ಮಾತುಗಳ ನ್ನಾಡಿದ್ದಾನೆಯೇ?–ಎಂಬ ಸಂಶಯವುಂಟಾಗುತ್ತದೆ. ಮಾತುಗಳೂ ಅಷ್ಟು ಹೀನಾಯವಾಗಿವೆ. ಯುದ್ಧಪ್ರಕರಣದಲ್ಲಿ ಇದುವರೆಗೆ ಕರ್ಣನು ಇಂತಹ ಮಾತುಗಳನ್ನಂತೂ ಆಡಿರುವುದಿಲ್ಲ. ಆದುದರಿಂದ ಈ ಮಾತುಗಳು ನಿಜ ವಾಗಿಯೂ ಕರ್ಣನಾಡಿರುವ ಮಾತುಗಳೇ?–ಎಂದು ವಾಚಕರಿಗೂ ಸಂಶಯವುಂಟಾಗುವುದರಲ್ಲಿ ಸಂಶಯವಿಲ್ಲ. ಆದರೆ ಈ ಶ್ಲೋಕಗಳು ಮಹಾ ಭಾರತದ ಎಲ್ಲ ಪುಸ್ತಕಗಳಲ್ಲಿಯೂ ಇವೆ. ಆದುದರಿಂದ ಈ ಶ್ಲೋಕಗಳನ್ನು ಅಲ್ಲಗಳೆಯುವ ಧೈರ್ಯವಿಲ್ಲದಿದ್ದರೂ ಈ ಅಧ್ಯಾಯದಲ್ಲಿಯೇ ಮುಂದೆ ಕಾಣುವ ಇನ್ನೂ ಕೆಲವು ಅಸಂಗತಗಳಿಂದ ಈ ಪಾಠದ ವಿಷಯವಾಗಿ ಸಂಶಯವು ಮೂಡುತ್ತದೆ.

ಕರ್ಣನು ಭೀಮಸೇನನನ್ನು ಅವಾಚ್ಯಶಬ್ದಗಳಿಂದ ನಿಂದಿಸುತ್ತಾನೆ. ಪುನಃ ಭೀಮಸೇನನನ್ನು ಧನುಸ್ಸಿನಿಂದ ಚುಚ್ಚುತ್ತಾನೆ. (೧೦೩) ಧನುಸ್ಸನ್ನು ಕಿತ್ತುಕೊಂಡು ಭೀಮಸೇನನು ಕರ್ಣನ ಹಣೆಯಲ್ಲಿ ಪ್ರಹರಿಸಿದನೆಂದು ಈ ಹಿಂದೆಯೇ ಬಂದಿದೆ. (೯೨) ಕರ್ಣನು ಪುನಃ ಧನುಸ್ಸಿನಿಂದಲೇ ತಿವಿಯಬೇಕಾ ದರೆ ಭೀಮಸೇನನು ಕರ್ಣನಿಗೆ ಪುನಃ ಧನುಸ್ಸನ್ನು ತಿವಿಯಲೆಂದೇ ಕೊಟ್ಟನೆ? ಅಥವಾ ಕರ್ಣನು ಧನುಸ್ಸನ್ನು ಕಿತ್ತುಕೊಂಡನೇ?–ಇದನ್ನು ತಿಳಿಸುವ ಶ್ಲೋಕಗಳಿಲ್ಲ.

ಕರ್ಣನು ಭೀಮನನ್ನು ತೆಗಳಿದನಂತರ ಭೀಮಸೇನನು ಹೇಳುವ ಮಾತುಗಳು ಕೆಲವು ಪುಸ್ತಕಗಳಲ್ಲಿವೆ (ನಾವೂ ಕೊಟ್ಟಿದ್ದೇವೆ). "ನಾನು

ನಿನ್ನನ್ನು ಹಲವುಬಾರಿ ಜಯಿಸಿದ್ದರೂ ನೀನು ಬಾಯಿಗೆ ಬಂದಂತೆ ಹರಟುತ್ತಿರುವೆ. ಇಂದ್ರನಿಗೂ ಜಯಾಪಜಯಗಳು ತಪ್ಪಿದ್ದಲ್ಲ. ನನ್ನೊಡನೆ ಮಲ್ಲಯುದ್ಧವನ್ನು ಮಾಡು. ಕೀಚಕನನ್ನು ಕೊಂದಂತೆ ನಾನು ನಿನ್ನನ್ನು ಕೊಲ್ಲುತ್ತೇನೆ." (ಮಲ್ಲಯುದ್ಧದ ಹೊರತಾಗಿ ಕರ್ಣನನ್ನು ಸಂಹರಿಸಲು ಸಾಧ್ಯವಿಲ್ಲ ಎಂಬ ಅಭಿಪ್ರಾಯವೇ? )

ಹೀಗೆಂದು ಹೇಳಿದೊಡನೆಯೇ ಭೀಮನ ಅಭಿಪ್ರಾಯವನ್ನು ತಿಳಿದ ಬಹಳ ಬುದ್ಧಿವಂತನಾದ ಕರ್ಣನು ಎಲ್ಲ ಧನುಷ್ಮಂತರೂ ನೋಡುತ್ತಿದ್ದಂತೆಯೇ ರಣರಂಗದಿಂದ ಹೊರಟುಹೋಗುತ್ತಾನೆ. (೧೦೯) ಭೀಮನ ಮಾತಿನಿಂದಲೇ ಹೆದರಿ ಓಡಿಹೋದ ಕರ್ಣನಿಗೆ ಅಷ್ಟು ನಿಷ್ಠುರವಾದ ಮಾತುಗಳನ್ನಾಡಲು ಸಾಧ್ಯವಾಯಿತೇ? ಈ ಶ್ಲೋಕಾರ್ಧದ ಪ್ರಕಾರ '**ವಿರರಾಮ ರಣಾತ್ತಸ್ಮಾತ್** ' 'ಕರ್ಣನು ಯುದ್ಧದಿಂದ ವಿರತನಾಗುತ್ತಾನೆ.' ಅರ್ಥಾತ್ ಬೇರೆಯ ಕಡೆಗೆ ಹೊರಟುಹೋಗುತ್ತಾನೆ. ಆದರೆ ಅಧ್ಯಾಯವು ಇಲ್ಲಿಗೂ ಮುಗಿಯುವುದಿಲ್ಲ. ಪುನಃ ಸಂಜಯನು ಹೇಳುವ ವಾಕ್ಯವಿದೆ. '**ಏವಂ ತಂ ವಿರಥಂ ಕೃತ್ವಾ ಕರ್ಣೋ ರಾಜನ್ವ್ಯಕತ್ಥಯತ್**–ಈ ರೀತಿಯಾಗಿ ಭೀಮನನ್ನು ರಥಹೀನನನ್ನಾಗಿ ಮಾಡಿ ಕರ್ಣನು ಹರಟಿದನು.' ಈ ಹಿಂದೆ ಕರ್ಣನ ಮಾತಿಲ್ಲ. ಭೀಮಸೇನನ ಮಾತಿದೆ. ಆದುದರಿಂದ 'ಏವಂ' ಎಂಬುದನ್ನು ಯಾವುದಕ್ಕೆ ಅನ್ವಯಿಸಬೇಕು? ಕರ್ಣನ ಮಾತಿಗೆ ಅನ್ವಯಿಸುವುದಾದರೆ ಭೀಮನು ಹೇಳಿರುವ ಮಾತುಗಳು ಅನಂತರದಲ್ಲಿ ಬಂದುವುಗಳೇ?–ಎಂಬ ಸಂಶಯಮೂಡುತ್ತದೆ. ಮುಂದೆ–'ಈ ಎಲ್ಲವೂ ಅರ್ಜುನನ ಮುಂದೆಯೇ ನಡೆಯಿತು. ಅರ್ಜುನನು ಎಲ್ಲವನ್ನೂ ಕೇಳಿದನು. ಕೇಶವನ ಪ್ರೇರಣೆಯಂತೆ ಅರ್ಜುನನು ಬಾಣಗಳನ್ನು ಪ್ರಯೋಗಿಸಿದನು. ಆ ಬಾಣಗಳು ಕರ್ಣನನ್ನು ಹೊಕ್ಕವು. ಆ ಬಾಣಗಳಿಂದ ಅರ್ಜುನನು ಕರ್ಣನನ್ನು ಭೀಮಸೇನನಿಂದ ಬಹಳ ದೂರಕ್ಕೆ ಓಡಿಸಿಬಿಟ್ಟನು'–ಎಂಬ ತಾತ್ಪರ್ಯಬರುವ ನಾಲ್ಕು ಶ್ಲೋಕಗಳಿವೆ. **ಧನಂಜಯಃ ಸೂತಪುತ್ರಂ ಭೀಮಸೇನಾತ್ ಅಪಾಸೇಧತ್** (೧೧೩). ಈ ಹಿಂದೆ ಉದ್ಧರಿಸಿರುವಂತೆ ೧೦೯ನೆಯ ಶ್ಲೋಕದಲ್ಲಿ '**ವಿರರಾಮ ರಣಾತ್ತಸ್ಮಾತ್** '–'ಕರ್ಣನು ಯುದ್ಧದಿಂದ ವಿರಾಮಹೊಂದಿದನು' ಎಂದಿದೆ. ಪುನಃ ಅವನನ್ನು ಪ್ರಹರಿಸಿದುದು ಹೇಗೆ? ಓಡಿಸಿದುದು ಹೇಗೆ? ಪುನಃ

೧೧೪ನೆಯ ಶ್ಲೋಕವು ಹೀಗಿದೆ. **ಸ ಚ್ಛಿನ್ನಧನ್ವಾ ಭೀಮೇನ ಧನಂಜಯ ಶರಾಹತಃ । ಕರ್ಣೋ ಭೀಮಾದಪಾಯಾಸೀದ್ರಥೇನ ಮಹತಾ ದ್ರುತಮ್ ॥** 'ಭೀಮನಿಂದ ಕತ್ತರಿಸಲ್ಪಟ್ಟ ಧನುಸ್ಸುಳ್ಳವನಾಗಿದ್ದ' (?) ಕರ್ಣನ ಧನುಸ್ಸನ್ನು ಭೀಮನು ಕತ್ತರಿಸಿದ ಪ್ರಸಂಗವೇ ಇಲ್ಲಿ ಬರುವುದಿಲ್ಲ. ಇದನ್ನು ಹೇಗೆ ಸಮನ್ವಯಿಸುವುದು? ಧನಂಜಯನ ಬಾಣಗಳಿಂದಲೂ ಪೀಡಿತನಾದ ಕರ್ಣನು ಭೀಮನನ್ನು ಬಿಟ್ಟು ರಥದಲ್ಲಿ ಕುಳಿತು ಬಹಳ ವೇಗವಾಗಿ ಓಡಿಹೋದನು. ಹಿಂದಿನ ಶ್ಲೋಕದಲ್ಲಿ ಹೇಳಿದುದನ್ನೇ ಮತ್ತಷ್ಟು ವೇಗವಾಗಿ ಓಡಿಹೋದನೆಂಬ ಅಭಿಪ್ರಾಯ ಬರುವಂತೆ ಇಲ್ಲಿ ಹೇಳಲಾಗಿದೆ. (ಈ ಶ್ಲೋಕವು ಕೆಲವು ಪುಸ್ತಕಗಳಲ್ಲಿಲ್ಲ).

೧೧೫ನೆಯ ಶ್ಲೋಕದ ತಾತ್ಪರ್ಯ : ಭೀಮನು ಸಾತ್ಯಕಿಯ ರಥವನ್ನು ಹತ್ತಿಕೊಂಡು ಸವ್ಯಸಾಚಿಯನ್ನು ಅನುಸರಿಸಿ ಹೊರಟುಹೋದನು. ೧೧೧ನೇ ಶ್ಲೋಕದಲ್ಲಿ–**ಪ್ರಮುಖೇ ವೃಷ್ಣಿಸಿಂಹಸ್ಯ ಪಾರ್ಥಸ್ಯ ಚ ಮಹಾತ್ಮನಃ।** ಶ್ರೀಕೃಷ್ಣನ ಮತ್ತು ಪಾರ್ಥನ ಎದುರಿನಲ್ಲಿಯೇ ಇಷ್ಟೆಲ್ಲವೂ ನಡೆಯಿತೆಂಬ ಅಭಿಪ್ರಾಯವಿದೆ. ಈ ಶ್ಲೋಕದಲ್ಲಿ ಸಾತ್ಯಕಿಯ ರಥವನ್ನು ಹತ್ತಿ ಪಾರ್ಥನನ್ನು ಅನುಸರಿಸಿಹೋದನು ಎಂದಿದೆ. ಅರ್ಜುನನು ಅಲ್ಲಿಯೇ ಇರಲಿಲ್ಲವೇ? ಇಲ್ಲಿ ಸಾತ್ಯಕಿಯ ರಥವನ್ನು ಹತ್ತಿ ಹೋದನೆಂದು ಹೇಳಿದೆ. ೧೪೦ನೆಯ ಅಧ್ಯಾಯದ ೯ನೆಯ ಶ್ಲೋಕದಲ್ಲಿ : 'ಪುರುಷಪ್ರವೀರನಾದ ಭೀಮಸೇನನು ಕರ್ಣನಿಂದ ಪೀಡಿತನಾಗುತ್ತಿರುವುದನ್ನು ನೋಡಿ ರಾಜರ ಮಧ್ಯದಲ್ಲಿ ಸಾತ್ಯ ಕಿಯು ರಥದಲ್ಲಿ ಕುಳಿತು ಭೀಮನನ್ನು ಅನುಸರಿಸಿಹೋದನು' ಎಂದಿದೆ. ರಥದಲ್ಲಿ ಕುಳ್ಳಿರಿಸಿಕೊಂಡ ವಿಷಯವೇ ಇಲ್ಲ. ಮೇಲಾಗಿ ಶ್ರೀಕೃಷ್ಣನ ಸಮ್ಮುಖ ದಲ್ಲಿಯೇ ಭೀಮಸೇನನನ್ನು ರಥದಲ್ಲಿ ಕುಳ್ಳಿರಿಸಿಕೊಂಡನೆಂದು ಹೇಳಿದೆ. ಸಾತ್ಯಕಿಯು ಅರ್ಜುನನ ಬಳಿಗೆ ಬರುವ ಸೂಚನೆಯನ್ನು ಶ್ರೀಕೃಷ್ಣನು ಕೊಡುವುದು ೧೪೧ನೆಯ ಅಧ್ಯಾಯದಲ್ಲಿ. ಅಲ್ಲಿಯವರೆಗೂ ಅರ್ಜುನನಿಗೆ ಸಾತ್ಯಕಿಯು ಯುಧಿಷ್ಠಿರನನ್ನು ಬಿಟ್ಟುಬಂದ ವಿಷಯವೇ ತಿಳಿದಿರುವುದಿಲ್ಲ. ರಥದಲ್ಲಿ ಸಾತ್ಯಕಿಯೊಬ್ಬನೇ ಬರುವನೇ ಹೊರತು ಆ ರಥದಲ್ಲಿ ಭೀಮನಿರುವುದಿಲ್ಲ. ೧೪೮ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನು ಭೀಮನ ವಿಷಯವಾಗಿ ಕೇಳುವ ಪ್ರಶ್ನೆಗೆ ಸಂಜಯನು ಹೀಗೆ ಹೇಳುತ್ತಾನೆ : **ವಿರಥೋ**

**ಭೀಮಸೇನೋ ವೈ ಕರ್ಣವಾಕ್ಯಶಲ್ಯಪೀಡಿತಃ। ಅಮರ್ಷವಶಮಾಪನ್ನಃ ಫಾಲ್ಗುನಂ ವಾಕ್ಯಮಬ್ರವೀತ್॥೨॥** ರಥಹೀನನೂ ಕರ್ಣನ ವಾಗ್ಬಾಣ ದಿಂದ ಪೀಡಿತನೂ ಆದ ಭೀಮನು ಅರ್ಜುನನಿಗೆ ಹೇಳಿದನು : **ಪುನಃ ಪುನಸ್ತೂಬರಕ....** 'ನನ್ನನ್ನು ತೂಬರಕ! ಮೂಢ! ಮುಂತಾಗಿ ಕರ್ಣನು ನಿಂದಿಸಿದನು' ಮುಂತಾಗಿ ಹೇಳುತ್ತಾನೆ. ಅರ್ಥಾತ್ ಅರ್ಜುನನೊಡನೆ ಈ ಮಾತುಗಳನ್ನಾಡುವಾಗ ಭೀಮನು ರಥಹೀನನಾಗಿದ್ದನು. ಅರ್ಜುನನಿಗೆ ತಿಳಿಯದಿದ್ದ–ಕರ್ಣನು ನಿಂದಿಸಿದ ವಿಷಯವನ್ನು ಭೀಮಸೇನನು ಅರ್ಜುನ ನಿಗೆ ಹೇಳಿದನು–ಎಂದು ಅರ್ಥವಾಗುತ್ತದೆ. ಹೀಗಿರುವಾಗ ೧೪೯ನೆಯ ಅಧ್ಯಾಯದಲ್ಲಿರುವ **ಪ್ರಮುಖೇ ವೃಷ್ಣಿಸಿಂಹಸ್ಯ** ಎಂಬುದರ ಅರ್ಥವನ್ನು ಹೇಗೆ ಸಮನ್ವಯಿಸುವುದು? ಮತ್ತು **ಭೀಮೋऽಪಿ ಸಾತ್ಯಕೇರ್ವಾಹಂ ಸಮಾರುಹ್ಯ** ಎಂಬುದನ್ನು ಅರ್ಥೈಸುವುದು ಹೇಗೆ? ಮುಂದಿನ ೧೧೬ನೆಯ ಶ್ಲೋಕ, ೧೧೩ ಮತ್ತು ೧೧೪ನೆಯ ಶ್ಲೋಕಗಳಲ್ಲಿ ಕರ್ಣನು ಬಹಳ ವೇಗವಾಗಿ ಓಡಿಹೋದನೆಂದು ಸ್ಪಷ್ಟವಾಗಿ ಹೇಳಿದೆ. 'ಈ ಶ್ಲೋಕದಲ್ಲಿ ಕರ್ಣನನ್ನು ಉದ್ದೇಶಿಸಿ ಅರ್ಜುನನು ಬಹಳ ತ್ವರೆಯಿಂದ ಮೃತ್ಯುರೂಪವಾದ ನಾರಾಚ ವನ್ನು ಪ್ರಯೋಗಿಸಿದನು' ಎಂದಿದೆ. ಬೆನ್ನು ತೋರಿಸಿಕೊಂಡು ವೇಗವಾಗಿ ಪಲಾಯನಮಾಡುತ್ತಿರುವವನ ಮೇಲೆ ಅರ್ಜುನನನು ಬಾಣಪ್ರಯೋಗ ಮಾಡುವನೇ? ಮುಂದೆ ಅರ್ಜುನನ ಬಾಣವನ್ನು ಅಶ್ವತ್ಥಾಮನು ಅಂತರಿಕ್ಷ ದಲ್ಲಿಯೇ ಕತ್ತರಿಸುತ್ತಾನೆ. (೧೧೮) ಆಗ ಅರ್ಜುನನು ೬೪ ಬಾಣಗಳಿಂದ ಅಶ್ವತ್ಥಾಮನನ್ನು ಪ್ರಹರಿಸುತ್ತಾನೆ. ಇಷ್ಟರಿಂದಲೇ ಬಹಳವಾಗಿ ಗಾಯಗೊಂಡ ಅಶ್ವತ್ಥಾಮನು ರಥಗಳ ಸಮೂಹದೊಳಕ್ಕೆ ನುಸುಳಿಕೊಳ್ಳುತ್ತಾನೆ. (ಅಶ್ವತ್ಥಾಮನಿಗೆ ಅರ್ಜುನನ ಮೇಲೆ ಒಮ್ಮೆಯಾದರೂ ಬಾಣಪ್ರಯೋಗ ಮಾಡಲು ಸಾಧ್ಯವಾಗಲಿಲ್ಲವೇ?) ೧೨೨ನೆಯ ಶ್ಲೋಕದಲ್ಲಿ ಅರ್ಜುನನು ಹಾಗೆ ಓಡಿಹೋಗುತ್ತಿದ್ದ ಅಶ್ವತ್ಥಾಮನನ್ನು ಅಟ್ಟಿಸಿಕೊಂಡು ತನ್ನ ಬಾಣಗಳಿಂದ ಕೌರವರ ಸೈನ್ಯವನ್ನು ಭಯಗೊಳಿಸುತ್ತಾ ಸ್ವಲ್ಪದೂರದವರೆಗೆ ಹೋದನು. ಇಲ್ಲಿಯೂ ಸಹ ಓಡುತ್ತಿರುವ ಅಶ್ವತ್ಥಾಮನನ್ನು ಅರ್ಜುನನು ಅಟ್ಟಿಸಿಕೊಂಡುಹೋದನೆಂದು ಸ್ಪಷ್ಟವಾಗಿ ಹೇಳಿದೆ. **ಧನಂಜಯಸ್ತಥಾ ಯಾನ್ತಂ ಪೃಷ್ಠತೋ ದ್ರೌಣಿಮಭ್ಯಗಾತ್**–ಅರ್ಜುನನ ಶತ್ರುಗಳೂ

ಇಂತಹ ಆಪಾದನೆಯನ್ನು ಅರ್ಜುನನ ಮೇಲೆ ಹೊರಿಸಲಾರರು. ಒಂದು ಶ್ಲೋಕಕ್ಕೂ ಮತ್ತೊಂದು ಶ್ಲೋಕಕ್ಕೂ ಹೊಂದಾಣಿಕೆಯಿಲ್ಲದಿರುವ ಇಷ್ಟೊಂದು ಹೆಚ್ಚು ಶ್ಲೋಕಗಳು ಹೇಗೆ ನುಸುಳಿಕೊಂಡವೋ ತಿಳಿಯದು. ಈ ಶ್ಲೋಕಗಳಲ್ಲಿ ಬಹುಭಾಗ ಭಂ. ರಿ. ಸಂಸ್ಥೆಯದೂ ಸೇರಿ ಎಲ್ಲ ಪುಸ್ತಕಗಳಲ್ಲಿಯೂ ಇವೆ.

೧೪೦ನೆಯ ಅಧ್ಯಾಯದಲ್ಲಿ– ಧೃತರಾಷ್ಟ್ರನು - ವೃಷ್ಣಿವೀರನಾದ ಸಾತ್ಯಕಿಯ ಸಾಹಸಕಾರ್ಯಗಳನ್ನು ಹೇಳುವಂತೆ ಸಂಜಯನನ್ನು ಕೇಳುತ್ತಾನೆ. ಸಾತ್ಯಕಿಯು ಅಲಂಬುಷರಾಜನನ್ನು ಸಂಹರಿಸುತ್ತಾನೆ ಮತ್ತು ದುಃಶಾಸನನ ಕುದುರೆಗಳನ್ನೂ ಸಂಹಾರಮಾಡುತ್ತಾನೆ. ೧೪೧ನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಸಾತ್ಯಕಿಯು ಅರ್ಜುನನ ಸಮೀಪಕ್ಕೆ ಬರುತ್ತಿರುವುದನ್ನು ಹೇಳುತ್ತಾನೆ. ಅರ್ಜುನನಿಗೆ ಇದರಿಂದ ಸ್ವಲ್ಪ ಅಸಮಾಧಾನವೇ ಆಗುತ್ತದೆ. ಯುಧಿಷ್ಠಿರನನ್ನು ಬಿಟ್ಟುಬಂದುದು ಅರ್ಜುನನಿಗೆ ಸರಿ ಎನಿಸುವುದಿಲ್ಲ. ೧೪೨ನೆಯ ಅಧ್ಯಾಯದಲ್ಲಿ–ಸಾತ್ಯಕಿಯು ಅರ್ಜುನನ ಸಮೀಪಕ್ಕೆ ಬರುವುದ ರೊಳಗಾಗಿ ಭೂರಿಶ್ರವಸನು ಸಾತ್ಯಕಿಯನ್ನು ಎದುರಿಸುತ್ತಾನೆ. ಸಾತ್ಯಕಿಗೂ– ಭೂರಿಶ್ರವಸನಿಗೂ ಸ್ವಾರಸ್ಯವಾದ ಸಂಭಾಷಣೆಯು ನಡೆಯುತ್ತದೆ.

ಅನಂತರ ಘೋರವಾದ ಯುದ್ಧವೂ ಪ್ರಾರಂಭವಾಗುತ್ತದೆ. ಹಿಂದಿನ ಅಧ್ಯಾಯದಲ್ಲಿ ಅರ್ಜುನನು ಹೇಳಿದಂತೆ ಸಾತ್ಯಕಿಯು ಬಹಳವಾಗಿ ಬಳಲಿರು ತ್ತಾನೆ. ಭೂರಿಶ್ರವಸನು ಬಳಲಿರುವುದಿಲ್ಲ. ಆದರೂ ಸಾತ್ಯಕಿಯು ಭೂರಿಶ್ರವ ಸನಿಗೆ ಸಮನಾಗಿಯೇ ಯುದ್ಧಮಾಡುತ್ತಿರುತ್ತಾನೆ. ಇಬ್ಬರೂ ರಥಗಳನ್ನು ಕಳೆದುಕೊಂಡು ಖಡ್ಗಯುದ್ಧ–ಮಲ್ಲಯುದ್ಧಗಳನ್ನೂ ಮಾಡುತ್ತಾರೆ. ಕಟ್ಟ ಕಡೆಗೆ ಭೂರಿಶ್ರವಸನು ಸಾತ್ಯಕಿಯನ್ನು ಸೋಲಿಸಿ ಅವನನ್ನು ವಧೆಮಾಡಲು ಕತ್ತಿಯನ್ನು ಮೇಲೆತ್ತುತ್ತಾನೆ. ಆ ಸಮಯಕ್ಕೆ ಸರಿಯಾಗಿ ಶ್ರೀಕೃಷ್ಣನ ಸಲಹೆಯಂತೆ ಅರ್ಜುನನು ಭೂರಿಶ್ರವಸನ ಬಲತೋಳನ್ನು ಕತ್ತರಿಸಿಬಿಡು ತ್ತಾನೆ. ೧೪೩ನೆಯ ಅಧ್ಯಾಯದಲ್ಲಿ–ಭೂರಿಶ್ರವಸನು ಅರ್ಜುನನನ್ನೂ, ಅರ್ಜುನನಿಗೆ ಪ್ರೇರಣೆಯನ್ನಿತ್ತ ಶ್ರೀಕೃಷ್ಣನನ್ನೂ ಬಹಳವಾಗಿ ನಿಂದಿಸುತ್ತಾನೆ. ಅರ್ಜುನನ ಉತ್ತರವೂ ಯುಕ್ತಿಯುಕ್ತವಾಗಿಯೇ ಇದೆ. ಈ ಮಾತುಗಳನ್ನು ಕೇಳಿದನಂತರ ಭೂರಿಶ್ರವಸನು ಪ್ರಾಯೋಪವೇಶವನ್ನು ಮಾಡಿದನೆಂದು

ಹೇಳಿದೆ. ಅನಂತರ ಬಾಣಗಳನ್ನೇ ಹಾಸಿಕೊಂಡು ಅವನು ಯೋಗನಿಷ್ಠನಾದ ನೆಂದೂ ಹೇಳಿದೆ. ಆದರೆ ೪೪ ಮತ್ತು ೪೫ನೆಯ ಶ್ಲೋಕಗಳಲ್ಲಿ ಕೆಳಗೆ ಬಿದ್ದಿದ್ದ ಬಲಗೈಯನ್ನು ಎಡಗೈಯಿಂದ ಅರ್ಜುನನ ಕಡೆಗೆ ಎಸೆದನೆಂದೂ, ತಲೆತಗ್ಗಿಸಿ ಕುಳಿತನೆಂದೂ ಹೇಳಿದೆ. ಯೋಗನಿಷ್ಠನಾದವನಿಗೆ ಚಲನ-ವಲನ ಗಳಿರುವುದಿಲ್ಲ. ಮನಸ್ಸು ಮಹೋಪನಿಷನ್ಮಂತ್ರದಲ್ಲಿಯೇ ಕೇಂದ್ರೀಕೃತ ವಾಗಿರುತ್ತದೆ. ಆದುದರಿಂದ ಯೋಗದ ವಿಷಯವಾಗಿ ಹೇಳಿರುವ ಎರಡು ಶ್ಲೋಕಗಳು ಹೆಚ್ಚಿರಬಹುದು. ಪ್ರಾಯೋಪವೇಶದ ವ್ಯಾಖ್ಯೆ ಆಮರಣಾಂತ ಉಪವಾಸವೇ ಹೊರತು ಯೋಗನಿಷ್ಠೆಯು ಇದಕ್ಕೆ ಸೇರುವುದಿಲ್ಲ. ಅನಂತರ ಸಾತ್ಯಕಿಯು ಮೇಲೆದ್ದು ಪ್ರಾಯೋಪವೇಶವ್ರತದಲ್ಲಿ ಕುಳಿತಿದ್ದ ಭೂರಿಶ್ರವಸನ ಕುತ್ತಿಗೆಯನ್ನು ಕತ್ತರಿಸುತ್ತಾನೆ. ಆಕ್ಷೇಪಿಸಿದವರಿಗೆ ಉತ್ತರವನ್ನೂ ಕೊಡು ತ್ತಾನೆ. ೧೪೪ನೆಯ ಅಧ್ಯಾಯದಲ್ಲಿ–ಧೃತರಾಷ್ಟ್ರನು ಸಂಶಯಗ್ರಸ್ತನಾಗಿ ಪ್ರಶ್ನೆಯೊಂದನ್ನು ಕೇಳುತ್ತಾನೆ. ಯಾರಿಂದಲೂ ಪರಾಜಿತನಾಗದ ಸಾತ್ಯಕಿಯು ಭೂರಿಶ್ರವಸನಿಂದ ಹೇಗೆ ಪರಾಜಿತನಾದನು? ಆದರೆ ಇದಕ್ಕೆ ಸರಿಯಾದ ಉತ್ತರವನ್ನು ಈ ಹಿಂದೆಯೇ ಅರ್ಜುನನು ಹೇಳಿದ್ದಾನೆ. **ಶ್ರಾನ್ತಶ್ಚೈಷ ಮಹಾಬಾಹುರಲ್ಪಪ್ರಾಣಶ್ಚ ಸಾಮ್ಪ್ರತಮ್ । ಪರಿಶ್ರಾನ್ತಾ ಹಯಾಶ್ಚಾಸ್ಯ ಹಯಯನ್ತಾ ಚ ಮಾಧವ । ನ ಚ ಭೂರಿಶ್ರವಾಃ ಶ್ರಾನ್ತಃ ಸಸಹಾಯಶ್ಚ ಕೇಶವ** (೧೪೧=೩೧-೩೨) ಆದರೆ ಇಲ್ಲಿ ಸಂಜಯನು ಈ ವಿಷಯವನ್ನು ಪುನಃ ಪ್ರಸ್ತಾಪಿಸದೇ ಹಿಂದಿನ ಕಥೆಯೊಂದನ್ನು ಉದ್ಧರಿಸು ತ್ತಾನೆ. ಇಲ್ಲಿ ಹೇಳಿರುವ ಕಥೆಯೂ ಯಾವ ಪುರಾಣಗಳಲ್ಲಿಯೂ ಇರುವು ದಿಲ್ಲ. ಮೇಲಾಗಿ ಕೆಲವು ದೋಷಗಳಿಂದಲೂ ಕೂಡಿದೆ. ಇದನ್ನು ಕಥಾ ಸಂದರ್ಭದಲ್ಲಿಯೇ ಪ್ರಸ್ತಾಪಿಸಲಾಗಿದೆ. ಆ ದೋಷವನ್ನು ಸರಿಪಡಿಸಲೂ ಸಹ ಪ್ರಯತ್ನಗಳೂ ನಡೆದಿವೆ. ಅವೆಲ್ಲವನ್ನೂ ಪರಿಶೀಲಿಸಿದರೆ ಈ ಅಧ್ಯಾ ಯವೂ ಹೆಚ್ಚಿನದೋ ಎನಿಸುತ್ತದೆ. ೧೪೫ನೆಯ ಅಧ್ಯಾಯದಲ್ಲಿ–ಭೂರಿ ಶ್ರವಸನು ಹತನಾದನಂತರ ಶ್ರೀಕೃಷ್ಣನು ಅರ್ಜುನನ ಸಲಹೆಯಂತೆ ಸೈಂಧವ ನಿರುವೆಡೆಗೆ ರಥವನ್ನು ಒಯ್ಯುತ್ತಾನೆ. ಆ ಸಮಯದಲ್ಲಿ ಅನೇಕ ಮಹಾ ರಥರು ಅರ್ಜುನನನ್ನು ಎದುರಿಸುತ್ತಾರೆ. ಆ ಸಮಯದಲ್ಲಿ ದುರ್ಯೋ ಧನನು ಕರ್ಣನೊಡನೆ ಏಕಾಂತದಲ್ಲಿ ಪುಸಲಾವಣೆಯ ಕೆಲವು ಮಾತುಗಳ

ನ್ನಾಡುತ್ತಾನೆ. ಆದರೆ ಕರ್ಣನು ದುರ್ಯೋಧನನ ಉತ್ಸಾಹಕ್ಕೆ ಸಂಪೂರ್ಣ ವಾಗಿ ನೀರೆರಚುವ ಶುದ್ಧಸತ್ಯವಾದ ಮಾತುಗಳನ್ನೇ ಆಡುತ್ತಾನೆ. ಇಂತಹ ಮಾತುಗಳನ್ನೇ ಹಿಂದೆಯೂ ಆಡಿದ್ದರೆ ಯುದ್ಧವೇ ನಡೆಯುತ್ತಿರಲಿಲ್ಲವೋ ಎಂಬ ಸಂಶಯವುಂಟಾಗುತ್ತದೆ. ಅನಂತರ ಪರಾಕ್ರಮದಿಂದಲೇ ಅರ್ಜುನ ನೊಡನೆ ಯುದ್ಧಮಾಡಿ ಪರಾಜಿತನಾಗುತ್ತಾನೆ.

ಅಶ್ವತ್ಥಾಮಾದಿಗಳು ಪಾರ್ಥನನ್ನು ಆಕ್ರಮಿಸುತ್ತಾರೆ. ಆ ಸಮಯದಲ್ಲಿ ಅರ್ಜುನನು ವಾರುಣಾಸ್ತ್ರವನ್ನು ಪ್ರಯೋಗಮಾಡಿ ಅನೇಕ ಯೋಧರನ್ನು ಸಂಹರಿಸುತ್ತಾನೆ. ೧೪೬ನೆಯ ಅಧ್ಯಾಯದಲ್ಲಿ–ಇದು ಜಯದ್ರಥನ ವಧಾಧ್ಯಾಯ. ಜಯದ್ರಥನ ಸಂಹಾರದ ವಿಷಯವಾಗಿ ಅನೇಕರ ಕಥೆಗಳನ್ನು ನಾವು ಕೇಳಿದ್ದೇವೆ. ಪುರಾಣನಾಮಚೂಡಾಮಣಿಯಲ್ಲಿಯೂ ಮಹಾ ಭಾರತದ ಕಥೆಯನ್ನೇ ಆಧರಿಸಿರುವುದಾಗಿ ತಿಳಿಸಿ ಹೀಗೆ ವಿವರಣೆ ಕೊಟ್ಟಿ ದ್ದಾರೆ : 'ಅರ್ಜುನನು ವ್ಯೂಹವನ್ನು ಹೊಕ್ಕ. ಎಷ್ಟು ಹುಡುಕಿದರೂ ಜಯದ್ರಥನು ಕಾಣಲಿಲ್ಲ. ಬಳಿಕ ಯುಧಿಷ್ಠಿರಾದಿಗಳೂ (? ) ಸಾತ್ಯಕಿಯೂ ವ್ಯೂಹವನ್ನು ಹೊಕ್ಕು ಹುಡುಕತೊಡಗಿದರು. ದುರ್ಯೋಧನನು ಜಯ ದ್ರಥನನ್ನು ಬಚ್ಚಿಟ್ಟಬಳಿಕ ಯುಧಾಮನ್ಯು, ಉತ್ತಮೌಜಸ, ಭೀಮಸೇನ ಮುಂತಾದವರೂ ವ್ಯೂಹವನ್ನು ಹೊಕ್ಕು ಹುಡುಕತೊಡಗಿದರು. ದುರ್ಯೋ ಧನನನಿಗೆ ಭೀತಿ ಅಧಿಕವಾಗಿ ಜಯದ್ರಥನನ್ನು ಬಚ್ಚಿಟ್ಟ ಕಡೆಗೆ ಹೋಗುವ ಮಾರ್ಗವನ್ನು ಅಡ್ಡಗಿಸಿ ಅವನ ಮೈಗಾವಲಿಗಾಗಿ ತಾನೇ ನಿಂತ. ಅರ್ಜುನ-ದುರ್ಯೋಧನರಿಬ್ಬರೂ ತಮ್ಮ ಶಪಥವನ್ನು ನೇರವೇರಿಸಿಕೊಳ್ಳುವುದರಲ್ಲಿ ತವಕಪಡುತ್ತಿದ್ದರು. ಇಷ್ಟರಲ್ಲಿ ಕೃಷ್ಣ ಮಾಯಾಂಧಕಾರವನ್ನು ಕಲ್ಪಿಸಿ ಎರಡು ಸೇನೆಯವರಿಗೂ ಸೂರ್ಯಾಸ್ತವಾಯಿತೆಂಬ ಭ್ರಾಂತಿಯನ್ನುಂಟುಮಾಡಿದ. ಅರ್ಜುನನನ ಮೋರೆ ಕಳೆಗುಂದಿತು. ಕೌರವರು ಆನಂದಪರಶರಾಗಿ ಮೆರೆಯತೊಡಗಿದರು. ಅಷ್ಟರಲ್ಲಿ ಜಯದ್ರಥನು ಕಾಣಬರಲಾಗಿ ಅರ್ಜುನನು ಅವನ ಶಿರಸ್ಸನ್ನು ತರಿದು ಆ ರುಂಡವನ್ನು ವೃದ್ಧಕ್ಷತ್ರನ ತೊಡೆಯ ಮೇಲೆ ಬೀಳುವಂತೆ ಮಾಡಿದ. ಜಯದ್ರಥನು ಹತನಾದ ಕೂಡಲೇ ಮರಳಿ ಸೂರ್ಯನು ಬೆಳಗತೊಡಗಿದ. ಕುರು-ಪಾಂಡವರು ಶೋಕ-ಸಂತೋಷಸಮುದ್ರದಲ್ಲಿ ಈಸತೊಡಗಿದರು. ಬಳಿಕ ದಿಟವಾಗಿಯೂ

ಸೂರ್ಯನು ಮುಳುಗಿದಕೂಡಲೇ ಇತ್ತಂಡದವರೂ ತಮ್ಮ-ತಮ್ಮ ಬಿಡಾರ ಗಳನ್ನು ಸೇರಿದರು [ದ್ರೋ. ೧೪೭-೧೪೮].' ಈ ಕಥೆಗೆ ಯಾವ ಮಹಾ ಭಾರತದ ಮೂಲವೆಂಬುದು ನಮಗೆ ತಿಳಿಯದು. ಈಗ ಉಪಲಬ್ಧವಿರುವ ಮಹಾಭಾರತದ ಪುಸ್ತಕಗಳಲ್ಲಿ ಕಥೆಯು ಮೇಲೆ ಹೇಳಿದಂತೆ ಬರುವುದಿಲ್ಲ. ಜಯದ್ರಥನನ್ನು ದುರ್ಯೋಧನನಾಗಲೀ–ದ್ರೋಣರಾಗಲೀ ಬಚ್ಚಿಟ್ಟಿರಲಿಲ್ಲ. ದುರ್ಭೇದ್ಯವಾದ ವ್ಯೂಹವೊಂದನ್ನು ರಚಿಸಿ ಅದರ ಹಿಂಭಾಗದಲ್ಲಿ ಜಯದ್ರಥ ನನ್ನು ನಿಲ್ಲಿಸಿ ಅವನ ರಕ್ಷಣೆಗೆ ಅಶ್ವತ್ಥಾಮಾ-ಕೃಪರೇ ಮೊದಲಾದ ಮಹಾ ರಥರನ್ನು ನಿಯಮಿಸಿದ್ದರು. ವ್ಯೂಹವು ದುರ್ಭೇದ್ಯವಾಗಿದ್ದುದರಿಂದಲೇ ಕೇವಲ ಐವರಿಗೆ ಮಾತ್ರವೇ ವ್ಯೂಹದೊಳಗೆ ಹೋಗಲು ಸಾಧ್ಯವಾಯಿತು. ಧರ್ಮರಾಜನು ವ್ಯೂಹದೊಳಗೆ ಹೋಗಲೂ ಇಲ್ಲ ; ಹೋಗಲು ಪ್ರಯತ್ನಿ ಸಲೂ ಇಲ್ಲ. ಎರಡನೆಯದಾಗಿ : ಅರ್ಜುನನು ಮಹಾರಥರೊಡನಿದ್ದ ಜಯ ದ್ರಥನನ್ನು ಹಲವು ಬಾರಿ ಯುದ್ಧದಲ್ಲಿ ಎದುರಿಸಿಯೂ ಇದ್ದನು. ಹೀಗಿರು ವಾಗ ಅವನು ಎಷ್ಟು ಹುಡುಕಿದರೂ ಸಿಕ್ಕಲಿಲ್ಲವೆಂಬುದು ಯಾವ ಮಹಾ ಭಾರತದಲ್ಲಿರುವುದೋ ತಿಳಿಯದಾಗಿದೆ. ಈ ಅಧ್ಯಾಯದಲ್ಲಿ ಸೈಂಧವ ನೊಡನೆ ಅರ್ಜುನನು ನೇರವಾಗಿಯೇ ಯುದ್ಧಮಾಡುತ್ತಿದ್ದರೂ ಕತ್ತಲಿನ ಮೂಲಕ ಸೈಂಧವನನ್ನು ವಂಚಿಸುವ ಪ್ರಕರಣವೇನೋ ಬಂದಿದೆ. ಆದರೆ ಕೂಲಂಕಷವಾಗಿ ಪರಿಶೀಲಿಸಿದರೆ ಈ ಕಥಾಭಾಗವೂ ಸೇರಿಕೊಂಡಿರುವು ದೆಂಬ ಅರಿವುಂಟಾಗುತ್ತದೆ. ಇಲ್ಲಿಯ ಪ್ರಕರಣದಲ್ಲಿ ಅರ್ಜುನನು ಜಯದ್ರಥ ನೊಡನೆ ನೇರವಾಗಿ ಯುದ್ಧಮಾಡುತ್ತಿರುತ್ತಾನೆ. ಜಯದ್ರಥನ ಸಾರಥಿ ಯನ್ನೂ ಸಂಹರಿಸಿ ವರಾಹಧ್ವಜವನ್ನು ಕೆಳಕ್ಕೆ ಕೆಡವುತ್ತಾನೆ. (೫೯-೬೦) ಸಾರಥಿಯನ್ನು ಕಳೆದುಕೊಂಡನಂತರ ಸಿಂಧುರಾಜನೇನಾದನೆಂಬ ವಿಷಯ ಬರುವುದಿಲ್ಲ. ಏತಸ್ಮಿನ್ನೇವ **ಕಾಲೇ ತು**...ಇದೇ ಸಮಯದಲ್ಲಿ ಸೂರ್ಯನು ಬಹಳ ವೇಗವಾಗಿ ಅಸ್ತಾಚಲಕ್ಕೆ ಹೋಗುತ್ತಿರುವಾಗ ಶ್ರೀಕೃಷ್ಣನು ಹೇಳು ತ್ತಾನೆ : ' ಸೈಂಧವನನ್ನು ಮೋಸದ ಹೊರತಾಗಿ ಕೊಲ್ಲಲಾಗುವುದಿಲ್ಲ.' **ನ ಶಕ್ಯಃ ಸೈನ್ಧವೋ ಹನ್ತುಂ ಯತೋ ನಿರ್ವ್ಯಾಜಮರ್ಜುನ ॥೬೩॥.** ಆದುದರಿಂದ ಸೂರ್ಯನು ಅಸ್ತಮಿಸಿದಂತೆ ಕಾಣುವ ರೀತಿಯಲ್ಲಿ ಯೋಗ ಮಾಯೆಯನ್ನು ಮಾಡುತ್ತೇನೆ. ಸೂರ್ಯನು ಅಸ್ತಂಗತನಾಗಿಬಿಟ್ಟಿರುವ

ನೆಂದು ಸಿಂಧುರಾಜನಿಗೆ ಮಾತ್ರವೇ ಕಾಣುತ್ತದೆ. ಮುಂದೆ ದುರಾಚಾರಿಯಾದ ಅವನು ಹರ್ಷಾಧಿಕ್ಯದಿಂದ ತನ್ನ ಶರೀರವನ್ನು ಬಚ್ಚಿಟ್ಟುಕೊಳ್ಳಲು ಇಚ್ಛಿಪಡುವುದಿಲ್ಲ (ರಕ್ಷಣೆಯ ವಿಷಯದಲ್ಲಿ ಅಜಾಗರೂಕನಾಗುತ್ತಾನೆ). ಆ ಸಮಯದಲ್ಲಿ ನೀನು ಅವನನ್ನು ಸಂಹರಿಸಬೇಕು. ಸೂರ್ಯನು ಅಸ್ತಮಿಸಿ ಬಿಟ್ಟನೆಂದು ಭ್ರಮಿಸಿ ಸಂಹರಿಸಲು ಉಪೇಕ್ಷೆಮಾಡಬಾರದು."

ಹೀಗೆ ಕೃಷ್ಣನು ಹೇಳಿದೊಡನೆಯೇ ಅರ್ಜುನನೂ ಸಮ್ಮತಿಸುತ್ತಾನೆ. ಕೃಷ್ಣನು ಯೋಗಮಾಯೆಯಿಂದ ಕತ್ತಲನ್ನು ಸೃಷ್ಟಿಸುತ್ತಾನೆ. ಧೃತರಾಷ್ಟ್ರನ ಸೈನಿಕರೆಲ್ಲರೂ ಸೂರ್ಯನು ಅಸ್ತಮಿಸಿದುದಕ್ಕಾಗಿ ಸಂತೋಷಪಡುತ್ತಾರೆ. ಸೂರ್ಯನನ್ನು ಯಾರೂ ಕಾಣುವುದಿಲ್ಲ. ಜಯದ್ರಥನು ತಲೆಯನ್ನು ಮೇಲೆತ್ತಿ ನೋಡುತ್ತಿರುತ್ತಾನೆ. ಆ ಸಮಯದಲ್ಲಿ ಶ್ರೀಕೃಷ್ಣನು ಪುನಃ ಹೇಳುತ್ತಾನೆ : "ಅರ್ಜುನ! ಭಯರಹಿತನಾಗಿ ಸಿಂಧುರಾಜನು ಸೂರ್ಯನನ್ನು ನೋಡುತ್ತಿದ್ದಾನೆ. ಈ ದುರಾತ್ಮನ ವಧೆಗೆ ಇದು ಸಕಾಲವಾಗಿದೆ. ಇವನ ತಲೆಯನ್ನು ಈಗಲೇ ಕತ್ತರಿಸಿಬಿಡು."

ಶ್ರೀಕೃಷ್ಣನು ಹೀಗೆ ಹೇಳಿದನಂತರ ಅರ್ಜುನನು ಸೈನಿಕರನ್ನು ಅನೇಕ ಪ್ರಕಾರವಾಗಿ ಸಂಹಾರಮಾಡುತ್ತಾನೆ. ಹೀಗೆಯೇ ಯುದ್ಧವು ಮುಂದು ವರಿಯುತ್ತದೆ. ಕರ್ಣ-ಶಲ್ಯರೊಡನೆಯೂ ಅರ್ಜುನನು ಯುದ್ಧಮಾಡುತ್ತಲೇ ಇರುತ್ತಾನೆ.

೬೧ನೆಯ ಶ್ಲೋಕದಿಂದ ಮುಂದಿರುವ ಶ್ಲೋಕಗಳಲ್ಲಿ ಒಂದು ಶ್ಲೋಕಕ್ಕೂ ಮತ್ತೊಂದು ಶ್ಲೋಕಕ್ಕೂ ವಿರೋಧಾಭಾಸಗಳು ಬಹಳವಾಗಿವೆ. ೫೯ನೆಯ ಶ್ಲೋಕದಲ್ಲಿ ಅರ್ಜುನನು ಜಯದ್ರಥನ ಸಾರಥಿಯನ್ನು ಸಂಹರಿಸಿ ದ್ದಾಗಿದೆ. ೬೩ರಲ್ಲಿ 'ವಂಚನೆಯಿಲ್ಲದೆ ಸೈಂಧವನನ್ನು ವಧೆಮಾಡಲು ಸಾಧ್ಯ ವಿಲ್ಲ' ಎಂದು ಶ್ರೀಕೃಷ್ಣನು ಹೇಳುತ್ತಾನೆ. ೮೪ನೆಯ ಶ್ಲೋಕದಲ್ಲಿ 'ಸೂರ್ಯನು ಅಸ್ತಂಗತನಾಗಿರುವುದನ್ನು ಜಯದ್ರಥನೊಬ್ಬನು ನೋಡು ತ್ತಾನೆ' ಎಂದಿದೆ. **ಅಸ್ತಂಗತ ಇತಿ ವ್ಯಕ್ತಂ ದ್ರಕ್ಷ್ಯತ್ಯೇಕಃ ಸ ಸಿನ್ಧುರಾಟ್ ॥೬೪॥** . ಶ್ರೀಕೃಷ್ಣನು ಕತ್ತಲೆಯನ್ನು ಸೃಷ್ಟಿಸಿದ ಅನಂತರದಲ್ಲಿ ಪಾರ್ಥನ ನಾಶವು ಸನ್ನಿಹಿತವಾಯಿತೆಂದು ನಿನ್ನ ಕಡೆಯವರು ಹರ್ಷಗೊಂಡರು. **ಸೃಷ್ಟೇ ತಮಸಿ ಕೃಷ್ಣೇನ ಗತೋಽಸ್ತಮಿತಿ ಭಾಸ್ಕರಃ । ತ್ವದೀಯಾ**

**ಜಹೃಷುರ್ಯೋಧಾಃ ಪಾರ್ಥನಾಶಾನ್ನರಾಧಿಪ ॥೬೮॥**. ಸಿಂಧುರಾಜನೊಬ್ಬನೇ ನೋಡಲಿಲ್ಲ. ಎಲ್ಲ ಯೋಧರೂ ನೋಡಿದರೆಂದಾಯಿತು. **ಅಸ್ತಂಗತ ಇತಿ ವ್ಯಕ್ತಂ ದೃಕ್ಷ್ಯತ್ಯೇಕಃ ಸ ಸಿನ್ಧುರಾಟ್**–ಎಂಬುದಕ್ಕೆ ಇದು ವಿರೋಧವಾಗುತ್ತದೆ. ಪುನಃ ೭೦ನೆಯ ಶ್ಲೋಕದಲ್ಲಿ ಸಿಂಧುರಾಜನು ಸೂರ್ಯನನ್ನು ನೋಡುತ್ತಿರಲಾಗಿ '**ವೀಕ್ಷಮಾಣೇ ತತಸ್ತಸ್ಮಿನ್ಸಿನ್ಧುರಾಜೇ ದಿವಾಕರಮ್**' ಎಂದಿದೆ. ಮುಂದಿನ ಶ್ಲೋಕದಲ್ಲಿ '**ಪುನಃ ಪಶ್ಯ ಸಿನ್ಧುಪತಿಂ ವೀರಂ ಪ್ರೇಕ್ಷಮಾಣಂ ದಿವಾಕರಮ್**'–ಎಂಬ ಶ್ರೀಕೃಷ್ಣನ ಮಾತೂ ಇದೆ. ಎಂದರೆ ಜಯದ್ರಥನು ಸೂರ್ಯನನ್ನು ನೋಡುತ್ತಿದ್ದನೇ? ಸೂರ್ಯನ ಕಡೆಗೆ ನೋಡುತ್ತಿದ್ದನೆಂದು ಹೇಳಬಹುದು. ಆದರೆ ನೇರವಾದ ಅರ್ಥ : 'ಸೂರ್ಯನನ್ನು ನೋಡುತ್ತಿದ್ದನೆಂದೇ' ಆಗುತ್ತದೆ. ಅದರ ಮುಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು 'ಸೈಂಧವನ ತಲೆಯನ್ನು ಕತ್ತರಿಸು'–ಎನ್ನುತ್ತಾನೆ. ಮೊದಲೇ ಶ್ರೀಕೃಷ್ಣನು ಅರ್ಜುನನಿಗೆ ಎಚ್ಚರಿಕೆಯನ್ನೂ ನೀಡಿರುತ್ತಾನೆ. **ವ್ಯಪೇಕ್ಷಾ ನೈವ ಕರ್ತವ್ಯಾ ಗತೋಽಸ್ತಮಿತಿ ಭಾಸ್ಕರಃ ।** ಆದರೆ ಅರ್ಜುನನು ಒಡನೆಯೇ ಸೈಂಧವನನ್ನು ಸಂಹರಿಸುವುದಿಲ್ಲ. ಮಹಾರಥರೊಡನೆ ಯುದ್ಧವು ಮುಂದುವರಿಯುತ್ತಲೇ ಇರುತ್ತದೆ. ಸೂರ್ಯಾಸ್ತವಾಗಿರುವಂತೆ ಎಲ್ಲರಿಗೂ ಕಾಣುತ್ತಿದ್ದ ಪಕ್ಷದಲ್ಲಿ ಕೃಪ-ಕರ್ಣ-ದುರ್ಯೋಧನಾದಿಗಳು 'ಸೂರ್ಯನು ಅಸ್ತನಾದನು. ಅರ್ಜುನನು ಅಗ್ನಿಪ್ರವೇಶಮಾಡಲಿ!' ಎಂದು ಕೂಗಾಡಿ ಬಿಡುತ್ತಿದ್ದರಲ್ಲವೇ? ಮತ್ತೊಂದು ಗಮನಿಸಬೇಕಾದ ಮುಖ್ಯಾಂಶವೇನೆಂದರೆ : ಆ ವೇಳೆಗಾಗಲೇ ಸೈಂಧವನ ಸಾರಥಿಯನ್ನೂ ಸಂಹರಿಸಿ ಧ್ವಜವನ್ನೂ ಕತ್ತರಿಸಿದ್ದ ಪರಮಧಾರ್ಮಿಕನಾದ ಅರ್ಜುನನು ಶ್ರೀಕೃಷ್ಣನ 'ಮೋಸದಿಂದಲೇ ಜಯದ್ರಥನನ್ನು ಕೊಲ್ಲಬೇಕು' ಎಂಬ ಸಲಹೆಗೆ ಮರುಮಾತನಾಡದೆಯೇ ಒಪ್ಪಿಬಿಟ್ಟನೇ? **ಏವಮಸ್ತ್ವಿತಿ ಬೀಭತ್ಸುಃ ಕೇಶವಂ ಪ್ರತ್ಯಭಾಷತ ।** ಎಂಬುದಾಗಿಯೇ ಇದೆ. ಒಂದು ವೇಳೆ ಅರ್ಜುನನು ಶ್ರೀಕೃಷ್ಣನ ಆಜ್ಞಾಧಾರಕ ; ವಿಧೇಯ ಎಂದು ಹೇಳುವುದಾದರೆ **ಛಿನ್ಧಿ ಮೂರ್ಧಾನಮಸ್ಯಾಶು ಕುರು ಸಾಫಲ್ಯಮಾತ್ಮನಃ ॥೭೨॥**. 'ಒಡನೆಯೇ ತಲೆಯನ್ನು ಕತ್ತರಿಸಿಬಿಡು. ನಿನ್ನ ಪ್ರತಿಜ್ಞೆಯನ್ನು ಸಫಲಗೊಳಿಸು'–ಎಂದು ಹೇಳಿದೊಡನೆಯೇ ಏಕೆ ಸಂಹರಿಸಲಿಲ್ಲ?–ಇತ್ಯಾದಿ ಅಸಂಗತಗಳೂ ವಿರೋಧಾಭಾಸಗಳೂ ಬಹಳವಾಗಿ

ತುಂಬಿಕೊಂಡಿವೆ. ಸರಿಯಾದ ಪಾಠವು ಯಾವುದಿರಬಹುದು ಎಂಬುದನ್ನು ಊಹಿಸಲು ಸಾಕಷ್ಟು ಅವಕಾಶವಿರುವುದಕ್ಕೆ ಸಮಾಧಾನಪಟ್ಟುಕೊಳ್ಳ ಬೇಕಾಗಿದೆ.

೫೯ನೆಯ ಶ್ಲೋಕದಲ್ಲಿ ಏಕಕಾಲದಲ್ಲಿ ಎರಡು ಬಾಣಗಳಿಂದ ಅರ್ಜುನನು ಸೈಂಧವನ ಸಾರಥಿಯ ಶಿರಸ್ಸನ್ನೂ–ಸಮಲಂಕೃತವಾದ ಧ್ವಜವನ್ನೂ ಕತ್ತರಿಸಿದನು. **ಯುಗಪತ್ತಸ್ಯ ಚಿಚ್ಛೇದ ಶರಾಭ್ಯಾಂ ಸೈನ್ಧವಸ್ಯ ಹ । ಸಾರಥೇಶ್ಚ ಶಿರಃ ಕಾಯಾದ್ಧ್ವಜಂ ಚ ಸಮಲಂಕೃತಮ್** ॥೫೯॥

ಧನಂಜಯನ ಬಾಣದಿಂದ ಕತ್ತರಿಸಲ್ಪಟ್ಟ ದಂಡದಿಂದ ಕೂಡಿದ್ದ, ದೊಡ್ಡದಾಗಿದ್ದ, ಅಗ್ನಿಯ ಜ್ವಾಲೆಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ವರಾಹಧ್ವಜವು ನೆಲದ ಮೇಲೆ ಬಿದ್ದಿತು. ॥೬೦॥

ಸಾಮಾನ್ಯವಾಗಿ ಇದುವರೆಗೂ ನಡೆದುಕೊಂಡು ಬಂದಿರುವ ಯುದ್ಧದ ಪ್ರಕ್ರಿಯೆಯಂತೆ ಸಾರಥಿಯನ್ನೂ–ಧ್ವಜವನ್ನೂ ಕಳೆದುಕೊಂಡ ಸೈಂಧವನು ಮತ್ತೊಂದು ರಥವನ್ನಾದರೂ ಪಡೆದುಕೊಳ್ಳಬೇಕಾಗಿದ್ದಿತು. ಇಲ್ಲದಿದ್ದರೆ ಅವನ ಸಂಹಾರವಾದರೂ ಆಗಬೇಕಿತ್ತು. ಸಾರಥಿಯನ್ನು ಕಳೆದುಕೊಂಡನಂತರ ಸೈಂಧವನೇನು ಮಾಡಿದನೆಂಬ ವಿಷಯವು ಕಡೆಯವರೆಗೂ ತಿಳಿಯುವುದೇ ಇಲ್ಲ. ಆದುದರಿಂದ ಸಾರಥಿಯನ್ನು ಕಳೆದುಕೊಂಡ ಸೈಂಧವನ ಸಂಹಾರವೇ ಆಗಬೇಕಾಗಿದೆ.

೬೧ನೆಯ ಶ್ಲೋಕಾರ್ಥ ಹೀಗಿದೆ : ಸೂರ್ಯನು ಪಶ್ಚಿಮಸಮುದ್ರವನ್ನು ಕುರಿತು ಬಹಳ ಬೇಗ ಪ್ರಯಾಣಮಾಡುತ್ತಿರಲಾಗಿ ಜನಾರ್ದನನು ಬಹಳ ಅವಸರದಿಂದ ಪಾಂಡವನನ್ನು ಕುರಿತು ಹೇಳಿದನು.

ಈಗ ಅವಸರದಿಂದ ಹೇಳಬೇಕಾಗಿರುವ ವಿಷಯವೆಂದರೆ ಸೈಂಧವನ ವಧೆಯ ರಹಸ್ಯ. ಅರ್ಜುನನು ಸಾರಥಿಯನ್ನು ಸಂಹಾರಮಾಡಿದನಂತರ ಮುಂದಾಗುವ ಸೈಂಧವನ ವಧೆಯ ವಿಷಯವಾಗಿ ಶ್ರೀಕೃಷ್ಣನು ಅರ್ಜುನನಿಗೆ ಎಚ್ಚರಿಸಬೇಕಾಗಿದೆ.

ಆದುದರಿಂದ ಈ ಶ್ಲೋಕವನ್ನು ೧೦೪ನೇ ಶ್ಲೋಕದ ಉತ್ತರಾರ್ಧದಿಂದ ಅನುವರ್ತನೆಮಾಡಿಕೊಳ್ಳಬೇಕು. ೧೦೫ನೆಯ ಪೂರ್ವಾರ್ಧದಲ್ಲಿಯೂ **ಅಬ್ರವೀಚ್ಚ ಪುನಸ್ತತ್ರ ತ್ವರಮಾಣೋ ಜನಾರ್ದನಃ ।** ಎಂಬ ವಾಕ್ಯವೇ

ಇದೆ. ೬೧ನೆಯ ಶ್ಲೋಕದಲ್ಲಿ ಬರುವ 'ಜನಾರ್ದನಃ' ಎಂಬುದರಿಂದ ಪ್ರಾರಂಭಿಸಿ ೧೦೪ನೆಯ ಶ್ಲೋಕದಲ್ಲಿರುವ 'ಜನಾರ್ದನಃ' ಎಂಬುವುದರ ವರೆಗೆ ಹೆಚ್ಚಿನ ಪಾಠವೆಂದು ನಿರ್ಣಯಿಸಬಹುದಾಗಿದೆ. ೧೦೪ನೆಯ ಶ್ಲೋಕದ ಉತ್ತರಾರ್ಧದಲ್ಲಿ ಧನಂಜಯ ಶಿರಶ್ಛಿನ್ಧಿ ಸೈನ್ಧವಸ್ಯ ದುರಾತ್ಮನಃ। ಎಂದು ಶ್ರೀಕೃಷ್ಣನು–ಸಾರಥಿಯನ್ನು ಸಂಹರಿಸಿದನಂತರ ಅರ್ಜುನನು ಮಾಡ ಬೇಕಾದ ಕಾರ್ಯವನ್ನು ಹೇಳಿದನಲ್ಲದೇ ಜಯದ್ರಥನ ವಧೆಯ ರಹಸ್ಯವನ್ನೂ ಹೇಳುತ್ತಾನೆ. ಇಲ್ಲಿಂದ ಕಥೆಯು ಸುಗಮವಾಗಿ ಮುಂದುವರಿಯುತ್ತದೆ. ಮುಂದೆ ಶ್ರೀಕೃಷ್ಣನ ಯೋಗಮಾಯಾಸಂಬಂಧದಲ್ಲಿ ಸೇರಿರುವ 'ಸೈಂಧವನ ವಧೆಯಾದನಂತರ ವಾಸುದೇವನು ಕತ್ತಲೆಯನ್ನು ಹೋಗಲಾಡಿಸಿದನು. ಅನಂತರವೇ ನಿನ್ನ ಮಕ್ಕಳಿಗೆ ಇದು ಶ್ರೀಕೃಷ್ಣನ ಮಾಯೆಯೆಂದು ತಿಳಿಯಿತು.' ಈ ತಾತ್ಪರ್ಯದ ೧೩೨ ಮತ್ತು ೧೩೪ನೆಯ ಶ್ಲೋಕಗಳೂ ಹೆಚ್ಚು ಶ್ಲೋಕಗಳೇ ಆಗಿವೆ. ಒಂದು ಪುಸ್ತಕದಲ್ಲಿ ಈ ಶ್ಲೋಕಗಳಿಲ್ಲ.

ಆದುದರಿಂದ ಇದು ಸಮೀಚೀನವಾಗಿದೆಯೆಂದು ನಮ್ಮ ಅಭಿ ಪ್ರಾಯವೂ ಆಗಿದೆ.

೧೪೭ನೆಯ ಅಧ್ಯಾಯ–ಸೈಂಧವನ ವಧೆಯಾಗುವ ವೇಳೆಗೆ ಸೂರ್ಯನು ಅಸ್ತನಾಗುವುದರಲ್ಲಿದ್ದನು. ಆದರೆ ಅಲ್ಲಿ ಸಾಯಂಕಾಲವಾಯಿ ತೆಂದಾಗಲೀ, ಕೌರವ-ಪಾಂಡವರು ಶಿಬಿರಕ್ಕೆ ಹೋದರೆಂದಾಗಲೀ ಹೇಳಿಲ್ಲ. ಪುನಃ ಯುದ್ಧವು ನಡೆದ ಪ್ರಕರಣವಿದೆ. ಅರ್ಜುನನು ಕೃಪಾಚಾರ್ಯರನ್ನು ಮೂರ್ಛೆಗೊಳಿಸಿ ಅನಂತರ ದುಃಖಿಸುತ್ತಾನೆ. ಜಯದ್ರಥನು ಹತನಾದು ದನ್ನು ಕಂಡು ಕರ್ಣನು ಅರ್ಜುನನ ಮೇಲೆ ಯುದ್ಧಮಾಡಲು ಬರುತ್ತಾನೆ. ಆ ಸಮಯದಲ್ಲಿ ಸಾತ್ಯಕಿ-ಯುಧಾಮನ್ಯೂತ್ತಮೌಜಸರು ಕರ್ಣನನ್ನು ಮಧ್ಯದಲ್ಲಿಯೇ ತಡೆದು ಯುದ್ಧಮಾಡುತ್ತಾರೆ. ಕರ್ಣನೊಡನೆ ಯುದ್ಧ ಮಾಡಲು ಇದು ಸಕಾಲವಲ್ಲವೆಂದು ಶ್ರೀಕೃಷ್ಣನು ಅರ್ಜುನನನ್ನು ತಡೆಯು ತ್ತಾನೆ. ಇಲ್ಲಿ ಧೃತರಾಷ್ಟ್ರನು ಒಂದು ಪ್ರಶ್ನೆಯನ್ನು ಕೇಳುತ್ತಾನೆ. 'ವಿರಥನಾಗಿದ್ದ ಸಾತ್ಯಕಿಗೆ ರಥವೆಲ್ಲಿ ಸಿಕ್ಕಿತು?' ಎಂಬುದೇ ಆ ಪ್ರಶ್ನೆ. ರಥಹೀನನಾದ ಸಾತ್ಯಕಿಯ ಮೇಲೆ ಕರ್ಣನು ಆಕ್ರಮಿಸಲು ಬರುತ್ತಿದ್ದುದನ್ನು ಕಂಡು ಶ್ರೀಕೃಷ್ಣನು ತನ್ನ ರಥವನ್ನೇ ದಾರುಕನ ಮೂಲಕವಾಗಿ ತರಿಸಿ ಸಾತ್ಯಕಿಗೆ

ಕೊಡುತ್ತಾನೆ. ಆದರೆ ಇದೇ ಅಧ್ಯಾಯದ ೨೮ನೆಯ ಶ್ಲೋಕದಲ್ಲಿ **ಪಾಞ್ಚಾಲ್ಯಾ ಸಾತ್ಯಕಿಶ್ಚೈವ ಸಹಸಾ ಸಮುಪಾದ್ರವನ್ ।** ಸಾತ್ಯಕಿ ಮತ್ತು ಪಾಂಚಾಲ್ಯರು ಕರ್ಣನ ಕಡೆಗೆ ಶೀಘ್ರವಾಗಿ ಧಾವಿಸಿದರು ಎಂದಿದೆ. ರಥವಿಲ್ಲದೇ ಶೀಘ್ರವಾಗಿ ಧಾವಿಸಲು ಸಾಧ್ಯವಾಗುವುದಿಲ್ಲ. ಈ ಹಿಂದೆ ೧೪೫ನೆಯ ಅಧ್ಯಾಯದಲ್ಲಿ ಸಾತ್ಯಕಿ ಮತ್ತು ಭೀಮಸೇನರು ಅರ್ಜುನನನ್ನು ರಕ್ಷಿಸುತ್ತಿದ್ದರೆಂದು ಹೇಳಿದೆ. **ಬೀಭತ್ಸುರ್ಭೀಮಸೇನೇನ ಸಾತ್ವತೇನ ಚ ರಕ್ಷಿತಃ ।** ಇವರಿಬ್ಬರೂ ಅರ್ಜುನನೊಡನೆ ಸೇರಿ ಯುದ್ಧಮಾಡಿದರೆಂದೂ ಇದೆ. **ಸಾತ್ವತಶ್ಚ ತ್ರಿಭಿರ್ಬಾಣೈಃ ಕರ್ಣಂ ವಿವ್ಯಾಧ ಮಾರಿಷ । ಭೀಮಸೇನ ಸ್ತ್ರಿಭಿಶ್ಚೈವ ಪುನಃ ಪಾರ್ಥಶ್ಚ ಸಪ್ತಭಿಃ ॥೧೪೫-೬೨॥** ರಥವಿಲ್ಲದೇ ಯುದ್ಧಮಾಡಿದರೆಂದು ಹೇಳಿಲ್ಲ. ಅರ್ಜುನನಿಗೆ ರಕ್ಷಕನಾಗಿ ಯುದ್ಧಮಾಡಬೇಕಾದರೆ ರಥವಿರಲೇಬೇಕು. ಆದುದರಿಂದ ಅವರಿಗೆ ರಥವು ಹೇಗೆ ದೊರಕಿತೆಂಬುದಕ್ಕೆ ವಾಕ್ಯವಿಲ್ಲದಿದ್ದರೂ ಸೈಂಧವನ ವಧೆಗೆ ಮೊದಲೇ ಅವರಲ್ಲಿ ರಥಗಳಿದ್ದುವೆಂಬುದಕ್ಕೆ ಮೇಲೆ ಉದ್ಧರಿಸಿರುವ ಶ್ಲೋಕವು ಪ್ರಮಾಣವಾಗಿದೆ. ಆದರೆ ಸೈಂಧವನ ವಧೆಯಾದನಂತರದಲ್ಲಿ ಕರ್ಣನೊಡನೆ ಯುದ್ಧಮಾಡುವ ಸಲುವಾಗಿ ಶ್ರೀಕೃಷ್ಣನು ತನ್ನ ರಥವನ್ನು ಸಾತ್ಯಕಿಗೆ ಕೊಟ್ಟನೆಂದೂ, ನಂತರ ಸಾತ್ಯಕಿಯ ಸಾರಥಿಯು ನೂತನರಥವನ್ನು ತಂದನೆಂದೂ, ದಾರುಕನು ರಥವನ್ನು ಕೃಷ್ಣನ ಸಮೀಪಕ್ಕೆ ಒಯ್ದನೆಂದೂ ಈ ಅಧ್ಯಾಯದಲ್ಲಿ ಹೇಳಿದೆ. ಇದರ ಮುಂದಿನ ೧೪೭ನೆಯ ಅಧ್ಯಾಯದಲ್ಲಿಯೂ ಈ ವಿಧವಾದ ದೋಷವೇ ಕಾಣುತ್ತದೆ. ಧೃತರಾಷ್ಟ್ರನು ಭೀಮಸೇನನು ಏನು ಮಾಡಿದನೆಂದು ಪ್ರಶ್ನಿಸುತ್ತಾನೆ. ಸಂಜಯನು ಉತ್ತರಿಸುತ್ತಾ, **ವಿರಥೋ ಭೀಮಸೇನೋ ವೈಕರ್ಣವಾಕ್ಶಲ್ಯಪೀಡಿತಃ। ಅಮರ್ಷವಶಮಾಪನ್ನಃ ಫಾಲ್ಗುನಂ ವಾಕ್ಯಮಬ್ರವೀತ್ ॥** ಕರ್ಣನ ವಾಗ್ಬಾಣಗಳಿಂದ ಪೀಡಿತನಾದ ರಥಹೀನನಾದ ಭೀಮಸೇನನು ಕೋಪಾವಿಷ್ಟನಾಗಿ ಅರ್ಜುನನೊಡನೆ ಹೇಳಿದನು.

೧೪೮ನೆಯ ಅಧ್ಯಾಯ–ಭೀಮಸೇನನು ಅರ್ಜುನನೊಡನೆ ಕರ್ಣನ ಮೇಲೆ ಚಾಡಿಹೇಳುತ್ತಾನೆ. ಈ ಚಾಡಿಯ ಮಾತನ್ನು ಕೇಳಿ ಕುಪಿತನಾದ ಅರ್ಜುನನು ಕರ್ಣನ ಹತ್ತಿರಕ್ಕೆ ಹೋಗಿ ಅದೇ ಧಾಟಿಯಲ್ಲಿಯೇ ಕರ್ಣನನ್ನು ನಿಂದಿಸುತ್ತಾನೆ. 'ಅಭಿಮನ್ಯುವಿನ ಧನುಸ್ಸನ್ನು ಕತ್ತರಿಸಿದುದಕ್ಕಾಗಿ ಬಂಧು

ಮಿತ್ರರೊಡನೆ ನಿನ್ನನ್ನು ಸಂಹರಿಸುತ್ತೇನೆ. ನಿನ್ನ ಮಗನನ್ನೂ ಸಂಹರಿಸುತ್ತೇನೆ ಎಂದು ಅರ್ಜುನನು ಪ್ರತಿಜ್ಞೆಮಾಡುತ್ತಾನೆ. ಚಾಡಿಯ ಮಾತನ್ನು ಕೇಳಿ ಹೀಗೆ ನಿಂದಿಸುವುದು ಮತ್ತು ಹೀಗೆ ಪ್ರತಿಜ್ಞೆಮಾಡುವುದು ಅರ್ಜುನನ ಸ್ವಭಾವ ಜನ್ಯವಾದ ಗುಣವಲ್ಲ. ಮೇಲಾಗಿ ೧೩೯ನೆಯ ಅಧ್ಯಾಯದಲ್ಲಿ–ಅರ್ಜುನನ ಸಮಕ್ಷದಲ್ಲಿಯೇ ಕರ್ಣನು ಭೀಮನನ್ನು ರಥಹೀನನನ್ನಾಗಿಮಾಡಿ ನಿಂದಿಸಿದನು (೧೧೦) ಎಂಬುದಾಗಿದೆ. ಅರ್ಜುನನು ಶ್ರೀಕೃಷ್ಣನ ಪ್ರೇರಣೆಯಂತೆ ಕರ್ಣನ ಮೇಲೆ ಬಾಣಬಿಟ್ಟ ಪ್ರಸಂಗವೂ ಅಲ್ಲಿಯೇ ಬರುತ್ತದೆ. ಅದೇ ಪ್ರಕರಣವು ಪುನಃ ಇಲ್ಲಿ ಈ ರೂಪದಲ್ಲಿ ಏಕೆ ಬಂದಿತೋ ತಿಳಿಯದು. ಆ ವೇಳೆಗೆ ಸೂರ್ಯನು ಅಸ್ತನಾಗುತ್ತಾನೆ. ಅನಂತರ ಸಂಗ್ರಾಮದ ಅಗ್ರಭಾಗದಲ್ಲಿದ್ದ ಅರ್ಜುನನನ್ನು ಶ್ರೀಕೃಷ್ಣನು ಪ್ರತಿಜ್ಞೆಯನ್ನು ಪೂರೈಸಿದ್ದಕ್ಕಾಗಿ ಆಲಿಂಗನೆಮಾಡಿಕೊಳ್ಳುತ್ತಾನೆ. ಹೀಗೆ ಒಂದಕ್ಕೊಂದಕ್ಕೆ ಸಂಬಂಧವಿಲ್ಲದ ರೀತಿಯಲ್ಲಿ ಕಥೆಯು ಮುಂದುವರಿಯುತ್ತದೆ. ಮುಂದೆ ಶ್ರೀಕೃಷ್ಣನು ರಣರಂಗವನ್ನು ಅರ್ಜುನನಿಗೆ ತೋರಿಸುತ್ತಾ ಹೋಗಿ ವ್ಯೂಹದ ಮುಂಭಾಗದಲ್ಲಿದ್ದ ಯುಧಿಷ್ಠಿರನನ್ನು ಸಂಧಿಸಿ ಜಯದ್ರಥನು ಹತನಾದನೆಂದು ಹೇಳುತ್ತಾನೆ. ೧೪೯ನೆಯ ಅಧ್ಯಾಯದಲ್ಲಿ–ಶ್ರೀಕೃಷ್ಣನು ಯುಧಿಷ್ಠಿರನಿಗೆ ನಮಸ್ಕರಿಸಿ 'ಅರ್ಜುನನು ಸೌಭಾಗ್ಯವಶಾತ್ ಪ್ರತಿಜ್ಞೆಯನ್ನು ಪೂರ್ಣಮಾಡಿದನು' ಎನ್ನುತ್ತಾನೆ. ಯುಧಿಷ್ಠಿರನು ಶ್ರೀಕೃಷ್ಣನನ್ನು ಸ್ತುತಿಸುತ್ತಾನೆ. ಯುಧಿಷ್ಠಿರನು ಮಾಡುವ ಶ್ರೀಕೃಷ್ಣಸ್ತೋತ್ರವು ಹೃದಯಂಗಮವಾಗಿದೆ. ಅನಂತರ ಧರ್ಮಪುತ್ರನು ಅರ್ಜುನನನ್ನು ಆಲಿಂಗಿಸಿಕೊಂಡು ಅವನನ್ನು ಬಹಳವಾಗಿ ಪ್ರಶಂಸೆ ಮಾಡುತ್ತಾನೆ. ಅನಂತರ ಭೀಮ-ಸಾತ್ಯಕಿಗಳೂ ಯುಧಿಷ್ಠಿರನಿಗೆ ನಮಸ್ಕರಿಸು ತ್ತಾರೆ. ಅವರನ್ನೂ ಸಹ ಯುಧಿಷ್ಠಿರನು ಬಹಳವಾಗಿ ಪ್ರಶಂಸೆಮಾಡುತ್ತಾನೆ. 'ಕಡೆಯಲ್ಲಿ ಯುದ್ಧಸ್ಥಳದಲ್ಲಿದ್ದ ಎಲ್ಲ ಪಾಂಡವ ಸೈನಿಕರೂ ಆನಂದಭರಿತರಾಗಿ ಯುದ್ಧದಲ್ಲಿಯೇ ಆಸಕ್ತವಾದ ಮನಸ್ಸುಳ್ಳವ ರಾದರು' ಎಂದು ಸಂಜಯನು ಹೇಳುತ್ತಾನೆ.

ಶಿಬಿರಕ್ಕೆ ಹೋಗುವ ವಿಷಯವು ಬರುವುದಿಲ್ಲ.

೧೫೦ನೆಯ ಅಧ್ಯಾಯದಲ್ಲಿ–ಹಿಂದೆ ೧೪೭ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನು "ಸವ್ಯಸಾಚಿಯು ಸೈಂಧವನನ್ನು ಸಂಹರಿಸಿದನಂತರ ನನ್ನ ಮಕ್ಕ

ಳೇನುಮಾಡಿದರು?"–ಎಂದು ಪ್ರಶ್ನಿಸುತ್ತಾನೆ. ಆಗ ಸಂಜಯನು ಮಕ್ಕಳ ವಿಷಯವಾಗಿ ಹೇಳುವುದಿಲ್ಲ. ಕೃಪಾಶ್ವತ್ಥಾಮರು ಅರ್ಜುನನೊಡನೆ ಯುದ್ಧದಲ್ಲಿ ತೊಡಗಿದ ವಿಷಯವನ್ನು ಹೇಳುತ್ತಾನೆ. ಆದರೆ ಈ ಅಧ್ಯಾಯದಲ್ಲಿ ಧೃತರಾಷ್ಟ್ರನು ಪುನಃ ತನ್ನ ಮಕ್ಕಳ ವಿಷಯವಾಗಿ ಪ್ರಶ್ನಿಸದಿದ್ದರೂ **ಸೈನ್ಧವೇ ನಿಹತೇ ರಾಜನ್ಪುತ್ರಸ್ತವ ಸುಯೋಧನಃ** ಎಂದು ಪ್ರಾರಂಭಿಸಿ ಹೇಳುತ್ತಾನೆ. ಧೃತರಾಷ್ಟ್ರನು ೧೪೭ನೆಯ ಅಧ್ಯಾಯದಲ್ಲಿ ಹೇಳಿರುವ ಶ್ಲೋಕವು ಈ ಅಧ್ಯಾಯದ ಮೊದಲನೆಯ ಶ್ಲೋಕವಾಗಿರಬಹುದು. ಹಿಂದೆ ತಿಳಿಸಿರುವಂತೆ ಕೆಲವು ಅಸಂಗತವಾದ ಸಂಗತಿಗಳನ್ನೊಳಗೊಂಡಿರುವ ೧೪೭ ಮತ್ತು ೧೪೮ನೆಯ ಅಧ್ಯಾಯಗಳು ಹೆಚ್ಚಾಗಿ ಸೇರಿರಬಹುದು. ಸಾಮಾನ್ಯವಾಗಿ ಪ್ರಮುಖನೊಬ್ಬನು ಮರಣಹೊಂದಿದನಂತರ ಮುಂದೆ ಯುದ್ಧವು ನಡೆಯುವುದಿಲ್ಲ. ಇದುವರೆಗೆ ನಡೆದಿಲ್ಲ. ೧೪೯ನೆಯ ಅಧ್ಯಾಯವು ಆ ದಿನದ ಯುದ್ಧಾಂತ್ಯವಾಗಿರುವುದರಿಂದ ಯುದ್ಧಪ್ರಕರಣಗಳನ್ನು ಮುಂದುವರಿಸಿದ್ದಾರೆಂದು ಹೇಳಬಹುದಾಗಿದೆ. ಸಾಯಂಕಾಲವೂ ಆಗಿದ್ದಿತು. ಈ ಎರಡು ಕಾರಣಗಳಿಂದ ಸೈಂಧವನು ವಧೆಯಾದನಂತರ ಬಂದಿರುವ ಈ ಎರಡು ಅಧ್ಯಾಯಗಳು ಹೆಚ್ಚಿರಬಹುದೆಂದು ಊಹಿಸಬಹುದಾಗಿದೆ. ಸೈಂಧವನ ವಧೆಯಾದನಂತರ ಎಂದರೆ ೧೪೬ನೆಯ ಅಧ್ಯಾಯದನಂತರ **'ತಸ್ಮಿನ್ವಿನಿಹತೇ ವೀರೇ'** ಎಂಬುದಕ್ಕೆ ಬದಲಾಗಿ **'ತಸ್ಮಿನ್ನಾಕುಲಸಂಗ್ರಾಮೇ'** (೧೪೮-೩೨) ಎಂಬ ಶ್ಲೋಕದಿಂದ ಕಥೆಯು ಮುಂದುವರಿದಿರಬಹುದು. ಆದರೆ ಈ ಸಂದರ್ಭದಲ್ಲಿ 'ಇದಮಿತ್ಥಂ' ಎಂದು ದೃಢಪಡಿಸಿ ಹೇಳಲು ಸಾಧ್ಯವಾಗುವುದಿಲ್ಲ. ಮೂಲಪ್ರತಿಗಿಂತ ಹೆಚ್ಚಿರುವ ೩೨ ಅಧ್ಯಾಯಗಳು ಯಾವುವೆಂಬುದನ್ನು ಗುರುತಿಸುವುದು ಬಹಳ ಕಷ್ಟವೇ ಸರಿ. ಕೆಲವು ಇಂತಹ ಅಸಂಗತ ಪ್ರಕರಣಗಳನ್ನು ಗುರುತಿಸಿ ಹೆಚ್ಚಿನ ಪಾಠವೆಂದು ಹೇಳಬಹುದಾಗಿದೆ. ಧೀರೋದಾತ್ತನಾದ ನಾಯಕನೊಬ್ಬನು ಚಾಡಿಯ ಮಾತನ್ನು ಕೇಳಿ ತನಗೆ ಸಮಾನನಾದ ಮತ್ತೊಬ್ಬನನ್ನು ನಿಂದಿಸುವುದು ; ನಿಂದೆಗೆ ಗುರಿಯಾದವನು ಪ್ರತೀಕಾರಮಾಡುವ ಸಾಮರ್ಥ್ಯದಿಂದ ಕೂಡಿದ್ದರೂ ಮಾತನಾಡದೆಯೇ ಇರುವುದು ; ಅಕಾಲಿಕವಾದ ಅನಯವಾದ ಪ್ರತಿಜ್ಞೆ–ಇವುಗಳು ಇದ್ದಕ್ಕಿದ್ದಂತೆಯೇ ಬಂದರೆ ಅವು ಅಸಂಗತವಾಗಿ ಕಾಣುತ್ತವೆ. ೧೫೦ನೆಯ ಅಧ್ಯಾಯದಲ್ಲಿ ದ್ರೋಣರೊಡನೆ ದುರ್ಯೋಧನನು ತನ್ನ ದುಃಖವನ್ನು

ತೋಡಿಕೊಳ್ಳುತ್ತಾನೆ. ಪರ್ಯಾಯಾಂತರದಿಂದ ತನ್ನ ಸೋಲಿಗೆ ಅವರನ್ನೇ ಹೊಣೆಮಾಡುತ್ತಾನೆ. ೧೪ನೆಯ ಶ್ಲೋಕದಲ್ಲಿ–'ಏಳು ಅಕ್ಷೌಹಿಣೀ ಸೈನ್ಯಗಳನ್ನು ಸಂಹರಿಸಿ ಅರ್ಜುನನು ಜಯದ್ರಥನನ್ನೂ ಸಂಹರಿಸಿದನು'–ಎನ್ನುತ್ತಾನೆ. **ಅಕ್ಷೌಹಿಣೀಃ ಸಪ್ತ ಹತ್ವಾ ಹತೋ ರಾಜಾ ಜಯದ್ರಥಃ** ೧೪೬ನೆಯ ಅಧ್ಯಾಯದಲ್ಲಿ ಸಂಜಯನು : **ಏವಂ ಸ ನಿಹತೋ ರಾಜನ್ಪಾರ್ಥೇನಾಮಿತತೇಜಸಾ I ಅಕ್ಷೌಹಿಣೀರಷ್ಟ ಹತ್ವಾ ಜಾಮಾತಾ ತವ ಸೈನ್ಧವಃ II೧೩೪II** ಎಂಟು ಅಕ್ಷೌಹಿಣೀ ಸೈನ್ಯಗಳನ್ನು ಅರ್ಜುನನು ಸಂಹರಿಸಿದನೆಂದು ಹೇಳಿದ್ದಾನೆ. ಒಂದು ಪುಸ್ತಕದಲ್ಲಿ ಈ ಶ್ಲೋಕವಿರುವುದಿಲ್ಲ. ಅಧ್ಯಾಯಪೂರ್ತಿಯಾಗಿ ದುರ್ಯೋಧನನು ತನ್ನನ್ನೂ ಹಳಿದುಕೊಳ್ಳುತ್ತಾನೆ. ದ್ರೋಣರನ್ನೂ ಹಳಿಯುತ್ತಾನೆ. ಕಡೆಯ ಶ್ಲೋಕದಲ್ಲಿ 'ಪಾಂಡುಪುತ್ರರ ಆಚಾರ್ಯರಾದ ತಾವು ಯುದ್ಧಕ್ಕೆ ಹೋಗಲು ನನಗೆ ಅನುಮತಿಯನ್ನು ನೀಡಿರಿ' ಎಂದು ಕೇಳಿಕೊಳ್ಳುತ್ತಾನೆ. ೧೫೧ನೆಯ ಅಧ್ಯಾಯದಲ್ಲಿ–ದ್ರೋಣರು ದುರ್ಯೋಧನನ ಮಾತಿಗೆ ಸಂತಾಪಗೊಂಡು ಅವನು ಮಾಡಿದ ಆಪಾದನೆಗಳೆಲ್ಲವನ್ನೂ ಅಲ್ಲಗಳೆಯುತ್ತಾರೆ. ತಾವೂ ಒಡನೆಯೇ ಯುದ್ಧಕ್ಕೆ ಹೋಗುವುದಾಗಿ ಹೇಳಿ ತಮ್ಮ ಪುತ್ರನಿಗೂ ದುರ್ಯೋಧನನ ಮೂಲಕವಾಗಿ ಸಂದೇಶವನ್ನು ಕಳುಹಿಸಿ ಹೊರಟುಹೋಗುತ್ತಾರೆ.

೧೫೨ನೆಯ ಅಧ್ಯಾಯದಲ್ಲಿ–ದುರ್ಯೋಧನನು ಕರ್ಣನೊಡನೆ ಅಂದಿನ ಪರಾಜಯಕ್ಕೆ ಮತ್ತು ಸೈಂಧವನ ಸಾವಿಗೆ ಆಚಾರ್ಯರೇ ಮುಖ್ಯ ಕಾರಣರೆಂದೂ ಆಚಾರ್ಯರಿಗೆ ಅರ್ಜುನನನ್ನು ಕಂಡರೆ ಬಹಳ ಪ್ರೀತಿಯೆಂದೂ ಆಪಾದಿಸುತ್ತಾನೆ. ಆದರೆ ಕರ್ಣನು '**ಆಚಾರ್ಯಂ ಮಾ ವಿಗರ್ಹಸ್ವ**' 'ಆಚಾರ್ಯರನ್ನು ನಿಂದನೆಮಾಡಬೇಡ. ಅವರು ತಮ್ಮ ಶಕ್ತಿ ಮೀರಿ ಯುದ್ಧಮಾಡುತ್ತಿದ್ದಾರೆ' ಎಂದು ಹೇಳಿ ಅರ್ಜುನನು ದ್ರೋಣರನ್ನು ಅತಿಕ್ರಮಿಸಿ ಹೋದುದಕ್ಕೆ ಕಾರಣಗಳನ್ನು ನಿರೂಪಿಸುತ್ತಾನೆ. ಕಟ್ಟಕಡೆಗೆ **ತಸ್ಯ ದೋಷಂ ನ ಪಶ್ಯಾಮಿ ದ್ರೋಣಸ್ಯಾನೇನ ಹೇತುನಾ II೨೧II** 'ಈ ಕಾರಣಗಳಿಂದ ನಾನು ದ್ರೋಣರಲ್ಲಿ ಯಾವ ದೋಷವನ್ನೂ ಕಾಣುತ್ತಿಲ್ಲ' ಎನ್ನುತ್ತಾನೆ. ಸೈಂಧವನ ವಧೆಗೆ ದೈವವೇ ಕಾರಣವೆನ್ನುತ್ತಾನೆ. ಈ ಸಂದರ್ಭದಲ್ಲಿ ಕರ್ಣನು ದುರ್ಯೋಧನನೊಡನೆ ಹೇಳುವ ಮಾತುಗಳು ವಿವೇಕಪೂರ್ಣವಾಗಿವೆ. ಇಷ್ಟು ಗಾಂಭೀರ್ಯದಿಂದ ಮಾತನಾಡುವ ಕರ್ಣನು

ಭೀಮಸೇನನನ್ನು ಅಷ್ಟು ತುಚ್ಛವಾದ ಮಾತುಗಳಿಂದ ನಿಂದಿಸಿದನೇ? ಎಂಬ ಅಚ್ಚರಿಯು ಯಾರಿಗಾದರೂ ಉಂಟಾಗುತ್ತದೆ. ಕೆಲವು ಕಡೆಗಳಲ್ಲಿ ಅನವಶ್ಯಕ ವಾಗಿ ಇಂತಹ ಕೆಲವು ಹೆಚ್ಚು ಪಾಠಗಳು ಸೇರಿಹೋಗಿವೆಯೆಂಬುದರಲ್ಲಿ ಸಂಶಯವಿಲ್ಲ. ೧೫೨ನೇ ಅಧ್ಯಾಯವು ಮುಗಿಯಿತು.

೧೫೩ನೆಯ ಅಧ್ಯಾಯ ಘಟೋತ್ಕಚವಧಪರ್ವ

## ಕೌರವ-ಪಾಂಡವಸೈನಿಕರ ನಡುವೆ ಭಯಂಕರಯುದ್ಧ: ದುರ್ಯೋಧನ-ಯುಧಿಷ್ಠಿರರ ಯುದ್ಧ: ದುರ್ಯೋಧನನ ಪರಾಜಯ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ನಿನ್ನ ಪ್ರಚಂಡವಾದ ಗಜಸೈನ್ಯವು ಪಾಂಡವರ ಸೈನ್ಯ ವನ್ನು ಅತಿಕ್ರಮಿಸಿ ಎಲ್ಲ ಕಡೆಗಳಲ್ಲಿಯೂ ಪ್ರಸರಿಸಿ ಯುದ್ಧಮಾಡತೊಡ ಗಿತು. ಪಾಂಚಾಲ-ಕೌರವಯೋಧರು ಯಮಲೋಕದ ಪ್ರಜೆಗಳನ್ನು ವೃದ್ಧಿ ಗೊಳಿಸುವುದಕ್ಕೂ ಮತ್ತು ಪರಲೋಕಕ್ಕೆ ಹೋಗುವುದಕ್ಕೂ ದೀಕ್ಷೆಯನ್ನು ಕೈಗೊಂಡು ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ಶೂರಯೋಧರು ಶರತೋಮರ ಶಕ್ತ್ಯಾಯುಧಗಳನ್ನು ಹಿಡಿದು ಪ್ರತಿಪಕ್ಷದ ಯೋಧರೊಡನೆ ಯುದ್ಧಮಾಡುತ್ತಾ ಪರಸ್ಪರವಾಗಿ ಪ್ರಹರಿಸುತ್ತಾ ಎದುರಾಳಿಗಳನ್ನು ಯಮ ಲೋಕಕ್ಕೆ ಕಳುಹಿಸುತ್ತಿದ್ದರು. ಪರಸ್ಪರವಾಗಿ ಪ್ರಹರಿಸುವುದರಲ್ಲಿಯೇ ಸಮಾಸಕ್ತರಾಗಿದ್ದ ಕೌರವರ ರಥಿಕರಿಗೂ–ಪಾಂಡವರ ಕಡೆಯ ರಥಿಕರಿಗೂ ರಕ್ತದ ಕೋಡಿಯನ್ನೇ ಹರಿಸುವ ದಾರುಣವಾದ ಯುದ್ಧವು ಪ್ರಾರಂಭ ವಾಯಿತು. ಮದೋದಕವನ್ನು ಸುರಿಸುತ್ತಿದ್ದ ಉಭಯಪಕ್ಷಗಳ ಆನೆಗಳು ಪರಸ್ಪರವಾಗಿ ಸಂಘರ್ಷಿಸುತ್ತಾ ಎದುರು ಪಕ್ಷದ ಆನೆಗಳನ್ನು ದಂತ ಗಳಿಂದಲೇ ಸೀಳುತ್ತಿದ್ದುವು. ಯುದ್ಧದಲ್ಲಿ ಮಹಾಯಶಸ್ಸನ್ನು ಗಳಿಸಬೇಕೆಂಬ ಆಶಯದಿಂದ ಉಭಯಪಕ್ಷಗಳ ಕುದುರೇಸವಾರರು ಪ್ರಾಸ-ಶಕ್ತ್ಯಾಯುಧ- ಪರಶ್ವಧಗಳಿಂದ ಆ ಭಯಂಕರವಾದ ಯುದ್ಧದಲ್ಲಿ ಬಡಿದಾಡಿದರು. ಶಸ್ತ್ರ ಪಾಣಿಗಳಾದ ಪದಾತಿಸೈನಿಕರು ಸತತವಾಗಿ ತಮ್ಮ ಪರಾಕ್ರಮವನ್ನು ಪ್ರಯತ್ನ ಪೂರ್ವಕವಾಗಿ ತೋರ್ಪಡಿಸುತ್ತಾ ಪರಸ್ಪರವಾಗಿ ಹೊಡೆದಾಡುತ್ತಿದ್ದರು. ಯೋಧರೇ ಘೋಷಿಸುತ್ತಿದ್ದ ಕುಲ-ನಾಮ-ಗೋತ್ರಗಳನ್ನು ಕೇಳಿದ ನಂತರವೇ ನಾವು ಕುರುಗಳೊಡನೆ ಯುದ್ಧಮಾಡುತ್ತಿದ್ದ ಪಾಂಚಾಲರು

ಯಾರೆಂಬುದನ್ನು ತಿಳಿದುಕೊಳ್ಳುತ್ತಿದ್ದೆವು. ಆ ಸಮರಾಂಗಣದಲ್ಲಿ ಎರಡೂ ಪಕ್ಷಗಳ ಯೋಧರು ಕಿಂಚಿತ್ತಾದರೂ ಭಯವೇ ಇಲ್ಲದವರಂತೆ ರಣಾಂಗಣದ ಸುತ್ತಲೂ ಸಂಚರಿಸುತ್ತಾ ಶರ-ಶಕ್ತಿ-ಪರಶ್ವಧಗಳೇ ಮುಂತಾದ ಆಯುಧಗಳ ಪ್ರಹಾರಗಳಿಂದ ತಮ್ಮ ಎದುರಾಳಿಗಳನ್ನು ಪರಲೋಕಕ್ಕೆ ಕಳುಹಿಸುತ್ತಿದ್ದರು. ಸೂರ್ಯನು ಅಸ್ತನಾಗಿದ್ದುದರಿಂದಲೂ ಎರಡೂ ಪಕ್ಷಗಳ ಯೋಧರಿಂದ ಪ್ರಮುಕ್ತವಾದ ಸಾವಿರಾರು ಬಾಣಗಳಿಂದಲೂ ಹತ್ತು ದಿಕ್ಕುಗಳೂ ಹಿಂದಿನಂತೆ ಯಥಾವತ್ತಾಗಿ ಪ್ರಕಾಶಿಸುತ್ತಿರಲಿಲ್ಲ. ಈ ರೀತಿಯಲ್ಲಿ ಪಾಂಡವಸೈನಿಕರು ಕೌರವಸೈನಿಕರೊಡನೆ ಯುದ್ಧಮಾಡುತ್ತಿರುವಾಗ ದುರ್ಯೋಧನನು ಪಾಂಡವಸೈನ್ಯದೊಳಕ್ಕೆ ನುಗ್ಗಿದನು. ದುರ್ಯೋಧನನು ಸೈಂಧವನ ವಧೆ ಯಿಂದಾಗಿ ಬಹಳ ದುಃಖಿತನಾಗಿದ್ದನು. ಆದುದರಿಂದಲೇ ದುರ್ಯೋಧನನು ಯುದ್ಧಮಾಡುತ್ತಾ ಶತ್ರುಗಳನ್ನು ಯಥಾಶಕ್ತಿ ಸಂಹಾರಮಾಡಿ ತಾನೂ ಸಹ ಸತ್ತುಹೋಗಬೇಕೆಂದು ನಿಶ್ಚಯಿಸಿ ಶತ್ರುಸೈನ್ಯವನ್ನು ಪ್ರವೇಶಿಸಿದನು.

ನಿನ್ನ ಮಗನು ರಥಘೋಷದಿಂದ ಎಲ್ಲ ಕಡೆಗಳನ್ನೂ ಶಬ್ದಪೂರ್ಣ ವನ್ನಾಗಿ ಮಾಡುತ್ತಾ ಭೂಮಿಯನ್ನೇ ನಡುಗಿಸುತ್ತಿರುವನೋ ಎಂಬಂತೆ ಪಾಂಡವರ ಸೈನ್ಯದ ಕಡೆಗೆ ನುಗ್ಗಿದನು. ಮಹಾರಾಜ! ನಿಶ್ಚಯವಾಗಿಯೂ ಪಾಂಡವಸೈನಿಕರಿಗೂ ಮತ್ತು ದುರ್ಯೋಧನನಿಗೂ ನಡೆದ ಆ ಮಹಾ ಸಂಗ್ರಾಮವು ಎಲ್ಲ ಸೈನಿಕರಿಗೂ ವಿನಾಶಕಾರಿಯಾಗಿದ್ದಿತು. ಮಧ್ಯಾಹ್ನದ ಸಮಯದಲ್ಲಿ ತೀಕ್ಷ್ಣವಾದ ಕಿರಣಗಳಿಂದ ಕೂಡಿರುವ ಸೂರ್ಯನನ್ನು ನೋಡಲಾಗದಂತೆ–ಬಾಣಗಳನ್ನೇ ಕಿರಣಗಳಂತೆ ಹೊಂದಿ ಪ್ರತಪಿಸುತ್ತಿದ್ದ ನಿನ್ನ ಮಗನನ್ನು ಪಾಂಡವಸಹೋದರರು ಕಣ್ಣೆತ್ತಿ ನೋಡಲೂ ಕೂಡ ಸಮರ್ಥರಾಗಿರಲಿಲ್ಲ. ಮಹಾತ್ಮನಾದ ದುರ್ಯೋಧನನಿಂದ ಪ್ರಹರಿಸಲ್ಪಡು ತ್ತಿದ್ದ ಪಾಂಚಾಲರು ಪಲಾಯನಮಾಡುವುದರಲ್ಲಿಯೇ ಉತ್ಸಾಹವನ್ನು ತೋರಿಸುತ್ತಾ ಶತ್ರುವನ್ನು ಜಯಿಸುವುದರಲ್ಲಿ ಅತ್ಯಂತ ನಿರುತ್ಸಾಹಿಗಳಾಗಿ ರಣಾಂಗಣದ ಸುತ್ತಲೂ ಅಲ್ಲಿಂದಿಲ್ಲಿಗೆ-ಇಲ್ಲಿಂದಲ್ಲಿಗೆ ಓಡಾಡುತ್ತಿದ್ದರು. ಧನುಷ್ಮಂತನಾದ ನಿನ್ನ ಮಗನು ಬಿಡುತ್ತಿದ್ದ ಚಿನ್ನದ ಮೂಲಭಾಗಗಳಿಂದಲೂ ತೀಕ್ಷ್ಣವಾದ ಅಗ್ರಭಾಗಗಳಿಂದಲೂ ಕೂಡಿದ್ದ ಬಾಣಗಳಿಂದ ಪ್ರಹೃತರಾದ ಪಾಂಡವಸೈನಿಕರು ಅಸುನೀಗಿ ಭೂಮಿಯಲ್ಲಿ ತೊಪ-ತೊಪನೆ ಬೀಳುತ್ತಿ ದ್ದರು. ಮಹಾರಾಜ! ದುರ್ಯೋಧನನು ಆ ಸಮಯದಲ್ಲಿ ಮಾಡಿದ ಸಾಹಸ

ಕಾರ್ಯವನ್ನು (ಸಂಹಾರಕಾರ್ಯವನ್ನು ) ನಿನ್ನ ಕಡೆಯ ಯಾವ ಯೋಧರೂ ಅದುವರೆಗೂ ಮಾಡಿರಲಿಲ್ಲ. ಆನೆಯು ವಿಕಸಿತವಾದ ಪದ್ಮಪುಷ್ಪಗಳಿಂದ ತುಂಬಿರುವ ಸರೋವರನ್ನು ಹೊಕ್ಕು ಸಂಪೂರ್ಣವಾಗಿ ಧ್ವಂಸಮಾಡುವಂತೆ–ಶತ್ರುಸೈನ್ಯವನ್ನು ಭಗ್ನಗೊಳಿಸಿದನು. ಯಾವ ರೀತಿಯಲ್ಲಿ ಬತ್ತಿಹೋದ ನೀರುಳ್ಳದ್ದಾಗಿ ಬಿರುಗಾಳಿಯಿಂದಲೂ, ಸೂರ್ಯನ ಪ್ರಖರವಾದ ಪ್ರಭೆಯಿಂದಲೂ ಕಮಲಸರೋವರವು ಕಾಂತಿಹೀನವಾಗುವುದೋ–ಅದೇ ರೀತಿಯಲ್ಲಿ ಪಾಂಡವರ ಸೇನಾಸಮೂಹವು ನಿನ್ನ ಮಗನ ಮಹಾತೇಜಸ್ಸಿನಿಂದ ಕಾಂತಿಹೀನವಾಯಿತು. ತಮ್ಮ ಸೈನ್ಯವು ದುರ್ಯೋಧನನಿಂದ ವಿಧ್ವಂಸವಾಗುತ್ತಿರುವುದನ್ನು ಕಂಡು ಪಾಂಚಾಲರು ಭೀಮಸೇನನನ್ನು ಮುಂದುಮಾಡಿಕೊಂಡು ದುರ್ಯೋಧನನನ್ನು ಆಕ್ರಮಿಸಿದರು. ಅದರಿಂದ ದುರ್ಯೋಧನನು ಸ್ವಲ್ಪವಾದರೂ ಭ್ರಾಂತಿಗೊಳ್ಳದೇ ಭೀಮಸೇನನನ್ನು ಹತ್ತು ಬಾಣಗಳಿಂದಲೂ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರನ್ನು ಮೂರು-ಮೂರು ಬಾಣಗಳಿಂದಲೂ, ವಿರಾಟ-ದ್ರುಪದರನ್ನು ಆರಾರು ಬಾಣಗಳಿಂದಲೂ, ಶಿಖಂಡಿಯನ್ನು ನೂರು ಬಾಣಗಳಿಂದಲೂ, ಧೃಷ್ಟದ್ಯುಮ್ನನನ್ನು ಎಪ್ಪತ್ತು ಬಾಣಗಳಿಂದಲೂ, ಧರ್ಮಪುತ್ರನನ್ನು ಏಳು ಬಾಣಗಳಿಂದಲೂ, ಕೇಕಯರನ್ನೂ ಮತ್ತು ಚೇದಿಗಳನ್ನೂ ನಿಶಿತವಾದ ಅನೇಕ ಬಾಣಗಳಿಂದಲೂ ಪ್ರಹರಿಸಿದನು. ಅನಂತರ ಸಾತ್ಯಕಿಯನ್ನು ಐದು ಬಾಣಗಳಿಂದಲೂ, ದ್ರೌಪದಿಯ ಮಕ್ಕಳನ್ನು ಮೂರು-ಮೂರು ಬಾಣಗಳಿಂದಲೂ ಪ್ರಹರಿಸಿ ದನು. ಬಳಿಕ ಘಟೋತ್ಕಚನನ್ನು ನಿಶಿತವಾದ ಬಾಣಗಳಿಂದ ಗಾಯಗೊಳಿಸಿ ಸಿಂಹದಂತೆ ಗರ್ಜಿಸಿದನು. ಕ್ರುದ್ಧನಾದ ಯಮಧರ್ಮನು ಪ್ರಜೆಗಳ ಪ್ರಾಣಗಳನ್ನು ಹೀರಿಬಿಡುವಂತೆ–ಆನೆಗಳಿಂದ ಕೂಡಿದ ನೂರಾರು ಇತರ ಯೋಧರನ್ನೂ ಉಗ್ರವಾದ ಬಾಣಗಳಿಂದ ದುರ್ಯೋಧನನು ಕತ್ತರಿಸಿಹಾಕಿದನು. ನಿನ್ನ ಮಗನು ಬಿಟ್ಟ ಬಾಣಗಳಿಂದ ಬಹಳವಾಗಿ ಗಾಯಗೊಂಡ ಪಾಂಡವರ ಸೈನ್ಯವು ದಿಕ್ಕಾಪಾಲಾಗಿ ಓಡಿಹೋಯಿತು. ಮಧ್ಯಾಹ್ನದ ಸೂರ್ಯನಂತೆಯೇ ಪ್ರಜ್ವಲಿಸುತ್ತಿದ್ದ ದುರ್ಯೋಧನನನ್ನು ನೋಡಲು ಕೂಡ ಪಾಂಡವರ ಸೈನಿಕರಿಗೆ ಸಾಧ್ಯವಾಗಲಿಲ್ಲ. ರಾಜಶ್ರೇಷ್ಠನೇ! ಅವ್ಯಾಹತವಾದ ವಿಧ್ವಂಸನ ಕ್ರಿಯೆಯಿಂದ ಬಹಳ ಕುಪಿತನಾದ ಯುಧಿಷ್ಠಿರನು ನಿನ್ನ ಮಗನನ್ನು ಸಂಹರಿಸಬೇಕೆಂಬ ಇಚ್ಛೆಯಿಂದ ದುರ್ಯೋಧನನ ಮೇಲೆ ಆಕ್ರಮಣ ನಡೆಸಿದನು. ಅರಿಂದಮರಾದ, ಕುರುವಂಶೀಯರಾದ, ವೀರರಾದ ದುರ್ಯೋ

ಧನ-ಯುಧಿಷ್ಠಿರರಿಬ್ಬರೂ ತಮ್ಮ ಸ್ವಾರ್ಥಸಾಧನೆಗಾಗಿ ತಮ್ಮ-ತಮ್ಮ ಪರಾಕ್ರಮವನ್ನು ಪ್ರದರ್ಶಿಸುತ್ತಾ ಯುದ್ಧದಲ್ಲಿ ತೊಡಗಿದರು. ಅನಂತರ ಕ್ರುದ್ಧನಾದ ದುರ್ಯೋಧನನು ಬಗ್ಗಿದ ಗಿಣ್ಣುಗಳಿದ್ದ ಹತ್ತು ಬಾಣಗಳಿಂದ ಯುಧಿಷ್ಠಿರನನ್ನು ಪ್ರಹರಿಸಿ ಪುನಃ ಮತ್ತೊಂದು ಬಾಣದಿಂದ ಅವನ ಧ್ವಜವನ್ನೂ ಕತ್ತರಿಸಿದನು. ದುರ್ಯೋಧನನು ಮಹಾತ್ಮನಾದ ಯುಧಿಷ್ಠಿರರಾಜನ ಅತ್ಯಂತ ಪ್ರಿಯಸಾರಥಿಯಾದ ಇಂದ್ರಸೇನನನ್ನೂ ಸಹ ಮೂರು ಬಾಣಗಳಿಂದ ಲಲಾಟಪ್ರದೇಶದಲ್ಲಿ ಪ್ರಹರಿಸಿದನು. ಮಹಾರಥನಾದ ದುರ್ಯೋಧನನು ಮತ್ತೊಂದು ಬಾಣದಿಂದ ಧರ್ಮಜನ ಧನುಸ್ಸನ್ನು ಕತ್ತರಿಸಿ ನಾಲ್ಕು ಬಾಣಗಳಿಂದ ರಥದ ನಾಲ್ಕು ಕುದುರೆಗಳನ್ನೂ ಗಾಯಗೊಳಿಸಿದನು. ಅದರಿಂದ ಕ್ರುದ್ಧನಾದ ಯುಧಿಷ್ಠಿರನು ನಿಮೇಷಮಾತ್ರದಲ್ಲಿ ಮತ್ತೊಂದು ಧನು ಸ್ಸನ್ನು ತೆಗೆದುಕೊಂಡು ಬಹಳ ವೇಗದಿಂದ ದುರ್ಯೋಧನನನ್ನು ತಡೆದನು. ಮರುಕ್ಷಣದಲ್ಲಿಯೇ ಪಾಂಡವಜ್ಯೇಷ್ಠನು ಶತ್ರುಗಳನ್ನು ಅನವರತವಾಗಿ ಧ್ವಂಸ ಮಾಡುತ್ತಿದ್ದ ದುರ್ಯೋಧನನ ಸುವರ್ಣಮಯವಾದ ಹಿಂಭಾಗದಿಂದ ಕೂಡಿದ್ದ ಮಹಾಧನುಸ್ಸನ್ನು ಎರಡು ಭಲ್ಲಗಳ ಪ್ರಯೋಗದಿಂದ ಮೂರು ತುಂಡುಗಳನ್ನಾಗಿ ಮಾಡಿದನು. ಸುಪ್ರಯುಕ್ತವಾದ ಮತ್ತು ನಿಶಿತವಾದ ಹತ್ತು ಬಾಣಗಳಿಂದ ದುರ್ಯೋಧನನನ್ನೂ ಪ್ರಹರಿಸಿದನು. ಆ ಬಾಣಗಳು ದುರ್ಯೋಧನನ ಮರ್ಮಸ್ಥಾನಗಳನ್ನು ಪ್ರವೇಶಿಸಿ ಶರೀರವನ್ನು ಭೇದಿಸಿಕೊಂಡು ಭೂಮಿಯ ಮೇಲೆ ಬಿದ್ದುವು. ಓಡಿಹೋಗಿದ್ದ ಪಾಂಡವರೆಲ್ಲರೂ ಗುಂಪು-ಗುಂಪಾಗಿ ರಣರಂಗಕ್ಕೆ ಹಿಂದಿರುಗಿ ಬಂದು-ವೃತ್ರಾಸುರನ ವಧೆಗಾಗಿ ದೇವತೆಗಳೆಲ್ಲರೂ ಇಂದ್ರನನ್ನು ಸುತ್ತುವರಿದು ನಿಂತುಕೊಂಡಿದ್ದಂತೆ– ಧರ್ಮರಾಜನನ್ನು ಸುತ್ತುವರಿದು ನಿಂತರು. ಬಳಿಕ ಯುಧಿಷ್ಠಿರನು ಸೂರ್ಯರಶ್ಮಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ಅತ್ಯುಗ್ರವಾಗಿದ್ದ, ತಡೆಯಲು ಸಾಧ್ಯವಿಲ್ಲದ ಬಾಣವೊಂದನ್ನು ಧನುಸ್ಸಿನಲ್ಲಿ ಯೋಜಿಸಿ–'ನೀನೀಗ ಸತ್ತೆ!'– ಎಂಬುದಾಗಿ ದುರ್ಯೋಧನನನ್ನು ಕೂಗಿ ಹೇಳುತ್ತಾ ಪ್ರಯೋಗಿಸಿದನು. ಆಕರ್ಣವಾಗಿ ಸೆಳೆದುಬಿಟ್ಟ ಆ ಬಾಣದಿಂದ ಪ್ರಹೃತನಾದ ಕೌರವನು ಮೂರ್ಛಿತನಾಗಿ ಪೀಠದಿಂದ ಜರುಗಿ ಕುಳಿತನು. ಒಡನೆಯೇ 'ದುರ್ಯೋಧನರಾಜನು ಸತ್ತುಹೋದನು.' 'ಹತೋ ದುರ್ಯೋಧನಃ' ಎಂಬ ದೊಡ್ಡ ಕೋಲಾಹಲಶಬ್ದವು ಆನಂದಭರಿತರಾದ ಪಾಂಚಾಲಸೈನಿಕರ ಮಧ್ಯದಲ್ಲೆ

ದ್ದಿತು. ಬಾಣಗಳ ಉಗ್ರವಾದ 'ಸೊಯ್' ಎಂಬ ಶಬ್ದವೂ ಸರ್ವತ್ರ ಕೇಳಿಬರು ತ್ತಿದ್ದಿತು. ಆ ಸಮಯಕ್ಕೆ ಸರಿಯಾಗಿ ದ್ರೋಣರು ಧನುಷ್ಪಾಣಿಗಳಾಗಿ ಅಲ್ಲಿ ಕಾಣಿಸಿಕೊಂಡರು. ಅಷ್ಟರಲ್ಲಿಯೇ ಸ್ವಲ್ಪ ಚೇತರಿಸಿಕೊಂಡಿದ್ದ ದುರ್ಯೋಧನನೂ ಸಹ ದ್ರೋಣರನ್ನು ಕಂಡು ಹೃಷ್ಟನಾಗಿ ಧನುಸ್ಸನ್ನು ಬಿಗಿಯಾಗಿ ಹಿಡಿದುಕೊಂಡು ನಿಲ್ಲು-ನಿಲ್ಲೆಂದು ಹೇಳುತ್ತಾ ಧರ್ಮರಾಜನನ್ನು ಆಕ್ರಮಿಸಿದನು. ವಿಜಯೇಚ್ಛುಗಳಾದ ಪಾಂಚಾಲರು ಬಹಳ ಶೀಘ್ರವಾಗಿ ದುರ್ಯೋಧನನನ್ನು ಎದುರಿಸಿದರು. ಪ್ರಚಂಡವಾಯುವಿನಿಂದ ಪ್ರೇರಿತವಾದ ಮೇಘಗಳನ್ನು ಸೂರ್ಯನು ಕರಗಿಸಿಬಿಡುವಂತೆ–ದುರ್ಯೋಧನನನ್ನು ರಕ್ಷಿಸುವ ಇಚ್ಛೆಯಿಂದ ದ್ರೋಣರು ಪಾಂಚಾಲಯೋಧರನ್ನು ತಡೆಹಿಡಿದು ಧ್ವಂಸ ಮಾಡಲು ಉಪಕ್ರಮಿಸಿದರು. ಅನಂತರ ಯುದ್ಧಮಾಡಲು ಇಚ್ಛಿಸಿ ಒಂದು ಕಡೆಯಲ್ಲಿ ಸೇರಿದ ನಿನ್ನವರಿಗೂ ಮತ್ತು ನಿನ್ನ ಶತ್ರುಗಳಿಗೂ ಯಮನ ರಾಜಧಾನಿಯ ಜನಸಂಖ್ಯೆಯನ್ನು ಬಹಳವಾಗಿ ಹೆಚ್ಚಿಸುವ ಭಯಂಕರಸಂಗ್ರಾಮವು ಪ್ರಾರಂಭವಾಯಿತು."

೧೫೩ನೆಯ ಅಧ್ಯಾಯವು ಮುಗಿಯಿತು.

೧೫೪ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ರಾತ್ರಿಯುದ್ಧದಲ್ಲಿ ಪಾಂಡವಸೈನಿಕರು ದ್ರೋಣಾಚಾರ್ಯರನ್ನು ಆಕ್ರಮಿಸಿದುದು : ದ್ರೋಣರಿಂದ ಪಾಂಡವಸೈನ್ಯದ ನಾಶ

ಧೃತರಾಷ್ಟ್ರನು ಸೃಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ನನ್ನ ಮಾತನ್ನು (ಶಾಸ್ತ್ರವನ್ನು) ಮೀರಿ ನಡೆಯುವ ಮಂದಬುದ್ಧಿಯವನಾದ ನನ್ನ ಮಗ ದುರ್ಯೋಧನನಿಗೆ ಅನೇಕಪ್ರಕಾರವಾಗಿ ಹೇಳಿ, ಕೋಪಾಭಿಭೂತರಾಗಿದ್ದ, ಮಹಾಬಲರಾದ ಆಚಾರ್ಯರು ಪಾಂಡವರ ಸೈನ್ಯವನ್ನು ಪ್ರವೇಶಿಸಿದರು. ಹೀಗೆ ಪರಮಕ್ರುದ್ಧರಾಗಿ ಸೇನೆಯನ್ನು ಪ್ರವೇಶಿಸಿ ರಣಾಂಗಣದ ಸುತ್ತಲೂ ಧನುಷ್ಪಾಣಿಗಳಾಗಿ ರಥದಲ್ಲಿ ಸಂಚರಿಸುತ್ತಿದ್ದ ಮಹಾಶೂರರಾದ, ಮಹಾಧನುಷ್ಮಂತರಾದ ದ್ರೋಣರನ್ನು ಪಾಂಡವರು ಹೇಗೆ ಎದುರಿಸಿದರು? ಆ ಸಮಯದಲ್ಲಿ ಆಚಾರ್ಯರ ರಥದ ಬಲಗಡೆಯ ಚಕ್ರವನ್ನು ಯಾರು ರಕ್ಷಿಸುತ್ತಿದ್ದರು? ಅಪಾರಸಂಖ್ಯೆಯಲ್ಲಿ ಶತ್ರುಗಳನ್ನು ಸದೆಬಡೆಯುತ್ತಿದ್ದ ಅವರ ರಥದ ಎಡಭಾಗದ ಚಕ್ರವನ್ನು ಯಾರು ರಕ್ಷಿಸುತ್ತಿದ್ದರು? ಮಹಾಯೋಧರಾದ ವೀರರಾದ ಆಚಾರ್ಯರ ಹಿಂಭಾಗ

ದಲ್ಲಿ ಯಾರಿದ್ದರು? ಚಳಿಗಾಲವಲ್ಲದಿದ್ದರೂ ಶತ್ರುಪಕ್ಷದ ಯೋಧರಿಗೆ ಅವರನ್ನು ನೋಡಿ ಅತಿಯಾದ ನಡುಕವುಂಟಾಗಿರಬಹುದೆಂದು ನಾನು ಭಾವಿಸುತ್ತೇನೆ. ಶಿಶಿರರ್ತುವಿನಲ್ಲಿ ಶೀತದಿಂದ ಹಸುಗಳು ನಡುಗುವಂತೆ–ಪಾಂಡವ ಯೋಧರು ನಡುಗುತ್ತಿದ್ದರೆಂದು ನಾನು ಭಾವಿಸುತ್ತೇನೆ. ಶಸ್ತ್ರಧಾರಿಗಳಲ್ಲಿಯೇ ಶ್ರೇಷ್ಠರಾದ, ಅಪರಾಜಿತರಾದ, ಮಹಾಧನುಷ್ಮಂತರಾದ ದ್ರೋಣರು ರಥಮಾರ್ಗಗಳಲ್ಲಿ ನೃತ್ಯಮಾಡುತ್ತಿರುವಂತೆ ಬಾಣಗಳ ಆದಾನ-ಸಂಧಾನ-ಅಪಕರ್ಷಣ-ಪ್ರಹಾರಗಳನ್ನು ಮಾಡುತ್ತಾ ಪಾಂಚಾಲರನ್ನು ಪ್ರವೇಶಿಸಿದರು. ರಥಿಗಳಲ್ಲಿ ಶ್ರೇಷ್ಠರಾದ ದ್ರೋಣರು ಧೂಮಕೇತುವಿನಂತೆ ಪರಮಕ್ರುದ್ಧರಾಗಿ ಪಾಂಚಾಲರ ಚತುರಂಗಸೈನ್ಯವನ್ನು ದಹಿಸುತ್ತಿದ್ದರು. ಇಂತಹವರು ಮೃತ್ಯುವಶರಾದುದು ಹೇಗೆ? ಸಂಜಯ!”

“ಮಹಾರಾಜ! ಸಾಯಂಕಾಲ ಸಿಂಧುರಾಜನನ್ನು ಸಂಹರಿಸಿದನಂತರ ಅರ್ಜುನನು ಯುಧಿಷ್ಠಿರನನ್ನು ಸಂಧಿಸಿ (ಅವನೊಡನೆ ಸಮಾಲೋಚಿಸಿ) ಮಹಾಧನುಷ್ಮಂತನಾದ ಸಾತ್ಯಕಿಯೊಡನೆ ದ್ರೋಣರನ್ನು ಆಕ್ರಮಿಸಿದನು. ಅದೇ ರೀತಿಯಲ್ಲಿ ಯುಧಿಷ್ಠಿರ-ಭೀಮಸೇನರೂ ಪ್ರತ್ಯೇಕ-ಪ್ರತ್ಯೇಕವಾದ ತಮ್ಮ-ತಮ್ಮ ಸೈನ್ಯಗಳೊಡನೆ ದ್ರೋಣರನ್ನು ಆಕ್ರಮಿಸಿದರು. ಧೀಮಂತನಾದ ನಕುಲ, ದುರ್ಜಯನಾದ ಸಹದೇವ, ಸೇನಾಸಮೇತನಾದ ಧೃಷ್ಟದ್ಯುಮ್ನ, ಕೇಕಯರಾಜನಿಂದ ಕೂಡಿದ ವಿರಾಟ, ಸಸೈನ್ಯರಾದ ಮತ್ಸ್ಯರು, ಸಾಲ್ವರು– ಎಲ್ಲರೂ ದ್ರೋಣರೊಡನೆಯೇ ಯುದ್ಧದಲ್ಲಿ ತೊಡಗಿದರು. ಪಾಂಚಾಲರಿಂದ ರಕ್ಷಿತನಾದ, ಧೃಷ್ಟದ್ಯುಮ್ನನ ತಂದೆಯಾದ ದ್ರುಪದರಾಜನೂ ದ್ರೋಣರನ್ನೇ ಆಕ್ರಮಿಸಿದನು. ಮಹಾಧನುಷ್ಮಂತರಾದ ದ್ರೌಪದಿಯ ಐವರು ಮಕ್ಕಳು, ಘಟೋತ್ಕಚರಾಕ್ಷಸ ಇವರೆಲ್ಲರೂ ಸಸೈನ್ಯರಾಗಿ ದ್ರೋಣರನ್ನೇ ಆಕ್ರಮಿಸಿದರು. ಪ್ರಹಾರಕುಶಲರಾದ ಆರು ಸಾವಿರ ಪ್ರಭದ್ರಕರೂ ಮತ್ತು ಪಾಂಚಾಲಯೋಧರೂ ಶಿಖಂಡಿಯನ್ನು ಮುಂದೆಮಾಡಿಕೊಂಡು ದ್ರೋಣರನ್ನೇ ಮುತ್ತಿದರು. ಪಾಂಡವರ ಕಡೆಯ ಇತರ ಮಹಾರಥರೂ ಸಹ ಸೈನ್ಯಸಮೇತರಾಗಿ ಬ್ರಾಹ್ಮಣಶ್ರೇಷ್ಠರಾದ ದ್ರೋಣರನ್ನೇ ಎದುರಿಸಿದರು. ಭರತಶ್ರೇಷ್ಠನೇ! ಪಾಂಡವರ ಕಡೆಯ ಆ ಎಲ್ಲ ಶೂರರೂ ದ್ರೋಣರೊಡನೆ ಯುದ್ಧಕ್ಕೆ ಹೋದ ಆ ಸಮಯವು ಹೇಡಿಗಳಿಗೆ ಭಯವನ್ನುಂಟುಮಾಡುವ ಘೋರವಾದ ಕಾಳರಾತ್ರಿಯಾಗಿದ್ದಿತು.

ನಿಶ್ಚಯವಾಗಿಯೂ ಆ ರಾತ್ರಿಯು ಎಲ್ಲ ಯೋಧರಿಗೂ ಅಮಂಗಳಕರ ವಾಗಿದ್ದಿತು. ಮಹಾಭಯವನ್ನುಂಟುಮಾಡುವುದಾಗಿದ್ದಿತು. ಯಮರಾಜನ ಬಳಿಗೆ ಒಯ್ಯುವುದಾಗಿದ್ದಿತು. ಗಜಾಶ್ವ-ಮನುಷ್ಯರೆಲ್ಲರಿಗೂ ಆ ಕಾಳರಾತ್ರಿಯು ಪ್ರಾಣಾಂತಕಾರಿಯಾಗಿದ್ದಿತು. ಆ ಘೋರರಾತ್ರಿಯಲ್ಲಿ ಗುಳ್ಳೇ ನರಿಗಳು ಸರ್ವತ್ರ ಕೋಲಾಹಲವನ್ನುಂಟುಮಾಡುತ್ತಾ ಜ್ವಾಲೆಗಳಿಂದ ಕೂಡಿದ ಮುಖಗಳಿಂದ ಮುಂಬರುವ ಭಯಂಕರವಾದ ಆಪತ್ತನ್ನು ಸೂಚಿಸುತ್ತಿದ್ದುವು. ವಿಶೇಷವಾಗಿ ಕೌರವಸೈನ್ಯದಲ್ಲಿ ಮುಂದಾಗುವ ಮಹಾಭಯಂಕರವಾದ ವಿಪತ್ತನ್ನು ಸೂಚಿಸುವ ಅತಿದಾರುಣವಾದ ಗೂಬೆಗಳೂ ಅಂತರಿಕ್ಷದಲ್ಲಿ ಕಾಣಿಸಿಕೊಂಡುವು. ಅನಂತರ ಎಲ್ಲ ಸೈನಿಕರ ನಡುವೆ ಮಹಾ ಶಬ್ದವುಂಟಾಯಿತು. ಭೇರೀ-ಮೃದಂಗಗಳ ಶಬ್ದಗಳಾಗುತ್ತಿದ್ದುವು. ಆನೆಗಳು ಘೀಂಕರಿಸುತ್ತಿದ್ದುವು. ಕುದುರೆಗಳು ಕೆನೆಯುತ್ತಿದ್ದುವು. ಅವುಗಳ ಗೊರಸಿನ ಸಪ್ಪಳಗಳಿಂದಲೂ ಸಮ್ಮಿಳಿತವಾದ ಭಯಂಕರ ಶಬ್ದವು ಸರ್ವತ್ರ ವ್ಯಾಪಿಸಿತು. ಅನಂತರ ಆ ಸಂಧ್ಯಾಸಮಯದಲ್ಲಿ ದ್ರೋಣರಿಗೂ ಮತ್ತು ಸೃಂಜಯರಿಗೂ ಅತಿದಾರುಣವಾದ ಯುದ್ಧವು ಪ್ರಾರಂಭವಾಯಿತು. ಕತ್ತಲೆಯಿಂದಲೂ, ಸೈನ್ಯಗಳ ಪದಸಂಘಟನೆಗಳಿಂದ ಹುಟ್ಟಿದ ಧೂಳಿನಿಂದಲೂ ವ್ಯಾಪ್ತವಾಗಿದ್ದ ಆ ಸ್ಥಳದಲ್ಲಿ ಯಾವುದೊಂದೂ ತಿಳಿಯುತ್ತಿರಲಿಲ್ಲ. ಸ್ವಲ್ಪಹೊತ್ತಿನಲ್ಲಿಯೇ ರಣರಂಗವು ಗಜಾಶ್ವ-ಪದಾತಿಗಳ ರಕ್ತದಿಂದ ತೋಯ್ದುಹೋದುದರಿಂದ ನಾವಲ್ಲಿ ಧೂಳನ್ನು ಕಾಣಲಿಲ್ಲ. (ಧೂಳು ಉಡುಗಿಹೋಯಿತು.) ಆ ಸಮಯ ದಲ್ಲಿ ಎಲ್ಲ ಯೋಧರೂ ಮೋಹಪರವಶರಾದರು. ಪರ್ವತದ ತಪ್ಪಲಿನಲ್ಲಿ, ರಾತ್ರಿಯ ಸಮಯದಲ್ಲಿ ಬಿದುರಿನ ಮೆಳೆಯು ಹೊತ್ತಿಕೊಂಡು ಉರಿಯುವಾಗ ಚಟ-ಚಟಾ ಶಬ್ದಗಳಾಗುವಂತೆ–ಶಸ್ತ್ರಗಳ ಆಘಾತ-ಪ್ರತ್ಯಾಘಾತಗಳಿಂದ ಘೋರವಾದ ಚಟ-ಚಟಾ ಶಬ್ದವುಂಟಾಯಿತು. ಭೇರೀ-ಮೃದಂಗಗಳ ಶಬ್ದಗಳಿಂದಲೂ ಝರ್ಝರ-ಪಟಹಶಬ್ದಗಳಿಂದಲೂ ಗಜ-ವಾಜಿಗಳ ಘೀಂಕಾರ-ಹೇಷಾರವಗಳಿಂದಲೂ ರಣಾಂಗಣವು ವ್ಯಾಪ್ತವಾಗಿರುವಂತೆ ಕಾಣುತ್ತಿದ್ದಿತು. ಕತ್ತಲಿನಿಂದ ಆವೃತವಾಗಿದ್ದ ಆ ಸಂಧ್ಯಾಕಾಲದಲ್ಲಿ ನಮ್ಮವ ರಾರು? ನಮ್ಮ ಶತ್ರುಗಳಾರು? ಎಂಬುದೇ ತಿಳಿಯುತ್ತಿರಲಿಲ್ಲ. ಎಲ್ಲವೂ ಬಹಳ ಉಗ್ರವಾಗಿ ಕಾಣುತ್ತಿದ್ದಿತು. ಗಜಾಶ್ವಯೋಧರ ಶರೀರಗಳಿಂದ ರಕ್ತವು ಭೂಮಿಯ ಮೇಲೆ ಸುರಿದು ಭಯಂಕರವಾಗಿದ್ದ ಧೂಳು ಉಡುಗಿತು.

ಯೋಧರು ತೊಟ್ಟಿದ್ದ ಸುವರ್ಣಮಯವಾದ ಕವಚಗಳ ಮತ್ತು ಆಭರಣಗಳ ಪ್ರಕಾಶದಿಂದ ಕತ್ತಲೆಯೂ ಹೊರಟುಹೋಯಿತು. ಮಣಿ-ಸುವರ್ಣಗಳಿಂದ ಸಮಲಂಕೃತವಾಗಿದ್ದ ಕೌರವ-ಪಾಂಡವರ ಸೈನ್ಯವು ಆ ರಾತ್ರಿಯಲ್ಲಿ ನಕ್ಷತ್ರ ಗಳಿಂದ ಕೂಡಿದ ಆಕಾಶದಂತೆಯೇ ಪ್ರಕಾಶಿಸುತ್ತಿದ್ದಿತು. ಸೈನ್ಯಗಳ ಅಕ್ಕಪಕ್ಕ ದಲ್ಲಿದ್ದ ಗುಳ್ಳೇನರಿಗಳ ಸಮೂಹಗಳು ಭಯಂಕರವಾಗಿ ಕಿರುಚಿಕೊಳ್ಳು ತ್ತಿದ್ದುವು. ಆ ಸೈನ್ಯವು ಶಕ್ತ್ಯಾಯುಧಗಳಿಂದಲೂ–ಧ್ವಜಗಳಿಂದಲೂ ವ್ಯಾಪ್ತ ವಾಗಿದ್ದಿತು. ಕೆಲವು ಆನೆಗಳು ಚೀತ್ಕಾರಮಾಡುತ್ತಿದ್ದುವು. ಕೆಲವು ಯೋಧರು ಸಿಂಹನಾದಮಾಡುತ್ತಿದ್ದರು. ಕೆಲವು ಸೈನಿಕರು ಎದುರಾಳಿಗಳನ್ನು ಯುದ್ಧಕ್ಕೆ ಬರುವಂತೆ ಕೂಗಿಕೊಳ್ಳುತ್ತಿದ್ದರು. ಆ ಎಲ್ಲ ಶಬ್ದಗಳಿಂದಲೂ ಸಮಾವೃತ ವಾಗಿದ್ದ ಆ ಸೈನ್ಯವು ಬಹಳ ಭಯಂಕರವಾಗಿ ಕಾಣುತ್ತಿದ್ದಿತು. ಸ್ವಲ್ಪಹೊತ್ತಿ ನಲ್ಲಿಯೇ ಅಲ್ಲಿ ರೋಮಾಂಚಕರವಾದ, ಭಯಂಕರವಾದ, ಸಿಡಿಲಿನ ಶಬ್ದಕ್ಕೆ ಸಮಾನವಾದ ಶಬ್ದವು ಹುಟ್ಟಿ ಎಲ್ಲ ದಿಕ್ಕುಗಳನ್ನೂ ಆವರಿಸಿತು.

ಮಹಾರಾಜ! ಆ ರಾತ್ರಿಯಲ್ಲಿ ಕೌರವಸೇನೆಯು ಸುವರ್ಣಮಯವಾದ ಅಂಗದಗಳಿಂದಲೂ, ಸುವರ್ಣಮಯವಾದ ಕುಂಡಲಗಳಿಂದಲೂ, ಥಳ-ಥಳಿಸುವ ಶಸ್ತ್ರಗಳಿಂದಲೂ ಬಹಳ ಪ್ರಕಾಶಮಾನವಾಗಿ ಕಾಣುತ್ತಿದ್ದಿತು. ಆ ರಾತ್ರಿಯಲ್ಲಿ ಚಿನ್ನದ ಆಭರಣಗಳಿಂದ ಸಮಲಂಕೃತವಾಗಿದ್ದ ಆನೆ ಮತ್ತು ರಥಗಳು ವಿದ್ಯುತ್ತಿನಿಂದ ಕೂಡಿದ ಮೇಘಗಳಂತೆಯೇ ಪ್ರಕಾಶಿಸುತ್ತಿದ್ದುವು. ರಣಾಂಗಣದ ನಾಲ್ಕು ದಿಕ್ಕುಗಳಲ್ಲಿಯೂ ಪರಸ್ಪರಸಂಘರ್ಷಿತವಾಗುತ್ತಿದ್ದ ಋಷ್ಟಿ, ಶಕ್ತ್ಯಾಯುಧ, ಗದೆ, ಬಾಣ, ಮುಸಲ, ಪ್ರಾಸ, ಪಟ್ಟಿಶಾದಿ ಆಯುಧ ಗಳು ಪ್ರಜ್ವಲಿಸುತ್ತಿರುವ ಅಗ್ನಿಗಳಂತೆಯೇ ಆ ರಾತ್ರಿಯಲ್ಲಿ ಕಾಣುತ್ತಿದ್ದುವು. ಯುದ್ಧಮಾಡಲು ಇಚ್ಛೆಯಿದ್ದ ವೀರಯೋಧರು ಅತಿಭಯಂಕರವಾಗಿದ್ದ ಕೌರವಸೇನಾಸಮೂಹವನ್ನು ಪ್ರವೇಶಿಸಿದರು. ದುರ್ಯೋಧನನೇ ಆ ಸೇನಾಸಮೂಹಕ್ಕೆ ಎದುರಾಳಿಯಾಗಿದ್ದನು. ರಥ-ಗಜಗಳೇ ಮೋಡಗಳಾ ಗಿದ್ದುವು. ರಣವಾದ್ಯಗಳೇ ಗುಡುಗಿನ ಶಬ್ದಗಳಾಗಿದ್ದುವು. ಧನುಸ್ಸು ಮತ್ತು ಧ್ವಜಗಳು ಮಿಂಚುಗಳಾಗಿದ್ದುವು. ದ್ರೋಣರು ಮತ್ತು ಪಾಂಡವರು ಪರ್ಜನ್ಯನ ರೂಪದಲ್ಲಿದ್ದರು. ಖಡ್ಗ-ಶಕ್ತ್ಯಾಯುಧ-ಗದೆಗಳೇ ಸಿಡಿಲುಗಳಾಗಿದ್ದುವು. ಬಾಣಗಳೇ ಜಲಧಾರೆಗಳಂತಿದ್ದುವು. ಅಸ್ತ್ರಗಳು

ವಾಯುವಿನಂತಿದ್ದುವು. ಶೀತೋಷ್ಣಗಳೆರಡರಿಂದಲೂ ಆ ಸೇನೆಯು ವ್ಯಾಪ್ತವಾಗಿದ್ದು ಅತ್ಯಂತ ಘೋರವಾಗಿದ್ದಿತು. ಪ್ರೇಕ್ಷಕರಿಗೆ ವಿಸ್ಮಯಕರವಾಗಿದ್ದಿತು. ಅತ್ಯುಗ್ರವಾಗಿದ್ದಿತು. ಜೀವಿತವನ್ನೇ ಅಂತ್ಯಗೊಳಿಸುವುದಾಗಿದ್ದಿತು. ದಾಟಬಹುದಾದ ನೌಕೆಯಿಂದ ವಿಹೀನವಾಗಿದ್ದಿತು. ಇಂತಹ ಕೌರವಸೇನೆಯನ್ನು ವೀರಯೋಧರು ಪ್ರವೇಶಿಸಿದರು. ಮಹಾಶಬ್ದದಿಂದ ನಿನಾದಿತವಾಗಿದ್ದ ಘೋರವಾದ ರಾತ್ರಿಯ ಪ್ರಥಮಯಾಮವು ಹೇಡಿಗಳಿಗೆ ಭಯದಾಯಕವೂ–ವೀರರಿಗೆ ಹರ್ಷವರ್ಧಕವೂ ಆಗಿದ್ದಿತು. ಸುದಾರುಣವಾದ, ಮಹಾಭಯಂಕರವಾದ, ರಾತ್ರಿಯುದ್ಧವು ನಡೆಯುತ್ತಿರಲಾಗಿ, ಕ್ರುದ್ಧರಾದ ಪಾಂಡವ-ಸೃಂಜಯರು ಒಟ್ಟಾಗಿ ಸೇರಿ ದ್ರೋಣರನ್ನು ಆಕ್ರಮಿಸಿದರು. ಯಾವ ಯಾವ ಮಹಾರಥರು ದ್ರೋಣರಿಗೆ ಅಭಿಮುಖರಾಗಿ ಅವರೊಡನೆ ಯುದ್ಧಮಾಡಲು ಹೋಗುತ್ತಿದ್ದರೋ–ಅವರೆಲ್ಲರನ್ನೂ ದ್ರೋಣರು ತಮ್ಮ ಪರಾಕ್ರಮದಿಂದ ವಿಮುಖರನ್ನಾಗಿ ಮಾಡುತ್ತಿದ್ದರು. ಮತ್ತೆ ಕೆಲವರನ್ನು ಯಮನ ಮನೆಗೂ ಕಳುಹಿಸಿಕೊಟ್ಟರು. ಆ ಪ್ರದೋಷಕಾಲದಲ್ಲಿ ದ್ರೋಣರೊಬ್ಬರೇ ತಮ್ಮ ನಿಶಿತವಾದ ಬಾಣಗಳಿಂದ ಒಂದು ಸಾವಿರ ಆನೆಗಳನ್ನೂ, ಹತ್ತು ಸಾವಿರ ರಥಿಕರನ್ನೂ, ಲಕ್ಷೋಪಲಕ್ಷ-ಕೋಟ್ಯನುಕೋಟಿ ಪದಾತ್ಯಶ್ವ ಸೈನಿಕರನ್ನೂ ಸಂಹರಿಸಿದರು."

೧೫೪ನೆಯ ಅಧ್ಯಾಯವು ಮುಗಿಯಿತು.

೧೫೫ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ದ್ರೋಣರು ಶಿಬಿಯನ್ನು ಸಂಹರಿಸಿದುದು : ಭೀಮಸೇನನು ಮಲ್ಲಯುದ್ಧದಲ್ಲಿ ಕಳಿಂಗರಾಜನ ಕುಮಾರನನ್ನೂ, ಶಸ್ತ್ರಯುದ್ಧದಲ್ಲಿ ಧ್ರುವ-ಜಯರಾತರನ್ನೂ, ಧೃತರಾಷ್ಟ್ರನ ಮಕ್ಕಳಾದ ದುಷ್ಕರ್ಣ-ದುರ್ಮದರನ್ನೂ ಸಂಹರಿಸಿದುದು

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

"ಸಂಜಯ! ದುರ್ಧರ್ಷರಾದ, ಅಸಹನಶೀಲರಾದ, ಕೃದ್ಧರಾದ, ಅಮಿತೌಜಸ್ವಿಗಳಾದ ದ್ರೋಣರು ಸೃಂಜಯರ ಸೈನ್ಯದೊಳಗೆ ಪ್ರವೇಶಿಸಿದ ಕಾಲದಲ್ಲಿ ನಿಮ್ಮ ಮನೋವೃತ್ತಿಯು ಹೇಗಿದ್ದಿತು? ನೀನು ಹಿಂದೆ ಹೇಳಿದಂತೆ ಗುರುಜನರ ಆಜ್ಞೋಲ್ಲಂಘಕನಾದ (ಶಾಸ್ತ್ರವನ್ನು ಮೀರಿ ನಡೆಯುವ)

ದುರ್ಯೋಧನನೊಡನೆ ಸಂಭಾಷಿಸಿ ಮಹಾತ್ಮರಾದ ದ್ರೋಣರು ಸೃಂಜಯ ಸೇನಾಸಮೂಹವನ್ನು ಪ್ರವೇಶಿಸಿದನಂತರ ಅರ್ಜುನನೇನು ಮಾಡಿದನು?

ವೀರನಾದ ಸೈಂಧವನು ಅರ್ಜುನನಿಂದಲೂ, ಭೂರಿಶ್ರವಸನು ಸಾತ್ಯಕಿಯಿಂದಲೂ ಹತನಾಗಲಾಗಿ–ಅಪರಾಜಿತರಾದ, ಶತ್ರುತಾಪಕರಾದ, ಮಹಾತೇಜಸ್ವಿಗಳಾದ ದ್ರೋಣರು ಪಾಂಚಾಲರ ಸೈನ್ಯವನ್ನು ಪ್ರವೇಶಿಸಿದನಂತರ ದುರ್ಯೋಧನನು ಆ ಸಮಯದಲ್ಲಿ ಯಾವ ಕಾರ್ಯವನ್ನು ಮಾಡುವುದು ಉಚಿತವೆಂದು ಭಾವಿಸಿದನು? ವರದರಾದ, ವೀರರಾದ, ಬ್ರಾಹ್ಮಣೋತ್ತಮರಾದ ದ್ರೋಣರನ್ನು ಆ ಸಮಯದಲ್ಲಿ ಯಾರು ಯಾರು ಅನುಸರಿಸಿ ಹೋದರು? ಯುದ್ಧಮಾಡುತ್ತಿದ್ದ ಶೂರರಾದ ದ್ರೋಣರ ಹಿಂದೆ ಯಾವ ಯಾವ ವೀರರು ಹೋದರು? ರಣಾಂಗಣದಲ್ಲಿ ಶತ್ರುಗಳನ್ನು ಸಂಹರಿಸುತ್ತಾ ಯಾವ ಯಾವ ಯೋಧರು ಆಚಾರ್ಯರ ಮುಂಭಾಗದಲ್ಲಿ ಹೋದರು? ದ್ರೋಣಾಚಾರ್ಯರ ಬಾಣಗಳಿಂದ ಪೀಡಿತರಾದ ಸಮಸ್ತಪಾಂಡವರೂ ಶಿಶಿರರ್ತುವಿನಲ್ಲಿ ಶೀತದಿಂದ ನಡುಗುವ ಹಸುಗಳಂತೆ–ನಡುಗುತ್ತಿದ್ದರೆಂದು ಭಾವಿಸುತ್ತೇನೆ. ಅರಿಮರ್ದನರಾದ, ಪುರುಷವ್ಯಾಘ್ರರಾದ, ಮಹಾಧನುಷ್ಮಂತರಾದ ದ್ರೋಣರು ಪಾಂಚಾಲಸೈನ್ಯವನ್ನು ಪ್ರವೇಶಿಸಿ ಮೃತ್ಯುವಶರಾದುದು ಹೇಗೆ? ಆ ರಾತ್ರಿಯಲ್ಲಿ ಸರ್ವಮಹಾರಥರೂ ಒಟ್ಟಾಗಿ ಸೇರಿರಲಾಗಿ, ಸರ್ವಯೋಧರೂ ಸಂಘಟಿತರಾಗಿರಲಾಗಿ, ನಾನಾವಿಧವಾದ ಸೇನಾಸಮೂಹಗಳು ವಿಧ್ವಂಸಿತವಾಗುತ್ತಿರಲಾಗಿ, ನಮ್ಮಲ್ಲಿ ಬುದ್ಧಿವಂತರಾದ ಯಾರು ಅಲ್ಲಿದ್ದರು? ಶತ್ರುಗಳ ಸೈನ್ಯದೊಡನೆ ಯುದ್ಧದಲ್ಲಿ ತೊಡಗಿದ್ದ ನನ್ನ ಕಡೆಯ ಸೈನಿಕರನ್ನು ನೀನು ಯಾವಾಗಲೂ 'ಹತರಾದರು,' 'ಪರಾಜಿತರಾದರು,' 'ರಥಿಗಳು ರಥಹೀನರಾದರು' ಎಂದೇ ಹೇಳುತ್ತಿರುವೆ. ಪಾಂಡವರಿಂದ ಮಥಿಸಲ್ಪಡುತ್ತಿದ್ದ, ಪಾಂಡವರ ಪ್ರಹಾರದಿಂದ ಪ್ರಜ್ಞಾಶೂನ್ಯರಾಗುತ್ತಿದ್ದ ಮತ್ತು ಗಾಢಾಂಧಕಾರದಲ್ಲಿ ಮುಳುಗಿಹೋಗಿದ್ದ ನಮ್ಮ ಸೈನಿಕರ ಮನಃಸ್ಥಿತಿಯು ಆ ಸಮಯದಲ್ಲಿ ಹೇಗಿದ್ದಿತು? ಪಾಂಡವರು ಆ ಸಮಯದಲ್ಲಿ ಪ್ರಹೃಷ್ಟರಾಗಿದ್ದರೆಂದೂ, ಉತ್ಸಾಹಯುಕ್ತರಾಗಿದ್ದರೆಂದೂ, ಸಂತುಷ್ಟರಾಗಿದ್ದರೆಂದೂ ಹೇಳುತ್ತಿರುವೆ. ನನ್ನವರನ್ನು ನೀನು ದುಃಖಿಗಳಾಗಿದ್ದರೆಂದೂ, ಯುದ್ಧದಿಂದ ವಿಮುಖರಾಗುತ್ತಿದ್ದರೆಂದೂ ಹೇಳುವೆ. ಪಲಾಯನಮಾಡದಿರುವ ಪಾರ್ಥರಿಗೆ ಆ ಸಮಯ

ದಲ್ಲಿ (ಆ ರಾತ್ರಿಯಲ್ಲಿ) ಯುದ್ಧಮಾಡಲು ಬೆಳಕು ಹೇಗುಂಟಾಯಿತು? ಕುರುಗಳಲ್ಲಿಯೂ ಬೆಳಕು ಹೇಗುಂಟಾಯಿತು?"

"ಮಹಾರಾಜ! ಸುದಾರುಣವಾದ ರಾತ್ರಿಯುದ್ಧವು ನಡೆಯುತ್ತಿರಲಾಗಿ ಪಾಂಡವರು ಸೋಮಕರೊಡನೆ ಸೇರಿ ದ್ರೋಣರ ಮೇಲೆ ದಾಳಿಮಾಡಿದರು. ಅನಂತರ ದ್ರೋಣರು ಶೀಘ್ರಗಾಮಿಗಳಾದ ಬಾಣಗಳಿಂದ ಎಲ್ಲ ಕೇಕಯ ರನ್ನೂ ಮತ್ತು ಧೃಷ್ಟದ್ಯುಮ್ನನ ಎಲ್ಲ ಮಕ್ಕಳನ್ನೂ ಯಮಲೋಕಕ್ಕೆ ಕಳುಹಿ ಸಿದರು. ದ್ರೋಣರಿಗೆ ಅಭಿಮುಖರಾಗಿ ಯಾವ ಮಹಾರಥರು ಅವರೊಡನೆ ಯುದ್ಧಮಾಡಲು ನಿಲ್ಲುತ್ತಿದ್ದರೋ–ಅವರೆಲ್ಲರನ್ನೂ ದ್ರೋಣರು ಪಿತೃಲೋಕಕ್ಕೆ ಕಳುಹಿಸುತ್ತಿದ್ದರು. ಈ ರೀತಿಯಲ್ಲಿ ಪ್ರತಾಪವಂತರಾದ ದ್ರೋಣರು ಪಾಂಡವರ ಕಡೆಯ ವೀರರನ್ನು ವಿಧ್ವಂಸನಗೊಳಿಸುತ್ತಿದ್ದುದನ್ನು ನೋಡಿ ಪ್ರತಾಪವಂತನಾದ ಶಿಬಿರಾಜನು ಬಹಳ ಕ್ರುದ್ಧನಾಗಿ ದ್ರೋಣರ ಮೇಲೆ ದಾಳಿಯನ್ನು ಉಪಕ್ರಮಿಸಿದನು. ಪಾಂಡವರ ಕಡೆಯ ಮಹಾರಥನಾದ ಶಿಬಿಯು ತನ್ನ ಮೇಲೆ ದಾಳಿಮಾಡಲು ಬರುತ್ತಿದ್ದುದನ್ನು ನೋಡಿ ದ್ರೋಣರು ಲೋಹಮಯವಾದ ಮತ್ತು ನಿಶಿತವಾಗಿದ್ದ ಒಂಬತ್ತು ಬಾಣಗಳಿಂದ ಶಿಬಿಯನ್ನು ಪ್ರಹರಿಸಿದರು. ಶಿಬಿಯು ನಸುನಗುತ್ತಾ ನಿಶಿತವಾದ ಮೂವತ್ತು ಬಾಣಗಳಿಂದ ದ್ರೋಣರನ್ನು ಪ್ರಹರಿಸಿ ಅನಂತರ ಭಲ್ಲದಿಂದ ದ್ರೋಣರ ಸಾರಥಿಯನ್ನೂ ಪ್ರಹರಿಸಿ ರಥದಿಂದ ಬೀಳಿಸಿದನು. ಒಡನೆಯೇ ದ್ರೋಣರು ಮಹಾತ್ಮನಾದ ಶಿಬಿಯ ರಥದ ನಾಲ್ಕು ಕುದುರೆಗಳನ್ನೂ ಮತ್ತು ಸಾರಥಿಯನ್ನೂ ಸಂಹರಿಸಿ ಶಿರಸ್ತ್ರಾಣದಿಂದ ಯುಕ್ತವಾಗಿದ್ದ ಶಿಬಿಯ ಶಿರಸ್ಸನ್ನೂ ಶರೀರದಿಂದ ಬೇರ್ಪಡಿಸಿದರು. ಬಳಿಕ ದುರ್ಯೋಧನನು ದ್ರೋಣರ ರಥವನ್ನು ನಡೆಸಲು ಮತ್ತೊಬ್ಬ ಸಾರಥಿಯನ್ನು ಕಳುಹಿಸಿದನು. ನೂತನ ಸಾರಥಿಯು ದ್ರೋಣರ ರಥದಲ್ಲಿದ್ದ ಕುದುರೆಗಳ ಕಡಿವಾಣಗಳನ್ನು ಹಿಡಿದ ನಂತರ ದ್ರೋಣರು ಪುನಃ ಶತ್ರುಗಳ ಮೇಲೆ ದಾಳಿಮಾಡಲು ಉಪಕ್ರಮಿಸಿದರು.

ತಂದೆಯನ್ನು ವಧೆಮಾಡಿದ್ದುದರಿಂದ ಬಹಳ ಕ್ರುದ್ಧನಾಗಿದ್ದ ಕಳಿಂಗ ರಾಜಕುಮಾರನು ಕಳಿಂಗಸೇನಾಸಮೇತನಾಗಿ ಭೀಮಸೇನನನ್ನು ಆಕ್ರಮಿಸಿ ದನು. ಅವನು ಭೀಮನನ್ನು ಮೊದಲು ಐದು ಬಾಣಗಳಿಂದಲೂ ಮತ್ತೊಮ್ಮೆ

ಏಳು ಬಾಣಗಳಿಂದಲೂ ಪ್ರಹರಿಸಿ, ಭೀಮನ ಸಾರಥಿಯಾದ ವಿಶೋಕನನ್ನೂ ಮೂರು ಬಾಣಗಳಿಂದ ಪ್ರಹರಿಸಿದನು. ಮತ್ತೊಂದು ಬಾಣದಿಂದ ಭೀಮ ಸೇನನ ಧ್ವಜವನ್ನು ಕತ್ತರಿಸಿದನು. ಕ್ರುದ್ಧನಾಗಿದ್ದ ಭೀಮಸೇನನು ತನ್ನ ರಥದಿಂದ ಕಳಿಂಗರಾಜಕುಮಾರನ ರಥಕ್ಕೆ ಹಾರಿ ಕ್ರುದ್ಧನಾಗಿದ್ದ ಅವನನ್ನು ಮುಷ್ಟಿ ಯಿಂದಲೇ ಗುದ್ದಿ ಸಂಹರಿಸಿದನು.

ಬಲಿಷ್ಠನಾದ ಭೀಮಸೇನನ ಮುಷ್ಟಿಯಿಂದ ಹತನಾದ ಕಳಿಂಗರಾಜ ಕುಮಾರರ ಶರೀರದಲ್ಲಿದ್ದ ಮೂಳೆಗಳೆಲ್ಲವೂ ಪ್ರತ್ಯೇಕ-ಪ್ರತ್ಯೇಕವಾದ ಚೂರು ಗಳಾಗಿ ಕೆಳಕ್ಕೆ ಬಿದ್ದುವು. ಆ ಕೃತ್ಯವನ್ನು ಕರ್ಣನೂ ಮತ್ತು ಕಳಿಂಗರಾಜ ಕುಮಾರನ ಇತರ ಸಹೋದರರೂ ಸಹಿಸಿಕೊಳ್ಳಲಿಲ್ಲ. ಭೀಮಸೇನನನ್ನು ಮುತ್ತಿ ಸರ್ಪಗಳಂತಿದ್ದ ನಾರಾಚಗಳಿಂದ ಪ್ರಹರಿಸಿದನು. ಭೀಮಸೇನನು ಅವರು ಬಿಡುತ್ತಿದ್ದ ಬಾಣಗಳನ್ನು ಲಕ್ಷ್ಯಕ್ಕೇ ತೆಗೆದುಕೊಳ್ಳದೆ ಶತ್ರುವಿನ ಆ ರಥವನ್ನು ಪರಿತ್ಯಜಿಸಿ ಬಾಣಗಳನ್ನು ಬಿಡುತ್ತಿದ್ದ ಮತ್ತೊಬ್ಬ ಶತ್ರುವಾದ ಧ್ರುವನ ರಥಕ್ಕೆ ಹಾರಿ ಅವನನ್ನೂ ಸಹ ನಿಮೇಷಮಾತ್ರದಲ್ಲಿ ಮುಷ್ಟಿಯಿಂದ ಗುದ್ದಿ ಸಾಯಿಸಿದನು. ಬಲಿಷ್ಠನಾದ ಭೀಮಸೇನನಿಂದ ಪ್ರಹೃತನಾದ ಧ್ರುವನು ಅಸುನೀಗಿ ಕೆಳಗುರುಳಿದನು. ಅಲ್ಲಿಂದ ಮುಂದೆ ಭೀಮಸೇನನು ಧ್ರುವನ ರಥದಿಂದ ಜಯರಾತನ ರಥಕ್ಕೆ ಹಾರಿ ಸಿಂಹನಾದವನ್ನು ಮಾಡಿದನು. ಅನಂತರ ಜಯರಾತನ ತಲೆಯನ್ನು ಎಡಗೈಯಿಂದ ಹಿಡಿದುಕೊಂಡು ಬಲಗೈಯಿನ ಅಂಗೈಯಿನಿಂದ ಅವನನ್ನು ಪ್ರಹರಿಸಿ ಕೊಂದನು. ಅನಂತರ ಭೀಮಸೇನನು ಹಿಂದಿದ್ದ ಸ್ಥಳಕ್ಕೆ ಹೋಗಿ ಕರ್ಣನಿಗೆ ಎದುರಾಗಿಯೇ ನಿಂತು ಕೊಂಡನು. ಒಡನೆಯೇ ಕರ್ಣನು ಸುವರ್ಣಮಯವಾದ ಶಕ್ತ್ಯಾಯುಧದಿಂದ ಭೀಮಸೇನನನ್ನು ಪ್ರಹರಿಸಿದನು. ಭೀಮಸೇನನು ಗಹ-ಗಹಿಸಿ ನಗುತ್ತಾ ಅವನು ಬಿಟ್ಟ ಶಕ್ತ್ಯಾಯುಧವನ್ನು ಹಾಗೆಯೇ ಹಿಡಿದುಕೊಂಡನು. ದುರ್ಧರ್ಷನಾದ ಭೀಮಸೇನನು ಅದೇ ಶಕ್ತ್ಯಾಯುಧವನ್ನೇ ಕರ್ಣನ ಮೇಲೆ ತಿರುಗಿಸಿ ಹೊಡೆದನು. ರಭಸದಿಂದ ಬರುತ್ತಿದ್ದ ಆ ಶಕ್ತ್ಯಾಯುಧವನ್ನು ಶಕುನಿಯು ಎಣ್ಣೆಯನ್ನು ಕುಡಿದಿದ್ದ (ಎಣ್ಣೆಯಲ್ಲಿ ನೆನೆಸಿದ) ಬಾಣದಿಂದ ಕತ್ತರಿಸಿದನು. ಅದ್ಭುತಪರಾಕ್ರಮನಾದ ಭೀಮಸೇನನು ಅದ್ಭುತವಾದ ಪರಮ ಸಾಹಸಕಾರ್ಯವನ್ನು ಮಾಡಿ ತನ್ನ ರಥದಲ್ಲಿ ಕುಳಿತು ಪುನಃ ನಿನ್ನ ಸೈನ್ಯ ವನ್ನು ಮಥಿಸಲು ಉಪಕ್ರಮಿಸಿದನು. ಕ್ರುದ್ಧನಾದ ಯಮರಾಜನೋಪಾದಿ

ಯಲ್ಲಿದ್ದ ಮಹಾಬಾಹುವಾದ ಭೀಮಸೇನನು ಶತ್ರುಗಳನ್ನು ವಧಿಸುವ ಇಚ್ಛೆಯಿಂದ ಬರುತ್ತಿರುವುದನ್ನು ಕಂಡು ಮಹಾರಥರಾದ ನಿನ್ನ ಮಕ್ಕಳು ದೊಡ್ಡದಾದ ಬಾಣಗಳ ವರ್ಷದಿಂದ ಅವನನ್ನು ಮುಚ್ಚುತ್ತಾ ತಡೆದು ನಿಲ್ಲಿಸಿದರು. ಭೀಮಸೇನನು ನಗು-ನಗುತ್ತಲೇ ಬಾಣಗಳಿಂದ *ದುರ್ಮದನ ಸಾರಥಿಯನ್ನೂ ಕುದುರೆಗಳನ್ನೂ ಯಮಾಲಯಕ್ಕೆ ಕಳುಹಿಸಿದನು. ಒಡನೆಯೇ ದುರ್ಮದನು ದುಷ್ಕರ್ಣನೆಂಬ ತನ್ನ ಸಹೋದರನ ರಥವನ್ನು ಹತ್ತಿ ಕುಳಿತನು. ಶತ್ರುತಾಪಿಗಳಾದ, ಒಂದೇ ರಥದಲ್ಲಿ ಕುಳಿತಿದ್ದ, ಸಹೋದರರಾದ ದುರ್ಮದ-ದುಷ್ಕರ್ಣರು ಒಟ್ಟಾಗಿ ಸೇರಿ ಯುದ್ಧಭೂಮಿಯ ಮಧ್ಯದಲ್ಲಿ– ಮಿತ್ರಾವರುಣರು ದೈತ್ಯಶ್ರೇಷ್ಠನಾದ ತಾರಕನ ಮೇಲೆ ಯುದ್ಧಕ್ಕೆ ಹೋದಂತೆ ಭೀಮಸೇನನ ಮೇಲೆ ದಾಳಿಮಾಡಿದರು.

ಅನಂತರ ಒಂದೇ ರಥದಲ್ಲಿ ಕುಳಿತಿದ್ದ ನಿನ್ನ ಮಕ್ಕಳಾದ ದುರ್ಮದ-ದುಷ್ಕರ್ಣರು ಭೀಮಸೇನನನ್ನು ಅನೇಕ ಬಾಣಗಳಿಂದ ಪ್ರಹರಿಸಿದರು. ಅದಕ್ಕೆ ಪ್ರತಿಯಾಗಿ ಅರಿಂದಮನಾದ ಭೀಮಸೇನನು ಕರ್ಣ, ಅಶ್ವತ್ಥಾಮಾ, ದುರ್ಯೋಧನ, ಕೃಪರು, ಸೋಮದತ್ತ, ಬಾಹ್ಲೀಕ–ಇವರೆಲ್ಲರೂ ನೋಡುತ್ತಿದ್ದಂತೆಯೇ ದುರ್ಮದ-ದುಷ್ಕರ್ಣರು ಕುಳಿತಿದ್ದ ರಥವನ್ನು ಕಾಲಿನ ಒದೆತದಿಂದಲೇ ಕೆಳಕ್ಕೆ ಕೆಡವಿದನು. ರಥದೊಡನೆಯೇ ಕೆಳಕ್ಕೆ ಬಿದ್ದ, ಬಲಿಷ್ಠರಾದ, ಶೂರರಾದ ನಿನ್ನ ಮಕ್ಕಳಾದ ದುರ್ಮದ-ದುಷ್ಕರ್ಣರನ್ನು ಕ್ರುದ್ಧನಾದ ಭೀಮಸೇನನು ಮುಷ್ಟಿಪ್ರಹಾರಗಳಿಂದಲೇ ಸಂಹರಿಸಿ ಗರ್ಜನೆಮಾಡಿದನು.

ಭೀಮಸೇನನ ಆ ರೌದ್ರಕರ್ಮವನ್ನು ನೋಡಿ ಕೌರವ ಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. **ರುದ್ರೋಯಂ ಭೀಮರೂಪೇಣ**

---

* ದುರ್ಮದ : ಇವನು ಧೃತರಾಷ್ಟ್ರನ ಮಗ. ಆದರೆ ಇವನ ಸಂಹಾರವು ಹಿಂದೆ ೧೩೫ನೆಯ ಅಧ್ಯಾಯದಲ್ಲೇ ಆಗುತ್ತದೆ. **ದುರ್ಮರ್ಷಣೋ ದುಃಸಹಶ್ಚ ದುರ್ಮದೋ ದುರ್ಧರೋ ಜಯಃ ॥೩೦॥** ಪುನಃ ಇಲ್ಲಿಯೂ ಅವನ ಹೆಸರು ಬಂದಿರುತ್ತದೆ. ಇವನು ಧೃತರಾಷ್ಟ್ರನ ಮಗನಲ್ಲದೇ ಬೇರೆಯವನಿರಬಹುದೆಂಬುದಕ್ಕೂ ಅವಕಾಶವಿಲ್ಲ. **ತತಸ್ತು ದುರ್ಮದಶ್ಚೈವ ದುಷ್ಕರ್ಣಶ್ಚ ತವಾತ್ಮಜೌ ॥೩೭॥** ಎಂಬುದಾಗಿಯೇ ಇಲ್ಲಿದೆ. ಧೃತರಾಷ್ಟ್ರನ ಮಕ್ಕಳ ಪಟ್ಟಿಯಲ್ಲಿ ದುರ್ಮದ ಎಂಬುವನು ಒಬ್ಬನೇ ಇದ್ದಾನೆ. ಇಬ್ಬರಿಲ್ಲ. ಆದುದರಿಂದ ಈ ನ್ಯೂನತೆಯು ಹೇಗೆ ಉಂಟಾಯಿತೆಂಬುದು ತಿಳಿಯದಾಗಿದೆ.

**ಧಾರ್ತರಾಷ್ಟ್ರೇಷು ಯುಧ್ಯತಿ ।**‘ಇವನು ಸಾಕ್ಷಾತ್ ರುದ್ರನೇ ಆಗಿದ್ದಾನೆ. ಆದರೆ ಭೀಮನ ರೂಪವನ್ನು ಧರಿಸಿ ಧೃತರಾಷ್ಟ್ರನ ಮಕ್ಕಳೊಡನೆ ಯುದ್ಧಮಾಡುತ್ತಿದ್ದಾನೆ’–ಎಂಬುದಾಗಿ ರಾಜರು ಪರಸ್ಪರವಾಗಿ ಮಾತನಾಡಿ ಕೊಂಡರು. ಮಹಾರಾಜ! ಹೀಗೆ ಹೇಳಿಕೊಂಡು ರಾಜರೆಲ್ಲರೂ ಬುದ್ಧಿಗೆಟ್ಟವ ರಾಗಿ ಕಂಡ-ಕಂಡ ಕಡೆಗೆ ನಮ್ಮ ವಾಹನಗಳನ್ನು ಓಡಿಸಿಕೊಂಡು ಪಲಾಯನ ಮಾಡುತ್ತಿದ್ದರು. ಇಬ್ಬರು ಸಹ ಒಟ್ಟಾಗಿ ಹೋಗುತ್ತಿರಲಿಲ್ಲ. ರಾತ್ರಿಯ ಆ ಪ್ರಥಮಯಾಮದಲ್ಲಿ ಕೌರವಸೈನಿಕರು ದಿಕ್ಕಾಪಾಲಾಗಿ ಓಡಿಹೋಗುತ್ತಿರ ಲಾಗಿ, ಪಾಂಡವರ ಕಡೆಯ ನೃಪಶ್ರೇಷ್ಠರು ಮಹಾಬಲನಾದ ಭೀಮಸೇನನನ್ನು ಬಹಳವಾಗಿ ಪ್ರಶಂಸಿಸಿದರು. ಶತ್ರುಗಳನ್ನು ಪರಾಜಯಗೊಳಿಸಿ ಬಂದ ಕಮಲಲೋಚನನಾದ ಬಲಿಷ್ಠನಾದ ಭೀಮಸೇನನು ಯುಧಿಷ್ಠಿರನನ್ನು ಅಭಿವಂದಿಸಿದನು. ಯುಧಿಷ್ಠಿರ-ನಕುಲ-ಸಹದೇವರೂ, ದ್ರುಪದ-ವಿರಾ ಟರೂ, ಕೇಕಯರಾಜಕುಮಾರರೂ ಆನಂದತುಂದಿಲರಾಗಿ–ಅಂಧಕಾಸುರ ನನ್ನು ಸಂಹರಿಸಿದನಂತರ ದೇವತೆಗಳೆಲ್ಲರೂ ಸೇರಿ ಹರನನ್ನು ಸಂಪೂಜಿಸಿ ದಂತೆ–ಭೀಮಸೇನನನ್ನು ಗೌರವಿಸಿ ಶ್ಲಾಘಿಸಿದರು. ಅನಂತರ ವರುಣನ ಮಕ್ಕಳ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವನ್ನು ಹೊಂದಿದ್ದ, ರೋಷ ಯುಕ್ತರಾಗಿದ್ದ, ಯುದ್ಧೇಚ್ಛುಗಳಾಗಿದ್ದ ನಿನ್ನ ಮಕ್ಕಳು ಮಹಾತ್ಮರಾದ ದ್ರೋಣರಿಂದಲೂ, ರಥ-ಪದಾತಿ-ಗಜಸೈನ್ಯಗಳಿಂದಲೂ ಕೂಡಿದವರಾಗಿ ಭೀಮಸೇನನನ್ನು ಸುತ್ತುವರಿದು ನಿಂತರು. ದಟ್ಟವಾದ ಕತ್ತಲಿನಿಂದ ಆವೃತ ವಾಗಿದ್ದ, ಮಹಾಭಯಂಕರವಾಗಿದ್ದ ಆ ರಾತ್ರಿಯ ಪ್ರಥಮಯಾಮದಲ್ಲಿ ಭಯದಾಯಕವಾಗಿದ್ದ, ಅತ್ಯಂತಕ್ರೂರವಾಗಿದ್ದ ತೋಳ, ಕಾಗೆ ಮತ್ತು ರಣ ಹದ್ದುಗಳಿಗೆ ಆನಂದದಾಯಕವಾಗಿದ್ದ, ಪರಮಾದ್ಭುತವಾಗಿದ್ದ ಕುರು-ಪಾಂಡವಮಹಾತ್ಮರ ಯುದ್ಧವು ಪುನಃ ಪ್ರಾರಂಭವಾಯಿತು.”

೧೫೫ನೆಯ ಅಧ್ಯಾಯವು ಮುಗಿಯಿತು.

## ಸೋಮದತ್ತ-ಸಾತ್ಯಕಿಯರ ಯುದ್ಧ: ಸೋಮದತ್ತನ ಪರಾಜಯ : ಘಟೋತ್ಕಚಾಶ್ವತ್ಥಾಮರ ಯುದ್ಧ: ಅಶ್ವತ್ಥಾಮನು ಘಟೋತ್ಕಚನ ಪುತ್ರನನ್ನೂ, ಒಂದು ಅಕ್ಷೌಹಿಣೀ ರಾಕ್ಷಸಸೈನ್ಯವನ್ನೂ, ದ್ರುಪದನ ಮಕ್ಕಳನ್ನೂ ಸಂಹರಿಸಿದುದು : ಪಾಂಡವಸೈನ್ಯದ ಪರಾಜಯ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಪ್ರಾಯೋಪವೇಶವ್ರತದಲ್ಲಿದ್ದ ತನ್ನ ಮಗನನ್ನು ಸಾತ್ಯಕಿಯು ಸಂಹರಿಸಲಾಗಿ, ಸೋಮದತ್ತನು ಬಹಳ ಕೋಪದಿಂದ ಶೈನೇಯನನ್ನು ಕುರಿತು ಹೇಳಿದನು :

**ಕ್ಷತ್ರಧರ್ಮಃ ಪುರಾ ದೃಷ್ಟೋ ಯಸ್ತು ದೇವೈರ್ಮಹಾತ್ಮಭಿಃ ।**
**ತಂ ತ್ವಂ ಸಾತ್ವತ ಸಂತ್ಯಜ್ಯ ದಸ್ಯುಧರ್ಮೇ ಕಥಂ ರತಃ ॥೨॥**

"ಸಾತ್ವತ! ಪೂರ್ವಕಾಲದಲ್ಲಿ ಮಹಾತ್ಮರಾದ ದೇವತೆಗಳಿಂದ ಕ್ಷತ್ರ ಧರ್ಮವು ನಿರ್ಣಯಿಸಲ್ಪಟ್ಟಿತು. ಅಂತಹ ಶ್ರೇಷ್ಠಧರ್ಮವನ್ನು ಪರಿತ್ಯಜಿಸಿ ಕಳ್ಳ-ಕಾಕರ ಧರ್ಮವನ್ನು ನೀನು ಹೇಗೆ ಅವಲಂಬಿಸಿದೆ?

**ಪರಾಙ್ಮುಖಾಯ ದೀನಾಯ ನ್ಯಸ್ತಶಸ್ತ್ರಾಯ ಸಾತ್ಯಕೇ ।**
**ಕ್ಷತ್ರಧರ್ಮರತಃ ಪ್ರಾಜ್ಞಃ ಕಥಂ ನು ಪ್ರಹರೇದ್ರಣೇ ॥೩॥**

ಸಾತ್ಯಕಿಯೇ! ಯುದ್ಧದಿಂದ ವಿಮುಖನಾಗಿದ್ದವನನ್ನು, ದೀನನನ್ನು, ಶಸ್ತ್ರಸಂನ್ಯಾಸಮಾಡಿದ್ದವನನ್ನು – ಕ್ಷತ್ರಧರ್ಮದಲ್ಲಿಯೇ ನಿರತನಾದ ಪ್ರಾಜ್ಞನು–ಹೇಗೆ ಪ್ರಹರಿಸುತ್ತಾನೆ?

ಶೈನೇಯ! ವೃಷ್ಣಿವಂಶೀಯರಲ್ಲಿ ಇಬ್ಬರೇ ಇಬ್ಬರು ಮಹಾರಥರೆಂದೂ ಯುದ್ಧವಿಶಾರದರೆಂದೂ ವಿಖ್ಯಾತರಾಗಿದ್ದಾರೆ. ಅವರಿಬ್ಬರಲ್ಲಿ ಪ್ರದ್ಯುಮ್ನ ನೊಬ್ಬನು ; ಎರಡನೆಯವನು ನೀನೇ ಆಗಿರುವೆ. (ಅಂತಹ ನೀನು ಇಂತಹ ಅಕೃತ್ಯವನ್ನು ಹೇಗೆ ಮಾಡಿದೆ?) ಅರ್ಜುನನು ನನ್ನ ಮಗನ ಬಲಗೈಯನ್ನು ಕತ್ತರಿಸಿದನು. ಅನಂತರ ಆ ನನ್ನ ಪುತ್ರನು ಮರಣಾಂತವಾಗಿ ಉಪವಾಸ ವನ್ನು ಕೈಗೊಂಡು ನಿರಾಯುಧನಾಗಿ ಕುಳಿತಿದ್ದನು. ಅಂತಹ ಸಂದರ್ಭ ದಲ್ಲಿ ನೀನು ಅವನ ವಿಷಯದಲ್ಲಿ ಅತ್ಯಂತಕ್ರೂರವೂ ಪತನಹೇತುವೂ

ಆದ ಕಾರ್ಯವನ್ನು ಮಾಡಿರುವೆ. ದುರಾಚಾರನೇ! ಆ ದುಷ್ಕರ್ಮದ ಫಲ ವನ್ನು ಇಂದಿನ ಯುದ್ಧದಲ್ಲಿ ನೀನು ಪಡೆಯಲಿರುವೆ. ಮೂಢನೇ! ಈಗಲೇ ನಾನು ನನ್ನ ಪರಾಕ್ರಮವನ್ನು ಪೂರ್ಣವಾಗಿ ಸಂಯೋಜಿಸಿ ಬಾಣದಿಂದ ನಿನ್ನ ತಲೆಯನ್ನು ಕತ್ತರಿಸಿಬಿಡುತ್ತೇನೆ.

**ಶಪೇ ಸಾತ್ವತ ಪುತ್ರಾಭ್ಯಾಮಿಷ್ಟೇನ ಸುಕೃತೇನ ಚ ।**
**ಅನತೀತಾಮಿಮಾಂ ರಾತ್ರಿಂ ಯದಿ ತ್ವಾಂ ವೀರಮಾನಿನಮ್ ॥೭॥**

**ಅರಕ್ಷ್ಯಮಾಣಂ ಪಾರ್ಥೇನ ಜಿಷ್ಣುನಾ ಸಸುತಾನುಜಮ್ ।**
**ನ ಹನ್ಯಾಂ ನರಕೇ ಘೋರೇ ಪತೇಯಂ ವೃಷ್ಣಿಪಾಂಸನ ॥೮॥**

ವೃಷ್ಣಿಕುಲಕಳಂಕನೇ! ಸಾತ್ವತ! ನಾನು ನನ್ನ ಇಬ್ಬರ ಮಕ್ಕಳ ಮೇಲೆ, ನಾನು ಮಾಡಿರುವ ಇಷ್ಟಾಪೂರ್ತಗಳ ಮೇಲೆ ಮತ್ತು ನನಗೆ ಲಭ್ಯವಾಗಿರುವ ಸುಕೃತದ ಮೇಲೆ ಆಣೆಯಿಟ್ಟು ಹೇಳುತ್ತೇನೆ : ಅರ್ಜುನನು ನಿನ್ನನ್ನು ರಕ್ಷಿಸಲು ಬರದೇ ಇದ್ದ ಪಕ್ಷದಲ್ಲಿ–ನಾನೇ ಲೋಕೈಕವೀರನೆಂದು ಭಾವಿಸಿರುವ ನಿನ್ನನ್ನೂ, ನಿನ್ನ ಮಕ್ಕಳನ್ನೂ, ನಿನ್ನ ಅನುಜರನ್ನೂ ಈ ರಾತ್ರಿಯು ಕಳೆಯುವುದರೊಳಗಾಗಿ ಸಂಹರಿಸದಿದ್ದರೆ ಅತಿಘೋರವಾದ ನರಕದಲ್ಲಿ ಬೀಳುತ್ತೇನೆ. (ನನಗೆ ನರಕಪ್ರಾಪ್ತಿಯಾಗಲಿ.)"

ಮಹಾರಾಜ! ಪುತ್ರಶೋಕದಿಂದ ಅತ್ಯಂತಕ್ರುದ್ಧನಾಗಿದ್ದ ಮಹಾಬಲ ನಾದ ಸೋಮದತ್ತನು ಹೀಗೆ ಹೇಳಿ ತಾರಸ್ವರದಲ್ಲಿ (ಎತ್ತರದ ಧ್ವನಿಯಲ್ಲಿ) ಶಂಖವನ್ನೂದಿ ಸಿಂಹನಾದವನ್ನು ಮಾಡಿದನು. ಅನಂತರ ಕಮಲಪತ್ರಾಕ್ಷ ನಾದ, ಸಿಂಹದಂಷ್ಟ್ರನಾಗಿದ್ದ, ದುರಾಸದನಾಗಿದ್ದ ಸಾತ್ಯಕಿಯು–ಸೋಮ ದತ್ತನು ಹೇಳಿದ ಮಾತುಗಳನ್ನು ಕೇಳಿ ಬಹಳವಾಗಿ ಕೋಪಗೊಂಡು ಅವ ನೊಡನೆ ಹೇಳಿದನು, "ಕೌರವೇಯ! ನಿನ್ನೊಡನೆ ಅಥವಾ ಬೇರೆಯವರೊಡನೆ ಯುದ್ಧಮಾಡಲು ನನ್ನ ಮನಸ್ಸಿನಲ್ಲಿ ಯಾವ ವಿಧವಾದ ಭಯವೂ ಇರುವುದಿಲ್ಲ. ಒಂದು ವೇಳೆ ನೀನು ದುರ್ಯೋಧನನ ಕಡೆಯಲ್ಲಿರುವ ಎಲ್ಲ ಸೈನಿಕರಿಂದಲೂ ರಕ್ಷಿತನಾಗಿ ನನ್ನೊಡನೆ ಯುದ್ಧಮಾಡಿದರೂ ಆಗಲೂ ಸಹ ನಿನ್ನ ಸಂಬಂಧವಾಗಿ ನನಗೆ ಯಾವ ವಿಧವಾದ ವ್ಯಥೆಯೂ ಇಲ್ಲ. (ಆಗಲೂ ನಾನು ಭಯಪಡುವುದಿಲ್ಲ ) ಕ್ಷತ್ರಿಯೋಚಿತವಾದ ಆಚಾರ-ವಿಚಾರಗಳಲ್ಲಿಯೇ ಇರತಕ್ಕ ನನ್ನನ್ನು, ದುಷ್ಟಮನುಷ್ಯರಿಗೆ ಮಾತ್ರವೇ ಹಿಡಿಸತಕ್ಕ, ಯುದ್ಧದ

ವಿಷಯವಾಗಿ ಸಾರಭೂತವಾದ ಮಾತುಗಳನ್ನು ಮಾತ್ರವೇ ಆಡುವ (ಕೃತಿಯಲ್ಲಿ ತೋರಿಸಲಾಗದೇ ಇರುವ ) ನಿನ್ನಿಂದ ಭಯಪಡಿಸಲು ಸಾಧ್ಯವಿಲ್ಲ. ನರಾಧಿಪನೇ! ಈಗ ನಿನಗೆ ನನ್ನೊಡನೆ ಯುದ್ಧಮಾಡಬೇಕೆಂಬ ಇಚ್ಛೆಯುಂಟಾದಲ್ಲಿ ನಿರ್ದಯನಾಗಿ ನಿಶಿತವಾದ ಬಾಣಗಳಿಂದ ನನ್ನನ್ನು ಪ್ರಹರಿಸು. ನಾನೂ ಸಹ ಹಾಗೆಯೇ ನಿನ್ನನ್ನೂ ಪ್ರಹರಿಸುತ್ತೇನೆ.

**ಹತೋ ಭೂರಿಶ್ರವಾ ವೀರಸ್ತವ ಪುತ್ರೋ ಮಹಾರಥಃ ।**
**ಶಲಶ್ಚೈವ ಮಹಾರಾಜ ಭ್ರಾತೃವ್ಯಸನ ಕರ್ಷಿತಃ* ॥೧೫॥**

ಮಹಾರಥನಾದ, ವೀರನಾದ ನಿನ್ನ ಮಗ ಭೂರಿಶ್ರವಸನು ಹತನಾದನು. ಅಣ್ಣನು ಹತನಾದನೆಂಬ ವ್ಯಸನದಿಂದ ದುಃಖಿತನಾಗಿದ್ದ ಶಲನೂ ಹತನಾದನು. ಈಗ ಪುತ್ರ-ಬಂಧುಸಹಿತನಾದ ನಿನ್ನನ್ನೂ ವಧಿಸುತ್ತೇನೆ. ನೀನು ಕುರುವಂಶಸಂಭೂತನಾಗಿರುವೆ ; ಮಹಾರಥನಾಗಿರುವೆ. ಎದುರಾಗಿ ನಿಂತು ಪ್ರಯತ್ನಪೂರ್ವಕವಾಗಿ ನನ್ನೊಡನೆ ಯುದ್ಧಮಾಡು. ಯಾವ ಯುಧಿಷ್ಠಿರನಲ್ಲಿ ದಾನ, ದಮ, ಶೌಚ, ಅಹಿಂಸೆ, ಲಜ್ಜೆ, ಧೈರ್ಯ, ಕ್ಷಮೆ–ಇವೇ ಮೊದಲಾದ ಸದ್ಗುಣಗಳು ನಾಶರಹಿತವಾಗಿ ಸದಾ ಮೂರ್ತಿಮತ್ತಾಗಿ ನೆಲೆಸಿವೆಯೋ–ಮೃದಂಗಕೇತುವಾದ ಯುಧಿಷ್ಠಿರನ ಅಂತಹ ತೇಜಸ್ಸಿನಿಂದಲೇ ನೀನು ಈ ಮೊದಲೇ ವಿನಾಶಹೊಂದಿರುವೆ. ಈಗ ಕರ್ಣ-ಶಕುನಿಗಳೊಡನೆ ಯುದ್ಧದ ನೆಪದಲ್ಲಿ ವಿನಾಶಹೊಂದುವೆ.

**ಶಪೇಽಹಂ ಕೃಷ್ಣಚರಣೈರಿಷ್ಟಾಪೂರ್ತೇನ ಚೈವ ಹಿ ।**
**ಯದಿ ತ್ವಾಂ ಸಸುತಂ ಪಾಪಂ ನ ಹನ್ಯಾಂ ಯುಧಿ ರೋಷಿತಃ ॥೧೬॥**

ನಾನು ಸಹ ಶ್ರೀಕೃಷ್ಣನ ಪಾದಗಳ ಮೇಲೆ ಮತ್ತು ನಾನು ಮಾಡಿದ

---

* ಈ ಶ್ಲೋಕದ ಅಭಿಪ್ರಾಯವು ಭೂರಿಶ್ರವಸನು ಸತ್ತ ಮೇಲೆ ಅದೇ ದುಃಖದಿಂದ ಕೂಡಿದ ಶಲನು ಹತನಾದನು ಎಂಬುದಾಗಿ ಕಾಣುತ್ತದೆ. ಆದರೆ ಶಲನ ವಧೆಯ ಪ್ರಕರಣವು ೧೦೮ನೆಯ ಅಧ್ಯಾಯದಲ್ಲಿಯೇ ಬಂದಿದ್ದು, ದ್ರೌಪದಿಯ ಮಕ್ಕಳಿಂದ ಅವನ ವಧೆಯಾಗುತ್ತದೆ. ಭೂರಿಶ್ರವಸನು ಮರಣಹೊಂದಿದ ವಿಷಯವಾಗಲೀ ಅದರಿಂದ ಕುಪಿತನಾದ ಅಥವಾ ದುಃಖಿತನಾದ ಶಲನು ಅವರೊಡನೆ ಯುದ್ಧಮಾಡಿದನೆಂದಾಗಲೀ ಅಲ್ಲಿರುವುದಿಲ್ಲ. ಯದ್ಯಪಿ ಒಂದೇ ದಿವಸದಲ್ಲಿ ಇಬ್ಬರೂ ಮರಣಹೊಂದಿದ್ದರೂ ಭೂರಿಶ್ರವಸನು ಮರಣಹೊಂದಿದ ಮೇಲೆ ಶಲನು ಮರಣಹೊಂದಿದನೆಂಬುದಕ್ಕೆ ಸಮರ್ಥನೆಯಿಲ್ಲ. ಈ ಶ್ಲೋಕವು ಎಲ್ಲ ಪುಸ್ತಕಗಳಲ್ಲಿಯೂ ಇದೆ.

ಇಷ್ಟಾಪೂರ್ತಗಳ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಕ್ರುದ್ಧನಾದ ನಾನೇ ನಾದರೂ ಪಾಪಿಷ್ಠನಾದ ನಿನ್ನನ್ನು ನಿನ್ನ ಮಗನ ಸಹಿತವಾಗಿ ಯುದ್ಧದಲ್ಲಿ ಸಂಹರಿಸದಿದ್ದರೆ ಸದ್ಗತಿಯನ್ನು ಹೊಂದುವುದಿಲ್ಲ. ಇಷ್ಟು ಆತ್ಮಶ್ಲಾಘನೆ ಮಾಡಿಕೊಳ್ಳುತ್ತಿರುವ ನೀನು ಭಯಪಟ್ಟು ಯುದ್ಧವನ್ನು ಬಿಟ್ಟು ಹೊರಟು ಹೋದರೆ ಆಗ ಮಾತ್ರ ನನ್ನಿಂದ ಬಿಡುಗಡೆಯನ್ನು ಹೊಂದುವೆ."

ಕೋಪದಿಂದ ಕೆಂಪಾದ ಕಣ್ಣುಗಳಿಂದ ಕೂಡಿದ್ದ ಪುರುಷಶ್ರೇಷ್ಠರಾದ ಸೋಮದತ್ತ-ಸಾತ್ಯಕಿಯರು ಅನ್ಯೋನ್ಯವಾಗಿ ಹೀಗೆ ಮಾತನಾಡುತ್ತಾ ಒಬ್ಬರು ಮತ್ತೊಬ್ಬರ ಮೇಲೆ ಬಾಣಗಳನ್ನು ಪ್ರಯೋಗಿಸಲು ಪ್ರಾರಂಭಿಸಿ ದರು. ಅನಂತರ ದುರ್ಯೋಧನನು ಒಂದು ಸಾವಿರ ರಥಗಳಿಂದಲೂ–ಹತ್ತು ಸಾವಿರ ಆನೆಗಳಿಂದಲೂ ಕೂಡಿದವನಾಗಿ ಸೋಮದತ್ತನನ್ನು ಸುತ್ತುವರಿದು ನಿಂತನು. ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ವಜ್ರಕಾಯನಾದ, ಮಹಾಬಾಹು ವಾದ, ಯುವಕನಾದ, ನಿನ್ನ ಭಾವಮೈದುನನಾದ ಶಕುನಿಯು ಕ್ರುದ್ಧನಾಗಿ ತನ್ನ ಮಕ್ಕಳಿಂದಲೂ, ಮೊಮ್ಮಕ್ಕಳಿಂದಲೂ, ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮದಿಂದ ಕೂಡಿದ್ದ ಅನುಜರಿಂದಲೂ ಪರಿವೃತನಾಗಿ ಸೋಮದತ್ತನ ರಕ್ಷಣೆಗಾಗಿ ಅಲ್ಲಿಗೆ ಬಂದನು. ಧೀಮಂತನಾದ ಶಕುನಿಯ ಒಂದು ಲಕ್ಷಕ್ಕೂ ಮೀರಿದ ಕುದುರೆಸವಾರರು ಮಹಾಧನುಷ್ಮಂತನಾದ ಸೋಮದತ್ತನ ಸುತ್ತಲೂ ನಿಂತು ರಕ್ಷಿಸುತ್ತಿದ್ದರು. ಮಹಾಬಲಿಷ್ಠರಾದ ಯೋಧರಿಂದ ಸಂರಕ್ಷಿತನಾಗಿದ್ದ ಸೋಮದತ್ತನು ಸಾತ್ಯಕಿಯನ್ನು ಬಾಣಗಳಿಂದ ಮುಚ್ಚಿಬಿಟ್ಟನು. ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಸಾತ್ಯಕಿಯು ಮುಚ್ಚಲ್ಪಟ್ಟುದನ್ನು ಕಂಡು ಪರಮಕ್ರುದ್ಧನಾದ ಧೃಷ್ಟದ್ಯುಮ್ನನು ದೊಡ್ಡ ಸೈನ್ಯದೊಡನೆ ಸಾತ್ಯಕಿಯ ರಕ್ಷಣೆಗಾಗಿ ಅಲ್ಲಿಗೆ ಬಂದನು. ಆ ಸಮಯದಲ್ಲಿ ಪರಸ್ಪರವಾಗಿ ಪ್ರಹರಿಸುತ್ತಿದ್ದ ಸೈನಿಕರ ಸಮೂಹದಲ್ಲುಂಟಾದ ಕೋಲಾಹಲ ಶಬ್ದವು–ಚಂಡಮಾರುತದಿಂದ ಕ್ಷುಭಿತವಾದ ಸಮುದ್ರದ ಆರ್ಭಟಕ್ಕೆ ಸಮಾನ ವಾಗಿ–ಕೇಳಿಬರುತ್ತಿದ್ದಿತು. ಸೋಮದತ್ತನು ಸಾತ್ಯಕಿಯನ್ನು ಒಂಬತ್ತು ಬಾಣ ಗಳಿಂದ ಪ್ರಹರಿಸಿದನು. ಸಾತ್ಯಕಿಯೂ ಒಂಬತ್ತು ಬಾಣಗಳಿಂದ ಸೋಮದತ್ತನನ್ನು ಪ್ರಹರಿಸಿದನು. ಬಲಿಷ್ಠನಾದ, ದೃಢಧನ್ವನಾದ ಸಾತ್ಯಕಿ ಯಿಂದ ಪ್ರಹೃತನಾದ ಸೋಮದತ್ತನು ಬಹಳವಾಗಿ ಗಾಯಗೊಂಡು ಪ್ರಜ್ಞಾ

ಹೀನನಾಗಿ ಆಸನದ ಪಕ್ಕಕ್ಕೆ ಜರುಗಿ ಬಿದ್ದುಬಿಟ್ಟನು. ಸೋಮದತ್ತನು ಮೂರ್ಛಿತನಾದುದನ್ನು ತಿಳಿದ ಸಾರಥಿಯು ಬಹಳ ತ್ವರೆಯಿಂದ ಮಹಾರಥ ನಾದ ಸೋಮದತ್ತನನ್ನು ರಣಕ್ಷೇತ್ರದಿಂದ ಬಹಳ ದೂರಕ್ಕೆ ಒಯ್ದನು. ಯುಯುಧಾನನ ಬಾಣಗಳಿಂದ ಬಹಳವಾಗಿ ಗಾಯಗೊಂಡ ಸೋಮದತ್ತನು ರಥದಲ್ಲಿ ಮೂರ್ಛಿತವಾಗಿ ಬಿದ್ದುದನ್ನು ನೋಡಿ ಯದುವೀರನನ್ನು ಸಂಹರಿಸಬೇಕೆಂಬ ಇಚ್ಛೆಯಿಂದ ದ್ರೋಣರು ಸಾತ್ಯಕಿಯ ರಥದ ಕಡೆಗೆ ಧಾವಿಸಿದರು.

ದ್ರೋಣರು ಸಾತ್ಯಕಿಯ ಕಡೆಗೆ ರಭಸದಿಂದ ಬರುತ್ತಿರುವುದನ್ನು ಕಂಡು ಯದೂತ್ತಮನಾದ, ಮಹಾತ್ಮನಾದ ಸಾತ್ಯಕಿಯನ್ನು ರಕ್ಷಿಸಬೇಕೆಂಬ ಇಚ್ಛೆ ಯಿಂದ ಯುಧಿಷ್ಠಿರಪುರಸ್ಸರರಾದ ಯೋಧರು ಸಾತ್ಯಕಿಯನ್ನು ಸುತ್ತುವರಿದು ನಿಂತರು. ಮೂರು ಲೋಕಗಳನ್ನೂ ಜಯಿಸುವ ಇಚ್ಛೆಯಿಂದ ಹಿಂದೆ ಬಲಿರಾಜನಿಗೂ ಮತ್ತು ದೇವತೆಗಳಿಗೂ ಯುದ್ಧವಾದಂತೆ–ದ್ರೋಣರಿಗೂ ಮತ್ತು ಪಾಂಡವರಿಗೂ ಭಯಂಕರವಾದ ಸಂಗ್ರಾಮವು ಪ್ರಾರಂಭವಾಯಿತು. ಅನಂತರ ಮಹಾತೇಜಸ್ವಿಗಳಾದ ದ್ರೋಣರು ಬಾಣಗಳ ಸಮೂಹದಿಂದ ಪಾಂಡವರ ಸೈನ್ಯವನ್ನು ಮುಚ್ಚಿ ಯುಧಿಷ್ಠಿರನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದರು. ಅನಂತರ ದ್ರೋಣರು ಸಾತ್ಯಕಿಯನ್ನು ಹತ್ತು ಬಾಣ ಗಳಿಂದಲೂ, ಧೃಷ್ಟದ್ಯುಮ್ನನನ್ನು ಇಪ್ಪತ್ತು ಬಾಣಗಳಿಂದಲೂ, ಭೀಮಸೇನ ನನ್ನು ಎಂಟು ಬಾಣಗಳಿಂದಲೂ, ಶಿಖಂಡಿಯನ್ನು ನೂರು ಬಾಣ ಗಳಿಂದಲೂ, ದ್ರೌಪದಿಯ ಮಕ್ಕಳನ್ನು ಐದೈದು ಬಾಣಗಳಿಂದಲೂ, ಮತ್ಸ್ಯ ರಾಜನಾದ ವಿರಾಟನನ್ನು ಎಂಟು ಬಾಣಗಳಿಂದಲೂ, ದ್ರುಪದನನ್ನು ಹತ್ತು ಬಾಣಗಳಿಂದಲೂ, ಯುಧಾಮನ್ಯುವನ್ನು ಮೂರು ಬಾಣಗಳಿಂದಲೂ, ಉತ್ತಮೌಜಸನನ್ನು ಆರು ಬಾಣಗಳಿಂದಲೂ, ಇತರ ಸೈನಿಕರನ್ನು ನಿಶಿತವಾದ ನೂರಾರು ಬಾಣಗಳಿಂದಲೂ ಪ್ರಹರಿಸಿ ಯುಧಿಷ್ಠಿರನನ್ನು ಆಕ್ರಮಿಸಿದರು. ದ್ರೋಣರಿಂದ ಪ್ರಹೃತರಾದ ಪಾಂಡುಪುತ್ರನ ಸೈನಿಕರು ಆರ್ತನಾದ ಮಾಡುತ್ತಾ ಭಯದಿಂದ ದಿಕ್ಕಾಪಾಲಾಗಿ ಓಡಿಹೋದರು. ದ್ರೋಣರಿಂದ ಪಾಂಡವಸೈನಿಕರು ಮಥಿಸಲ್ಪಡುತ್ತಿರುವುದನ್ನು ಗಮನಿಸಿದ ಅರ್ಜುನನು ಸ್ವಲ್ಪ ಕೋಪಗೊಂಡವನಾಗಿ ಗುರುಗಳಾದ ದ್ರೋಣರ ಕಡೆಗೆ ಅವಸರದಿಂದ ಧಾವಿಸಿದನು. ದ್ರೋಣರನ್ನೆದುರಿಸಲು ಅರ್ಜುನನು ಹೋಗುತ್ತಿರುವುದನ್ನು

ಕಂಡು ಪಲಾಯನಪರಾಯಣವಾಗಿದ್ದ ಯುಧಿಷ್ಠಿರನ ಸೈನ್ಯವು ಪುನಃ ರಣ ಭೂಮಿಗೆ ಹಿಂದಿರುಗಿತು. ದ್ರೋಣರಿಗೂ–ಪಾಂಡವರಿಗೂ ಪುನಃ ಘೋರ ವಾದ ಯುದ್ಧವು ಪ್ರಾರಂಭವಾಯಿತು. ನಿನ್ನ ಮಕ್ಕಳು ಸಸೈನ್ಯರಾಗಿ ದ್ರೋಣ ರನ್ನು ಸುತ್ತುವರಿದು ನಿಂತಿದ್ದರು. ಬೆಂಕಿಯು ಹತ್ತಿಯ ರಾಶಿಯನ್ನು ಕ್ಷಣ ಮಾತ್ರದಲ್ಲಿ ಭಸ್ಮಮಾಡುವಂತೆ–ದ್ರೋಣರು ಪಾಂಡವರ ಸೈನ್ಯಗಳನ್ನು ಧ್ವಂಸ ಮಾಡಿದರು. ಸೂರ್ಯನಂತೆ ಪ್ರಜ್ವಲಿಸುತ್ತಿದ್ದ, ಧಗ-ಧಗಿಸುವ ಯಜ್ಞೇಶ್ವರ ನಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ನಿರಂತರವಾಗಿ ಬಾಣರೂಪ ವಾದ ಕಿರಣಗಳನ್ನು ಹೊರಸೂಸುತ್ತಿದ್ದ, ಸರ್ವದಾ ಮಂಡಲಾಕಾರವಾಗಿಯೇ ಇರುತ್ತಿದ್ದ ಧನುಸ್ಸನ್ನು ಹೊಂದಿದ್ದ, ಮಧ್ಯಾಹ್ನದ ಸೂರ್ಯನಂತೆಯೇ ಪ್ರತಪಿಸುತ್ತಿದ್ದ, ಶತ್ರುಗಳನ್ನು ಬಾಣಾಗ್ನಿಯಿಂದ ಸತತವಾಗಿ ದಹಿಸುತ್ತಿದ್ದ ದ್ರೋಣರನ್ನು ಧರ್ಮರಾಜನ ಸೈನ್ಯದಲ್ಲಿ ಯಾರೊಬ್ಬರೂ ತಡೆಯಲು ಸಮರ್ಥರಾಗಲಿಲ್ಲ.

**ಯೋ ಯೋ ಹಿ ಪ್ರಮುಖೇ ತಸ್ಯ ತಸ್ಥೌ ದ್ರೋಣಸ್ಯ ಪೂರುಷಃ ।**
**ತಸ್ಯ ತಸ್ಯ ಶಿರಶ್ಛಿತ್ವಾ ಯಯುರ್ದ್ರೋಣಶರಾಃ ಕ್ಷಿತಮ್ ॥೪೪॥**

ಯಾವ ಯಾವ ಮನುಷ್ಯನು ದ್ರೋಣರಿಗೆ ಅಭಿಮುಖನಾಗಿ ಯುದ್ಧ ಮಾಡಲು ನಿಲ್ಲುತ್ತಿದ್ದನೋ–ಆಯಾ ಮನುಷ್ಯನ ಶಿರಸ್ಸನ್ನು ಕತ್ತರಿಸಿ ದ್ರೋಣ ರಿಂದ ಬಿಡಲ್ಪಡುತ್ತಿದ್ದ ಬಾಣಗಳು ಭೂಮಿಯ ಮೇಲೆ ಬೀಳುತ್ತಿದ್ದುವು.

ಈ ರೀತಿಯಲ್ಲಿ ಮಹಾತ್ಮರಾದ ದ್ರೋಣರಿಂದ ಸತತವಾಗಿ ಪೀಡಿಸ ಲ್ಪಡುತ್ತಿದ್ದ ಪಾಂಡವರ ಸೈನ್ಯವು ಭಯಗೊಂಡು ಅರ್ಜುನನು ನೋಡುತ್ತಿ ದ್ದಂತೆಯೇ ಪುನಃ ಪಲಾಯನಮಾಡಿತು. ಆ ರಾತ್ರಿಯಲ್ಲಿ ದ್ರೋಣರಿಂದ ಪಾಂಡವರ ಸೈನ್ಯವು ಸಂಪೂರ್ಣವಾಗಿ ಭಗ್ನವಾದುದನ್ನು ನೋಡಿ ಅರ್ಜುನನು ಗೋವಿಂದನಿಗೆ ದ್ರೋಣರ ರಥದ ಕಡೆಗೆ ಹೋಗುವಂತೆ ಹೇಳಿದನು.

ಅನಂತರ ಶ್ರೀಕೃಷ್ಣನು ಬೆಳ್ಳಿ, ಗೋವಿನ ಹಾಲು, ಮಲ್ಲೆಹೂವು ಮತ್ತು ಚಂದ್ರ–ಇವುಗಳಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಕುದುರೆಗಳನ್ನು ದ್ರೋಣರ ರಥದ ಸಮೀಪಕ್ಕೆ ಹೋಗುವಂತೆ ಚಪ್ಪರಿಸಿದನು. ಅರ್ಜುನನು ದ್ರೋಣರ ರಥದ ಸಮೀಪಕ್ಕೆ ಹೋಗುತ್ತಿರುವುದನ್ನು ಕಂಡು ಭೀಮಸೇನನೂ ಸಹ ರಥವನ್ನು ದ್ರೋಣರ ರಥದ ಬಳಿಗೇ ಒಯ್ಯುವಂತೆ

ಸಾರಥಿಗೆ ಹೇಳಿದನು. ವಿಶೋಕನು ಭೀಮಸೇನನ ಮಾತನ್ನು ಕೇಳಿ ಸತ್ಯಸಂಧ ನಾದ ಸವ್ಯಸಾಚಿಯ ರಥದ ಹಿಂಭಾಗದಲ್ಲಿ ತನ್ನ ಕುದುರೆಗಳನ್ನು ನಡೆಸಿ ಕೊಂಡು ಹೋದನು. ಸಹೋದರರಿಬ್ಬರೂ ದ್ರೋಣರ ಸೇನೆಯ ಕಡೆಗೆ ಹೋಗುತ್ತಿರುವುದನ್ನು ಕಂಡು ಪಾಂಚಾಲರು, ಸೃಂಜಯರು, ಚೇದಿಗಳು, ಕಾರೂಷರು, ಕೋಸಲರು, ಕೇಕಯಮಹಾರಥರು–ಇವರೆಲ್ಲರೂ ಭೀಮ-ಪಾರ್ಥರನ್ನು ಅನುಸರಿಸಿ ಹೋದರು. ಅನಂತರ ರೋಮಾಂಚಕರವಾದ, ಬಹಳ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಅರ್ಜುನನು ದ್ರೋಣರ ಬಲಭಾಗವನ್ನೂ–ವೃಕೋದರನು ದ್ರೋಣರ ಎಡಪಾರ್ಶ್ವವನ್ನೂ ಲಕ್ಷ್ಯವನ್ನಾಗಿಟ್ಟುಕೊಂಡು ಯುದ್ಧಮಾಡಲುಪಕ್ರಮಿಸಿದರು. ಆ ಸಮಯದಲ್ಲಿ ಪಾಂಡವರು ದೊಡ್ಡ-ದೊಡ್ಡ ರಥಸಮೂಹಗಳಿಂದ ನಿನ್ನ ಸೈನ್ಯವನ್ನು ಆಕ್ರಮಿಸಿದರು. ಭೀಮಸೇನ-ಧನಂಜಯರು ದ್ರೋಣರೊಡನೆ ಯುದ್ಧದಲ್ಲಿ ತೊಡಗಿರುವುದನ್ನು ಕಂಡು ಧೃಷ್ಟದ್ಯುಮ್ನನೂ–ಮಹಾಬಲನಾದ ಸಾತ್ಯ ಕಿಯೂ ಭೀಮಾರ್ಜುನರನ್ನು ಅನುಸರಿಸಿ ಹೋದರು. ಆ ಸಮಯದಲ್ಲಿ ಪರಸ್ಪರವಾಗಿ ಬಾಣಗಳಿಂದ ಪ್ರಹರಿಸುತ್ತಿದ್ದ ಸೈನ್ಯಸಮೂಹಗಳ ಕೋಲಾಹಲ ಧ್ವನಿಯು ಚಂಡಮಾರುತದಿಂದ ಕ್ಷುಭಿತವಾದ ಸಮುದ್ರದ ಧ್ವನಿಯನ್ನೇ ಅನು ಕರಿಸುತ್ತಿದ್ದಿತು. ಸೋಮದತ್ತನ ಮಗನಾದ ಭೂರಿಶ್ರವಸನನ್ನು ವಧೆಮಾಡಿ ದುದರಿಂದ ಸಾತ್ಯಕಿಯ ವಿಷಯದಲ್ಲಿ ಪರಮಕ್ರುದ್ಧನಾಗಿದ್ದ ಅಶ್ವತ್ಥಾಮನು ರಣಾಂಗಣದಲ್ಲಿ ಸಾತ್ಯಕಿಯಿದ್ದುದನ್ನು ಕಂಡು ಅವನನ್ನು ವಧಿಸಲೇಬೇಕೆಂದು ನಿಶ್ಚಯಿಸಿ ಶೈನೇಯನನ್ನು ಆಕ್ರಮಿಸಿದನು. ಸಾತ್ಯಕಿಯ ರಥದ ಕಡೆಗೆ ರಭಸ ದಿಂದ ಹೋಗುತ್ತಿದ್ದ ಶತ್ರುವಾದ ಅಶ್ವತ್ಥಾಮನನ್ನು ಘಟೋತ್ಕಚನು ಕಂಡು ಬಹಳ ಕ್ರುದ್ಧನಾಗಿ ಅವನನ್ನು ತಡೆದು ನಿಲ್ಲಿಸಿದನು. ಆ ಸಮಯದಲ್ಲಿ ಘಟೋತ್ಕಚನು ಕುಳಿತಿದ್ದ ರಥವು ಕಪ್ಪಾಗಿಯೂ, ಲೋಹಮಯವಾಗಿಯೂ ಮತ್ತು ಮಹಾಭಯಂಕರವಾಗಿಯೂ ಇದ್ದಿತು. ರಥಕ್ಕೆ ಕರಡಿಯ ಚರ್ಮವನ್ನು ಹೊದ್ದಿಸಿದ್ದರು. ಆ ರಥವು ಸುಮಾರು ಮೂವತ್ತು * ನಲ್ವಗಳ ಸುತ್ತಳತೆಯುಳ್ಳದ್ದಾಗಿದ್ದಿತು. ಆ ರಥದಲ್ಲಿ ಯುದ್ಧೋಪಯೋಗಿಗಳಾದ ಯಂತ್ರಗಳೂ ಮತ್ತು ಕವಚಗಳೂ ಇಡಲ್ಪಟ್ಟಿದ್ದುವು. ಮಹಾಮೇಘಗಳ

* ನಲ್ವ : ನಾಲ್ಕು ನೂರು ಮೊಳಗಳ ಉದ್ದದ ಮಾರ್ಗ. ಮೂವತ್ತು ನಲ್ವಗಳ

ಸಮೂಹದಲ್ಲಿ ಉಂಟಾಗುವ ಶಬ್ದದಂತೆ ಘಟೋತ್ಕಚನ ರಥದ ಶಬ್ದವಿದ್ದಿತು. ಆ ರಥಕ್ಕೆ ಆನೆಯಂತೆ ವಿಶಾಲಕಾಯದ ವಾಹನಗಳನ್ನು ಕಟ್ಟಿದ್ದರು. ಆದರೆ ಅವು ಆನೆಗಳೂ ಆಗಿರಲಿಲ್ಲ ; ಕುದುರೆಗಳೂ ಆಗಿರಲಿಲ್ಲ. ಆ ರಥದ ಧ್ವಜದಂಡವು ಬಹಳ ಎತ್ತರವಾಗಿದ್ದಿತು. ಆ ಧ್ವಜವು ರೆಕ್ಕೆಗಳನ್ನು ಕೆದರಿಕೊಂಡು, ಕಾಲುಗಳನ್ನು ಚಾಚಿಕೊಂಡು, ಕಣ್ಣುಗಳನ್ನು ಅರಳಿಸಿಕೊಂಡು, ಕೂಗುತ್ತಿದ್ದ ರಣಹದ್ದಿನಿಂದ ಸುಶೋಭಿತವಾಗಿದ್ದಿತು. ರಕ್ತದಿಂದ ತೋಯ್ದು ಹೋಗಿದ್ದ ಪತಾಕೆಯಿಂದ ಕೂಡಿದ್ದ ಆ ರಥವು ಕರುಳಿನಮಾಲೆಯಿಂದ ಸಮಲಂಕೃತವಾಗಿದ್ದಿತು. ಎಂಟು ಚಕ್ರಗಳಿಂದ ಕೂಡಿದ ಅತಿ ವಿಶಾಲವಾದ ಆ ರಥದಲ್ಲಿ ಘಟೋತ್ಕಚನು ಕುಳಿತು ಶೂಲ-ಮುದ್ಗರಗಳೇ ಮೊದಲಾದ ಆಯುಧಗಳನ್ನೂ, ಶೈಲ-ವೃಕ್ಷಗಳನ್ನೂ ಕೈಯಲ್ಲಿ ಧರಿಸಿದ್ದ, ಘೋರರೂಪಿಗಳಾದ ರಾಕ್ಷಸರಿಂದ ಕೂಡಿದ್ದ ಅಕ್ಷೌಹಿಣೀಸೈನ್ಯಸಮೇತನಾಗಿ ದ್ರೌಣಿಯನ್ನು ತಡೆದನು. ಪ್ರಳಯಕಾಲದಲ್ಲಿ ದಂಡಪಾಣಿಯಾಗಿ ಬರುವ ಅಂತಕನಂತೆ ಧನುಸ್ಸನ್ನೆತ್ತಿಕೊಂಡು ಘಟೋತ್ಕಚನು ಬರುತ್ತಿರುವುದನ್ನು ನೋಡಿದೊಡನೆಯೇ ನಿನ್ನ ಕಡೆಯ ಅನೇಕರಾಜರು ವ್ಯಥಿತರಾದರು.

ಘಟೋತ್ಕಚನು ಪರ್ವತಶಿಖರಸದೃಶನಾಗಿದ್ದನು. ಭಯಂಕರ ಸ್ವರೂಪನಾಗಿದ್ದನು. ಶತ್ರುಗಳ ಮನಸ್ಸಿನಲ್ಲಿ ಭಯವನ್ನುಂಟುಮಾಡುತ್ತಿದ್ದನು. ಅವನಿಗೆ ಉಬ್ಬಿದ ಕೋರೆದಾಡೆಗಳಿದ್ದು ಅವನ ಮುಖವು ಅತ್ಯುಗ್ರವಾಗಿ ಕಾಣುತ್ತಿದ್ದಿತು. ಕಿವಿಗಳು ಗೂಟದಂತೆ ಎತ್ತರವಾಗಿ ಹೊರಚಾಚಿದ್ದುವು. ದವಡೆಗಳು ಬಹಳ ಅಗಲವಾಗಿದ್ದುವು. ಕೂದಲುಗಳು ನಿಮಿರಿನಿಂತಿದ್ದುವು. ಅವನಿಗೆ ವಿರೂಪವಾದ ಕಣ್ಣುಗಳಿದ್ದುವು. ಅವನ ಮುಖವು ಯಜ್ಞೇಶ್ವರನಂತೆಯೇ ಪ್ರಜ್ವಲಿಸುತ್ತಿದ್ದಿತು. ಅವನು ಆಳವಾದ ಹೊಟ್ಟೆಯಿಂದ ಕೂಡಿದ್ದನು. ಕುತ್ತಿಗೆಯ ನಾಳವು ದೊಡ್ಡದಾದ ಹಗೇವಿನಂತೆಯೇ ಇದ್ದಿತು. ಅವನು ತನ್ನ ತಲೆಯನ್ನು ಕಿರೀಟದಿಂದ ಮುಚ್ಚಿಕೊಂಡಿದ್ದನು. ಬಾಯ್ದೆರೆದ ಅಂತಕನಂತೆಯೇ ಇದ್ದ ಘಟೋತ್ಕಚನು ಸರ್ವಪ್ರಾಣಿಗಳಿಗೂ ಭಯವನ್ನುಂಟುಮಾಡುವವನಾಗಿದ್ದನು. ಪ್ರಜ್ವಲಿಸುವ

---

ಅಂತರವೆಂದರೆ ಹನ್ನೆರಡು ಸಾವಿರ ಮೊಳಗಳ ಸುತ್ತಳತೆಯಿಂದ ಕೂಡಿದ ರಥ-ನಲ್ವಃ ಕಿಷ್ಕುಚತುಃಶತಮ್ (ಅಮರಃ)

ಅಗ್ನಿಯೋಪಾದಿಯಲ್ಲಿ ಶತ್ರುಗಳನ್ನು ವಿಕ್ಷೋಭಗೊಳಿಸುವ, ದೊಡ್ಡದಾದ ಧನುಸ್ಸನ್ನೆತ್ತಿಕೊಂಡು ಬರುತ್ತಿದ್ದ, ರಾಕ್ಷಸೇಂದ್ರನಾದ ಘಟೋತ್ಕಚನನ್ನು ನೋಡಿ–ವಾಯುವಿನಿಂದ ಕದಡಲ್ಪಟ್ಟ ಸುಳಿಯಿಂದ ಕೂಡಿದ ಮತ್ತು ಎತ್ತರ ವಾದ ಅಲೆಗಳುಳ್ಳ ಗಂಗಾನದಿಯು ಕ್ಷೋಭೆಗೊಳ್ಳುವಂತೆ–ನಿನ್ನ ಮಗನ ಸೈನ್ಯವು ಭಯಗೊಂಡು ಕ್ಷುಭಿತವಾಯಿತು (ತಳಮಳಗುಟ್ಟಿತು). ಘಟೋ ತ್ಕಚನು ಮಾಡಿದ ಸಿಂಹನಾದದಿಂದಲೇ ಭಯಗೊಂಡ ಆನೆಗಳು ಮೂತ್ರ ವಿಸರ್ಜನೆಮಾಡಿದುವು. ಸೈನಿಕರು ಬಹಳ ವ್ಯಥಿತರಾದರು. ಸಂಧ್ಯಾಕಾಲದಲ್ಲಿ ಅಧಿಕವಾದ ಬಲವನ್ನು ಹೊಂದಿದ್ದ ರಾಕ್ಷಸರಿಂದ ಪ್ರಮುಕ್ತವಾದ ದೊಡ್ಡ ಅಶ್ಮವೃಷ್ಟಿಯು ಆ ರಣಾಂಗಣದ ಸುತ್ತಲೂ ಸುರಿಯಿತು. ಲೋಹದ ಚಕ್ರ ಗಳು, ಭುಶುಂಡಿಗಳು, ಪ್ರಾಸ-ತೋಮರಗಳು, ಶೂಲಗಳು, ಶತಘ್ನಿಗಳು, ಪಟ್ಟಿಶಗಳು ಸತತವಾಗಿ ಕೌರವರ ಸೈನ್ಯದ ಮೇಲೆ ಬೀಳುತ್ತಿದ್ದುವು. ಉಗ್ರವಾಗಿದ್ದ ಮತ್ತು ಬಹಳ ಭಯಂಕರವಾಗಿದ್ದ ಆ ಯುದ್ಧವನ್ನು ನೋಡಿ ನಿನ್ನ ಕಡೆಯ ರಾಜರೂ, ಮಕ್ಕಳೂ, ಕರ್ಣನೂ ನೋಡಿ ವ್ಯಥಿತರಾದರು ಮತ್ತು ದಿಕ್ಕು-ದಿಕ್ಕುಗಳಿಗೂ ಓಡಿಹೋದರು. ತನಗಿರುವ ಅಸ್ತ್ರಬಲದ ಮೇಲೆ ಬಹಳ ಅಭಿಮಾನವನ್ನಿಟ್ಟುಕೊಂಡಿದ್ದ ಮಾನಿಯಾದ ಅಶ್ವತ್ಥಾಮನೊಬ್ಬನು ಮಾತ್ರ ಸತತವಾಗಿ ಬೀಳುತ್ತಿದ್ದ ರಾಕ್ಷಸರ ಆಯುಧಗಳಿಂದ ಸಂಭ್ರಾಂತ ನಾಗಲಿಲ್ಲ. ಘಟೋತ್ಕಚನಿರ್ಮಿತವಾಗಿದ್ದ ಮಾಯೆಯನ್ನು ಬಾಣಗಳಿಂದ ಧ್ವಂಸಗೊಳಿಸಿದನು. ತನ್ನ ಮಾಯೆಯನ್ನು ಅಶ್ವತ್ಥಾಮನು ನಾಶಗೊಳಿಸಿದು ದನ್ನು ಘಟೋತ್ಕಚನು ಸಹಿಸಿಕೊಳ್ಳಲಿಲ್ಲ. ಘೋರತರವಾದ ಬಾಣಗಳನ್ನು ಅಶ್ವತ್ಥಾಮನ ಮೇಲೆ ಪ್ರಯೋಗಿಸಿದನು. ಆ ಬಾಣಗಳು ಅಶ್ವತ್ಥಾಮನನ್ನು ಪ್ರವೇಶಿಸಿದುವು. ಕ್ರೋಧಾಭಿಭೂತವಾದ ಸರ್ಪಗಳು ಬಹಳ ವೇಗವಾಗಿ ಹುತ್ತವನ್ನು ಹೊಗುವಂತೆ–ಸುವರ್ಣಮಯವಾದ ಮೂಲಭಾಗವನ್ನು ಹೊಂದಿದ್ದ ಮಸೆಗಲ್ಲಿನಿಂದ ಚೂಪಾಗಿ ಮಾಡಲ್ಪಟ್ಟಿದ್ದ ಘಟೋತ್ಕಚನ ಬಾಣ ಗಳು ಕೃಪಿಯ ಮಗನಾದ ಅಶ್ವತ್ಥಾಮನನ್ನು ಭೇದಿಸಿಕೊಂಡು ರಕ್ತದಿಂದ ಸಂಪೂರ್ಣವಾಗಿ ನೆನೆಸಲ್ಪಟ್ಟು ಬಹಳ ಶೀಘ್ರವಾಗಿ ಭೂಮಿಯನ್ನು ಹೊಕ್ಕುವು. ಲಘುಹಸ್ತನಾದ, ಪ್ರತಾಪವಂತನಾದ ಅಶ್ವತ್ಥಾಮನು ಬಹಳ ಕ್ರುದ್ಧನಾಗಿ ಅತ್ಯಂತಕುಪಿತನಾಗಿದ್ದ ಘಟೋತ್ಕಚನನ್ನು ಹತ್ತು ಬಾಣ

ಗಳಿಂದ ಪ್ರಹರಿಸಿದನು. ಅಶ್ವತ್ಥಾಮನಿಂದ ಪ್ರಹೃತನಾಗಿ ಮರ್ಮಸ್ಥಳಗಳಲ್ಲಿ ಬಹಳವಾಗಿ ಗಾಯಗೊಂಡಿದ್ದ ಘಟೋತ್ಕಚನು ಬಹಳ ವ್ಯಥಿತನಾಗಿ ಒಂದು ಲಕ್ಷ ಅರೆಕಾಲುಗಳನ್ನು (ಕೋನಗಳನ್ನು) ಹೊಂದಿದ್ದ, ಬಾಲಸೂರ್ಯನ ಕಾಂತಿಯಂತೆ ಕಾಂತಿಯುಕ್ತವಾಗಿದ್ದ, ಮಣಿಗಳಿಂದಲೂ–ವಜ್ರಗಳಿಂದಲೂ ಸಮಲಂಕೃತವಾಗಿದ್ದ, ಚೂಪಾದ ಅಂತ್ಯಭಾಗದಿಂದ ಕೂಡಿದ್ದ ಚಕ್ರವನ್ನು ಕೈಗೆತ್ತಿಕೊಂಡನು. ಅಶ್ವತ್ಥಾಮನನ್ನು ಸಂಹರಿಸುವ ಆಶಯದಿಂದ ಭೈಮ ಸೇನಿಯು ಆ ಮಹಾಚಕ್ರವನ್ನು ದ್ರೌಣಿಯ ಮೇಲೆ ರಭಸದಿಂದ ಪ್ರಯೋಗಿ ಸಿದನು. ಅತ್ಯಂತವೇಗದಿಂದ ಅಶ್ವತ್ಥಾಮನ ಕಡೆಗೆ ಬಂದ ಆ ಮಹಾಚಕ್ರವು ದ್ರೌಣಿಯ ಬಾಣಗಳಿಂದ ಬಹಳ ದೂರಕ್ಕೆ ಎಸೆಯಲ್ಪಟ್ಟು–ನಿರ್ಭಾಗ್ಯನಾದ ವನ ಸಂಕಲ್ಪವು ನಿಷ್ಫಲವಾಗುವಂತೆ–ನಿಷ್ಫಲವಾಗಿ ಭೂಮಿಯ ಮೇಲೆ ಬಿದ್ದಿತು. ತಾನು ಪ್ರಯೋಗಿಸಿದ ಮಹಾಚಕ್ರವು ಅಶ್ವತ್ಥಾಮನಿಂದ ನಿಷ್ಫಲ ಗೊಳಿಸಲ್ಪಟ್ಟುದನ್ನು ನೋಡಿ ಘಟೋತ್ಕಚನು ರಾಹುವು ಸೂರ್ಯನನ್ನು ಮುಚ್ಚಿಬಿಡುವಂತೆ ಅಶ್ವತ್ಥಾಮನನ್ನು ಬಾಣಗಳಿಂದ ಮುಚ್ಚಿದನು. ಆ ವೇಳೆಗೆ ಸರಿಯಾಗಿ ಘಟೋತ್ಕಚನ ಮಗನಾದ, ಭಿನ್ನವಾದ ಕಾಡಿಗೆಯ ಸಮೂಹ ದಂತೆ ಕಾಣುತ್ತಿದ್ದ, ಶ್ರೀಮಂತನಾದ, ಅಂಜನಪರ್ವನು–ಅದ್ರಿರಾಜನಾದ ಹಿಮಾಲಯನು ಚಂಡಮಾರುತವನ್ನು ತಡೆದು ನಿಲ್ಲಿಸುವಂತೆ– ಅಶ್ವತ್ಥಾಮ ನನ್ನು ತಡೆದು ನಿಲ್ಲಿಸಿದನು. ಭೀಮಸೇನನ ಪೌತ್ರನಾದ ಅಂಜನಪರ್ವನ ಬಾಣಗಳಿಂದ ಆಚ್ಛಾದಿತನಾದ ಅಶ್ವತ್ಥಾಮನು–ಮೇಘದ ಜಲಧಾರೆಗಳಿಂದ ಆವೃತವಾದ ಮೇರುಪರ್ವತದಂತೆಯೇ–ಪ್ರಕಾಶಿಸಿದನು. ರುದ್ರ, ಉಪೇಂದ್ರ (ವಿಷ್ಣು) ಮತ್ತು ಇಂದ್ರರಿಗೆ ಸಮಾನವಿಕ್ರಮನಾದ ಅಶ್ವತ್ಥಾಮನು ಸ್ವಲ್ಪವಾದರೂ ಗಾಬರಿಗೊಳ್ಳದೇ ಅಂಜನಪರ್ವನ ಧ್ವಜವನ್ನು ಒಂದೇ ಬಾಣದಿಂದಲೇ ಕತ್ತರಿಸಿದನು. ಎರಡು ಬಾಣಗಳಿಂದ ಅವನ ಇಬ್ಬರು ಸಾರಥಿಗಳನ್ನು ಸಂಹರಿಸಿ ಮೂರು ಬಾಣಗಳಿಂದ ರಥದ ಮೂಕಿಯನ್ನೂ, ಒಂದು ಬಾಣದಿಂದ ಅಂಜನಪರ್ವನ ಧನುಸ್ಸನ್ನೂ ಕತ್ತರಿಸಿ, ಪುನಃ ನಾಲ್ಕು ಬಾಣಗಳಿಂದ ರಥದ ಕುದುರೆಗಳನ್ನೂ ಸಂಹರಿಸಿದನು. ರಥಹೀನನಾಗಿದ್ದ ಅಂಜನಪರ್ವನು ಕೈಯಿಂದ ಹಿಡಿದೆತ್ತಿದ್ದ, ಸುವರ್ಣಬಿಂದು ಗಳಿಂದ ಸಮಲಂಕೃತವಾಗಿದ್ದ ಖಡ್ಗವನ್ನೂ ಅಶ್ವತ್ಥಾಮನು ಸುತೀಕ್ಷ್ಣವಾದ

ಬಾಣದಿಂದ ಎರಡಾಗಿ ಕತ್ತರಿಸಿದನು. ಹಿಡಿಂಬೆಯ ಮೊಮ್ಮಗನಿಂದ ಬಹಳ ಶೀಘ್ರವಾಗಿ ಅಶ್ವತ್ಥಾಮನ ಕಡೆಗೆ ಎಸೆಯಲ್ಪಟ್ಟ, ಸುವರ್ಣಮಯವಾದ ಆಭರಣಗಳಿಂದ ಸಮಲಂಕೃತವಾಗಿದ್ದ ಗದೆಯೂ ಸಹ ದ್ರೌಣಿಯೂ ಬಿಟ್ಟ ಬಾಣಗಳಿಂದ ವಿಧ್ವಸ್ತವಾಯಿತು. ಒಡನೆಯೇ ಅಂಜನಪರ್ವನು ಅಂತರಿಕ್ಷಕ್ಕೆ ಹಾರಿ ಕಾಲಮೇಘದಂತೆಯೇ ಗರ್ಜನೆಮಾಡುತ್ತಾ ಆಕಾಶದಿಂದ ವೃಕ್ಷಗಳ ಮಳೆಯನ್ನೇ ಅಶ್ವತ್ಥಾಮನ ಮೇಲೆ ಸುರಿಸಿದನು. ಅನಂತರ ಅಶ್ವತ್ಥಾಮನು ಮಾಯಾಧರನಾದ (ಮಾಯಾವಿಯಾದ) ಆಕಾಶದಲ್ಲಿದ್ದ ಅಂಜನಪರ್ವನನ್ನು–ಸೂರ್ಯನು ತನ್ನ ಕಿರಣಗಳಿಂದ ಮೇಘಗಳನ್ನು ಭೇದಿಸುವಂತೆ ಬಾಣಗಳಿಂದ ಗಾಯಗೊಳಿಸಿದನು. ಬಳಿಕ ಅಂಜನಪರ್ವನು ಆಕಾಶದಿಂದಿಳಿದು ಸುವರ್ಣಭೂಷಿತವಾದ ರಥದಲ್ಲಿ ಕುಳಿತು ಅಶ್ವತ್ಥಾಮನ ಎದುರಿನಲ್ಲೇ ಉಪಸ್ಥಿತನಾದನು. ಆ ಸಮಯದಲ್ಲವನು ಭೂಮಿಯ ಮೇಲಿಳಿದ ಅತ್ಯುಗ್ರವಾದ ಕಾಂತಿಯುಕ್ತವಾದ ಕಾಡಿಗೆಯ ಬೆಟ್ಟದಂತೆಯೇ ಕಾಣುತ್ತಿದ್ದನು. ಭೀಮನ ಮೊಮ್ಮಗನಾದ, ಲೋಹಮಯವಾದ ಕವಚವನ್ನು ಧರಿಸಿದ್ದ ಅಂಜನಪರ್ವನನ್ನು ಅಶ್ವತ್ಥಾಮನು–ಈಶ್ವರನು ಅಂಧಕಾಸುರನನ್ನು ಸಂಹರಿಸಿದಂತೆ–ಸಂಹರಿಸಿದನು.

ಮಹಾಬಲಿಷ್ಠನಾದ ತನ್ನ ಮಗನು ಅಶ್ವತ್ಥಾಮನಿಂದ ಹತನಾದುದನ್ನು ಕಂಡು ಥಳ-ಥಳಿಸುತ್ತಿದ್ದ ಅಂಗದಾಭರಣಗಳನ್ನು ಧರಿಸಿದ್ದ ಘಟೋತ್ಕಚನು ರೋಷಾವಿಷ್ಟನಾಗಿ ಅಶ್ವತ್ಥಾಮನ ಸಮೀಪಕ್ಕೆ ಹೋಗಿ ಸರ್ವತ್ರ ವ್ಯಾಪ್ತವಾದ ದಾವಾಗ್ನಿಯಂತೆ, ಪಾಂಡವರ ಸೈನ್ಯವನ್ನು ದಹಿಸುತ್ತಿದ್ದ, ವೀರನಾದ, ಕೃಪಿಯ ಮಗನಾದ ಅಶ್ವತ್ಥಾಮನನ್ನು ಕುರಿತು ಸ್ವಲ್ಪವಾದರೂ ಗಾಬರಿಗೊಳ್ಳದೆ ಈ ಮಾತುಗಳನ್ನು ಹೇಳಿದನು :

"ಅಶ್ವತ್ಥಾಮನೇ! ನಿಲ್ಲು ; ನಿಲ್ಲು. ಜೀವಸಹಿತನಾಗಿ ನೀನು ನನ್ನಿಂದ ತಪ್ಪಿಸಿಕೊಂಡು ಹೋಗಲಾರೆ. ಅಗ್ನಿಯ ಮಗನಾದ ಕಾರ್ತಿಕೇಯನು ಕ್ರೌಂಚ ಪರ್ವತವನ್ನು ಸೀಳಿದಂತೆ–ನಾನು ಈಗಲೇ ನಿನ್ನನ್ನು ಕೊಂದುಬಿಡುತ್ತೇನೆ."

"ಅಮರವಿಕ್ರಮನೇ! ಹೈಡಿಂಬನೇ! ನೀನು ಇಲ್ಲಿಂದ ಹೊರಟು ಹೋಗು. ಬೇರೆ ಯಾರೊಡನೆಯಾದರೂ ಯುದ್ಧಮಾಡು. ಮಗನೊಡ

ನೆಯೇ ತಂದೆಯೂ ಹೋಗುವುದು ನ್ಯಾಯವಾಗಿ ಕಾಣುವುದಿಲ್ಲ. ನಿನ್ನ ವಿಷಯದಲ್ಲಿ ನನಗೆ ಯಾವ ವಿಧವಾದ ರೋಷವೂ ಇರುವುದಿಲ್ಲ. **ರೋಷಾನ್ವಿತೋ ಜನ್ತುರ್ಹನ್ಯಾದಾತ್ಮಾನಮಪ್ಯುತ ।** ಆದರೆ ರೋಷಾ ವಿಷ್ಟನಾಗಿ ಮನುಷ್ಯನು ಆತ್ಮಘಾತವನ್ನೂ ಮಾಡಿಕೊಳ್ಳಬಹುದು. (ಇತರ ವಿಷಯದಲ್ಲಿ ಹೇಳತಕ್ಕದ್ದೇನಿದೆ? ಆದುದರಿಂದ ನನ್ನನ್ನು ಕೋಪಗೊಳ್ಳುವಂತೆ ಮಾಡಬೇಡ.)"

ಮಹಾರಾಜ! ಅಶ್ವತ್ಥಾಮನು ಹೇಳಿದ ಮಾತನ್ನು ಕೇಳಿ ಪುತ್ರಶೋಕ ದಿಂದ ಪೀಡಿತನಾಗಿದ್ದ, ಕೋಪದಿಂದ ಕೆಂಗಣ್ಣನಾಗಿದ್ದ ಘಟೋತ್ಕಚನು ಹೇಳಿದನು :

"ದ್ರೋಣಪುತ್ರ! ಹೀಗೇಕೆ ಮಾತನಾಡುತ್ತಿರುವೆ? ನಾನು ಯುದ್ಧದಲ್ಲಿ ನೀಚಪುರುಷನಂತೆ ಹೇಡಿಯಾಗಿ ವರ್ತಿಸುತ್ತಿರುವೆನೇ? ನನ್ನನ್ನು ಮಾತುಗಳಿಂದಲೇ ಭಯಪಡಿಸುತ್ತಿರುವೆ. ನಿಶ್ಚಯವಾಗಿಯೂ ನಿನ್ನ ಮಾತು ಗಳು ಸತ್ಪುರುಷರು ಆಡತಕ್ಕ ಮಾತುಗಳಾಗಿರುವುದಿಲ್ಲ. ನಾನು ಸುಪ್ರಸಿದ್ಧ ವಾದ ಕುರುಕುಲದಲ್ಲಿ ಭೀಮಸೇನನಿಂದ ಹುಟ್ಟಿದವನಾಗಿದ್ದೇನೆ. ಯುದ್ಧದಲ್ಲಿ ಹಿಂದಿರುಗದೇ ಇರತಕ್ಕ ಪಾಂಡವರಿಗೆ ನಾನು ಪುತ್ರನಾಗಿರುತ್ತೇನೆ. ಬಲದಲ್ಲಿ ದಶಗ್ರೀವನಿಗೆ ಸಮಾನನೆನಿಸಿರುವ ನಾನು ರಾಕ್ಷಸರೆಲ್ಲರಿಗೂ ರಾಜನಾಗಿರು ತ್ತೇನೆ. ನಿಲ್ಲು ; ದ್ರೋಣಪುತ್ರ! ಅಲ್ಲಿಯೇ ನಿಲ್ಲು. ಜೀವಸಹಿತವಾಗಿ ನನ್ನಿಂದ ನೀನಿಂದು ತಪ್ಪಿಸಿಕೊಂಡು ಹೋಗಲಾರೆ. ಇಂದಿನ ಯುದ್ಧದಲ್ಲಿ ನಾನು ನಿನಗಿರುವ ಯುದ್ಧಶ್ರದ್ಧೆಯನ್ನೇ ತೊಡೆದುಹಾಕುತ್ತೇನೆ."

ಮಹಾರಾಜ! ಮಹಾಬಲನಾದ, ಕ್ರೋಧದಿಂದ ಕೆಂಪಾಗಿ ತಿರುಗುತ್ತಿದ್ದ ಕಣ್ಣುಗಳನ್ನು ಹೊಂದಿದ್ದ, ರಾಕ್ಷಸನಾದ ಘಟೋತ್ಕಚನು ಹೀಗೆ ಹೇಳಿ– ಸಿಂಹವು ಸಲಗದ ಮೇಲೆ ಬೀಳಲು ಹೋಗುವಂತೆ–ದ್ರೌಣಿಯ ಮೇಲೆ ಬಿದ್ದನು. ಮೋಡವು ಪರ್ವತದ ಮೇಲೆ ಜಲಧಾರೆಯನ್ನು ಸುರಿಸುವಂತೆ– ಘಟೋತ್ಕಚನು ರಥದ ಅಚ್ಚುಮರದ ಗಾತ್ರವಿದ್ದ ಬಾಣಗಳನ್ನು ರಥಶ್ರೇಷ್ಠ ನಾದ ಅಶ್ವತ್ಥಾಮನ ಮೇಲೆ ಸುರಿಸಿದನು. ಆ ಮಹಾಬಾಣಗಳು ತನ್ನ ಸಮೀಪಕ್ಕಿನ್ನೂ ಬರುವ ಮೊದಲೇ ಅಶ್ವತ್ಥಾಮನು ನಿಶಿತವಾದ ಬಾಣಗಳಿಂದ ಅವನ್ನು ವಿನಾಶಗೊಳಿಸಿದನು. ಆ ಸಮಯದಲ್ಲಿ ಆಕಾಶದಲ್ಲಿ ಅಶ್ವತ್ಥಾಮ-

ಘಟೋತ್ಕಚರ ಬಾಣಗಳ ಸತತವಾದ ಸಂಘರ್ಷಣೆಯಿಂದಾಗಿ ಬಾಣಗಳ ಮತ್ತೊಂದು ಸಂಗ್ರಾಮವೇನಾದರೂ ಆಕಾಶದಲ್ಲಿ ನಡೆಯುತ್ತಿರುವುದೋ– ಎಂಬಂತೆ ಭಾಸವಾಗುತ್ತಿದ್ದಿತು.

ಆಕಾಶದಲ್ಲಿ ನಡೆಯುತ್ತಿದ್ದ ಬಾಣಗಳ ಸಂಘರ್ಷಣದಿಂದ ಬೆಂಕಿಯ ಕಿಡಿಗಳು ಹುಟ್ಟಿಕೊಂಡು ಆಕಾಶವೇ ಪ್ರಕಾಶಿಸುತ್ತಿದ್ದಿತು. ರಾತ್ರಿಯ ಆ ಪ್ರಥಮಯಾಮದಲ್ಲಿ ಆಕಾಶವೆಲ್ಲವೂ ಮಿಂಚುಹುಳುಗಳಿಂದ ಚಿತ್ರಿತವಾಗಿರು ವಂತೆ ಕಾಣುತ್ತಿದ್ದಿತು. ಯುದ್ಧಾಭಿಮಾನಿಯಾದ ಅಶ್ವತ್ಥಾಮನಿಂದ ತನ್ನ ಮಾಯೆಯು ವಿನಾಶಹೊಂದಿದುದನ್ನು ನೋಡಿ ಘಟೋತ್ಕಚನು ಅಂತರ್ಹಿತನಾಗಿ ಪುನಃ ಮಾಯೆಯನ್ನು ಸೃಷ್ಟಿಸಿದನು. ಘಟೋತ್ಕಚನು ಶಿಖರ ಗಳಿಂದಲೂ ಮತ್ತು ವೃಕ್ಷಗಳಿಂದಲೂ ಕೂಡಿದ ದೊಡ್ಡ ಪರ್ವತವಾಗಿಬಿಟ್ಟನು. ಶೂಲ, ಪ್ರಾಸ, ಕತ್ತಿ, ಮುಸಲ–ಇವೇ ಮೊದಲಾದ ಆಯುಧಗಳು ಆ ಪರ್ವತದ ಮೇಲಿನಿಂದ ಜಲಧಾರೆಯಂತೆ ಕೆಳಕ್ಕೆ ಹರಿಯುತ್ತಿದ್ದುವು. ಅಶ್ವತ್ಥಾಮನು ಅಂಜನಪರ್ವತಕ್ಕೆ ಸಮಾನವಾಗಿದ್ದ ಮಾಯಾನಿರ್ಮಿತವಾದ ಪರ್ವತವನ್ನೂ ಮತ್ತು ಅಲ್ಲಿಂದ ನೀರಿನ ಧಾರೆಯೋಪಾದಿಯಲ್ಲಿ ಕೆಳಕ್ಕೆ ಬೀಳುತ್ತಿದ್ದ ಆಯುಧಗಳ ಸಮುದಾಯವನ್ನೂ ನೋಡಿ ಸ್ವಲ್ಪವಾದರೂ ವ್ಯಥಿತನಾಗಲಿಲ್ಲ. ಬಳಿಕ ದ್ರೌಣಿಯು ನಗು-ನಗುತ್ತಲೇ ವಜ್ರಾಸ್ತ್ರವನ್ನು ಪ್ರಕಟಿ ಸಿದನು. ಆ ಅಸ್ತ್ರದಿಂದ ಪ್ರಹರಿಸಲ್ಪಟ್ಟೊಡನೆಯೇ ಆ ಮಹಾಪರ್ವತವು ನಾಶ ಹೊಂದಿತು. ಅನಂತರ ಘಟೋತ್ಕಚನು ಕಾಮನ ಬಿಲ್ಲಿನಿಂದ ಸಹಿತವಾದ ಕಾಲಮೇಘದ ರೂಪವನ್ನು ಹೊಂದಿ ಉಗ್ರವಾದ ಕಲ್ಲಿನ ಮಳೆಯಿಂದ ಅಶ್ವತ್ಥಾಮನನ್ನು ಮುಚ್ಚಿದನು. ಅಸ್ತ್ರವಿದರಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ವಾಯವ್ಯಾಸ್ತ್ರವನ್ನು ಪ್ರಯೋಗಿಸಿ ದೊಡ್ಡದಾಗಿ ಹುಟ್ಟಿಕೊಂಡಿದ್ದ ಕಾಲ ಮೇಘವನ್ನು ಧ್ವಂಸಮಾಡಿದನು. ಮನುಷ್ಯಶ್ರೇಷ್ಠನಾದ ಅಶ್ವತ್ಥಾಮನು ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ಸಂಪೂರ್ಣವಾಗಿ ತುಂಬಿ ರಾಕ್ಷಸರ ಒಂದು ಲಕ್ಷ ರಥಗಳನ್ನೂ ಧ್ವಂಸಮಾಡಿದನು. ಅಷ್ಟಾದರೂ ಭ್ರಾಂತನಾಗದ ಘಟೋತ್ಕಚನು ರಥದಲ್ಲಿ ಕುಳಿತು ಪುನಃ ಅಶ್ವತ್ಥಾಮನಿಗೆ ಅಭಿಮುಖವಾಗಿ ನಿಂತನು. ಆಗ ಅವನು ತನ್ನ ಧನುಸ್ಸನ್ನು ಸುದೀರ್ಘವಾಗಿ ಸೆಳೆದಿದ್ದನು. ಅನೇಕರಾಕ್ಷಸರಿಂದ ಪರಿವೃತನಾಗಿದ್ದನು. ಆ ರಾಕ್ಷಸರು ಸಿಂಹ-ಶಾರ್ದೂಲ

ಸದೃಶರಾಗಿದ್ದರು. ಮದಿಸಿದ ಆನೆಯ ಬಲವನ್ನು ಹೊಂದಿದ್ದರು. ಆನೆಗಳ ಮೇಲೂ ರಥಗಳಲ್ಲಿಯೂ ಅವರು ಕುಳಿತಿದ್ದರು. ವಿಕೃತವಾದ ಮುಖ ಗಳನ್ನೂ, ಕುತ್ತಿಗೆಗಳನ್ನೂ, ಶಿರಸ್ಸುಗಳನ್ನೂ ಹೊಂದಿದ್ದರು. ಅವರೆಲ್ಲರೂ ಹಿಡಿಂಬಾಸುರನ ಅನುಚರರಾಗಿದ್ದರು. ಪೌಲಸ್ತ್ಯರಿಂದಲೂ, ಯಾತುಧಾನ ರಿಂದಲೂ, ಇಂದ್ರಸಮಾನವಿಕ್ರಮರಾದ ತಾಮಸಜನರಿಂದಲೂ ಘಟೋ ತ್ಕಚನು ಪರಿವೃತನಾಗಿದ್ದನು. ಅವರೆಲ್ಲರೂ ನಾನಾವಿಧವಾದ ಶಸ್ತ್ರಗಳನ್ನು ಧರಿಸಿದ್ದರು. ನಾನಾವಿಧವಾದ ಕವಚಗಳನ್ನೂ-ಭೂಷಣಗಳನ್ನೂ ತೊಟ್ಟಿ ದ್ದರು. ಮಹಾವೀರರಾಗಿಯೂ, ಮಹಾಬಲಿಷ್ಠರಾಗಿಯೂ ಇದ್ದರು. ಭಯಂಕರವಾಗಿ ಕೂಗುತ್ತಿದ್ದರು. ಕೋಪಾಧಿಕ್ಯದಿಂದ ಅವರ ಕಣ್ಣುಗುಡ್ಡೆಗಳು ಮುಂದೆ ಬಂದಿದ್ದುವು. ಯುದ್ಧದುರ್ಮದರಾಗಿದ್ದರು. ಯುದ್ಧಸನ್ನದ್ಧರಾಗಿ ನಿಂತಿದ್ದ ರಾಕ್ಷಸರಿಂದ ಪರಿವೃತನಾದ ಘಟೋತ್ಕಚನನ್ನು ನೋಡಿ ವಿಷಣ್ಣ ನಾಗಿದ್ದ ನಿನ್ನ ಮಗ ದುರ್ಯೋಧನನೊಡನೆ ಅಶ್ವತ್ಥಾಮನು ಹೇಳಿದನು :

"ದುರ್ಯೋಧನ! ಇಂದ್ರಸಮಾನವಿಕ್ರಮರಾದ ರಾಜರಿಂದಲೂ, ವೀರರಾದ ನಿನ್ನ ಅನುಜರಿಂದಲೂ ಕೂಡಿಕೊಂಡು ನೀನೀಗ ಸುಮ್ಮನೇ ಯುದ್ಧವನ್ನು ವೀಕ್ಷಿಸುತ್ತಿರು. ನೀನು ಗಾಬರಿಗೊಳ್ಳುವ ಕಾರಣವಿಲ್ಲ. ನಿನ್ನ ಶತ್ರುಗಳೆಲ್ಲರನ್ನೂ ನಾನೀಗ ಸಂಹರಿಸುತ್ತೇನೆ. ನಿನಗೀಗ ಪರಾಜಯವೆಂಬುದೇ ಇಲ್ಲ. ನಾನು ಸತ್ಯವಾಗಿ ಈ ಮಾತನ್ನು ನಿನಗೆ ಹೇಳುತ್ತಿದ್ದೇನೆ. ನಿನ್ನ ಸೈನಿಕರನ್ನು ಸಮಾಧಾನಪಡಿಸು."

"ಗೌತಮೀಪುತ್ರ! ನಿನ್ನ ಹೃದಯವು ಬಹಳ ವಿಶಾಲವಾಗಿದೆ. ಆದುದ ರಿಂದ ನೀನು ಈ ಕಾರ್ಯಮಾಡುವುದರಲ್ಲಿ ನನಗಾವ ಆಶ್ಚರ್ಯವೂ ಇಲ್ಲ. ಮೇಲಾಗಿ ನಿನಗೆ ನಮ್ಮ ವಿಷಯದಲ್ಲಿ ವಿಶೇಷವಾದ ಅನುರಾಗವೂ ಇದೆ."

ಮಹಾರಾಜ! ದುರ್ಯೋಧನನು ಅಶ್ವತ್ಥಾಮನಿಗೆ ಹೀಗೆ ಹೇಳಿ ರಣ ರಂಗಕ್ಕೆ ಶೋಭೆಯನ್ನುಂಟುಮಾಡುವ ಕುದುರೆಗಳಿಂದ ಯುಕ್ತವಾದ ಸಾವಿರ ರಥಗಳಿಂದ ಪರಿವೃತನಾಗಿದ್ದ ಶಕುನಿಯನ್ನು ಕುರಿತು ಹೇಳಿದನು :

"ಮಾತುಲ! ನೀನು ಆರು ಸಾವಿರ ರಥಿಕರೊಡನೆ ಹೋಗಿ ಅರ್ಜುನ ನನ್ನು ಆಕ್ರಮಿಸು. ಕರ್ಣ, ವೃಷಸೇನ, ಕೃಪರು, ನೀಲ, ಉತ್ತರದೇಶದ ಸೈನಿಕರು, ಕೃತವರ್ಮಾ, ಪುರುಮಿತ್ರ, ಸುತಾಪನ, ದುಃಶಾಸನ, ನಿಕುಂಭ

ಕುಂಡಭೇದೀ, ಪರಾಕ್ರಮಿಯಾದ ಪುರಂಜಯ, ದೃಢರಥ, ಪತಾಕೀ, ಹೇಮಕಂಪನ, ಶಲ್ಯ, ಆರುಣಿ, ಇಂದ್ರಸೇನ, ಸಂಜಯ, ವಿಜಯ, ಜಯ, ಕಮಲಾಕ್ಷ, ಪರಕ್ರಾಥೀ, ಜಯವರ್ಮಾ ಮತ್ತು ಸುದರ್ಶನ–ಈ ಎಲ್ಲ ಮಹಾರಥರೂ ಅರುವತ್ತು ಸಾವಿರ ಪದಾತಿಗಳೂ ನಿನ್ನೊಡನೆ ಬರುತ್ತಾರೆ. ದೇವೇಂದ್ರನು ಅಸುರರನ್ನು ಸಂಹರಿಸಿದಂತೆ–ನೀನೂ ಸಹ ಭೀಮನನ್ನೂ, ನಕುಲ-ಸಹದೇವರನ್ನೂ ಸಂಹರಿಸು. ಮಾತುಲ! ನನ್ನ ವಿಜಯವು ನಿನ್ನ ಪರಾಕ್ರಮವನ್ನೇ ಅವಲಂಬಿಸಿದೆ. ದ್ರೋಣರ ಮಗನಾದ ಅಶ್ವತ್ಥಾಮನು ಕುಂತೀಕುಮಾರರನ್ನು ಬಾಣಗಳಿಂದ ಬಹಳವಾಗಿ ಗಾಯಗೊಳಿಸಿಬಿಟ್ಟಿದ್ದಾನೆ. ಶರೀರಾದ್ಯಂತವಾಗಿ ಕ್ಷತ-ವಿಕ್ಷತರಾಗಿರುವ ಕುಂತಿಯ ಮಕ್ಕಳನ್ನು–ಕಾರ್ತಿಕೇಯನು ರಾಕ್ಷಸರನ್ನು ಸಂಹರಿಸಿದಂತೆ–ಸಂಹರಿಸು.”

ಮಹಾರಾಜ! ನಿನ್ನ ಮಗನು ಹೀಗೆಂದು ಹೇಳಲಾಗಿ, ನಿನ್ನ ಭಾವ ಮೈದುನನು ನಿನ್ನ ಮಕ್ಕಳನ್ನು ಪ್ರಸನ್ನಗೊಳಿಸುವ ಇಚ್ಛೆಯಿಂದಲೂ ಪಾಂಡವರನ್ನು ಭಸ್ಮೀಭೂತರನ್ನಾಗಿ ಮಾಡುವ ಇಚ್ಛೆಯಿಂದಲೂ ಸೈನ್ಯ ಸಮೇತನಾಗಿ ಅರ್ಜುನನೊಡನೆ ಯುದ್ಧಮಾಡಲು ಹೊರಟುಹೋದನು.

ಶಕುನಿಯ ಮತ್ತು ಕೌರವರ ಕಡೆಯ ಮಹಾಯೋಧರೂ ಅರ್ಜುನ ನಿದ್ದೆಡೆಗೆ ಹೊರಟುಹೋದನಂತರ ದ್ರೋಣರ ಮಗನಾದ ಅಶ್ವತ್ಥಾಮನಿಗೂ ಘಟೋತ್ಕಚನಿಗೂ ಹಿಂದೆ ಇಂದ್ರನಿಗೂ–ಪ್ರಹ್ಲಾದನಿಗೂ ನಡೆದ ಯುದ್ಧದಂತೆ ಅತ್ಯಂತಭಯಂಕರವಾದ ಯುದ್ಧವು ಆ ರಾತ್ರಿಯಲ್ಲಿ ನಡೆಯಿತು.

ಕ್ರುದ್ಧನಾದ ಘಟೋತ್ಕಚನು ಗೌತಮೀಪುತ್ರನನ್ನು ವಿಷ ಮತ್ತು ಅಗ್ನಿ ಗಳಿಗೆ ಸಮಾನವಾದ ಮತ್ತು ದೃಢವಾದ ಹತ್ತು ಬಾಣಗಳಿಂದ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಭೀಮನ ಮಗನು ಪ್ರಹರಿಸಿದ ಬಾಣಗಳಿಂದ ಬಹಳವಾಗಿ ಗಾಯಗೊಂಡ, ರಥದ ಮಧ್ಯಭಾಗದಲ್ಲಿದ್ದ ಅಶ್ವತ್ಥಾಮನು ಚಂಡಮಾರುತದ ಬಡಿತದಿಂದ ವೃಕ್ಷವು ಅಳ್ಳಾಡುವಂತೆ–ನಡುಗಿಹೋದನು. ಪುನಃ ಘಟೋತ್ಕಚನು ಮಹಾಪ್ರಭೆಯಿಂದ ಕೂಡಿದ್ದ ಅಂಜಲಿಕವೆಂಬ ಬಾಣದಿಂದ ಅಶ್ವತ್ಥಾಮನ ಹಸ್ತದಲ್ಲಿದ್ದ ಧನುಸ್ಸನ್ನು ಕತ್ತರಿಸಿದನು.

ಅಶ್ವತ್ಥಾಮನು ಒಡನೆಯೇ ಭಾರವನ್ನು ಸಹಿಸುವ (ಶಕ್ತಿಯನ್ನು ತಡೆದುಕೊಳ್ಳುವ ) ಮತ್ತೊಂದು ಧನುಸ್ಸನ್ನು ತೆಗೆದುಕೊಂಡು, ಮೋಡವು

ಮಳೆಗರೆಯುವಂತೆ–ತೀಕ್ಷ್ಣವಾದ ಬಾಣಗಳನ್ನು ರಾಕ್ಷಸನ ಮೇಲೆ ಸುರಿಸಿದನು. ಪುನಃ ಶಾರದ್ವತೀಪುತ್ರನು ಸುವರ್ಣಮಯವಾದ ಮೂಲಭಾಗವನ್ನು ಹೊಂದಿದ್ದ, ಶತ್ರುಗಳನ್ನು ಧ್ವಂಸಮಾಡುವುದಾಗಿದ್ದ, ಆಕಾಶದಲ್ಲಿ ಸಂಚರಿಸುವ ಬಾಣಗಳನ್ನು ಖೇಚರನ (ರಾಕ್ಷಸನ ) ಮೇಲೆ ಪುನಃ ಪ್ರಯೋಗಿಸಿದನು. ಸಿಂಹಗಳಿಂದ ಮದಿಸಿದ ಆನೆಗಳ ಸಮೂಹವು ಪೀಡಿಸಲ್ಪಡುವಂತೆ–ವಿಶಾಲವಾದ ವಕ್ಷಃಸ್ಥಳದಿಂದ ಕೂಡಿದ್ದ ರಾಕ್ಷಸಸಮೂಹವು ಅಶ್ವತ್ಥಾಮನು ಬಿಟ್ಟ ಬಾಣಗಳಿಂದ ಪೀಡಿಸಲ್ಪಟ್ಟಿತು. ಭಗವಂತನಾದ ಯಜ್ಞೇಶ್ವರನು ಪ್ರಳಯಕಾಲದಲ್ಲಿ ಸಕಲಪ್ರಾಣಿಗಳನ್ನೂ ಭಸ್ಮಮಾಡುವಂತೆ–ಅಶ್ವ-ಸೂತ-ರಥ-ಗಜಗಳಿಂದ ಕೂಡಿದ ರಾಕ್ಷಸರನ್ನು ಅಶ್ವತ್ಥಾಮನು ಬಾಣಗಳಿಂದ ದಹಿಸಿಬಿಟ್ಟನು. ಹಿಂದೆ ಆಕಾಶದಲ್ಲಿ ದೇವದೇವನಾದ ಮಹೇಶ್ವರನು ಯಾವ ರೀತಿಯಲ್ಲಿ ತ್ರಿಪುರವನ್ನು (ತ್ರಿಪುರರೆಂಬ ರಾಕ್ಷಸರನ್ನು ) ಭಸ್ಮೀಭೂತರನ್ನಾಗಿ ಮಾಡಿ ಪ್ರಕಾಶಿಸಿದನೋ–ಅದೇ ರೀತಿಯಲ್ಲಿ ಅಶ್ವತ್ಥಾಮನೂ ರಾಕ್ಷಸರ ಒಂದು ಅಕ್ಷೌಹಿಣೀ ಸೈನ್ಯವನ್ನೂ ಸಂಹರಿಸಿ ಪ್ರಕಾಶಿಸಿದನು. ವಿಜಯಿಗಳಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ಪ್ರಳಯಕಾಲದಲ್ಲಿ ಸರ್ವಪ್ರಾಣಿಗಳನ್ನೂ ದಹಿಸುವ ಸಂವರ್ತಾಗ್ನಿಯಂತೆ–ನಿನ್ನ ಶತ್ರುಗಳನ್ನು ಸಂಹರಿಸಿ ಪ್ರಕಾಶಿಸಿದನು. ಅನಂತರ ಕ್ರುದ್ಧನಾದ ಘಟೋತ್ಕಚನು–'ಅಶ್ವತ್ಥಾಮನನ್ನು ಸಂಹರಿಸಿರೆಂದು'–ಭಯಂಕರಕರ್ಮರಾದ ರಾಕ್ಷಸರ ದೊಡ್ಡಸೇನೆಯನ್ನು ಪ್ರಚೋದಿಸಿದನು. ಘಟೋತ್ಕಚನ ಆಜ್ಞೆಯನ್ನು ಪರಿಪಾಲಿಸುತ್ತಾ ಕೋರೆಹಲ್ಲುಗಳಿಂದ ಉಜ್ಜ್ವಲರಾಗಿ ಕಾಣುತ್ತಿದ್ದ, ದೊಡ್ಡದಾದ ಮುಖಗಳನ್ನು ಹೊಂದಿದ್ದ, ಘೋರರೂಪರಾದ, ಭಯಂಕರವಾದ, ತೆರೆದ ಬಾಯಿಗಳಿಂದ ಕೂಡಿದ್ದ, ಘೋರವಾದ ನಾಲಿಗೆಗಳಿಂದ ಕೂಡಿದ್ದ, ಕ್ರೋಧದಿಂದ ಕೆಂಗಣ್ಣರಾಗಿದ್ದ ರಾಕ್ಷಸರು, ದೊಡ್ಡದಾದ ಸಿಂಹಗರ್ಜನೆಯಿಂದ ಭೂಮಿಯನ್ನೇ ಪ್ರತಿಧ್ವನಿಸುತ್ತಾ, ನಾನಾವಿಧವಾದ ಆಯುಧಗಳನ್ನು ಹಿಡಿದು ಅಶ್ವತ್ಥಾಮನನ್ನು ಸಂಹರಿಸುವ ಸಲುವಾಗಿ ಧಾವಿಸಿದರು. ಸಮರಭೂಮಿಯಲ್ಲಿ ಯಾರಿಗೂ ಭಯಪಡದಿದ್ದ, ಕ್ರೋಧದಿಂದ ಕೆಂಪಾದ ಕಣ್ಣುಗಳನ್ನು ಹೊಂದಿದ್ದ, ನೂರಾರು-ಸಾವಿರಾರು ರಾಕ್ಷಸರು ಅಶ್ವತ್ಥಾಮನ ತಲೆಯ ಮೇಲೆ ಶಕ್ತ್ಯಾಯುಧ,

ಶತಘ್ನೀ, ಪರಿಘ, ಅಶನಿ, ಶೂಲ, ಪಟ್ಟಿಶ, ಖಡ್ಗ, ಗದೆ, ಭಿಂದಿಪಾಲ, ಮುಸಲ, ಪರಶ್ವಧ, ಪ್ರಾಸ, ಕಠಾರಿ, ತೋಮರ, ಕಣಪ, ನಿಶಿತವಾದ ಕಂಪನ, ದೊಡ್ಡ-ದೊಡ್ಡದಾದ ಬಂಡೆಗಳು, ಭುಶುಂಡೀ, ಲೋಹಮಯವಾದ ಸ್ತಂಭ, ಶತ್ರುಗಳನ್ನು ಸೀಳುವ ಮಹಾಘೋರವಾದ ಮುದ್ಗರಗಳು–ಇವೇ ಮುಂತಾದ ಆಯುಧಗಳನ್ನು ಸುರಿಸಿದರು. ದ್ರೌಣಿಯ ತಲೆಯ ಮೇಲೆ ದೊಡ್ಡದಾದ ಶಸ್ತ್ರಾಸ್ತ್ರಗಳ ಮತ್ತು ನಾನಾವಿಧವಾದ ಆಯುಧಗಳ ಮಳೆಗರೆಯುತ್ತಿದ್ದುದನ್ನು ಕಂಡು ನಿನ್ನ ಕಡೆಯ ಯೋಧರು ಬಹಳ ಸಂತಪ್ತರಾದರು. ಆದರೆ ಮಹಾಪರಾಕ್ರಮಿಯಾದ ಅಶ್ವತ್ಥಾಮನು ತನ್ನ ಮೇಲೆ ಹರಡಿಕೊಂಡಿದ್ದ ಭಯಂಕರವಾದ ಶಸ್ತ್ರಾಸ್ತ್ರಗಳ ವರ್ಷವನ್ನು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ವಜ್ರಾಯುಧಕ್ಕೆ ಸಮಾನವಾಗಿದ್ದ ಬಾಣಗಳಿಂದ ವಿಧ್ವಂಸನಗೊಳಿಸಿದನು. ವಿಶಾಲಮನಸ್ಕನಾದ ಅಶ್ವತ್ಥಾಮನು ದಿವ್ಯಾಸ್ತ್ರಗಳ ಮಹಾಮಂತ್ರಗಳಿಂದ ಅಭಿಮಂತ್ರಿತವಾದ, ಚಿನ್ನದ ರೆಕ್ಕೆಗಳನ್ನು ಹೊಂದಿದ್ದ ಬಾಣಗಳಿಂದ ರಾಕ್ಷಸರೆಲ್ಲರನ್ನೂ ಪುನಃ ಪ್ರಹರಿಸಿದನು.

ಸಿಂಹಗಳಿಂದ ಪೀಡಿಸಲ್ಪಟ್ಟು ವ್ಯಾಕುಲಗೊಂಡ ಮದಿಸಿದ ಆನೆಗಳ ಸಮೂಹದಂತೆ–ಅಶ್ವತ್ಥಾಮನ ಬಾಣಗಳಿಂದ ಪೀಡಿಸಲ್ಪಟ್ಟ, ವಿಶಾಲವಾದ ವಕ್ಷಃಸ್ಥಳವನ್ನು ಹೊಂದಿದ್ದ ರಾಕ್ಷಸರ ಸಮೂಹವು ವ್ಯಾಕುಲಗೊಂಡಿತು. ದ್ರೋಣಪುತ್ರನಿಂದ ಪ್ರಹೃತರಾದ ಮಹಾಬಲರಾದ ಆ ರಾಕ್ಷಸರು ಅತ್ಯಂತ ಕ್ರುದ್ಧರಾಗಿ ಅಶ್ವತ್ಥಾಮನನ್ನು ಸಂಹರಿಸುವ ಇಚ್ಛೆಯಿಂದ ರೋಷಾವೇಶದಿಂದ ಪುನಃ ಆಕ್ರಮಿಸಿದರು. ಆ ಸಮಯದಲ್ಲಿ ಅಶ್ವತ್ಥಾಮನು ಪ್ರಪಂಚದಲ್ಲಿರುವ ಪ್ರಾಣಿಗಳಲ್ಲಿ ಯಾವ ಒಂದು ಪ್ರಾಣಿಯಿಂದಲೂ ಮಾಡಲು ಸಾಧ್ಯವಿಲ್ಲದ ಪರಮಾದ್ಭುತವಾದ ಪರಾಕ್ರಮವನ್ನು ಪ್ರದರ್ಶಿಸಿದನು. ಮಹಾಸ್ತ್ರವಿದನಾದ ಅಶ್ವತ್ಥಾಮನೊಬ್ಬನೇ ಅಖಂಡವಾದ ರಾಕ್ಷಸಸೈನ್ಯವನ್ನೂ ರಾಕ್ಷಸೇಂದ್ರನಾದ ಘಟೋತ್ಕಚನು ನೋಡುತ್ತಿದ್ದಂತೆಯೇ ಪ್ರಜ್ವಲಿಸುವ ಬಾಣಗಳಿಂದ ಕ್ಷಣಮಾತ್ರದಲ್ಲಿ ಭಸ್ಮೀಭೂತವನ್ನಾಗಿ ಮಾಡಿದನು. ಪ್ರಳಯಕಾಲದಲ್ಲಿ ಸಂವರ್ತಾಗ್ನಿಯು ಸರ್ವಪ್ರಾಣಿಗಳನ್ನೂ ದಹಿಸುವಂತೆ–ದ್ರೌಣಿಯು ಯುದ್ಧದಲ್ಲಿ ರಾಕ್ಷಸಸೈನ್ಯವನ್ನು ಸಂಪೂರ್ಣವಾಗಿ ಸಂಹರಿಸಿ ಪ್ರಕಾಶಿಸಿದನು. ಮಹಾರಾಜ! ಸರ್ಪೋಪಮವಾದ ಬಾಣಗಳಿಂದ ಸೈನ್ಯಗಳನ್ನು ದಹಿಸುತ್ತಿದ್ದ

ದ್ರೌಣಿಯನ್ನು ಆ ಸಮಯದಲ್ಲಿ ದಿಟ್ಟಿಸಿ ನೋಡಲು ಬಲಿಷ್ಠನಾದ, ರಾಕ್ಷಸೇಂದ್ರನಾದ, ವೀರನಾದ, ಘಟೋತ್ಕಚನೊಬ್ಬನ ಹೊರತಾಗಿ ಪಾಂಡವರ ಪಕ್ಷದಲ್ಲಿದ್ದ ಸಾವಿರಾರು ರಾಜರಲ್ಲಿ ಯಾರೊಬ್ಬರಿಗೂ ಸಾಧ್ಯವಾಗಲಿಲ್ಲ.

ಭರತಶ್ರೇಷ್ಠನೇ! ಕ್ರೋಧದಿಂದ ಉಬ್ಬಿದ ಕಣ್ಣುಳ್ಳವನಾಗಿದ್ದ ಕ್ರುದ್ಧನಾದ ಘಟೋತ್ಕಚನು ಕೈಯಿಂದ ಕೈಯನ್ನು ಉಜ್ಜಿಕೊಳ್ಳುತ್ತಾ, ಅವುಡುಗಚ್ಚುತ್ತಾ, ದ್ರೋಣಪುತ್ರನ ಸಮೀಪಕ್ಕೆ ರಥವನ್ನು ನಡೆಸುವಂತೆ ಸಾರಥಿಗೆ ಹೇಳಿದನು. ಅರಿಸೂದನನಾದ ಘಟೋತ್ಕಚನು ಸುಂದರವಾದ ಪತಾಕೆಯಿಂದ ಸುಶೋಭಿತವಾಗಿದ್ದ, ಪ್ರಕಾಶಮಾನವಾಗಿದ್ದ ಮತ್ತು ಭಯಂಕರವಾಗಿದ್ದ ರಥದಲ್ಲಿ ಕುಳಿತು ದ್ರೋಣಪುತ್ರನೊಡನೆ ದ್ವೈರಥಯುದ್ಧವನ್ನು ಉಪಕ್ರಮಿಸಿದನು. ಭೀಮವಿಕ್ರಮನಾದ ಘಟೋತ್ಕಚನು ಸಿಂಹದಂತೆ ಗಟ್ಟಿಯಾಗಿ ಗರ್ಜನೆಮಾಡುತ್ತಾ ದೇವನಿರ್ಮಿತವಾಗಿದ್ದ, ಎಂಟು ಗಂಟೆಗಳನ್ನು ಹೊಂದಿದ್ದ, ಮಹಾಘೋರವಾಗಿದ್ದ ವಜ್ರಾಯುಧವನ್ನು ಅಶ್ವತ್ಥಾಮನ ಮೇಲೆಸೆದನು. ವಜ್ರಾಯುಧವು ತನ್ನ ಕಡೆಗೆ ರಭಸದಿಂದ ಬರುತ್ತಿರುವುದನ್ನು ನೋಡಿ ಅಶ್ವತ್ಥಾಮನು ಧನುಸ್ಸನ್ನು ಕೆಳಗಿಟ್ಟು ಛಂಗನೆ ಹಾರಿ ರಾಕ್ಷಸಪ್ರಯುಕ್ತವಾದ ಅಶನಿಯನ್ನು ಕೈಯಿಂದಲೇ ಹಿಡಿದನು. ಪುನಃ ಆ ವಜ್ರಾಯುಧವನ್ನೇ ಹಿಂದಿರುಗಿಸಿ ರಾಕ್ಷಸನನ್ನು ಪ್ರಹರಿಸಿದನು. ವಜ್ರಾಯುಧವು ತನ್ನ ಬಳಿಗೆ ಬರುವುದರೊಳಗಾಗಿ ರಾಕ್ಷಸನು ರಥದಿಂದ ಕೆಳಕ್ಕೆ ಧುಮುಕಿದನು. ಮಹಾಪ್ರಭೆಯಿಂದ ಕೂಡಿದ್ದ, ಅತ್ಯಂತದಾರುಣವಾಗಿದ್ದ ಆ ಅಶನಿಯು ಅಶ್ವ-ಸೂತ-ಧ್ವಜಸಹಿತವಾದ ರಥವನ್ನು ಭಸ್ಮೀಭೂತವನ್ನಾಗಿ ಮಾಡಿ ಅನಂತರ ಭೂಮಿಯನ್ನು ಸೀಳಿಕೊಂಡು ಒಳಕ್ಕೆ ಪ್ರವೇಶಿಸಿತು. ಶಂಕರನಿಂದಲೇ ನಿರ್ಮಿತವಾಗಿದ್ದ ಸುಘೋರವಾಗಿದ್ದ ಆ ಅಶನಿಯನ್ನು, ಹಾರಿ ಹಿಡಿದ ಆ ಅದ್ಭುತಕಾರ್ಯಕ್ಕಾಗಿ ಎಲ್ಲ ಪ್ರಾಣಿಗಳೂ ಅಶ್ವತ್ಥಾಮನನ್ನು ಪ್ರಶಂಸಿಸಿದುವು.

ಮಹಾರಾಜ! ಅನಂತರ ಭೀಮಪುತ್ರನು ಧೃಷ್ಟದ್ಯುಮ್ನನ ರಥದಲ್ಲಿ ಕುಳಿತು ಘೋರವಾದ ಇಂದ್ರಾಯುಧಕ್ಕೆ ಸಮಾನವಾದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ನಿಶಿತವಾದ ಬಾಣಗಳಿಂದ ಅಶ್ವತ್ಥಾಮನ ವಕ್ಷಃಸ್ಥಳವನ್ನು ಪ್ರಹರಿಸಿದನು. ಧೃಷ್ಟದ್ಯುಮ್ನನೂ ಸಹ ಸ್ವಲ್ಪವಾದರೂ ಗಾಬರಿಗೊಳ್ಳದೇ ಸರ್ಪೋಪಮವಾಗಿದ್ದ, ಚಿನ್ನದ ಮೂಲಭಾಗವನ್ನು ಹೊಂದಿದ್ದ,

ಬಾಣಗಳನ್ನು ದ್ರೋಣಪುತ್ರನ ವಕ್ಷಃಸ್ಥಳದಲ್ಲಿ ಪ್ರಯೋಗಿಸಿದನು. ದ್ರೌಣಿಯು ಸಹ ಸಾವಿರಾರು ಬಾಣಗಳಿಂದ ಘಟೋತ್ಕಚ-ಧೃಷ್ಟದ್ಯುಮ್ನರನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಅವರೂ ಸಹ ಅಗ್ನಿಯ ಜ್ವಾಲೆಗಳಿಗೆ ಸಮಾನವಾಗಿದ್ದ ಬಾಣಗಳಿಂದ ಅಶ್ವತ್ಥಾಮನು ಬಿಟ್ಟ ಬಾಣಗಳನ್ನು



ಆಕಾಶದಲ್ಲಿಯೇ ವಿನಾಶಗೊಳಿಸಿದರು. ಪುರುಷಸಿಂಹರಾದ ರಾಕ್ಷಸ-ಪಾರ್ಷತರಿಗೂ ಮತ್ತು ದ್ರೌಣಿಗೂ ನಡೆಯುತ್ತಿದ್ದ ಆ ಮಹಾಯುದ್ಧವು ಅತಿತೀವ್ರವೂ ಯೋಧರಿಗೆ ಪ್ರೀತಿವರ್ಧಕವೂ ಆಗಿದ್ದಿತು.

ಅನಂತರ ಭೀಮಸೇನನು ಒಂದು ಸಾವಿರ ರಥಗಳೊಡನೆಯೂ, ಮುನ್ನೂರು ಆನೆಗಳೊಡನೆಯೂ, ಆರು ಸಾವಿರ ಕುದುರೇಸವಾರರೊಡ

ನೆಯೂ ತನ್ನ ಮಗನು ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಆಗಮಿಸಿದನು. ಸ್ವಲ್ಪವೂ ಆಯಾಸವೇ ಇಲ್ಲದಂತೆ ಪರಾಕ್ರಮವನ್ನು ತೋರುವ ಧರ್ಮಾತ್ಮನಾದ ಅಶ್ವತ್ಥಾಮನು ಆ ಸಮಯದಲ್ಲಿ ಭೀಮಪುತ್ರನಾದ ರಾಕ್ಷಸನೊಡನೆಯೂ, ಸೇನಾಸಮೇತನಾದ ಧೃಷ್ಟದ್ಯುಮ್ನನೊಡನೆಯೂ ಯುದ್ಧಮಾಡುತ್ತಿದ್ದನು. ಲೋಕದಲ್ಲಿರುವ ಪ್ರಾಣಿಗಳಲ್ಲಿ ಯಾವ ಒಂದು ಪ್ರಾಣಿಯಿಂದಲೂ ತೋರಿಸ ಲಾಗದಂತಹ ಅದ್ಭುತಪರಾಕ್ರಮವನ್ನು ದ್ರೌಣಿಯು ಆಗ ತೋರಿಸಿದನು. ಅಶ್ವತ್ಥಾಮನು ಅಶ್ವ-ಸೂತ-ರಥ-ಗಜಗಳಿಂದ ಕೂಡಿದ್ದ ರಾಕ್ಷಸರ ಅಕ್ಷೌಹಿಣೀ ಸೈನ್ಯವನ್ನೂ ನಿಶಿತವಾದ ಬಾಣಗಳಿಂದ ನಿಮೇಷಾಂತರದಲ್ಲಿ ಧ್ವಂಸಮಾಡಿ ದನು. ಆ ಅದ್ಭುತಕಾರ್ಯವನ್ನವನು ಭೀಮಸೇನ, ಘಟೋತ್ಕಚ, ಧೃಷ್ಟ ದ್ಯುಮ್ನ, ನಕುಲ-ಸಹದೇವರು, ಧರ್ಮಪುತ್ರ, ಅರ್ಜುನ ಮತ್ತು ಶ್ರೀಕೃಷ್ಣ–ಇವರ ಸಮಕ್ಷದಲ್ಲಿಯೇ ಮಾಡಿದನು. ಶೀಘ್ರವಾಗಿ ಹೋಗುವ ಅಶ್ವತ್ಥಾಮನ ಬಾಣಗಳಿಂದ ಗಾಢವಾಗಿ ಗಾಯಗೊಂಡ ಆನೆಗಳು ಶೃಂಗಗಳ ನ್ನೊಳಗೊಂಡ ಪರ್ವತಗಳಂತೆಯೇ ಭೂಮಿಯ ಮೇಲೆ ಬಿದ್ದಿದ್ದುವು. ಆನೆ ಗಳ ಸೊಂಡಿಲುಗಳು ಅಶ್ವತ್ಥಾಮನ ಬಾಣಗಳಿಂದ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದು ಅತ್ತಲಿತ್ತ ಚಲಿಸುತ್ತಿದ್ದುವು. ಅದನ್ನು ನೋಡಿದರೆ ಅಲ್ಲಿಂದಿಲ್ಲಿಗೆ-ಇಲ್ಲಿಂದಲ್ಲಿಗೆ ಹರಿದಾಡುವ ಸರ್ಪಗಳಿಂದ ಭೂಮಿಯು ವ್ಯಾಪ್ತವಾಗಿರುವುದೋ ಎಂಬಂತೆ ಕಾಣುತ್ತಿದ್ದಿತು. ಸುವರ್ಣಮಯವಾದ ದಂಡಗಳಿಂದ ಕೂಡಿದ್ದ ರಾಜರ ಶ್ವೇತಚ್ಛತ್ರಗಳಿಂದ ವ್ಯಾಪ್ತವಾಗಿದ್ದ ರಣಾಂಗಣವು ಪ್ರಳಯಕಾಲದಲ್ಲಿ ಚಂದ್ರ-ಸೂರ್ಯರಿಂದಲೂ, ಗ್ರಹ ಗಳಿಂದಲೂ ವ್ಯಾಪ್ತವಾದ ಆಕಾಶದಂತೆಯೇ ಪ್ರಕಾಶಿಸುತ್ತಿದ್ದಿತು.

ಅಶ್ವತ್ಥಾಮನು ಆ ರಣರಂಗದಲ್ಲಿ ಒಂದು ರಕ್ತನದಿಯನ್ನೇ ನಿರ್ಮಿಸಿ ದನು. ರಕ್ತದ ಪ್ರವಾಹದಿಂದ ಆ ನದಿಯು ಬಹಳ ಭಯಂಕರವಾಗಿ ಕಾಣು ತ್ತಿದ್ದಿತು. ಅಶ್ವತ್ಥಾಮನ ಅಸ್ತ್ರಗಳಿಂದ ಕತ್ತರಿಸಲ್ಪಟ್ಟು ಗುಪ್ಪೆ-ಗುಪ್ಪೆಯಾಗಿ ಬಿದ್ದಿದ್ದ ಧ್ವಜಗಳು ಆ ನದಿಯಲ್ಲಿನ ಕಪ್ಪೆಗಳಂತಿದ್ದುವು. ಭೇರಿಗಳು ಆಮೆಗಳಂತಿದ್ದುವು. ರಾಜರ ಶ್ವೇತಚ್ಛತ್ರಗಳು ರಣಾಂಗಣದಲ್ಲಿ ಬಿದ್ದಿದ್ದು ಅವುಗಳು ರಕ್ತನದಿಯಲ್ಲಿನ ಹಂಸಗಳ ಸಾಲುಗಳಂತಿದ್ದುವು. ಚಾಮರಗಳು ನೊರೆಗಳಂತಿದ್ದುವು. ಹದ್ದುಗಳೂ ಮತ್ತು ರಣಹದ್ದುಗಳೂ ನದಿಯಲ್ಲಿನ

ಮೊಸಳೆಗಳಂತಿದ್ದುವು. ಅನೇಕವಿಧವಾದ ಆಯುಧಗಳು ಮೀನುಗಳಂತಿದ್ದುವು. ದೊಡ್ಡ-ದೊಡ್ಡ ಆನೆಗಳು ನದಿಯಲ್ಲಿನ ಬಂಡೆಗಳಂತಿದ್ದುವು. ಸತ್ತು ಬಿದ್ದಿದ್ದ ಕುದುರೆಗಳು ಮಕರಗಳಂತಿದ್ದುವು. ಅಲ್ಲಲ್ಲಿ ಮುರಿದುಬಿದ್ದಿದ್ದ ರಥಗಳು ರಕ್ತನದಿಯ ತೀರದ ಮಳಲಿನ ದಿಣ್ಣೆಗಳಾಗಿದ್ದುವು. ಪತಾಕೆಗಳು ತೀರಪ್ರದೇಶದಲ್ಲಿರುವ ವೃಕ್ಷಗಳಂತೆ ಕಾಣುತ್ತಿದ್ದುವು. ಬಾಣಗಳು ಮೀನುಗಳಂತಿದ್ದುವು. ಆ ನದಿಯು ಬಹಳ ಭಯಂಕರವಾಗಿ ಕಾಣುತ್ತಿದ್ದಿತು. ಪ್ರಾಸ, ಶಕ್ತ್ಯಾಯುಧ ಮತ್ತು ಋಷ್ಟಿಗಳು ಡುಂಡುಭಜಾತಿಯ ಹಾವುಗಳಂತೆ ಕಾಣುತ್ತಿದ್ದುವು. ಮಜ್ಜಾ ಮತ್ತು ಮಾಂಸಗಳು ಆ ನದಿಯ ಕೆಸರಿನ ರೂಪದಲ್ಲಿದ್ದುವು. ತೇಲಿಹೋಗುತ್ತಿದ್ದ ಮೃತದೇಹಗಳು ನದಿಯಲ್ಲಿನ ದೋಣಿ ಗಳಂತೆ ಕಾಣುತ್ತಿದ್ದುವು. ತಲೆಗೂದಲು ಪಾಚಿಯಂತೆ ಕಾಣುತ್ತಿದ್ದಿತು. ಹೇಡಿಗಳಿಗೆ ಆ ರಕ್ತನದಿಯು ಭಯವನ್ನುಂಟುಮಾಡುವುದಾಗಿದ್ದಿತು. ಅಪಾರಸಂಖ್ಯೆಯ ಗಜಾಶ್ವಯೋಧರ ಹನನದಿಂದ ಆ ನದಿಯು ಹುಟ್ಟಿದ್ದಿತು. ಯೋಧರ ಆರ್ತನಾದವೇ ಆ ನದಿಯ ಪ್ರವಾಹದ ಕಲ-ಕಲಶಬ್ದವಾಗಿದ್ದಿತು. ಗಾಯಗೊಂಡವರ ಶರೀರಗಳಿಂದ ಸೋರುತ್ತಿದ್ದ ರಕ್ತವು ಆ ನದಿಯ ಅಲೆಗಳಂತಿದ್ದಿತು. ಮಾಂಸಾಶಿಗಳಾದ ಪ್ರಾಣಿಗಳು ನಿಬಿಡವಾಗಿದ್ದುದರಿಂದ ಆ ನದಿಯು ಮಹಾಭಯಂಕರವಾಗಿ ಕಾಣುತ್ತಿದ್ದಿತು. ಆ ರಕ್ತನದಿಯು ಯಮನ ರಾಜ್ಯರೂಪವಾದ ಮಹೋದಧಿಗೆ ಸೇರುವುದಾಗಿದ್ದಿತು. ಅಂತಹ ರಕ್ತನದಿಯನ್ನು ಅಶ್ವತ್ಥಾಮನು ಸೃಷ್ಟಿಸಿದನು.

ಮಹಾರಾಜ! ಹೀಗೆ ಅಶ್ವತ್ಥಾಮನು ರಾಕ್ಷಸರೆಲ್ಲರನ್ನೂ ಸಂಹರಿಸಿ ಘಟೋತ್ಕಚನನ್ನು ಬಾಣಗಳಿಂದ ಬಹಳವಾಗಿ ಪೀಡಿಸಿದನು. ಅತಿಯಾಗಿ ಕೋಪಗೊಂಡ ಬಲಿಷ್ಠನಾದ ದ್ರೌಣಿಯು ವೃಕೋದರನನ್ನೂ, ಧೃಷ್ಟದ್ಯುಮ್ನನನ್ನೂ, ಕುಂತಿಯ ಇತರ ಮಕ್ಕಳನ್ನೂ ಬಾಣಗಳ ಸಮೂಹಗಳಿಂದ ಪುನಃ ಗಾಯಗೊಳಿಸಿ, ಸುರಥನೆಂಬ ಹೆಸರಿನ ದ್ರುಪದನ ಮಗನನ್ನೂ ಸಂಹರಿಸಿದನು. ಬಳಿಕ ಅಶ್ವತ್ಥಾಮನು ದ್ರುಪದನ ಮಕ್ಕಳಾದ ಶತ್ರುಂಜಯ-ಬಲಾನೀಕ-ಜಯಾನೀಕ-ಜಯಾಶ್ವರನ್ನೂ ಸಂಹರಿಸಿದನು. ಅನಂತರ ಕ್ರುದ್ಧನಾದ ದ್ರೋಣಪುತ್ರನು ಶ್ರುತಾಹ್ವಯನೆಂಬ ರಾಜನನ್ನು ಯಮಲೋಕಕ್ಕೆ ಕಳುಹಿಸಿದನು. ತೀಕ್ಷ್ಣವಾದ ಮತ್ತು ಸುಂದರವಾದ ರೆಕ್ಕೆ

ಗಳನ್ನು ಹೊಂದಿದ್ದ, ಇತರ ಮೂರು ಬಾಣಗಳಿಂದ ಹೇಮಮಾಲಿಯನ್ನೂ, ಪೃಷಧ್ರನನ್ನೂ ಮತ್ತು ಚಂದ್ರಸೇನನನ್ನೂ ಸಂಹರಿಸಿದನು. ಅನಂತರ ಕುಂತಿಭೋಜನ ಹತ್ತು ಮಕ್ಕಳನ್ನೂ ಹತ್ತು ಬಾಣಗಳಿಂದ ಸಂಹರಿಸಿದನು. ಕ್ರುದ್ಧನಾದ ಅಶ್ವತ್ಥಾಮನು ಹನನಕ್ರಿಯೆಯನ್ನು ಅಷ್ಟಕ್ಕೇ ನಿಲ್ಲಿಸಲಿಲ್ಲ. ಉಗ್ರವಾದ, ನೇರವಾಗಿ ಹೋಗುವ, ಯಮದಂಡೋಪಮವಾದ, ಘೋರ ವಾದ ಬಾಣವೊಂದನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಕಿವಿಯ ತುದಿಯವರೆಗೂ ಶಿಂಜಿನಿಯೊಡನೆ ಸೆಳೆದು ಘಟೋತ್ಕಚನನ್ನು ಲಕ್ಷಿಸಿ ಪ್ರಯೋಗಿಸಿದನು. ಸುಂದರವಾದ ರೆಕ್ಕೆಗಳಿಂದ ಕೂಡಿದ್ದ ಆ ಮಹಾಶರವು ರಾಕ್ಷಸನ ಹೃದಯವನ್ನು ಭೇದಿಸಿಕೊಂಡು ಬಹಳ ಶೀಘ್ರವಾಗಿ ಭೂಮಿಯನ್ನು ಹೊಕ್ಕಿತು.

ಅಶ್ವತ್ಥಾಮನ ಬಾಣಪ್ರಹಾರದಿಂದ ಘಟೋತ್ಕಚನು ಮರಣಹೊಂದಿ ಕೆಳಕ್ಕೆ ಬಿದ್ದುಹೋದನೆಂದೇ ಭಾವಿಸಿದ ಮಹಾರಥನಾದ ಧೃಷ್ಟದ್ಯುಮ್ನನು ತನ್ನ ಶ್ರೇಷ್ಠವಾದ ರಥವನ್ನು ದ್ರೌಣಿಯ ಸಮೀಪದಿಂದ ಬಹಳ ದೂರಕ್ಕೆ ಒಯ್ದುಬಿಟ್ಟನು. ಯುಧಿಷ್ಠಿರನ ಕಡೆಯ ಎಲ್ಲ ರಾಜರೂ ಯುದ್ಧದಿಂದ ಪರಾಙ್ಮುಖರಾದರು. ಅವರೆಲ್ಲರನ್ನೂ ಪರಾಜಯಗೊಳಿಸಿ ದ್ರೋಣಪುತ್ರನು ಸಿಂಹನಾದಮಾಡಿದನು. ಆ ಸಮಯದಲ್ಲಿ ಎಲ್ಲ ಪ್ರಾಣಿಗಳೂ (ಪ್ರೇಕ್ಷಕರೂ) ಮತ್ತು ನಿನ್ನ ಮಕ್ಕಳೂ ಅಶ್ವತ್ಥಾಮನನ್ನು ಬಹಳವಾಗಿ ಶ್ಲಾಘಿಸಿದರು. ಮಹಾರಾಜ! ನೂರಾರು ಬಾಣಗಳಿಂದ ಛಿನ್ನ-ಭಿನ್ನವಾದ ಶರೀರಗಳಿಂದ ಕೂಡಿದ್ದ, ಅಸುನೀಗಿ ಭೂಮಿಯ ಮೇಲೆ ಬಿದ್ದಿದ್ದ, ರಾಕ್ಷಸರಿಂದ ನಿಬಿಡ ವಾಗಿದ್ದ ರಣಾಂಗಣವು ಪರ್ವತಶಿಖರಗಳಿಂದ ವ್ಯಾಪ್ತವಾಗಿರುವಂತೆ ಅತಿದುರ್ಗಮವಾಗಿಯೂ ರೌದ್ರವಾಗಿಯೂ ಕಾಣುತ್ತಿದ್ದಿತು. ಸಿದ್ಧ-ಗಂಧರ್ವ ಪಿಶಾಚಸಂಘಗಳೂ, ಸರ್ಪ-ಸುಪರ್ಣರೂ, ಪಿತೃದೇವತೆಗಳೂ, ಪಕ್ಷಿಗಳೂ, ರಾಕ್ಷಸಗಣಗಳೂ, ಭೂತಗಣಗಳೂ, ಅಪ್ಸರೆಯರೂ ಮತ್ತು ದೇವತೆಗಳೂ ಅದ್ಭುತಪರಾಕ್ರಮಿಯಾದ ಅಶ್ವತ್ಥಾಮನನ್ನು ಬಹಳವಾಗಿ ಪ್ರಶಂಸಿಸಿದರು."

೧೫೬ನೆಯ ಅಧ್ಯಾಯವು ಮುಗಿಯಿತು.

## ಸೋಮದತ್ತನು ಮೂರ್ಛೆಹೋದುದು : ಭೀಮನಿಂದ ಬಾಹ್ಲೀಕನ ವಧೆ : ಭೀಮನು ಧೃತರಾಷ್ಟ್ರನ ಹತ್ತು ಮಕ್ಕಳನ್ನೂ, ಶಕುನಿಯ ಸೈನ್ಯದ ಏಳು ಮಹಾರಥರನ್ನೂ ಮತ್ತು ಐವರು ಸಹೋದರರನ್ನೂ ಸಂಹರಿಸಿದುದು : ದ್ರೋಣ-ಯುಧಿಷ್ಠಿರರ ಯುದ್ಧ: ಯುಧಿಷ್ಠಿರನ ವಿಜಯ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

“ಮಹಾರಾಜ! ಅಶ್ವತ್ಥಾಮನು ದ್ರುಪದನ ಮತ್ತು ಕುಂತಿಭೋಜನ ಮಕ್ಕಳನ್ನೂ, ಘಟೋತ್ಕಚನ ಅನುಯಾಯಿಗಳಾದ ಸಾವಿರಾರು ರಾಕ್ಷಸರನ್ನೂ ಸಂಹರಿಸಿದುದನ್ನು ಕಂಡು ಯುಧಿಷ್ಠಿರ-ಭೀಮಸೇನ-ಧೃಷ್ಟದ್ಯುಮ್ನ ಯುಯುಧಾನರು ಒಟ್ಟಾಗಿ ಸೇರಿ ಯುದ್ಧವನ್ನು ಮುಂದುವರಿಸಬೇಕೆಂದು ನಿಶ್ಚಯಿಸಿದರು. ಸೋಮದತ್ತನು ರಣರಂಗದಲ್ಲಿ ಪುನಃ ಸಾತ್ಯಕಿಯನ್ನು ನೋಡಿ ಕೋಪಗೊಂಡು ದೊಡ್ಡದಾದ ಬಾಣಗಳ ವೃಷ್ಟಿಯಿಂದ ಅವನನ್ನು ಮುಚ್ಚಿಬಿಟ್ಟನು. ಅನಂತರ ವಿಜಯಾಕಾಂಕ್ಷಿಗಳಾದ ನಮ್ಮ ಕಡೆಯವರಿಗೂ ಮತ್ತು ಶತ್ರುಗಳವರ ಕಡೆಯವರಿಗೂ ಅತಿಘೋರವಾದ ಮತ್ತು ಭಯ ವರ್ಧಕವಾದ ಯುದ್ಧವು ಪ್ರಾರಂಭವಾಯಿತು. ಸಾತ್ವತನ ಮೇಲೆ ಬೀಳಲು ಬರುತ್ತಿದ್ದ ಸೋಮದತ್ತನನ್ನು ನೋಡಿ ಭೀಮಸೇನನು ಸುವರ್ಣಮಯ ವಾದ ಮೂಲಭಾಗವನ್ನು ಹೊಂದಿದ್ದ ಮಸೆಗಲ್ಲಿನಿಂದ ನಿಶಿತವಾಗಿ ಮಾಡ ಲ್ಪಟ್ಟಿದ್ದ ಹತ್ತು ಬಾಣಗಳಿಂದ ಅವನನ್ನು ಪ್ರಹರಿಸಿದನು. ಅನಂತರ ಪರಮಕ್ರುದ್ಧನಾಗಿದ್ದ ಸಾತ್ವತನು ಪುತ್ರಶೋಕದ ಮನೋರೋಗದಲ್ಲಿ ಮುಳುಗಿಹೋಗಿದ್ದ, ನಹುಷನ ಮಗನಾದ ಯಯಾತಿಯಂತೆಯೇ ಕಾಣು ತ್ತಿದ್ದ, ವೃದ್ಧನಾಗಿದ್ದ, ವೃದ್ಧೋಚಿತವಾದ ಗುಣಗಳಿಂದ ಯುಕ್ತನಾಗಿದ್ದ ಸೋಮದತ್ತನನ್ನು ಬಹಳ ತೀಕ್ಷ್ಣವಾದ ಮತ್ತು ವಜ್ರಾಯುಧದಂತೆ ಶತ್ರುಗಳ ಮೇಲೆ ದುಷ್ಪರಿಣಾಮವನ್ನುಂಟುಮಾಡುವ ಹತ್ತು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಸೋಮದತ್ತನು ಶಕ್ತ್ಯಾಯುಧದಿಂದ ಸಾತ್ಯಕಿಯನ್ನು ಗಾಯಗೊಳಿಸಿ ಪುನಃ ಏಳು ಬಾಣಗಳಿಂದ ಪ್ರಹರಿಸಿದನು.

ಅನಂತರ ಭೀಮಸೇನನು ಸಾತ್ಯಕಿಯ ರಕ್ಷಣೆಗಾಗಿ ದೃಢವಾದ, ನೂತನವಾದ ಮತ್ತು ಘೋರವಾದ ಪರಿಘಾಯುಧದಿಂದ ಸೋಮದತ್ತನ ತಲೆಯನ್ನು ಪ್ರಹರಿಸಿದನು.

ಕ್ರುದ್ಧನಾದ ಸಾತ್ವತನೂ ಸಹ ಅಗ್ನಿಸದೃಶವಾಗಿದ್ದ, ಸುಂದರವಾದ ರೆಕ್ಕೆಯನ್ನು ಹೊಂದಿದ್ದ, ನಿಶಿತವಾಗಿದ್ದ ಒಂದು ಶ್ರೇಷ್ಠವಾದ ಬಾಣವನ್ನು ಸೋಮದತ್ತನ ವಕ್ಷಃಸ್ಥಳದಲ್ಲಿ ಪ್ರಯೋಗಿಸಿದನು. ಭೀಮನು ಪ್ರಯೋಗಿಸಿದ ಘೋರವಾಗಿದ್ದ ಪರಿಘಾಯುಧವೂ, ಸಾತ್ಯಕಿಯು ಪ್ರಯೋಗಿಸಿದ ಬಾಣವೂ ಸೋಮದತ್ತನ ಶರೀರದಲ್ಲಿ ಏಕಕಾಲದಲ್ಲಿ ಆಳವಾಗಿ ಚುಚ್ಚಿಕೊಂಡುವು. ಒಡನೆಯೇ ಮಹಾರಥನಾದ ಸೋಮದತ್ತನು ಮೂರ್ಛಿತನಾಗಿ ಕೆಳಗೆ ಬಿದ್ದನು. ತನ್ನ ಮಗನು ಮೂರ್ಛಿತನಾಗಿ ಬಿದ್ದುದನ್ನು ಕಂಡು ಬಾಹ್ಲೀಕನು ವರ್ಷಾಕಾಲದಲ್ಲಿ ಧಾರಾಕಾರವಾಗಿ ಮಳೆಯನ್ನು ಸುರಿಸುವ ಮೇಘದೋಪಾದಿಯಲ್ಲಿ ಬಾಣಗಳ ಮಳೆಗರೆಯುತ್ತಾ ಸಾತ್ಯಕಿಯನ್ನು ಆಕ್ರಮಿಸಿದನು. ಆ ಸಮಯದಲ್ಲಿಯೂ ಭೀಮಸೇನನು ಸಾತ್ಯಕಿಯ ಸಲುವಾಗಿ ಮಹಾತ್ಮನಾದ ಬಾಹ್ಲೀಕನನ್ನು ಪೀಡಿಸುತ್ತಾ ರಣಾಂಗಣದಲ್ಲಿ ಅವನನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಅದರಿಂದ ಪ್ರತೀಪನ ಮಗನಾದ, ಮಹಾಬಾಹುವಾದ ಬಾಹ್ಲೀಕನು ಬಹಳ ಕ್ರುದ್ಧನಾಗಿ–ದೇವೇಂದ್ರನು ವಜ್ರಾಯುಧವನ್ನು ಪರ್ವತದಲ್ಲಿ ನೆಟ್ಟಂತೆ–ಶಕ್ತ್ಯಾಯುಧವನ್ನು ಭೀಮನ ವಕ್ಷಃಸ್ಥಳದಲ್ಲಿ ನೆಟ್ಟನು. ಹಾಗೆ ಪ್ರಹೃತನಾದ ಭೀಮಸೇನನು ನಡುಗಿಹೋದನು ಮತ್ತು ಕ್ಷಣಕಾಲ ಮೂರ್ಛಿತನೂ ಆದನು. ಸ್ವಲ್ಪಹೊತ್ತಿನಲ್ಲಿಯೇ ಬಲಿಷ್ಠನಾದ ಭೀಮಸೇನನು ಪುನಃ ಸಂಜ್ಞೆಯನ್ನು ಪಡೆದುಕೊಂಡು ಬಾಹ್ಲೀಕನ ಮೇಲೆ ಗದಾಪ್ರಹಾರವನ್ನು ಮಾಡಿದನು. ಭೀಮಸೇನನಿಂದ ಪ್ರಹತವಾದ (ಕಳುಹಿಸಲ್ಪಟ್ಟ) ಆ ಮಹಾಗದೆಯು ಬಾಹ್ಲೀಕನ ತಲೆಯನ್ನು ತುಂಡರಿಸಿತು. ವಜ್ರಪಾತದಿಂದ ಪರ್ವತವು ಕೆಳಕ್ಕೆ ಬೀಳುವಂತೆ–ಗದಾಪ್ರಹಾರದಿಂದ ಹತನಾದ ಬಾಹ್ಲೀಕನು ಕೆಳಕ್ಕೆ ಬಿದ್ದನು. ಪುರುಷರ್ಷಭನಾದ, ವೀರನಾದ ಬಾಹ್ಲೀಕನು ಹೀಗೆ ಹತನಾಗಲಾಗಿ, ದಶರಥಪುತ್ರನಾದ ಶ್ರೀರಾಮನಿಗೆ ಸಮಾನವಿಕ್ರಮರಾಗಿದ್ದ ನಿನ್ನ ಹತ್ತು ಮಕ್ಕಳು ಭೀಮಸೇನನನ್ನು ಬಾಣಗಳಿಂದ ಬಹಳವಾಗಿ ಪೀಡಿಸಿದರು. ನಾಗದತ್ತ,

ದೃಢರಥ (ದೃಢರಥಾಶ್ರಯ), ಮಹಾಬಾಹು, ಅಯೋಭುಜ (ಅಯೋ ಬಾಹು) ದೃಢ (ದೃಢಕ್ಷತ್ರ), ಸುಹಸ್ತ, ವಿರಜಸ, ಪ್ರಮಾಥಿ, ಉಗ್ರ (ಉಗ್ರಶ್ರವ), ಅನುಯಾಯೀ (ಅಗ್ರಯಾಯೀ)–ಎಂಬ ನಿನ್ನ ಹತ್ತು ಮಕ್ಕಳನ್ನು ನೋಡಿ ದೊಡನೆಯೇ ಭೀಮಸೇನನು ಬಹಳವಾಗಿ ಕೋಪಗೊಂಡನು. ಭಾರವಾದ ಕಾರ್ಯವನ್ನು ಸಾಧಿಸುವ ಸಾಮರ್ಥ್ಯವಿದ್ದ ಹತ್ತು ಬಾಣಗಳನ್ನು ಬತ್ತಳಿಕೆ ಯಿಂದ ತೆಗೆದು ಒಬ್ಬೊಬ್ಬ ಕುರುರಾಜಕುಮಾರನನ್ನೂ ಉದ್ದೇಶಿಸಿ ಮರ್ಮ ಸ್ಥಾನಗಳಲ್ಲಿ ಒಂದೊಂದು ಬಾಣವನ್ನೇ ಪ್ರಯೋಗಿಸಿದನು. ಚಂಡಮಾರುತ ದಿಂದ ಭಗ್ನವಾದ ವೃಕ್ಷಗಳು ಪರ್ವತದ ಶಿಖರದಿಂದ ಕೆಳಕ್ಕೆ ಬೀಳುವಂತೆ– ಭೀಮನ ಬಾಣಗಳಿಂದ ಪ್ರಹೃತರಾದ ನಿನ್ನ ಮಕ್ಕಳು ಅಸುನೀಗಿ ತೇಜಸ್ಸಿನಿಂದ ಹೀನರಾಗಿ ರಥಗಳಿಂದ ಕೆಳಗುರುಳಿದರು. ಭೀಮಸೇನನು ಹತ್ತು ಬಾಣ ಗಳಿಂದ ನಿನ್ನ ಮಕ್ಕಳನ್ನು ಸಂಹರಿಸಿ ಬಳಿಕ ಕರ್ಣನಿಗೆ ಅತ್ಯಂತಪ್ರಿಯ ಪುತ್ರನಾದ ವೃಷಸೇನನನ್ನು ಬಾಣಗಳಿಂದ ಮುಚ್ಚಿದನು. ಅದನ್ನು ನೋಡಿದ ಕರ್ಣನ ಅನುಜನಾದ, ಸುಪ್ರಸಿದ್ಧನಾದ, ಬಲಿಷ್ಠನಾದ ವೃಕರಥನೆಂಬುವನು ಭೀಮನನ್ನು ನಾರಾಚಗಳಿಂದ ಪ್ರಹರಿಸಿ ಬಹಳವಾಗಿ ಗಾಯಗೊಳಿಸಿದನು. ಭೀಮಸೇನನು ಅದನ್ನು ಲೆಕ್ಕಿಸದೆಯೇ ನಿನ್ನ ಭಾವಮೈದಂದಿರ ಕಡೆಯ ಏಳು ಮಂದಿ ರಥಿಕರನ್ನೂ ನಾರಾಚಗಳಿಂದ ಸಂಹರಿಸಿ ಶತಚಂದ್ರನನ್ನೂ ಸಂಹರಿಸಿದನು. ಮಹಾರಥನಾದ ಶತಚಂದ್ರನನ್ನು ಭೀಮಸೇನನು ಸಂಹರಿಸಿದುದನ್ನು ಸಹಿಸಿಕೊಳ್ಳಲಾಗದ ವೀರರಾದ ಮಹಾರಥರಾದ ಗವಾಕ್ಷ, ಶರಭ, ವಿಭು, ಸುಭಗ, ಭಾನುದತ್ತ–ಎಂಬ ಐವರು ಶಕುನಿಯ ಸಹೋದರರು ಭೀಮಸೇನನನ್ನು ಆಕ್ರಮಿಸಿ ತೀಕ್ಷ್ಣವಾದ ಬಾಣಗಳಿಂದ ಪ್ರಹರಿಸಿದರು. ವೃಷ್ಟಿವೇಗದಿಂದ ಪರ್ವತವು ಸ್ವಲ್ಪವಾದರೂ ಕಂಪಿಸದಂತೆ–ಶಕುನಿಯ ಸಹೋದರರು ಪ್ರಯೋಗಿಸಿದ ಬಾಣಗಳಿಂದ ಬಲಿಷ್ಠನಾದ ಭೀಮಸೇನನು ಸ್ವಲ್ಪವೂ ವಿಚಲಿತನಾಗದೇ ಐದು ಬಾಣಗಳಿಂದ ಆ ಐವರು ಅತಿರಥರನ್ನೂ ಸಂಹರಿಸಿದನು. ಗಾಂಧಾರವೀರರು ಭೀಮನಿಂದ ಹತರಾದುದನ್ನು ಕಂಡು ನಿನ್ನ ಕಡೆಯ ರಾಜರೆಲ್ಲರೂ ನಡುಗಿಹೋದರು. ಅನಂತರ ಕ್ರುದ್ಧನಾದ ಯುಧಿಷ್ಠಿರನು ದ್ರೋಣರೂ ಮತ್ತು ನಿನ್ನ ಮಕ್ಕಳೂ ನೋಡುತ್ತಿದ್ದಂತೆಯೇ ನಿನ್ನ ಸೈನ್ಯವನ್ನು ವಿನಾಶಮಾಡಲು ಉಪಕ್ರಮಿಸಿದನು. ಯುದ್ಧದಲ್ಲಿ ಕ್ರುದ್ಧ

ನಾದ ಯುಧಿಷ್ಠಿರನು ಅಂಬಷ್ಠರನ್ನೂ, ಮಾಲವರನ್ನೂ, ಶೂರರಾದ ತ್ರಿಗರ್ತ ರನ್ನೂ, ಶಿಬಿಗಳನ್ನೂ ಮೃತ್ಯುಲೋಕಕ್ಕೆ ಕಳುಹಿಸಿಕೊಟ್ಟನು. ಅಂತೆಯೇ ಅಭೀಷಾಹರನ್ನೂ, ಶೂರಸೇನರನ್ನೂ, ಬಾಹ್ಲೀಕರನ್ನೂ, ವಸಾತಿಗಳನ್ನೂ ಅಪಾರಸಂಖ್ಯೆಯಲ್ಲಿ ಸಂಹರಿಸಿ ಭೂಮಿಯನ್ನು ರಕ್ತದ ಕೆಸರಿನಿಂದ ಕೂಡಿದು ದನ್ನಾಗಿ ಮಾಡಿದನು. ಯುಧಿಷ್ಠಿರನು ತನ್ನ ಬಾಣಗಳಿಂದ ಯೌಧೇಯರನ್ನೂ, ಮಾಲವರನ್ನೂ, ಮದ್ರಕರ ಸಮೂಹಗಳನ್ನೂ ಮೃತ್ಯುಲೋಕಕ್ಕೆ ಕಳುಹಿಸಿದನು. ಯುಧಿಷ್ಠಿರನ ರಥದ ಸಮೀಪದಲ್ಲಿ–"ಸಂಹರಿಸಿರಿ! ಆಯುಧ ಗಳನ್ನು ತೆಗೆದುಕೊಂಡು ಬನ್ನಿರಿ! ಹಿಡಿಯಿರಿ! ಗಾಯಗೊಳಿಸಿರಿ! ಛಿನ್ನ-ಭಿನ್ನಮಾಡಿರಿ!"–ಇವೇ ಮುಂತಾದ ಭಯಂಕರಶಬ್ದಗಳು ಕೇಳಿಬರುತ್ತಿದ್ದುವು. ನಿನ್ನ ಕಡೆಯ ಸೈನಿಕರನ್ನು ಬಾಣಗಳ ಸತತಪ್ರಹಾರದಿಂದ ದಿಕ್ಕಾಪಾಲಾಗಿ ಓಡಿಸುತ್ತಿದ್ದ ಯುಧಿಷ್ಠಿರನನ್ನು ನೋಡಿದ ದ್ರೋಣರು ನಿನ್ನ ಮಗನಿಂದಲೂ ಪ್ರಚೋದಿತರಾಗಿ ಯುಧಿಷ್ಠಿರನ ಮೇಲೆ ಬಾಣವರ್ಷವನ್ನು ಸುರಿಸಿದರು. ಪರಮಕ್ರುದ್ಧರಾಗಿದ್ದ ದ್ರೋಣರು ಯುಧಿಷ್ಠಿರನನ್ನು ವಾಯವ್ಯಾಸ್ತ್ರದಿಂದ ಪ್ರಹರಿಸಿದರು. ಯುಧಿಷ್ಠಿರನೂ ಸಹ ದ್ರೋಣರು ಬಿಟ್ಟ ದಿವ್ಯಾಸ್ತ್ರವನ್ನು ದಿವ್ಯಾಸ್ತ್ರದಿಂದಲೇ ನಿವಾರಿಸಿದನು. ಯುಧಿಷ್ಠಿರನು ಬಿಟ್ಟ ಮಹಾಸ್ತ್ರದಿಂದ ದ್ರೋಣರ ವಾಯವ್ಯಾಸ್ತ್ರವು ವಿನಾಶಹೊಂದಲಾಗಿ, ಪರಮಕ್ರುದ್ಧರಾದ ದ್ರೋಣರು ಪಾಂಡುನಂದನನನ್ನು ಸಂಹರಿಸುವ ಇಚ್ಛೆಯಿಂದ ವಾರುಣ, ಯಾಮ್ಯ, ಆಗ್ನೇಯ, ತ್ವಾಷ್ಟ್ರ , ಸಾವಿತ್ರಗಳೆಂಬ ದಿವ್ಯಾಸ್ತ್ರಗಳನ್ನೂ ಯುಧಿಷ್ಠಿ ರನ ಮೇಲೆ ಪ್ರಯೋಗಿಸಿದರು. ಮಹಾಬಾಹುವಾದ ಧರ್ಮಜನು ದ್ರೋಣರು ಬಿಟ್ಟ ಅಸ್ತ್ರಗಳಿಂದ ಸ್ವಲ್ಪವೂ ಭಯಗೊಳ್ಳದೇ ಅದುವರೆಗೂ ಬಿಟ್ಟ ಮತ್ತು ಮುಂದೆ ಬಿಡಲ್ಪಡುತ್ತಿದ್ದ ಎಲ್ಲ ಮಹಾಸ್ತ್ರಗಳನ್ನೂ ಪ್ರತ್ಯಸ್ತ್ರಗಳಿಂದಲೇ ವಿನಾಶಗೊಳಿಸಿದನು. ಜೀವಸಹಿತವಾಗಿ ಧರ್ಮರಾಜನನ್ನು ಸೆರೆ ಹಿಡಿಯುವೆನೆಂದು ಮಾಡಿದ್ದ ತಮ್ಮ ಪ್ರತಿಜ್ಞೆಯನ್ನು ಸತ್ಯಪ್ರತಿಜ್ಞೆಯನ್ನಾಗಿ ಮಾಡುವ ಆಶಯದಿಂದಲೂ–ಧರ್ಮತನಯನನ್ನು ಹಿಂಸೆಪಡಿಸುವ ಆಶಯ ದಿಂದಲೂ ನಿನ್ನ ಮಗನ ಹಿತದಲ್ಲಿಯೇ ಆಸಕ್ತಿಯನ್ನು ಹೊಂದಿದ್ದ ದ್ರೋಣರು ಐಂದ್ರಾಸ್ತ್ರವನ್ನೂ ಪ್ರಾಜಾಪತ್ಯವೆಂಬ ಅಸ್ತ್ರವನ್ನೂ ಪ್ರಯೋಗಿಸಿದರು. ಸಿಂಹದಂತೆ ಮತ್ತು ಮದಿಸಿದ ಆನೆಯಂತೆ ಗಮನವುಳ್ಳ, ವಿಶಾಲವಕ್ಷನಾದ,

ವಿಶಾಲವಾಗಿಯೂ ಮತ್ತು ಕೆಂಪಾಗಿಯೂ ಇದ್ದ ಕಣ್ಣುಗಳನ್ನು ಹೊಂದಿದ್ದ, ಮಹಾತೇಜಸ್ವಿಯಾದ, ಕುರುಪತಿಯಾದ ಯುಧಿಷ್ಠಿರನು ಮತ್ತೊಂದು ಮಹೇಂದ್ರಾಸ್ತ್ರವನ್ನೇ ಪ್ರಕಟಿಸಿ ಅದರಿಂದ ದ್ರೋಣರು ಬಿಟ್ಟಿದ್ದ ಮಹಾಸ್ತ್ರವನ್ನು ವಿನಾಶಗೊಳಿಸಿದನು. ತಾವು ಬಿಟ್ಟ ಅಸ್ತ್ರಗಳೆಲ್ಲವೂ ನಾಶಹೊಂದಲಾಗಿ, ಪರಮಕ್ರುದ್ಧರಾದ ದ್ರೋಣರು ಯುಧಿಷ್ಠಿರನನ್ನು ವಧಿಸಬೇಕೆಂದು ನಿಶ್ಚಯಿಸಿ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದರು. ದ್ರೋಣರು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದೊಡನೆಯೇ ರಣಾಂಗಣವು ಘೋರಾಂಧಕಾರದಿಂದ ಆವೃತವಾಯಿತು. ರಣರಂಗದಲ್ಲಿ–'ಎಲ್ಲಿ ಏನಿದೆ?'–ಎಂಬುದೇ ಯಾರಿಗೂ ತಿಳಿಯುತ್ತಿರಲಿಲ್ಲ. ಎಲ್ಲ ಪ್ರಾಣಿಗಳೂ ಬಹಳವಾಗಿ ಭಯಗೊಂಡುವು. ದ್ರೋಣರು ಬ್ರಹ್ಮಾಸ್ತ್ರವನ್ನು ಬಿಟ್ಟುದನ್ನು ನೋಡಿ ಕುಂತಿಯ ಮಗನಾದ ಯುಧಿಷ್ಠಿರನೂ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ದ್ರೋಣರ ಅಸ್ತ್ರವನ್ನು ನಿಷ್ಫಲಗೊಳಿಸಿದನು. ಅನಂತರ ಧರ್ಮರಾಜ–ದ್ರೋಣರ ಯುದ್ಧವನ್ನು ಕುತೂಹಲದಿಂದ ನೋಡುತ್ತಿದ್ದ ಸೈನಿಕಮುಖ್ಯರು ಸರ್ವಯುದ್ಧವಿಶಾರದರಾದ, ಮಹಾಧನುಷ್ಮಂತರಾದ, ನರರ್ಷಭರಾದ ದ್ರೋಣ-ಪಾರ್ಥರನ್ನು ಬಹಳವಾಗಿ ಪ್ರಶಂಸಿಸಿದರು. ಅನಂತರ ಕೋಪದಿಂದ ರಕ್ತಾಕ್ಷರಾಗಿದ್ದ ದ್ರೋಣರು ಯುಧಿಷ್ಠಿರನನ್ನು ಬಿಟ್ಟು (ಅವನೊಡನೆ ಯುದ್ಧಮಾಡುವುದನ್ನು ನಿಲ್ಲಿಸಿ) ವಾಯವ್ಯಾಸ್ತ್ರದಿಂದ ದ್ರುಪದನ ಸೈನ್ಯವನ್ನು ಧ್ವಂಸಮಾಡಿದರು. ದ್ರೋಣರ ಬಾಣಗಳಿಂದ ಬಹಳವಾಗಿ ಪೀಡಿತರಾದ ಪಾಂಚಾಲರು ಭೀಮಾರ್ಜುನರು ನೋಡುತ್ತಿದ್ದಂತೆಯೇ ಭಯದಿಂದ ಪಲಾಯನಮಾಡಿದರು. ಆಗ ಭೀಮಾರ್ಜುನರು ದೊಡ್ಡದಾದ ಎರಡು ರಥಸೈನ್ಯದ ಮೂಲಕವಾಗಿ ಓಡುತ್ತಿದ್ದ ಸೈನಿಕರನ್ನು ತಡೆದು ನಿಲ್ಲಿಸಿ ಬಹಳ ಬೇಗ ದ್ರೋಣರ ಕಡೆಗೆ ಧಾವಿಸಿದರು. ಅರ್ಜುನನು ದಕ್ಷಿಣಪಾರ್ಶ್ವದಲ್ಲಿಯೂ–ಭೀಮಸೇನನು ಉತ್ತರಪಾರ್ಶ್ವದಲ್ಲಿಯೂ ನಿಂತು ದ್ರೋಣರೊಡನೆ ಯುದ್ಧಮಾಡಲು ತೊಡಗಿದರು. ದ್ರೋಣರ ಮೇಲೆ ಎರಡು ಕಡೆಗಳಿಂದಲೂ ದೊಡ್ಡ ಬಾಣಗಳ ಮಳೆಯನ್ನೇ ಸುರಿಸಿದರು. ಮಹಾರಾಜ! ಆ ಸಮಯದಲ್ಲಿ ಕೇಕಯರೂ, ಸೃಂಜಯರೂ, ಮಹಾತೇಜಸ್ವಿಗಳಾದ ಪಾಂಚಾಲರೂ, ಸಾತ್ವತಸೈನಿಕರಿಂದ ಕೂಡಿದ ಮತ್ಸ್ಯರೂ ಭೀಮಾರ್ಜುನರನ್ನು ಅನುಸರಿಸಿ ಹೋದರು. ಕಿರೀಟಿಯಿಂದ

ಹತವಾಗುತ್ತಿದ್ದ ಕೌರವರ ಸೈನ್ಯವು ನಿದ್ರೆಯಿಂದಲೂ–ಕತ್ತಲೆಯಿಂದಲೂ ಬಳಲಿ ಪುನಃ ಚದುರಿಹೋಯಿತು. ದ್ರೋಣರೂ–ನಿನ್ನ ಮಕ್ಕಳೂ ಓಡಿ ಹೋಗುತ್ತಿದ್ದ ಸೈನಿಕರನ್ನು ತಡೆದರೂ ಆ ಸಮಯದಲ್ಲಿ ದಿಕ್ಕಾಪಾಲಾಗಿ ಓಡಿ ಹೋಗುತ್ತಿದ್ದ ಯೋಧರನ್ನು ತಡೆದು ನಿಲ್ಲಿಸಲು ಅವರಿಗೆ ಸಾಧ್ಯವಾಗಲಿಲ್ಲ."

೧೫೭ನೆಯ ಅಧ್ಯಾಯವು ಮುಗಿಯಿತು.

೧೫೮ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ದುರ್ಯೋಧನ-ಕರ್ಣರ ಸಂಭಾಷಣೆ : ಕೃಪರು ಕರ್ಣನನ್ನು ನಿಂದಿಸಿದುದು : ಕರ್ಣನು ಕೃಪರನ್ನು ಅವಮಾನಪಡಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಪಾಂಡವರ ಮಹಾಸೈನ್ಯದ ಪ್ರಭಾವವು ಅಧಿಕವಾಗುತ್ತಿರುವುದನ್ನು ನೋಡಿ, ಅದನ್ನು ಎದುರಿಸಲು ಸಾಧ್ಯವಾಗಲಾರದೆಂದು ಬಗೆದು ದುರ್ಯೋಧನನು ಕರ್ಣನೊಡನೆ ಹೇಳಿದನು :

"ಮಿತ್ರವತ್ಸಲನಾದ ಕರ್ಣನೇ! ಮಿತ್ರರಾದವರು ತಮ್ಮ ಕರ್ತವ್ಯವನ್ನು ನಿರ್ವಹಿಸುವ ಕಾಲವು ಇದೀಗ ಸನ್ನಿಹಿತವಾಗಿದೆ. ಕ್ರೋಧಾಭಿಭೂತರಾಗಿರುವ ಸರ್ಪಗಳಂತೆ ದೀರ್ಘವಾಗಿ ನಿಟ್ಟುಸಿರುಬಿಡುತ್ತಿರುವ, ಪಾಂಚಾಲ-ಮತ್ಸ್ಯ-ಕೇಕಯ-ಪಾಂಡವಮಹಾರಥರಿಂದ ಎಲ್ಲ ಕಡೆಗಳಿಂದಲೂ ಆಕ್ರಮಿಸಲ್ಪಟ್ಟಿರುವ ನಮ್ಮ ಕಡೆಯ ಮಹಾರಥರನ್ನೂ–ಯೋಧರನ್ನೂ ನೀನು ಸಂರಕ್ಷಿಸು. ತಮಗೆ ಲಭಿಸುತ್ತಿರುವ ವಿಜಯದಿಂದ ಪ್ರಫುಲ್ಲವದನರಾಗಿ ಪ್ರಕಾಶಿಸುತ್ತಿರುವ ಪಾಂಡವರೂ, ಇಂದ್ರಸಮಾನಪರಾಕ್ರಮಿಗಳಾದ ಬಹು ಸಂಖ್ಯಾತ ಪಾಂಚಾಲ ರಥಸೈನಿಕರೂ ಅತ್ಯಂತಹೃಷ್ಟರಾಗಿ ಸಿಂಹನಾದಗಳನ್ನು ಮಾಡುತ್ತಿದ್ದಾರೆ."

"ಭಾರತನೇ! ನೀನು ಈ ವಿಷಯವಾಗಿ ಚಿಂತಿಸುವ ಕಾರಣವಿಲ್ಲ. ಸಾಕ್ಷಾತ್ ಇಂದ್ರನೇ ಪಾರ್ಥನನ್ನು ರಕ್ಷಿಸಲು ಬಂದರೂ ಅರ್ಜುನನನ್ನು ನಾನು ಶೀಘ್ರವಾಗಿ ಪರಾಜಯಗೊಳಿಸಿ ಅವನನ್ನು ಸಂಹರಿಸುತ್ತೇನೆ. ನಾನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಸಮಾಧಾನಹೊಂದು ; ದುರ್ಯೋಧನ! ಪಾಂಡುಪುತ್ರರನ್ನೂ–ಅವರ ಜೊತೆಯಲ್ಲಿ ಬರುವ

ಪಾಂಚಾಲರನ್ನೂ ನಾನು ಸಂಹರಿಸುತ್ತೇನೆ. ಸೇನಾನಿಯು (ಷಣ್ಮುಖನು) ತಾರಕಾಸುರನನ್ನು ಸಂಹರಿಸಿ ಇಂದ್ರನಿಗೆ ಜಯವನ್ನು ಗಳಿಸಿಕೊಟ್ಟಂತೆ–ನಾನು ನಿನಗೆ ಜಯವನ್ನು ಗಳಿಸಿಕೊಡುತ್ತೇನೆ. ನಿನಗೆ ಪ್ರಿಯವಾಗುವ ಕಾರ್ಯ ಮಾಡುವುದೇ ನನ್ನ ಕರ್ತವ್ಯವೆಂದು ಭಾವಿಸಿ ನಾನು ಇನ್ನೂ ಜೀವಿಸಿದ್ದೇನೆ.

**ಸರ್ವೇಷಾಮೇವ ಪಾರ್ಥಾನಾಂ ಫಾಲ್ಗುನೋ ಬಲವತ್ತರಃ ।**
**ತಸ್ಯಾಮೋಘಾಂ ವಿಮೋಕ್ಷ್ಯಾಮಿ ಶಕ್ತಿಂ ಶಕ್ರವಿನಿರ್ಮಿತಾಮ್ ॥೮॥**

ದುರ್ಯೋಧನ! ಕುಂತಿಯ ಐವರು ಮಕ್ಕಳಲ್ಲಿ ಅರ್ಜುನನೇ ಮಹಾಬಲಿಷ್ಠನು. ಶಕ್ರನಿರ್ಮಿತವಾದ ಅಮೋಘವಾದ (ನಿಷ್ಫಲವಾಗದಿರುವ) ಶಕ್ತ್ಯಾಯುಧವನ್ನು ಅವನ ಮೇಲೆ ಪ್ರಯೋಗಿಸುತ್ತೇನೆ.

**ತಸ್ಮಿನ್ಹತೇ ಮಹೇಷ್ವಾಸೇ ಭ್ರಾತರಸ್ತಸ್ಯ ಮಾನದ ।**
**ತವ ವಶ್ಯಾ ಭವಿಷ್ಯನ್ತಿ ವನಂ ಯಾಸ್ಯನ್ತಿ ವಾ ಪುನಃ ॥೯॥**

ಮಾನದನೇ! ನಾನು ಬಿಡುವ ಶಕ್ತ್ಯಾಯುಧದಿಂದ ಮಹಾಧನುಷ್ಮಂತ ನಾದ ಪಾರ್ಥನೊಬ್ಬನು ಹತನಾಗಿಬಿಟ್ಟರೆ ಅವನ ಸಹೋದರರೆಲ್ಲರೂ ನಿನಗೆ ಅಧೀನರಾಗುತ್ತಾರೆ ಅಥವಾ ಪುನಃ ಕಾಡಿಗಾದರೂ ಹೊರಟುಹೋಗುತ್ತಾರೆ.

**ಮಯಿ ಜೀವತಿ ಕೌರವ್ಯ ವಿಷಾದಂ ಮಾ ಕೃಥಾಃ ಕ್ವಚಿತ್ ।**
**ಅಹಂ ಜೇಷ್ಯಾಮಿ ಸಮರೇ ಸಹಿತಾನ್ಸರ್ವಪಾಣ್ಡವಾನ್ ॥೧೦॥**

ಕೌರವ್ಯ! ನಾನು ಜೀವಿಸಿರುವವರೆಗೆ ನೀನು ಖಂಡಿತವಾಗಿಯೂ ವಿಷಾದಿಸಬೇಡ. ಯುದ್ಧದಲ್ಲಿ ಸಂಘಟಿತರಾಗಿ ಬರುವ ಎಲ್ಲ ಪಾಂಡವರನ್ನೂ ನಾನು ಪರಾಜಯಗೊಳಿಸುತ್ತೇನೆ.

**ಪಾಞ್ಚಾಲಾನ್ಕೇಕಯಾಂಶ್ಚೈವ ವೃಷ್ಣೀಂಶ್ಚಾಪಿ ಸಮಾಗತಾನ್ ।**
**ಬಾಣೌಘೈಃ ಶಕಲೀಕೃತ್ಯ ತವ ದಾಸ್ಯಾಮಿ ಮೇದಿನೀಮ್ ॥೧೧॥**

ಸುಯೋಧನ! ರಣಾಂಗಣಕ್ಕೆ ಯುದ್ಧಮಾಡಲು ಬರುವ ಪಾಂಚಾಲ ರನ್ನೂ, ಕೇಕಯರನ್ನೂ, ವೃಷ್ಣಿಗಳನ್ನೂ ನನ್ನ ಬಾಣಗಳ ಸಮೂಹಗಳಿಂದ ತುಂಡು-ತುಂಡು ಮಾಡಿ ಈ ನಿಷ್ಕಂಟಕವಾದ ಭೂಮಿಯನ್ನು ನಿನಗೆ ಒಪ್ಪಿಸಿಕೊಡುತ್ತೇನೆ.”

ಮಹಾರಾಜ! ಹೀಗೆ ದುರ್ಯೋಧನನಿಗೆ ಆಶ್ವಾಸನೆಯನ್ನು ಕೊಡುತ್ತಿದ್ದ ಸೂತನ ಮಗನಾದ ಕರ್ಣನನ್ನು ಕುರಿತು ಮಹಾಬಾಹುಗಳಾದ ಕೃಪರು ನಸುನಗುತ್ತಾ ಈ ಮಾತುಗಳನ್ನು ಹೇಳಿದರು :

**ಶೋಭನಂ ಶೋಭನಂ ಕರ್ಣ ಸನಾಥಃ ಕುರುಪುಙ್ಗವಃ ।**
**ತ್ವಯಾ ನಾಥೇನ ರಾಧೇಯ ವಚಸಾ ಯದಿ ಸಿಧ್ಯತಿ ॥೧೩॥**

“ಕರ್ಣ! ನಿನ್ನ ಮಾತುಗಳು ಬಹಳ ಸೊಗಸಾಗಿವೆ ; ಬಹಳ ಸೊಗಸಾಗಿವೆ. ನೀನು ನಾಥನಾಗಿರುವುದರಿಂದಲೇ (ರಕ್ಷಕನಾಗಿರುವುದರಿಂದಲೇ) ನಮ್ಮ ಕುರುರಾಜನು ಸನಾಥನಾಗಿದ್ದಾನೆ (ಸಂಪೂರ್ಣರಕ್ಷಣೆಯನ್ನು ಪಡೆದಿದ್ದಾನೆ). ಮಾತಿನಲ್ಲೇ ಎಲ್ಲವೂ ಸಿದ್ಧಿಸುವುದಾದರೆ ಮಾತ್ರ ನೀನು ಅವನನ್ನು ರಕ್ಷಿಸುವುದು ; ಪಾಂಡವರನ್ನು ಪರಾಜಯಗೊಳಿಸುವುದು–ಎಲ್ಲವೂ ಆಗಿಯೇಬಿಡುತ್ತದೆ. ಕೌರವನ ಸಮೀಪದಲ್ಲಿ ನಿಂತುಕೊಂಡು ನೀನು ಬಹಳವಾಗಿ ಹರಟುವೆಯೇ ಹೊರತು ನಿನ್ನಲ್ಲಿ ಕಿಂಚಿತ್ತಾದರೂ ಪರಾಕ್ರಮವಿರುವುದಂತೂ ಕಾಣುತ್ತಿಲ್ಲ. ನಿನ್ನಲ್ಲಿರುವ ಪರಾಕ್ರಮದ ಫಲವೂ ಸಹ ಗೋಚರಿಸುತ್ತಿಲ್ಲ. ನೀನು ಹಲವು ಬಾರಿ ಪಾಂಡುವಿನ ಮಕ್ಕಳೊಡನೆ ಯುದ್ಧದಲ್ಲಿ ತೊಡಗಿರುವೆಯಾದರೂ ಎಲ್ಲ ಸಮಯಗಳಲ್ಲಿಯೂ ನೀನು ಪಾಂಡವರಿಂದ ಪರಾಜಿತನಾಗಿಯೇ ಹಿಂದಿರುಗಿರುವೆ.

**ಹ್ರಿಯಮಾಣೇ ತದಾ ಕರ್ಣ ಗನ್ಧರ್ವೈರ್ಧೃತರಾಷ್ಟ್ರಜೇ ।**
**ತದಾಯುಧ್ಯನ್ತ ಸೈನ್ಯಾನಿ ತ್ವಮೇಕೋಗ್ರೇಽಪಲಾಯಥಾಃ ॥೧೬॥**

ಗಂಧರ್ವರು ದುರ್ಯೋಧನನನ್ನು ಸೆಳೆದೊಯ್ಯುತ್ತಿದ್ದಾಗ ನಮ್ಮ ಸೈನಿಕರೆಲ್ಲರೂ ಯುದ್ಧಮಾಡುತ್ತಲೇ ಇದ್ದರು. ಆ ಸಮಯದಲ್ಲಿ ನೀನೊಬ್ಬನೇ ಎಲ್ಲರಿಗಿಂತಲೂ ಮೊದಲು ಪಲಾಯನಮಾಡಿದೆ. ಅಲ್ಲವೇ?

**ವಿರಾಟನಗರೇ ಚಾಪಿ ಸಮೇತಾಃ ಸರ್ವಕೌರವಾಃ ।**
**ಪಾರ್ಥೇನ ನಿರ್ಜಿತಾ ಯುದ್ಧೇ ತ್ವಂ ಚ ಕರ್ಣ ಸಹಾನುಜಃ ॥೧೭॥**

ವಿರಾಟನಗರದಲ್ಲಿಯೂ ಸಹ ಸಂಘಟಿತರಾಗಿ ಹೋಗಿದ್ದ ಎಲ್ಲ ಕೌರವರೂ ಅರ್ಜುನನೊಬ್ಬನಿಂದಲೇ ಪರಾಜಿತರಾದರು. ಆ ಸಮಯದಲ್ಲಿ ನೀನೂ ಸಹ ನಿನ್ನ ಅನುಜನೊಡನೆ ಪರಾಜಿತನಾದೆ. ಅಲ್ಲವೇ?

**ಏಕಸ್ಯಾಪ್ಯಸಮರ್ಥಸ್ತ್ವಂ ಫಾಲ್ಗುನಸ್ಯ ರಣಾಜಿರೇ ।**
**ಕಥಮುತ್ಸಹಸೇ ಜೇತುಂ ಸಕೃಷ್ಣಾನ್ಸರ್ವಪಾಣ್ಡವಾನ್ ॥೧೮॥**

ರಣಾಂಗಣದಲ್ಲಿ ಪಾರ್ಥನೊಬ್ಬನನ್ನು ಎದುರಿಸಲೂ ನೀನು ಸಮರ್ಥನಲ್ಲ. ಹೀಗಿರುವಾಗ ಶ್ರೀಕೃಷ್ಣಸಹಿತರಾದ ಎಲ್ಲ ಪಾಂಡವರನ್ನೂ ಜಯಿಸುವ ಉತ್ಸಾಹವು ನಿನಗೆಲ್ಲಿಂದ ಬಂತು?



**ಅಬ್ರುವನ್ಕರ್ಣ ಯುಧ್ಯಸ್ವ ಕತ್ಥಸೇ ಬಹು ಸೂತಜ ।**
**ಅನುಕ್ತ್ವಾ ವಿಕ್ರಮೇದ್ಯಸ್ತು ತದ್ವೈ ಸತ್ಪುರುಷವ್ರತಮ್ ॥೧೯॥**

ಸೂತಜ! ನೀನು ಬಹಳ ಮಾತನಾಡುತ್ತಿರುವೆ. ಯಾವ ಮಾತನ್ನೂ ಆಡದೇ ಯುದ್ಧಮಾಡು. ತನ್ನ ಪರಾಕ್ರಮದ ವಿಷಯವಾಗಿ ಯಾವುದೊಂದು

ಮಾತನ್ನೂ ಆಡದೆ ಪರಾಕ್ರಮವನ್ನು ಕೃತಿಯಲ್ಲಿ ತೋರಿಸುವುದೇ ಸತ್ಪುರುಷನು ಅನುಸರಿಸುವ ಮಾರ್ಗವಾಗಿದೆ.

ಸೂತಪುತ್ರ! ನೀನು ಮಾಡುವ ಗರ್ಜನೆಯೂ ಶರತ್ಕಾಲದ ಮೋಡದ ಗರ್ಜನೆಯಂತೆ ನಿಷ್ಫಲವೇ ಆಗುತ್ತದೆ. ಆದರೆ ರಾಜನು ಮಾತ್ರ ಈ ವಿಷಯವನ್ನು ತಿಳಿಯುತ್ತಿಲ್ಲ.

**ತಾವದ್ಗರ್ಜಸ್ವ ರಾಧೇಯ ಯಾವತ್ಪಾರ್ಥಂ ನ ಪಶ್ಯಸಿ ।**
**ಆರಾತ್ಪಾರ್ಥಂ ಹಿ ತೇ ದೃಷ್ಟ್ವಾ ದುರ್ಲಭಂ ಗರ್ಜಿತಂ ಪುನಃ ॥೨೧॥**

ರಾಧೇಯ! ನೀನು ಪಾರ್ಥನನ್ನು ಎಲ್ಲಿಯವರೆಗೆ ನೋಡುವುದಿಲ್ಲವೋ–ಅಲ್ಲಿಯವರೆಗೂ (ಯುದ್ಧಭೂಮಿಯಲ್ಲಿ ಪಾರ್ಥನನ್ನು ನೋಡುವವರೆಗೂ) ಗರ್ಜಿಸುತ್ತಲೇ ಇರು. ಪಾರ್ಥನನ್ನು ನೀನು ಸಮೀಪದಲ್ಲಿ ನೋಡಿದನಂತರ ಮುಂದೆ ನಿನಗೆ ಗರ್ಜನೆಮಾಡಲು ಸಾಧ್ಯವಾಗುವುದೇ ಇಲ್ಲ.

**ತ್ವಮನಾಸಾದ್ಯ ತಾನ್ಬಾಣಾನ್ಫಾಲ್ಗುನಸ್ಯ ವಿಗರ್ಜಸಿ ।**
**ಪಾರ್ಥಸಾಯಕವಿದ್ಧಸ್ಯ ದುರ್ಲಭಂ ಗರ್ಜಿತಂ ತವ ॥೨೨॥**

ಎಲ್ಲಿಯವರೆಗೆ ಅರ್ಜುನನ ಬಾಣಗಳು ನಿನ್ನ ಮೇಲೆ ಬಂದು ಬೀಳುವುದಿಲ್ಲವೋ–ಅಲ್ಲಿಯವರೆಗೂ ಗಟ್ಟಿಯಾಗಿ ಗರ್ಜಿಸುತ್ತಿರುವೆ. ಅರ್ಜುನನ ಬಾಣಗಳಿಂದ ಗಾಢವಾಗಿ ಗಾಯಗೊಂಡನಂತರ ನಿನ್ನ ಈ ಗರ್ಜನೆಗಳು ಇರಲಾರವು.

**ಬಾಹುಭಿಃ ಕ್ಷತ್ರಿಯಾಃ ಶೂರಾ ವಾಗ್ಭಿಃ ಶೂರಾ ದ್ವಿಜಾತಯಃ ।**
**ಧನುಷಾ ಫಾಲ್ಗುನಃ ಶೂರಃ ಕರ್ಣಃ ಶೂರೋ ಮನೋರಥೈಃ ।**
**ತೋಷಿತೋ ಯೇನ ರುದ್ರೋಽಪಿ ಕಃ ಪಾರ್ಥಂ ಪ್ರತಿಘಾತಯೇತ್ ॥**

ಕ್ಷತ್ರಿಯರು ತಮ್ಮ ಬಾಹುಬಲ-ಪರಾಕ್ರಮಗಳ ಪ್ರದರ್ಶನದಿಂದ ಶೂರರೆನಿಸಿಕೊಳ್ಳುತ್ತಾರೆ. ಬ್ರಾಹ್ಮಣರು ವಿಶೇಷವಾದ ವಾಕ್ಪ್ರೌಢಿಮೆಯಿಂದ ಶೂರರೆನಿಸಿಕೊಳ್ಳುತ್ತಾರೆ. ಧನುರ್ವಿದ್ಯೆಯಿಂದ ಅರ್ಜುನನು ಶೂರನೆನಿಸಿದ್ದಾನೆ. ಮನಸ್ಸಿನ ಬಯಕೆಗಳಿಂದ (ಮನಸ್ಸಿನಲ್ಲಿಯೇ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳುವುದರಲ್ಲಿ) ಕರ್ಣನು ಶೂರನು. ಕರ್ಣ! ರುದ್ರನೂ ಸಹ

ಯಾವನಿಂದ ಸಂತೋಷಿತನಾದನೋ–ಅಂತಹ ಪಾರ್ಥನನ್ನು ಸಂಹರಿಸಲು (ಪ್ರತಿಯಾಗಿ ಪ್ರಹರಿಸಲು) ಯಾರು ತಾನೇ ಸಮರ್ಥರು?”

ಮಹಾರಾಜ! ಶಾರದ್ವತರು ಇಂತಹ ಚುಚ್ಚುಮಾತುಗಳಿಂದ ಕರ್ಣನನ್ನು ರೇಗಿಸಿದನಂತರ ಯೋಧಶ್ರೇಷ್ಠನಾದ ಕರ್ಣನು ಕೃಪರಿಗೆ ಹೇಳಿದನು :

**ಶೂರಾ ಗರ್ಜನ್ತಿ ಸತತಂ ಪ್ರಾವೃಷೀವ ಬಲಾಹಕಾಃ ।**
**ಫಲಂ ಚಾಶು ಪ್ರಯಚ್ಛನ್ತಿ ಬೀಜಮುಪ್ತಮೃತಾವಿವ ॥೨೫॥**

“ವರ್ಷಾಕಾಲದಲ್ಲಿ ಮಳೆಗರೆಯುವ ಮೋಡಗಳು ಗರ್ಜಿಸುವಂತೆ ಶೂರರಾದವರು ಸತತವಾಗಿ ಗರ್ಜನೆಮಾಡುತ್ತಲೇ ಇರುತ್ತಾರೆ. ಇದು ಸ್ವಾಭಾವಿಕವೇ ಆಗಿದೆ. ಋತುಕಾಲದಲ್ಲಿ ಬಿತ್ತಿದ ಬೀಜವು ಫಲಕೊಡು ವಂತೆ–ಶೂರರಾದವರು ಶೀಘ್ರಫಲವನ್ನು ಕೊಡುತ್ತಾರೆ. ರಣಾಂಗಣದಲ್ಲಿ ಯುದ್ಧದ ಭಾರವನ್ನು ವಹಿಸಿಕೊಂಡು ತಮ್ಮ ಪರಾಕ್ರಮದ ವಿಷಯವಾಗಿ ಹೇಳಿಕೊಳ್ಳುವ ಶೂರರಲ್ಲಿ ನಾನು ಯಾವುದೇ ದೋಷವನ್ನೂ ಕಾಣುವುದಿಲ್ಲ.

**ಯಂ ಭಾರಂ ಪುರುಷೋ ವೋಢುಂ ಮನಸಾ ಹಿ ವ್ಯವಸ್ಯತಿ ।**
**ದೈವಮಸ್ಯ ಧ್ರುವಂ ತತ್ರ ಸಾಹಾಯ್ಯಾಯೋಪಪದ್ಯತೇ ॥೨೭॥**

ಯಾವ ಭಾರವನ್ನು (ಯಾವ ಕಾರ್ಯದ ಹೊಣೆಯನ್ನು) ಹೊರಲು ಪುರುಷನು ಮನಸ್ಸಿನಲ್ಲಿ ನಿಶ್ಚಯಿಸುತ್ತಾನೆಯೋ–ಆ ಭಾರವನ್ನು ಹೊರುವಷ್ಟು ಸಾಮರ್ಥ್ಯವನ್ನು ಪಡೆಯುವುದಕ್ಕೆ ದೈವವು ಸಹಾಯಕವಾಗಿ ಬರುತ್ತದೆ. ಇದು ನಿಶ್ಚಯ.

**ವ್ಯವಸಾಯದ್ವಿತೀಯೋಽಹಂ ಮನಸಾ ಭಾರಮುದ್ವಹನ್ ॥೨೮॥**
**ಹತ್ವಾ ಪಾಣ್ಡುಸುತಾನಾಜೌ ಸಕೃಷ್ಣಾನ್ಸಹ ಸಾತ್ವತಾನ್ ।**
**ಗರ್ಜಾಮಿ ಯದ್ಯಹಂ ವಿಪ್ರ ತವ ಕಿಂ ತತ್ರ ನಶ್ಯತಿ ॥೨೯॥**

ವಿಪ್ರವರ! ಈ ಕಾರ್ಯಭಾರವನ್ನು ವಹಿಸಲು ನಾನು ಮನಸ್ಸಿನಲ್ಲಿ ನಿಶ್ಚಯಿಸಿದ್ದೇನೆ. ಕಾರ್ಯಸಿದ್ಧಿಯಲ್ಲಿ ಪರಿಶ್ರಮವು ಎರಡನೆಯದಾಗುತ್ತದೆ. (ನಾನು ಮಾಡಿದ ಸಂಕಲ್ಪವನ್ನು ಕಾರ್ಯರೂಪಕ್ಕೆ ತರಲು ಸಂಪೂರ್ಣವಾಗಿ ಪ್ರಯತ್ನಿಸುತ್ತೇನೆ). ಒಂದು ವೇಳೆ ನಾನು ಯುದ್ಧದಲ್ಲಿ ಶ್ರೀಕೃಷ್ಣ ಮತ್ತು ಸಾತ್ವತರಿಂದ ಕೂಡಿದ ಪಾಂಡುವಿನ ಮಕ್ಕಳನ್ನು ಕೊಂದು ಅಥವಾ ಕೊಲ್ಲುವೆನೆಂದು ನಿಶ್ಚಯಿಸಿ ಗರ್ಜನೆಮಾಡಿದರೆ ನಿಮಗಾಗುವ ನಷ್ಟವೇನು?

**ವೃಥಾ ಶೂರಾ ನ ಗರ್ಜನ್ತಿ ಶಾರದಾ ಇವ ತೋಯದಾಃ ।**
**ಸಾಮರ್ಥ್ಯಮಾತ್ಮನೋ ಜ್ಞಾತ್ವಾ ತತೋ ಗರ್ಜನ್ತಿ ಪಣ್ಡಿತಾಃ ॥೩೦॥**

ಶೂರರಾದವರು ಶರದೃತುವಿನ ಮೋಡಗಳಂತೆ ಖಂಡಿತವಾಗಿಯೂ ವ್ಯರ್ಥವಾಗಿ ಗರ್ಜನೆಮಾಡುವುದಿಲ್ಲ. ತಮ್ಮಲ್ಲಿರುವ ಸಾಮರ್ಥ್ಯವನ್ನು ಮನಗಂಡೇ ಪಂಡಿತರಾದವರು ಗರ್ಜನೆಮಾಡುತ್ತಾರೆ.

**ಸೋಽಹಮದ್ಯ ರಣೇ ಯತ್ತೌ ಸಹಿತೌ ಕೃಷ್ಣಪಾಣ್ಡವೌ ।**
**ಉತ್ಸಹೇ ಮನಸಾ ಜೇತುಂ ತತೋ ಗರ್ಜಾಮಿ ಗೌತಮ ॥೩೧॥**

ಗೌತಮ! ರಣಭೂಮಿಯಲ್ಲಿ ವಿಜಯಗಳಿಸುವ ಸಲುವಾಗಿ ಜೊತೆ-ಜೊತೆಯಲ್ಲಿಯೇ ಪ್ರಯತ್ನಪೂರ್ವಕವಾಗಿ ಯುದ್ಧಮಾಡುವ ಕೃಷ್ಣಾರ್ಜುನರನ್ನು ಜಯಿಸಲು ನಾನು ಮನಸ್ಸಿನಿಂದಲೇ ಉತ್ಸಾಹಿತನಾಗಿದ್ದೇನೆ. ಆದುದರಿಂದಲೇ ಗರ್ಜಿಸುತ್ತಿದ್ದೇನೆ.

**ಪಶ್ಯ ತ್ವಂ ಗರ್ಜಿತಸ್ಯಾಸ್ಯ ಫಲಂ ಮೇ ವಿಪ್ರ ಸಾನುಗಾನ್ ।**
**ಹತ್ವಾ ಪಾಣ್ಡುಸುತಾನಾಜೌ ಸಹಕೃಷ್ಣಾನ್ಸಸಾತ್ವತಾನ್ ।**
**ದುರ್ಯೋಧನಾಯ ದಾಸ್ಯಾಮಿ ಪೃಥಿವೀಂ ಹತಕಣ್ಟಕಾಮ್ ॥೩೨॥**

ವಿಪ್ರವರ! ನಾನೀಗ ಗರ್ಜಿಸಿದುದರ ಫಲವನ್ನು ನೀವೇ ನಿರೀಕ್ಷಿಸಿರಿ. ಯುದ್ಧದಲ್ಲಿ ಕೃಷ್ಣ-ಸಾತ್ವತರಿಂದಲೂ ಮತ್ತು ಅನುಗಾಮಿಗಳಿಂದಲೂ ಸಹಿತರಾದ ಪಾಂಡವರನ್ನು ಸಂಹರಿಸಿ ಉಪದ್ರವ (ಶತ್ರು ) ರಹಿತವಾದ ಈ ಭೂಮಂಡಲವನ್ನು ದುರ್ಯೋಧನನಿಗೆ ಒಪ್ಪಿಸುತ್ತೇನೆ.”

“ಕರ್ಣ! ಕೇವಲ ನಿನ್ನ ಇಷ್ಟಾರ್ಥಸಿದ್ಧಿಯ ಪ್ರಲಾಪಗಳು ನನಗೆ ಸ್ವಲ್ಪವಾದರೂ ಹಿಡಿಸುವುದಿಲ್ಲ (ಇಷ್ಟಾರ್ಥಸಿದ್ಧಿಯಾದನಂತರ ಮಾಡುವ ಗರ್ಜನೆಗೆ ಬೆಲೆಯಿದೆ. ಕೇವಲ ಇಷ್ಟಾರ್ಥಸಿದ್ಧಿಗಾಗಿ ಮಾಡುವ ಸಂಕಲ್ಪ ದಿಂದಲೇ ಸಂತೋಷಪಟ್ಟು ಗರ್ಜಿಸುವುದು ಸರಿಯಲ್ಲ). ಮೇಲಾಗಿ ನೀನು ಕೃಷ್ಣಾರ್ಜುನರನ್ನೂ ಮತ್ತು ಧರ್ಮರಾಜನನ್ನೂ ಯಾವಾಗಲೂ ನಿಂದಿಸುತ್ತಲೇ ಇರುವೆ. ನನ್ನ ಅಭಿಪ್ರಾಯದಲ್ಲಿ ಯುದ್ಧವಿಶಾರದರಾದ ಕೃಷ್ಣಾರ್ಜುನರೆಲ್ಲಿರುವರೋ ಆ ಪಕ್ಷಕ್ಕೇ ವಿಜಯವು ನಿಶ್ಚಿತ.

**ದೇವಗನ್ಧರ್ವಯಕ್ಷಾಣಾಂ ಮನುಷ್ಯೋರಗರಕ್ಷಸಾಮ್ ।**
**ದಂಶಿತಾನಾಮಪಿ ರಣೇ ಅಜೇಯೌ ಕೃಷ್ಣಪಾಣ್ಡವೌ ॥೩೩॥**

ಒಂದು ವೇಳೆ ದೇವತೆಗಳು, ಗಂಧರ್ವರು, ಯಕ್ಷರು, ಮನುಷ್ಯರು, ಉರಗ-ರಾಕ್ಷಸರು–ಇವರೆಲ್ಲರೂ ಕವಚಗಳನ್ನು ಧರಿಸಿಕೊಂಡು ಯುದ್ಧಕ್ಕೆ ಬಂದರೂ ಕೃಷ್ಣಾರ್ಜುನರು ಅಜೇಯರು (ಜಯಿಸಲ್ಪಡತಕ್ಕವರಲ್ಲ ).

**ಬ್ರಹ್ಮಣ್ಯಃ ಸತ್ಯವಾಗ್ದಾನ್ತೋ ಗುರುದೈವತಪೂಜಕಃ ।**
**ನಿತ್ಯಂ ಧರ್ಮರತಶ್ಚೈವ ಕೃತಾಸ್ತ್ರಶ್ಚ ವಿಶೇಷತಃ ।**
**ಧೃತಿಮಾಂಶ್ಚ ಕೃತಜ್ಞಶ್ಚ ಧರ್ಮಪುತ್ರೋ ಯುಧಿಷ್ಠಿರಃ ॥೩೬॥**

ಧರ್ಮಪುತ್ರನಾದ ಯುಧಿಷ್ಠಿರನು ಬ್ರಾಹ್ಮಣಪ್ರಿಯನು. ಸತ್ಯವಾದಿಯು. ಜಿತೇಂದ್ರಿಯನು. ಗುರುಗಳನ್ನೂ–ದೇವತೆಗಳನ್ನೂ ಪೂಜಿಸತಕ್ಕವನು. ನಿತ್ಯವೂ ಧರ್ಮದಲ್ಲಿಯೇ ಆಸಕ್ತನಾಗಿರತಕ್ಕವನು. ಅದರಲ್ಲಿಯೂ ವಿಶೇಷವಾಗಿ ಅಸ್ತ್ರವಿದ್ಯಾಸಂಪನ್ನನು. ಧೈರ್ಯಶಾಲಿಯು. ಕೃತಜ್ಞನು.

ಅವನ ಅನುಜರೂ ಸಹ ಸಕಲವಿಧವಾದ ಶಸ್ತ್ರಾಸ್ತ್ರಗಳಲ್ಲಿಯೂ ಪರಿಶ್ರಮವಿರತಕ್ಕವರೂ, ಗುರುಸೇವಾಪರಾಯಣರೂ, ಪ್ರಾಜ್ಞರೂ, ಧರ್ಮತತ್ಪರರೂ ಮತ್ತು ಯಶೋವಂತರೂ ಆಗಿರುತ್ತಾರೆ. ಅವರ ಸಂಬಂಧಿಗಳಾದರೋ ಇಂದ್ರಸದೃಶಪರಾಕ್ರಮವುಳ್ಳವರು. ಪಾಂಡವರಲ್ಲಿ ವಿಶೇಷವಾದ ಅನುರಾಗವನ್ನು ಹೊಂದಿರತಕ್ಕವರು. ಪ್ರಹಾರಕುಶಲರು. ಧೃಷ್ಟದ್ಯುಮ್ನ, ಶಿಖಂಡೀ, ದುರ್ಮುಖನ ಮಗ ಜನಮೇಜಯ, ಚಂದ್ರಸೇನ, ರುದ್ರಸೇನ, ಕೀರ್ತಿಧರ್ಮಾ, ಧ್ರುವ, ಧರ, ವಸುಚಂದ್ರ, ಸಿಂಹಚಂದ್ರ, ಸುತೇಜನ, ದ್ರುಪದನ ಪುತ್ರರು ಮತ್ತು ಮಹಾಸ್ತ್ರವಿದನಾದ ದ್ರುಪದ–ಇವರೆಲ್ಲರೂ ಪಾಂಡವರ ಬಂಧುವರ್ಗಕ್ಕೆ ಸೇರಿದವರಾಗಿದ್ದಾರೆ. ಪಾಂಡವರ ಸಲುವಾಗಿ ಮತ್ಸ್ಯರಾಜನಾದ ವಿರಾಟನು ತನ್ನ ಅನುಜರ ಸಮೇತನಾಗಿ ಯುದ್ಧಮಾಡಲು ಸಿದ್ಧನಾಗಿ ನಿಂತಿದ್ದಾನೆ. ಶತಾನೀಕ, ಸೂರ್ಯದತ್ತ, ಶ್ರುತಾನೀಕ, ಶ್ರುತಧ್ವಜ, ಬಲಾನೀಕ, ಜಯಾನೀಕ, ಜಯಾಶ್ವ, ರಥವಾಹನ, ಚಂದ್ರೋದಯ, ಸಮರಥ–ಇವರೇ ವಿರಾಟನ ಶುಭಲಕ್ಷಣಗಳುಳ್ಳ ಅನುಜರು. ನಕುಲ-ಸಹದೇವರು, ದ್ರೌಪದಿಯ ಐವರು ಮಕ್ಕಳು, ಘಟೋತ್ಕಚರಾಕ್ಷಸ–ಇವರೆಲ್ಲರೂ ಯಾರ ಗೆಲುವಿನ ಸಲುವಾಗಿ ಯುದ್ಧಮಾಡುತ್ತಾರೆಯೋ–ಅವರಿಗೆ ವಿನಾಶವೆಂಬುದು ಖಂಡಿತವಾಗಿಯೂ ಇರುವು

ದಿಲ್ಲ. ಕರ್ಣ! ನಾನು ಈ ಹಿಂದೆ ಹೇಳಿದ ಗುಣಗಳೇ ಅಲ್ಲದೇ ಇನ್ನೂ ಅನೇಕ ಸದ್ಗುಣಗಳು ಪಾಂಡುಪುತ್ರನಾದ ಯುಧಿಷ್ಠಿರನಲ್ಲಿವೆ. ಭೀಮಾರ್ಜುನರು ಇಚ್ಛೆಪಟ್ಟರೆ ತಮ್ಮ ಅಸ್ತ್ರಬಲದಿಂದ ದೇವತೆಗಳು, ಅಸುರರು, ಮನುಷ್ಯರು, ಯಕ್ಷ-ರಾಕ್ಷಸರು, ಭೂತಗಣಗಳು, ನಾಗಗಳು ಮತ್ತು ಆನೆಗಳು ಇವುಗಳಿಂದ ಕೂಡಿದ ಈ ಸಂಪೂರ್ಣಜಗತ್ತನ್ನೇ ನಿಃಶೇಷಮಾಡಬಲ್ಲರು (ಸಂಪೂರ್ಣವಾಗಿ ನಾಶಮಾಡಬಲ್ಲರು).

**ಯುಧಿಷ್ಠಿರಶ್ಚ ಪೃಥಿವೀಂ ನಿರ್ದಹೇದ್ಘೋರಚಕ್ಷುಷಾ ।**
**ಅಪ್ರಮೇಯಬಲಃ ಶೌರಿರ್ಯೇಷಾಮರ್ಥೇ ಚ ದಂಶಿತಃ ।**
**ಕಥಂ ತಾನ್ಸಂಯುಗೇ ಕರ್ಣ ಜೇತುಮುತ್ಸಹಸೇ ಪರಾನ್ ॥೪೬॥**

ಕರ್ಣ! ಯುಧಿಷ್ಠಿರನು ತನ್ನ ಕ್ರೂರವಾದ ದೃಷ್ಟಿಕ್ಷೇಪದಿಂದಲೇ ಈ ಭೂಮಿಯನ್ನು ದಹಿಸಬಲ್ಲನು. ಪಾಂಡವರ ಸಲುವಾಗಿ ಕವಚವನ್ನು ಧರಿಸಿ ಸನ್ನದ್ಧನಾಗಿರುವ ಶ್ರೀಕೃಷ್ಣನು ಅಮಿತವಾದ ಬಲವಿರತಕ್ಕವನು. ಅಂತಹ ಅಪರಿಮಿತಪರಾಕ್ರಮರಾದ ಶತ್ರುಗಳನ್ನು ಯುದ್ಧದಲ್ಲಿ ಜಯಿಸಲು ನೀನು ಹೇಗೆ ಉತ್ಸಾಹಿತನಾಗಿರುವೆ? (ಹೇಗೆ ಜಯಿಸಬಲ್ಲೆ? )

ಸೂತಪುತ್ರ! ನೀನು ಅಪ್ರಮೇಯಬಲನಾದ ಶ್ರೀಕೃಷ್ಣನೊಡನೆ ಯುದ್ಧಮಾಡುವೆನೆಂದು ಮಾತಿನ ಮೂಲಕವಾಗಿ ಅನುದಿನವೂ ಉತ್ಸಾಹ ತೋರುತ್ತಿರುವುದು ನೀನು ಮಾಡುತ್ತಿರುವ ಒಂದು ಅಪರಾಧವೇ (ನ್ಯಾಯ ವಿರುದ್ಧ ಕಾರ್ಯವೇ) ಆಗಿದೆ.”

ಮಹಾರಾಜ! ಹೀಗೆ ಶಾರದ್ವತರು ಉತ್ಸಾಹವನ್ನು ಕುಗ್ಗಿಸುವ ಮಾತುಗಳನ್ನು ಹೇಳಿದನಂತರ ಕರ್ಣನು ಗಟ್ಟಿಯಾಗಿ ನಗುತ್ತಾ ಗುರುಗಳಾದ, ಶರದ್ವಂತರ ಮಕ್ಕಳಾದ ಕೃಪರನ್ನು ಕುರಿತು ಹೇಳಿದನು :

“ಬ್ರಾಹ್ಮಣೋತ್ತಮರೇ! ತಾವು ಪಾಂಡವರ ವಿಷಯವಾಗಿ ಯಾವ ಮಾತುಗಳನ್ನಾಡಿರುವಿರೋ–ಆ ಮಾತುಗಳು ಸತ್ಯದ ಮಾತುಗಳೇ ಆಗಿವೆ. ಅವರ ವಿಷಯವಾಗಿ ತಾವು ಸತ್ಯವನ್ನೇ ನುಡಿದಿರುತ್ತೀರಿ. ತಾವು ಹೇಳಿದು ದಕ್ಕಿಂತಲೂ ವಿಶೇಷವಾದ ಇನ್ನೂ ಅನೇಕಗುಣಗಳೂ ಪಾಂಡುಪುತ್ರರಲ್ಲಿವೆ. ರಣಾಂಗಣದಲ್ಲಿ ಅವರು ಇಂದ್ರಪ್ರಮುಖರಾದ ದೇವತೆಗಳಿಂದಲೂ ದೈತ್ಯ-

ಯಕ್ಷ-ಗಂಧರ್ವ-ಪಿಶಾಚ-ನಾಗ-ರಾಕ್ಷಸರಿಂದಲೂ ಅಜಯ್ಯರೆಂಬುದೂ ನಿಜ. ಹಾಗಿದ್ದರೂ ನಾನು ಇಂದ್ರನು ಕೊಟ್ಟಿರುವ ಶಕ್ತ್ಯಾಯುಧದಿಂದಲೇ ಪಾಂಡವರನ್ನು ಜಯಿಸುತ್ತೇನೆ.

**ಮಮ ಹ್ಯಮೋಘಾ ದತ್ತೇಯಂ ಶಕ್ತಿಃ ಶಕ್ರೇಣ ವೈ ದ್ವಿಜ ।**
**ಏತಯಾ ನಿಹನಿಷ್ಯಾಮಿ ಸವ್ಯಸಾಚಿನಮಾಹವೇ ॥೫೨॥**

ಬ್ರಾಹ್ಮಣೋತ್ತಮರೇ! ಅಮೋಘವಾದ ಈ ಶಕ್ತ್ಯಾಯುಧವನ್ನು ಇಂದ್ರನು ನನಗೆ ದಯಪಾಲಿಸಿದ್ದಾನೆ. ಇದರಿಂದ ನಾನು ಯುದ್ಧದಲ್ಲಿ ಸವ್ಯಸಾಚಿಯನ್ನು ಸಂಹರಿಸುತ್ತೇನೆ.

**ಹತೇ ತು ಪಾಣ್ಡವೇ ಕೃಷ್ಣೇ ಭ್ರಾತರಶ್ಚಾಸ್ಯ ಸೋದರಾಃ ।**
**ಅನರ್ಜುನಾ ನ ಶಕ್ಷ್ಯನ್ತಿ ಮಹೀಂ ಭೋಕ್ತುಂ ಕಥಞ್ಚನ ॥೫೩॥**

ಪಾಂಡುಪುತ್ರನಾದ ಅರ್ಜುನನು ಹತನಾಗಿಬಿಟ್ಟರೆ ಅವನ ಅಣ್ಣ-ತಮ್ಮಂದಿರು ಅರ್ಜುನನಿಂದ ರಹಿತವಾದ ಈ ಭೂಮಂಡಲವನ್ನು ಯಾವುದೇ ಕಾರಣದಿಂದಲೂ ಉಪಭುಂಜಿಸಲು ಸಮರ್ಥರಾಗಲಾರರು.

**ತೇಷು ನಷ್ಟೇಷು ಸರ್ವೇಷು ಪೃಥಿವೀಯಂ ಸಸಾಗರಾ ।**
**ಅಯತ್ನಾತ್ಕೌರವೇನ್ದ್ರಸ್ಯ ವಶೇ ಸ್ಥಾಸ್ಯತಿ ಗೌತಮ ॥೫೪॥**

ಗೌತಮರೇ! ಈ ರೀತಿಯಲ್ಲಿ ಪಾಂಡವರೆಲ್ಲರೂ ನಷ್ಟರಾಗಿ ಹೋಗಲಾಗಿ ಸಾಗರದಿಂದ ಕೂಡಿರುವ ಈ ಅಖಂಡಭೂಮಂಡಲವೂ ಹೆಚ್ಚಿನ ಪ್ರಯತ್ನವೇ ಇಲ್ಲದೇ ಕೌರವೇಂದ್ರನಾದ ದುರ್ಯೋಧನನ ವಶದಲ್ಲಿಯೇ ಉಳಿಯುತ್ತದೆ.

**ಸುನೀತೈರಿಹ ಸರ್ವಾರ್ಥಾಃ ಸಿಧ್ಯನ್ತೇ ನಾತ್ರ ಸಂಶಯಃ ।**
**ಏತಮರ್ಥಮಹಂ ಜ್ಞಾತ್ವಾ ತತೋ ಗರ್ಜಾಮಿ ಗೌತಮ ॥೫೫॥**

ಕೂಲಂಕುಷವಾಗಿ ಪರ್ಯಾಲೋಚಿಸಿ ಸಿದ್ಧಪಡಿಸಿದ ಸುನೀತಿಯಿಂದಲೂ ಮತ್ತು ಸುನೀತವಾದ ಮಾರ್ಗದಲ್ಲಿ ಪ್ರಯತ್ನಿಸುವುದರಿಂದಲೂ ಸರ್ವಾರ್ಥಗಳೂ ಸಿದ್ಧಿಸುತ್ತವೆ. ಇದರಲ್ಲಿ ಸಂಶಯವೇ ಇಲ್ಲ. ನಾನು ಸಿದ್ಧಪಡಿಸಿರುವ ಈ ನೀತಿಯ ಪ್ರಯೋಜನವೇನೆಂಬುದನ್ನು ತಿಳಿದಿರುವ ನಾನು ವಿಜಯಗಳಿಸುವೆನೆಂಬ ನಿಶ್ಚಯವಿರುವುದರಿಂದಲೇ ಗರ್ಜಿಸುತ್ತಿದ್ದೇನೆ.

ನೀವು ಇತರರ ಮೇಲೆ ದೋಷಾರೋಪಣೆಮಾಡುತ್ತಿರುವಿರೇ ಹೊರತು ನಿಮ್ಮಲ್ಲಿರುವ ದೋಷಗಳನ್ನು ಕಂಡುಕೊಂಡಿಲ್ಲ.

**ತ್ವಂ ತು ವಿಪ್ರಶ್ಚ ವೃದ್ಧಶ್ಚ ಅಶಕ್ತಶ್ಚಾಪಿ ಸಂಯುಗೇ ।**
**ಕೃತಸ್ನೇಹಶ್ಚ ಪಾರ್ಥೇಷು ಮೋಹಾನ್ಮಾಮವಮನ್ಯಸೇ ॥೫೮॥**

ನೀವಾದರೋ ಬ್ರಾಹ್ಮಣರು (ಬ್ರಾಹ್ಮಣರಿಗೂ ಯುದ್ಧಕ್ಕೂ ಸಂಬಂಧವೇ ಇಲ್ಲ). ವೃದ್ಧರೂ ಆಗಿರುವಿರಿ. ಯುದ್ಧಮಾಡಲು ಅಶಕ್ತರು. ಎಲ್ಲಕ್ಕಿಂತಲೂ ಮಿಗಿಲಾಗಿ ಪಾಂಡವರ ವಿಷಯದಲ್ಲಿ ನಿಮಗೆ ವಿಶೇಷವಾದ ಅನುರಾಗವಿದೆ. ಈ ಕಾರಣದಿಂದಲೇ ನೀವು ಮೋಹಪರವಶರಾಗಿ ನನ್ನನ್ನು ವೃಥಾ ಅವಮಾನಿಸುತ್ತಿರುವಿರಿ.

**ಯದ್ಯೇವಂ ವಕ್ಷ್ಯಸೇ ಭೂಯೋ ಮಮಾಪ್ರಿಯಮಿಹ ದ್ವಿಜ ।**
**ತತಸ್ತೇ ಖಡ್ಗಮುದ್ಯಮ್ಯ ಜಿಹ್ವಾಂ ಛೇತ್ಸ್ಯಾಮಿ ದುರ್ಮತೇ ॥೫೭॥**

ದುರ್ಮತಿಗಳಾದ ಬ್ರಾಹ್ಮಣರೇ! ನೀವೇನಾದರೂ ಮತ್ತೊಮ್ಮೆ ನನಗೆ ಬಹಳ ಅಪ್ರಿಯವಾದ ಇಂತಹ ಮಾತುಗಳನ್ನು ಹೇಳಿದ್ದೇ ಆದರೆ ಖಡ್ಗವನ್ನೆತ್ತಿ ನಿಮ್ಮ ನಾಲಿಗೆಯನ್ನು ಕತ್ತರಿಸಿಬಿಡುತ್ತೇನೆ. ದುಷ್ಟಬುದ್ಧಿಯ ಬ್ರಾಹ್ಮಣರೇ! ಕೌರವರ ಕಡೆಯ ಎಲ್ಲ ಸೈನಿಕರನ್ನೂ ಭಯಪಡಿಸುತ್ತಾ ರಣರಂಗದಲ್ಲಿ–ಯುದ್ಧದ ಮಧ್ಯದಲ್ಲಿ ನೀವು ಪಾಂಡವರನ್ನು ಪ್ರಶಂಸೆ ಮಾಡಲು ಇಚ್ಛಿಸುತ್ತಿರುವಿರಿ. (ಇದು ಖಂಡಿತವಾಗಿಯೂ ಉಚಿತವಲ್ಲ.) ಈ ವಿಷಯದಲ್ಲಿ ಕೆಲವು ಮಾತುಗಳನ್ನು ಯಥಾವತ್ತಾಗಿ ಹೇಳುತ್ತೇನೆ. ಅದನ್ನಾದರೂ ಕೇಳಿರಿ. ದುರ್ಯೋಧನ, ದ್ರೋಣರು, ಶಕುನಿ, ದುರ್ಮುಖ, ಜಯ, ದುಃಶಾಸನ, ವೃಷಸೇನ, ಮದ್ರರಾಜನಾದ ಶಲ್ಯ, ನೀವು, ಸೋಮದತ್ತ, ಭೂರಿ, ಅಶ್ವತ್ಥಾಮಾ, ವಿವಿಂಶತಿ–ಇವರೇ ಮುಂತಾದ ಯುದ್ಧವಿಶಾರದರಾದ ವೀರರು ಕವಚಗಳನ್ನು ಧರಿಸಿ ಯುದ್ಧಕ್ಕೆ ನಿಂತಿದ್ದೇ ಆದರೆ ಯಾವ ಮನುಷ್ಯನು ತಾನೇ ಇವರನ್ನು ಜಯಿಸಿಯಾನು? ಆ ಶತ್ರುವು ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವುಳ್ಳವನೇ ಆಗಿದ್ದರೂ ಸಹ ಈ ಮಹಾವೀರರನ್ನು ಜಯಿಸಲಾರನು. ಇವರೆಲ್ಲರೂ ಮಹಾಶೂರರು. ಅಸ್ತ್ರವಿದ್ಯಾಪ್ರವೀಣರು. ಮಹಾಬಲಿಷ್ಠರು. ಸ್ವರ್ಗಾಭಿಲಾಷಿ

ಗಳು. ಧರ್ಮಜ್ಞರು. ಯುದ್ಧಕುಶಲರು. ಇವರು ದೇವತೆಗಳನ್ನಾದರೂ ಯುದ್ಧದಲ್ಲಿ ಸಂಹರಿಸುವ ಸಾಮರ್ಥ್ಯವನ್ನು ಹೊಂದಿರುತ್ತಾರೆ. ಇವರೆಲ್ಲರೂ ಕುರುರಾಜನಾದ ದುರ್ಯೋಧನನಿಗೆ ಜಯವನ್ನು ಗಳಿಸಿಕೊಡುವ ಆಶಯ ದಿಂದ ಕವಚಗಳನ್ನು ಧರಿಸಿ ಪಾಂಡವರನ್ನು ಸಂಹರಿಸುವ ಸಲುವಾಗಿ ಯುದ್ಧಸನ್ನದ್ಧರಾಗಿ ರಣಾಂಗಣದಲ್ಲಿ ಉಪಸ್ಥಿತರಾಗಿದ್ದಾರೆ.

**ದೈವಾಯತ್ತಮಹಂ ಮನ್ಯೇ ಜಯಂ ಸಬಲಿನಾಮಪಿ ।**
**ಯತ್ರ ಭೀಷ್ಮೋ ಮಹಾಬಾಹುಃ ಶೇತೇ ಶರಶತಾಚಿತಃ ॥೬೪॥**

ನಮ್ಮ ಕಡೆಯಲ್ಲಿ ಇಂತಹ ಪರಾಕ್ರಮಿಗಳಿದ್ದರೂ ಜಯವು ನಮಗೇ ಲಭಿಸುತ್ತದೆಯೆಂದು ಹೇಳುವುದಕ್ಕಾಗುವುದಿಲ್ಲ. ಏಕೆಂದರೆ : ಜಯವು ಬಲವನ್ನು ಮಾತ್ರವೇ ಅವಲಂಬಿಸಿರುವುದಿಲ್ಲ. ಬಲಿಷ್ಠರಾದವರಿಗೂ ಸಹ ಜಯವು ಸುಲಭಸಾಧ್ಯವಾಗುವುದಿಲ್ಲ. ಅದು ದೈವಾಯತ್ತವಾದುದು. ದೈವದ ಅಧೀನದಲ್ಲಿರತಕ್ಕುದು. ಮಹಾಬಾಹುವಾದ, ಅತುಲಪರಾಕ್ರಮಿಯಾದ ಭೀಷ್ಮನೇ ನೂರಾರು ಬಾಣಗಳಿಂದ ಚುಚ್ಚಲ್ಪಟ್ಟವನಾಗಿ ರಣಾಂಗಣದಲ್ಲಿ ಚುಚ್ಚಿದ ಬಾಣಗಳನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡು ಮಲಗಿದ್ದಾನೆ. ವಿಕರ್ಣ, ಚಿತ್ರಸೇನ, ಬಾಹ್ಲೀಕ, ಜಯದ್ರಥ, ಭೂರಿಶ್ರವಸ, ಜಯ, ಜಲಸಂಧ, ಸುದಕ್ಷಿಣ, ರಥಿಗಳಲ್ಲಿ ಶ್ರೇಷ್ಠನಾದ ಶಲ, ವೀರ್ಯವಂತನಾದ ಭಗದತ್ತ ಮತ್ತು ನಮ್ಮ ಕಡೆಯ ಇನ್ನೂ ಅನೇಕ ರಾಜರು ದೇವತೆಗಳಿಂದಲೂ ಸಹ ಸುದುರ್ಜಯರಾದವರು. (ದೇವತೆಗಳಿಗೂ ಸಹ ಅವರನ್ನು ಜಯಿಸಲು ಸಾಧ್ಯವಾಗುತ್ತಿರಲಿಲ್ಲ.) ಆದರೆ ಅವರೆಲ್ಲರೂ ಇಂದು ಹತರಾಗಿರುವುದು ನಿಜ. ಇದಕ್ಕೆ ಕಾರಣ ದೈವವೇ ಆಗಿದೆ.

**ನಿಹತಾಃ ಸಮರೇ ಶೂರಾಃ ಪಾಣ್ಡವೈರ್ಬಲವತ್ತರಾಃ ।**
**ಕಿಮನ್ಯದ್ದೈವಸಂಯೋಗಾನ್ಮನ್ಯಸೇ ಪುರುಷಾಧಮ ॥೬೭॥**

(ಪಾಂಡವರಿಗಿಂತಲೂ) ಅತ್ಯಂತಬಲಿಷ್ಠರಾದ, ಶೂರರಾದ ಇವರೆಲ್ಲರೂ ಪಾಂಡವರಿಂದಲೇ ಕೊಲ್ಲಲ್ಪಟ್ಟರು. ಪುರುಷಾಧಮರೇ! ಇದು ದೈವಸಂಯೋಗದಿಂದಲ್ಲದೇ (ದೈವೇಚ್ಛೆಯಿಂದಲ್ಲದೇ) ಬೇರೆ ಯಾವ ಕಾರಣ ದಿಂದಾಯಿತೆಂದು ನೀವು ಭಾವಿಸಿರುವಿರಿ? ನೀವು ಪದೇ ಪದೇ ಪ್ರಶಂಸಿಸು

ತ್ತಿರುವ ದುರ್ಯೋಧನನ ಶತ್ರುಗಳ (ಪಾಂಡವರ) ಕಡೆಯಲ್ಲಿಯೂ ನೂರಾರು-ಸಾವಿರಾರು ಸಂಖ್ಯೆಯಲ್ಲಿ ಶೂರರು ಹತರಾಗಿದ್ದಾರೆ.

**ಕ್ಷೀಯನ್ತೇ ಸರ್ವಸೈನ್ಯಾನಿ ಕುರೂಣಾಂ ಪಾಣ್ಡವೈಃ ಸಹ ।**
**ಪ್ರಭಾವಂ ನಾತ್ರ ಪಶ್ಯಾಮಿ ಪಾಣ್ಡವಾನಾಂ ಕಥಞ್ಚನ ॥೯॥**

ಕೌರವ-ಪಾಂಡವಪಕ್ಷಗಳ ಸಮಸ್ತಸೈನ್ಯಗಳೂ ದಿನ-ದಿನಕ್ಕೂ ಕ್ಷಯಿಸುತ್ತಲೇ ಇವೆ. ಇದರಲ್ಲಿ ಪಾಂಡವರಲ್ಲಿರುವ ವಿಶೇಷಪ್ರಭಾವವನ್ನು ನಾನು ಕಿಂಚಿತ್ತಾದರೂ ಕಾಣುತ್ತಿಲ್ಲ.

**ಯಸ್ತಾನ್ಬಲವತೋ ನಿತ್ಯಂ ಮನ್ಯಸೇ ತ್ವಂ ದ್ವಿಜಾಧಮ ।**
**ಯತಿಷ್ಯೇಽಹಂ ಯಥಾಶಕ್ತಿ ಯೋದ್ಧುಂ ತೈಃ ಸಹ ಸಂಯುಗೇ ।**
**ದುರ್ಯೋಧನಹಿತಾರ್ಥಾಯ ಜಯೋ ದೈವೇ ಪ್ರತಿಷ್ಠಿತಃ ॥೨೦॥**

ಬ್ರಾಹ್ಮಣಾಧಮರೇ! ನೀವು ಯಾರನ್ನು ಎಲ್ಲರಿಗಿಂತಲೂ ಮಹಾ ಬಲಿಷ್ಠರೆಂದು ಭಾವಿಸಿರುವಿರೋ–ಅವರೊಡನೆಯೇ ಯುದ್ಧಮಾಡುತ್ತೇನೆ ಮತ್ತು ದುರ್ಯೋಧನನ ಹಿತಕ್ಕಾಗಿ ಯಥಾಶಕ್ತಿ ಪ್ರಯತ್ನಿಸುತ್ತೇನೆ. ಜಯವು ದೈವಾಧೀನವಾಗಿದೆ."

೧೫೮ನೆಯ ಅಧ್ಯಾಯವು ಮುಗಿಯಿತು.

೧೫೯ನೆಯ ಅಧ್ಯಾಯ — ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಅಶ್ವತ್ಥಾಮನು ಕರ್ಣನನ್ನು ಸಂಹರಿಸಲು ಹೊರಟುದು : ದುರ್ಯೋಧನನು ತಡೆದುದು : ಪಾಂಡವ–ಪಾಂಚಾಲರು ಕರ್ಣನನ್ನು ಆಕ್ರಮಿಸಿದುದು : ಕರ್ಣನ ಪರಾಕ್ರಮ : ಅರ್ಜುನನಿಂದ ಕರ್ಣನ ಪರಾಜಯ : ದುರ್ಯೋಧನನು ಪಾಂಚಾಲರ ವಧೆಗೆ ಅಶ್ವತ್ಥಾಮನನ್ನು ನಿಯೋಜಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಕರ್ಣನು ತನ್ನ ಸೋದರಮಾವನೊಡನೆ ಕಟುವಾದ ಮಾತುಗಳನ್ನಾಡಿದುದನ್ನು ಕೇಳಿ ಅಶ್ವತ್ಥಾಮನು ಖಡ್ಗವನ್ನೆತ್ತಿಕೊಂಡು ಕರ್ಣನಿದ್ದೆಡೆಗೆ ಬಹಳ ವೇಗದಿಂದ ಧಾವಿಸಿದನು. ಸಿಂಹವು ಮದಿಸಿದ ಆನೆಯ

ಮೇಲೆ ಬೀಳಲು ಹೋಗುವಂತೆ–ಪರಮಕ್ರುದ್ಧನಾಗಿದ್ದ ಅಶ್ವತ್ಥಾಮನು ದುರ್ಯೋಧನನು ನೋಡುತ್ತಿದ್ದಂತೆಯೇ ಕತ್ತಿಯನ್ನೆತ್ತಿಕೊಂಡು ಕರ್ಣನಿಗೆ ಅಭಿಮುಖವಾಗಿ ನಿಂತುಕೊಂಡು ಕರ್ಣನೊಡನೆ ಹೇಳಿದನು :

"ದುರ್ಬುದ್ಧಿಯವನೇ! ನರಾಧಮ! ನನ್ನ ಸೋದರಮಾವನು ಜಗತ್ತಿನಲ್ಲಿಯೇ ಶ್ರೇಷ್ಠಧನುರ್ಧರನಾಗಿರುತ್ತಾನೆ. ಮಹಾಶೂರನಾಗಿರುತ್ತಾನೆ. ಅರ್ಜುನನಲ್ಲಿರುವ ನಿಜವಾದ ಗುಣಗಳನ್ನೇ ವರ್ಣಿಸುತ್ತಿದ್ದ ನನ್ನ ಮಾವನನ್ನು ನೀನು ಕೇವಲ ದ್ವೇಷದ ಕಾರಣದಿಂದ ಗದರಿಸುತ್ತಿರುವೆ. ನಿನ್ನ ಪರಾಕ್ರಮದ ವಿಷಯವಾಗಿ ಜಂಬಕೊಚ್ಚುತ್ತಿರುವೆ. ನೀನು ಇಲ್ಲಿರುವ ಯಾವ ವೀರರನ್ನೂ ಪರಿಗಣಿಸದೇ ಅತಿಯಾದ ಅಹಂಕಾರದಲ್ಲಿ ಮುಳುಗಿಹೋಗಿರುವೆ.

**ಕ್ವ ತೇ ವೀರ್ಯಂ ಕ್ವ ಚಾಸ್ತ್ರಾಣಿ ಯತ್ತ್ವಾಂ ನಿರ್ಜಿತ್ಯ ಸಂಯುಗೇ ।**
**ಗಾಣ್ಡೀವಧನ್ವಾ ಹತವಾನ್ಪ್ರೇಕ್ಷತಸ್ತೇ ಜಯದ್ರಥಮ್ ॥೫॥**

ಯುದ್ಧದಲ್ಲಿ ಗಾಂಡೀವಧನ್ವನಾದ ಅರ್ಜುನನು ನಿನ್ನನ್ನೂ ಪರಾಜಯಗೊಳಿಸಿ ನೀನು ನೋಡುತ್ತಿದ್ದಂತೆಯೇ ಜಯದ್ರಥನನ್ನೂ ಸಂಹರಿಸಿದನು. ಆ ಸಮಯದಲ್ಲಿ ನಿನ್ನ ವೀರ್ಯವೆಲ್ಲಿ ಹೋಗಿದ್ದಿತು? ನಿನ್ನ ಅಸ್ತ್ರಗಳೆಲ್ಲಿ ಹೋಗಿದ್ದುವು?

ಸೂತಾಧಮನೇ! ಯಾವನು ಹಿಂದೆ ಸಾಕ್ಷಾತ್ ಮಹಾದೇವನೊಡನೆಯೇ ಯುದ್ಧಮಾಡಿದನೋ–ಅಂತಹ ಅರ್ಜುನನನ್ನು ಕೇವಲ ಮನೋರಥದಿಂದಲೇ ಗೆಲ್ಲಲು ನೀನು ವೃಥಾ ಇಚ್ಛಿಸುತ್ತಿರುವೆ. ಕೃಷ್ಣಸಹಿತನಾದ, ಸರ್ವಶಸ್ತ್ರವಿದರಲ್ಲಿಯೂ ಶ್ರೇಷ್ಠನಾದ ಅರ್ಜುನನನ್ನು ಜಯಿಸಲು ಇಂದ್ರಸಹಿತರಾದ ಸುರಾಸುರರಿಂದಲೂ ಶಕ್ಯವಿಲ್ಲ. ಅಂತಹ ಲೋಕೈಕವೀರನಾದ, ಅಜಿತನಾದ ಅರ್ಜುನನನ್ನು ಈ ರಾಜರೊಡನೆ ನೀನು ಜಯಿಸುವೆಯಾ?

**ಕರ್ಣ ಪಶ್ಯ ಸುದುರ್ಬುದ್ಧೇ ತಿಷ್ಠೇದಾನೀಂ ನರಾಧಮ ।**
**ಏಷ ತೇಽದ್ಯ ಶಿರಃ ಕಾಯಾದುದ್ಧರಾಮಿ ಸುದುರ್ಮತೇ ॥೬॥**

ಕರ್ಣ! ಹೆಚ್ಚು ದುರ್ಬುದ್ಧಿಯಿಂದ ಕೂಡಿರುವವನೇ! ನರಾಧಮನೇ! ಸುದುರ್ಮತಿಯೇ! ಸ್ವಲ್ಪ ನಿಲ್ಲು. ನಿನ್ನ ಶಿರಸ್ಸನ್ನು ಈಗಲೇ ನಾನು ಶರೀರದಿಂದ ಹಾರಿಸಿಬಿಡುತ್ತೇನೆ."

ಮಹಾರಾಜ! ಹೀಗೆ ಹೇಳಿಕೊಂಡು ವೇಗಪೂರ್ವಕವಾಗಿ ಕರ್ಣನ ಮೇಲೆ ಬೀಳುತ್ತಿದ್ದ ಅಶ್ವತ್ಥಾಮನನ್ನು ಮಹಾತೇಜಸ್ವಿಯಾದ ದುರ್ಯೋಧನ ಮತ್ತು ಮನುಷ್ಯಶ್ರೇಷ್ಠರಾದ ಕೃಪರು ಇಬ್ಬರೂ ಸೇರಿ ತಡೆದರು.

ಅಶ್ವತ್ಥಾಮನನ್ನು ಸಮಾಧಾನಪಡಿಸುತ್ತಿದ್ದ ದುರ್ಯೋಧನನನ್ನು ಕುರಿತು ಕರ್ಣನು ಹೇಳಿದನು :

**ಶೂರೋಽಯಂ ಸಮರಶ್ಲಾಘೀ ದುರ್ಮತಿಶ್ಚ ದ್ವಿಜಾಧಮಃ ।**
**ಆಸಾದಯತು ಮದ್ವೀರ್ಯಂ ಮುಞ್ಚೇಮಂ ಕುರುಸತ್ತಮ ॥೧೧॥**

"ಕುರುಸತ್ತಮನೇ! ಇವನು ಶೂರನು. ಸಮರವನ್ನು ಪ್ರಶಂಸೆ ಮಾಡುವವನು. ಆದರೆ ದುಷ್ಟಬುದ್ಧಿಯಿರುವವನು. ಬ್ರಾಹ್ಮಣರಲ್ಲಿ ಅಧಮನು. ಇವನನ್ನು ತಡೆಯದೇ ಬಿಟ್ಟುಬಿಡು. ನನ್ನ ಪರಾಕ್ರಮವನ್ನು ಎದುರಿಸಿ ನಿಲ್ಲಲಿ."

ಅಶ್ವತ್ಥಾಮನು ಕರ್ಣನಿಗೆ ಹೇಳುತ್ತಾನೆ :

"ಸೂತಪುತ್ರನೇ! ಸುದುರ್ಮತಿಯೇ! ಈ ನಿನ್ನ ಅಪರಾಧವನ್ನು ನಾವು ಕ್ಷಮಿಸಿಬಿಡುತ್ತೇವೆ. ಆದರೆ ನಿನ್ನ ಈ ದರ್ಪೋತ್ಕರ್ಷವನ್ನು ಅರ್ಜುನನು ನಾಶಗೊಳಿಸುತ್ತಾನೆಂಬುದು ನೆನಪಿನಲ್ಲಿರಲಿ."

ದುರ್ಯೋಧನನು ಅಶ್ವತ್ಥಾಮನಿಗೆ ಹೇಳುತ್ತಾನೆ :

"ಮಾನದನೇ! ಅಶ್ವತ್ಥಾಮ! ಪ್ರಸನ್ನನಾಗು. ನಮ್ಮದೇನಾದರೂ ಅಪರಾಧವಿದ್ದರೆ ಕ್ಷಮಿಸಲು ನೀನು ಅರ್ಹನಾಗಿರುವೆ. ಆದರೆ ಕರ್ಣನ ಮೇಲೆ ಕೋಪಗೊಳ್ಳುವುದು ಯಾವುದೇ ಕಾರಣದಿಂದಲೂ ಉಚಿತವೆನಿಸುವುದಿಲ್ಲ. ನೀನು, ಕೃಪರು, ದ್ರೋಣರು, ಕರ್ಣ, ಶಲ್ಯ, ಶಕುನಿ–ಇವರ ಮೇಲೆ ದೊಡ್ಡ ಹೊಣೆಯೇ ಬಿದ್ದಿರುತ್ತದೆ. ನೀವೆಲ್ಲರೂ ಸೇರಿ ಈ ಮಹಾಕಾರ್ಯವನ್ನು ಸಾಧಿಸಬೇಕಾಗಿದೆ. ಆದುದರಿಂದ, ಬ್ರಾಹ್ಮಣೋತ್ತಮ! ಪ್ರಸನ್ನನಾಗು. ನಮ್ಮ ಮುಂದಿರುವ ಎಲ್ಲ ಪಾಂಡವಸೈನಿಕರೂ ಕರ್ಣನೊಡನೆ ಯುದ್ಧಮಾಡುವ ಇಚ್ಛೆಯನ್ನು ಹೊಂದಿ ಇತ್ತ ಕಡೆಗೇ ಬರುತ್ತಿದ್ದಾರೆ ಮತ್ತು ಎಲ್ಲ ಕಡೆಗಳಿಂದಲೂ ಕರ್ಣನನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದಾರೆ."

ಮಹಾರಾಜ! ದುರ್ಯೋಧನನು ಹೀಗೆ ಹೇಳಿ ಅಶ್ವತ್ಥಾಮನನ್ನು ಸಮಾಧಾನಗೊಳಿಸಿದನಂತರ ಕ್ರೋಧಾವೇಶದಿಂದ ಕೂಡಿದ್ದ, ಮಹಾತ್ಮನಾದ ಅಶ್ವತ್ಥಾಮನು ಪ್ರಸನ್ನನಾದನು. ಅನಂತರ ಮಹಾತ್ಮರಾದ ಆಚಾರ್ಯ ಕೃಪರೂ ಸಹ ಸೌಮ್ಯಸ್ವಭಾವದ ಕಾರಣದಿಂದ ಬಹಳ ಶೀಘ್ರವಾಗಿಯೇ ಮಾರ್ದವವನ್ನು (ಸರಳತೆಯನ್ನು ) ಹೊಂದಿದವರಾಗಿ ಹೇಳಿದರು :

"ಸುದುರ್ಮತಿಯೇ! ನಾವು ಈ ನಿನ್ನ ಅಪರಾಧವನ್ನು ಕ್ಷಮಿಸಿದ್ದೇವೆ. ಆದರೆ ನಿನ್ನಲ್ಲಿರುವ ದರ್ಪೋತ್ಕರ್ಷವನ್ನು ಧನಂಜಯನು ನಾಶಗೊಳಿಸುತ್ತಾನೆ."

ಮಹಾರಾಜ! ಅನಂತರ ಪಾಂಡವರೂ, ಯಶೋವಂತರಾದ ಪಾಂಚಾಲರೂ ಒಟ್ಟಾಗಿ ಸೇರಿ ಎಲ್ಲ ಕಡೆಗಳಿಂದಲೂ ಕರ್ಣನನ್ನು ಭಯಪಡಿಸುತ್ತಾ ಕರ್ಣನ ಬಳಿಗೆ ಬಂದರು. ರಥಿಗಳಲ್ಲಿ ಶ್ರೇಷ್ಠನಾದ, ವೀರ್ಯವಂತನಾದ, ತೇಜಸ್ವಿಯಾದ ಕರ್ಣನು–ಇಂದ್ರನು ದೇವತೆಗಳಿಂದ ಪರಿವೃತನಾಗಿರುವಂತೆ–ಕೌರವಶ್ರೇಷ್ಠರಿಂದ ಪರಿವೃತನಾಗಿ ತನ್ನ ಬಾಹುಬಲವನ್ನು ಆಶ್ರಯಿಸಿ ಯುದ್ಧಸನ್ನದ್ಧನಾದನು. ಅನಂತರ ಕರ್ಣನಿಗೂ ಮತ್ತು ಪಾಂಡವರಿಗೂ ಭಯಂಕರವಾದ ಸಿಂಹನಾದಗಳಿಂದ ಸುಶೋಭಿತವಾದ ಯುದ್ಧವು ಪ್ರಾರಂಭವಾಯಿತು. ಪಾಂಡವರೂ ಮತ್ತು ಯಶೋವಂತರಾದ ಪಾಂಚಾಲರೂ ಮಹಾಬಾಹುವಾದ ಕರ್ಣನನ್ನು ನೋಡಿ ಗಟ್ಟಿಯಾಗಿ ಗರ್ಜನೆಮಾಡಿದರು.

**ಅಯಂ ಕರ್ಣಃ ಕುತಃ ಕರ್ಣಸ್ತಿಷ್ಠ ಕರ್ಣಮಹಾರಣೇ ।**
**ಯುಧ್ಯಸ್ವ ಸಹಿತೋಽಸ್ಮಾಭಿರ್ದುರಾತ್ಮನ್ಪುರುಷಾಧಮ ॥೨೩॥**

'ಕರ್ಣನೆಲ್ಲಿ?' ಎಂದು ಕೆಲವರು ಕೂಗುತ್ತಿದ್ದರು. 'ಇದೋ ಇವನೇ ಕರ್ಣ!' ಎಂದು ಕೆಲವರು ಉತ್ತರಿಸುತ್ತಿದ್ದರು. "ಪುರುಷಾಧಮನೇ! ದುರಾತ್ಮನೇ! ನಿಲ್ಲು ; ನಮ್ಮೊಡನೆ ಯುದ್ಧಮಾಡು"–ಎಂದು ಮತ್ತೆ ಕೆಲವರು ಹೇಳುತ್ತಿದ್ದರು.

ಮತ್ತೆ ಕೆಲವರು ರಾಧೇಯನನ್ನು ಕಂಡು ಕೋಪದಿಂದ ಕೆಂಗಣ್ಣರಾಗಿ ಹೇಳಿದರು :

"ದುರಹಂಕಾರದಿಂದ ಮೆರೆಯುತ್ತಿರುವ ಅಲ್ಪಚೇತನನಾದ ಇವನನ್ನು ಸಮಸ್ತರಾಜರೂ ಸೇರಿ ಸಂಹರಿಸಿರಿ. ಇವನು ಬದುಕಿರುವುದರಿಂದ ಯಾವ

ಪ್ರಯೋಜನವೂ ಇಲ್ಲ. ಮಹಾಪಾಪಿಷ್ಠನಾದ ಇವನು ಪಾಂಡವರಿಗೆ ನಿತ್ಯ ವೈರಿಯಾಗಿದ್ದಾನೆ. ಯಾವಾಗಲೂ ದುರ್ಯೋಧನನ ಅಭಿಪ್ರಾಯಕ್ಕೆ ಅನು ಸಾರವಾಗಿಯೇ ನಡೆಯುವ ಇವನೇ ಸರ್ವಾನರ್ಥಗಳಿಗೂ ಮೂಲಕಾರಣ ನಾಗಿದ್ದಾನೆ. ಆದುದರಿಂದ ಇವನನ್ನು ಈಗಲೇ ಸಂಹರಿಸಿ" ಹೀಗೆಂಬುದಾಗಿ ಮಾತನಾಡಿಕೊಳ್ಳುತ್ತಿದ್ದ ಮಹಾರಥರಾದ ಕ್ಷತ್ರಿಯರು ಪಾಂಡುಪುತ್ರನಾದ ಯುಧಿಷ್ಠಿರನಿಂದ ಪ್ರೇರಿತರಾಗಿ ಸೂತಪುತ್ರನನ್ನು ವಧಿಸಲು ದೊಡ್ಡದಾದ ಬಾಣಗಳ ವೃಷ್ಟಿಯಿಂದ ಆಚ್ಛಾದಿಸುತ್ತಾ ಅವನನ್ನು ಆಕ್ರಮಿಸಿದರು.

ತನ್ನ ಕಡೆಗೆ ರಭಸದಿಂದ ಬರುತ್ತಿದ್ದ ಆ ಎಲ್ಲ ಮಹಾರಥರನ್ನೂ ನೋಡಿದ ಕರ್ಣನು ವ್ಯಥಿತನೂ ಆಗಲಿಲ್ಲ ; ಭಯಪಡಲೂ ಇಲ್ಲ. ಪ್ರಳಯ ಕಾಲದಂತೆ ಉಕ್ಕಿಬರುತ್ತಿರುವ ಸೈನ್ಯಸಾಗರವನ್ನು ನೋಡಿ ಯುದ್ಧಗಳಲ್ಲಿ ಅಪರಾಜಿತನಾದ ಮಹಾಬಲಿಷ್ಠನಾದ, ಕ್ಷಿಪ್ರವಾಗಿ ಬಾಣಗಳ ಆದಾನ-ಪ್ರಯೋಗಗಳನ್ನು ಮಾಡುವ ಕರ್ಣನು ನಿನ್ನ ಮಕ್ಕಳಿಗೆ ಪ್ರಿಯವನ್ನುಂಟು ಮಾಡುವ ಇಚ್ಛೆಯಿಂದ ಬಾಣಗಳ ಸಮೂಹವನ್ನೇ ಪುಂಖಾನುಪುಂಖವಾಗಿ ಬಿಡುತ್ತಾ ನಾಲ್ಕು ದಿಕ್ಕುಗಳಿಂದಲೂ ತನ್ನ ಮೇಲೆ ಎರಗಿಬರುತ್ತಿದ್ದ ಆ ಮಹಾ ಸೈನ್ಯವನ್ನು ತಡೆದನು. ಬಳಿಕ ನೂರಾರು-ಸಾವಿರಾರು ರಾಜರು ತಮ್ಮ ಧನುಸ್ಸುಗಳನ್ನು ಹಿಂದಕ್ಕೂ-ಮುಂದಕ್ಕೂ ಜಗ್ಗಿಸುತ್ತಾ ಬಾಣಗಳ ಸುರಿಸು ವಿಕೆಯಿಂದ ಕರ್ಣನನ್ನು ತಡೆದರು. ದೈತ್ಯಗಣಗಳು ಇಂದ್ರನೊಡನೆ ಯುದ್ಧ ಮಾಡಿದಂತೆ ಪಾಂಡವರ ಕಡೆಯ ರಾಜರು ಕರ್ಣನೊಡನೆ ಯುದ್ಧಮಾಡು ತ್ತಿದ್ದರು. ಕರ್ಣನು, ರಾಜರು ಸುರಿಸುತ್ತಿದ್ದ ಬಾಣಗಳ ಮಳೆಯನ್ನು–ಬಾಣ ಗಳ ದೊಡ್ಡ ಮಳೆಗರೆಯುವಿಕೆಯಿಂದಲೇ ತಡೆಗಟ್ಟಿದನು. ಮಾಡಿದುದಕ್ಕೆ ಪ್ರತಿಮಾಡಲು ಇಚ್ಛಿಸಿ ಯುದ್ಧಮಾಡುತ್ತಿದ್ದ ಕರ್ಣ-ಪಾಂಡವರ ಆ ಮಹಾ ಯುದ್ಧವು ಹಿಂದೆ ದೇವಾಸುರಯುದ್ಧಸಮಯದಲ್ಲಿ ಇಂದ್ರನಿಗೂ ಮತ್ತು ದೈತ್ಯರಿಗೂ ನಡೆದ ಯುದ್ಧದಂತೆಯೇ ನಡೆಯುತ್ತಿದ್ದಿತು. ಮಹಾರಾಜ! ಬಾಣಪ್ರಯೋಗದಲ್ಲಿ ಕರ್ಣನಿಗಿದ್ದ ಕೈಚಳಕವನ್ನು ಆ ಸಮಯದಲ್ಲಿ ನಾವು ನೋಡಿದೆವು. ಶತ್ರುಗಳು ನಾಲ್ಕು ಕಡೆಗಳಿಂದಲೂ ಸತತವಾಗಿ ಪ್ರಯತ್ನಿ ಸಿದರೂ ಕರ್ಣನ ಸಮೀಪಕ್ಕೂ ಹೋಗಲು ಸಾಧ್ಯವಾಗಲಿಲ್ಲ. ಮಹಾರಥ ನಾದ ಕರ್ಣನು ಪಾಂಡವರ ಕಡೆಯ ರಾಜರು ಸತತವಾಗಿ ಬಿಡುತ್ತಿದ್ದ ಬಾಣ

ಗಳೆಲ್ಲವನ್ನು ನಿವಾರಣೆಮಾಡಿಕೊಂಡು ರಥಗಳ ನೊಗಗಳಲ್ಲಿಯೂ, ಈಷಾ ದಂಡಗಳಲ್ಲಿಯೂ, ಛತ್ರಗಳಲ್ಲಿಯೂ, ಧ್ವಜಗಳಲ್ಲಿಯೂ, ಕುದುರೆಗಳ ಲ್ಲಿಯೂ ತನ್ನ ನಾಮಾಂಕಿತವಾದ ಘೋರವಾದ ಬಾಣಗಳನ್ನು ಪ್ರಯೋಗಿಸಿ ದನು. ಹೀಗೆ ಕರ್ಣನಿಂದ ಪೀಡಿತರಾದ ರಾಜರು ವ್ಯಾಕುಲಗೊಂಡವರಾಗಿ–ಶೀತದಿಂದ ಪೀಡಿತವಾದ ಹಸುಗಳಂತೆ–ಅಲ್ಲಲ್ಲಿಯೇ ತಿರುಗುತ್ತಿದ್ದರು. ಕರ್ಣನ ಬಾಣಪ್ರಹಾರಗಳಿಂದ ಹತವಾಗಿ ಬಿದ್ದಿದ್ದ ಗಜಾಶ್ವ-ರಥಸೈನ್ಯಗಳ ಸಮೂಹ ಗಳನ್ನೇ ನಾವಲ್ಲಿ ನೋಡಿದೆವು. ಯುದ್ಧದಲ್ಲಿ ಹಿಂತಿರುಗದೇ ಹತರಾಗಿ ಬಿದ್ದಿದ್ದ ಶೂರರ ತಲೆಗಳಿಂದಲೂ, ತೋಳುಗಳಿಂದಲೂ ರಣಾಂಗಣವು ವ್ಯಾಪ್ತವಾಗಿದ್ದಿತು. ಸತ್ತವರಿಂದಲೂ, ಸಾಯುತ್ತಿರುವವರಿಂದಲೂ, ಗಾಯಗೊಂಡು ಸಂಕಟಪಡುತ್ತಿದ್ದವರಿಂದಲೂ ಕೂಡಿದ್ದ ಆ ರಣಭೂಮಿಯು ಯಮರಾಜನ ಪಟ್ಟಣದಂತೆ ಬಹಳ ಭಯಂಕರವಾಗಿ ಕಾಣುತ್ತಿದ್ದಿತು.

ಮಹಾರಾಜ! ದುರ್ಯೋಧನನು ಕರ್ಣನ ಪರಾಕ್ರಮವನ್ನು ಕಂಡು ಸಂತುಷ್ಟನಾಗಿ ಅಶ್ವತ್ಥಾಮನ ಬಳಿಗೆ ಹೋಗಿ ಹೇಳಿದನು :

"ಅಶ್ವತ್ಥಾಮನೇ! ಕರ್ಣನು ಕವಚವನ್ನು ಧರಿಸಿ ಅನೇಕರಾಜರೊಡನೆ ಯುದ್ಧಮಾಡುತ್ತಿದ್ದಾನೆ. ಕಾರ್ತಿಕೇಯನಿಂದ ಧ್ವಂಸಿತವಾದ ಆಸುರೀ ಸೇನೆಯು ಪಲಾಯನಮಾಡಿದಂತೆ–ಕರ್ಣನ ಬಾಣಗಳಿಂದ ಬಹಳವಾಗಿ ಪೀಡಿಸಲ್ಪಟ್ಟ ಪಾಂಡವೀಸೇನೆಯು ಪಲಾಯನಮಾಡುತ್ತಿರುವುದನ್ನು ನೋಡು. ರಣರಂಗದಲ್ಲಿ ಪಾಂಡವರ ಸೈನ್ಯವು ಧೀಮಂತನಾದ ಕರ್ಣನಿಂದ ಪರಾಜಿತವಾದುದನ್ನು ಕಂಡು ಸೂತಪುತ್ರನನ್ನು ಸಂಹಾರಮಾಡುವ ಇಚ್ಛೆ ಯಿಂದ ಅರ್ಜುನನು ಮಹಾರಥನಾದ ಕರ್ಣನನ್ನು ಸಂಹಾರಮಾಡಲು ಸಾಧ್ಯವಾಗದಂತೆ ತತ್ಕಾಲೋಚಿತವಾದ ಯುದ್ಧನೀತಿಯು ರೂಪಿಸಲ್ಪಡಲಿ."

ದುರ್ಯೋಧನನು ಹೀಗೆ ಹೇಳಿದೊಡನೆಯೇ ದೈತ್ಯಸೈನ್ಯವನ್ನು ಕುರಿತು ಇಂದ್ರನು ಹೋಗುತ್ತಿದ್ದಂತೆ–ತಮ್ಮ ಸೈನ್ಯಾಭಿಮುಖವಾಗಿ ಬರುತ್ತಿದ್ದ ಅರ್ಜುನನನ್ನು ನೋಡಿ ಅಶ್ವತ್ಥಾಮಾ, ಕೃಪರು, ಶಲ್ಯ ಮತ್ತು ಮಹಾರಥ ನಾದ ಕೃತವರ್ಮಾ–ಇವರೆಲ್ಲರೂ ಕರ್ಣನನ್ನು ರಕ್ಷಿಸುವ ಸಲುವಾಗಿ ಅರ್ಜುನ ನನ್ನು ಎದುರಿಸಲು ಮುಂದೆ ಹೋದರು. ಅರ್ಜುನನೂ ಸಹ ಪಾಂಚಾಲ

ಸೈನಿಕರಿಂದ ಪರಿವೃತನಾಗಿ–ಶತಕ್ರತುವು ವೃತ್ರಾಸುರನನ್ನು ಎದುರಿಸಿದಂತೆ– ಕರ್ಣನನ್ನು ಎದುರಿಸಿದನು."

ಕರ್ಣನ ಅದ್ಭುತಪರಾಕ್ರಮದ ವಿವರಣೆಯನ್ನು ಕೇಳಿ ಸ್ವಲ್ಪ ಸಮಾಧಾನಗೊಂಡ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಕಾಲ, ಅಂತಕ ಮತ್ತು ಯಮರಿಗೆ ಸಮಾನನಾಗಿದ್ದ ಮತ್ತು ಬಹಳವಾಗಿ ಕೋಪಗೊಂಡಿದ್ದ ಅರ್ಜುನನನ್ನು ನೋಡಿ ವೈಕರ್ತನನು ಯಾವ ರೀತಿಯಲ್ಲಿ ಉತ್ತರಕೊಟ್ಟನು? (ಅವನನ್ನು ಯಾವ ರೀತಿಯಲ್ಲಿ ಎದುರಿಸಿದನು?) ಮಹಾರಥನಾದ ಕರ್ಣನು ಸದಾಕಾಲದಲ್ಲಿಯೂ ಅರ್ಜುನನೊಡನೆ ಸ್ಪರ್ಧಿಸುತ್ತಲೇ ಇದ್ದನು. ಅತ್ಯಂತಭಯಂಕರನಾದ ಭೀಭತ್ಸುವನ್ನು ಯುದ್ಧದಲ್ಲಿ ಜಯಿಸುವ ಆಶೆಯನ್ನು ಪ್ರಕಟಪಡಿಸುತ್ತಿದ್ದನು. ಆ ಸಮಯದಲ್ಲಿ ಇದ್ದಕ್ಕಿದ್ದಂತೆಯೇ ತನ್ನ ಮುಂದೆ ಬಂದು ನಿಂತ, ಯಾವಾಗಲೂ ಅತ್ಯಂತವೈರಿಯಾಗಿಯೇ ಇದ್ದ ಅರ್ಜುನನಿಗೆ ಕರ್ಣನು ಯಾವ ರೀತಿಯಲ್ಲಿ ಉತ್ತರಕೊಟ್ಟನು ಮತ್ತು ಮುಂದೇನು ಮಾಡಿದನು?"

"ಮಹಾರಾಜ! ಒಂದು ಸಲಗವು ಮತ್ತೊಂದು ಸಲಗವನ್ನು ಎದುರಿಸಲು ಹೋಗುವಂತೆ–ತನ್ನ ಕಡೆಗೆ ಬರುತ್ತಿದ್ದ ಧನಂಜಯನನ್ನು ನೋಡಿ ಕರ್ಣನು ಸ್ವಲ್ಪವಾದರೂ ಗಾಬರಿಗೊಳ್ಳದೆ ಅರ್ಜುನನ ಮೇಲೆ ಬೀಳಲು ರಭಸದಿಂದ ಮುನ್ನುಗ್ಗಿದನು. ಅರ್ಜುನನು ವೇಗವಾಗಿ ತನ್ನ ಮೇಲೆ ಬೀಳಲು ಬರುತ್ತಿದ್ದ ಕರ್ಣನನ್ನು ನೇರವಾಗಿ ಹೋಗುವ ಬಾಣಗಳಿಂದ ಮುಚ್ಚಿದನು. ಅಂತೆಯೇ ಕರ್ಣನೂ ಸಹ ಅರ್ಜುನನನ್ನು ಬಾಣಗಳ ಸಮೂಹಗಳಿಂದ ಮುಚ್ಚಿದನು. ಅದಕ್ಕೆ ಪ್ರತಿಯಾಗಿ ಪಾಂಡವನು ಪುನಃ ಕರ್ಣನನ್ನು ಬಾಣಗಳ ಸಮೂಹದಿಂದ ಮುಚ್ಚಿದನು. ಅದರಿಂದ ಕ್ರುದ್ಧನಾದ ಕರ್ಣನು ಮೂರು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿದನು. ಮಹಾಬಲನಾದ ಅರ್ಜುನನು ಕರ್ಣನ ಆ ಹಸ್ತಲಾಘವವನ್ನು ಸಹಿಸಿಕೊಳ್ಳಲಿಲ್ಲ. ಶತ್ರುಸೂದನನಾದ ಅರ್ಜುನನು ಮಸೆಗಲ್ಲಿನಿಂದ ಶುದ್ಧವಾಗಿ ಮಾಡಲ್ಪಟ್ಟಿದ್ದ, ಪ್ರಸನ್ನವಾದ (ನಿರ್ಮಲವಾದ) ಅಗ್ರಭಾಗಗಳನ್ನು ಹೊಂದಿದ್ದ, ನೇರವಾಗಿ ಹೋಗುವ ಮುನ್ನೂರು ಬಾಣಗಳಿಂದ ಕರ್ಣನನ್ನು ಪ್ರಹರಿಸಿದನು.

ಅನಂತರ ಕುಪಿತನಾಗಿದ್ದ, ಪರಾಕ್ರಮಿಯಾದ, ಬಲಿಷ್ಠನಾದ ಅರ್ಜುನನು ನಗುತ್ತಿರುವವನಂತೆ ತೋರ್ಪಡಿಸಿಕೊಳ್ಳುತ್ತಾ ನಾರಾಚವೆಂಬ ಒಂದು ಬಾಣ ದಿಂದ ಕರ್ಣನ ಎಡಭುಜದ ಅಗ್ರಭಾಗಕ್ಕೆ ಗುರಿಯಿಟ್ಟು ಪ್ರಹರಿಸಿದನು. ಬಾಣದಿಂದ ಗಾಯಗೊಂಡ ಕರ್ಣನ ಕೈಯಿಂದ ಧನುಸ್ಸು ಕೆಳಕ್ಕೆ ಬಿದ್ದು ಹೋಯಿತು. ಮಹಾಬಲನಾದ ಕರ್ಣನು ನಿಮೇಷಾರ್ಧದಲ್ಲಿ ಅದೇ ಧನುಸ್ಸನ್ನೇ ಪುನಃ ಕೈಗೆತ್ತಿಕೊಂಡು ಸಿದ್ಧಹಸ್ತನಂತೆ ಅರ್ಜುನನನ್ನು ಬಾಣಗಳ ಸಮೂಹಗಳಿಂದ ಮುಚ್ಚಿದನು. ಕರ್ಣನು ಸುರಿಸಿದ ಬಾಣಗಳ ಮಳೆಯನ್ನು ನಗು-ನಗುತ್ತಲೇ ಧನಂಜಯನು ಬಾಣಗಳ ಸುರಿಸುವಿಕೆಯಿಂದ ವಿಧ್ವಸ್ತ ಗೊಳಿಸಿದನು. ಮಾಡಿದುದಕ್ಕೆ ಪ್ರತಿಮಾಡಲು ಇಚ್ಛಿಸಿ ಯುದ್ಧಮಾಡುತ್ತಿದ್ದ, ಮಹಾಧನುಷ್ಮಂತರಾದ ಕರ್ಣಾರ್ಜುನರು ಪರಸ್ಪರವಾಗಿ ಬಾಣಗಳನ್ನು ಒಬ್ಬರು ಮತ್ತೊಬ್ಬರ ಮೇಲೆ ಸುರಿಸುತ್ತಾ ಇಬ್ಬರೂ ಬಾಣಗಳಿಂದ ಮುಚ್ಚಿಹೋದರು. ಬೆದೆಬಂದ ಹೆಣ್ಣಾನೆಯ ಸಲುವಾಗಿ ಕೋಪಗೊಂಡ ಎರಡು ಕಾಡಾನೆಗಳು ಸೆಣೆಸಾಡುವಂತೆ–ಪರಸ್ಪರವಾಗಿ ಯುದ್ಧದಲ್ಲಿ ತೊಡಗಿದ್ದ ಕರ್ಣ-ಪಾಂಡವರ ಆ ಮಹಾಯುದ್ಧವು ಪರಮಾದ್ಭುತವಾಗಿ ದ್ದಿತು. ಮಹಾಧನುಷ್ಮಂತನಾದ ಅರ್ಜುನನು ಕರ್ಣನ ಪರಾಕ್ರಮವನ್ನು ನೋಡಿ ಕರ್ಣನ ಧನುಸ್ಸನ್ನು ಮುಷ್ಟಿಯ ಪ್ರದೇಶದಲ್ಲಿ ಬಹಳ ತ್ವರೆಯಿಂದ ಕತ್ತರಿಸಿಬಿಟ್ಟನು. ಭಲ್ಲಗಳಿಂದ ಕರ್ಣನ ರಥದಲ್ಲಿದ್ದ ನಾಲ್ಕು ಕುದುರೆ ಗಳನ್ನೂ ಸಂಹರಿಸಿದನು. ಅನಂತರ ಶತ್ರುತಾಪನನಾದ ಅರ್ಜುನನು ಕರ್ಣನ ಸಾರಥಿಯ ತಲೆಯನ್ನೂ ಶರೀರದಿಂದ ಅಪಹರಿಸಿಬಿಟ್ಟನು. ಕತ್ತರಿಸಿಹೋದ ಧನುಸ್ಸುಳ್ಳವನಾಗಿದ್ದ, ಹತಾಶ್ವನಾಗಿದ್ದ, ಹತಸಾರಥಿ ಯಾಗಿದ್ದ ಕರ್ಣನನ್ನು ಅರ್ಜುನನು ನಾಲ್ಕು ಬಾಣಗಳಿಂದ ಪ್ರಹರಿಸಿದನು. ಮಹಾಬಲನಾದ ಅರ್ಜುನನ ಬಾಣಗಳಿಂದ ಪೀಡಿತನಾದ ಕರ್ಣನು ಅಶ್ವ-ಸಾರಥಿಗಳಿಂದ ವಿಹೀನವಾಗಿದ್ದ ರಥದಿಂದ ಕೆಳಕ್ಕೆ ಧುಮುಕಿ ಒಡನೆಯೇ ಕೃಪರ ರಥವನ್ನು ಹತ್ತಿದನು. ಮಹಾರಾಜ! ಅರ್ಜುನನ ಬಾಣಗಳ ಸಮೂಹಗಳಿಂದ ಚುಚ್ಚಲ್ಪಟ್ಟಿದ್ದ ಕರ್ಣನು ಮುಳ್ಳುಹಂದಿಯಂತೆಯೇ ಕಾಣುತ್ತಿದ್ದನು. ಪ್ರಾಣವನ್ನುಳಿಸಿಕೊಳ್ಳುವ ಇಚ್ಛೆಯಿಂದ ಕರ್ಣನು ಕೃಪರ ರಥಕ್ಕೆ ಹತ್ತಿದನು. ಭರತರ್ಷಭನೇ! ರಾಧೇಯನು ಪರಾಜಿತನಾದುದನ್ನು

ಕಂಡು ನಿನ್ನ ಕಡೆಯ ಯೋಧರು ಧನಂಜಯನ ಬಾಣಗಳಿಂದ ಪೀಡಿತರಾಗಿ ದಿಕ್ಕಾಪಾಲಾಗಿ ಓಡಿಹೋದರು. ತನ್ನ ಕಡೆಯ ಸೈನಿಕರು ಓಡಿಹೋಗುತ್ತಿದ್ದುದನ್ನು ಗಮನಿಸಿದ ದುರ್ಯೋಧನನು ಅವರೆಲ್ಲರನ್ನೂ ಹಿಂದಿರುಗುವಂತೆ ಹುರಿದುಂಬಿಸುತ್ತಾ ಈ ಮಾತುಗಳನ್ನು ಹೇಳಿದನು : "ಕ್ಷತ್ರಿಯರ್ಷಭರೇ! ಪಲಾಯನಮಾಡುವುದನ್ನು ನಿಲ್ಲಿಸಿರಿ. ಧೈರ್ಯವಾಗಿ ನಿಂತು ಯುದ್ಧಮಾಡಿರಿ. ಪಾರ್ಥನ ವಧೆಯ ಸಲುವಾಗಿ ನಾನೇ ಅವನೊಡನೆ ಯುದ್ಧಮಾಡಲು ಹೋಗುತ್ತೇನೆ. ಪಾಂಚಾಲ-ಸೋಮಕರಿಂದ ಕೂಡಿರುವ ಪಾಂಡವರನ್ನು ನಾನೇ ಸಂಹಾರಮಾಡುತ್ತೇನೆ. ಗಾಂಡೀವಧನ್ವನಾದ ಅರ್ಜುನನೊಡನೆ ಯುದ್ಧಮಾಡಲಿರುವ, ಪ್ರಳಯಕಾಲದಲ್ಲಿ ಪ್ರಾದುರ್ಭವಿಸುವ ಕಾಲನ ಪರಾಕ್ರಮಕ್ಕೆ ಅನುರೂಪವಾದ ನನ್ನ ಪರಾಕ್ರಮವನ್ನು ಪಾಂಡವರು ಈಗಲೇ ನೋಡುತ್ತಾರೆ. ಈಗ ಸಮರಭೂಮಿಯಲ್ಲಿರುವ ಸಾವಿರಾರು ಯೋಧರು ನನ್ನ ಧನುಸ್ಸಿನಿಂದ ವಿಮುಕ್ತವಾದ, ಶಲಭಗಳ ಸಾಲುಗಳೋಪಾದಿಯಲ್ಲಿ ಕಾಣುವ ಬಾಣಗಳ ಸಮೂಹಗಳನ್ನು ಕಾಣುತ್ತಾರೆ. ವರ್ಷಾಕಾಲದಲ್ಲಿ ಮೋಡಗಳು ಮಳೆಗರೆಯುವಂತೆ–ಧನುಷ್ಮಂತನಾದ ನಾನು ಬಾಣಮಯವಾದ ವೃಷ್ಟಿಯನ್ನೇ ಸೃಷ್ಟಿಸುವುದನ್ನು ಸೈನಿಕರು ಕಾಣುತ್ತಾರೆ.

ಬಗ್ಗಿದ ಗಿಣ್ಣುಗಳುಳ್ಳ ಬಾಣಗಳಿಂದ ನಾನೀಗ ಪಾರ್ಥನನ್ನು ಪರಾಜಯಗೊಳಿಸುತ್ತೇನೆ. ಶೂರವೀರರೇ! ಅರ್ಜುನನ ದೆಸೆಯಿಂದ ಉಂಟಾದ ಭಯವನ್ನು ತ್ಯಜಿಸಿರಿ (ಅರ್ಜುನನಿಗೆ ಭಯಪಡಬೇಡಿರಿ). ಸಮರಭೂಮಿಯಲ್ಲಿ ಧೈರ್ಯವಾಗಿ ನಿಂತು ಯುದ್ಧಮಾಡಿರಿ. ಯಾವ ರೀತಿಯಲ್ಲಿ ಮೊಸಳೆಗಳಿಗೆ ಆಲಯವಾದ ಸಮುದ್ರವು ತೀರದ ಬಳಿಗೆ ಬಂದನಂತರ ಅದನ್ನು ಅತಿಕ್ರಮಿಸಿ ಹೋಗುವುದಿಲ್ಲವೋ–ಅದೇ ರೀತಿಯಲ್ಲಿ ನನ್ನ ಪರಾಕ್ರಮಕ್ಕೆ ಎದುರಾಗಿ ನಿಂತ ಅರ್ಜುನನು ನನ್ನ ಪರಾಕ್ರಮದ ವೇಗವನ್ನು ಸಹಿಸಿಕೊಳ್ಳಲಾರನು (ಸಮುದ್ರವು ತೀರಪ್ರದೇಶವನ್ನು ಅತಿಕ್ರಮಿಸಿ ಹೋಗದಂತೆ ನನ್ನ ಪರಾಕ್ರಮವನ್ನು ಅತಿಕ್ರಮಿಸಿ ಅರ್ಜುನನು ಮುಂದೆ ಹೋಗಲಾರನು)."

ಮಹಾರಾಜ! ದುರ್ಧರ್ಷನಾದ, ಕೋಪದಿಂದ ಕೆಂಪಾದ ಕಣ್ಣುಗಳನ್ನು ಹೊಂದಿದ್ದ ದುರ್ಯೋಧನನು ಹೀಗೆ ಹೇಳಿ ಸೈನಿಕರನ್ನು ಹುರಿ

ದುಂಬಿಸಿ ಮಹಾಸೈನ್ಯದಿಂದ ಪರಿವೃತನಾಗಿ ಅರ್ಜುನನನ್ನು ಆಕ್ರಮಿಸಲು ಹೋಗುತ್ತಿದ್ದನು. ಅರ್ಜುನನೊಡನೆ ಯುದ್ಧಮಾಡಲು ಹೋಗುತ್ತಿದ್ದ ಮಹಾಬಾಹುವಾದ ದುರ್ಯೋಧನನನ್ನು ನೋಡಿ ಶಾರದ್ವತರು ಅಶ್ವತ್ಥಾಮನ ಸಮೀಪಕ್ಕೆ ಹೋಗಿ ಹೇಳಿದರು :

"ಅಶ್ವತ್ಥಾಮನೇ! ಅಸಹನಶೀಲನಾದ, ಮಹಾಬಾಹುವಾದ ದುರ್ಯೋಧನನು ಕ್ರೋಧದಿಂದ ಬುದ್ಧಿಗೆಟ್ಟವನಾಗಿ *ಪತಂಗವೃತ್ತಿಯನ್ನಾಶ್ರಯಿಸಿ ಅರ್ಜುನನೊಡನೆ ಯುದ್ಧಮಾಡಲು ಹೊರಟಿದ್ದಾನೆ. ನಾವೆಲ್ಲರೂ ನೋಡುತ್ತಿರುವಂತೆಯೇ ಪುರುಷವ್ಯಾಘ್ರನಾದ ಕೌರವನು ಪಾರ್ಥನೊಡನೆ ಯುದ್ಧದಲ್ಲಿ ತೊಡಗಿ ಪ್ರಾಣಗಳನ್ನು ಬಿಡುವಂತಾಗದ ರೀತಿಯಲ್ಲಿ ನೀನು ಹೋಗಿ ಅವನನ್ನು ಯುದ್ಧದಿಂದ ವಿಮುಖನನ್ನಾಗಿ ಮಾಡು. ವೀರನಾದ ಕೌರವರಾಜನು ಅರ್ಜುನನ ಬಾಣಗಳಿಗೆ ಲಕ್ಷ್ಯನಾಗುವುದರೊಳಗಾಗಿ ಅವನನ್ನು ತಡೆದು ನಿಲ್ಲಿಸು. ಪೊರೆಬಿಟ್ಟ ಸರ್ಪಗಳಂತಿರುವ ಪಾರ್ಥನ ಬಾಣಗಳು ಕುರುರಾಜನನ್ನು ಭಸ್ಮಮಾಡುವುದರೊಳಗಾಗಿ ಅವನನ್ನು ಯುದ್ಧದಿಂದ ಹಿಂದಿರುಗಿಸು. ಮಾನದನೇ! ನಾವೆಲ್ಲರೂ ಇಲ್ಲಿಯೇ ಇರುವಾಗ ಯಾರ ಸಹಾಯವನ್ನೂ ಅಪೇಕ್ಷಿಸದೇ ರಾಜನು ತಾನಾಗಿಯೇ ಪಾರ್ಥನೊಡನೆ ಯುದ್ಧಮಾಡಲು ಹೊರಟಿರುವುದು ಅಯುಕ್ತವೆಂದೇ ನಾನು ಭಾವಿಸುತ್ತೇನೆ. ಸಿಂಹದ ಕೈಗೆ ಸಿಕ್ಕಿದ ಆನೆಯ ಜೀವವು ದುರ್ಲಭವಾಗುವಂತೆ–ಕಿರೀಟಿಯುಕ್ತನಾದ ಪಾರ್ಥನೊಡನೆ ಯುದ್ಧಕ್ಕೆ ತೊಡಗುವ ನಮ್ಮ ರಾಜನ ಜೀವಿತವೂ ದುರ್ಲಭವೆಂದೇ ನಾನು ಭಾವಿಸುತ್ತೇನೆ. (ರಾಜನು ಜೀವಸಹಿತವಾಗಿ ಹಿಂದಿರುಗಲಾರನು)".

ಮಹಾರಾಜ! ಸೋದರಮಾವನು ಹೀಗೆ ಹೇಳಿದೊಡನೆಯೇ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅಶ್ವತ್ಥಾಮನು ದುರ್ಯೋಧನನನ್ನು ಕುರಿತು ಬಹಳ ಅವಸರದಿಂದ ಈ ಮಾತುಗಳನ್ನು ಹೇಳಿದನು :

**ಮಯಿ ಜೀವತಿ ಗಾನ್ಧಾರೇ ನ ಯುದ್ಧಂ ಗನ್ತುಮರ್ಹಸಿ ।**
**ಮಾಮನಾದೃತ್ಯ ಕೌರವ್ಯ ತವ ನಿತ್ಯಂ ಹಿತೈಷಿಣಮ್ ॥೮೪॥**

---

* **ಪತಙ್ಗವೃತ್ತಿಃ :** ಪತಂಗದ ಹುಳುವು ತಾನೇ ತಾನಾಗಿ ಬೆಂಕಿಯ ಬಳಿಗೆ ಹೋಗಿ ಅದರಲ್ಲಿ ಬಿದ್ದು ಸಾಯುವಂತೆ ತನ್ನ ಮರಣಕ್ಕೆ ತಾನೇ ಕಾರಣನಾಗುವುದು.

"ಕೌರವ್ಯ! ಗಾಂಧಾರೀಪುತ್ರನೇ! ನಾನಿನ್ನೂ ಜೀವಿಸಿರುವಾಗ–ನಿನಗೆ ಸದಾ ಹಿತೈಷಿಯಾದ ನನ್ನನ್ನು ಅನಾದರಣೆಮಾಡಿ ನೀನು ಯುದ್ಧಕ್ಕೆ ಹೋಗುತ್ತಿರುವುದು ಉಚಿತವಲ್ಲ.

**ನ ಹಿ ತೇ ಸಮ್ಭ್ರಮಃ ಕಾರ್ಯಃ ಪಾರ್ಥಸ್ಯ ವಿಜಯಂ ಪ್ರತಿ ।**
**ಅಹಮಾವಾರಯಿಷ್ಯಾಮಿ ಪಾರ್ಥಂ ತಿಷ್ಠ ಸುಯೋಧನ ॥೮೫॥**

ಸುಯೋಧನ! ಪಾರ್ಥನು ಕರ್ಣನೊಡನೆ ಮಾಡಿದ ಯುದ್ಧದಲ್ಲಿ ಜಯಗಳಿಸಿಬಿಟ್ಟನೆಂದು ಭ್ರಮೆಗೊಳ್ಳಬೇಕಾಗಿಲ್ಲ. ನೀನು ಇಲ್ಲಿಯೇ ಇರು. ಪಾರ್ಥನನ್ನು ನಾನು ತಡೆಯುತ್ತೇನೆ."

**ಆಚಾರ್ಯಃ ಪಾಣ್ಡುಪುತ್ರಾನ್ವೈ ಪುತ್ರವತ್ಪರಿರಕ್ಷತಿ ।**
**ತ್ವಮಪ್ಯುಪೇಕ್ಷಾಂ ಕುರುಷೇ ತೇಷು ನಿತ್ಯಂ ದ್ವಿಜೋತ್ತಮ ॥೮೬॥**

"ದ್ವಿಜೋತ್ತಮ! ಆಚಾರ್ಯರು ಪಾಂಡುಪುತ್ರರನ್ನು ಮಕ್ಕಳಂತೆಯೇ ಸಂರಕ್ಷಣೆಮಾಡುತ್ತಿದ್ದಾರೆ. ನೀನೂ ಸಹ ಪಾಂಡವರ ವಿಷಯದಲ್ಲಿ (ಅವರನ್ನು ಜಯಿಸುವ ವಿಷಯದಲ್ಲಿ) ಸದಾಕಾಲದಲ್ಲಿಯೂ ಉಪೇಕ್ಷೆಯನ್ನೇ ತೋರಿಸುತ್ತಿರುವೆ.

**ಮಮ ವಾ ಮನ್ದಭಾಗ್ಯತ್ವಾನ್ಮನ್ದಸ್ತೇ ವಿಕ್ರಮೋ ಯುಧಿ ।**
**ಧರ್ಮರಾಜಪ್ರಿಯಾರ್ಥಂ ವಾ ದ್ರೌಪದ್ಯಾ ವಾ ನ ವಿದ್ಮ ತತ್ ॥೮೭॥**

ನನ್ನ ಮಂದಭಾಗ್ಯದಿಂದಲೋ–ಯುಧಿಷ್ಠಿರನಿಗೆ ಅಥವಾ ದ್ರೌಪದಿಗೆ ಪ್ರಿಯವನ್ನುಂಟುಮಾಡಬೇಕೆನ್ನುವ ಕಾರಣದಿಂದಲೋ–ಯುದ್ಧದಲ್ಲಿ ನಿನ್ನ ಪರಾಕ್ರಮವು ಬಹಳ ಮಂದವಾಗಿದೆ (ಬಿರುಸಿನಿಂದ ನೀನು ಯುದ್ಧ ಮಾಡುತ್ತಿಲ್ಲ). ಇದಕ್ಕೆ ಕಾರಣವನ್ನು ನಾವು ತಿಳಿಯುತ್ತಿಲ್ಲ.

**ಧಿಗಸ್ತು ಮಮ ಲುಬ್ಧಸ್ಯ ಯತ್ಕೃತೇ ಸರ್ವಬಾನ್ಧವಾಃ ।**
**ಸುಖಾರ್ಹಾಃ ಪರಮಂ ದುಃಖಂ ಪ್ರಾಪ್ನುವನ್ತ್ಯಪರಾಜಿತಾಃ ॥೮೮॥**

ರಾಜ್ಯಲೋಭಿಯಾದ ನನಗೆ ಧಿಕ್ಕಾರವಿರಲಿ. ನನ್ನ ಕಾರಣದಿಂದಾಗಿ ಸುಖೋಚಿತರಾದ, ಯುದ್ಧದಲ್ಲಿ ಹಿಂದೆಂದೂ ಪರಾಜಿತರಾಗದಿರುವ ನನ್ನ ಬಾಂಧವರೆಲ್ಲರೂ ದಾರುಣವಾದ ದುಃಖವನ್ನು ಅನುಭವಿಸುತ್ತಿದ್ದಾರೆ. ಶಸ್ತ್ರವಿದರಲ್ಲಿ ಗೌತಮೀಪುತ್ರನಾದ ಅಶ್ವತ್ಥಾಮನ ಹೊರತಾಗಿ–ಯುದ್ಧದಲ್ಲಿ

ಮಹೇಶ್ವರನಿಗೆ ಸಮಾನನಾದ ಮತ್ತು ಶಸ್ತ್ರವಿದ್ಯಾನಿಪುಣರಲ್ಲಿ ಪ್ರಮುಖ ನಾಗಿರತಕ್ಕ ಯಾವ ವೀರನು ಶತ್ರುಗಳನ್ನು ಕೊಲ್ಲದೇ ಇರುವನು? (ಆದರೆ ಗೌತಮೀಪುತ್ರನು ಮಾತ್ರ ಈ ಕಾರ್ಯವನ್ನು ಮಾಡುತ್ತಿಲ್ಲ. ನಾನು ಮಂದಭಾಗ್ಯನಾಗಿರುವುದೇ ಇದಕ್ಕೆ ಕಾರಣವಿರಬಹುದು).

**ಅಶ್ವತ್ಥಾಮನ್ಪ್ರಸೀದಸ್ಯ ನಾಶಯೈತಾನ್ಮಮಾಹಿತಾನ್ ।**
**ತವಾಸ್ತ್ರಗೋಚರೇ ಶಕ್ತಾಃ ಸ್ಥಾತುಂ ದೇವಾ ನ ದಾನವಾಃ ॥೯೦॥**

ಅಶ್ವತ್ಥಾಮನೇ! ಪ್ರಸನ್ನನಾಗು. ನನ್ನ ಈ ಶತ್ರುಗಳೆಲ್ಲರನ್ನೂ ಸಂಹರಿಸು. ನಿನ್ನ ಅಸ್ತ್ರಗಳು ಹೋಗುವ ಪರಿಸರದಲ್ಲಿ ದೇವತೆಗಳಾಗಲೀ– ದಾನವರಾಗಲೀ ನಿಲ್ಲಲು ಸಮರ್ಥರಲ್ಲ. (ಹೀಗಿರುವಾಗ ಪಾಂಡವರ ವಿಷಯವಾಗಿ ಹೇಳುವುದೇನಿದೆ? )

ದ್ರೋಣಪುತ್ರ! ಪಾಂಚಾಲರನ್ನೂ, ಸೋಮಕರನ್ನೂ ಮತ್ತು ಅವರ ಅನುಯಾಯಿಗಳನ್ನು ಸಂಹರಿಸು. ನಿನ್ನಿಂದಲೇ ಸಂರಕ್ಷಿತರಾಗಿ ನಾವು ಉಳಿದವರನ್ನು ಸಂಹಾರಮಾಡುತ್ತೇವೆ. ಸೋಮಕರೂ, ಯಶೋವಂತರಾದ ಪಾಂಚಾಲರೂ ಪರಮಕ್ರುದ್ಧರಾಗಿ ನನ್ನ ಸೈನ್ಯದ ಮಧ್ಯದಲ್ಲಿ ಸಂಚರಿಸುತ್ತಾ ದಾವಾಗ್ನಿಯು ಅರಣ್ಯವನ್ನು ಭಸ್ಮಮಾಡುವಂತೆ–ನನ್ನ ಸೈನ್ಯವನ್ನು ಭಸ್ಮಮಾಡುತ್ತಿದ್ದಾರೆ. ನರೋತ್ತಮನೇ! ಮಹಾಬಾಹುವೇ! ಅರ್ಜುನನಿಂದ ರಕ್ಷಿತರಾದ ಇವರು ನನ್ನ ಸಂಪೂರ್ಣಸೈನ್ಯವನ್ನೂ ನಿಃಶೇಷವಾಗಿ ಧ್ವಂಸಮಾಡುವುದರೊಳಗಾಗಿ ಇವರನ್ನೂ ಮತ್ತು ಕೇಕಯರನ್ನೂ ತಡೆದು ನಿಲ್ಲಿಸು. ಅಶ್ವತ್ಥಾಮನೇ! ಬಹಳ ತ್ವರೆಯಿಂದ ಹೋಗು ; ಅರಿಂದಮನೇ! ಬಹಳ ಶೀಘ್ರವಾಗಿ ಹೋಗು. ಮೊದಲಿನಲ್ಲಾದರೂ ಮಾಡು ; ಕಡೆಯಲ್ಲಾ ದರೂ ಮಾಡು. ಸೋಮಕ-ಪಾಂಚಾಲ-ಕೇಕಯರನ್ನು ಸಂಹರಿಸುವ ಕಾರ್ಯವು ನಿನಗೇ ಸೇರಿದ್ದಾಗಿದೆ. ದ್ರೋಣಪುತ್ರ! ಪಾಂಚಾಲರನ್ನು ಸಂಹರಿಸುವ ಸಲುವಾಗಿಯೇ ನೀನು ಜನ್ಮತಾಳಿರುವೆ. ನೀನೇನಾದರೂ ಮನಸ್ಸುಮಾಡಿದ್ದೇ ಆದರೆ ಅತ್ಯಲ್ಪಕಾಲದಲ್ಲಿಯೇ ಈ ಜಗತ್ತನ್ನು ಪಾಂಚಾಲ ರಿಂದ ರಹಿತವನ್ನಾಗಿಯೇ ಮಾಡಿಬಿಡುವೆ. ಈ ಮಾತನ್ನು ನಾನು ಶ್ಲಾಘನೆ ಮಾಡುವ ಸಲುವಾಗಿ ಹೇಳುತ್ತಿಲ್ಲ. ತ್ರಿಕಾಲಜ್ಞಾನಿಗಳಾದ ಸಿದ್ಧರೇ ಈ ಮಾತನ್ನು ಹೇಳಿದ್ದರು. ಅವರು ಹೇಳಿದ್ದಂತೆಯೇ ನಡೆಯುವುದರಲ್ಲಿಯೂ

ಸಂಶಯವಿಲ್ಲ. ಪುರುಷವ್ಯಾಘ್ರನೇ! ಆದುದರಿಂದ ಅನುಯಾಯಿಗಳಿಂದ ಕೂಡಿರುವ ಪಾಂಚಾಲರನ್ನು ಈಗಲೇ ಸಂಹರಿಸು.

ನಾನು ಈ ಹಿಂದೆ ಹೇಳಿದಂತೆ ನಿನ್ನ ಅಸ್ತ್ರಗಳು ಚಲಿಸುವ ಮಾರ್ಗದಲ್ಲಿ ನಿಲ್ಲಲು ಇಂದ್ರನಿಂದ ಕೂಡಿದ ದೇವತೆಗಳಿಗೂ ಸಾಧ್ಯವಿಲ್ಲ. ಹೀಗಿರುವಾಗ ಪಾರ್ಥರಾಗಲೀ ಪಾಂಚಾಲರಾಗಲೀ ನಿನ್ನನ್ನೆದುರಿಸಿ ಹೇಗೆ ನಿಲ್ಲುವರು? ಈ ವಿಷಯವನ್ನು ನಾನು ನಿನ್ನ ಮುಖಸ್ತುತಿಗಾಗಿ ಹೇಳುತ್ತಿಲ್ಲ; ಸತ್ಯವಾಗಿ ಹೇಳುತ್ತಿದ್ದೇನೆ. ವೀರಶ್ರೇಷ್ಠನೇ! ಸೋಮಕರಿಂದೊಡಗೂಡಿದ ಪಾಂಡವರು ನಿನ್ನೊಡನೆ ಬಲಪೂರ್ವಕವಾಗಿ ಯುದ್ಧಮಾಡಲು ಖಂಡಿತವಾಗಿಯೂ ಸಮರ್ಥರಲ್ಲ. ಈ ಸತ್ಯವನ್ನು ನಾನು ನಿನ್ನೊಡನೆ ಹೇಳುತ್ತಿದ್ದೇನೆ. ಮಹಾಬಾಹುವೇ! ಬೇಗ ಹೋಗು! ಕಾಲವು ಅತಿಕ್ರಮಿಸಿಹೋಗದ ರೀತಿಯಲ್ಲಿ ಶೀಘ್ರವಾಗಿ ಹೋಗು. ಪಾರ್ಥನ ಬಾಣಗಳಿಂದ ಪೀಡಿತವಾದ ಈ ನಮ್ಮ ಸೈನ್ಯವು ಈಗಾಗಲೇ ಕರಗಿಹೋಗುತ್ತಿದೆ. ಮಾನದನೇ! ದಿವ್ಯವಾದ ತೇಜಸ್ಸಿನಿಂದ ಪಾಂಡುವಿನ ಮಕ್ಕಳನ್ನೂ ಮತ್ತು ಪಾಂಚಾಲರನ್ನೂ ನಿಗ್ರಹಿಸಲು ನೀನು ಸಮರ್ಥನಾಗಿರುವೆ."

೧೫೯ನೆಯ ಅಧ್ಯಾಯವು ಮುಗಿಯಿತು.

೧೬೦ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಅಶ್ವತ್ಥಾಮನು ದುರ್ಯೋಧನನಿಗೆ ಆಶ್ವಾಸನೆಯನ್ನಿತ್ತು ಪಾಂಚಾಲರೊಡನೆ ಯುದ್ಧಮಾಡಿದುದು : ಧೃಷ್ಟದ್ಯುಮ್ನನನ್ನು ರಥಹೀನನನ್ನಾಗಿ ಮಾಡಿದುದು : ಪಾಂಚಾಲಸೈನ್ಯದ ಪಲಾಯನ

ಸಂಜಯನು ದುರ್ಯೋಧನನ ಪ್ರಾರ್ಥನೆಗೆ ಅಶ್ವತ್ಥಾಮನ ಪ್ರತಿಕ್ರಿಯೆಯನ್ನು ವಿವರಿಸಿ ಹೇಳುತ್ತಾನೆ :

"ಮಹಾರಾಜ! ದುರ್ಯೋಧನನು ಹೀಗೆ ಹೇಳಿದನಂತರ ಯುದ್ಧ ದುರ್ಮದನಾದ ಅಶ್ವತ್ಥಾಮನು–ಇಂದ್ರನು ದೈತ್ಯರನ್ನು ವಧಿಸಲು ಪ್ರಯತ್ನಿಸಿದಂತೆ–ಶತ್ರುಗಳನ್ನು ವಧೆಮಾಡಲು ಪ್ರಯತ್ನಿಸಿದನು. ಮಹಾಬಾಹುವಾದ ದ್ರೌಣಿಯು ನಿನ್ನ ಮಗನನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ಕೌರವನೇ! ನೀನು ಹೇಳಿದುದು ಸತ್ಯ.

**ಪ್ರಿಯಾ ಹಿ ಪಾಣ್ಡವಾ ನಿತ್ಯಂ ಮಮ ಚಾಪಿ ಪಿತುಶ್ಚ ಮೇ ।**
**ತಥೈವಾವಾಂ ಪ್ರಿಯೌ ತೇಷಾಂ ನ ತು ಯುದ್ಧೇ ಕುರೂದ್ವಹ ॥೩॥**

ಕುರುಶ್ರೇಷ್ಠನೇ! ನನಗೂ ಮತ್ತು ನನ್ನ ತಂದೆಯವರಿಗೂ ಪಾಂಡವರು ಯಾವಾಗಲೂ ಪ್ರಿಯರೇ ಆಗಿರುತ್ತಾರೆ. ಹಾಗೆಯೇ ನಾವೂ ಸಹ ಪಾಂಡವರಿಗೂ ಅತ್ಯಂತಪ್ರಿಯರೇ ಆಗಿರುತ್ತೇವೆ. ಇದು ನಿಜ. ಆದರೆ ಯುದ್ಧದಲ್ಲಿ ಅಲ್ಲ (ಯುದ್ಧದಲ್ಲಿ ನಮಗೆ ಅವರೂ ಪ್ರಿಯರಲ್ಲ ; ಅವರಿಗೆ ನಾವೂ ಪ್ರಿಯರಲ್ಲ. ಪರಸ್ಪರಶತ್ರುಗಳೆಂದೇ ಭಾವಿಸಿ ಯುದ್ಧಮಾಡುತ್ತೇವೆ).

ನೃಪೋತ್ತಮನೇ! ನಾವು ನಮ್ಮ ಪ್ರಾಣಗಳ ಮೇಲಿನ ಆಸೆಯನ್ನೂ ಪರಿತ್ಯಜಿಸಿ ಭಯಲೇಶವಾದರೂ ಇಲ್ಲದವರಂತೆ ಯಥಾಶಕ್ತಿ ಯುದ್ಧಮಾಡುತ್ತೇವೆ. ನಾನು, ಕರ್ಣ, ಶಲ್ಯ, ಕೃಪ, ಕೃತವರ್ಮರು ಒಟ್ಟಾಗಿ ಸೇರಿ ಪಾಂಡವೀಸೇನೆಯನ್ನು ನಿಮೇಷಮಾತ್ರದಲ್ಲಿ ನಾಶಮಾಡಬಲ್ಲೆವು. ಅಂತೆಯೇ ಅವರೂ ಸಹ ನಾವು ಸನ್ನದ್ಧರಾಗಿರದಿದ್ದರೆ ಕೌರವಸೈನ್ಯವನ್ನು ಅರ್ಧನಿಮೇಷದಲ್ಲಿ ಸಂಹಾರಮಾಡಬಲ್ಲರು.

**ಯುಧ್ಯತಾಂ ಪಾಣ್ಡವಾಞ್ಛಕ್ತ್ಯಾ**
**ತೇಷಾಂ ಚಾಸ್ಮಾನ್ಯಯುತ್ಸತಾಮ್ ।**
**ತೇಜಸ್ತೇಜಃ ಸಮಾಸಾದ್ಯ**
**ಪ್ರಶಮಂ ಯಾತಿ ಭಾರತ ॥೬॥**

ಭಾರತನೇ! ನಾವು ಯಥಾಶಕ್ತಿ ಪಾಂಡವರೊಡನೆ ಯುದ್ಧಮಾಡುತ್ತಿದ್ದೇವೆ. ಅವರೂ ಸಹ ನಮ್ಮೊಡನೆ ಯಥಾಶಕ್ತಿ ಯುದ್ಧಮಾಡುತ್ತಾರೆ (ಯುದ್ಧಮಾಡುವುದರಲ್ಲಿ ಅವರಿಗೆ ನಾವೂ ಕಡಿಮೆಯಿಲ್ಲ. ನಮಗೆ ಅವರೂ ಕಡಿಮೆಯಿಲ್ಲ). ಒಂದು ತೇಜಸ್ಸು ಸಮಾನವಾದ ಮತ್ತೊಂದು ತೇಜಸ್ಸಿನೊಡನೆ ಸಂಘರ್ಷಿಸಿದಾಗ ಪರಿಸ್ಥಿತಿಯು ಹತೋಟಿಗೆ ಬರುತ್ತದೆ. (ಅವರ ಸೈನ್ಯವನ್ನು ನಾವೂ ಕೊಲ್ಲುವುದಕ್ಕಾಗುವುದಿಲ್ಲ. ನಮ್ಮ ಸೈನ್ಯವನ್ನು ಅವರಿಂದಲೂ ಕೊಲ್ಲಲು ಸಾಧ್ಯವಾಗುವುದಿಲ್ಲ. ಪರಸ್ಪರತೇಜಸ್ಸಿನಲ್ಲಿ ಏರು-ಪೇರುಗಳಿದ್ದರೆ ನಮ್ಮ ಸೈನ್ಯವನ್ನು ಅವರೂ ಕೊಲ್ಲಬಹುದು ; ಅವರ ಸೈನ್ಯ

ವನ್ನು ನಾವೂ ಕೊಲ್ಲಬಹುದು). ಮಹಾರಾಜ! ನಾನು ಈ ಮಾತನ್ನು ಸತ್ಯವಾಗಿ ಹೇಳುತ್ತೇನೆ. ಪಾಂಡವರು ಜೀವಿಸಿರುವಾಗ ಅವರ ಸೈನ್ಯವನ್ನು ನೀನು ಹೇಳಿದಷ್ಟು ಶೀಘ್ರವಾಗಿ ಜಯಿಸಲು ಶಕ್ಯವಿಲ್ಲ.

**ಆತ್ಮಾರ್ಥಂ ಯುಧ್ಯಮಾನಾಸ್ತೇ ಸಮರ್ಥಾಃ ಪಾಣ್ಡುನನ್ದನಾಃ ।**
**ಕಿಮರ್ಥಂ ತವ ಸೈನ್ಯಾನಿ ನ ಹನಿಷ್ಯನ್ತಿ ಭಾರತ ॥೮॥**

ಪಾಂಡುಪುತ್ರರು ಬಹಳ ಸಮರ್ಥರು. ಅವರಿಂದು ತಮ್ಮ ಉಳಿವಿಗಾಗಿ ಯುದ್ಧಮಾಡುತ್ತಿದ್ದಾರೆ (ಈ ಯುದ್ಧದಿಂದಲೇ ಅವರ ಅಳಿವು-ಉಳಿವುಗಳು ನಿಶ್ಚಯವಾಗಬೇಕಾಗಿದೆ). ಅಂತಹವರು ಯಾವ ಕಾರಣದಿಂದ ನಿನ್ನ ಸೈನ್ಯವನ್ನು ಸಂಹರಿಸದಿದ್ದಾರು? (ನಿನ್ನ ಸೈನ್ಯವನ್ನು ನಿರ್ಮೂಲಮಾಡದಿದ್ದರೆ ಅವರಿಗೆ ಗತ್ಯಂತರವೇ ಇಲ್ಲ).

**ತ್ವಂ ತು ಲುಬ್ಧತಮೋ ರಾಜನ್ನಿಕೃತಿಜ್ಞಶ್ಚ ಕೌರವ ।**
**ಸರ್ವಾಭಿಶಙ್ಕೀ ಮಾನೀ ಚ ತತೋಽಸ್ಮಾನಭಿಶಙ್ಕಸೇ ॥೯॥**

ಕೌರವ! ನೀನು ಪರಮಲೋಭಿಯು. ವಂಚಿಸುವ ವಿದ್ಯೆಯನ್ನು ಸಂಪೂರ್ಣವಾಗಿ ತಿಳಿದಿರತಕ್ಕವನು. ಎಲ್ಲರ ವಿಷಯದಲ್ಲಿಯೂ ಸಂಶಯ ವಿರತಕ್ಕವನು. ದುರಭಿಮಾನಿಯು. ಆದುದರಿಂದಲೇ ನೀನು ನಮ್ಮ ವಿಷಯ ದಲ್ಲಿಯೂ ಸಂಶಯಪಡುತ್ತಿರುವೆ.

**ಮನ್ಯೇ ತ್ವಂ ಕುತ್ಸಿತೋ ರಾಜನ್ಪಾಪಾತ್ಮಾ ಪಾಪಪೂರುಷಃ ।**
**ಅನ್ಯಾನಪಿ ಸ ನಃ ಕ್ಷುದ್ರ ಶಙ್ಕಸೇ ಪಾಪಭಾವಿತಃ ॥೧೦॥**

ಮಹಾರಾಜ! ನೀನು ನಿಂದಿತನು. ಪಾಪಾತ್ಮನು. ಪಾಪದ ಮನುಷ್ಯ ಎಂಬುದನ್ನು ನಾನು ಚೆನ್ನಾಗಿ ತಿಳಿದಿರುತ್ತೇನೆ. ನಿನ್ನ ಅಂತಃಕರಣವು ಪಾಪದ ಭಾವನೆಯಿಂದ ತುಂಬಿದೆ. ನಿನ್ನಲ್ಲಿ ಇಂತಹ ದುಷ್ಟಗುಣಗಳಿರುವುದರಿಂದಲೇ ಅನ್ಯರನ್ನೂ ಮತ್ತು ನಮ್ಮನ್ನೂ ನೀನು ಸಂಶಯದೃಷ್ಟಿಯಿಂದಲೇ ನೋಡುವೆ.

ನಾನಂತೂ ನಿನ್ನ ಸಲುವಾಗಿ ಜೀವದ ಹಂಗನ್ನೇ ತೊರೆದು ನಿನ್ನ ವಿಜಯಕ್ಕಾಗಿ ಪ್ರಯತ್ನಮಾಡುತ್ತೇನೆ. ನಿನ್ನ ಮಾತಿನಂತೆ ಇದೀಗಲೇ ನಾನು ಯುದ್ಧಕ್ಕೆ ಹೊರಡುತ್ತೇನೆ. ಶತ್ರುಗಳೊಡನೆ ಯುದ್ಧಮಾಡುತ್ತೇನೆ. ಶ್ರೇಷ್ಠ-ಶ್ರೇಷ್ಠರಾದ ಶತ್ರುಗಳನ್ನೂ ಜಯಿಸುತ್ತೇನೆ. ಅರಿಂದಮನೇ!

ಪಾಂಚಾಲರೊಡನೆಯೂ, ಸೋಮಕರೊಡನೆಯೂ, ಕೇಕಯರೊಡನೆಯೂ, ಪಾಂಡವರೊಡನೆಯೂ ನಿನ್ನ ಪ್ರೀತ್ಯರ್ಥವಾಗಿ ಯುದ್ಧಮಾಡುತ್ತೇನೆ. ನನ್ನ ಬಾಣಗಳೆಂಬ ಅಗ್ನಿಯಿಂದ ದಗ್ಧರಾಗುವ ಪಾಂಚಾಲರೂ ಮತ್ತು ಸೋಮಕರೂ–ಸಿಂಹದಿಂದ ಪೀಡಿಸಲ್ಪಟ್ಟ ಗೋವುಗಳಂತೆ–ದಿಕ್ಕಾಪಾಲಾಗಿ ಓಡಿಹೋಗುತ್ತಾರೆ. ಈಗ ಸೋಮಕರಿಂದ ಕೂಡಿದ ಧರ್ಮಪುತ್ರನಾದ ಯುಧಿಷ್ಠಿರನು ನನ್ನ ಪರಾಕ್ರಮವನ್ನು ನೋಡಿ ಈ ಲೋಕವು ಅಶ್ವತ್ಥಾಮಮಯವಾಗಿದೆಯೆಂದೇ ಭಾವಿಸುತ್ತಾನೆ.

ಈ ಯುದ್ಧದಲ್ಲಿ ಸೋಮಕರೊಡನೆ ಪಾಂಚಾಲರೂ ಹತರಾದುದನ್ನು ಕಂಡು ಧರ್ಮಪುತ್ರನಾದ ಯುಧಿಷ್ಠಿರನು ದುಃಖವನ್ನೂ–ವೈರಾಗ್ಯವನ್ನೂ ಹೊಂದುತ್ತಾನೆ. ಇಂದು ಯುದ್ಧದಲ್ಲಿ ಯಾರು ನನ್ನನ್ನು ಎದುರಿಸಿ ಯುದ್ಧ ಮಾಡುತ್ತಾರೆಯೋ–ಅವರೆಲ್ಲರನ್ನೂ ನಾನು ಸಂಹರಿಸುತ್ತೇನೆ. ನನ್ನ ಬಾಹುಗಳ ಒಳಭಾಗಕ್ಕೆ ಸಿಕ್ಕಿಹಾಕಿಕೊಂಡ ಸೈನಿಕರು ಜೀವಂತರಾಗಿ ಹಿಂದಿರು ಗುವುದಿಲ್ಲ."

ಮಹಾರಾಜ! ಮಹಾಬಾಹುವಾದ, ಸರ್ವಪ್ರಾಣಿಗಳಲ್ಲಿಯೂ ಶ್ರೇಷ್ಠನಾದ ಅಶ್ವತ್ಥಾಮನು ನಿನ್ನ ಮಗನೊಡನೆ ಹೀಗೆ ಹೇಳಿ ಶತ್ರುಪಕ್ಷದ ಸರ್ವಧನುಷ್ಮಂತರನ್ನೂ ಭಯಗೊಳಿಸುತ್ತಾ, ನಿನ್ನ ಮಕ್ಕಳಿಗೆ ಪ್ರಿಯವನ್ನುಂಟು ಮಾಡುವ ಸಲುವಾಗಿ ಯುದ್ಧಕ್ಕೆ ಹೋದನು. ಅನಂತರ ಅಶ್ವತ್ಥಾಮನು ರಣರಂಗದಲ್ಲಿ ಯುದ್ಧಮಾಡಲು ಉಪಸ್ಥಿತರಾಗಿದ್ದ ಕೇಕಯರನ್ನೂ ಪಾಂಚಾಲರನ್ನೂ ಕುರಿತು ಹೇಳಿದನು : "ಇಲ್ಲಿರುವ ಎಲ್ಲ ಮಹಾರಥರೂ ಸೇರಿ ನನ್ನ ಶರೀರದ ಮೇಲೆ ಬಾಣಪ್ರಯೋಗವನ್ನು ಮಾಡಿರಿ. ನಿಮ್ಮಲ್ಲಿರುವ ಅಸ್ತ್ರವೇಗವನ್ನು ಪ್ರದರ್ಶಿಸುತ್ತಾ ನನ್ನೊಡನೆ ಸ್ಥಿರವಾಗಿ ನಿಂತು ಯುದ್ಧಮಾಡಿರಿ."

ಅಶ್ವತ್ಥಾಮನು ಹೀಗೆ ಹೇಳಿದೊಡನೆಯೇ ಆ ಎಲ್ಲ ಮಹಾರಥರೂ ಮೋಡಗಳು ಮಳೆಗರೆಯುವಂತೆ–ಅಶ್ವತ್ಥಾಮನ ಮೇಲೆ ಬಾಣಗಳ ಮಳೆಗರೆದರು. ಪಾಂಡವರ ಕಡೆಯ ಮಹಾರಥರು ಬಿಟ್ಟ ಬಾಣಗಳೆಲ್ಲವನ್ನೂ ಅಶ್ವತ್ಥಾಮನು ನಿರರ್ಥಗೊಳಿಸಿ ಪಾಂಡುಪುತ್ರರ ಮತ್ತು ಧೃಷ್ಟದ್ಯುಮ್ನನ ಸಮ್ಮುಖದಲ್ಲಿಯೇ ಹತ್ತು ಯೋಧರನ್ನೂ ಸಂಹರಿಸಿದನು. ಅಶ್ವತ್ಥಾಮನಿಂದ ಸತತವಾಗಿ ಪ್ರಹರಿಸಲ್ಪಡುತ್ತಿದ್ದ ಪಾಂಚಾಲ-ಸೋಮಕರು ಬಹಳವಾಗಿ

ಗಾಯಗೊಂಡು ಅಶ್ವತ್ಥಾಮನನ್ನು ಪರಿತ್ಯಜಿಸಿ ರಣಾಂಗಣದಲ್ಲಿ ಹತ್ತು ದಿಕ್ಕುಗಳಿಗೂ ಓಡಿಹೋದರು. ಮಹಾರಾಜ! ಶೂರರಾದ ಪಾಂಚಾಲರೂ ಮತ್ತು ಸೋಮಕರೂ ಓಡಿಹೋಗುತ್ತಿರುವುದನ್ನು ನೋಡಿ ಧೃಷ್ಟದ್ಯುಮ್ನನು ಅಶ್ವತ್ಥಾಮನನ್ನು ಎದುರಿಸಿದನು. ಯುದ್ಧದಿಂದ ಹಿಂದಿರುಗದಿದ್ದ ವೀರರಿಂದ ಕೂಡಿದ, ಸುವರ್ಣದಿಂದ ಚಿತ್ರ-ವಿಚಿತ್ರವಾಗಿ ಸಮಲಂಕೃತವಾಗಿದ್ದ, ನೀರನ್ನೊಳಗೊಂಡ ಮೇಘದಂತೆ ನಿನಾದವನ್ನುಂಟುಮಾಡುತ್ತಿದ್ದ, ನೂರು ರಥಗಳಿಂದ ಪರಿವೃತನಾದ, ಪಾಂಚಾಲರಾಜನಾದ, ದ್ರುಪದನ ಮಗನಾದ, ಮಹಾರಥನಾದ ಧೃಷ್ಟದ್ಯುಮ್ನನು ಅಶ್ವತ್ಥಾಮನಿಂದ ಹತರಾಗಿ ಬಿದ್ದಿದ್ದ ಯೋಧರನ್ನು ನೋಡಿ ದ್ರೌಣಿಯನ್ನು ಕುರಿತು ಈ ಮಾತನ್ನು ಹೇಳಿದನು :

"ಆಚಾರ್ಯಪುತ್ರನೇ! ದುಷ್ಟವಾದ ಬುದ್ಧಿಯುಳ್ಳವನೇ! ಸಾಧಾರಣ ಯೋಧರನ್ನು ಕೊಂದುದರಿಂದ ನಿನಗಾಗುವ ಲಾಭವಾದರೂ ಏನು? ನೀನು ನಿಶ್ಚಯವಾಗಿಯೂ ಶೂರನೇ ಆಗಿರುವುದಾದರೆ ಬಾ ; ನನ್ನೊಡನೆ ಯುದ್ಧಮಾಡು. ನನ್ನ ಎದುರಿನಲ್ಲಿ ನಿಲ್ಲು. ನಾನು ನಿನ್ನನ್ನು ಈಗಲೇ ಸಂಹರಿಸುತ್ತೇನೆ."

ಭರತರ್ಷಭನೇ! ಪ್ರತಾಪವಂತನಾದ ಧೃಷ್ಟದ್ಯುಮ್ನನು ಹೀಗೆ ಹೇಳಿ ಆಚಾರ್ಯಪುತ್ರನನ್ನು ಮರ್ಮಭೇದಿಗಳಾದ ತೀಕ್ಷ್ಣವಾದ ಬಾಣಗಳಿಂದ ಪ್ರಹರಿಸಿದನು. ಚಿನ್ನದ ರೆಕ್ಕೆಗಳುಳ್ಳ, ಚೂಪಾದ ಮೊನೆಗಳುಳ್ಳ, ಶರೀರವನ್ನು ಭೇದಿಸಬಲ್ಲ, ವೇಗವಾಗಿ ಹೋಗುವ ಆ ಬಾಣಗಳು ಸಾಲು-ಸಾಲಾಗಿ–ಜೇನುದುಂಬಿಗಳು ಹೂಬಿಟ್ಟಿರುವ ಮರವನ್ನು ಪ್ರವೇಶಿಸುವಂತೆ–ಅಶ್ವತ್ಥಾಮನನ್ನು ಪ್ರವೇಶಿಸಿದುವು. ಧೃಷ್ಟದ್ಯುಮ್ನನ ಬಾಣಗಳ ಪ್ರಹಾರದಿಂದ ಬಹಳವಾಗಿ ಗಾಯಗೊಂಡು–ಕಾಲಿನ ತುಳಿತಕ್ಕೆ ಸಿಕ್ಕಿದ ಹಾವಿನಂತೆ ಬಹಳವಾಗಿ ಕೋಪಗೊಂಡ ಮಾನಿಯಾದ ಅಶ್ವತ್ಥಾಮನು ಸ್ವಲ್ಪವಾದರೂ ಗಾಬರಿಗೊಳ್ಳದೇ ಬಾಣವನ್ನು ಕೈಯ್ಯಲ್ಲಿ ಹಿಡಿದು ಪಾರ್ಷತನೊಡನೆ ಹೇಳಿದನು :

"ಧೃಷ್ಟದ್ಯುಮ್ನ! ಸ್ಥಿರವಾಗಿ ನಿಂತು ಸ್ವಲ್ಪ ಹೊತ್ತು ತಾಳಿಕೊ. ಅಷ್ಟರೊಳಗಾಗಿಯೇ ನಿನ್ನನ್ನು ನಿಶಿತವಾದ ಬಾಣಗಳಿಂದ ಯಮನ ಮನೆಗೆ ಕಳುಹಿಸಿಬಿಡುತ್ತೇನೆ."

ಮಹಾರಾಜ! ಶತ್ರುವೀರಹಂತಕನಾದ ಅಶ್ವತ್ಥಾಮನು ಪಾರ್ಷತ

ನನ್ನು ಕುರಿತು ಹೀಗೆ ಹೇಳಿ ಹಸ್ತಲಾಘವದಿಂದ ಕೂಡಿರುವ ಕುಶಲನಾದ ಯೋಧನಂತೆ ಬಾಣಗಳ ಸಮೂಹದಿಂದ ಧೃಷ್ಟದ್ಯುಮ್ನನನ್ನು ಎಲ್ಲ ಕಡೆ ಗಳಿಂದಲೂ ಮುಚ್ಚಿದನು. ಯುದ್ಧದುರ್ಮದನಾದ ಧೃಷ್ಟದ್ಯುಮ್ನನು ಅಶ್ವತ್ಥಾಮನಿಂದ ಪೀಡಿಸಲ್ಪಟ್ಟವನಾಗಿ ಅವನನ್ನು ಮಾತುಗಳಿಂದ ಭಯಪಡಿ ಸಲು ಉಪಕ್ರಮಿಸಿದನು :

**ನ ಜಾನೀಷೇ ಪ್ರತಿಜ್ಞಾಂ ಮೇ ವಿಪ್ರೋತ್ಪತ್ತಿಂ ತಥೈವ ಚ ।**
**ದ್ರೋಣಂ ಹತ್ವಾ ಕಿಲ ಮಯಾ ಹನ್ತವ್ಯಸ್ತ್ವಂ ಸುದುರ್ಮತೇ ॥೩೪॥**

"ವಿಪ್ರ! ದುರ್ಬುದ್ಧಿಯವನೇ! ನನ್ನ ಪ್ರತಿಜ್ಞೆಯನ್ನು ನೀನು ತಿಳಿದವ ನಾಗಿಲ್ಲ. ನನ್ನ ಉತ್ಪತ್ತಿಯು ಹೇಗಾಯಿತು ; ಏತಕ್ಕಾಯಿತು?–ಎಂಬುದನ್ನೂ ಸಹ ನೀನು ತಿಳಿದವನಾಗಿಲ್ಲ. ನನ್ನ ಪ್ರತಿಜ್ಞೆಯಂತೆ ದ್ರೋಣರನ್ನು ಮೊದಲು ಸಂಹರಿಸಿ ಅನಂತರವಲ್ಲವೇ ನಿನ್ನನ್ನು ಸಂಹರಿಸಬೇಕಾಗಿರುವುದು?

ದ್ರೋಣರಿನ್ನೂ ಜೀವಿಸಿರುವಾಗ ನಾನು ನಿನ್ನನ್ನು ಸಂಹರಿಸುವುದಿಲ್ಲ.

ಬಹಳ ಕೆಟ್ಟಬುದ್ಧಿಯವನೇ! ಇದೇ ರಾತ್ರಿಯಲ್ಲಿಯೇ, ಬೆಳಗಾಗುವುದ ರೊಳಗಾಗಿ ನಿನ್ನ ತಂದೆಯವರನ್ನು ಸಂಹರಿಸಿ ಅನಂತರ ಯುದ್ಧದಲ್ಲಿ ನಿನ್ನನ್ನೂ ಸಹ ಪ್ರೇತಲೋಕಕ್ಕೆ ಕಳುಹಿಸುತ್ತೇನೆ. ಇದು ನನ್ನ ಮನಸ್ಸಿನ ನಿಶ್ಚಯವಾಗಿದೆ. ಕುಂತೀಪುತ್ರರ ಮೇಲೆ ನಿನಗೆ ಯಾವ ದ್ವೇಷವಿರುವುದೋ ಮತ್ತು ಕೌರವರ ಮೇಲೆ ಯಾವ ಭಕ್ತಿಯಿರುವುದೋ ಅದನ್ನೀಗ ಸ್ಥಿರವಾಗಿ ನಿಂತು ಪ್ರದರ್ಶಿಸು. ನೀನು ಜೀವಸಹಿತವಾಗಿ ನನ್ನಿಂದ ತಪ್ಪಿಸಿಕೊಳ್ಳಲಾರೆ.

**ಯೋ ಹಿ ಬ್ರಾಹ್ಮಣ್ಯಮುತ್ಸೃಜ್ಯ ಕ್ಷತ್ರಧರ್ಮರತೋ ದ್ವಿಜಃ ।**
**ಸ ವಧ್ಯಃ ಸರ್ವಲೋಕಸ್ಯ ಯಥಾ ತ್ವಂ ಪುರುಷಾಧಮಃ ॥೩೮॥**

ಪುರುಷಾಧಮನಾದ ನಿನ್ನಂತೆ ಯಾವನು ಬ್ರಾಹ್ಮಣಧರ್ಮವನ್ನು ಪರಿ ತ್ಯಜಿಸಿ ಕ್ಷತ್ರಧರ್ಮವನ್ನು ಆಚರಿಸುವನೋ–ಅವನು ಎಲ್ಲ ಲೋಕಗಳ ದೃಷ್ಟಿ ಯಿಂದಲೂ ವಧ್ಯನೇ ಆಗುತ್ತಾನೆ."

ಮಹಾರಾಜ! ಧೃಷ್ಟದ್ಯುಮ್ನನು ಅಶ್ವತ್ಥಾಮನನ್ನು ಇಂತಹ ಕಟುವಾದ ಮಾತುಗಳಿಂದ ನಿಂದಿಸಿದುದರಿಂದ ದ್ರೌಣಿಯು ತೀವ್ರಕೋಪಿಯಾಗಿ ನಿಲ್ಲು-ನಿಲ್ಲೆಂದು ಪಾರ್ಷತನಿಗೆ ಹೇಳಿದನು. ಆ ಸಮಯದಲ್ಲಿ ಅಶ್ವತ್ಥಾಮನು ಪಾರ್ಷತನನ್ನು ಕಣ್ಣುಗಳಿಂದಲೇ ಸುಟ್ಟುಬಿಡುವನೋ ಎಂಬಂತೆ ದುರುಗುಟ್ಟಿ

ಕೊಂಡು ನೋಡಿದನು. ಸರ್ಪವು ಬುಸುಗುಟ್ಟುವಂತೆಯೇ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಧೃಷ್ಟದ್ಯುಮ್ನನನ್ನು ಬಾಣಗಳಿಂದ ಮುಚ್ಚಿದನು. ರಾಜಶ್ರೇಷ್ಠನೇ! ಎಲ್ಲ ಪಾಂಚಾಲಯೋಧರಿಂದಲೂ ಪರಿವೃತನಾಗಿದ್ದ, ರಥ ಶ್ರೇಷ್ಠನಾದ, ಮಹಾಬಾಹುವಾದ ಧೃಷ್ಟದ್ಯುಮ್ನನು ದ್ರೌಣಿಯ ಬಾಣಗಳಿಂದ ಆಚ್ಛಾದಿತನಾಗಿದ್ದರೂ ಪರಾಕ್ರಮದ ಅವಲಂಬನೆಯಿಂದ ಸ್ವಲ್ಪವಾದರೂ ವಿಚಲಿತನಾಗಲಿಲ್ಲ. ಅನೇಕವಿಧವಾದ ಬಾಣಗಳನ್ನು ಅಶ್ವತ್ಥಾಮನ ಮೇಲೆ ಪ್ರಯೋಗಿಸಿದನು. ಅಸಹನಶೀಲರಾದ, ಧನುಷ್ಮಂತರಾದ ದ್ರೌಣಿ-ಪಾರ್ಷತರು ಆ ಸಮಯದಲ್ಲಿ ಒಬ್ಬರು ಮತ್ತೊಬ್ಬರ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾ ಬಾಣಗಳ ಸಮೂಹದಿಂದ ಪರಸ್ಪರವಾಗಿ ಪೀಡಿಸುತ್ತಾ ತಮ್ಮ ಪ್ರಾಣಗಳನ್ನೇ ಪಣವಾಗಿಟ್ಟು ಯುದ್ಧಮಾಡುತ್ತಿದ್ದರು.

ಘೋರರೂಪವಾಗಿದ್ದ ಮತ್ತು ಭಯಾನಕವಾಗಿದ್ದ ದ್ರೌಣಿ-ಪಾರ್ಷತರ ಆ ಮಹಾಯುದ್ಧವನ್ನು ನೋಡಿ ಸಿದ್ಧ-ಚಾರಣರೂ, ವಾತಿಕರೂ (ವಾತದಲ್ಲಿ-ವಾಯುವಿನಲ್ಲಿ ಸಂಚಾರಮಾಡುವ ಗರುಡನೇ ಮೊದಲಾದವರೂ) ಬಹಳವಾಗಿ ಪ್ರಶಂಸಿಸಿದರು. ದ್ರೌಣಿ-ಪಾರ್ಷತರು ಆಕಾಶವನ್ನೂ ಮತ್ತು ದಿಕ್ಕುಗಳನ್ನೂ ಬಾಣಗಳ ಸಮೂಹಗಳಿಂದಲೇ ತುಂಬಿ ಗಾಢವಾದ ಕತ್ತಲೆಯನ್ನೇ ಸೃಷ್ಟಿಸಿ ಒಬ್ಬರು ಮತ್ತೊಬ್ಬರಿಗೆ ಅಗೋಚರರಾಗಿಯೇ ಯುದ್ಧ ಮಾಡುತ್ತಿದ್ದರು. ಸರ್ವಪ್ರಾಣಿಗಳಿಗೂ ಭಯವನ್ನುಂಟುಮಾಡುತ್ತಿದ್ದ, ಒಬ್ಬರು ಮತ್ತೊಬ್ಬರನ್ನು ವಧಿಸಬೇಕೆಂದು ಸತತವಾಗಿ ಪ್ರಯತ್ನಿಸುತ್ತಿದ್ದ, ಮಂಡಲಾಕಾರವಾಗಿ ಮಾಡಲ್ಪಟ್ಟ ಧನುಸ್ಸುಗಳನ್ನು ಹೊಂದಿದ್ದ ಅಶ್ವತ್ಥಾಮ-ಧೃಷ್ಟದ್ಯುಮ್ನರು ರಣಾಂಗಣದಲ್ಲಿ ನೃತ್ಯಮಾಡುತ್ತಿರುವಂತೆಯೇ ಕಾಣುತ್ತಿದ್ದರು. ಮಹಾಬಾಹುಗಳಾದ ದ್ರೌಣಿ-ಪಾರ್ಷತರು ಸಾವಿರಾರು ಯೋಧಮುಖ್ಯರಿಂದ ಶ್ಲಾಘಿಸಲ್ಪಡುತ್ತಾ ಚಿತ್ರ-ವಿಚಿತ್ರವಾಗಿಯೂ, ವೇಗವಾಗಿಯೂ, ಚೆನ್ನಾಗಿಯೂ, ಯುದ್ಧಮಾಡುತ್ತಿದ್ದರು. ಅರಣ್ಯದಲ್ಲಿರುವ ಎರಡು ಕಾಡಾನೆಗಳು ಸೆಣಸಾಡುವಂತೆ ಕ್ಷಣ-ಕ್ಷಣಕ್ಕೂ ಪರಾಕ್ರಮವನ್ನು ವೃದ್ಧಿಸಿಕೊಂಡು ಅವರು ಯುದ್ಧಮಾಡುತ್ತಿದ್ದುದನ್ನು ಕಂಡು ಎರಡೂ ಕಡೆಗಳ ಸೈನ್ಯಗಳಲ್ಲಿಯೂ ಹರ್ಷದ ಕೋಲಾಹಲಧ್ವನಿಯುಂಟಾಯಿತು. ಎರಡೂ ಕಡೆಗಳಲ್ಲಿಯೂ ಸಿಂಹಗರ್ಜನೆಗಳಾದುವು. ಸೈನಿಕರು ಶಂಖಗಳನ್ನೂದಿದರು.

ನೂರಾರು-ಸಾವಿರಾರು ರಣವಾದ್ಯಗಳನ್ನೂ ಬಾರಿಸಿದರು. ಹೇಡಿಗಳಿಗೆ ಭಯವನ್ನುಂಟುಮಾಡುವುದಾಗಿದ್ದ ಭಯಂಕರಯುದ್ಧವು ಮುಹೂರ್ತಕಾಲ ಸಮ-ಸಮವಾಗಿಯೇ ನಡೆಯುತ್ತಿದ್ದಿತು. ಯಾರು ಮೇಲು-ಯಾರು ಕೀಳು ಎಂಬುದನ್ನು ಹೇಳಲಾಗುತ್ತಿರಲಿಲ್ಲ. ಅನಂತರ ಅಶ್ವತ್ಥಾಮನು ಮಹಾತ್ಮನಾದ ಧೃಷ್ಟದ್ಯುಮ್ನನನ್ನು ಪರಾಜಯಗೊಳಿಸಬೇಕೆಂದೇ ನಿಶ್ಚಯಿಸಿ ಅವನ ಧನುಸ್ಸನ್ನೂ ಛತ್ರವನ್ನೂ ಕತ್ತರಿಸಿ, ಪಾರ್ಶ್ವರಕ್ಷಕರನ್ನೂ, ಸೂತನನ್ನೂ, ನಾಲ್ಕು ಕುದುರೆಗಳನ್ನೂ ಸಂಹರಿಸಿ ಪಾರ್ಷತನನ್ನು ರಥಹೀನನನ್ನಾಗಿ ಮಾಡಿ ಅವನ ಮೇಲೆ ಪುನಃ ದಾಳಿ ನಡೆಸಿದನು. ಮಹಾತ್ಮನಾದ ದ್ರೌಣಿಯು ಬಗ್ಗಿದ ಗಿಣ್ಣುಗಳಿದ್ದ ನೂರಾರು-ಸಾವಿರಾರು ಬಾಣಗಳಿಂದ ಧೃಷ್ಟದ್ಯುಮ್ನನನ್ನು ಹಿಂಬಾಲಿಸಿ ಬಂದಿದ್ದ ಪಾಂಚಾಲರೆಲ್ಲರನ್ನೂ ಗಾಯಗೊಳಿಸಿ ಓಡಿಸಿದನು. ಯುದ್ಧಸಮಯದಲ್ಲಿ ಇಂದ್ರನಂತೆಯೇ ಅಶ್ವತ್ಥಾಮನು ಮಾಡಿದ ಮಹಾ ಸಂಹಾರಕಾರ್ಯವನ್ನು ನೋಡಿ ಪಾಂಡವರ ಸೈನ್ಯವು ವ್ಯಥೆಗೊಂಡಿತು. ಮಹಾರಥನಾದ ಅಶ್ವತ್ಥಾಮನು ಮೊದಲು ನೂರು ಬಾಣಗಳಿಂದ ಪಾಂಚಾಲರ ನೂರು ಮಹಾರಥರನ್ನು ಸಂಹರಿಸಿ ಅನಂತರ ನಿಶಿತವಾದ ಮೂರು ಬಾಣಗಳಿಂದ ಮೂವರು ಮಹಾರಥರನ್ನೂ ಸಂಹರಿಸಿದನು. ಅಶ್ವತ್ಥಾಮನು ತನಗೆ ಎದುರಾಗಿ ನಿಂತಿದ್ದ ಇನ್ನೂ ಅನೇಕ ಪಾಂಚಾಲಮಹಾ ರಥರನ್ನೂ ಧೃಷ್ಟದ್ಯುಮ್ನನೂ ಮತ್ತು ಅರ್ಜುನನೂ ನೋಡುತ್ತಿದ್ದಂತೆಯೇ ಸಂಹರಿಸಿದನು. ಅಶ್ವತ್ಥಾಮನಿಂದ ಪ್ರಹೃತರಾದ ಪಾಂಚಾಲ-ಸೃಂಜಯರು ಅವನನ್ನು ಬಿಟ್ಟು ಹೊರಟುಹೋದರು. ಅವರ ರಥ-ಧ್ವಜ-ಪತಾಕೆಗಳು ಛಿನ್ನ-ಭಿನ್ನವಾಗಿ ರಣಾಂಗಣದ ಸುತ್ತಲೂ ಬಿದ್ದಿದ್ದುವು. ಮಹಾರಥನಾದ ದ್ರೌಣಿಯು ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ ವರ್ಷಾಕಾಲದಲ್ಲಿ ಮೇಘವು ಗರ್ಜಿಸುವಂತೆ ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ಪ್ರಳಯಕಾಲದಲ್ಲಿ ಸರ್ವಪ್ರಾಣಿಗಳನ್ನೂ ಭಸ್ಮಮಾಡಿದನಂತರ ಅಗ್ನಿಯು ಜಾಜ್ವಲ್ಯಮಾನವಾಗಿ ಪ್ರಕಾಶಿಸುವಂತೆ–ಅಶ್ವತ್ಥಾಮನು ಪಾಂಡವರ ಸೈನ್ಯದಲ್ಲಿದ್ದ ಅನೇಕ ಶೂರರನ್ನು ಸಂಹರಿಸಿ ವಿರಾಜಿಸಿದನು.

ಮಹಾರಾಜ! ಯುದ್ಧದಲ್ಲಿ ಸಾವಿರಾರು ಶತ್ರುಸೈನಿಕರನ್ನು ಸಂಹರಿಸಿ ಕೌರವರಿಂದ ಸಂಪೂಜಿತನಾದ, ಪ್ರತಾಪವಂತನಾದ ದ್ರೋಣಪುತ್ರನು

ದೇವೇಂದ್ರನು ಶತ್ರುಗಳಾದ ದೈತ್ಯರನ್ನು ಸಂಹರಿಸಿ ಪ್ರಕಾಶಿಸುವಂತೆ–ಪ್ರಕಾಶಿಸುತ್ತಿದ್ದನು."

೧೬೦ನೆಯ ಅಧ್ಯಾಯವು ಮುಗಿಯಿತು.

೧೬೧ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಭೀಮಾರ್ಜುನರಿಂದ ಕೌರವಸೇನೆಯ ಆಕ್ರಮಣ : ಕೌರವಸೇನೆಯ ಪಲಾಯನ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಅನಂತರ ಯುಧಿಷ್ಠಿರನೂ ಮತ್ತು ಭೀಮಸೇನನೂ ಸಸೈನ್ಯರಾಗಿ ಅಶ್ವತ್ಥಾಮನನ್ನು ನಾಲ್ಕು ಕಡೆಗಳಿಂದಲೂ ಮುತ್ತಿದರು. ಬಳಿಕ ದ್ರೋಣರಿಂದ ರಕ್ಷಿತನಾದ ದುರ್ಯೋಧನನು ಪಾಂಡವರನ್ನು ಆಕ್ರಮಿಸಿದನು. ಹೇಡಿಗಳಿಗೆ ಭಯವನ್ನು ಹೆಚ್ಚಿಸುವ ಸುಘೋರವಾದ ಯುದ್ಧವು ಪ್ರಾರಂಭವಾಯಿತು. ಕ್ರುದ್ಧನಾದ ಭೀಮಸೇನನು ಅಂಬಷ್ಠರನ್ನೂ, ಮಾಲವರನ್ನೂ, ವಂಗ-ಶಿಬಿ-ತ್ರಿಗರ್ತರನ್ನೂ ಮೃತ್ಯುಲೋಕಕ್ಕೆ ಕಳುಹಿಸಿದನು. ಬಳಿಕ ಅಭೀಷಾಹರನ್ನೂ, ಶೂರಸೇನದೇಶದ ಯುದ್ಧದುರ್ಮದರಾದ ಕ್ಷತ್ರಿಯರನ್ನೂ ಸಂಹರಿಸಿ ಭೂಮಿಯನ್ನು ರಕ್ತದ ಕೆಸರಿನಿಂದ ವ್ಯಾಪ್ತವನ್ನಾಗಿ ಮಾಡಿದನು. ಅರ್ಜುನನೂ ಸಹ ನಿಶಿತವಾದ ಬಾಣಗಳಿಂದ ಯೌಧೇಯರನ್ನೂ, ಪರ್ವತೀಯರನ್ನೂ ಮದ್ರಕರನ್ನೂ, ಮಾಲವರನ್ನೂ ಮೃತ್ಯುವಿನ ಲೋಕಕ್ಕೆ ಕಳುಹಿಸಿಕೊಟ್ಟನು. ಶೀಘ್ರಗತಿಯಿಂದ ಹೋಗುವ ಬಾಣಗಳಿಂದ ಬಹಳ ಗಾಢವಾಗಿ ಗಾಯಗೊಂಡ ಆನೆಗಳು ಎರಡು ಕೊಂಬುಗಳುಳ್ಳ ಪರ್ವತಗಳೋಪಾದಿಯಲ್ಲಿ ರಣಭೂಮಿಯಲ್ಲಿ ಬಿದ್ದಿದ್ದುವು. ಅರ್ಜುನನಿಂದ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದು ಅತ್ತಲಿತ್ತ ಹೊರಳಾಡುತ್ತಿದ್ದ ಆನೆಗಳ ಸೊಂಡಿಲುಗಳು ಅತ್ತಲಿತ್ತ ಹರಿದಾಡುವ ಸರ್ಪಗಳಂತೆಯೇ ಕಾಣುತ್ತಿದ್ದುವು. ಅವುಗಳಿಂದ ವ್ಯಾಪ್ತವಾಗಿದ್ದ ರಣಭೂಮಿಯು ಬಹಳವಾಗಿ ಶೋಭಿಸುತ್ತಿದ್ದಿತು. ಪ್ರಳಯಕಾಲದಲ್ಲಿ ಚಂದ್ರ-ಸೂರ್ಯರೇ ಮೊದಲಾದ ಗ್ರಹಗಳಿಂದ ಆಕಾಶವು ವ್ಯಾಪ್ತವಾಗಿರುವಂತೆ–ರಾಜರ ಸುವರ್ಣಭೂಷಿತವಾದ ಶ್ವೇತಚ್ಛತ್ರಗಳಿಂದ ವ್ಯಾಪ್ತವಾಗಿದ್ದ ಭೂಮಿಯು ಪ್ರಕಾಶಿಸುತ್ತಿದ್ದಿತು. ಕೆಂಪುಕುದುರೆ

ಗಳಿಂದ ಸಜ್ಜುಗೊಳಿಸಲ್ಪಟ್ಟಿದ್ದ ದ್ರೋಣರ ರಥದ ಸಮೀಪದಲ್ಲಿ "ಸಂಹಾರ ಮಾಡಿರಿ! ನಿರ್ಭಯವಾಗಿ ಪ್ರಹರಿಸಿರಿ! ಬಾಣಗಳಿಂದ ಕತ್ತರಿಸಿರಿ!"–ಇವೇ ಮೊದಲಾದ ಭಯಂಕರಶಬ್ದಗಳು ಕೇಳಿಬರುತ್ತಿದ್ದುವು. ಅತಿಕ್ರಮಿಸಲು ಅಸಾಧ್ಯವಾದ ಚಂಡಮಾರುತವು ಮೇಘಗಳನ್ನು ಚದುರಿಸುವಂತೆ–ಪರಮ ಕ್ರುದ್ಧರಾದ ದ್ರೋಣರು ವಾಯವ್ಯಾಸ್ತ್ರವನ್ನು ಪ್ರಯೋಗಿಸಿ ಪಾಂಡವರ ಸೈನ್ಯವನ್ನು ಧ್ವಂಸಮಾಡಿದರು. ಭೀಮಾರ್ಜುನರು ನೋಡುತ್ತಿದ್ದಂತೆಯೇ ದ್ರೋಣರಿಂದ ಪ್ರಹೃತರಾದ ಪಾಂಚಾಲಸೈನಿಕರು ಭಯದಿಂದ ಪಲಾಯನ ಮಾಡಿದರು. ಅನಂತರ ಭೀಮಾರ್ಜುನರು ದೊಡ್ಡದಾದ ರಥಸೈನ್ಯವನ್ನು ತೆಗೆದುಕೊಂಡು ಆ ಬೃಹತ್ಸೈನ್ಯದೊಡನೆ ದ್ರೋಣರ ಕಡೆಗೆ ಧಾವಿಸಿದರು. ಅರ್ಜುನನು ಬಲಪಾರ್ಶ್ವದಲ್ಲಿಯೂ–ಭೀಮಸೇನನು ಉತ್ತರಪಾರ್ಶ್ವ ದಲ್ಲಿಯೂ ನಿಂತು ದೊಡ್ಡದಾದ ಬಾಣಗಳ ಸಮೂಹದಿಂದ ದ್ರೋಣರನ್ನು ಅಭಿಷೇಚಿಸಿದರು. ಭೀಮಾರ್ಜುನರು ಹಾಗೆ ಯುದ್ಧಮಾಡುತ್ತಿದ್ದಾಗ ಸೃಂಜಯರೂ, ಮಹಾತೇಜಸ್ವಿಗಳಾದ ಪಾಂಚಾಲರೂ, ಸೋಮಕರಿಂದ ಕೂಡಿದ ಮತ್ಸ್ಯರೂ ಭೀಮಾರ್ಜುನರನ್ನೇ ಅನುಸರಿಸಿ ಹೋದರು. ಅದೇ ರೀತಿಯಲ್ಲಿ ನಿನ್ನ ಮಗನ ನಿರ್ದೇಶದಂತೆ ಪ್ರಹಾರಕುಶಲರಾದ, ಶ್ರೇಷ್ಠರಾದ ರಥಿಕರು ದೊಡ್ಡ ಸೈನ್ಯದೊಡನೆ ದ್ರೋಣರ ರಥದ ಕಡೆಗೆ ಧಾವಿಸಿದರು. ಕೌರವಸೈನ್ಯವು ಸತತವಾಗಿ ಪಾರ್ಥನಿಂದ ಪ್ರಹರಿಸಲ್ಪಡುತ್ತಿದ್ದು ನಿದ್ರೆ ಯಿಂದಲೂ ಮತ್ತು ಕತ್ತಲಿನಿಂದಲೂ ಪುನಃ ಭಗ್ನವಾಗಿ ಹೋಯಿತು. ನಿನ್ನ ಮಗನಾದ ದುರ್ಯೋಧನನೂ ಮತ್ತು ದ್ರೋಣರೂ ಪಲಾಯನಮಾಡುತ್ತಿದ್ದ ಸೈನ್ಯವನ್ನು ತಡೆಯಲು ಬಹಳವಾಗಿ ಪ್ರಯತ್ನಿಸಿದರು. ಆದರೂ ಸಹ ಓಡಿಹೋಗುತ್ತಿದ್ದವರನ್ನು ತಡೆಯಲು ಅವರಿಗೆ ಸಾಧ್ಯವಾಗಲಿಲ್ಲ. ಪಾಂಡು ಪುತ್ರನಾದ ಅರ್ಜುನನ ಬಾಣಗಳಿಂದ ಛಿನ್ನ-ಭಿನ್ನವಾದ ಕೌರವರ ಸೈನ್ಯವು ಕತ್ತಲಿನಿಂದ ಆವೃತವಾಗಿದ್ದ ಆ ರಣಭೂಮಿಯಲ್ಲಿ ಎಲ್ಲ ದಿಕ್ಕುಗಳಿಗೂ ಓಡಿಹೋಯಿತು. ಕೆಲವು ರಾಜರು ನೂರಾರು ವಾಹನಗಳನ್ನೂ (ಆನೆ-ಕುದುರೆಗಳನ್ನು ) ಅಲ್ಲಿಯೇ ಬಿಟ್ಟು ಭಯಾವಿಷ್ಟರಾಗಿ ಎಲ್ಲ ದಿಕ್ಕುಗಳಿಗೂ ಓಡಿದರು.

೧೬೧ನೆಯ ಅಧ್ಯಾಯವು ಮುಗಿಯಿತು.

೧೬೨ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯಿಂದ ಸೋಮದತ್ತನ ವಧೆ : ದ್ರೋಣರಿಗೂ ಯುಧಿಷ್ಠಿರನಿಗೂ ಯುದ್ಧ: ಶ್ರೀಕೃಷ್ಣನು ಯುಧಿಷ್ಠಿರನಿಗೆ ದ್ರೋಣರಿಂದ ದೂರವಿರಲು ಹೇಳಿದುದು

ಸಂಜಯನು ಮುಂದುವರಿದು ಹೇಳುತ್ತಾನೆ :

ಮಹಾರಾಜ! ಮಹಾಧನುಸ್ಸನ್ನು ಹಿಂದಕ್ಕೂ–ಮುಂದಕ್ಕೂ ಜಗ್ಗಿಸುತ್ತಾ ಯುದ್ಧಸನ್ನದ್ಧನಾಗಿದ್ದ ಸೋಮದತ್ತನನ್ನು ನೋಡಿದ ಸಾತ್ಯಕಿಯು ಸೋಮದತ್ತನ ಬಳಿಗೆ ರಥವನ್ನು ಕೊಂಡೊಯ್ಯುವಂತೆ ಸಾರಥಿಗೆ ಹೇಳಿದನು :

"ಸೂತ! ಶತ್ರುವಾದ ಮಹಾಬಲನಾದ ಸೋಮದತ್ತನನ್ನು ಯುದ್ಧದಲ್ಲಿ ಸಂಹರಿಸದೇ ನಾನು ಯುದ್ಧದಿಂದ ಹಿಂದಿರುಗುವುದಿಲ್ಲ. ಈ ನನ್ನ ಮಾತು ಸತ್ಯವಾದುದು."

ಸಾತ್ಯಕಿಯು ಹೀಗೆ ಹೇಳಿದೊಡನೆಯೇ ಸಾರಥಿಯು ಸಿಂಧೂದೇಶದಲ್ಲಿ ಹುಟ್ಟಿದ, ಮನೋವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ, ಶಂಖದಂತೆ ಬಿಳಿಯ ಬಣ್ಣದಿಂದ ಕೂಡಿದ್ದ, ಶಬ್ದವನ್ನೂ ಅತಿಕ್ರಮಿಸಿ ಹೋಗುವ ಸಾಮರ್ಥ್ಯವುಳ್ಳ ಕುದುರೆಗಳನ್ನು ಮುಂದೆ ಹೋಗುವಂತೆ ಚಪ್ಪರಿಸಿದನು. ದೈತ್ಯರನ್ನು ಸಂಹಾರಮಾಡಲು ಉದ್ಯುಕ್ತನಾಗಿದ್ದ ಇಂದ್ರನನ್ನು ಅವನ ಕುದುರೆ ಗಳು ಒಯ್ದಂತೆ–ವಾಯುವೇಗ-ಮನೋವೇಗಗಳಿಂದ ಕೂಡಿದ್ದ ಆ ಕುದುರೆ ಗಳು ಯುಯುಧಾನನನ್ನು ಸೋಮದತ್ತನ ಸಮೀಪಕ್ಕೆ ಒಯ್ದುವು. ವೇಗಶಾಲಿಯಾದ ಸಾತ್ಯಕಿಯು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ಮಹಾಬಾಹುವಾದ ಸೋಮದತ್ತನು ಸ್ವಲ್ಪವಾದರೂ ಗಾಬರಿಗೊಳ್ಳದೇ ಅವನಿಗೆದುರಾಗಿ ಧಾವಿಸಿದನು. ಸೋಮದತ್ತನು–ಮಳೆಯನ್ನು ಸುರಿಸುವ ಪರ್ಜನ್ಯನೋಪಾದಿಯಲ್ಲಿ ಬಾಣಗಳ ಮಳೆಗರೆಯುತ್ತಾ–ಮೋಡವು ಸೂರ್ಯನನ್ನು ಮುಚ್ಚುವಂತೆ–ಬಾಣಗಳಿಂದಲೇ ಸಾತ್ಯಕಿಯನ್ನು ಮುಚ್ಚಿದನು. ಸಾತ್ಯಕಿಯೂ ಸಹ ಸಂಭ್ರಮರಹಿತನಾಗಿಯೇ ಕುರು ಪುಂಗವನಾದ ಸೋಮದತ್ತನನ್ನು ಬಾಣಗಳ ಸಮೂಹಗಳಿಂದ ಆಚ್ಛಾದಿಸಿ

ದನು. ಸೋಮದತ್ತನು ಅರುವತ್ತು ಬಾಣಗಳಿಂದ ಸಾತ್ಯಕಿಯ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಸಾತ್ಯಕಿಯೂ ಸಹ ನಿಶಿತವಾದ ಬಾಣಗಳಿಂದ ಸೋಮದತ್ತ ನನ್ನು ಪ್ರಹರಿಸಿದನು. ಪರಸ್ಪರ ಬಾಣಗಳ ಪ್ರಹಾರಗಳಿಂದ ಗಾಯಗೊಂಡ ನರಪುಂಗವರಿಬ್ಬರೂ–ವಸಂತರ್ತುವಿನಲ್ಲಿ ಕುಸುಮಿತವಾದ ಮುತ್ತುಗದ ವೃಕ್ಷಗಳಂತೆ ಕಾಣುತ್ತಿದ್ದರು. ಕುರು ಮತ್ತು ವೃಷ್ಣಿವಂಶಗಳ ಯುಶೋ ವರ್ಧಕರಾದ, ರಕ್ತದಿಂದ ತೋಯಿಸಲ್ಪಟ್ಟ ಅಂಗಾಂಗಗಳಿಂದ ಕೂಡಿದ್ದ, ಸೋಮದತ್ತ-ಸಾತ್ಯಕಿಯರು ಕಣ್ಣುಗಳಿಂದಲೇ ಒಬ್ಬರು ಮತ್ತೊಬ್ಬರನ್ನು ದಹಿಸಿಬಿಡುವರೋ ಎಂಬಂತೆ ಪರಸ್ಪರವಾಗಿ ದುರುಗುಟ್ಟಿಕೊಂಡು ನೋಡು ತ್ತಿದ್ದರು. ರಥಮಂಡಲದ ಮಾರ್ಗಗಳಲ್ಲಿ ಸಂಚರಿಸುತ್ತಿದ್ದ ಶತ್ರುಮರ್ದನರಾದ ಸೋಮದತ್ತ-ಸಾತ್ಯಕಿಯರು ಮಳೆಯನ್ನು ಸುರಿಸುವ ಕಾರ್ಮುಗಿಲು ಗಳೋಪಾದಿಯಲ್ಲಿ ಘೋರರೂಪರಾಗಿ ಕಾಣುತ್ತಿದ್ದರು. ಬಾಣಗಳ ಪ್ರಹಾರ ಗಳಿಂದ ಇಬ್ಬರ ಶರೀರಗಳೂ ಭಿನ್ನವಾಗಿದ್ದುವು. ಸರ್ವತ್ರ ಕ್ಷತ-ವಿಕ್ಷತವಾಗಿ ದ್ದುವು. ಆ ಸಮಯದಲ್ಲವರು ಬಾಣಗಳಿಂದ ಕ್ಷತ-ವಿಕ್ಷತವಾದ ಎರಡು ಮುಳ್ಳುಹಂದಿಗಳಂತೆಯೇ ಕಾಣುತ್ತಿದ್ದರು. ಸುವರ್ಣಮಯವಾದ ಮೂಲ ಭಾಗವುಳ್ಳ ಬಾಣಗಳಿಂದ ವ್ಯಾಪ್ತರಾಗಿದ್ದ ಇಬ್ಬರೂ ವರ್ಷಾಕಾಲದಲ್ಲಿ ಮಿಣುಕುಹುಳುಗಳಿಂದ ಆವೃತವಾದ ಎರಡು ವೃಕ್ಷಗಳಂತೆಯೇ ಕಾಣು ತ್ತಿದ್ದರು. ಆ ಮಹಾರಥರ ಅಂಗಾಂಗಗಳಲ್ಲಿಯೂ ಬಾಣಗಳು ಚುಚ್ಚಿಕೊಂಡಿ ದ್ದುವು. ಅದರಿಂದ ಅವರು ಕೊಳ್ಳಿಗಳಿಂದ ತಿವಿಯಲ್ಪಟ್ಟು ಕೋಪಗೊಂಡಿ ರುವ ಆನೆಗಳೋಪಾದಿಯಲ್ಲಿ ಜಾಜ್ವಲ್ಯಮಾನರಾಗಿ ಕಾಣುತ್ತಿದ್ದರು. ಮಹಾರಾಜ! ಅನಂತರ ಮಹಾರಥನಾದ ಸೋಮದತ್ತನು ಮಾಧವನ ಮಹಾಧನುಸ್ಸನ್ನು ಅರ್ಧಚಂದ್ರವೆಂಬ ಬಾಣದಿಂದ ಕತ್ತರಿಸಿದನು. ಬಳಿಕ ಸೋಮದತ್ತನು ಸಾತ್ವತನನ್ನು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದನು. ಶೀಘ್ರವಾಗಿ ಕಾರ್ಯವನ್ನು ನಿರ್ವಹಿಸಬೇಕಾದ ಕಾಲದಲ್ಲಿ ಬಹಳ ಶೀಘ್ರ ವಾಗಿಯೇ ಕಾರ್ಯವನ್ನು ಮಾಡಿ ಮುಗಿಸುತ್ತಿದ್ದ ಸೋಮದತ್ತನು ಹತ್ತು ಬಾಣಗಳಿಂದ ಸಾತ್ಯಕಿಯನ್ನು ಪುನಃ ಪ್ರಹರಿಸಿದನು. ಅನಂತರ ಸಾತ್ಯಕಿಯು ಅತ್ಯಂತವೇಗವುಳ್ಳ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಐದು ಬಾಣಗಳಿಂದ ಶೀಘ್ರವಾಗಿ ಸೋಮದತ್ತನನ್ನು ಪ್ರಹರಿಸಿದನು. ಅನಂತರ

ಸಾತ್ಯಕಿಯು ನಗು-ನಗುತ್ತಲೇ ಮತ್ತೊಂದು ಭಲ್ಲದಿಂದ ಸೋಮದತ್ತನ ಸುವರ್ಣಮಯವಾದ ಧ್ವಜವನ್ನು ಕತ್ತರಿಸಿದನು. ಸೋಮದತ್ತನು ತನ್ನ ಧ್ವಜವು ಕತ್ತರಿಸಲ್ಪಟ್ಟು ಕೆಳಗೆ ಬಿದ್ದುದನ್ನು ಕಂಡು ಸ್ವಲ್ಪವಾದರೂ ಭ್ರಾಂತನಾಗದೇ ಇಪ್ಪತ್ತೈದು ಬಾಣಗಳಿಂದ ಶೈನೇಯನನ್ನು ಮುಚ್ಚಿದನು. ಇದರಿಂದ ಪರಮಕ್ರುದ್ಧನಾದ ಸಾತ್ವತನು ಧನುಷ್ಮಂತನಾದ ಸೋಮದತ್ತನ ಧನುಸ್ಸನ್ನು ನಿಶಿತವಾದ ಕ್ಷುರಪ್ರವೆಂಬ ಭಲ್ಲದಿಂದ ಕತ್ತರಿಸಿದನು. ಭಗ್ನವಾಗಿ ಹೋದ ದಂತಗಳುಳ್ಳ ಆನೆಯನ್ನು ಪುನಃ-ಪುನಃ ಪ್ರಹರಿಸುವಂತೆ–ಸುವರ್ಣಮಯವಾದ ಮೂಲಭಾಗವಿದ್ದ, ಬಗ್ಗಿದ ಗಿಣ್ಣುಗಳಿದ್ದ ನೂರು ಬಾಣಗಳಿಂದ ಸೋಮದತ್ತನನ್ನು ಹಲವು ಬಾರಿ ಪ್ರಹರಿಸಿದನು. ಮಹಾಬಲನಾದ, ಮಹಾ ರಥನಾದ ಸೋಮದತ್ತನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಬಾಣಗಳ ವೃಷ್ಟಿಯಿಂದ ಸಾತ್ಯಕಿಯನ್ನು ಮುಚ್ಚಿದನು. ಅದರಿಂದ ಕೋಪಗೊಂಡ ಸಾತ್ಯಕಿಯು ಸೋಮದತ್ತನನ್ನು ಬಾಣಗಳಿಂದ ಬಹಳವಾಗಿ ಗಾಯಗೊಳಿಸಿದನು. ಸೋಮದತ್ತನೂ ಸಹ ಸಾತ್ಯಕಿಯನ್ನು ಬಾಣಗಳ ಸಮೂಹದಿಂದ ಬಹಳವಾಗಿ ಪೀಡಿಸಿದನು. ಆ ಸಮಯದಲ್ಲಿ ಭೀಮಸೇನನು ಸಾತ್ಯಕಿಯ ಸಹಾಯಾರ್ಥವಾಗಿ ಸೋಮದತ್ತನನ್ನು ಹತ್ತು ಬಾಣಗಳಿಂದ ಪ್ರಹರಿಸಿದನು. ಸಾತ್ಯಕಿಯೊಡನೆ ಸೇರಿಕೊಂಡು ಭೀಮನು ಯುದ್ಧಮಾಡು ತ್ತಿದ್ದರೂ ಸ್ವಲ್ಪವಾದರೂ ಗಾಬರಿಗೊಳ್ಳದೆ ಸೋಮದತ್ತನು ಭೀಮಸೇನನನ್ನು ತೀಕ್ಷ್ಣವಾದ ಬಾಣಗಳಿಂದ ಬಹಳವಾಗಿ ಪೀಡಿಸಿದನು. ಪುನಃ ಭೀಮನು ಸಾತ್ವತನ ಸಹಾಯಾರ್ಥವಾಗಿ ನೂತನವಾಗಿಯೂ ದೃಢವಾಗಿಯೂ ಸುಘೋರವಾಗಿಯೂ ಇದ್ದ ಪರಿಘಾಯುಧವನ್ನು ಸೋಮದತ್ತನ ವಕ್ಷಃ ಸ್ಥಳದಲ್ಲಿ ಪ್ರಯೋಗಿಸಿದನು. ಸೋಮದತ್ತನು ಅತ್ಯಂತವೇಗದಿಂದ ತನ್ನ ಮೇಲೆ ಬೀಳಲು ಬರುತ್ತಿದ್ದ ಭಯಂಕರರೂಪದ ಪರಿಘಾಯುಧವನ್ನು ನಗು-ನಗುತ್ತಲೇ ಎರಡಾಗಿ ಕತ್ತರಿಸಿದನು. ಲೋಹಮಯವಾಗಿದ್ದ, ಹೆಚ್ಚು ದೊಡ್ಡದಾಗಿದ್ದ, ಎರಡಾಗಿ ಕತ್ತರಿಸಲ್ಪಟ್ಟ ಆ ಪರಿಘಾಯುಧವು–ವಜ್ರದಿಂದ ಸೀಳಲ್ಪಟ್ಟ ಪರ್ವತದ ದೊಡ್ಡ ಶಿಖರದೋಪಾದಿಯಲ್ಲಿ–ಭೂಮಿಯ ಮೇಲೆ ಬಿದ್ದಿತು. ಅನಂತರ ಸಾತ್ಯಕಿಯು ಭಲ್ಲದಿಂದ ಸೋಮದತ್ತನ ಧನುಸ್ಸನ್ನು

ಕತ್ತರಿಸಿ ಐದು ಬಾಣಗಳಿಂದ ಅವನ ಕೈಚೀಲವನ್ನೂ ಕತ್ತರಿಸಿದನು. ಬಳಿಕ ಸಾತ್ಯಕಿಯು ಬಹಳಶೀಘ್ರವಾಗಿ ನಾಲ್ಕು ಬಾಣಗಳನ್ನು ಪ್ರಯೋಗಿಸಿ ಸೋಮದತ್ತನ ಉತ್ತಮಾಶ್ವಗಳನ್ನು ಸಂಹರಿಸಿದನು. ಶಿನಿಪುಂಗವನು ಬಗ್ಗಿದ ಗಿಣ್ಣೆದ್ದ ಒಂದು ಬಾಣದಿಂದ ನಸುನಗುತ್ತಾ ಸೋಮದತ್ತನ ಸಾರಥಿಯ ತಲೆಯನ್ನು ಶರೀರದಿಂದ ಬೇರ್ಪಡಿಸಿದನು. ಬಳಿಕ ಸಾತ್ವತನು ಮಹಾ ಘೋರವಾದ ಮೂಲಭಾಗವನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಬಾಣವನ್ನು ಸೋಮದತ್ತನ ಮೇಲೆ ಪ್ರಯೋಗಿಸಿದನು. ಮಹಾಬಲಿಷ್ಠನಾದ ಶೈನೇಯನಿಂದ ಪ್ರಮುಕ್ತವಾದ, ಘೋರವಾದ ಮತ್ತು ಶ್ರೇಷ್ಠವಾದ ಆ ಬಾಣವು ಬಹಳ ಬೇಗ ಸೋಮದತ್ತನ ಹೃದಯವನ್ನು ಹೊಕ್ಕಿತು. ಸಾತ್ವತನ ಬಾಣದಿಂದ ಬಹಳವಾಗಿ ಗಾಯಗೊಂಡು, ಮಹಾರಥ ನಾದ, ಮಹಾಬಾಹುವಾದ ಸೋಮದತ್ತನು ಒಡನೆಯೇ ಕೆಳಕ್ಕೆ ಬಿದ್ದು ಅಸುನೀಗಿದನು. ಸೋಮದತ್ತನು ಸಾತ್ಯಕಿಯಿಂದ ಹತನಾದುದನ್ನು ಕಂಡು ಕೌರವರ ಕಡೆಯ ಮಹಾರಥರು ದೊಡ್ಡದಾಗಿ ಬಾಣಗಳ ಮಳೆಗರೆಯುತ್ತಾ ಸಾತ್ಯಕಿಯನ್ನು ಆಕ್ರಮಿಸಿದರು. ಕೌರವಯೋಧರ ಬಾಣಗಳಿಂದ ಸಾತ್ಯಕಿಯು ಮುಚ್ಚಲ್ಪಟ್ಟುದನ್ನು ನೋಡಿ ಯುಧಿಷ್ಠಿರನೂ ಮತ್ತು ಅವನ ಅನುಜರೂ ಎಲ್ಲ ಪ್ರಭದ್ರಕರೊಡನೆಯೂ–ದೊಡ್ಡದಾದ ಸೈನ್ಯದೊಡನೆಯೂ ಕೂಡಿ ಕೊಂಡು ದ್ರೋಣರ ಸೈನ್ಯಕ್ಕೆ ಮುತ್ತಿಗೆಹಾಕಿದರು. ಅನಂತರ ಕ್ರುದ್ಧನಾದ ಯುಧಿಷ್ಠಿರನು ನಿನ್ನ ಕಡೆಯ ದೊಡ್ಡ ಸೈನ್ಯವನ್ನು ದ್ರೋಣರು ನೋಡು ತ್ತಿದ್ದಂತೆಯೇ ಬಾಣಗಳ ಪ್ರಹಾರದಿಂದ ಧ್ವಂಸಮಾಡಲು ಉಪಕ್ರಮಿಸಿದನು. ಯುಧಿಷ್ಠಿರನು ತಮ್ಮ ಕಡೆಯ ಸೈನ್ಯವನ್ನು ವಿಧ್ವಂಸನಗೊಳಿಸುತ್ತಿರುವುದನ್ನು ಕಂಡು ಕೋಪದಿಂದ ಕೆಂಗಣ್ಣರಾಗಿದ್ದ ದ್ರೋಣರು ಬಹಳ ಶೀಘ್ರವಾಗಿ ಯುಧಿಷ್ಠಿರನ ಕಡೆಗೆ ಧಾವಿಸಿದರು. ಅನಂತರ ದ್ರೋಣರು ಯುಧಿಷ್ಠಿರನನ್ನು ಸುನಿಶಿತವಾಗಿದ್ದ ಏಳು ಬಾಣಗಳಿಂದ ಪ್ರಹರಿಸಿದರು. ಅದಕ್ಕೆ ಪ್ರತಿಯಾಗಿ ಕ್ರುದ್ಧನಾದ ಯುಧಿಷ್ಠಿರನು ದ್ರೋಣರನ್ನು ಐದು ಬಾಣಗಳಿಂದ ಪ್ರಹರಿಸಿದನು. ಅದರಿಂದ ಬಹಳವಾಗಿ ಗಾಯಗೊಂಡ ದ್ರೋಣರು ಕಟ ವಾಯಿಗಳನ್ನು ನಾಲಿಗೆಯಿಂದ ಸವರಿಕೊಳ್ಳುತ್ತಾ ಯುಧಿಷ್ಠಿರನ ರಥದ ಧ್ವಜ ವನ್ನೂ ಮತ್ತು ಧನುಸ್ಸನ್ನೂ ಕತ್ತರಿಸಿದರು. ಅವಸರದಿಂದ ಕಾರ್ಯಮಾಡ

ಬೇಕಾದ ಸಮಯದಲ್ಲಿ ಬಹಳ ಶೀಘ್ರವಾಗಿಯೇ ಕಾರ್ಯಮಾಡುವ ಸ್ವಭಾವ ದವನಾಗಿದ್ದ, ಧನುಸ್ಸಿನಿಂದ ವಿಹೀನನಾಗಿದ್ದ ಯುಧಿಷ್ಠಿರನು ಮತ್ತೊಂದು ದೃಢವಾದ ಧನುಸ್ಸನ್ನು ಬಹಳ ಶೀಘ್ರವಾಗಿ ಕೈಗೆತ್ತಿಕೊಂಡನು. ಅನಂತರ ಧರ್ಮಜನು ಅಶ್ವ-ಸೂತ-ಧ್ವಜ ರಥಸಹಿತರಾದ ದ್ರೋಣರನ್ನು ಸಾವಿರ ಬಾಣಗಳಿಂದ ಗಾಯಗೊಳಿಸಿದನು. ನಿಶ್ಚಯವಾಗಿಯೂ ಯುಧಿಷ್ಠಿರನ ಆ ಸಾಹಸಕಾರ್ಯವು ನಮಗೆ ಪರಮಾದ್ಭುತವಾಗಿ ಕಂಡಿತು. ಯುಧಿಷ್ಠಿರನು ಬಿಟ್ಟ ಬಾಣಗಳಿಂದ ಪೀಡಿತರಾದ ದ್ರೋಣರು ಬಹಳ ವ್ಯಥಿತರಾಗಿ ಪೀಠದ ಪಕ್ಕದಲ್ಲಿ ಸ್ವಲ್ಪಹೊತ್ತು ವಿಸಂಜ್ಞರಾಗಿ ಕುಳಿತಿದ್ದರು. ಸ್ವಲ್ಪಹೊತ್ತಿನಲ್ಲಿಯೇ ಎಚ್ಚರಗೊಂಡ ದ್ವಿಜಶ್ರೇಷ್ಠರಾದ ದ್ರೋಣರು ಕೋಪಾವಿಷ್ಟರಾಗಿ ಯುಧಿಷ್ಠಿರನ ಮೇಲೆ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದರು. ವೀರ್ಯವಂತನಾದ ಯುಧಿಷ್ಠಿರನು ಸ್ವಲ್ಪವೂ ಭ್ರಾಂತನಾಗದೇ ಧನುಸ್ಸನ್ನು ಸುದೀರ್ಘವಾಗಿ ಸೆಳೆದು ತಾನೂ ವಾಯವ್ಯಾಸ್ತ್ರವನ್ನೇ ಪ್ರಯೋಗಿಸಿ ದ್ರೋಣರ ದಿವ್ಯಾಸ್ತ್ರವನ್ನು ವಿಫಲಗೊಳಿಸಿದನು. ಮರುಕ್ಷಣದಲ್ಲಿಯೇ ದ್ರೋಣರ ಸುದೀರ್ಘವಾದ ಧನುಸ್ಸನ್ನೂ ಕತ್ತರಿಸಿದನು. ಕ್ಷತ್ರಿಯಮರ್ದನರಾದ ದ್ರೋಣರು ಮತ್ತೊಂದು ಧನುಸ್ಸನ್ನೆತ್ತಿಕೊಂಡರು. ಕುರುಪುಂಗವನಾದ ಯುಧಿಷ್ಠಿರನು ಅದನ್ನೂ ಸಹ ನಿಶಿತವಾದ ಭಲ್ಲದಿಂದ ಕತ್ತರಿಸಿದನು. ಅನಂತರ ವಾಸುದೇವನು ಕುಂತೀಪುತ್ರನಾದ ಯುಧಿಷ್ಠಿರನಿಗೆ ಹೇಳಿದನು :

"ಯುಧಿಷ್ಠಿರ! ಮಹಾಬಾಹುವೇ! ನಾನು ಹೇಳುವುದನ್ನು ಕೇಳು. ದ್ರೋಣರೊಡನೆ ಮಾಡುವ ಯುದ್ಧದಿಂದ ವಿರತನಾಗು. ದ್ರೋಣರು ನಿನ್ನ ಜೀವಗ್ರಹಣಕ್ಕಾಗಿ ಸತತವಾಗಿ ಪ್ರಯತ್ನಿಸುತ್ತಲೇ ಇದ್ದಾರೆ. ಆದುದರಿಂದ ನೀನು ಅವರೊಡನೆ ಯುದ್ಧಮಾಡುವುದು ನನಗೆ ಉಚಿತವಾಗಿ ಕಾಣುವು ದಿಲ್ಲ. ದ್ರೋಣರ ವಿನಾಶಕ್ಕೆಂದೇ ಯಾವನು ಹುಟ್ಟಿರುವನೋ ಆ ಧೃಷ್ಟ ದ್ಯುಮ್ನನೇ ಇವರನ್ನು ಸಂಹರಿಸುತ್ತಾನೆ. ಆದುದರಿಂದ ನೀನು ಇವರೊಡನೆ ಯುದ್ಧಮಾಡುವುದನ್ನು ಬಿಟ್ಟು ದುರ್ಯೋಧನನಿರುವಡೆಗೆ ಹೊರಟು ಹೋಗು. ನಾನು ಹೀಗೆ ಹೇಳಲು ಕಾರಣವೂ ಇದೆ :

**ರಾಜಾ ರಾಜ್ಞಾ ಹಿ ಯೋದ್ಧವ್ಯೋ ನಾರಾಜ್ಞಾ ಯುದ್ಧಮಿಷ್ಯತೇ ।**
**ತತ್ರ ತ್ವಂ ಗಚ್ಛ ಕೌನ್ತೇಯ ಹಸ್ತ್ಯಶ್ವರಥಸಂವೃತಃ ॥೫೦॥**

ರಾಜನಾದವನು ರಾಜನೊಡನೆಯೇ ಯುದ್ಧಮಾಡಬೇಕು. ರಾಜನಲ್ಲದವನೊಡನೆ ರಾಜನಾದವನು ಯುದ್ಧವನ್ನು ಅಪೇಕ್ಷಿಸುವುದಿಲ್ಲ. ಆದುದರಿಂದ ರಾಜನಾದ ದುರ್ಯೋಧನನಿರುವೆಡೆಗೆ ನೀನು ಗಜಾಶ್ವ-ರಥಗಳಿಂದ ಪರಿವೃತನಾಗಿ ಹೋಗು. ರಥಶ್ರೇಷ್ಠನಾದ ಭೀಮನೂ ಮತ್ತು ಧನಂಜಯನೂ ನನ್ನ ಸಹಾಯದಿಂದ ಕೌರವರೊಡನೆ ಯುದ್ಧಮಾಡುತ್ತಾರೆ.”

ಮಹಾರಾಜ! ವಾಸುದೇವನ ಮಾತನ್ನು ಕೇಳಿ ಯುಧಿಷ್ಠಿರನು ಮುಹೂರ್ತಕಾಲ ದಾರುಣವಾದ ಯುದ್ಧವನ್ನು ಕುರಿತು ಯೋಚಿಸುತ್ತಿದ್ದನು. ಅನಂತರ ಬಾಯ್ದೆರೆದ ಅಂತಕನೋಪಾದಿಯಲ್ಲಿ ನಿನ್ನ ಕಡೆಯ ಯೋಧರನ್ನು ಸಂಹಾರಮಾಡುತ್ತಿದ್ದ ಶತ್ರುಹಂತಕನಾದ ಭೀಮನಿದ್ದೆಡೆಗೆ ಯುಧಿಷ್ಠಿರರಾಜನು ಹೊರಟುಹೋದನು. ವರ್ಷಾಕಾಲದಲ್ಲಿ ಪರ್ಜನ್ಯನು ಗರ್ಜನೆಮಾಡುವಂತೆ ತನ್ನ ರಥಚಕ್ರಗಳ ಶಬ್ದದಿಂದ ಭೂಮಿಯನ್ನೂ ಮತ್ತು ಹತ್ತು ದಿಕ್ಕುಗಳನ್ನೂ ಪ್ರತಿಧ್ವನಿಸುತ್ತಾ, ಶತ್ರುಗಳನ್ನು ಅನವರತವಾಗಿ ಧ್ವಂಸಮಾಡುತ್ತಿದ್ದ ಭೀಮಸೇನನ ಹಿಂಭಾಗದ ರಕ್ಷಣಾಭಾರವನ್ನು ಯುಧಿಷ್ಠಿರನು ವಹಿಸಿಕೊಂಡನು. ರಾತ್ರಿ ಆ ಪ್ರಥಮಯಾಮದಲ್ಲಿ ದ್ರೋಣರೂ ಸಹ ಪಾಂಡು-ಪಾಂಚಾಲರನ್ನು ಧ್ವಂಸಮಾಡಿದರು.

೧೬೨ನೆಯ ಅಧ್ಯಾಯವು ಮುಗಿಯಿತು.

೧೬೩ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಕೌರವ-ಪಾಂಡವರ ಸೈನ್ಯಗಳಲ್ಲಿ ದೀವಟಿಗೆಗಳ ಪ್ರಕಾಶ

ಸಂಜಯನು ಯುದ್ಧವರ್ಣನೆಯನ್ನು ಮುಂದುವರಿಸುತ್ತಾ ಹೇಳುತ್ತಾನೆ :

ಮಹಾರಾಜ! ಘೋರರೂಪವಾದ ಭಯಾವಹವಾದ ಯುದ್ಧವು ಈ ರೀತಿಯಲ್ಲಿ ನಡೆಯುತ್ತಿರಲಾಗಿ, ರಣಾಂಗಣವು ಗಾಢಾಂಧಕಾರದಿಂದಲೂ ಮತ್ತು ಧೂಳಿನಿಂದಲೂ ಮುಚ್ಚಿಹೋಯಿತು. ಎದುರು-ಬದುರಾಗಿ ನಿಂತಿದ್ದ ಯೋಧರಿಗೆ ಯಾವುದೊಂದೂ ಕಾಣುತ್ತಿರಲಿಲ್ಲ. ‘ಇವರು ಶತ್ರುಪಕ್ಷದವರಿರಬಹುದು’-ಎಂಬ ಅನುಮಾನದಿಂದಲೂ ಮತ್ತು ಕೆಲವು ಸಂಕೇತಗಳಿಂದಲೂ ಯುದ್ಧವು ಮುಂದುವರಿಯಿತು. ರೋಮರಾಶಿಗಳು ನಿಮಿರಿನಿಲ್ಲುವಂತಹ

ಭಯಾನಕವಾದ, ನರ-ನಾಗಾಶ್ವಗಳನ್ನು ಮಥಿಸುವ ಯುದ್ಧವು ಆಗ ನಡೆಯುತ್ತಿದ್ದಿತು. ಒಂದು ಕಡೆಯಲ್ಲಿ ವೀರರಾದ ದ್ರೋಣ-ಕರ್ಣ-ಕೃಪರೂ ಮತ್ತೊಂದು ಕಡೆಯಲ್ಲಿ ಭೀಮ-ಪಾರ್ಷತ-ಸಾತ್ಯಕಿಗಳೂ ಸೇರಿಕೊಂಡು ಪರಸ್ಪರವಾಗಿ ಯುದ್ಧಮಾಡುತ್ತಾ ಉಭಯಪಕ್ಷದ ಸೈನಿಕರನ್ನೂ ಕ್ಷೋಭೆ ಗೊಳಿಸುತ್ತಿದ್ದರು. ಎರಡೂ ಪಕ್ಷಗಳ ಮಹಾರಥರಿಂದ ಪೀಡಿಸಲ್ಪಡುತ್ತಿದ್ದ ಉಭಯಪಕ್ಷಗಳ ಸೈನ್ಯಗಳೂ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದುವು ಮತ್ತು ಕತ್ತಲೂ ಆವರಿಸಿದ್ದುದರಿಂದ ಅವುಗಳು ದಿಕ್ಕುಗಾಣದೇ ಪಲಾಯನಮಾಡು ತ್ತಿದ್ದುವು. ಕತ್ತಲೆಯಿಂದಲೂ, ಧೂಳಿನಿಂದಲೂ ಆವೃತವಾದ ರಣಭೂಮಿ ಯಲ್ಲಿ ನಿದ್ರೆಯೂ ಇಲ್ಲದೇ ಬುದ್ಧಿಗೆಟ್ಟಿದ್ದ ಆ ಯೋಧರು ಎಲ್ಲ ದಿಕ್ಕುಗಳಿಗೂ ಓಡಿಹೋಗುತ್ತಿದ್ದರು. ಹಾಗೆ ಓಡಿಹೋಗುತ್ತಿರುವಾಗಲೇ ಬಾಣಗಳ ಏಟುತಿಂದು ಸಾಯುತ್ತಿದ್ದರು. ನಿನ್ನ ಮಗನ ಯೋಜನೆಯಿಂದಲೇ ನಡೆ ಯುತ್ತಿದ್ದ ಆ ಮಹಾಯುದ್ಧದಲ್ಲಿ ಸಾವಿರಾರು ಮಹಾರಥರು ಆ ಗಾಢಾಂಧ ಕಾರದಲ್ಲಿ ಪರಸ್ಪರ ಸಂಘರ್ಷಣೆಯಿಂದ ನಾಶವಾದರು. ರಣಾಂಗಣವು ಪೂರ್ಣವಾಗಿ ಗಾಢಾಂಧಕಾರದಿಂದ ಆವೃತವಾಗಿರಲಾಗಿ ಸರ್ವಸೈನ್ಯಗಳೂ ಮತ್ತು ಸೇನಾಪತಿಗಳೂ ಮೋಹಗೊಂಡರು."

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

"ಸಂಜಯ! ಆಗ ನೀವೆಲ್ಲರೂ ಅಂಧಕಾರದಲ್ಲಿ ಮುಳುಗಿಹೋಗಿದ್ದಿರಿ. ಪಾಂಡವರು ನಿಮ್ಮ ಬಲ-ಪರಾಕ್ರಮಗಳನ್ನು ಕುಂಠಿತಗೊಳಿಸಿ ನಿಮ್ಮನ್ನು ಮಥಿಸುತ್ತಿದ್ದರು. ಆ ಸಮಯದಲ್ಲಿ ನಿಮ್ಮ ಮನಸ್ಸಿನಲ್ಲಿ ಉಂಟಾದ ಪರಿಣಾಮವೇನು? ನೀನು ಹೇಳಿದಂತೆ ಪ್ರಪಂಚವೇ ಗಾಢಾಂಧಕಾರದಲ್ಲಿ ಮುಳುಗಿಹೋಗಿದ್ದ ಆ ಸಮಯದಲ್ಲಿ ಅವರ ಸೈನ್ಯದಲ್ಲಾಗಲೀ ನಮ್ಮ ಸೈನ್ಯದಲ್ಲಾಗಲೀ ಪ್ರಕಾಶವು ಹೇಗುಂಟಾಯಿತು?"

"ಮಹಾರಾಜ! ದುರ್ಯೋಧನನು ನಿನ್ನ ಕಡೆಯ ಸೈನ್ಯಸಮೂಹದಲ್ಲಿ ಅಳಿದುಳಿದ ಯಾವ ಸೈನ್ಯಗಳಿದ್ದುವೋ-ಆ ಸೈನ್ಯಗಳನ್ನೇ ಒಂದೆಡೆಯಲ್ಲಿ ಸೇರಿಸಿ ಸೇನೆಯ ರಕ್ಷಕರಿಗೆ ನಿರ್ದೇಶನಮಾಡಿ ಅವರಿಂದ ಒಂದು ನೂತನವ್ಯೂಹ ವನ್ನೇ ನಿರ್ಮಾಣಮಾಡಿಸಿದನು. ಆ ವ್ಯೂಹದ ಅಗ್ರಭಾಗದಲ್ಲಿ ದ್ರೋಣ ರಿದ್ದರು. ಹಿಂಭಾಗದಲ್ಲಿ ಶಲ್ಯನೂ, ಉಭಯಪಾರ್ಶ್ವಗಳಲ್ಲಿ ಅಶ್ವತ್ಥಾಮನೂ

ಮತ್ತು ಶಕುನಿಯೂ ಇದ್ದರು. ರಾಜನಾದ ದುರ್ಯೋಧನನೇ ಆ ರಾತ್ರಿಯಲ್ಲಿ ಎಲ್ಲ ಸೈನಿಕರನ್ನೂ ರಕ್ಷಿಸುತ್ತಾ ಮುಂದೆ ಹೋಗುತ್ತಿದ್ದನು. ಹೀಗೆ ಸೈನಿಕರೊಡನೆ ಯುದ್ಧಕ್ಕೆ ಹೋಗುತ್ತಿದ್ದ ಸಮಯದಲ್ಲಿ ದುರ್ಯೋಧನನು ಎಲ್ಲ ಕಾಲಾಳುಗಳ ಸಮೂಹವನ್ನೂ ಉದ್ದೇಶಿಸಿ ಸಾಂತ್ವನಪೂರ್ವಕವಾಗಿ ಈ ಮಾತುಗಳನ್ನು ಹೇಳಿದನು :

"ಪದಾತಿಗಳೇ! ನೀವೆಲ್ಲರೂ ನಿಮ್ಮ ಕೈಗಳಲ್ಲಿರುವ ಆಯುಧಗಳನ್ನು ಕೆಳಗಿಟ್ಟು ಪ್ರಜ್ವಲಿಸುತ್ತಿರುವ ಪಂಜುಗಳನ್ನು ಹಿಡಿದುಕೊಳ್ಳಿರಿ."

ಮಹಾರಾಜ! ನೃಪಶ್ರೇಷ್ಠನಾದ ದುರ್ಯೋಧನನು ಹೀಗೆ ಹೇಳಿದೊಡನೆಯೇ ಪ್ರಹೃಷ್ಟರಾದ ಪದಾತಿಗಳು ಆಯುಧಗಳನ್ನು ಬದಿಗಿಟ್ಟು ಪಂಜುಗಳನ್ನು ಹಿಡಿದುಕೊಂಡರು. ಕಾಲಾಳುಗಳು ಪಂಜುಗಳನ್ನು ಹಿಡಿದುದನ್ನು ನೋಡಿ ಪರಮಹೃಷ್ಟರಾದ ದೇವತೆಗಳು, ಋಷಿಗಳು, ಗಂಧರ್ವರು, ದೇವರ್ಷಿಗಳು, ವಿದ್ಯಾಧರರು, ಅಪ್ಸರೆಯರು, ನಾಗರು, ಯಕ್ಷರು, ಸರ್ಪಗಳು, ಕಿನ್ನರರು ಇವರೇ ಮೊದಲಾಗಿ ಅಂತರಿಕ್ಷದಲ್ಲಿದ್ದ ಸರ್ವಪ್ರೇಕ್ಷಕರೂ ತಮ್ಮ-ತಮ್ಮ ಕೈಗಳಲ್ಲಿ ಪಂಜುಗಳನ್ನು ಹಿಡಿದುಕೊಂಡರು. ದಿಗ್ದೇವತೆಗಳ ಕಡೆಗಳಿಂದಲೂ ಸಹ ಸುಗಂಧತೈಲಯುಕ್ತವಾಗಿದ್ದ ದೀಪಗಳು ಕಾಣಿಸಿಕೊಂಡುವು. ಅದರಲ್ಲಿಯೂ ವಿಶೇಷವಾಗಿ ನಾರದ-ಪರ್ವತರೂ ಸಹ ಕೌರವ-ಪಾಂಡವರ ಸಲುವಾಗಿ ಒಬ್ಬರು ಮತ್ತೊಬ್ಬರಿಗೆ ಚೆನ್ನಾಗಿ ಕಾಣಿಸಲು ಪಂಜುಗಳನ್ನು ಹಿಡಿದಿದ್ದರು. ಆ ರಾತ್ರಿಯಲ್ಲಿ ಪಂಜುಗಳ ಮೂಲಕವಾದ ಅಗ್ನಿಯ ಪ್ರಭೆಯಿಂದಾಗಿ ಕುರು-ಪಾಂಡವರ ಆ ಎರಡು ಸೈನ್ಯಗಳೂ ಪ್ರತ್ಯೇಕ-ಪ್ರತ್ಯೇಕವಾಗಿ ಪ್ರಕಾಶಿಸತೊಡಗಿದುವು. ಬಹುಮೂಲ್ಯವಾದ ಆಭರಣಗಳಿಂದಲೂ ಮತ್ತು ಸೈನಿಕರ ಮೇಲೆ ಬೀಳುತ್ತಿದ್ದ ಶಸ್ತ್ರಗಳ ಪ್ರಭೆಯಿಂದಲೂ ಉಭಯಪಕ್ಷಗಳ ಸೈನ್ಯಗಳೂ ಪ್ರಕಾಶಮಾನವಾಗಿ ಕಾಣುತ್ತಿದ್ದುವು.

ಕೌರವರು ತಮ್ಮ ಪ್ರತಿಯೊಂದು ರಥದಲ್ಲಿಯೂ ಐದೈದು ಪಂಜುಗಳನ್ನಿಟ್ಟಿದ್ದರು. ಪ್ರತಿಯೊಂದು ಆನೆಯ ಮೇಲೂ ಮೂರು-ಮೂರು ಪಂಜುಗಳು ಬೆಳಗುತ್ತಿದ್ದುವು. ಒಂದೊಂದು ಕುದುರೆಯ ಮೇಲೂ ದೊಡ್ಡದಾದ ಒಂದೊಂದು ಪಂಜು ಬೆಳಗುತ್ತಿದ್ದಿತು. ಪಾಂಡವ-ಕೌರವರು ಈ ವಿಧವಾದ ವ್ಯವಸ್ಥೆಯಿಂದ ಹೊತ್ತಿಸಿದ ಆ ಪಂಜುಗಳು ಕ್ಷಣಮಾತ್ರದಲ್ಲಿ ನಿನ್ನ ಮತ್ತು

ಅವರ ಸೈನ್ಯವನ್ನು ಬೆಳಗಿದುವು. (ಪ್ರಕಾಶಗೊಳಿಸಿದುವು ) ಪಂಜನ್ನೂ ಮತ್ತು ಎಣ್ಣೆಯನ್ನೂ ಕೈಗಳಲ್ಲಿ ಹಿಡಿದ ಪದಾತಿಗಳಿಂದ ಸೇವಿಸಲ್ಪಡುತ್ತಿದ್ದ ರಥಾಶ್ವ-ಗಜಸೈನ್ಯಗಳು ರಾತ್ರಿಯ ವೇಳೆಯಲ್ಲಿ ಅಂತರಿಕ್ಷದಲ್ಲಿ ಕಾಣುವ ವಿದ್ಯುತ್ತಿನಿಂದ ಸಹಿತವಾದ ಕಾರ್ಮುಗಿಲುಗಳಂತೆಯೇ ಕಾಣುತ್ತಿದ್ದುವು. ಸಾವಿರಾರು ಪಂಜುಗಳಿಂದ ಸೈನ್ಯಗಳು ಪ್ರಕಾಶಿತವಾಗಲಾಗಿ, ಅಗ್ನಿಸದೃಶರಾದ, ಸುವರ್ಣಮಯವಾದ ಕವಚವನ್ನು ಧರಿಸಿದ್ದ ದ್ರೋಣರು ನಡು ನೆತ್ತಿಯಮೇಲೆ ಬಂದ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದರು. ಸುವರ್ಣ ಮಯವಾದ ಆಭರಣಗಳಲ್ಲಿಯೂ, ಶುದ್ಧವಾದ ನಿಷ್ಕಗಳಲ್ಲಿಯೂ ( ಎದೆ ಯಲ್ಲಿ ಧರಿಸುವ ಒಂದು ಆಭರಣ), ಧನುಸ್ಸುಗಳಲ್ಲಿಯೂ, ಪೀತವರ್ಣದ ಶಸ್ತ್ರಗಳಲ್ಲಿಯೂ–ಪಂಜುಗಳ ರೂಪದಲ್ಲಿದ್ದ ಅಗ್ನಿಗಳ ಪ್ರತಿಭೆ ಯುಂಟಾಯಿತು. ಅಜಮೀಢಕುಲನಂದನನೇ! ಗದೆಗಳೂ, ಶಕ್ತ್ಯಾಯುಧ ಗಳೂ, ಪರಿಘಗಳೂ, ರಥಶಕ್ತಿಗಳೂ ಝಳಪಿಸಲ್ಪಡುತ್ತಿದ್ದಾಗ, ಪಂಜು ಗಳು ಅವುಗಳಲ್ಲಿ ಪ್ರತಿಬಿಂಬಿತವಾಗಿ ಪುನಃ-ಪುನಃ ಅನೇಕ ಪಂಜುಗಳು ಅವುಗಳಲ್ಲಿ ಉತ್ಪನ್ನವಾಗುತ್ತಿರುವಂತೆ ಕಾಣುತ್ತಿದ್ದುವು. ಛತ್ರಗಳೂ, ಚಾಮರಗಳೂ, ಖಡ್ಗಗಳೂ, ಅಳ್ಳಾಡುತ್ತಿದ್ದ ಸುವರ್ಣಮಾಲೆಗಳೂ ಆ ಸಮಯದಲ್ಲಿ ದೀಪಗಳ ಪ್ರಕಾಶದಿಂದ ಶೋಭಾಯಮಾನವಾಗಿ ಕಾಣುತ್ತಿ ದ್ದುವು. ಮಹಾರಾಜ! ಆ ಸಮಯದಲ್ಲಿ ಶಸ್ತ್ರಗಳ ಪ್ರಭೆಗಳಿಂದಲೂ ದೀಪಗಳ ಪ್ರಭೆಗಳಿಂದಲೂ ವಿರಾಜಮಾನವಾಗಿ ಕಾಣುತ್ತಿದ್ದ ನಿನ್ನ ಸೈನ್ಯವು ಆಭರಣಗಳ ಪ್ರಭೆಗಳಿಂದಲೂ ಪ್ರಕಾಶಿತವಾಗಿ ಇನ್ನೂ ಹೆಚ್ಚು ಪ್ರಕಾಶ ಮಾನವಾಗಿ ವಿರಾಜಿಸುತ್ತಿದ್ದಿತು. ಹೊಂಬಣ್ಣದುವುಗಳಾಗಿದ್ದ, ರಕ್ತಸಿಕ್ತ ವಾಗಿದ್ದ ಶಸ್ತ್ರಾಸ್ತ್ರಗಳೂ ಮತ್ತು ವೀರರಿಂದ ಅಲುಗಾಡಿಸಲ್ಪಡುತ್ತಿದ್ದ ಕವಚಗಳೂ ವರ್ಷಾಕಾಲದಲ್ಲಿ ಅಂತರಿಕ್ಷದಲ್ಲಿ ಕಾಣುವ ಮಿಂಚಿನಂತೆ ಅವುಗಳ ಮೇಲೆ ಬೀಳುತ್ತಿದ್ದ ಪಂಜುಗಳ ಬೆಳಕನ್ನು ಪುನಃ ಹೊರಚೆಲ್ಲುತ್ತಾ ಪ್ರಕಾಶಿಸುತ್ತಿದ್ದುವು. ಹೊಡೆತಗಳ ವೇಗದಿಂದ ಪ್ರಕಂಪಿಸುತ್ತಿದ್ದ, ಪ್ರಹರಿಸುತ್ತಿದ್ದ ಮತ್ತು ಪ್ರಹರಿಸಲು ವೇಗವಾಗಿ ಮುಂದೆ ಬರುತ್ತಿದ್ದ ಮನುಷ್ಯರ ಮುಖಗಳು ಆ ಸಮಯದಲ್ಲಿ ಗಾಳಿಯಿಂದ ವಿಚಲಿತವಾದ ದೊಡ್ಡ-ದೊಡ್ಡ ಕಮಲಗಳಂತೆಯೇ ಕಾಣುತ್ತಿದ್ದುವು. ಒಣಗಿದ ವೃಕ್ಷ

ಗಳಿಂದ ಸಮೃದ್ಧವಾಗಿರುವ ಮಹಾವನವು ಧಗ-ಧಗನೆ ಉರಿಯುತ್ತಿರುವಾಗ ಸೂರ್ಯದೇವನ ಪ್ರಭೆಯೂ ಮಸುಕಾಗಿ ಕಾಣುವಂತೆ–ನಿನ್ನ ಸೈನ್ಯವು ಪಂಜುಗಳಿಂದ ಪ್ರದೀಪ್ತವಾಗಿದ್ದರೂ ಮಹಾಭಯಂಕರವಾಗಿಯೂ ಕಾಣು ತ್ತಿದ್ದಿತು. ಪಾಂಡವರು ಪಂಜುಗಳಿಂದ ಪ್ರದೀಪ್ತವಾಗಿದ್ದ ನಮ್ಮ ಸೈನ್ಯವನ್ನು ನೋಡಿ ಬಹಳ ಶೀಘ್ರವಾಗಿ ಎಲ್ಲ ಸೈನ್ಯಗಳಲ್ಲಿಯೂ ಇದ್ದ ಪದಾತಿ ಸಮೂಹಗಳಿಗೆ, ಆಯುಧವನ್ನು ವಿಸರ್ಜಿಸುವಂತೆಯೂ ಪಂಜುಗಳನ್ನೂ ಎಣ್ಣೆಯನ್ನೂ ಹಿಡಿಯುವಂತೆಯೂ ಹೇಳಿ ತಮ್ಮ ಸೈನ್ಯವನ್ನೂ ಪ್ರದೀಪ್ತವನ್ನಾಗಿ ಮಾಡಿದರು. ಅವರ ಸೈನ್ಯದಲ್ಲಿ ಪ್ರತಿಯೊಂದು ಆನೆಯ ಮೇಲೂ ಏಳೇಳು ದೀಪಗಳನ್ನಿಟ್ಟಿದ್ದರು. ಪ್ರತಿಯೊಂದು ರಥದ ಮೇಲೂ ಹತ್ತು-ಹತ್ತು ಪಂಜುಗಳನ್ನಿಟ್ಟಿದ್ದರು. ಪ್ರತಿಯೊಂದು ಕುದುರೆಯ ಮೇಲೂ ಎರಡೆರಡು ಪಂಜುಗಳನ್ನಿಟ್ಟಿದ್ದರು. ಪಾರ್ಶ್ವಗಳಲ್ಲಿ ಕೆಲವರು ಪಂಜುಗಳನ್ನು ಹಿಡಿದು ನಿಂತಿದ್ದರು. ಧ್ವಜಗಳ ಸಮೀಪದಲ್ಲಿಯೂ ಮತ್ತು ರಥಗಳ ಹಿಂಭಾಗ ಗಳಲ್ಲಿಯೂ ಕೆಲವು ಪದಾತಿಗಳು ಪಂಜುಗಳನ್ನು ಹಿಡಿದು ನಿಂತಿದ್ದರು. ಎಲ್ಲ ಸೈನ್ಯದ ಪಾರ್ಶ್ವಗಳಲ್ಲಿಯೂ ಹಿಂದೆ-ಮುಂದೆ ಮತ್ತು ಸುತ್ತಲೂ ಮಧ್ಯ ದಲ್ಲಿಯೂ ಹಲವಾರು ಮಂದಿ ಪದಾತಿಗಳು ಧಗ-ಧಗನೆ ಉರಿಯುತ್ತಿದ್ದ ಪಂಜುಗಳನ್ನು ಹಿಡಿದುನಿಂತು ಯುಧಿಷ್ಠಿರನ ಸೈನ್ಯವನ್ನು ಪ್ರಕಾಶಗೊಳಿಸಿದರು. ಎರಡೂ ಸೈನ್ಯಗಳ ಮಧ್ಯಭಾಗದಲ್ಲಿಯೂ ಪ್ರಜ್ವಲಿಸುವ ಪಂಜನ್ನು ಕೈಯಲ್ಲಿ ಹಿಡಿದಿದ್ದ ಮನುಷ್ಯರು ಸಂಚರಿಸುತ್ತಿದ್ದರು. ಎಲ್ಲ ಸೈನ್ಯಗಳಲ್ಲಿಯೂ ಪಂಜನ್ನು ಹಿಡಿದಿದ್ದ ಪದಾತಿಗಳು ಗಜಾಶ್ವ-ರಥಸಮೂಹಗಳೊಡನೆ ಬೆರೆತು ಪಾಂಡವರಿಂದ ರಕ್ಷಿಸಲ್ಪಡುತ್ತಿದ್ದ ಸೈನ್ಯವನ್ನೂ ಪ್ರಕಾಶಗೊಳಿಸುತ್ತಿದ್ದರು. ಮೊದಲೇ ಪ್ರಕಾಶಮಾನವಾಗಿದ್ದ ನಿನ್ನ ಸೈನ್ಯವನ್ನೂ ಅವರು ಮತ್ತಷ್ಟು ಪ್ರಕಾಶಗೊಳಿಸಿದರು.

ಕಿರಣಗಳನ್ನು ಹೊಂದಿರುವ ಮತ್ತು ಕಿರಣಗಳನ್ನು ಹೊರಸೂಸುವ ದಿವಾಕರನಾದ ಸೂರ್ಯಗ್ರಹದಿಂದ ರಕ್ಷಿತನಾದ ಅಗ್ನಿಯು ರಾತ್ರಿಯಲ್ಲಿ ಹೆಚ್ಚು ಪ್ರಕಾಶಮಾನವಾಗಿ ಕಾಣುವಂತೆ–ಮೊದಲೇ ನಿನ್ನ ಕಡೆಯ ಕಾಲಾಳು ಗಳು ಹಿಡಿದಿದ್ದ ಪಂಜುಗಳಿಂದ ಪ್ರದೀಪ್ತವಾಗಿದ್ದ ನಿನ್ನ ಸೈನ್ಯವು ಪಾಂಡವರ ಕಡೆಯ ಪಂಜುಗಳ ಪ್ರಕಾಶದಿಂದಾಗಿ ಮತ್ತಷ್ಟು ಪ್ರಕಾಶಿಸಿತು. ಎರಡೂ

ಸೈನ್ಯಗಳ ಮಹಾಪ್ರಕಾಶವು ಪೃಥಿವಿಯನ್ನೂ, ಅಂತರಿಕ್ಷವನ್ನೂ ಮತ್ತು ದಿಕ್ಕುಗಳನ್ನೂ ಅತಿಕ್ರಮಿಸಿತು. ಆ ಪ್ರಕಾಶದಿಂದ ನಿನ್ನ ಮತ್ತು ಪಾಂಡವರ ಸೈನ್ಯವು ಮತ್ತಷ್ಟು ಪ್ರಕಾಶಮಾನವಾಯಿತು. ಮಹಾರಾಜ! ಸ್ವರ್ಗಲೋಕಕ್ಕೂ ವ್ಯಾಪಿಸಿದ ಆ ಪ್ರಕಾಶದಿಂದ ಉದ್ಬೋಧಿತರಾದ ದೇವತೆಗಳೂ, ಗಂಧರ್ವರೂ, ಯಕ್ಷರೂ, ಅಸುರರೂ, ಸಿದ್ಧಸಂಘಗಳೂ, ಅಪ್ಸರೆಯರೂ ಯುದ್ಧದರ್ಶನಾಕಾಂಕ್ಷಿಗಳಾಗಿ ಆಗಮಿಸಿದರು. ಆ ರಣಭೂಮಿಯು ದೇವ-ಗಂಧರ್ವರಿಂದಲೂ, ಯಕ್ಷರಿಂದಲೂ, ಅಸುರೇಂದ್ರರಿಂದಲೂ, ಅಪ್ಸರೆಯರ ಸಮೂಹದಿಂದಲೂ, ಯುದ್ಧದಲ್ಲಿ ಹತರಾಗಿ ಸ್ವರ್ಗಾರೋಹಣಮಾಡುತ್ತಿದ್ದ ಶೂರರಿಂದಲೂ ಸಮಾಕುಲವಾಗಿದ್ದು ದಿವ್ಯಲೋಕದಂತೆಯೇ ಕಾಣುತ್ತಿದ್ದಿತು. ರಥಾಶ್ವ-ಗಜಗಳ ಮೇಲಿದ್ದ ಪಂಜುಗಳಿಂದ ಪ್ರದೀಪ್ತವಾಗಿದ್ದ, ಕೋಪಾವಿಷ್ಟರಾದ ಯೋಧರಿಂದ ಸಮಾಕುಲವಾಗಿದ್ದ, ಗಾಯಗೊಂಡು ಓಡಿಹೋಗುತ್ತಿದ್ದ ಕುದುರೆಗಳಿಂದ ಉಪಲಕ್ಷಿತವಾಗಿದ್ದ, ವ್ಯೂಹಕ್ರಮದಲ್ಲಿ ರಥಾಶ್ವ-ಗಜ ಸೈನ್ಯಗಳನ್ನೊಳಗೊಂಡಿದ್ದ ಎರಡೂ ಕಡೆಯ ಸೈನ್ಯಗಳ ಸಮೂಹವು ದೇವತೆಗಳ ಮತ್ತು ಅಸುರರ ವ್ಯೂಹಕ್ಕೆ ಸಮನಾಗಿದ್ದಿತು. ರಾತ್ರಿಯಲ್ಲಿ ನಡೆಯುತ್ತಿದ್ದ ಆ ಮಹಾಯುದ್ಧವು ಮೇಘಾಚ್ಛಾದಿತವಾದ ದುರ್ದಿನದಂತೆಯೇ ಇದ್ದಿತು. ಯುದ್ಧಸಮಯದಲ್ಲಿ ಎರಡು ಪಕ್ಷದವರಿಂದಲೂ ಪ್ರಯೋಗಿಸಲ್ಪಡುತ್ತಿದ್ದ ಆ ಮಹಾಯುದ್ಧವು ಎರಡು ಪಕ್ಷದವರಿಂದಲೂ ಪ್ರಯೋಗಿಸಲ್ಪಡುತ್ತಿದ್ದ ಶಸ್ತ್ರಾಯುಧಗಳ ಸಮೂಹಗಳು ಚಂಡಮಾರುತದಂತಿದ್ದುವು. ಮಹಾರಥಗಳು ಮೋಡಗಳಂತಿದ್ದುವು. ಗಜಾಶ್ವಗಳ ಘೀಂಕಾರ ಮತ್ತು ಹೇಷಾರವಗಳು ಗುಡುಗಿನ ಶಬ್ದಗಳಂತಿದ್ದುವು. ಶಸ್ತ್ರಾಸ್ತ್ರಗಳ ಪ್ರಯೋಗಗಳೇ ಜಲವೃಷ್ಟಿರೂಪದಲ್ಲಿದ್ದುವು. ವಾಹನಗಳ ಮತ್ತು ಯೋಧರ ಶರೀರಗಳಿಂದ ಹರಿಯುತ್ತಿದ್ದ ರಕ್ತಪ್ರವಾಹವೇ ನೀರಿನ ಧಾರೆಗಳ ರೂಪದಲ್ಲಿದ್ದಿತು. ಹೀಗೆ ಆ ರಾತ್ರಿಯಲ್ಲಿ ರಣವೆಂಬ ದುರ್ದಿನವು ಪ್ರಾರಂಭವಾಯಿತು. ನರೇಂದ್ರನೇ! ಶರದೃತುವಿನಲ್ಲಿ ಆಕಾಶಮಧ್ಯಗತನಾದ ಸೂರ್ಯನು ತನ್ನ ಪ್ರಖರವಾದ ಕಿರಣಗಳಿಂದ ಯಾವ ರೀತಿಯಲ್ಲಿ ಜನರನ್ನು ಸಂತಾಪಗೊಳಿಸುತ್ತಾನೆಯೋ ಅದೇ ರೀತಿಯಲ್ಲಿ ಮಹಾಗ್ನಿಸದೃಶರಾದ, ಮಹಾತ್ಮರಾದ, ಬ್ರಾಹ್ಮಣಶ್ರೇಷ್ಠರಾದ ದ್ರೋಣರು ಆ ಮಹಾಯುದ್ಧದಲ್ಲಿ ಪಾಂಡವರನ್ನು ಬಾಣರೂಪವಾದ ಜ್ವಾಲೆಗಳಿಂದ ಸಂತಾಪಗೊಳಿಸುತ್ತಿದ್ದರು.

೧೬೩ನೆಯ ಅಧ್ಯಾಯವು ಮುಗಿಯಿತು.

## ಉಭಯಪಕ್ಷಗಳ ಸೈನ್ಯಗಳಿಗೂ ಭಯಂಕರ ಯುದ್ಧ: ದುರ್ಯೋಧನನು ದ್ರೋಣರನ್ನು ರಕ್ಷಿಸುವಂತೆ ಸೈನಿಕರಿಗೆ ಆದೇಶನೀಡಿದುದು

ಮಹಾರಾಜ! ಧೂಳಿನಿಂದಲೂ ಮತ್ತು ಕತ್ತಲೆಯಿಂದಲೂ ಆವೃತ ವಾಗಿದ್ದ ರಣಾಂಗಣವು ಪಂಜುಗಳಿಂದ ಪ್ರಕಾಶಗೊಳ್ಳಲಾಗಿ, ಒಬ್ಬರು ಮತ್ತೊಬ್ಬರನ್ನು ಸಂಹರಿಸಲು ಇಚ್ಛಿಸಿದ್ದ ವೀರಯೋಧರು ಯುದ್ಧಮಾಡಲು ಒಂದೆಡೆಯಲ್ಲಿ ಸೇರಿದರು. ಪರಸ್ಪರವಾಗಿ ಅಪರಾಧಿಗಳೆನಿಸಿಕೊಂಡಿದ್ದ ಆ ಯೋಧರು ಶಸ್ತ್ರ, ಪ್ರಾಸ ಮತ್ತು ಕತ್ತಿಗಳನ್ನು ಧರಿಸಿದವರಾಗಿ ಒಂದೆಡೆಯಲ್ಲಿ ಸೇರಿ ಒಬ್ಬರು ಮತ್ತೊಬ್ಬರನ್ನು ವೀಕ್ಷಿಸುತ್ತಿದ್ದರು. ನಾಲ್ಕು ದಿಕ್ಕುಗಳಲ್ಲಿಯೂ ಸಾವಿರಾರು ಪಂಜುಗಳು ಉರಿಯುತ್ತಿದ್ದುವು. ಆ ಪಂಜುಗಳು ರತ್ನಖಚಿತ ವಾಗಿದ್ದುವು. ಚಿನ್ನದ ದಂಡದಿಂದ ಕೂಡಿದ್ದುವು. ಆ ಪಂಜುಗಳಿಗೆ ಕಾಲಾಳು ಗಳು ಸುಗಂಧಯುಕ್ತವಾದ ಎಣ್ಣೆಯನ್ನು ಹಾಕುತ್ತಿದ್ದರು. ದೇವಗಂಧರ್ವರ ದೀಪವೇ ಮೊದಲಾದ ಅತ್ಯಂತೋಜ್ಜ್ವಲವಾದ ಪ್ರತಿಭೆಗಳಿಂದ ಕೂಡಿದ್ದ ಭೂಮಿಯು ಗ್ರಹ-ನಕ್ಷತ್ರಗಳಿಂದ ಕೂಡಿದ ಆಕಾಶದಂತೆಯೇ ವಿರಾಜಿಸು ತ್ತಿದ್ದಿತು. ನೂರಾರು ಪಂಜುಗಳಿಂದ ಜಾಜ್ವ್ವಲ್ಯಮಾನವಾಗಿ ಕಾಣುತ್ತಿದ್ದ ಆ ರಣಾಂಗಣವು ಪ್ರಳಯಕಾಲದಲ್ಲಿ ಧಗ-ಧಗನೆ ಹೊತ್ತಿಕೊಂಡು ಉರಿಯುವ ವಸುಂಧರೆಯೋಪಾದಿಯಲ್ಲಿ ಕಾಣುತ್ತಿದ್ದಿತು. ಆ ಅಸಂಖ್ಯಾತ ಪಂಜು ಗಳಿಂದ ಸುತ್ತಲೂ ಇದ್ದ ಎಲ್ಲ ದಿಕ್ಕುಗಳೂ ಪ್ರಕಾಶಮಾನವಾಗಿ ಕಾಣು ತ್ತಿದ್ದು–ವರ್ಷಾಕಾಲದ ಪ್ರದೋಷಸಮಯದಲ್ಲಿ ಮಿಂಚುಹುಳುಗಳಿಂದ ಆವೃತವಾದ ವೃಕ್ಷಗಳಂತೆಯೇ–ಪ್ರಕಾಶಿಸುತ್ತಿದ್ದುವು. ಆ ಸಮಯದಲ್ಲಿ ಒಂದು ಪಕ್ಷದ ವೀರಯೋಧರು ಎದುರುಪಕ್ಷದ ಯೋಧರೊಡನೆ ಪ್ರತ್ಯೇಕ-ಪ್ರತ್ಯೇಕ ವಾಗಿಯೇ ಯುದ್ಧದಲ್ಲಿ ತೊಡಗಿದರು. ಆನೆಗಳು ಆನೆಗಳೊಡನೆಯೂ ಆಶ್ವಾರೋಹಿಗಳು ಅಶ್ವಾರೋಹಿಗಳೊಡನೆಯೂ ಯುದ್ಧದಲ್ಲಿ ತೊಡಗಿ ದರು. ಸಂತೋಷಭರಿತರಾಗಿದ್ದ ರಥಯೋಧರು ರಥಿಕರೊಡನೆಯೇ ಯುದ್ಧದಲ್ಲಿ ತೊಡಗಿದರು. ನಿನ್ನ ಮಗನ ಆಜ್ಞಾನುಸಾರವಾಗಿ ನಡೆಯುತ್ತಿದ್ದ

ರಾತ್ರಿಯ ಪ್ರಥಮಯಾಮದ ಘೋರವಾದ ಆ ಮಹಾಯುದ್ಧದಲ್ಲಿ ನಿನ್ನ ಚತುರಂಗಸೈನ್ಯದಲ್ಲಿ ಅಪಾರವಾದ ಸಾವು-ನೋವುಗಳಾದುವು. ಮಹಾರಾಜ! ಅನಂತರ ಅರ್ಜುನನು ಬಹಳ ವೇಗದಿಂದ ಎಲ್ಲ ರಾಜರನ್ನೂ ಸಂಹರಿಸುತ್ತಾ ಕೌರವರ ಸೈನ್ಯವನ್ನು ಧ್ವಂಸಮಾಡಲು ಉಪಕ್ರಮಿಸಿದನು."

ಧೃತರಾಷ್ಟ್ರನು ಹೇಳುತ್ತಾನೆ :

"ಸಂಜಯ! ಅಸಹನಶೀಲನಾದ, ಎದುರಿಸಲು ಅಸಾಧ್ಯನಾದ, ಕೋಪಾವಿಷ್ಟನಾಗಿದ್ದ ಅರ್ಜುನನು ನನ್ನ ಮಗನ ಸೈನ್ಯವನ್ನು ಪ್ರವೇಶಿಸಿದ ಆ ಸಮಯದಲ್ಲಿ ನಿಮ್ಮ ಮನಸ್ಸಿನ ಸ್ಥಿತಿಯು ಹೇಗಿದ್ದಿತು? ಶತ್ರುಪೀಡಕನಾದ ಅರ್ಜುನನು ಪ್ರವೇಶಿಸಿದನಂತರ ನನ್ನ ಕಡೆಯ ಸೈನಿಕರೇನು ಮಾಡಿದರು? ದುರ್ಯೋಧನನೂ ಸಹ ಆ ಸಮಯದಲ್ಲಿ ಯಾವ ಕಾರ್ಯವನ್ನು ಮಾಡುವುದು ಉಚಿತವೆಂದು ಭಾವಿಸಿದನು? (ಅರ್ಜುನನನ್ನು ಎದುರಿಸಲು ದುರ್ಯೋಧನನು ಯಾವ ಯೋಜನೆಯನ್ನು ಕೈಗೊಂಡನು? ) ಶತ್ರುಗಳನ್ನು ದಮನಮಾಡುವ ನನ್ನ ಕಡೆಯ ಯೋಧರಲ್ಲಿ ಯಾರು-ಯಾರು ಅರ್ಜುನನನ್ನು ಆ ಸಮಯದಲ್ಲಿ ಎದುರಿಸಿ ನಿಂತರು? ಶ್ವೇತವಾಹನನು ಸೈನ್ಯವನ್ನು ಪ್ರವೇಶಿಸಲಾಗಿ ದ್ರೋಣರ ರಕ್ಷಣಾಭಾರವನ್ನು ಯಾರು ವಹಿಸಿಕೊಂಡರು? ದ್ರೋಣರ ರಥದ ಮುಂದುಗಡೆ ಯಾರು ಹೋಗುತ್ತಿದ್ದರು? (ದ್ರೋಣರು ಮರಣಹೊಂದಿದರೆಂಬ ವಾರ್ತೆಯನ್ನು ನೆನೆದೊಡನೆಯೇ ನನಗೆ ಪರಮಾಶ್ಚರ್ಯವಾಗುತ್ತದೆ. ಅಂತೆಯೇ ದುಃಖವೂ ಆಗುತ್ತದೆ.) ಪರಾಜಯವೆಂಬುದನ್ನೇ ಕಾಣದಿದ್ದ, ಮಹಾಧನುಷ್ಮಂತರಾದ, ನರಶ್ರೇಷ್ಠರಾದ ದ್ರೋಣರು ರಥಮಾರ್ಗಗಳಲ್ಲಿ ನರ್ತನಮಾಡುತ್ತಿರುವರೋ ಎಂಬಂತೆ ಬಾಣಗಳನ್ನು ಅವಿಚ್ಛಿನ್ನವಾಗಿ ಸುರಿಸುತ್ತಾ ಪಾಂಚಾಲರ ಸೈನ್ಯವನ್ನು ಪ್ರವೇಶಿಸಿದರು. ಆಚಾರ್ಯದ್ರೋಣರು ಪರಮಕ್ರುದ್ಧರಾಗಿ ಅಗ್ನಿದೇವನಂತೆಯೇ ಪಾಂಚಾಲರ ರಥಸಮೂಹಗಳನ್ನು ಬಾಣಗಳಿಂದ ಭಸ್ಮಮಾಡಿಬಿಟ್ಟರು. ಅಂತಹವರು ಮೃತ್ಯುವಶರಾದುದು ಹೇಗೆ? ಸಂಜಯ! ಶತ್ರು ಗಳು ಏಕಾಗ್ರತೆಯಿಂದ ಯುದ್ಧಮಾಡುತ್ತಿದ್ದರೆಂದೂ, ಅವರು ಯಾವಾಗಲೂ ಪರಾಜಿತರಾಗುತ್ತಿರಲಿಲ್ಲವೆಂದೂ, ಪರಮಹೃಷ್ಟರಾಗಿಯೂ ಉತ್ಸಾಹಿಗಳಾಗಿಯೂ ಇರುತ್ತಿದ್ದರೆಂದೂ ನೀನು ಹೇಳುವೆ. ಆದರೆ ನಮ್ಮ ಕಡೆಯ

ಸೈನಿಕರ ವಿಷಯದಲ್ಲಿ ನೀನು ಇಂತಹ ಮಾತುಗಳನ್ನು ಹೇಳುತ್ತಲೇ ಇಲ್ಲ. ನಮ್ಮ ಕಡೆಯ ಯೋಧರೆಲ್ಲರೂ ಹತರಾದರೆಂದೂ, ಛಿನ್ನ-ಭಿನ್ನರಾದರೆಂದೂ, ಚದುರಿಹೋದರೆಂದೂ ರಥಿಗಳೆಲ್ಲರೂ ಯುದ್ಧದಲ್ಲಿ ರಥಹೀನರಾಗಿ ಮಾಡಲ್ಪಟ್ಟರೆಂದೂ ಬಾರಿ-ಬಾರಿಗೂ ಹೇಳುತ್ತಲೇ ಇರುವೆ. (ಒಮ್ಮೆ ಯಾದರೂ ನಮ್ಮ ಪಕ್ಷದವರು ಗೆದ್ದರೆಂದೂ ಹರ್ಷಿತರಾಗಿದ್ದರೆಂದೂ ಹೇಳಬಾರದೆ? )"

"ಮಹಾರಾಜ! ಯುದ್ಧಮಾಡಬೇಕೆಂದು ಇಚ್ಛಿಸಿದ್ದ ದ್ರೋಣರ ಅಭಿ ಪ್ರಾಯವನ್ನು ತಿಳಿದು ಆ ರಾತ್ರಿಯಲ್ಲಿ ದುರ್ಯೋಧನನು ತನ್ನ ವಶವರ್ತಿ ಗಳಾದ ಅನುಜರನ್ನೂ ಕರ್ಣ, ವೃಷಸೇನ, ಮದ್ರರಾಜನಾದ ಶಲ್ಯ, ದುರ್ಧರ್ಷ, ದೀರ್ಘಬಾಹು–ಇವರನ್ನೂ ಮತ್ತು ಇನ್ನೂ ಇತರ ತನ್ನ ಅನು ಯಾಯಿಗಳನ್ನೂ ಕುರಿತು ಹೇಳಿದನು : "ನೀವೆಲ್ಲರೂ ಪ್ರಯತ್ನಪೂರ್ವಕವಾಗಿ ನಿಮ್ಮಲ್ಲಿರುವ ಪರಾಕ್ರಮವನ್ನು ಪ್ರದರ್ಶಿಸುತ್ತಾ ದ್ರೋಣರ ರಥದ ಹಿಂಭಾಗದಲ್ಲಿದ್ದುಕೊಂಡು ಅವರನ್ನು ರಕ್ಷಿಸಿರಿ. ಕೃತವರ್ಮನು ರಥದ ಬಲಚಕ್ರವನ್ನೂ, ಶಲ್ಯನು ಎಡಚಕ್ರವನ್ನೂ ರಕ್ಷಿಸಲಿ."

ಮಹಾರಾಜ! ತ್ರಿಗರ್ತರಲ್ಲಿ ಅಳಿದುಳಿದಿದ್ದ ಮಹಾರಥರನ್ನೂ ದುರ್ಯೋಧನನು ದ್ರೋಣರ ರಥದ ಮುಂಭಾಗದಲ್ಲಿ ಹೋಗುವಂತೆ ಪ್ರಚೋದಿಸಿದನು. ಪುನಃ ದುರ್ಯೋಧನನು ಮಹಾರಥರಿಗೆ ಹೇಳಿದನು :

"ಆಚಾರ್ಯರು ಶತ್ರುಗಳನ್ನು ಜಯಿಸಲು ಪ್ರಯತ್ನಶೀಲರಾಗಿದ್ದಾರೆ. ಪಾಂಡವರೂ ಇನ್ನೂ ವಿಶೇಷವಾಗಿ ವಿಜಯವನ್ನು ಗಳಿಸಿಕೊಳ್ಳಲು ಪ್ರಯತ್ನ ಮಾಡುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ನೀವೆಲ್ಲರೂ ಸಂಪೂರ್ಣಪ್ರಯತ್ನ ದಿಂದ ಯುದ್ಧಭೂಮಿಯಲ್ಲಿ ಶತ್ರುಗಳ ಸಂಹಾರಕಾರ್ಯದಲ್ಲಿ ತೊಡಗುವ ಆಚಾರ್ಯರನ್ನು ಸಂಪರ್ಕಿಸಿರಿ. ದ್ರೋಣರು ಮಹಾಬಲಿಷ್ಠರು ; ಪ್ರತಾಪ ವಂತರು ; ಯುದ್ಧದಲ್ಲಿ ಬಹಳಬೇಗ ಬಾಣಗಳ ಆದಾನ-ಸಂಧಾನ- ಪ್ರಯೋಗಗಳನ್ನು ಮಾಡುವ ಕೈಚಳಕವುಳ್ಳವರು. ಅವರು ಇಚ್ಛಿಸಿದ್ದೇ ಆದರೆ ದೇವತೆಗಳನ್ನಾದರೂ ಜಯಿಸಿಯಾರು. ಹಾಗಿರುವಾಗ ಪಾರ್ಥ-ಸೋಮಕರ ವಿಷಯದಲ್ಲಿ ಹೇಳುವುದೇನಿದೆ? ಮಹಾರಥರಾದ ನೀವೆಲ್ಲರೂ ಸಂಘಟಿತ ರಾಗಿ ಸಂಪೂರ್ಣವಾದ ಪ್ರಯತ್ನದಿಂದ ದ್ರೋಣರನ್ನು ಮಹಾರಥನಾದ,

ಪಾಂಚಾಲರಾಜಕುಮಾರನಾದ ಧೃಷ್ಟದ್ಯುಮ್ನನಿಂದ ರಕ್ಷಿಸಿರಿ. ಧೃಷ್ಟದ್ಯುಮ್ನ ನೊಬ್ಬನನ್ನು ಬಿಟ್ಟು ದ್ರೋಣರನ್ನು ಎದುರಿಸಿ ನಿಲ್ಲುವ ವೀರಯೋಧನನ್ನು ಪಾಂಡವರ ಸೈನ್ಯಗಳಲ್ಲಿ ನಾವು ಕಂಡಿಲ್ಲ. ಆದುದರಿಂದ ಈ ಸಮಯದಲ್ಲಿ ಸರ್ವಪ್ರಕಾರದಿಂದಲೂ ದ್ರೋಣರನ್ನು ರಕ್ಷಿಸುವುದು ನಮ್ಮ ಮುಖ್ಯವಾದ ಕರ್ತವ್ಯವೆಂದು ಭಾವಿಸುತ್ತೇನೆ. ದ್ರೋಣರನ್ನು ನಾವು ಜಾಗರೂಕತೆಯಿಂದ ರಕ್ಷಿಸಿದ್ದೇ ಆದರೆ ನಮ್ಮಿಂದ ಸುರಕ್ಷಿತರಾದ ಅವರು ಪಾಂಡವ-ಸೃಂಜಯ-ಸೋಮಕರನ್ನು ಸಂಹಾರಮಾಡಿಯಾರು. ಯುದ್ಧಭೂಮಿಯಲ್ಲಿ ಎಲ್ಲ ಸೃಂಜ ಯರೂ ದ್ರೋಣರಿಂದ ಹತರಾದನಂತರ ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಸಂಹರಿಸುತ್ತಾನೆ. ಇದರಲ್ಲಿ ಸಂಶಯವಿಲ್ಲ. ಅದೇ ರೀತಿಯಲ್ಲಿ ಮಹಾರಥ ನಾದ ಕರ್ಣನು ಅರ್ಜುನನನ್ನು ಸಂಹರಿಸುತ್ತಾನೆ. ರಣಯಜ್ಞದ ದೀಕ್ಷಿತನಾಗಿ ರುವ ನಾನು ಯುದ್ಧದಲ್ಲಿ ಭೀಮಸೇನನನ್ನು ಜಯಿಸುತ್ತೇನೆ. ಭೀಮಾರ್ಜುನರು ಹತರಾದನಂತರ ಕಳೆಗುಂದಿದ ಉಳಿದ ಪಾಂಡವರನ್ನು ನನ್ನ ಕಡೆಯ ಯೋಧರೇ ಬಲಪೂರ್ವಕವಾಗಿ ಸಂಹರಿಸುತ್ತಾರೆ. ಈ ರೀತಿಯಲ್ಲಿ ಲಭ್ಯ ವಾಗುವ ನನ್ನ ವಿಜಯವು ಶಾಶ್ವತವಾಗಿ ಉಳಿಯುತ್ತದೆ. ಆದುದರಿಂದ ನೀವೆಲ್ಲರೂ ಸೇರಿ ಯುದ್ಧದಲ್ಲಿ ಮಹಾರಥರಾದ ದ್ರೋಣರನ್ನೇ ರಕ್ಷಿಸಿರಿ.”

ಮಹಾರಾಜ! ಹೀಗೆ ಹೇಳಿ ನಿನ್ನ ಮಗನಾದ ದುರ್ಯೋಧನನು ದಾರುಣವಾದ ಆ ಅಂಧಕಾರದಲ್ಲಿ ನಿನ್ನ ಕಡೆಯ ಸೈನಿಕರಿಗೆ–‘ಎಲ್ಲಿ? ಯಾರು? ಹೇಗೆ?’ ಉಪಸ್ಥಿತರಾಗಿರಬೇಕೆಂಬುದರ ಬಗೆಗೆ ಆಜ್ಞೆಮಾಡಿದನು. ಅನಂತರ ಆ ರಾತ್ರಿಯಲ್ಲಿ ಒಬ್ಬರು ಮತ್ತೊಬ್ಬರನ್ನು ಜಯಿಸಬೇಕೆಂಬ ಆಶೆ ಯಿಂದ ಎರಡು ಪಕ್ಷಗಳ ಸೈನಿಕರಿಗೂ ಭಯಂಕರವಾದ ಯುದ್ಧವು ಪ್ರಾರಂಭ ವಾಯಿತು. ಅರ್ಜುನನು ಕೌರವರ ಸೈನ್ಯವನ್ನೂ, ಕೌರವರು ಅರ್ಜುನನನ್ನೂ ನಾನಾವಿಧವಾದ ಶಸ್ತ್ರಗಳ ಸಮೂಹಗಳಿಂದ ಪರಸ್ಪರವಾಗಿ ಪೀಡಿಸತೊಡಗಿ ದರು. ಅಶ್ವತ್ಥಾಮನು ಪಾಂಚಾಲರಾಜನಾದ ದ್ರುಪದನನ್ನೂ, ದ್ರೋಣರು ಸೃಂಜಯರನ್ನೂ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಮುಚ್ಚಿದರು. ಪಾಂಡು-ಪಾಂಚಾಲಯೋಧರಿಗೂ ಮತ್ತು ಕೌರವರಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು. ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದ ಆ ಸಮಯದಲ್ಲಿ ಸೈನ್ಯಸಮೂಹದಲ್ಲಿ ಭಯಂಕರವಾದ ಆರ್ತನಾದವುಂಟಾ

ಯಿತು. ಮಹಾರಾಜ! ನಾವಾಗಲೀ–ನಮ್ಮ ಪೂರ್ವಜರಾಗಲೀ ಅಂತಹ ಭಯಂಕರಯುದ್ಧವನ್ನು ಕಂಡೂ ಇರಲಿಲ್ಲ ; ಕೇಳಿಯೂ ಇರಲಿಲ್ಲ. ಅಂತಹ ಅಷ್ಟೇ ಭಯಂಕರವಾದ ಮತ್ತು ರೌದ್ರವಾದ ಯುದ್ಧವು ಆಗ ನಡೆಯುತ್ತಿದ್ದಿತು.

೧೬೪ನೆಯ ಅಧ್ಯಾಯವು ಮುಗಿಯಿತು.

೧೬೫ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಎರಡೂ ಸೈನ್ಯಗಳ ನಡುವೆ ಭಯಂಕರವಾದ ಯುದ್ಧ: ಕೃತವರ್ಮನು ಯುಧಿಷ್ಠಿರನನ್ನು ಪರಾಜಯಗೊಳಿಸಿದುದು

ಸಂಜಯನು ರಾತ್ರಿಯುದ್ಧದ ವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ :

ಮಹಾರಾಜ! ಸರ್ವಭೂತಕ್ಷಯಕರವಾದ ಮಹಾಭಯಂಕರವಾದ ರಾತ್ರಿಯುದ್ಧವು ನಡೆಯುತ್ತಿರಲಾಗಿ, ಧರ್ಮಪುತ್ರನಾದ ಯುಧಿಷ್ಠಿರನು ಪಾಂಡವರನ್ನೂ, ಪಾಂಚಾಲರನ್ನೂ, ಸೃಂಜಯರನ್ನೂ ಕುರಿತು–'ಬೇಗ ಹೋಗಿರಿ! ನೀವೆಲ್ಲರೂ ದ್ರೋಣರನ್ನು ಸಂಹರಿಸುವ ಇಚ್ಛೆಯನ್ನಿಟ್ಟುಕೊಂಡು ದ್ರೋಣರನ್ನೇ ಆಕ್ರಮಿಸಿರಿ' ಎಂದು ಆಜ್ಞಾಪಿಸಿದನು.

ರಾಜನ ಮಾತಿನಂತೆ ಪಾಂಚಾಲ-ಸೃಂಜಯರು ಭಯಂಕರವಾಗಿ ಗರ್ಜನೆಮಾಡುತ್ತಾ ದ್ರೋಣರನ್ನೇ ಆಕ್ರಮಿಸಿದರು. ಅಸಹನೆಯಿಂದ ಕೂಡಿದ್ದ ಆ ಯೋಧರು ತಮ್ಮ ಶಕ್ತಿಯಿದ್ದಷ್ಟು ಮತ್ತು ಪರಾಕ್ರಮವಿದ್ದಷ್ಟು ಉತ್ಸಾಹದಿಂದ ಕೂಡಿ ಯುದ್ಧಮಾಡುತ್ತಾ ದ್ರೋಣರ ಗರ್ಜನೆಗೆ ಪ್ರತಿಯಾಗಿ ಗರ್ಜನೆಮಾಡುತ್ತಾ ಅವರನ್ನು ಆಕ್ರಮಿಸಿದರು. ಮದಿಸಿದ ಸಲಗವು ಮತ್ತೊಂದು ಮದಿಸಿದ ಸಲಗದೊಡನೆ ಸೆಣೆಸಾಡಲು ಹೋಗುವಂತೆ–ದ್ರೋಣರ ಬಳಿಗೆ ಬರುತ್ತಿದ್ದ ಯುಧಿಷ್ಠಿರನನ್ನು ಹೃದೀಕಪುತ್ರನಾದ ಕೃತವರ್ಮನು ತಡೆದನು. ರಣರಂಗದ ಸುತ್ತಲೂ ಬಾಣಗಳನ್ನು ಎರಚುತ್ತಿದ್ದ ಸಾತ್ಯಕಿಯನ್ನು ಕುರುವಂಶಜನಾದ ಭೂರಿಯು ಆಕ್ರಮಿಸಿದನು. ದ್ರೋಣರ ಬಳಿಗೆ ಹೋಗಲಿಚ್ಛಿಸಿ ವೇಗವಾಗಿ ಬರುತ್ತಿದ್ದ ಮಹಾರಥನಾದ ಸಹದೇವನನ್ನು ಕರ್ಣನು ತಡೆದುನಿಲ್ಲಿಸಿದನು. ಬಾಯ್ದೆರೆದ ಯಮರಾಜನಂತೆ ಅಥವಾ

ಶತ್ರುಪಕ್ಷಕ್ಕೆ ಸೇರಿದ ಮೃತ್ಯುದೇವತೆಯಂತೆ ದ್ರೋಣರ ಸಮೀಪಕ್ಕೆ ರಭಸದಿಂದ ಬರುತ್ತಿದ್ದ ಭೀಮಸೇನನನ್ನು ರಾಜನಾದ ದುರ್ಯೋಧನನೇ ತಡೆದನು. ಸರ್ವಯುದ್ಧವಿಶಾರದನಾದ ಯೋಧಶ್ರೇಷ್ಠನಾದ ನಕುಲನನ್ನು ಸುಬಲನ ಮಗನಾದ ಶಕುನಿಯು ತ್ವರೆಯಿಂದ ಬಂದು ತಡೆದನು. ರಥಿಗಳಲ್ಲಿ ಶ್ರೇಷ್ಠನಾದ ಶಿಖಂಡಿಯು ರಥದಲ್ಲಿ ಕುಳಿತು ದ್ರೋಣರ ಸಮೀಪಕ್ಕೆ



ಬರುತ್ತಿರುವುದನ್ನು ಕಂಡು ಶರದ್ವಂತರ ಮಕ್ಕಳಾದ ಕೃಪರು ತಡೆದು ನಿಲ್ಲಿಸಿದರು. ನವಿಲಿನ ಬಣ್ಣದ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತು ದ್ರೋಣರ ಬಳಿಗೆ ಬರುತ್ತಿದ್ದ ಪ್ರತಿವಿಂಧ್ಯನನ್ನು ದುಃಶಾಸನನು ಪ್ರಯತ್ನಪೂರ್ವಕವಾಗಿ ತಡೆದನು. ದ್ರೋಣರ ಸಮೀಪಕ್ಕೆ ಬರುತ್ತಿದ್ದ, ಮಾಯೆಗಳ

ನೂರಾರು ಪ್ರಯೋಗದಲ್ಲಿ ಕುಶಲನಾದ, ಭೀಮಸೇನನ ಮಗನಾದ ಘಟೋ ತ್ಕಚರಾಕ್ಷಸನನ್ನು ಅಶ್ವತ್ಥಾಮನು ತಡೆದನು. ದ್ರೋಣರ ಸಮೀಪಕ್ಕೆ ಹೋಗ ಲಿಚ್ಛಿಸಿದ್ದ, ಮಹಾರಥನಾದ, ಸಸೈನ್ಯನಾದ, ಸಾನುಚರನಾದ ದ್ರುಪದನನ್ನು ಕರ್ಣನ ಮಗನಾದ ವೃಷಸೇನನು ತಡೆದನು. ದ್ರೋಣರನ್ನು ವಧಿಸುವ ಇಚ್ಛೆಯಿಂದ ವೇಗವಾಗಿ ಬರುತ್ತಿದ್ದ ವಿರಾಟನನ್ನು ಸಂಕ್ರುದ್ಧನಾದ ಮದ್ರರಾಜ ನಾದ ಶಲ್ಯನು ತಡೆದನು. ದ್ರೋಣರ ವಧೆಗಾಗಿ ವೇಗವಾಗಿ ಬರುತ್ತಿದ್ದ ನಕುಲನ ಮಗನಾದ ಶತಾನೀಕನನ್ನು ಚಿತ್ರಸೇನನು ಬಾಣಗಳ ಪ್ರಯೋಗದಿಂದ ತಡೆದು ನಿಲ್ಲಿಸಿದನು. ಯೋಧಶ್ರೇಷ್ಠನಾದ, ಮಹಾರಥನಾದ, ದ್ರೋಣರ ಬಳಿಗೆ ವೇಗವಾಗಿ ಹೋಗುತ್ತಿದ್ದ ಅರ್ಜುನನನ್ನು ರಾಕ್ಷಸೇಂದ್ರನಾದ ಅಲಂಬುಷನು ತಡೆದು ನಿಲ್ಲಿಸಿದನು.

ಇದೇ ರೀತಿಯಲ್ಲಿ ಶತ್ರುಗಳನ್ನು ಧ್ವಂಸಮಾಡುತ್ತಿದ್ದ, ಮಹಾಧನು ಷ್ಮಂತರಾದ, ಹರ್ಷೋತ್ಸಾಹದಿಂದ ಯುಕ್ತರಾಗಿದ್ದ ದ್ರೋಣರನ್ನು ಪಾಂಚಾಲ ರಾಜಕುಮಾರನಾದ ಧೃಷ್ಟದ್ಯುಮ್ನನು ಅವರು ಮುಂದೆ ಹೋಗದಂತೆ ತಡೆ ದನು. ದ್ರೋಣರ ಸಮೀಪಕ್ಕೆ ರಭಸದಿಂದ ಬರುತ್ತಿದ್ದ ಪಾಂಡವರ ಕಡೆಯ ಇನ್ನೂ ಅನೇಕಮಹಾರಥರನ್ನು ನಿನ್ನ ಕಡೆಯ ರಥಿಕರು ಬಲಪೂರ್ವಕವಾಗಿ ತಡೆದು ನಿಲ್ಲಿಸಿದರು. ಆ ಮಹಾಯುದ್ಧದಲ್ಲಿ ನೂರಾರು-ಸಾವಿರಾರು ಗಜಾ ರೋಹಿಗಳು ಬಹಳ ಶೀಘ್ರವಾಗಿ ಎದುರು ಪಕ್ಷದ ಗಜಾರೋಹಿಗಳೊಡನೆ ಯುದ್ಧದಲ್ಲಿ ತೊಡಗಿ ಪರಸ್ಪರವಾಗಿ ಧ್ವಂಸಮಾಡುತ್ತಿದ್ದರು. ಮಹಾರಾಜ! ಆ ರಾತ್ರಿಯ ಯುದ್ಧದಲ್ಲಿ ಕುದುರೆಗಳು (ಅಶ್ವಸೈನಿಕರು) ಪರಸ್ಪರವಾಗಿ ದಾಳಿ ನಡೆಸಲು ಧಾವಿಸುತ್ತಿದ್ದುವು. ಅದನ್ನು ನೋಡಿದರೆ ರೆಕ್ಕೆಗಳುಳ್ಳ ಪರ್ವತಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಧಾವಿಸುತ್ತಿರುವಂತೆಯೇ ಭಾಸ ವಾಗುತ್ತಿದ್ದಿತು. ಅಶ್ವಾರೋಹಿಗಳು ಅಶ್ವಾರೋಹಿಗಳೊಡನೆ ಪ್ರಾಸ-ಶಕ್ತ್ಯಾ ಯುಧ ಋಷ್ಟಿಗಳನ್ನು ಕೈಗಳಲ್ಲಿ ಹಿಡಿದು ಗರ್ಜನೆಮಾಡುತ್ತಾ ಪ್ರತ್ಯೇಕ-ಪ್ರತ್ಯೇಕವಾಗಿ ಯುದ್ಧದಲ್ಲಿ ತೊಡಗಿದರು. ರಣಾಂಗಣದಲ್ಲಿದ್ದ ಬಹು ಸಂಖ್ಯಾತರಾದ ಪದಾತಿಗಳು ಗದೆಗಳಿಂದಲೂ, ಮುಸಲಗಳಿಂದಲೂ, ನಾನಾ ವಿಧವಾದ ಶಸ್ತ್ರಗಳಿಂದಲೂ ಪರಸ್ಪರವಾಗಿ ಹೋರಾಡಲು ತೊಡಗಿದರು. ಎತ್ತರವಾದ ಅಲೆಗಳಿಂದ ಕೂಡಿ ಮೇಲಕ್ಕೆ ಬರುತ್ತಿರುವ ಸಮುದ್ರವನ್ನು ತೀರ

ಪ್ರದೇಶವು ತಡೆಯುವಂತೆ–ಕೃತವರ್ಮನು ಯುಧಿಷ್ಠಿರನನ್ನು ತಡೆದು ನಿಲ್ಲಿಸಿದನು. ಯುಧಿಷ್ಠಿರನು ಹಾರ್ದಿಕ್ಯನನ್ನು ಶೀಘ್ರವಾಗಿ ಹೋಗುವ ಐದು ಬಾಣಗಳಿಂದ ಪ್ರಹರಿಸಿ ನಿಲ್ಲು-ನಿಲ್ಲೆಂದು ಹೇಳುತ್ತಾ, ಪುನಃ ಇಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಪರಮಕ್ರುದ್ಧನಾಗಿದ್ದ ಕೃತವರ್ಮನು ಧರ್ಮಪುತ್ರನ ಧನುಸ್ಸನ್ನು ಭಲ್ಲದಿಂದ ಕತ್ತರಿಸಿ ಪುನಃ ಏಳು ಬಾಣಗಳಿಂದ ಅವನನ್ನು ಪ್ರಹರಿಸಿದನು. ಮಹಾರಥನಾದ ಯುಧಿಷ್ಠಿರನು ಒಡನೆಯೇ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ಹತ್ತು ಬಾಣಗಳಿಂದ ಹಾರ್ದಿಕ್ಯನ ವಕ್ಷಃಸ್ಥಳವನ್ನೂ ಮತ್ತು ತೋಳುಗಳನ್ನೂ ಪ್ರಹರಿಸಿದನು. ಧರ್ಮಪುತ್ರನ ಬಾಣಗಳಿಂದ ಗಾಯಗೊಂಡ ಕೃತವರ್ಮನು ಕೋಪೋದ್ರೇಕದಿಂದ ನಡುಗಿಹೋದನು. ಕೂಡಲೇ ಏಳು ಬಾಣಗಳಿಂದ ಯುಧಿಷ್ಠಿರನನ್ನು ಗಾಯಗೊಳಿಸಿದನು. ಒಡನೆಯೇ ಯುಧಿಷ್ಠಿರನು ಕೃತವರ್ಮನ ಧನುಸ್ಸನ್ನೂ ಮತ್ತು ಕೈಚೀಲವನ್ನೂ ಕತ್ತರಿಸಿ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಐದು ಬಾಣಗಳನ್ನು ಹಾರ್ದಿಕ್ಯನ ಮೇಲೆ ಪ್ರಯೋಗಿಸಿದನು. ಆ ಐದು ಬಾಣಗಳೂ ಸುವರ್ಣದಿಂದ ಚಿತ್ರಿತವಾಗಿದ್ದು, ಬಹುಮೂಲ್ಯವಾಗಿದ್ದ ಕೃತವರ್ಮನ ಕವಚವನ್ನು ಭೇದಿಸಿಕೊಂಡು–ಸರ್ಪಗಳು ಹುತ್ತವನ್ನು ಹೊಗುವಂತೆ–ಭೂಮಿಯನ್ನು ಕೊರೆದುಕೊಂಡು ಒಳನುಗ್ಗಿದುವು. ಕೃತವರ್ಮನು ರೆಪ್ಪೆಗಳನ್ನು ಹೊಡೆಯುವುದರೊಳಗಾಗಿ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಯುಧಿಷ್ಠಿರನನ್ನು ಅರುವತ್ತು ಬಾಣಗಳಿಂದಲೂ, ಅವನ ಸಾರಥಿಯನ್ನು ಒಂಬತ್ತು ಬಾಣಗಳಿಂದಲೂ ಪ್ರಹರಿಸಿದನು. ಆಗ ಮಹಾತ್ಮನಾದ ಯುಧಿಷ್ಠಿರನು ತನ್ನ ಮಹಾಧನುಸ್ಸನ್ನು ರಥದಲ್ಲಿರಿಸಿ ಸರ್ಪೋಪಮವಾಗಿದ್ದ ಶಕ್ತ್ಯಾಯುಧವನ್ನು ಹಾರ್ದಿಕ್ಯನ ಮೇಲೆ ರಭಸದಿಂದ ಎಸೆದನು. ಸುವರ್ಣದಿಂದ ಚಿತ್ರಿತವಾಗಿದ್ದ, ಬಹಳ ದೊಡ್ಡದಾಗಿದ್ದ, ಯುಧಿಷ್ಠಿರನಿಂದ ಎಸೆಯಲ್ಪಟ್ಟ ಆ ಶಕ್ತ್ಯಾಯುಧವು ಹಾರ್ದಿಕ್ಯನ ಬಲತೋಳನ್ನು ಭೇದಿಸಿಕೊಂಡು ಭೂಮಿಯನ್ನು ಪ್ರವೇಶಿಸಿತು. ಈ ಸಮಯದಲ್ಲಿ ಯುಧಿಷ್ಠಿರನು ಪುನಃ ಧನುಸ್ಸನ್ನು ಕೈಗೆತ್ತಿಕೊಂಡು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಹಾರ್ದಿಕ್ಯನನ್ನು ಮುಚ್ಚಿದನು. ಅನಂತರ ವೃಷ್ಣಿ

ಶ್ರೇಷ್ಠನಾದ, ಶೂರನಾದ, ಮಹಾರಥನಾದ ಕೃತವರ್ಮನು ನಿಮೇಷಾರ್ಧ ದಲ್ಲಿ ಯುಧಿಷ್ಠಿರನನ್ನು ಅಶ್ವರಹಿತನನ್ನಾಗಿಯೂ, ಸೂತನಿಂದ ರಹಿತನನ್ನಾ ಗಿಯೂ ರಥದಿಂದ ಹೀನನನ್ನಾಗಿಯೂ ಮಾಡಿದನು (ಅಶ್ವಗಳನ್ನೂ ಸಾರಥಿ ಯನ್ನೂ ಸಂಹರಿಸಿದನು). ಅನಂತರ ಪಾಂಡವಜ್ಯೇಷ್ಠನಾದ ಯುಧಿಷ್ಠಿರನು ಖಡ್ಗವನ್ನೂ-ಗುರಾಣಿಯನ್ನೂ ಕೈಗಳಲ್ಲೆತ್ತಿಕೊಂಡನು. ಅವುಗಳನ್ನೂ ಸಹ ಮಾಧವನು ನಿಶಿತವಾದ ಬಾಣಗಳಿಂದ ಕತ್ತರಿಸಿದನು. ಒಡನೆಯೇ ಯುಧಿಷ್ಠಿ ರನು ಚಿನ್ನದ ದಂಡದಿಂದ ಕೂಡಿದ್ದ ದುರಾಸದವಾದ ತೋಮರವನ್ನು ಕೈಗೆತ್ತಿಕೊಂಡು ಹಾರ್ದಿಕ್ಯನ ಮೇಲೆ ಬಹಳ ರಭಸದಿಂದ ಪ್ರಯೋಗಿಸಿದನು. ಯುಧಿಷ್ಠಿರನ ಭುಜದಿಂದ ಚ್ಯುತವಾದ, ರಭಸದಿಂದ ತನ್ನ ಮೇಲೆ ಬೀಳಲು ಬರುತ್ತಿದ್ದ ತೋಮರವನ್ನು ಸಿದ್ಧಹಸ್ತನಾದ ಹಾರ್ದಿಕ್ಯನು ನಗು-ನಗುತ್ತಲೇ ಎರಡು ತುಂಡುಗಳಾಗಿ ಕತ್ತರಿಸಿದನು. ಬಳಿಕ ಕೃತವರ್ಮನು ನೂರಾರು ಬಾಣಗಳಿಂದ ಯುಧಿಷ್ಠಿರನನ್ನು ಮುಚ್ಚಿದನು. ಕ್ರುದ್ಧನಾದ ಹಾರ್ದಿಕ್ಯನು ತೀಕ್ಷ್ಣವಾದ ಬಾಣಗಳಿಂದ ಯುಧಿಷ್ಠಿರನ ಕವಚವನ್ನೂ ಕತ್ತರಿಸಿದನು. ಹಾರ್ದಿಕ್ಯನ ಬಾಣಗಳಿಂದ ಚೂರು-ಚೂರುಗಳಾಗಿ ಕತ್ತರಿಸಲ್ಪಟ್ಟ ಬಹು ಮೂಲ್ಯವಾದ ಆ ಕವಚವು ಆಕಾಶದಿಂದ ನಕ್ಷತ್ರಗಳು ಉದುರುವಂತೆ– ರಣಾಂಗಣದಲ್ಲಿ ಬಿದ್ದು ಚೆಲ್ಲಾಡಿತು. ಧನುಸ್ಸಿನಿಂದಲೂ, ರಥದಿಂದಲೂ, ಕವಚದಿಂದಲೂ ಹೀನನಾಗಿದ್ದ–ಬಾಣಗಳ ಪ್ರಹಾರದಿಂದಲೂ ಬಹಳವಾಗಿ ಗಾಯಗೊಂಡಿದ್ದ ಧರ್ಮಪುತ್ರನಾದ ಯುಧಿಷ್ಠಿರನು ಬಹಳ ಬೇಗ ರಣ ಭೂಮಿಯಿಂದ ಪಲಾಯನಮಾಡಿದನು. ಮಹಾರಾಜ! ಹೀಗೆ ಕೃತವರ್ಮನು ಧರ್ಮಾತ್ಮನಾದ ಯುಧಿಷ್ಠಿರನನ್ನು ಪರಾಜಯಗೊಳಿಸಿ ಮಹಾತ್ಮರಾದ ದ್ರೋಣರ ರಥಚಕ್ರದ ರಕ್ಷಣೆಯಲ್ಲಿಯೇ ನಿರತನಾದನು."

೧೬೫ನೆಯ ಅಧ್ಯಾಯವು ಮುಗಿಯಿತು.

ೱ೬೬ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯು ಭೂರಿಯನ್ನು ಸಂಹರಿಸಿದುದು : ಘಟೋತ್ಕಚ– ಅಶ್ವತ್ಥಾಮರ ಘೋರಯುದ್ಧ: ಭೀಮ–ದುರ್ಯೋಧನರ ಯುದ್ಧ: ದುರ್ಯೋಧನನ ಪಲಾಯನ

ಸಂಜಯನು ರಾತ್ರಿ ಯುದ್ಧದ ವಿವರಣೆಯನ್ನು ಮುಂದುವರಿಸುತ್ತಾನೆ :

“ಮಹಾರಾಜ! ಆನೆಯೊಂದನ್ನು ಅದು ಇರುವ ಸ್ಥಳದಿಂದ ಹೊರಡದಂತೆ ಪ್ರತಿಬಂಧಕಮಾಡುವಂತೆ–ಭೂರಿಯು ದ್ರೋಣರ ಮೇಲೆ ಬೀಳಲಿದ್ದ, ರಥಿಗಳಲ್ಲಿ ಶ್ರೇಷ್ಠನಾದ ಶೈನೇಯನನ್ನು ಮುಂದಕ್ಕೆ ಹೋಗದಂತೆ ತಡೆದು ನಿಲ್ಲಿಸಿದನು. ಅದರಿಂದ ಕ್ರುದ್ಧನಾದ ಸಾತ್ಯಕಿಯು ನಿಶಿತವಾದ ಐದು ಬಾಣಗಳಿಂದ ಭೂರಿಯ ಹೃದಯದಲ್ಲಿ ಪ್ರಹರಿಸಿದನು. ಭೂರಿಯ ವಕ್ಷಃಸ್ಥಳದಿಂದ ರಕ್ತವು ಧಾರಾಕಾರವಾಗಿ ಹೊರಟಿತು. ಅದರಿಂದ ಸ್ವಲ್ಪವೂ ಭ್ರಾಂತನಾಗದ ಭೂರಿಯು ಯುದ್ಧದುರ್ಮದನಾದ ಶೈನೇಯನನ್ನು ನಿಶಿತವಾದ ಹತ್ತು ಬಾಣಗಳಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಕ್ರೋಧದಿಂದ ಕೆಂಗಣ್ಣರಾಗಿದ್ದ ಸಾತ್ಯಕಿ-ಭೂರಿಗಳು ಕೋಪದಿಂದ ತಮ್ಮೆರಡು ಧನುಸ್ಸುಗಳನ್ನೂ ಟೇಂಕರಿಸುತ್ತಾ ಬಾಣಗಳಿಂದ ಪರಸ್ಪರವಾಗಿ ಗಾಯಗೊಳಿಸಿದರು. ಯಮಾಂತಕಸದೃಶರಾಗಿದ್ದ, ಕ್ರುದ್ಧರಾಗಿದ್ದ, ಪರಸ್ಪರವಾಗಿ ಬಾಣಗಳನ್ನು ಸುರಿಸುತ್ತಿದ್ದ ಆ ಇಬ್ಬರ ಶರವೃಷ್ಟಿಯು ಬಹಳ ಭಯಂಕರವಾಗಿದ್ದಿತು. ಇಬ್ಬರೂ ಬಾಣಗಳ ವೃಷ್ಟಿಯಿಂದ ಒಬ್ಬರು ಮತ್ತೊಬ್ಬರನ್ನು ಮುಚ್ಚಿಬಿಟ್ಟರು. ಸ್ವಲ್ಪಹೊತ್ತಿನವರೆಗೆ ಅವರಿಬ್ಬರ ಯುದ್ಧವು ಸಮ-ಸಮವಾಗಿಯೇ ನಡೆಯುತ್ತಿರುವಂತೆ ಕಾಣುತ್ತಿದ್ದಿತು. ಮಹಾರಾಜ! ಅನಂತರ ಕ್ರುದ್ಧನಾದ ಶೈನೇಯನು ನಗು-ನಗುತ್ತಲೇ ಮಹಾತ್ಮನಾದ ಕೌರವ್ಯನ ಧನುಸ್ಸನ್ನು ಕತ್ತರಿಸಿ, ಧನುಸ್ಸಿನಿಂದ ವಿಹೀನನಾಗಿದ್ದ ಭೂರಿಯನ್ನು ನಿಶಿತವಾದ ಒಂಬತ್ತು ಬಾಣಗಳಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿ ನಿಲ್ಲು-ನಿಲ್ಲೆಂದು ಕೂಗಿದನು. ಶತ್ರುತಾಪನನಾದ ಭೂರಿಯು ಬಲಿಷ್ಠನಾದ ಶತ್ರುವಿನಿಂದ ಬಹಳ ಗಾಯಗೊಂಡವನಾಗಿ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಸಾತ್ವತನನ್ನು ಬಾಣಗಳಿಂದ ಪ್ರಹರಿಸಿದನು. ಭೂರಿಯು ನಗು-ನಗುತ್ತಲೇ ಸಾತ್ವತನನ್ನು ಮೂರೇ ಬಾಣಗಳಿಂದ ಪ್ರಹರಿಸಿ ಸುತೀಕ್ಷ್ಣವಾದ ಭಲ್ಲದಿಂದ ಅವನ ಧನುಸ್ಸನ್ನೂ ಕತ್ತರಿಸಿದನು. ಧನುಸ್ಸನ್ನು ಕಳೆದುಕೊಂಡ ಸಾತ್ಯಕಿಯು ಕ್ರೋಧಮೂರ್ಛಿತನಾಗಿ ಮಹಾವೇಗಯುಕ್ತವಾಗಿದ್ದ ಶಕ್ತ್ಯಾಯುಧದಿಂದ ಭೂರಿಯ ವಕ್ಷಃಸ್ಥಳದಲ್ಲಿ ಪ್ರಹರಿಸಿದನು.

ಪ್ರದೀಪ್ತವಾದ ರಶ್ಮಿಗಳನ್ನು ಹೊಂದಿರುವ ಅಂಗಾರಕನು ದೈವವಶಾತ್ ಆಕಾಶದಿಂದ ಬೀಳುವಂತೆ–ಸಾತ್ವತನು ಪ್ರಹರಿಸಿದ ಶಕ್ತ್ಯಾಯುಧದಿಂದ

ಭಿನ್ನಾಂಗನಾದ ಭೂರಿಯು ಶ್ರೇಷ್ಠವಾದ ರಥದಿಂದ ಕೆಳಕ್ಕೆ ಬಿದ್ದನು. ಶೂರ ನಾದ ಭೂರಿಯು ಸಾತ್ಯಕಿಯಿಂದ ಹತನಾದುದನ್ನು ಕಂಡು ಮಹಾರಥನಾದ ಅಶ್ವತ್ಥಾಮನು ಶೈನೇಯನ ಕಡೆಗೆ ಬಹಳ ವೇಗವಾಗಿ ಹೋದನು. ನಿಲ್ಲು-ನಿಲ್ಲೆಂದು ಸಾತ್ಯಕಿಯನ್ನು ಕೂಗಿ ಕರೆಯುತ್ತಿದ್ದ ಅಶ್ವತ್ಥಾಮನು ಮೇರು ಪರ್ವತವನ್ನು ಮೇಘವು ವೃಷ್ಟಿಯಿಂದ ಮುಚ್ಚಿಬಿಡುವಂತೆ–ಬಾಣಗಳ ಸಮೂಹದಿಂದ ಸಾತ್ಯಕಿಯನ್ನು ಮುಚ್ಚಿದನು. ಬಾಣಗಳ ಮಳೆಗರೆಯುತ್ತಾ ಸಾತ್ಯಕಿಯ ರಥದ ಬಳಿಗೆ ವೇಗವಾಗಿ ಬರುತ್ತಿದ್ದ ಕುಪಿತನಾಗಿದ್ದ ಅಶ್ವತ್ಥಾಮ ನನ್ನು ನೋಡಿ ಮಹಾರಥನಾದ ಘಟೋತ್ಕಚನು ಸಿಂಹನಾದಮಾಡಿ ಹೇಳಿ ದನು : "ದ್ರೋಣಪುತ್ರ! ನಿಲ್ಲು! ನಿಲ್ಲು! ನನ್ನಿಂದ ನೀನು ಜೀವಸಹಿತವಾಗಿ ತಪ್ಪಿಸಿಕೊಂಡು ಹೋಗಲಾರೆ. ಮಹಿಷಾಸುರನನ್ನು ಷಣ್ಮುಖನು ಸಂಹರಿಸಿ ದಂತೆ–ನಾನೀಗಲೇ ನಿನ್ನನ್ನು ಸಂಹರಿಸುತ್ತೇನೆ. ಯುದ್ಧದಲ್ಲಿ ನಿನಗಿರುವ ಶ್ರದ್ಧೆಯನ್ನು ಈಗಲೇ ಹೋಗಲಾಡಿಸುತ್ತೇನೆ."

ಮಹಾರಾಜ! ಕೋಪದಿಂದ ಕೆಂಗಣ್ಣನಾಗಿದ್ದ, ಶತ್ರುಹಂತಕನಾದ ಘಟೋತ್ಕಚರಾಕ್ಷಸನು ಹೀಗೆ ಹೇಳಿ–ಸಿಂಹವು ಗಜೇಂದ್ರನನ್ನು ಆಕ್ರಮಿಸು ವಂತೆ–ಅಶ್ವತ್ಥಾಮನನ್ನು ಆಕ್ರಮಿಸಿದನು. ಮೇಘವು ಜಲಧಾರೆಗಳಿಂದ ಪರ್ವತವನ್ನು ತೋಯಿಸುವಂತೆ ಘಟೋತ್ಕಚನು ರಥದ ಅಚ್ಚುಮರದಷ್ಟು ಗಾತ್ರದ ಬಾಣಗಳಿಂದ ರಥಿಶ್ರೇಷ್ಠನಾದ ದ್ರೌಣಿಯನ್ನು ಅಭಿಷೇಚಿಸಿದನು. ಅಶ್ವತ್ಥಾಮನು ನಸುನಗುತ್ತಾ ತನ್ನ ಮೇಲೆ ಬೀಳುತ್ತಿದ್ದ ಶರವೃಷ್ಟಿಯನ್ನು ಸರ್ಪೋಪಮವಾಗಿದ್ದ ಬಾಣಗಳಿಂದ ಬಹಳ ಶೀಘ್ರವಾಗಿ ನಿರಸನಗೊಳಿಸಿ ದನು. ಅನಂತರ ತೀಕ್ಷ್ಣವಾದ, ಮರ್ಮಭೇದಿಗಳಾದ, ಶೀಘ್ರವಾಗಿ ಹೋಗುವ ನೂರು ಬಾಣಗಳಿಂದ ಅರಿಂದಮನಾದ, ರಾಕ್ಷಸೇಂದ್ರನಾದ ಘಟೋತ್ಕಚನನ್ನು ಮುಚ್ಚಿದನು. ರಣರಂಗದಲ್ಲಿ ಅಶ್ವತ್ಥಾಮನು ಬಿಟ್ಟ ಬಾಣ ಗಳಿಂದ ಚುಚ್ಚಲ್ಪಟ್ಟಿದ್ದ ರಾಕ್ಷಸನು ಮುಳ್ಳುಹಂದಿಯಂತೆಯೇ ಪ್ರಕಾಶಿಸಿದನು. ಅನಂತರ ಕೋಪಾವಿಷ್ಟನಾದ, ಪ್ರತಾಪವಂತನಾದ ಘಟೋತ್ಕಚನು ವಜ್ರಾ ಯುಧದ ಮತ್ತು ಸಿಡಿಲಿನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಉಗ್ರವಾದ ಬಾಣಗಳಿಂದ ದ್ರೌಣಿಯನ್ನು ಬಹಳವಾಗಿ ಗಾಯಗೊಳಿಸಿದನು. ಕ್ಷುರಪ್ರ, ಅರ್ಧಚಂದ್ರ, ನಾರಾಚ, ಶಿಲೀಮುಖ, ವರಾಹಕರ್ಣ, ನಾಲೀಕ

ಮತ್ತು ವಿಕರ್ಣ ಇವೇ ಮೊದಲಾದ ಬಾಣಗಳಿಂದ ಘಟೋತ್ಕಚನು ಅಶ್ವತ್ಥಾಮನನ್ನು ಅಭಿಷೇಚಿಸಿದನು. ವಜ್ರಾಶನಿಗಳ ಶಬ್ದಕ್ಕೆ ಸಮಾನವಾದ ಶಬ್ದದಿಂದ ಕೂಡಿದ್ದ ತನ್ನ ಮೇಲೆ ಸತತವಾಗಿ ಬೀಳುತ್ತಿದ್ದ, ಸಹಿಸಿಕೊಳ್ಳಲು ದುಃಸಾಧ್ಯವಾಗಿದ್ದ ಅಗಣಿತವಾದ ಆಯುಧಗಳ ವೃಷ್ಟಿಯನ್ನು, ಅವುಗಳ ಪ್ರಹಾರಗಳಿಂದ ಸ್ವಲ್ಪವಾದರೂ ವ್ಯಥೆಗೊಳ್ಳದಿದ್ದ, ಕ್ರುದ್ಧನಾಗಿದ್ದ, ಮಹಾ ತೇಜಸ್ವಿಯಾದ ಅಶ್ವತ್ಥಾಮನು, ದಿವ್ಯಾಸ್ತ್ರಗಳ ಮಹಾಮಂತ್ರದಿಂದ ಅಭಿಮಂತ್ರಿತವಾಗಿದ್ದ ಸುಘೋರವಾದ ಬಾಣಗಳಿಂದ–ಚಂಡಮಾರುತವು ಮಹಾಮೇಘಗಳನ್ನು ಚದುರಿಸುವಂತೆ–ಧ್ವಂಸಮಾಡಿದನು.

ಮಹಾರಾಜ! ಅನಂತರ ಅಂತರಿಕ್ಷದಲ್ಲಿ ಬಾಣಗಳದ್ದೇ ಒಂದು ಘೋರಯುದ್ಧವು ನಡೆಯುತ್ತಿದೆಯೋ ಎಂಬಂತೆ ಭಾಸವಾಗುತ್ತಿದ್ದಿತು. ಆ ದೃಶ್ಯವು ಯೋಧರಿಗೆ ಹರ್ಷದಾಯಕವಾಗಿದ್ದಿತು. ಅಸ್ತ್ರಗಳ ಪರಸ್ಪರ ಸಂಘರ್ಷಣೆಯಿಂದ ಹುಟ್ಟಿದ ಕಿಡಿಗಳಿಂದ ವ್ಯಾಪ್ತವಾದ ಆಕಾಶವು ಪ್ರದೋಷ ಕಾಲದಲ್ಲಿ ಮಿಣುಕುಹುಳುಗಳಿಂದ ವ್ಯಾಪ್ತವಾಗಿರುವಂತೆಯೇ ಪ್ರಕಾಶಿಸು ತ್ತಿದ್ದಿತು. ನಿನ್ನ ಮಕ್ಕಳಿಗೆ ಪ್ರಿಯವನ್ನುಂಟುಮಾಡುವ ಆಶಯದಿಂದ ದ್ರೌಣಿಯು ಬಾಣಗಳ ಸಮೂಹಗಳಿಂದ ಎಲ್ಲ ದಿಕ್ಕುಗಳನ್ನೂ ಮುಚ್ಚಿ ರಾಕ್ಷಸನನ್ನೂ ಸಹ ಬಾಣಗಳಿಂದ ಮುಚ್ಚಿದನು. ಅನಂತರ ಗಾಢಾಂಧಕಾರ ದಿಂದ ಕೂಡಿದ್ದ ಆ ಮಧ್ಯರಾತ್ರಿಯಲ್ಲಿ ದ್ರೌಣಿ-ರಾಕ್ಷಸರಿಗೆ–ಹಿಂದೆ ಇಂದ್ರ ನಿಗೂ-ಪ್ರಹ್ಲಾದನಿಗೂ ನಡೆದ ಯುದ್ಧದಂತೆ ಘೋರವಾದ ಯುದ್ಧವು ಪ್ರಾರಂಭವಾಯಿತು. ಅನಂತರ ಕ್ರುದ್ಧನಾದ ಘಟೋತ್ಕಚನು ಪ್ರಳಯಕಾಲದ ಅಗ್ನಿಗೆ ಸಮಾನವಾಗಿದ್ದ ಹತ್ತು ಬಾಣಗಳಿಂದ ಅಶ್ವತ್ಥಾಮನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ರಾಕ್ಷಸನ ಉದ್ದವಾಗಿದ್ದ ಬಾಣಗಳಿಂದ ಪ್ರಹೃತನಾದ, ಮಹಾಬಲನಾದ ಅಶ್ವತ್ಥಾಮನು–ಬಿರುಗಾಳಿಯಿಂದ ಅಳ್ಳಾಡಿಸಲ್ಪಟ್ಟ ವೃಕ್ಷೋಪಾದಿಯಲ್ಲಿ–ಅಳ್ಳಾಡಿಹೋದನು. ಸ್ವಲ್ಪಹೊತ್ತು ಪ್ರಜ್ಞೆತಪ್ಪಿದವನಾಗಿ ಧ್ವಜದಂಡವನ್ನು ಹಿಡಿದು ಕುಳಿತನು. ಆ ಸಮಯದಲ್ಲಿ ನಿನ್ನ ಸೈನ್ಯದಲ್ಲಿ ದೊಡ್ಡಹಾಹಾಕಾರವೇ ಉಂಟಾಯಿತು. ನಿನ್ನ ಕಡೆಯ ಸೈನಿಕರೆಲ್ಲರೂ ಅಶ್ವತ್ಥಾಮನು ಹತನಾದನೆಂದೇ ಭಾವಿಸಿದರು. ಹಾಗೆ ಮೂರ್ಛಾವಸ್ಥೆ ಯಲ್ಲಿದ್ದ ಅಶ್ವತ್ಥಾಮನನ್ನು ನೋಡಿ ಪಾಂಚಾಲ-ಸೃಂಜಯರು ಸಿಂಹನಾದ

ಗಳನ್ನು ಮಾಡಿದರು. ಸ್ವಲ್ಪಹೊತ್ತಿನಲ್ಲಿಯೇ ಮಹಾಬಲನಾದ ಶತ್ರುಹಿಂಸಕನಾದ ಅಶ್ವತ್ಥಾಮನು ಮೂರ್ಛೆಯಿಂದ ಎಚ್ಚೆತ್ತವನಾಗಿ ಎಡಗೈಯಿಂದ ಧನುಸ್ಸನ್ನು ಬಗ್ಗಿಸಿ, ಯಮದಂಡೋಪಮವಾಗಿದ್ದ, ಸುಘೋರವಾಗಿದ್ದ, ಶ್ರೇಷ್ಠವಾದ ಒಂದು ಬಾಣವನ್ನು ಧನುಸ್ಸಿನಲ್ಲಿ ಯೋಜಿಸಿ ಶಿಂಜಿನಿಯನ್ನು ಆಕರ್ಣಾಂತವಾಗಿ ಸೆಳೆದು ಘಟೋತ್ಕಚನನ್ನು ಅನುಲಕ್ಷಿಸಿ ಪ್ರಹರಿಸಿದನು. ಅಶ್ವತ್ಥಾಮನು ಪ್ರಯೋಗಿಸಿದ ಶ್ರೇಷ್ಠವಾದ ಮತ್ತು ಉಗ್ರವಾದ ಆ ಬಾಣವು ರಾಕ್ಷಸನ ಹೃದಯವನ್ನು ಭೇದಿಸಿಕೊಂಡು ಹೊರಬಂದು ಗರಿಯ ಸಹಿತವಾಗಿ ಭೂಮಿಯೊಳಗೆ ಸೇರಿಕೊಂಡಿತು. ರಣಶೋಭಿಯಾದ ಅಶ್ವತ್ಥಾಮನಿಂದ ಪ್ರಹೃತನಾದ, ಬಲಿಷ್ಠನಾದ, ರಾಕ್ಷಸೇಂದ್ರನಾದ ಘಟೋತ್ಕಚನು ಬಹಳವಾಗಿ ಗಾಯಗೊಂಡು ಪೀಠದ ಪಕ್ಕದಲ್ಲಿ ಕುಳಿತುಬಿಟ್ಟನು. ಹೈಡಿಂಬನು ವಿಸಂಜ್ಞನಾಗಿರುವುದನ್ನು ಕಂಡು ಅವನ ಸಾರಥಿಯು ಭ್ರಾಂತನಾಗಿ ರಥವನ್ನು ಬಹಳ ಶೀಘ್ರವಾಗಿ ಅಶ್ವತ್ಥಾಮನ ಸಮೀಪದಿಂದ ದೂರಕ್ಕೆ ಒಯ್ದುಬಿಟ್ಟನು. ಮಹಾರಾಜ! ಹೀಗೆ ಮಹಾರಥನಾದ, ದ್ರೋಣಪುತ್ರನಾದ ಅಶ್ವತ್ಥಾಮನು ರಾಕ್ಷಸೇಂದ್ರನಾದ ಘಟೋತ್ಕಚನನ್ನು ಗಾಯಗೊಳಿಸಿ ಪ್ರಜ್ಞಾಹೀನನನ್ನಾಗಿ ಮಾಡಿ ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ನಿನ್ನ ಮಕ್ಕಳಿಂದಲೂ ಮತ್ತು ಸರ್ವಯೋಧರಿಂದಲೂ ಸಂಪೂಜಿತನಾದ ಅಶ್ವತ್ಥಾಮನು ಮಧ್ಯಾಹ್ನಕಾಲದ ಸೂರ್ಯನೋಪಾದಿಯಲ್ಲಿ ಬಹಳವಾಗಿ ಪ್ರಕಾಶಿಸಿದನು.

ದ್ರೋಣರ ರಥದ ಕಡೆಗೆ ರಭಸದಿಂದ ಹೋಗುತ್ತಿದ್ದ, ಯುದ್ಧ ಪರಾಯಣನಾಗಿದ್ದ ಭೀಮಸೇನನನ್ನು ರಾಜನಾದ ದುರ್ಯೋಧನನೇ ತಡೆದು, ನಿಶಿತವಾದ ಬಾಣಗಳಿಂದ ಪ್ರಹರಿಸಿದನು.

ಆಗ ಭೀಮಸೇನನು ಹತ್ತು ಬಾಣಗಳಿಂದ ದುರ್ಯೋಧನನನ್ನು ಪ್ರಹರಿಸಿದನು. ದುರ್ಯೋಧನನೂ ಸಹ ಭೀಮಸೇನನನ್ನು ಇಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಪರಸ್ಪರವಾಗಿ ಬಿಟ್ಟ ಬಾಣಗಳಿಂದ ಮುಚ್ಚಿಹೋಗಿದ್ದ ಭೀಮ-ದುರ್ಯೋಧನರು ಆಕಾಶದಲ್ಲಿ ಮೇಘಗಳ ಸಮೂಹದಿಂದ ಆಚ್ಛಾದಿತರಾದ ಚಂದ್ರ-ಸೂರ್ಯರಂತೆಯೇ ಪ್ರಕಾಶಿಸಿದರು. ಅನಂತರ ದುರ್ಯೋಧನನು ಭೀಮಸೇನನನ್ನು ಐದು ಬಾಣಗಳಿಂದ ಪ್ರಹರಿಸಿ ನಿಲ್ಲು ನಿಲ್ಲೆಂದು ಗರ್ಜನೆಮಾಡಿದನು. ಒಡನೆಯೇ ಭೀಮಸೇನನು ಹತ್ತು ಬಾಣ

ಗಳಿಂದ ದುರ್ಯೋಧನನ ಧನುಸ್ಸನ್ನೂ-ಧ್ವಜವನ್ನೂ ಕತ್ತರಿಸಿ, ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ತೊಂಬತ್ತು ಬಾಣಗಳಿಂದ ಕೌರವಶ್ರೇಷ್ಠನಾದ ದುರ್ಯೋಧನನನ್ನು ಪ್ರಹರಿಸಿದನು. ಬಳಿಕ ಕ್ರುದ್ಧನಾದ, ಭರತಶ್ರೇಷ್ಠನಾದ ದುರ್ಯೋಧನನು ದೊಡ್ಡದಾಗಿದ್ದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ಯುದ್ಧಭೂಮಿಯಲ್ಲಿ ಎಲ್ಲ ಧನುಷ್ಮಂತರೂ ನೋಡುತ್ತಿದ್ದಂತೆಯೇ ಭೀಮಸೇನನನ್ನು ನಿಶಿತವಾದ ಬಾಣಗಳಿಂದ ಪೀಡಿಸಿದನು. ದುರ್ಯೋಧನನ ಧನುಸ್ಸಿನಿಂದ ಚ್ಯುತವಾಗಿ ತನ್ನ ಸಮೀಪಕ್ಕೆ ರಭಸದಿಂದ ಬರುತ್ತಿದ್ದ ಬಾಣ ಗಳನ್ನು ಭೀಮಸೇನನು ನಾಶಗೊಳಿಸಿ ಕೌರವನನ್ನು ಇಪ್ಪತ್ತೈದು ಕ್ಷುದ್ರಕ ಗಳಿಂದ ಪ್ರಹರಿಸಿದನು. ಅದರಿಂದ ಪರಮಕ್ರುದ್ಧನಾದ ದುರ್ಯೋಧನನು ಕ್ಷುರಪ್ರದಿಂದ ಭೀಮಸೇನನ ಧನುಸ್ಸನ್ನು ಕತ್ತರಿಸಿ ಪುನಃ ಹತ್ತು ಬಾಣಗಳಿಂದ ಭೀಮನನ್ನೂ ಪ್ರಹರಿಸಿದನು. ಅನಂತರ ಮಹಾಬಲನಾದ ಭೀಮಸೇನನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ನಿಶಿತವಾದ ಏಳು ಬಾಣಗಳಿಂದ ರಾಜನನ್ನು ಪ್ರಹರಿಸಿದನು. ಹಸ್ತಲಾಘವದಿಂದ ಕೂಡಿರುವ ಕುಶಲನಾದ ಯೋಧನೋಪಾದಿಯಲ್ಲಿ-ದುರ್ಯೋಧನನು ಭೀಮಸೇನನ ಆ ಧನುಸ್ಸನ್ನೂ ಬಹಳಬೇಗ ಕತ್ತರಿಸಿದನು. ವಿಜಯದಿಂದ ಉಲ್ಲಸಿತನಾಗುವ, ಮದೋನ್ಮತ್ತ ನಾದ ನಿನ್ನ ಮಗನು ಭೀಮಸೇನನ ಎರಡನೆಯ, ಮೂರನೆಯ, ನಾಲ್ಕನೆಯ, ಐದನೆಯ ಧನುಸ್ಸನ್ನೂ ಕತ್ತರಿಸಿದನು. ಭೀಮಸೇನನು ಧನುಸ್ಸನ್ನು ಕೈಗೆತ್ತಿ ಕೊಳ್ಳುತ್ತಿದ್ದಂತೆಯೇ ದುರ್ಯೋಧನನು ಅದನ್ನು ಕತ್ತರಿಸಿಬಿಡುತ್ತಿದ್ದನು. ಹೀಗೆ ಕೈಗೆತ್ತಿಕೊಂಡ ಧನುಸ್ಸುಗಳೆಲ್ಲವನ್ನೂ ದುರ್ಯೋಧನನು ಕತ್ತರಿಸುತ್ತಿರ ಲಾಗಿ, ಭೀಮಸೇನನು ಲೋಹಮಯವಾದ, ಸುಂದರವಾಗಿದ್ದ, ಮೃತ್ಯುವಿನ ತಂಗಿಯಂತಿದ್ದ, ಪ್ರದೀಪ್ತವಾಗಿದ್ದ, ಯಜ್ಞೇಶ್ವರನ ಜ್ವಾಲೆಯಂತಿದ್ದ ಶಕ್ತ್ಯಾ ಯುಧವನ್ನು ದುರ್ಯೋಧನನ ಮೇಲೆ ಎಸೆದನು. ಆಕಾಶದಲ್ಲಿ ಬೈತಲೆ ಯಂತೆ ರೇಖೆಯ ವಿನ್ಯಾಸವನ್ನು ಕಲ್ಪಿಸುತ್ತಾ ಬರುತ್ತಿದ್ದ, ಅಗ್ನಿಯ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಆ ಶಕ್ತ್ಯಾಯುಧವು ತನ್ನ ಬಳಿಗೆ ಬರು ವುದಕ್ಕೆ ಮೊದಲೇ ದುರ್ಯೋಧನನು ಅದನ್ನು, ಮಹಾತ್ಮನಾದ ಭೀಮ ಸೇನನೂ ಮತ್ತು ಸರ್ವಯೋಧರೂ ನೋಡುತ್ತಿರುವಂತೆಯೇ ಮೂರು ಬಾಣಗಳಿಂದ ಕತ್ತರಿಸಿದನು. ಬಳಿಕ ಭೀಮಸೇನನು ಬಹಳ ಭಾರವಾಗಿದ್ದ,

ಮಹಾಪ್ರಭೆಯಿಂದ ಕೂಡಿದ್ದ ಗದೆಯನ್ನು ವೇಗವಾಗಿ ತಿರುಗಿಸಿ ದುರ್ಯೋಧನನ ರಥದ ಕಡೆಗೆ ಎಸೆದನು. ಭಾರವಾಗಿದ್ದ ಆ ಗದೆಯು ನಿನ್ನ ಪುತ್ರನ ನಾಲ್ಕು ಕುದುರೆಗಳನ್ನೂ, ಸಾರಥಿಯನ್ನೂ ಮತ್ತು ರಥವನ್ನೂ ಧ್ವಂಸಮಾಡಿತು. ಮಹಾರಾಜ! ಆ ಸಮಯದಲ್ಲಿ ಭೀಮನಿಂದ ಭಯ ಗೊಂಡಿದ್ದ ನಿನ್ನ ಮಗನು ಭೀಮನ ದೃಷ್ಟಿಗೆ ಗೋಚರವಾಗದ ರೀತಿಯಲ್ಲಿ ಮಹಾತ್ಮನಾದ ನಂದಕನ ರಥವನ್ನು ಹತ್ತಿ ಕುಳಿತನು. ಆಗ ಭೀಮಸೇನನು–ಮಹಾರಥನಾದ ನಿನ್ನ ಮಗನು ಮೃತನಾದನೆಂದೇ ಭಾವಿಸಿ–ಆ ಘೋರ ರಾತ್ರಿಯಲ್ಲಿ ಕೌರವರನ್ನು ಹೆದರಿಸುತ್ತಾ ದೊಡ್ಡದಾಗಿ ಸಿಂಹನಾದಮಾಡಿದನು. ನಿನ್ನ ಕಡೆಯ ಯೋಧರೂ ಮತ್ತು ಸೈನಿಕರೂ ದುರ್ಯೋಧನನು ಮೃತನಾದನೆಂದೇ ಭಾವಿಸಿದರು. ಎಲ್ಲ ಸೈನಿಕರು ಎಲ್ಲ ಕಡೆಗಳಿಂದಲೂ, 'ಹಾ ದುರ್ಯೋಧನ! ಹಾ ಗಾಂಧಾರೇ!' ಎಂಬುದಾಗಿ ಕಿರುಚಿಕೊಂಡರು. ಭಯಗೊಂಡಿದ್ದ ನಿನ್ನ ಕಡೆಯ ಎಲ್ಲ ಯೋಧರ ಹಾಹಾಕಾರಗಳನ್ನೂ, ಮಹಾತ್ಮನಾದ ಭೀಮಸೇನನ ವಿಜಯಸೂಚಕವಾದ ಸಿಂಹನಾದವನ್ನೂ ಕೇಳಿ ಯುಧಿಷ್ಠಿರನೂ ಸಹ ದುರ್ಯೋಧನನು ಹತನಾದನೆಂದೇ ಭಾವಿಸಿ ವೇಗ ವಾಗಿ ಭೀಮನಿದ್ದೆಡೆಗೆ ಧಾವಿಸಿದರು. ಇತ್ತಕಡೆ ಪಾಂಚಾಲರೂ, ಕೇಕಯರೂ, ಮತ್ಸ್ಯರೂ, ಸೃಂಜಯರೂ ಸರ್ವಪ್ರಯತ್ನದಿಂದಲೂ ದ್ರೋಣರೊಡನೆಯೇ ಯುದ್ಧಮಾಡಬೇಕೆಂಬ ಇಚ್ಛೆಯಿಂದ ಅವರಿದ್ದೆಡೆಗೆ ಧಾವಿಸಿದರು.

ಅನಂತರ ಘೋರವಾದ ಕತ್ತಲೆಯಲ್ಲಿ ಮುಳುಗಿಹೋಗಿದ್ದ ಮತ್ತು ಪರಸ್ಪರವಾಗಿ ಪ್ರಹರಿಸುತ್ತಿದ್ದ ಯೋಧರಿಗೂ, ದ್ರೋಣರಿಗೂ ಮತ್ತು ಶತ್ರು ಪಕ್ಷದವರಿಗೂ ಮಹಾಯುದ್ಧವು ಪ್ರಾರಂಭವಾಯಿತು."

೧೬೬ನೆಯ ಅಧ್ಯಾಯವು ಮುಗಿಯಿತು.

೧೬೭ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಕರ್ಣನು ಸಹದೇವನನ್ನು ಪರಾಜಯಗೊಳಿಸಿದುದು : ಶಲ್ಯನು ಶತಾನೀಕನನ್ನು ವಧಿಸಿದುದು : ವಿರಾಟನ ಪರಾಜಯ : ಅರ್ಜುನನಿಂದ ಪರಾಜಿತನಾದ ಅಲಂಬುಷನು ಯುದ್ಧವನ್ನು ಬಿಟ್ಟು ಓಡಿಹೋದುದು

ಸಂಜಯನು ರಾತ್ರಿಯಲ್ಲಿ ನಡೆದ ಯುದ್ಧವಾರ್ತೆಯನ್ನು ಮುಂದುವರಿಸುತ್ತಾನೆ :

"ಮಹಾರಾಜ! ದ್ರೋಣರನ್ನು ಅನುಲಕ್ಷಿಸಿ ಬರುತ್ತಿದ್ದ ಸಹದೇವನನ್ನು ವೈಕರ್ತನಕರ್ಣನು ತಡೆದನು. ಸಹದೇವನು ರಾಧೇಯನನ್ನು ಶೀಘ್ರವಾಗಿ ಹೋಗುವ ಒಂಬತ್ತು ಬಾಣಗಳಿಂದ ಪ್ರಹರಿಸಿ ಪುನಃ ಬಗ್ಗಿದ ಗಿಣ್ಣುಗಳಿದ್ದ ಹತ್ತು ಬಾಣಗಳಿಂದಲೂ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಕರ್ಣನು ಬಗ್ಗಿದ ಗಿಣ್ಣುಗಳಿದ್ದ ನೂರು ಬಾಣಗಳಿಂದ ಸಹದೇವನನ್ನು ಪ್ರಹರಿಸಿ, ಕೈಚಳಕವಿರುವ ಕುಶಲನಾದ ಯೋಧನಂತೆ–ಮೌರ್ವಿಯಿಂದ ಕೂಡಿದ್ದ ಸಹದೇವನ ಧನುಸ್ಸನ್ನೂ ಬಹಳ ಶೀಘ್ರವಾಗಿ ಕತ್ತರಿಸಿದನು. ಪ್ರತಾಪವಂತನಾದ ಮಾದ್ರೀಪುತ್ರನು ಒಡನೆಯೇ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಕರ್ಣನನ್ನು ಇಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಕರ್ಣನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಸಹದೇವನ ರಥದ ಕುದುರೆಗಳನ್ನು ಸಂಹರಿಸಿ, ಸಾರಥಿಯನ್ನೂ ಸಹ ಭಲ್ಲ ದಿಂದ ಬಹಳ ಬೇಗ ಯಮಾಲಯಕ್ಕೆ ಕಳುಹಿಸಿಕೊಟ್ಟನು. ರಥಹೀನನಾದ ಸಹದೇವನು ಕತ್ತಿಯನ್ನೂ, ಗುರಾಣಿಯನ್ನೂ ಕೈಗೆತ್ತಿಕೊಂಡನು. ಅವುಗಳನ್ನೂ ಸಹ ಕರ್ಣನು ನಸುನಗುತ್ತಾ ಬಾಣಗಳಿಂದ ಕತ್ತರಿಸಿಹಾಕಿದನು. ಅನಂತರ ಕ್ರುದ್ಧನಾದ ಸಹದೇವನು ಮಹಾಭಾರವೂ ಮಹಾಭಯಂಕರವೂ, ಸುವರ್ಣದಿಂದ ಚಿತ್ರಿತವೂ ಆಗಿದ್ದ ಮಹಾಗದೆಯನ್ನು ವೈಕರ್ತನನ ರಥದ ಕಡೆಗೆ ರಭಸದಿಂದೆಸೆದನು. ಸಹದೇವನಿಂದ ಪ್ರಚೋದಿತನಾದ, ಕ್ಷಣಮಾತ್ರ ದಲ್ಲಿ ತನ್ನ ಮೇಲೆ ಬೀಳುವುದರಲ್ಲಿದ್ದ ಮಹಾಗದೆಯನ್ನು ಕರ್ಣನು ಬಾಣ ಗಳಿಂದ ಸ್ತಂಭನಗೊಳಿಸಿದನು ಮತ್ತು ಅದು ಭೂಮಿಯ ಮೇಲೆ ಬೀಳು ವಂತೆಯೂ ಮಾಡಿದನು. ತಾನು ಪ್ರಯೋಗಿಸಿದ ಗದೆಯೂ ನಿರರ್ಥಕ ವಾದುದನ್ನು ಕಂಡು ಅತ್ಯಂತ ತ್ವರೆಯಿಂದ ಸಹದೇವನು ಕರ್ಣನ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸಿದನು. ಅದನ್ನೂ ಸಹ ಕರ್ಣನು ಬಾಣಗಳಿಂದ ಕತ್ತರಿಸಿದನು. ಆ ಸಮಯದಲ್ಲಿ ಸಹದೇವನು ಸಂಭ್ರಮದೊಡನೆ ತನ್ನ ಶ್ರೇಷ್ಠವಾದ ರಥದಿಂದ ಕೆಳಕ್ಕೆ ಧುಮುಕಿ ಕರ್ಣನು ತನ್ನೆದುರಾಗಿಯೇ ಧನುಷ್ಪಾಣಿಯಾಗಿ ನಿಂತಿರುವುದನ್ನು ನೋಡಿ ರಥದ ಚಕ್ರವನ್ನೇ ತೆಗೆದುಕೊಂಡು ಆಧಿರಥಿಯೆಡೆಗೆ ರಭಸದಿಂದೆಸೆದನು. ಕಾಲಚಕ್ರ ದೋಪಾದಿಯಲ್ಲಿ ತನ್ನ ಮೇಲೆ ಬೀಳಲು ಬರುತ್ತಿದ್ದ ರಥಚಕ್ರವನ್ನು ಕರ್ಣನು

ಅನೇಕ ಸಹಸ್ರ ಬಾಣಗಳಿಂದ ಛಿನ್ನ-ಭಿನ್ನಗೊಳಿಸಿದನು. ಸಹದೇವನು ಪ್ರಯೋಗಿಸಿದ ರಥಚಕ್ರವೂ ಮಹಾತ್ಮನಾದ ಕರ್ಣನಿಂದ ವಿಧ್ವಂಸಿತವಾಗ ಲಾಗಿ–ಈಷಾದಂಡ, ನೊಗಪಟ್ಟಿ, ನಾನಾವಿಧವಾದ ನೊಗಗಳು, ಕತ್ತರಿಸಿ ಬಿದ್ದಿರುವ ಆನೆಗಳ ಶರೀರಗಳು, ಸತ್ತುಹೋಗಿದ್ದ ಕುದುರೆಗಳು, ಸತ್ತುಬಿದ್ದಿದ್ದ ಕಾಲಾಳುಗಳು ರಣರಂಗದಲ್ಲಿ ಕೈಗೆ ಯಾವುದು ಸಿಕ್ಕಿತೋ ಅವೆಲ್ಲವನ್ನೂ ಸಹದೇವನು ಕರ್ಣನ ಕಡೆಗೆ ರಭಸದಿಂದ ಎಸೆಯುತ್ತಿದ್ದನು. ಸಹದೇವನೆಸೆದ ವಸ್ತುಗಳೆಲ್ಲವನ್ನೂ ಕರ್ಣನು ಧ್ವಂಸಮಾಡುತ್ತಿದ್ದನು. ಕಟ್ಟಕಡೆಗೆ ಸಹದೇವನು ತಾನು ಆಯುಧರಹಿತನಾಗಿರುವೆನೆಂಬುದನ್ನು ಮನಗಂಡು ಕರ್ಣನಿಂದ ತಡೆಯಲ್ಪಟ್ಟವನಾಗಿ ರಣರಂಗವನ್ನು ಬಿಟ್ಟು ಹೊರಟುಹೋದನು.

ಮುಹೂರ್ತಪರ್ಯಂತವಾಗಿ ಕರ್ಣನು ಸಹದೇವನನ್ನು ಅಟ್ಟಿಸಿ ಕೊಂಡುಹೋಗಿ ನಸುನಗುತ್ತಾ ಈ ಮಾತುಗಳನ್ನು ಹೇಳಿದನು :

**ಮಾ ಯುಧ್ಯಸ್ವ ರಣೇಽಧೀರ ವಿಶಿಷ್ಟೈರಥಿಭಿಃ ಸಹ ।**
**ಸದೃಶೈರ್ಯುಧ್ಯ ಮಾದ್ರೇಯ ವಚೋ ಮೇ ಮಾ ವಿಶಙ್ಕಿಥಾಃ ॥೧೬॥**

"ಹೇಡಿಯಾದ ಮಾದ್ರೇಯನೇ! ರಣರಂಗದಲ್ಲಿ ನಿನಗಿಂತಲೂ ಅಧಿಕ ಪರಾಕ್ರಮವಿರುವವರೊಡನೆ ಯುದ್ಧಮಾಡಬೇಡ. ನಿನಗೆ ಸಮಾನರಾದವ ರೊಡನೆ ಮಾತ್ರವೇ ಯುದ್ಧಮಾಡು. ಈ ನನ್ನ ಮಾತನ್ನು ಸಂದೇಹಿಸಬೇಡ."

ಮಹಾರಾಜ! ಅನಂತರ ಕರ್ಣನು ತನ್ನ ಧನುಸ್ಸಿನ ಅಗ್ರಭಾಗದಿಂದ ಸಹದೇವನನ್ನು ತಿವಿಯುತ್ತಾ ಪುನಃ ಹೇಳಿದನು :

**ಏಷೋಽರ್ಜುನೋ ರಣೇ ತೂರ್ಣಂ ಯುಧ್ಯತೇ ಕುರುಭಿಃ ಸಹ ।**
**ತತ್ರ ಗಚ್ಛಸ್ವ ಮಾದ್ರೇಯ ಗೃಹಂ ವಾ ಯದಿ ಮನ್ಯಸೇ ॥೧೮॥**

"ಮಾದ್ರೇಯ! ಈ ಅರ್ಜುನನು ರಣರಂಗದಲ್ಲಿ ವೇಗಪೂರ್ವಕವಾಗಿ ಕುರುಗಳೊಡನೆ ಯುದ್ಧಮಾಡುತ್ತಿದ್ದಾನೆ. ಅಲ್ಲಿಗೆ ಹೊರಟುಹೋಗು. ಅಥವಾ ಇದಕ್ಕಿಂತಲೂ ಮನೆಗೆ ಹೋಗುವುದೇ ನಿನಗೆ ಲೇಸೆನ್ನಿಸುವುದಾದರೆ ಮನೆಗಾದರೂ ಹೊರಟುಹೋಗು."

ಮಹಾರಾಜ! ರಥಿಗಳಲ್ಲಿ ಶ್ರೇಷ್ಠನಾದ ಕರ್ಣನು ಹೀಗೆ ಹೇಳಿ ರಥ

ದಲ್ಲಿ ಕುಳಿತು ಪಾಂಚಾಲ-ಪಾಂಡವಸೈನಿಕರನ್ನು ದಹಿಸಿಬಿಡುವನೋ ಎಂಬಂತೆ ಅತ್ತಕಡೆಗೆ ಹೊರಟುಹೋದನು.

**ವಧಂ ಪ್ರಾಪ್ತಂ ತು ಮಾದ್ರೇಯಂ ನಾವಧೀತ್ಸಮರೇಽರಿಹಾ ।**
**ಕುನ್ತ್ಯಾಃ ಸ್ಮೃತ್ವಾ ವಚೋ ರಾಜನ್ಸತ್ಯಸನ್ಧೋ ಮಹಾಯಶಾಃ ॥೨೦॥**

ಆ ಸಮಯದಲ್ಲಿ ಯದ್ಯಪಿ ಸಹದೇವನನ್ನು ಸಂಹರಿಸುವ ಅವಕಾಶ ವನ್ನು ಹೊಂದಿದ್ದರೂ ಸತ್ಯಸಂಧನಾದ, ಮಹಾಯಶೋವಂತನಾದ, ಶತ್ರು ನಿಷೂದನನಾದ ಕರ್ಣನು ಕುಂತಿಯ ಮಾತನ್ನು ಸ್ಮರಿಸುತ್ತಾ ಸಹದೇವನನ್ನು ಸಂಹರಿಸಲಿಲ್ಲ.

ಸಹದೇವನು ಕರ್ಣನ ಬಾಣಗಳಿಂದ ಪೀಡಿತನಾಗಿ ಮಾತುಗಳೆಂಬ ಬಾಣಗಳಿಂದ ಪರಿತಾಪಪಟ್ಟು ಖಿನ್ನಮನಸ್ಕನಾಗಿ ತನ್ನ ಜೀವನದ ವಿಷಯ ದಲ್ಲಿಯೇ ವಿರಕ್ತಿಯನ್ನು ಹೊಂದಿದನು. ಅನಂತರ ಮಹಾರಥನಾದ ಸಹ ದೇವನು ಬಹಳ ತ್ವರೆಯಿಂದ ಮಹಾತ್ಮನಾದ ಪಾಂಚಾಲರಾಜಕುಮಾರನಾದ ಜನಮೇಜಯನ ರಥವನ್ನು ಹತ್ತಿದನು.

ಸಸೈನ್ಯನಾಗಿ ದ್ರೋಣರಿದ್ದೆಡೆಗೆ ತ್ವರೆಯಿಂದ ಬರುತ್ತಿದ್ದ ಧನುಷ್ಮಂತ ನಾದ ವಿರಾಟನನ್ನು ಮದ್ರರಾಜನಾದ ಶಲ್ಯನು ಬಾಣಗಳ ಸಮೂಹಗಳಿಂದ ಮುಚ್ಚಿದನು. ದೃಢಧನ್ವರಾದ ಶಲ್ಯ-ವಿರಾಟರಿಗೆ ಹಿಂದೆ ಜಂಭಾಸುರನಿಗೂ ಮತ್ತು ಇಂದ್ರನಿಗೂ ನಡೆದ ಯುದ್ಧದಂತೆಯೇ ಮಹಾಘೋರವಾದ ಯುದ್ಧವು ನಡೆಯಿತು. ಮದ್ರರಾಜನು ವಾಹಿನೀಪತಿಯಾದ ವಿರಾಟನನ್ನು ಬಗ್ಗಿದ ಗಿಣ್ಣುಗಳಿದ್ದ ನೂರು ಬಾಣಗಳಿಂದ ಬಹಳ ವೇಗವಾಗಿ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ವಿರಾಟನೂ ಶಲ್ಯನನ್ನು ನಿಶಿತವಾದ ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಪುನಃ ಮೂವತ್ತೇಳು ಬಾಣಗಳಿಂದಲೂ ಪ್ರಹರಿಸಿದನು. ಅನಂತರ ಶಲ್ಯನು ವಿರಾಟನ ರಥದ ನಾಲ್ಕು ಕುದುರೆಗಳನ್ನೂ ಸಂಹರಿಸಿ, ಮತ್ತೆರಡು ಬಾಣಗಳಿಂದ ಸೂತನನ್ನು ಸಂಹರಿಸಿ, ಧ್ವಜವನ್ನೂ ಕೆಳಕ್ಕೆ ಕೆಡಹಿದನು. ಮಹಾರಥನಾದ ವಿರಾಟನು ಕುದುರೆಗಳಿಂದ ವಿಹೀನವಾಗಿದ್ದ ರಥದಿಂದ ಬಹಳಬೇಗ ಧುಮುಕಿ ಧನುಸ್ಸನ್ನು ಟೇಂಕರಿಸುತ್ತಾ ನಿಶಿತವಾದ ಬಾಣಗಳನ್ನು ಪುಂಖಾನುಪುಂಖವಾಗಿ ಶಲ್ಯನ

ಮೇಲೆ ಬಿಡುತ್ತಾ ನಿಂತನು. ತನ್ನ ಅಣ್ಣನು ರಥಹೀನನಾಗಿರುವುದನ್ನು ಕಂಡು ಶತಾನೀಕನು ಎಲ್ಲರೂ ನೋಡುತ್ತಿದ್ದಂತೆಯೇ ಶೀಘ್ರವಾಗಿ ತನ್ನ ರಥದಲ್ಲಿ ಕುಳಿತು ಶಲ್ಯನ ಕಡೆಗೆ ಬಂದನು.

ತನ್ನ ಕಡೆಗೆ ರಭಸದಿಂದ ಬರುತ್ತಿದ್ದ *ಶತಾನೀಕನನ್ನು ನೋಡಿ ಮದ್ರ ರಾಜನು ಅನೇಕಬಾಣಗಳಿಂದ ಅವನನ್ನು ಗಾಯಗೊಳಿಸಿ ಯಮನ ಮನೆಗೂ ಕಳುಹಿಸಿಕೊಟ್ಟನು. ತನ್ನ ತಮ್ಮನಾದ ಶತಾನೀಕನು ಸತ್ತುಹೋಗಲಾಗಿ ರಥಶ್ರೇಷ್ಠನಾದ ವಿರಾಟರಾಜನು ಧ್ವಜದಿಂದಲೂ ಮಾಲೆಗಳಿಂದಲೂ ವಿಭೂಷಿತವಾಗಿದ್ದ ಅದೇ ರಥವನ್ನೇ ಬಹಳ ಶೀಘ್ರವಾಗಿ ಹತ್ತಿದನು. ಕೋಪ ದಿಂದ ಇಮ್ಮಡಿಯಾದ ಬಲವನ್ನು ಹೊಂದಿದ್ದ ವಿರಾಟನು ಕಣ್ಣುಗಳನ್ನು ಅಗಲವಾಗಿ ಬಿಟ್ಟುಕೊಂಡು ಮದ್ರರಾಜನ ರಥವನ್ನು ಬಾಣಗಳಿಂದ ತುಂಬಿಸಿ ಬಿಟ್ಟನು. ಅನಂತರ ಕ್ರುದ್ಧನಾದ ಶಲ್ಯನು ಬಗ್ಗಿದ ಗಿಣ್ಣೆದ್ದ ಬಾಣದಿಂದ ವಾಹಿನೀಪತಿಯಾದ ವಿರಾಟನನ್ನು ವಕ್ಷಃಸ್ಥಳದಲ್ಲಿ ಸುದೃಢವಾಗಿ (ಬಹಳ ಆಳದವರೆಗೂ) ಪ್ರಹರಿಸಿದನು. ಶಲ್ಯನು ಬಿಟ್ಟ ಬಾಣದಿಂದ ಬಹಳವಾಗಿ ಗಾಯಗೊಂಡ ವಿರಾಟನು ಪೀಠದ ಪಕ್ಕಕ್ಕೆ ಜರುಗಿದನು ಮತ್ತು ಅಲ್ಲಿಯೇ ಮೂರ್ಛಿತನೂ ಆದನು. ಬಾಣದಿಂದ ಗಾಯಗೊಂಡಿದ್ದ ವಿರಾಟನನ್ನು ಸಾರಥಿಯು ರಣಾಂಗಣದಿಂದ ಬಹಳದೂರಕ್ಕೆ ಒಯ್ದನು. ಅನಂತರ ಆಹವ ಶೋಭಿಯಾದ ಶಲ್ಯನ ನಿಶಿತವಾದ ಬಾಣಗಳಿಂದ ಸತತವಾಗಿ ಪ್ರಹೃತವಾಗು ತ್ತಿದ್ದ ಪಾಂಡವರ ಕಡೆಯ ಮಹಾಸೈನ್ಯವು ಆ ರಾತ್ರಿಯಲ್ಲಿ ದಿಕ್ಕುಗಾಣದೆ ಓಡಿಹೋಯಿತು. ಪಾಂಡವರ ಮಹಾಸೈನ್ಯವು ಓಡಿಹೋಗುತ್ತಿರುವುದನ್ನು ನೋಡಿ ವಾಸುದೇವ-ಧನಂಜಯರು ಶಲ್ಯನಿದ್ದೆಡೆಗೆ ಧಾವಿಸಿದರು. ಆ ವೇಳೆಗೆ ಸರಿಯಾಗಿ ರಾಕ್ಷಸೇಂದ್ರನಾದ ಅಲಂಬುಷನು ಎಂಟು ಚಕ್ರಗಳಿಂದ ಕೂಡಿದ್ದ ಶ್ರೇಷ್ಠವಾದ ರಥದಲ್ಲಿ ಕುಳಿತು ಕೃಷ್ಣಾರ್ಜುನರನ್ನು ಎದುರಿಸಿದನು.

ಆ ರಥವು ಕುದುರೆಗಳ ಮುಖಕ್ಕೆ ಸಮಾನವಾದ ಮುಖಗಳಿಂದ ಕೂಡಿದ್ದ ಭಯಂಕರವಾಗಿ ಕಾಣುತ್ತಿದ್ದ ಪಿಶಾಚಗಳಿಂದ ಎಳೆಯಲ್ಪಡುತ್ತಿದ್ದಿತು.

---

* ವಿರಾಟನಿಗೆ ಶತಾನೀಕ ಎಂಬ ಇಬ್ಬರು ತಮ್ಮಂದಿರು. ಒಬ್ಬನನ್ನು ದ್ರೋಣರು ಸಂಹರಿಸುತ್ತಾರೆ. (೨೧-೨೮ ) ಮತ್ತೊಬ್ಬನನ್ನು ಶಲ್ಯನು ಸಂಹರಿಸುತ್ತಾನೆ.

ರಥವು ರಕ್ತದಿಂದ ನೆನೆಸಲ್ಪಟ್ಟ ಪತಾಕೆಯನ್ನು ಹೊಂದಿದ್ದಿತು. ಕೆಂಪುಮಾಲೆ ಯಿಂದ ಸಮಲಂಕೃತವಾಗಿದ್ದಿತು. ಆ ರಥವು ಸಂಪೂರ್ಣವಾಗಿ ಕಬ್ಬಿಣ ದಿಂದಲೇ ನಿರ್ಮಿತವಾಗಿದ್ದಿತು. ಅತ್ಯಂತಘೋರವಾಗಿ ಕಾಣುತ್ತಿದ್ದಿತು. ಕರಡಿಯ ಚರ್ಮವನ್ನು ಆ ರಥಕ್ಕೆ ಹೊದ್ದಿಸಿದ್ದರು. ಎತ್ತರವಾಗಿದ್ದ ದಂಡದ ಮೇಲೆ ಭಯಂಕರವಾಗಿ ಕಾಣುತ್ತಿದ್ದ ಚಿತ್ರಿತವಾದ ರೆಕ್ಕೆಗಳನ್ನು ಹೊಂದಿದ್ದ ಮತ್ತು ಅಗಲವಾಗಿ ಕಣ್ಣುಗಳನ್ನು ಬಿಟ್ಟುಕೊಂಡಿದ್ದ ಗೃಧ್ರರಾಜನ ಚಿಹ್ನೆಯಿದ್ದ ಧ್ವಜವಿದ್ದಿತು. ಅಲಂಬುಷರಾಕ್ಷಸನು ಕಲ್ಲಿದ್ದಿಲಿನ ರಾಶಿಯಂತೆಯೇ ಪ್ರಕಾಶಿಸು ತ್ತಿದ್ದನು. ಚಂಡಮಾರುತವನ್ನು ಪರ್ವತವು ತಡೆದು ನಿಲ್ಲಿಸುವಂತೆ ಶಲ್ಯನ ಕಡೆಗೆ ರಭಸದಿಂದ ಬರುತ್ತಿದ್ದ ಅರ್ಜುನನ ತಲೆಯ ಮೇಲೆ ನೂರಾರು ಬಾಣಗಳ ಸಮೂಹಗಳನ್ನು ಸುರಿಸಿ ಅವನು ಮುಂದೆ ಹೋಗದಂತೆ ತಡೆ ದನು. ಅರ್ಜುನನಿಗೂ ಮತ್ತು ಅಲಂಬುಷರಾಕ್ಷಸನಿಗೂ ಆ ಸಮಯದಲ್ಲಿ ಅತ್ಯಂತ ತೀಕ್ಷ್ಣವಾದ, ಪ್ರೇಕ್ಷಕರಿಗೆ ಹರ್ಷದಾಯಕವಾಗಿದ್ದ ಮತ್ತು ಗೃಧ್ರ-ಕಾಗೆ-ಬಕಪಕ್ಷಿ-ಗೂಬೆ-ಹದ್ದು ಮತ್ತು ಗುಳ್ಳೇನರಿಗಳಿಗೆ ಮಹಾನಂದಕರವಾಗಿದ್ದ ಮಹಾಯುದ್ಧವು ನಡೆಯಿತು.

ಅರ್ಜುನನು ಅಲಂಬುಷನನ್ನು ನೂರು ಬಾಣಗಳಿಂದ ಪ್ರಹರಿಸಿದನು. ಪುನಃ ನಿಶಿತವಾದ ಒಂಬತ್ತು ಬಾಣಗಳಿಂದ ಅವನ ಧ್ವಜವನ್ನೂ ಕತ್ತರಿಸಿದನು. ಅಲಂಬುಷನ ಸಾರಥಿಯನ್ನು ಮೂರು ಬಾಣಗಳಿಂದಲೂ—ರಥದ ತ್ರಿವೇಣು ವನ್ನು (ಮೂಕಿಯನ್ನು) ಮೂರು ಬಾಣಗಳಿಂದಲೂ ಪ್ರಹರಿಸಿ, ಒಂದು ಬಾಣದಿಂದ ಧನುಸ್ಸನ್ನು ಕತ್ತರಿಸಿ ಪುನಃ ನಾಲ್ಕು ಬಾಣಗಳಿಂದ ಅಲಂಬುಷನ ರಥದ ಕುದುರೆಗಳನ್ನೂ ಸಂಹರಿಸಿದನು. ರಾಕ್ಷಸನು ಮತ್ತೊಂದು ಧನುಸ್ಸ ನ್ನೆತ್ತಿಕೊಂಡು ಹೆದೆಯೇರಿಸಿದನು. ಅದನ್ನೂ ಸಹ ಅರ್ಜುನನು ಎರಡಾಗಿ ಕತ್ತರಿಸಿದನು. ರಥಹೀನನಾಗಿದ್ದ ಅಲಂಬುಷನು ಮೇಲೆತ್ತಿದ್ದ ಕತ್ತಿಯನ್ನೂ ಸಹ ಅರ್ಜುನನು ಎರಡಾಗಿ ಕತ್ತರಿಸಿದನು. ಅನಂತರ ಅರ್ಜುನನು ರಾಕ್ಷಸೇಂದ್ರನಾದ ಅಲಂಬುಷನನ್ನು ನಿಶಿತವಾದ ನಾಲ್ಕು ಬಾಣಗಳಿಂದ ಪ್ರಹರಿಸಿದನು. ಆ ಬಾಣಗಳಿಂದ ಬಹಳವಾಗಿ ಗಾಯಗೊಂಡ ರಾಕ್ಷಸನು ಅರ್ಜುನನ ಭಯದಿಂದಾಗಿ ರಣಾಂಗಣವನ್ನೇ ಬಿಟ್ಟು ಓಡಿಹೋದನು. ಮಹಾರಾಜ! ಹೀಗೆ ಅಲಂಬುಷರಾಕ್ಷಸನನ್ನು ಜಯಿಸಿ ಅರ್ಜುನನು ಗಜಾಶ್ವ-

ಪದಾತಿಸೈನಿಕರ ಮೇಲೆ ಬಾಣಗಳ ಸಮೂಹಗಳನ್ನೇ ಸುರಿಸುತ್ತಾ ಬಹಳ ಬೇಗ ದ್ರೋಣರ ಸಮೀಪಕ್ಕೆ ಹೋದನು. ಯಶೋವಂತನಾದ ಅರ್ಜುನನಿಂದ ಪ್ರಹೃತರಾಗುತ್ತಿದ್ದ ಕೌರವರ ಪಕ್ಷದ ಸೈನಿಕರು–ಚಂಡಮಾರುತದಿಂದ ಬುಡಮೇಲಾದ ವೃಕ್ಷಗಳೋಪಾದಿಯಲ್ಲಿ ಅಸುಗಳನ್ನು ತೊರೆದು ಭೂಮಿಯ ಮೇಲೆ ಬಿದ್ದರು. ಈ ರೀತಿಯಲ್ಲಿ ಮಹಾತ್ಮನಾದ ಪಾರ್ಥನು ನಿನ್ನ ಸೈನಿಕರನ್ನು ಧ್ವಂಸಮಾಡುತ್ತಿರಲಾಗಿ ನಿನ್ನ ಮಗನ ಅಳಿದುಳಿದ ಸೈನಿಕರು ಪಲಾಯನ ಮಾಡಿದರು.”

೧೬೭ನೆಯ ಅಧ್ಯಾಯವು ಮುಗಿಯಿತು.

೧೬೮ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಶತಾನೀಕನು–ಚಿತ್ರಸೇನನನ್ನೂ, ವೃಷಸೇನನು–ದ್ರುಪದನನ್ನೂ ಪರಾಜಯಗೊಳಿಸಿದುದು : ಪ್ರತಿವಿಂಧ್ಯ ಮತ್ತು ದುಃಶಾಸನರ ಯುದ್ಧ

ಸಂಜಯನು ಯುದ್ಧಪ್ರಕರಣವನ್ನು ಮುಂದುವರಿಸಿ ಹೇಳುತ್ತಾನೆ :

“ಮಹಾರಾಜ! ನಾನು ಈ ಹಿಂದೆ ಹೇಳಿದ್ದಂತೆ ನಿನ್ನ ಕಡೆಯ ಸೈನಿಕರನ್ನು ಬಾಣಗಳಿಂದ ಭಸ್ಮಮಾಡುತ್ತಾ ಬಹಳ ಬೇಗ ದ್ರೋಣರ ಕಡೆಗೆ ಧಾವಿಸುತ್ತಿದ್ದ ಶತಾನೀಕನನ್ನು ನಿನ್ನ ಮಗನಾದ ಚಿತ್ರಸೇನನು ತಡೆದನು. ನಕುಲನ ಮಗನಾದ ಶತಾನೀಕನು ಚಿತ್ರಸೇನನನ್ನು ಐದು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ನಿನ್ನ ಮಗನು ನಿಶಿತವಾದ ಹತ್ತು ಬಾಣಗಳಿಂದ ನಾಕುಲಿಯನ್ನು ಪ್ರಹರಿಸಿದನು. ಪುನಃ ಚಿತ್ರಸೇನನು ನಿಶಿತವಾದ ಒಂಬತ್ತು ಬಾಣಗಳಿಂದ ಶತಾನೀಕನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಶತಾನೀಕನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಚಿತ್ರಸೇನನ ಶರೀರದಲ್ಲಿದ್ದ ಕವಚವನ್ನು ಕತ್ತರಿಸಿ ಕೆಳಕ್ಕೆ ಬೀಳಿಸಿದನು. ನಾಕುಲಿಯ ಆ ಕೈಚಳಕವು ನಮಗೆ ಪರಮಾದ್ಭುತವಾಗಿ ಕಂಡಿತು. ಕಾಲವು ಪ್ರಾಪ್ತವಾದಾಗ ಪೊರೆಯನ್ನು ಕಳಚಿದ ಸರ್ಪವು ಪ್ರಕಾಶಿಸುವಂತೆ–ಕವಚದಿಂದ ವಿಹೀನನಾಗಿದ್ದ ನಿನ್ನ ಮಗನು ಬಹಳವಾಗಿ ಪ್ರಕಾಶಿಸಿದನು. ಅನಂತರ ನಾಕುಲಿಯು ನಿಶಿತವಾದ ಬಾಣಗಳಿಂದ ಚಿತ್ರಸೇನನ ಧ್ವಜವನ್ನು ಕತ್ತರಿಸಿದನು. ಪುನಃ ಶತಾ

ನೀಕನು ವಿಜಯಗಳಿಸಲು ಸತತವಾಗಿ ಪ್ರಯತ್ನಿಸುತ್ತಿದ್ದ ಚಿತ್ರಸೇನನ ಧನುಸ್ಸನ್ನೂ ಕತ್ತರಿಸಿದನು. ಧನುಸ್ಸನ್ನೂ ಮತ್ತು ಕವಚವನ್ನೂ ಕಳೆದುಕೊಂಡಿದ್ದ ಮಹಾರಥನಾದ ಚಿತ್ರಸೇನನು ಶತ್ರುಗಳನ್ನು ಸೀಳಿಹಾಕುವಷ್ಟು ಬಲವಾಗಿದ್ದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡನು. ಭರತವಂಶದ ಮಹಾರಥನಾದ ಚಿತ್ರಸೇನನು ಪರಮಕ್ರುದ್ಧನಾಗಿ ಶತಾನೀಕನನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಅದರಿಂದ ಶತಾನೀಕನು ಪರಮಕ್ರುದ್ಧನಾಗಿ ಚಿತ್ರಸೇನನ ನಾಲ್ಕು ಕುದುರೆಗಳನ್ನೂ ಮತ್ತು ಸಾರಥಿಯನ್ನೂ ಸಂಹರಿಸಿದನು. ಒಡನೆಯೇ ಮಹಾರಥನಾದ, ಬಲಿಷ್ಠನಾದ ಚಿತ್ರಸೇನನು ರಥದಿಂದ ಕೆಳಕ್ಕೆ ಧುಮುಕಿ ನಾಕುಲಿಯನ್ನು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದನು. ರಥದ ಕೆಳಗೆ ನಿಂತಿದ್ದರೂ ಇಪ್ಪತ್ತೈದು ಬಾಣಗಳಿಂದ ತನ್ನನ್ನು ಪ್ರಹರಿಸಿದುದಕ್ಕಾಗಿ ಕೋಪಗೊಂಡ ಶತಾನೀಕನು ಅರ್ಧಚಂದ್ರವೆಂಬ ಬಾಣದಿಂದ ರತ್ನಭೂಷಿತವಾಗಿದ್ದ ಚಿತ್ರಸೇನನ ಧನುಸ್ಸನ್ನು ಕತ್ತರಿಸಿದನು. ಧನುಸ್ಸಿನಿಂದಲೂ, ರಥದಿಂದಲೂ, ಅಶ್ವ-ಸಾರಥಿಗಳಿಂದಲೂ ವಿಹೀನನಾಗಿದ್ದ ಚಿತ್ರಸೇನನು ಒಡನೆಯೇ ಮಹಾತ್ಮನಾದ ಹಾರ್ದಿಕ್ಯನ ರಥಕ್ಕೆ ಹತ್ತಿದನು.

ವೃಷಸೇನನು ದ್ರೋಣರ ಬಳಿಗೆ ಹೋಗುವ ಇಚ್ಛೆಯಿಂದ ಸಸೈನ್ಯನಾಗಿ ಹೋಗುತ್ತಿದ್ದ ಮಹಾರಥನಾದ ದ್ರುಪದನ ಮೇಲೆ ನೂರಾರು ಬಾಣಗಳನ್ನು ಸುರಿಸುತ್ತಾ ಅವನನ್ನು ಆಕ್ರಮಿಸಿದನು. ಯಜ್ಞಸೇನನು ಮಹಾರಥನಾದ ವೃಷಸೇನನನ್ನು ಅರುವತ್ತು ಬಾಣಗಳಿಂದ ವಕ್ಷಃಸ್ಥಳದಲ್ಲಿಯೂ ಮತ್ತು ತೋಳುಗಳಲ್ಲಿಯೂ ಪ್ರಹರಿಸಿದನು. ಅದರಿಂದ ಪರಮಕ್ರುದ್ಧನಾದ ವೃಷಸೇನನು ರಥದಲ್ಲಿದ್ದ ದ್ರುಪದನನ್ನು ತೀಕ್ಷ್ಣವಾದ ಅನೇಕ ಬಾಣಗಳಿಂದ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಶರೀರಾದ್ಯಂತವಾಗಿ ಬಾಣಗಳಿಂದ ಚುಚ್ಚಲ್ಪಟ್ಟಿದ್ದ ವೃಷಸೇನ-ದ್ರುಪದರಿಬ್ಬರೂ ಮುಳ್ಳುಗಳಿಂದ ತುಂಬಿರುವ ಮುಳ್ಳುಹಂದಿಗಳಂತೆಯೇ ಪ್ರಕಾಶಿಸುತ್ತಿದ್ದರು. ಸುವರ್ಣಮಯವಾದ ಮೂಲಭಾಗಗಳಿಂದಲೂ ಒಳ್ಳೆಯ ಅಲುಗಿನಿಂದಲೂ ಕೂಡಿದ್ದ ಬಾಣಗಳಿಂದ ಇಬ್ಬರ ಕವಚಗಳೂ ಕತ್ತರಿಸಲ್ಪಟ್ಟಿದ್ದುವು. ಆ ಸಮಯದಲ್ಲಿ ಧಾರಾಕಾರವಾದ ರಕ್ತದಿಂದ ತೋಯ್ದುಹೋಗಿದ್ದ ವೃಷಸೇನ-ದ್ರುಪದರು ಬಹಳವಾಗಿ ಪ್ರಕಾಶಿಸಿದರು. ವೃಷಸೇನ-ದ್ರುಪದರು ಸುವರ್ಣಸದೃಶರಾಗಿಯೂ, ಕವಚಗಳಿಂದ ಚಿತ್ರಿತ

ರಾಗಿಯೂ, ಕಲ್ಪವೃಕ್ಷಗಳಂತೆ ಅದ್ಭುತರಾಗಿಯೂ, ಕುಸುಮಿತವಾಗಿರುವ ಮುತ್ತುಗದ ಮರದಂತೆ ಶೋಭೆಯುಳ್ಳವರಾಗಿಯೂ ರಣರಂಗದಲ್ಲಿ ಪ್ರಕಾಶಿಸಿದರು. ವೃಷಸೇನನು ದ್ರುಪದನನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿ ಅನಂತರ ಎಪ್ಪತ್ತು ಬಾಣಗಳಿಂದಲೂ ಗಾಯಗೊಳಿಸಿ ಪುನಃ ಮೂರು ಮೂರು ಬಾಣಗಳಿಂದಲೂ ಪ್ರಹರಿಸಿದನು. ಬಳಿಕ ಕರ್ಣನ ಮಗನಾದ ವೃಷಸೇನನು ಮಳೆಗರೆಯುವ ಮೋಡದೋಪಾದಿಯಲ್ಲಿ ಸಾವಿರಾರು ಬಾಣಗಳನ್ನು ದ್ರುಪದನ ಮೇಲೆ ಸುರಿಸುತ್ತಾ ಬಹಳವಾಗಿ ಪ್ರಕಾಶಿಸಿದನು. ಅದರಿಂದ ಪರಮಕ್ರುದ್ಧನಾದ ದ್ರುಪದನು ವೃಷಸೇನನ ಧನುಸ್ಸನ್ನು ಪೀತವಾಗಿಯೂ ನಿಶಿತವಾಗಿಯೂ ಇದ್ದ ಭಲ್ಲದಿಂದ ಎರಡಾಗಿ ಕತ್ತರಿಸಿದನು. ಒಡನೆಯೇ ವೃಷಸೇನನು ಸುವರ್ಣದ ಪಟ್ಟಿಗಳಿಂದ ನಿಬದ್ಧವಾಗಿದ್ದ ಸುದೃಢವಾಗಿದ್ದ ಮತ್ತು ನೂತನವಾಗಿದ್ದ ಧನುಸ್ಸನ್ನು ಕೈಗೆತ್ತಿಕೊಂಡು ದೃಢವಾಗಿಯೂ, ನಿಶಿತವಾಗಿಯೂ, ಎಣ್ಣೆಯಿಂದ ಹದಮಾಡಿದ್ದಾಗಿಯೂ, ವಿಮಲವಾಗಿಯೂ ಇದ್ದ ಭಲ್ಲವನ್ನು ಬತ್ತಳಿಕೆಯಿಂದ ತೆಗೆದುಕೊಂಡು ಧನುಸ್ಸಿನಲ್ಲಿ ಯೋಜಿಸಿ, ಕಿವಿಯ ತುದಿಯವರೆಗೂ ಶಿಂಜಿನಿಯನ್ನು ಸೆಳೆದು, ದ್ರುಪದನನ್ನು ಲಕ್ಷೀಕರಿಸಿ ಎಲ್ಲ ಸೋಮಕಯೋಧರನ್ನೂ ಭಯಪಡಿಸುತ್ತಾ ಪ್ರಯೋಗಿಸಿದನು. ವೃಷಸೇನನಿಂದ ಪ್ರಮುಕ್ತವಾದ ಆ ಬಾಣವು ದ್ರುಪದನ ಹೃದಯವನ್ನು ಭೇದಿಸಿಕೊಂಡು ಹೊರಬಂದು ಭೂಮಿಯ ಮೇಲೆ ಬಿದ್ದಿತು. ವೃಷಸೇನನ ಬಾಣದಿಂದ ಅತಿಗಾಢವಾಗಿ ಪ್ರಹೃತನಾದ ದ್ರುಪದನು ಮೂರ್ಛೆ ಹೊಂದಿದನು. ದ್ರುಪದನ ಸಾರಥಿಯು–ಅಂತಹ ಸಮಯದಲ್ಲಿ ಸಾರಥಿಯು ಮಾಡಬೇಕಾದ ಕರ್ತವ್ಯವನ್ನು ಸ್ಮರಿಸಿದವನಾಗಿ–ದ್ರುಪದನ ರಥವನ್ನು ರಣರಂಗದಿಂದ ಬಹಳ ದೂರಕ್ಕೆ ಒಯ್ದುಬಿಟ್ಟನು.

ಅನಂತರ ವೃಷಸೇನನ ಬಾಣಗಳ ಸತತಪ್ರಹಾರದಿಂದ ಕವಚಗಳನ್ನು ಕಳೆದುಕೊಂಡ ಪಾಂಚಾಲಸೈನ್ಯವು ಭಯಂಕರವಾದ ಆ ಕಾಳರಾತ್ರಿಯಲ್ಲಿ ದಿಕ್ಕು-ದಿಕ್ಕಿಗೂ ಓಡಿಹೋಯಿತು. ಹೀಗೆ ಸೈನಿಕರು ಓಡಿಹೋಗುತ್ತಿರುವಾಗ ತಮ್ಮ ಕೈಗಳಲ್ಲಿದ್ದ ಪಂಜುಗಳನ್ನು ಅಲ್ಲಿಯೇ ಪರಿತ್ಯಜಿಸಿ ಹೋಗುತ್ತಿದ್ದರು. ರಣಾಂಗಣದ ಸುತ್ತಲೂ ಆ ಪಂಜುಗಳು ಧಗ-ಧಗನೆ ಉರಿಯುತ್ತಿದ್ದ ಸಮಯದಲ್ಲಿ ಆ ರಣರಂಗವು ಗ್ರಹ-ನಕ್ಷತ್ರಗಳಿಂದ ಕೂಡಿದ ಮತ್ತು ಮೋಡ

ಗಳಿಂದ ರಹಿತವಾದ ಆಕಾಶದೋಪಾದಿಯಲ್ಲಿ ಪ್ರಕಾಶಿಸುತ್ತಿದ್ದಿತು. ವರ್ಷಾಕಾಲದಲ್ಲಿ ಮೋಡವು ಮಿಂಚುಗಳಿಂದ ಪ್ರಕಾಶಿಸುವಂತೆ–ಅಲ್ಲಲ್ಲಿಯೇ ಬಿದ್ದಿದ್ದ ಅಂಗದಾಭರಣಗಳಿಂದ ರಣಭೂಮಿಯು ಬಹಳವಾಗಿ ಪ್ರಕಾಶಿಸಿತು. ಬಳಿಕ ತಾರಕಾಮಯ ಯುದ್ಧದಲ್ಲಿ ಇಂದ್ರನ ಭಯದಿಂದ ಸಂತ್ರಸ್ತರಾದ ದಾನವರು ಪಲಾಯನಮಾಡಿದಂತೆ–ಕರ್ಣನ ಮಗನಿಂದ ಭಯಗೊಂಡ ಸೋಮಕರು ಪಲಾಯನಮಾಡಿದರು. ವೃಷಸೇನನಿಂದ ಪೀಡಿತರಾಗಿ ಓಡಿಹೋಗುತ್ತಿದ್ದ ಸೋಮಕರು ಪಂಜುಗಳ ಬೆಳಕಿನಲ್ಲಿ ಬಹಳ ಶೋಭಾಯಮಾನರಾಗಿ ಕಾಣುತ್ತಿದ್ದರು. ನಡುನೆತ್ತಿಯಮೇಲೆ ಬಂದ ಸೂರ್ಯನೋಪಾದಿಯಲ್ಲಿ ಸೋಮಕರನ್ನು ಜಯಿಸಿದ ವೃಷಸೇನನು ಬಹಳವಾಗಿ ಪರಿಶೋಭಿಸಿದನು. ನಿನ್ನ ಕಡೆಯ ಮತ್ತು ಶತ್ರುಗಳ ಕಡೆಯ ಸಾವಿರಾರು ಯೋಧರಲ್ಲಿ ಪ್ರತಾಪವಂತನಾದ ವೃಷಸೇನನೊಬ್ಬನೇ ಜಾಜ್ವಲ್ಯಮಾನನಾಗಿ ಪ್ರಕಾಶಿಸುತ್ತಾ ರಣಾಂಗಣದಲ್ಲಿ ನಿಂತಿದ್ದನು. ವೃಷಸೇನನು ಯುದ್ಧದಲ್ಲಿ ಶೂರರಾದ ಸೋಮಕಮಹಾರಥರೆಲ್ಲರನ್ನೂ ಜಯಿಸಿ ಯುಧಿಷ್ಠಿರನಿದ್ದೆಡೆಗೆ ತ್ವರೆಯಿಂದ ಧಾವಿಸಿದನು.

ರಣಭೂಮಿಯ ಮತ್ತೊಂದು ವಿಭಾಗದಲ್ಲಿ ನಾನು ಹಿಂದೆ ಹೇಳಿದಂತೆ ಪರಮಕ್ರುದ್ಧನಾಗಿ ಯುದ್ಧದಲ್ಲಿ ಶತ್ರುಗಳನ್ನು (ನಮ್ಮ ಕಡೆಯ ಸೈನಿಕರನ್ನು ) ಬಾಣಗಳಿಂದ ದಹಿಸುತ್ತಿದ್ದ ಪ್ರತಿವಿಂಧ್ಯನನ್ನು ಮಹಾರಥನಾದ ನಿನ್ನ ಮಗ ದುಃಶಾಸನನು ಎದುರಿಸಿದನು. ಮೋಡಗಳಿಲ್ಲದ ಶುಭ್ರವಾದ ಆಕಾಶದಲ್ಲಿ ಬುಧ-ಭಾಸ್ಕರರಿಗೆ ಸಮಾಗಮವಾಗುವಂತೆ ಪ್ರತಿವಿಂಧ್ಯ-ದುಃಶಾಸನರಿಗೆ ವಿಚಿತ್ರವಾದ ಸಮಾಗಮವಾಯಿತು. ದುಃಶಾಸನನು ಮೂರು ಬಾಣಗಳಿಂದ ದುಷ್ಕರವಾದ ಸಾಹಸಕರ್ಮಗಳನ್ನು ಮಾಡುವ ಪ್ರತಿವಿಂಧ್ಯನ ಹಣೆಯಲ್ಲಿ ಪ್ರಹರಿಸಿದನು. ಮಹಾಬಲಿಷ್ಠನಾದ, ಧನುಷ್ಮಂತನಾದ ನಿನ್ನ ಮಗನಿಂದ ಬಹಳ ಗಾಢವಾಗಿ ಪ್ರಹೃತನಾದ ಮಹಾಬಾಹುವಾದ ಪ್ರತಿವಿಂಧ್ಯನು ಶಿಖರದಿಂದ ಕೂಡಿದ ಪರ್ವತದಂತೆಯೇ ಪ್ರಕಾಶಿಸಿದನು. ಮಹಾರಥನಾದ ಪ್ರತಿವಿಂಧ್ಯನು ದುಃಶಾಸನನನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿ ಪುನಃ ಏಳು ಬಾಣಗಳಿಂದಲೂ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ನಿನ್ನ

ಮಗನು ಉಗ್ರವಾದ ಬಾಣಗಳಿಂದ ಪ್ರತಿವಿಂಧ್ಯನ ಕುದುರೆಗಳನ್ನು ಸಂಹರಿಸಿ ಅತ್ಯಂತದುಷ್ಕರವಾದ ಸಾಹಸಕರ್ಮವನ್ನು ಮಾಡಿದನು. ಅಷ್ಟು ಮಾತ್ರವಲ್ಲದೇ ದುಃಶಾಸನನು ಭಲ್ಲದಿಂದ ಧನುಷ್ಮಂತನಾದ ಪ್ರತಿವಿಂಧ್ಯನ ಸಾರಥಿಯನ್ನು ಸಂಹರಿಸಿ, ಅನಂತರ ಅವನ ಧ್ವಜವನ್ನೂ ಕತ್ತರಿಸಿ, ರಥವನ್ನು ಎಳ್ಳಿನಂತೆ ಪುಡಿ-ಪುಡಿಮಾಡಿಬಿಟ್ಟನು. ಪುನಃ ಕ್ರುದ್ಧನಾದ ದುಃಶಾಸನನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಪ್ರತಿವಿಂಧ್ಯನ ರಥದ ಪತಾಕೆಗಳನ್ನೂ, ಬತ್ತಳಿಕೆಗಳನ್ನೂ, ಕಡಿವಾಣಗಳನ್ನೂ, ನೊಗಪಟ್ಟಿಗಳನ್ನೂ ಛಿನ್ನ-ಭಿನ್ನಮಾಡಿದನು. ಆ ಸಮಯದಲ್ಲಿ ರಥಹೀನನಾಗಿದ್ದ ಪ್ರತಿವಿಂಧ್ಯನು ಧನುಷ್ಪಾಣಿಯಾಗಿ ಭೂಮಿಯ ಮೇಲೆಯೇ ನಿಂತು ನೂರಾರು ಬಾಣಗಳನ್ನು ದುಃಶಾಸನನ ಮೇಲೆ ಸುರಿಸುತ್ತಾ ಯುದ್ಧವನ್ನು ಮುಂದುವರಿಸಿದನು. ಆಗ ನಿನ್ನ ಮಗನು ಕ್ಷುರಪ್ರದಿಂದ ಪ್ರತಿವಿಂಧ್ಯನ ಧನುಸ್ಸನ್ನು ಕತ್ತರಿಸಿದನು. ಬಳಿಕ ದುಃಶಾಸನನು ಧನುಸ್ಸಿನಿಂದಲೂ ವಿಹೀನನಾದ ದ್ರೌಪದೇಯನನ್ನು ಹತ್ತು ಬಾಣಗಳಿಂದ ಗಾಢವಾಗಿ ಗಾಯಗೊಳಿಸಿದನು. ಮಹಾರಥರಾದ ಅವನ ಅನುಜರು ತಮ್ಮ ಅಣ್ಣನು ರಥಹೀನನಾಗಿದ್ದುದನ್ನು ಕಂಡು ದೊಡ್ಡ ಸೈನ್ಯದೊಡನೆ ಬಹಳ ವೇಗದಿಂದ ಆಗಮಿಸಿದರು. ಒಡನೆಯೇ ಪ್ರತಿವಿಂಧ್ಯನು ಪ್ರಕಾಶಮಾನವಾಗಿದ್ದ ಸುತಸೋಮನ ರಥಕ್ಕೆ ನೆಗೆದು ಉಪವಿಷ್ಟನಾಗಿ ಮತ್ತೊಂದು ನೂತನ ಧನುಸ್ಸನ್ನು ಕೈಗೆತ್ತಿಕೊಂಡು ನಿಶಿತವಾದ ಬಾಣಗಳಿಂದ ನಿನ್ನ ಮಗನನ್ನು ಪ್ರಹರಿಸಿದನು. ಅನಂತರ ನಿನ್ನ ಮಕ್ಕಳೆಲ್ಲರೂ ದೊಡ್ಡದಾದ ಸೈನ್ಯದಿಂದ ಕೂಡಿದವರಾಗಿ ದುಃಶಾಸನನನ್ನು ಸುತ್ತುವರಿದು ಪ್ರತಿವಿಂಧ್ಯನ ಮೇಲೆ ದಾಳಿನಡೆಸಿದರು. ಬಳಿಕ ದಾರುಣವಾದ ಆ ಕಾಳರಾತ್ರಿಯಲ್ಲಿ ದುಃಶಾಸನಪ್ರಮುಖರಾದ, ನಿನ್ನ ಸೈನಿಕರಿಗೂ ಪ್ರತಿವಿಂಧ್ಯಪ್ರಮುಖರಾದ ಪಾಂಡವಸೈನಿಕರಿಗೂ ಭಯಂಕರವಾದ, ಯಮನ ರಾಷ್ಟ್ರದ ಜನಗಣತಿಯನ್ನು ಹೆಚ್ಚಿಸುವ ಮಹಾಯುದ್ಧವು ಪ್ರಾರಂಭವಾಯಿತು.

೧೬೮ನೆಯ ಅಧ್ಯಾಯವು ಮುಗಿಯಿತು.

೧೬೯ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ನಕುಲನಿಂದ ಶಕುನಿಯು ಪರಾಜಿತನಾದುದು : ಶಿಖಂಡಿಗೂ ಕೃಪಾಚಾರ್ಯರಿಗೂ ಭಯಂಕರವಾದ ಯುದ್ಧ

ಸಂಜಯನು ದ್ವೈರಥಯುದ್ಧದ ವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ :

“ಮಹಾರಾಜ! ಕ್ರುದ್ಧನಾದ ಶಕುನಿಯು ನಿನ್ನ ಸೈನ್ಯವನ್ನು ಸಂಹರಿಸುತ್ತಾ ಮುನ್ನುಗ್ಗಿಬರುತ್ತಿದ್ದ ವೇಗಶಾಲಿಯಾದ ನಕುಲನನ್ನು ಎದುರಿಸಿ ನಿಲ್ಲು-ನಿಲ್ಲೆಂದು ಗಟ್ಟಿಯಾಗಿ ಗರ್ಜಿಸಿದನು. ನಕುಲ-ಶಕುನಿಗಳಿಬ್ಬರೂ ಪರಸ್ಪರವಾಗಿ ಬದ್ಧವೈರಿಗಳಾಗಿದ್ದರು. ಒಬ್ಬರು ಮತ್ತೊಬ್ಬರನ್ನು ವಧಿಸಬೇಕೆನ್ನುವ ಉತ್ಕಟವಾದ ಇಚ್ಛೆಯುಳ್ಳವರಾಗಿದ್ದರು. ಸುದೀರ್ಘವಾಗಿ ಸೆಳೆದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಗಾಢವಾಗಿ ಪ್ರಹರಿಸುತ್ತಿದ್ದರು. ಯಾವ ರೀತಿಯಲ್ಲಿ ನಕುಲನು ಶಕುನಿಯ ಮೇಲೆ ಬಾಣಗಳ ಮಳೆಗರೆಯುತ್ತಿದ್ದನೋ ಅದೇ ರೀತಿಯಲ್ಲಿಯೇ ಶಕುನಿಯೂ ತನ್ನ ಯುದ್ಧ ನೈಪುಣ್ಯವನ್ನು ಪ್ರದರ್ಶಿಸುತ್ತಾ ನೂರಾರು ಬಾಣಗಳನ್ನು ನಕುಲನ ಮೇಲೆ ಸುರಿಸುತ್ತಿದ್ದನು. ಪರಸ್ಪರ ಬಾಣಗಳ ಪ್ರಹಾರದಿಂದಾಗಿ ಮುಳ್ಳಿನ ರೂಪವಾದ ಬಾಣಗಳು ಇಬ್ಬರ ಅಂಗಾಂಗಗಳಲ್ಲಿಯೂ ಚುಚ್ಚಿಕೊಂಡಿದ್ದುವು. ಆ ಸಮಯದಲ್ಲವರು ಮುಳ್ಳುಗಳಿಂದ ಕೂಡಿದ್ದ ಮುಳ್ಳುಹಂದಿಗಳಂತೆಯೇ ಪ್ರಕಾಶಿಸುತ್ತಿದ್ದರು. ಸುವರ್ಣಮಯವಾದ ಮೂಲಭಾಗವಿದ್ದ ನೇರವಾದ ಮೊನೆಗಳುಳ್ಳ ಬಾಣಗಳಿಂದ ಇಬ್ಬರ ಕವಚಗಳೂ ಕತ್ತರಿಸಿಹೋಗಿದ್ದುವು. ರಕ್ತದಿಂದ ತೋಯ್ದುಹೋಗಿದ್ದ ನಕುಲ-ಶಕುನಿಗಳು ಸುವರ್ಣಸದೃಶರಾಗಿ ವಿಚಿತ್ರವಾದ ಕಾಂತಿಯಿಂದ ಪರಿಶೋಭಿಸುತ್ತಿದ್ದರು. ಎರಡು ಕಲ್ಪವೃಕ್ಷಗಳಂತೆಯೂ ಮತ್ತು ಕುಸುಮಿತವಾದ ಮುತ್ತುಗದ ಮರಗಳಂತೆಯೂ ರಣಾಂಗಣದಲ್ಲಿ ಆ ಇಬ್ಬರು ವೀರರೂ ಪ್ರಕಾಶಿಸಿದರು. ಬಾಣವೆಂಬ ಮುಳ್ಳುಗಳಿಂದ ಶರೀರಾದ್ಯಂತವಾಗಿ ಚುಚ್ಚಲ್ಪಟ್ಟಿದ್ದ ಆ ವೀರರು ಮುಳ್ಳುಗಳಿಂದ ಯುಕ್ತವಾದ ಬೂರುಗದ ಮರಗಳಂತೆಯೇ ಪ್ರಕಾಶಿಸುತ್ತಿದ್ದರು. ಕೋಪದಿಂದ ಕೆಂಪಾದ ಕಣ್ಣುಗಳುಳ್ಳವರಾಗಿದ್ದ ನಕುಲ-ಸೌಬಲರು ಕಣ್ಣುಗಳನ್ನು ಅಗಲವಾಗಿ ತೆರೆದು ಪರಸ್ಪರವಾಗಿ ಸುಟ್ಟುಬಿಡುವಂತೆ ಕರಾಳ

ದೃಷ್ಟಿಯಿಂದ ನೋಡುತ್ತಿದ್ದರು. ಆ ಸಮಯದಲ್ಲಿ ಪರಮಕ್ರುದ್ಧನಾಗಿದ್ದ ನಿನ್ನ ಭಾವಮೈದುನನು ನಗು-ನಗುತ್ತಲೇ ನಿಶಿತವಾದ ಒಂದು ಬಾಣದಿಂದ ನಕುಲನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಧನುಷ್ಮಂತನಾದ ಶಕುನಿಯಿಂದ ಗಾಢವಾಗಿ ಪ್ರಹೃತನಾದ ನಕುಲನು ಪೀಠದಿಂದ ಪಕ್ಕಕ್ಕೆ ಸರಿದು ಮರುಕ್ಷಣ ದಲ್ಲಿಯೇ ಮೂರ್ಛೆಹೋದನು. ಅತ್ಯಂತವೈರಿಯಾದ ದೃಪ್ತನಾದ ನಕುಲನು ಅಂತಹ ಅವಸ್ಥೆಯನ್ನು ಹೊಂದಲಾಗಿ ಶಕುನಿಯು–ವರ್ಷಾಕಾಲದಲ್ಲಿ ಮೇಘವು ಗರ್ಜನೆಮಾಡುವಂತೆ ಗರ್ಜನೆಮಾಡಿದನು. ಸ್ವಲ್ಪಹೊತ್ತಿನ ನಂತರ ಪ್ರಜ್ಞೆಯನ್ನು ಹೊಂದಿದ ಪಾಂಡುಪುತ್ರನಾದ ನಕುಲನು ಬಾಯ್ದೆರೆದ ಅಂತಕನೋಪಾದಿಯಲ್ಲಿ ಶಕುನಿಯನ್ನು ಪುನಃ ಆಕ್ರಮಿಸಿದನು. ಸಂಕ್ರುದ್ಧನಾದ ನಕುಲನು ಶಕುನಿಯನ್ನು ಅರುವತ್ತು ಬಾಣಗಳಿಂದ ಪ್ರಹರಿಸಿ, ಪುನಃ ನೂರು ನಾರಾಚಗಳಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಮರುಕ್ಷಣದಲ್ಲಿಯೇ ನಕುಲನು ಬಾಣದಿಂದ ಯುಕ್ತವಾಗಿದ್ದ ಶಕುನಿಯ ಧನುಸ್ಸನ್ನು ಮುಷ್ಟಿಯ ಪ್ರದೇಶದಲ್ಲಿ ಕತ್ತರಿಸಿದನು. ಅವನ ಧ್ವಜವನ್ನೂ ಸಹ ಬಹಳಬೇಗ ಕತ್ತರಿಸಿ ರಥದ ಮೇಲಿನಿಂದ ಭೂಮಿಗೆ ಕೆಡವಿದನು. ತೀಕ್ಷ್ಣವಾಗಿದ್ದ, ನಿಶಿತವಾಗಿದ್ದ ಮತ್ತು ಎಣ್ಣೆಯಿಂದ ಹದಮಾಡಲ್ಪಟ್ಟಿದ್ದ ಒಂದು ಬಾಣದಿಂದ ನಕುಲನು ಶಕುನಿಯ ತೊಡೆಗಳನ್ನು ಭೇದಿಸಿ ಯಾವ ರೀತಿಯಲ್ಲಿ * ರೆಕ್ಕೆಗಳಿಂದ ಯುಕ್ತವಾದ ಎಡಕ್ಕೂ ಬಲಕ್ಕೂ ಹಾರುವ ಗಿಡಗಹಕ್ಕಿಯನ್ನು ವ್ಯಾಧನು ಬಾಣದಿಂದ ಕೆಳಕ್ಕೆ ಬೀಳಿಸುತ್ತಾನೆಯೋ–ಅದೇ ರೀತಿಯಲ್ಲಿ ಶಕುನಿಯನ್ನು ಕೆಳಕ್ಕೆ ಬೀಳಿಸಿದನು. ನಕುಲನ ಬಾಣದಿಂದ ಬಹಳವಾಗಿ ಗಾಯಗೊಂಡ ಶಕುನಿಯು ಪೀಠದ ಪಕ್ಕಕ್ಕೆ ಜರುಗಿ ಕುಳಿತನು. ಕಾಮುಕನು ಕಾಮಿನಿಯನ್ನು ಆಲಿಂಗಿಸುವಂತೆ–ಶಕುನಿಯು ಧ್ವಜದಂಡವನ್ನು ಭದ್ರವಾಗಿ ಹಿಡಿದು ಕುಳಿತಿದ್ದನು. ಪಾಪರಹಿತನೇ! ನಿನ್ನ ಭಾವಮೈದುನನು

---

* ಇಲ್ಲಿ 'ಶ್ಯೇನಂ ಸಪಕ್ಷಂ ವ್ಯಾಧೇನ' ಎಂಬ ಉಪಮಾನವಿದೆ. ರೆಕ್ಕೆಗಳಿಂದ ಯುಕ್ತವಾದ ಗಿಡಗವನ್ನು–'ವ್ಯಾಧನಿಂದ' ಎಂದು ಈ ವಾಕ್ಯ ಅಪೂರ್ಣವಾಗುತ್ತದೆ. ಇದನ್ನು ವ್ಯಾಖ್ಯಾನಕಾರರು ಹೀಗೆ ವಿವರಿಸಿದ್ದಾರೆ. ಯಥಾ ಖೇ ಶ್ಯೇನಂ ಪಕ್ಷಾಭ್ಯಾಂ ಸಹಿತಂ ವಾಮದಕ್ಷಿಣಗಾಮಿನಂ ಪಾತಯೇತ್ ಏವಂ ಲುಪ್ತೋಪಮಾ । ವ್ಯಾಧೇನ–ಬಾಣೇನ ವಿಧ್ಯತ್ಯನೇನೇತಿ ವ್ಯಾಧಃ –ಬಾಣಃ. ಈ ವ್ಯಾಖ್ಯಾನಕ್ಕೆ ಅನುಗುಣವಾಗಿ ಅರ್ಥವಿವರಣೆಯನ್ನು ಕೊಡಲಾಗಿದೆ. ಈ ಶ್ಲೋಕವು ಒಂದು ಪುಸ್ತಕದಲ್ಲಿರುವುದಿಲ್ಲ.

ಮೂರ್ಛಿತನಾಗಿ ಬಿದ್ದುದನ್ನು ಗಮನಿಸಿದ ಸಾರಥಿಯು ಶಕುನಿಯನ್ನು ಸೇನೆಯ ಅಗ್ರಭಾಗದಿಂದ ಬಹಳ ದೂರಕ್ಕೆ ಒಯ್ದುಬಿಟ್ಟನು. ಶಕುನಿಯು ಪರಾಜಿತನಾದುದನ್ನು ಕಂಡು ಪಾರ್ಥನೂ ಮತ್ತು ಅವರ ಅನುಯಾಯಿಗಳೂ ಗಟ್ಟಿಯಾಗಿ ಜಯಘೋಷಮಾಡಿದರು. ಶತ್ರುತಾಪನನಾದ, ಕ್ರುದ್ಧನಾಗಿದ್ದ ನಕುಲನು ಯುದ್ಧದಲ್ಲಿ ಪರಮಶತ್ರುವಾಗಿದ್ದ ಶಕುನಿಯನ್ನು ಜಯಿಸಿ ದ್ರೋಣರ ರಥದ ಸಮೀಪಕ್ಕೆ ರಥವನ್ನು ಕೊಂಡೊಯ್ಯುವಂತೆ ಸಾರಥಿಗೆ ಹೇಳಿದನು. ಮಾದ್ರಿಯ ಮಗನ ಮಾತನ್ನು ಕೇಳಿ ಸಾರಥಿಯು ದ್ರೋಣರಿದ್ದೆಡೆಗೆ ರಥವನ್ನೋಡಿಸಿದನು.

ಮತ್ತೊಂದು ವಿಭಾಗದಲ್ಲಿ ದ್ರೋಣರ ಸಮೀಪಕ್ಕೆ ಹೋಗಲು ಇಚ್ಛಿಸಿ ರಭಸದಿಂದ ಮುನ್ನುಗ್ಗುತ್ತಿದ್ದ ಶಿಖಂಡಿಯನ್ನು ಶರದ್ವಂತನ ಮಕ್ಕಳಾದ ಕೃಪರು ವೇಗವಾಗಿ ಹೋಗಿ ತಡೆದರು. ದ್ರೋಣರ ರಕ್ಷಣೆಯ ಸಲುವಾಗಿ ಅವರ ಸಮೀಪದಲ್ಲಿಯೇ ಇದ್ದ, ಶತ್ರುಮರ್ದನರಾದ ಗೌತಮರು ಬಹಳ ಶೀಘ್ರವಾಗಿ ತನ್ನ ಕಡೆಗೇ  ಬರುತ್ತಿರುವುದನ್ನು ಕಂಡ ಶಿಖಂಡಿಯು ನಗು-ನಗುತ್ತಲೇ ಒಂಬತ್ತು ಭಲ್ಲಗಳಿಂದ ಅವರನ್ನು ಪ್ರಹರಿಸಿದನು. ನಿನ್ನ ಮಕ್ಕಳಿಗೆ ಪ್ರಿಯವಾದ ಕಾರ್ಯವನ್ನೇ ಮಾಡುತ್ತಿದ್ದ ಕೃಪಾಚಾರ್ಯರು ಶಿಖಂಡಿಯನ್ನು ಐದು ಬಾಣಗಳಿಂದ ಪ್ರಹರಿಸಿ ಪುನಃ ಇಪ್ಪತ್ತು ಬಾಣಗಳಿಂದಲೂ ಪ್ರಹರಿಸಿದರು. ಹಿಂದೆ ದೇವಾಸುರರ ಯುದ್ಧದಲ್ಲಿ ಶಂಬರಾಸುರನಿಗೂ ದೇವರಾಜನಾದ ಇಂದ್ರನಿಗೂ ನಡೆದಿದ್ದ ಮಹಾಯುದ್ಧದಂತೆ ಶಿಖಂಡಿ-ಕೃಪರಿಗೆ ಘೋರರೂಪವಾದ ಭಯಾನಕವಾದ ಯುದ್ಧವು ನಡೆಯುತ್ತಿದ್ದಿತು.

ಯುದ್ಧದುರ್ಮದರಾದ, ಮಹಾರಥರಾದ, ವೀರರಾದ ಶಿಖಂಡಿ-ಕೃಪರು ವರ್ಷಾಕಾಲದಲ್ಲಿ ಎರಡು ಕಾರ್ಮುಗಿಲುಗಳು ಆಕಾಶವನ್ನು ನೀರಿನ ಸಮೂಹದಿಂದ ವ್ಯಾಪ್ತವನ್ನಾಗಿ ಮಾಡುವಂತೆ–ಬಾಣಗಳ ಸಮೂಹಗಳಿಂದ ಆಕಾಶವನ್ನು ವ್ಯಾಪ್ತವನ್ನಾಗಿ ಮಾಡಿದರು. ಸ್ವಭಾವದಿಂದಲೇ ಭಯಂಕರವಾಗಿ ಕಾಣುತ್ತಿದ್ದ  ಆಕಾಶವು ಆ ಸಮಯದಲ್ಲಿ ಬಾಣಗಳ ಆವರಣದಿಂದಾಗಿ ಮತ್ತಷ್ಟು ಭಯಂಕರವಾಗಿ ಕಾಣಿಸುತ್ತಿದ್ದಿತು. ಯುದ್ಧಾಸಕ್ತರಾಗಿದ್ದ ಯೋಧರಿಗೂ ಆ ರಾತ್ರಿಯು ಘೋರರೂಪವಾದ ಭಯಂಕರವಾದ *ಕಾಲ

---

* ಕಾಲರಾತ್ರಿ : 1) ಬ್ರಹ್ಮನ ಹಗಲಿನಲ್ಲಿ ಪ್ರಪಂಚದ ಸೃಷ್ಟ್ಯಾದಿ ವ್ಯಾಪಾರಗಳು

ರಾತ್ರಿಸದೃಶವಾಗಿ ಕಾಣುತ್ತಿದ್ದಿತು. ಶಿಖಂಡಿಯು ಕೃಪರ ದೊಡ್ಡ ಧನುಸ್ಸನ್ನು ಮೌರ್ವೀ-ಬಾಣಗಳ ಸಮೇತವಾಗಿ ಅರ್ಧಚಂದ್ರವೆಂಬ ಬಾಣದಿಂದ ಕತ್ತರಿಸಿದನು. ಅದರಿಂದ ಕ್ರುದ್ಧರಾದ ಕೃಪರು ಶಿಖಂಡಿಯ ಮೇಲೆ ಸುವರ್ಣ ಮಯವಾದ ದಂಡದಿಂದ ಕೂಡಿದ್ದ, ನೇರವಾದ ಅಗ್ರಭಾಗವಿದ್ದ, ಕಮ್ಮಾರ ನಿಂದ ಹದಮಾಡಲ್ಪಟ್ಟಿದ್ದ ದಾರುಣವಾದ ಶಕ್ತ್ಯಾಯುಧವನ್ನು ಪ್ರಯೋಗಿಸಿ ದರು. ಶಿಖಂಡಿಯು, ರಭಸದಿಂದ ತನ್ನ ಮೇಲೆ ಬೀಳಲು ಬರುತ್ತಿದ್ದ ಆ ಶಕ್ತ್ಯಾಯುಧವನ್ನು ಅನೇಕಬಾಣಗಳಿಂದ ಕತ್ತರಿಸಿದನು. ಮಹಾಪ್ರಭೆಯಿಂದ ಯುಕ್ತವಾಗಿದ್ದ ಆ ಶಕ್ತ್ಯಾಯುಧವು ತನ್ನ ಕಾಂತಿಯಿಂದ ಭೂಮಿಯನ್ನೇ ಬೆಳಗುತ್ತಾ ಕೆಳಕ್ಕೆ ಬಿದ್ದಿತು. ರಥಿಗಳಲ್ಲಿ ಶ್ರೇಷ್ಠರಾದ ಕೃಪರು ಒಡನೆಯೇ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ನಿಶಿತವಾದ ಬಾಣಗಳಿಂದ ಶಿಖಂಡಿಯನ್ನು ಮುಚ್ಚಿದರು. ರಥಿಗಳಲ್ಲಿ ಶ್ರೇಷ್ಠನಾದ ಶಿಖಂಡಿಯು ಯಶೋವಂತರಾದ ಗೌತಮರ ಬಾಣಗಳಿಂದ ಆಚ್ಛಾದಿತನಾಗಿ ಬಹಳ ಗಾಯ ಗೊಂಡು ಪೀಠದ ಪಕ್ಕಕ್ಕೆ ಸರಿದು ಕುಳಿತನು. ಶಿಖಂಡಿಯು ಕಂಗೆಟ್ಟುದನ್ನು ಕಂಡು ಶರದ್ವಂತನ ಮಕ್ಕಳಾದ ಕೃಪರು ಅವನನ್ನು ಸಂಹರಿಸಲು ಇಚ್ಛಿಸಿರು ವರೋ ಎಂಬಂತೆ ಅನೇಕ ಬಾಣಗಳಿಂದ ಪ್ರಹರಿಸಿದರು. ಮಹಾರಥನಾದ ಯಾಜ್ಞಸೇನಿಯು ಯುದ್ಧದಿಂದ ವಿಮುಖನಾಗುತ್ತಿರುವುದನ್ನು ಕಂಡು ಪಾಂಚಾಲ-ಸೋಮಕರು ಅವನನ್ನು ನಾಲ್ಕುಕಡೆಗಳಿಂದಲೂ ಸುತ್ತುವರಿದು ನಿಂತರು. ಅದೇ ರೀತಿಯಲ್ಲಿ ನಿನ್ನ ಮಕ್ಕಳೂ ಸಹ ದೊಡ್ಡದಾದ ಸೈನ್ಯ ದೊಡನೆ ದ್ವಿಜಶ್ರೇಷ್ಠರಾದ ಕೃಪರನ್ನು ಸುತ್ತುವರಿದು ನಿಂತರು. ಅನಂತರ ಘೋರವಾದ ಯುದ್ಧವು ಪುನಃ ಪ್ರಾರಂಭವಾಯಿತು. ರಥಿಕರು ಒಬ್ಬರು ಮತ್ತೊಬ್ಬರ ಮೇಲೆ ದಾಳಿ ನಡೆಸಲು ರಭಸದಿಂದ ಹೋಗುತ್ತಿದ್ದಾಗ ಉಂಟಾ

---

ಕೊನೆಗೊಂಡ ಮೇಲೆ ಎಲ್ಲವೂ ನಾಶವಾಗಿ ಬ್ರಹ್ಮನು ನಿದ್ರಿಸುವ ಕಾಲ. 2) ಪ್ರಳಯಕಾಲದ ರಾತ್ರಿ. 3) ಹದಿನಾಲ್ಕು ಮಂದಿ ಮನುಗಳ ಅಧಿಕಾರದ ಕೊನೆಯ ಕಾಲ. ಆ ಕಾಲದಲ್ಲಿ ಜಗತ್ತಿನ ವ್ಯಾಪಾರಗಳೆಲ್ಲವೂ ಶೂನ್ಯವಾಗಿರುತ್ತದೆ. 4) ದುರ್ಗಾದೇವಿಯ ಒಂದು ರೂಪ. 5) ಮನುಷ್ಯನ ಜೀವಮಾನದಲ್ಲಿ ಎಪ್ಪತ್ತೇಳನೆಯ ವರ್ಷದ ಏಳನೆಯ ತಿಂಗಳಿನ ಏಳನೆಯ ದಿವಸದ ರಾತ್ರಿ (ಇದು ಬಹಳ ಕ್ರೂರಕಾಲ). 6) ಕಗ್ಗತ್ತಲೆಯ ರಾತ್ರಿ 7) ದೀಪಾವಳಿಯ ಅಮಾವಾಸ್ಯೆ.

ಗುತ್ತಿದ್ದ ರಥಗಳ ಗಡ-ಗಡಾಶಬ್ದಗಳು ಮೇಘಗಳ ಗರ್ಜನೆಗಳಂತೆ ಬಹಳ ಭಯಂಕರವಾಗಿ ಕೇಳಿಬರುತ್ತಿದ್ದುವು. ರಣಾಂಗಣದ ಸುತ್ತಲೂ ಶತ್ರುಗಳನ್ನು ಆಕ್ರಮಿಸಲು ರಭಸದಿಂದ ಧಾವಿಸುತ್ತಿದ್ದ ಅಶ್ವಸೈನಿಕರಿಂದಲೂ–ಗಜ ಸೈನಿಕರಿಂದಲೂ ಕೂಡಿದ್ದ ಆ ರಣಭೂಮಿಯು ಬಹಳ ಕ್ರೂರವಾಗಿ ಕಾಣುತ್ತಿ ದ್ದಿತು. ಇತ್ತ ಕಡೆಯಿಂದ ಅತ್ತಕಡೆಗೆ–ಅತ್ತಕಡೆಯಿಂದ ಇತ್ತಕಡೆಗೆ ಪ್ರತಿ ಕಕ್ಷಿಗಳನ್ನು ಸಂಹರಿಸಲು ರಭಸದಿಂದ ಓಡಾಡುತ್ತಿದ್ದ ಕಾಲಾಳುಗಳ ಕಾಲುಗಳ ಸಪ್ಪಳಗಳಿಂದ ಭೂಮಿಯು–ಭಯದಿಂದ ನಡುಗುತ್ತಿರುವ ಅಬಲೆ ಯೋಪಾದಿಯಲ್ಲಿ ಕಂಪಿಸಿತು. ರಥಿಕರು ತಮ್ಮ ರಥಗಳಲ್ಲಿ ಕುಳಿತು ಅತ್ಯಂತ ವೇಗವಾಗಿ ಹೋಗುತ್ತಾ–ಹಾರುತ್ತಿರುವ ಮಿಡತೆಗಳನ್ನು ಕಾಗೆಗಳು ರಭಸ ದಿಂದ ಕಚ್ಚಿಕೊಂಡು ಓಡಿಹೋಗುವಂತೆ–ರಥಮಾರ್ಗದಲ್ಲಿ ಸಿಕ್ಕಿದ ಅನೇಕ ಶತ್ರುಯೋಧರನ್ನು ಧ್ವಂಸಮಾಡುತ್ತಾ ಹೋಗುತ್ತಿದ್ದರು. ಅದೇ ರೀತಿಯಲ್ಲಿ ಮದೋದಕವನ್ನು ಸುರಿಸುತ್ತಿದ್ದ ಮಹಾಗಜಗಳು, ಮದೋದಕವನ್ನು ಸುರಿಸುತ್ತಿದ್ದ ಎದುರುಪಕ್ಷದ ಮಹಾಗಜಗಳನ್ನು ಅವುಗಳು ಹೋಗುತ್ತಿದ್ದ ಮಾರ್ಗದಲ್ಲಿಯೇ ಎದುರಿಸಿ ಪ್ರಯತ್ನಪೂರ್ವಕವಾಗಿ ಅವುಗಳೊಡನೆ ಯುದ್ಧಮಾಡಿ ಧ್ವಂಸಮಾಡುತ್ತಿದ್ದುವು. ಕುದುರೆಸವಾರರು ಕುದುರೆಸವಾರ ರನ್ನೂ, ಪದಾತಿಸೈನಿಕರು ಶತ್ರುಪಕ್ಷದ ಪದಾತಿಸೈನಿಕರನ್ನೂ ಎದುರಿಸಿ ಕೋಪಾವಿಷ್ಟರಾಗಿ ಯುದ್ಧಮಾಡುತ್ತಾ ಒಬ್ಬರು ಮತ್ತೊಬ್ಬರನ್ನು ಅತಿಕ್ರಮಿಸಿ ಹೋಗಲು ಅವಕಾಶವಾಗದ ರೀತಿಯಲ್ಲಿ ಪರಾಕ್ರಮದಿಂದ ಯುದ್ಧಮಾಡು ತ್ತಿದ್ದರು. ಓಡಿಹೋಗುತ್ತಿದ್ದ, ಚೆಲ್ಲಾ-ಪಿಲ್ಲಿಯಾಗುತ್ತಿದ್ದ ಮತ್ತು ಪುನಃ ಹಿಂದಿ ರುಗಿ ಬರುತ್ತಿದ್ದ ಸೈನಿಕರ ಕೋಲಾಹಲಶಬ್ದಗಳು ಆ ಘೋರರಾತ್ರಿಯಲ್ಲಿ ಬಹಳವಾಗಿ ಕೇಳಿಸುತ್ತಿದ್ದುವು. ರಥ, ಆನೆ ಮತ್ತು ಕುದುರೆಗಳ ಮೇಲಿದ್ದ ದೇದೀಪ್ಯಮಾನವಾಗಿ ಕಾಣುತ್ತಿದ್ದ ಪಂಜುಗಳು ಆಕಾಶದಿಂದ ಬಿದ್ದ ದೊಡ್ಡ-ದೊಡ್ಡ ಬಾಲಚುಕ್ಕಿಗಳಂತೆಯೇ ಕಾಣುತ್ತಿದ್ದುವು. ಸಾವಿರಾರು ಪಂಜುಗಳಿಂದ ಪ್ರಕಾಶಿತವಾಗಿದ್ದ ಆ ರಾತ್ರಿಯು ಹಗಲಿನಂತೆಯೇ ಕಾಣುತ್ತಿದ್ದಿತು. ಯಾವ ರೀತಿಯಲ್ಲಿ ಲೋಕದಲ್ಲಿ ವ್ಯಾಪ್ತವಾದ ಕತ್ತಲೆಯು ಸೂರ್ಯನಿಂದ ವಿನಾಶಹೊಂದುತ್ತದೆಯೋ–ಅದೇ ರೀತಿಯಲ್ಲಿ ಉಂಟಾಗಿದ್ದ ಘೋರ ವಾದ ಕತ್ತಲೆಯು ಅಲ್ಲಲ್ಲಿ ಹೊತ್ತಿಸಿಟ್ಟಿದ್ದ ಪಂಜುಗಳ ಬೆಳಕಿನಿಂದ ನಾಶ

ಹೊಂದಿತು. ಧೂಳಿನಿಂದಲೂ ಕತ್ತಲೆಯಿಂದಲೂ ವ್ಯಾಪ್ತವಾಗಿದ್ದ ಅಂತರಿಕ್ಷ, ಪೃಥಿವಿ, ದಿಕ್ಕುಗಳು, ಉಪದಿಕ್ಕುಗಳು–ಈ ಎಲ್ಲವೂ ಪುನಃ ದೀಪಗಳ ಪ್ರಭೆಯಿಂದ ಪ್ರಕಾಶಗೊಂಡುವು. ಮಹಾತ್ಮರಾದ ಯೋಧರ ಅಸ್ತ್ರಗಳ, ಕವಚಗಳ ಮತ್ತು ಮಣಿಗಳ ಥಳಥಳಿಸುತ್ತಿದ್ದ ಪ್ರಕಾಶವು ಪಂಜುಗಳ ಬೆಳಕಿನಿಂದ ಆವೃತವಾಗಿ ಆ ಪಂಜುಗಳ ಬೆಳಕಿನಲ್ಲಿಯೇ ಲೀನವಾಗಿ ಹೋಯಿತು (ಸೂರ್ಯನ ಬೆಳಕಿನಲ್ಲಿ ದೀಪದ ಬೆಳಕು ಲೀನವಾಗಿ ಹೋಗುವಂತೆ ಸಾವಿರಾರು ಪಂಜುಗಳ ಬೆಳಕಿನಲ್ಲಿ ಅಸ್ತ್ರ-ಕವಚ-ಮಣಿಗಳ ಬೆಳಕು ಲೀನವಾಗಿ ಹೋಯಿತು). ಘೋರರಾತ್ರಿಯಲ್ಲಿ ಭಯಂಕರವಾದ ಕೋಲಾಹಲದ (ಗದ್ದಲದ) ಯುದ್ಧವು ನಡೆಯುತ್ತಿರಲಾಗಿ ಯುದ್ಧಮಾಡುತ್ತಿದ್ದ–ಯೋಧರಿಗೆ 'ನಾನು ಯಾರು?' 'ಏನು ಮಾಡುತ್ತಿದ್ದೇನೆ?'–ಎಂಬ ಅರಿವೂ ಸಹ ಇರಲಿಲ್ಲ.

**ಅವಧೀತ್ಸಮರೇ ಪುತ್ರಂ ಪಿತಾ ಭರತಸತ್ತಮ ।**
**ಪುತ್ರಶ್ಚ ಪಿತರಂ ಮೋಹಾತ್ಸಖಾಯಂ ಚ ಸಖಾ ತಥಾ ।**
**ಸ್ವಸ್ರೀಯಂ ಮಾತುಲಶ್ಚಾಪಿ ಸ್ವಸ್ರೀಯಶ್ಚಾಪಿ ಮಾತುಲಮ್ ॥೪೯॥**

ಯೋಧರೆಲ್ಲರೂ ಮತಿಗೆಟ್ಟು ಮಾಡುತ್ತಿದ್ದ ಆ ಯುದ್ಧದಲ್ಲಿ ತಂದೆಯು ಮಗನನ್ನು ಸಂಹರಿಸುತ್ತಿದ್ದನು. ಮೋಹಪರವಶತೆಯಿಂದ ಮಗನು ತಂದೆಯನ್ನೇ ಕೊಲ್ಲುತ್ತಿದ್ದನು. ಸ್ನೇಹಿತನನ್ನು ಸ್ನೇಹಿತನೇ ಕೊಲ್ಲುತ್ತಿದ್ದನು. ಸೋದರಳಿಯನನ್ನು ಸೋದರಮಾವನೇ ಕೊಲ್ಲುತ್ತಿದ್ದನು. ಸೋದರಮಾವನನ್ನು ಸೋದರಳಿಯನೇ ಕೊಲ್ಲುತ್ತಿದ್ದನು (ಆ ಸಮಯದಲ್ಲಿ ಅವರೆಲ್ಲರಿಗೂ ಕೊಲ್ಲುವುದೊಂದೇ ಕರ್ತವ್ಯವಾಗಿದ್ದಿತೇ ಹೊರತು ತಾನು ಯಾರನ್ನು ಕೊಲ್ಲುತ್ತಿದ್ದೇನೆ? ಯಾವ ಪಕ್ಷದವರನ್ನು ಕೊಲ್ಲುತ್ತಿದ್ದೇನೆ?–ಎಂಬ ಯಾವ ವಿಧವಾದ ವಿವೇಚನೆಯೂ ಅವರಿಗಿರಲಿಲ್ಲ ). ಹಲ-ಕೆಲವು ಯೋಧರು ತಮ್ಮ ಕಡೆಯ ಯೋಧರನ್ನೇ ಸಂಹರಿಸುತ್ತಿದ್ದರು. ಶತ್ರುಪಕ್ಷದಲ್ಲಿಯೂ ಸಹ ಪರಸ್ಪರವಾಗಿ ಬಡಿದಾಡುತ್ತಿದ್ದರು. ಹೇಡಿಗಳಿಗೆ ಅತ್ಯಂತ ಭಯಂಕರವಾಗಿದ್ದ ಆ ಘೋರರಾತ್ರಿಯಲ್ಲಿ ಯುದ್ಧಮರ್ಯಾದೆಯೆಂಬುದೇ ಇಲ್ಲದೇ ಅನಿರ್ಬಂಧಿತವಾದ ಸಂಹಾರಕ್ರಿಯೆಯೇ ಮುಖ್ಯವಾಗಿ ಉಳ್ಳ ಯುದ್ಧವು ನಡೆಯುತ್ತಿದ್ದಿತು."

ಗ೬೯ನೆಯ ಅಧ್ಯಾಯವು ಮುಗಿಯಿತು.

೧೭೦ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಧೃಷ್ಟದ್ಯುಮ್ನ-ದ್ರೋಣರ ಯುದ್ಧ: ಧೃಷ್ಟದ್ಯುಮ್ನನು ದ್ರುಮಸೇನನನ್ನು ಸಂಹರಿಸಿದುದು : ಕರ್ಣ-ಸಾತ್ಯಕಿಯರ ಯುದ್ಧ: ಕರ್ಣನು ದುರ್ಯೋಧನನಿಗೆ ಸಲಹೆನೀಡಿದುದು : ಶಕುನಿಯು ಪಾಂಡವರನ್ನು ಆಕ್ರಮಿಸಿದುದು

(ಸಂಜಯನು ೧೬೫ನೆಯ ಅಧ್ಯಾಯದ ೧೬ನೆಯ ಶ್ಲೋಕದಲ್ಲಿ ಸೂಚ್ಯವಾಗಿ ಹೇಳಿರುವುದನ್ನು (ದ್ರೋಣ-ಧೃಷ್ಟದ್ಯುಮ್ನರ ಯುದ್ಧವನ್ನು ) ಇಲ್ಲಿ ವಿಸ್ತರಿಸಿ ಹೇಳುತ್ತಾನೆ : )

"ಮಹಾರಾಜ! ಭಯಾವಹವಾದ, ಸುಘೋರವಾದ, ತುಮುಲ ಯುದ್ಧವು ನಡೆಯುತ್ತಿರಲಾಗಿ, ಧೃಷ್ಟದ್ಯುಮ್ನನು ದ್ರೋಣರ ಮೇಲೆಯೇ ಯುದ್ಧಕ್ಕೆ ಹೋದನು. ಧೃಷ್ಟದ್ಯುಮ್ನನು ಧನುಸ್ಸನ್ನು ಅನುಸಂಧಾನಮಾಡುತ್ತಾ, ಮೌರ್ವಿಯನ್ನು ಬಾರಿ-ಬಾರಿಗೂ ಸೆಳೆಯುತ್ತಾ, ಸುವರ್ಣವಿಭೂಷಿತವಾದ ದ್ರೋಣಾಚಾರ್ಯರ ರಥದ ಬಳಿಗೆ ವೇಗವಾಗಿ ಹೋದನು. ಧೃಷ್ಟದ್ಯುಮ್ನನು ದ್ರೋಣರನ್ನು ಮುಗಿಸಿಬಿಡಬೇಕೆನ್ನುವ ಇಚ್ಛೆಯಿಂದ ಅವರ ಸಮೀಪಕ್ಕೆ ಹೋಗುತ್ತಿರುವುದನ್ನು ಕಂಡು ಪಾಂಚಾಲಯೋಧರು ಪಾಂಡವ ಯೋಧರೊಡನೆ ಪಾರ್ಷತನನ್ನು ಸುತ್ತುವರಿದು ಬೆಂಬಲಿಗರಾಗಿ ನಿಂತರು. ಧೃಷ್ಟದ್ಯುಮ್ನನು ಪಾಂಚಾಲ-ಪಾಂಡವಯೋಧರಿಂದ ಪರಿವೃತನಾದುದನ್ನು ಕಂಡು ನಿನ್ನ ಮಕ್ಕಳು ಆಚಾರ್ಯಶ್ರೇಷ್ಠರಾದ ದ್ರೋಣರನ್ನು ಎಲ್ಲ ಕಡೆಗಳಿಂದಲೂ ಪ್ರಯತ್ನಪೂರ್ವಕವಾಗಿ ರಕ್ಷಿಸುತ್ತಿದ್ದರು. ಚಂಡಮಾರುತದ ವೇಗದಿಂದ ಅಲ್ಲೋಲ-ಕಲ್ಲೋಲವಾದ, ಅನೇಕಪ್ರಾಣಿಗಳನ್ನೊಳಗೊಂಡ, ಭಯಂಕರವಾದ ಎರಡು ಸಮುದ್ರಗಳೋಪಾದಿಯಲ್ಲಿ–ಅನೇಕಪ್ರಾಣಿಗಳಿಂದ (ಚತುರಂಗಬಲಸೈನ್ಯದಿಂದ) ಕೂಡಿದ್ದ ಎರಡು ಸೇನಾಸಮುದ್ರಗಳು ಭಯಂಕರವಾದ ಆ ರಾತ್ರಿಯಲ್ಲಿ ಸಂಘರ್ಷಿಸಿದುವು.

ಧೃಷ್ಟದ್ಯುಮ್ನನು ಬಹಳ ಬೇಗ ಐದು ಬಾಣಗಳಿಂದ ದ್ರೋಣರ ಹೃದಯಪ್ರದೇಶದಲ್ಲಿ ಪ್ರಹರಿಸಿ ಸಿಂಹನಾದವನ್ನು ಮಾಡಿದನು. ಅದಕ್ಕೆ ಪ್ರತಿಯಾಗಿ ದ್ರೋಣರು ಧೃಷ್ಟದ್ಯುಮ್ನನನ್ನು ಇಪ್ಪತ್ತೈದು ಬಾಣಗಳಿಂದ

ಪ್ರಹರಿಸಿ ಮತ್ತೊಂದು ಭಲ್ಲದಿಂದ ಮಹಾಧ್ವನಿಯನ್ನುಂಟುಮಾಡುವುದಾಗಿದ್ದ ಪಾರ್ಷತನ ಧನುಸ್ಸನ್ನು ಕತ್ತರಿಸಿದರು. ದ್ರೋಣರಿಂದ ಪ್ರಹೃತನಾದ ಧೃಷ್ಟದ್ಯುಮ್ನನು ಕೋಪದಿಂದ ಅವುಡುಗಚ್ಚುತ್ತಾ ಛಿನ್ನವಾಗಿ ಹೋದ ಧನುಸ್ಸನ್ನು ಬಿಸಾಡಿದನು. ಮರುಕ್ಷಣದಲ್ಲಿಯೇ ಪ್ರತಾಪವಂತನಾದ ಧೃಷ್ಟದ್ಯುಮ್ನನು ದ್ರೋಣರನ್ನು ಸಂಹರಿಸಬೇಕೆಂಬ ಆಶಯದಿಂದ ಮತ್ತೊಂದು ಶ್ರೇಷ್ಠವಾದ ಧನುಸ್ಸನ್ನು ಕೈಗೆತ್ತಿಕೊಂಡನು. ಶತ್ರುಹಂತಕನಾದ ಪಾರ್ಷತನು ಚಿತ್ರಿತವಾಗಿದ್ದ ಆ ಶ್ರೇಷ್ಠಧನುಸ್ಸನ್ನು ಆಕರ್ಣವಾಗಿ ಸೆಳೆದು ದ್ರೋಣರನ್ನು ವಿನಾಶಮಾಡಲು ಸಮರ್ಥವಾದ ಘೋರವಾದ ಬಾಣವೊಂದನ್ನು ಯೋಜಿಸಿ ದ್ರೋಣರ ಮೇಲೆ ಪ್ರಯೋಗಿಸಿದನು. ಆ ಮಹಾಯುದ್ಧಸಮಯದಲ್ಲಿ ಮಹಾಬಲಿಷ್ಠನಾದ ಧೃಷ್ಟದ್ಯುಮ್ನನಿಂದ ಬಿಡಲ್ಪಟ್ಟ ಆ ಬಾಣವು–ಉದಯಿಸಿದ ಸೂರ್ಯನು ಪ್ರಪಂಚವನ್ನು ಬೆಳಗುವಂತೆ–ತನ್ನ ಪ್ರಭೆಯಿಂದ ಸೈನ್ಯಸಮೂಹವನ್ನೇ ಬೆಳಗಿತು. ದೇವ-ಗಂಧರ್ವ-ಮಾನವರು ಅತ್ಯಂತಘೋರವಾದ ಆ ಬಾಣವನ್ನು ನೋಡಿ 'ದ್ರೋಣರಿಗೆ ಮಂಗಳವಾಗಲಿ.' 'ಸ್ವಸ್ತ್ಯಸ್ತು ದ್ರೋಣಾಯ' ಎಂದು ಹಾರೈಸಿದರು. ದ್ರೋಣರ ರಥದ ಸಮೀಪಕ್ಕೆ ರಭಸದಿಂದ ಬರುತ್ತಿದ್ದ ಆ ಬಾಣವನ್ನು ಕರ್ಣನು–ಅಸ್ತ್ರವಿದ್ಯೆಯಲ್ಲಿ ಸಿದ್ಧಹಸ್ತನಾದ ಯೋಧನಂತೆ–ಹನ್ನೆರಡು ತುಂಡುಗಳನ್ನಾಗಿ ಕತ್ತರಿಸಿದನು.

ಧನುಷ್ಮಂತನಾದ ಕರ್ಣನಿಂದ ಅನೇಕಪ್ರಕಾರವಾಗಿ ಛಿನ್ನ-ಭಿನ್ನವಾದ ಆ ಬಾಣವು ವಿಷರಹಿತವಾದ ಸರ್ಪದೋಪಾದಿಯಲ್ಲಿ ಕೆಳಕ್ಕೆ ಬಿದ್ದಿತು. ಅನಂತರ ಕರ್ಣನು ಧೃಷ್ಟದ್ಯುಮ್ನನನ್ನು ಹತ್ತು ಬಾಣಗಳಿಂದ ಪ್ರಹರಿಸಿದನು. ಅಶ್ವತ್ಥಾಮನು ಐದು ಬಾಣಗಳಿಂದಲೂ, ದ್ರೋಣರು ಏಳು ಬಾಣಗಳಿಂದಲೂ ಪಾರ್ಷತನನ್ನು ಪ್ರಹರಿಸಿದರು. ಶಲ್ಯನು ಹತ್ತು ಬಾಣಗಳಿಂದಲೂ, ದುಃಶಾಸನನು ಮೂರು ಬಾಣಗಳಿಂದಲೂ, ದುರ್ಯೋಧನನು ಇಪ್ಪತ್ತು ಬಾಣಗಳಿಂದಲೂ, ಶಕುನಿಯು ಐದು ಬಾಣಗಳಿಂದಲೂ ಪುನಃ-ಪುನಃ ಪ್ರಹರಿಸಿದರು. ಎಲ್ಲ ಮಹಾರಥರೂ ಸೇರಿ ಪಾಂಚಾಲ್ಯನನ್ನು ತ್ವರೆಯಿಂದ ಪ್ರಹರಿಸುತ್ತಿದ್ದರು. ಮಹಾಯುದ್ಧದ ಸಮಯದಲ್ಲಿ ದ್ರೋಣರ ರಕ್ಷಣೆಯ ಸಲುವಾಗಿ ನಿರತರಾಗಿದ್ದ ಏಳು ಮಂದಿ ಮಹಾರಥದಿಂದ ಪ್ರಹೃತನಾದ ಧೃಷ್ಟದ್ಯುಮ್ನನು ಸ್ವಲ್ಪವೂ ಗಾಬರಿಗೊಳ್ಳದೇ ಎಲ್ಲ ಮಹಾರಥರನ್ನೂ

ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ಅನಂತರ ದ್ರೋಣರನ್ನೂ ಅಶ್ವತ್ಥಾಮನನ್ನೂ, ಕರ್ಣನನ್ನೂ ಮತ್ತು ನಿನ್ನ ಮಗನಾದ ದುರ್ಯೋಧನ ನನ್ನೂ ಪುನಃ ಪ್ರಹರಿಸಿದನು. ಧನುಷ್ಮಂತನಾದ ಧೃಷ್ಟದ್ಯುಮ್ನನಿಂದ ಪ್ರಹೃತರಾದ ಕೌರವಮಹಾರಥರಲ್ಲಿ ಪ್ರತಿಯೊಬ್ಬರೂ ಐದೈದು ಬಾಣಗಳಿಂದ ಅವನನ್ನು ಪ್ರಹರಿಸಿದರು. ಆ ಸಮಯದಲ್ಲಿ ದ್ರುಮಸೇನನೆಂಬ ರಾಜನು ಪರಮಕ್ರುದ್ಧನಾಗಿ ಧೃಷ್ಟದ್ಯುಮ್ನನನ್ನು ಒಂದು ಬಾಣದಿಂದ ಪ್ರಹರಿಸಿ ಬಳಿಕ ಬೇರೆ ಮೂರು ನಿಶಿತವಾದ ಬಾಣಗಳಿಂದಲೂ ಪ್ರಹರಿಸಿ ನಿಲ್ಲು-ನಿಲ್ಲೆಂದು ಗರ್ಜಿಸಿದನು. ಅದಕ್ಕೆ ಪ್ರತಿಯಾಗಿ ಧೃಷ್ಟದ್ಯುಮ್ನನು ತೀಕ್ಷ್ಣವಾದ, ನೇರವಾಗಿ ಹೋಗುವ, ಸುವರ್ಣಮಯವಾದ ಮೂಲಭಾಗಗಳಿಂದ ಕೂಡಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಪ್ರಾಣಾಪಹಾರಿಗಳಾದ ಮೂರು ಬಾಣಗಳಿಂದ ದ್ರುಮಸೇನನನ್ನು ಪ್ರಹರಿಸಿದನು. ವೀರ್ಯವಂತನಾದ ಪಾರ್ಷತನು ಪುನಃ ಮತ್ತೊಂದು ಭಲ್ಲದಿಂದ ಚಿನ್ನದಿಂದ ನಿರ್ಮಿತವಾದ ಕಾಂತಿಯುಕ್ತವಾದ ಕುಂಡಲಗಳನ್ನು ಹೊಂದಿದ್ದ ದ್ರುಮಸೇನನ ಶಿರಸ್ಸನ್ನು ಶರೀರದಿಂದ ಕತ್ತರಿಸಿದನು. ಚಂಡಮಾರುತದ ಬೀಸುವಿಕೆಯಿಂದ ಪಕ್ವ ವಾಗಿರುವ ತಾಲಫಲವು (ತಾಟಿನಿಂಗು) ಕೆಳಕ್ಕೆ ಬೀಳುವಂತೆ–ಅವುಡುಗಚ್ಚಿ ದ್ದಂತೆಯೇ ದ್ರುಮಸೇನನ ಶಿರಸ್ಸು ಭೂಮಿಯ ಮೇಲೆ ಬಿದ್ದಿತು. ಬಳಿಕ ವೀರನಾದ ಧೃಷ್ಟದ್ಯುಮ್ನನು ಸುನಿಶಿತವಾದ ಬಾಣಗಳಿಂದ ದ್ರೋಣರೇ ಮೊದಲಾದ ಯೋಧರನ್ನು ಪ್ರಹರಿಸಿ ಚಿತ್ರಯೋಧಿಯಾದ ರಾಧೇಯನ ಧನುಸ್ಸನ್ನು ಭಲ್ಲಗಳಿಂದ ಕತ್ತರಿಸಿದನು. ಮಹಾಸಿಂಹವು ತನ್ನ ಬಾಲವನ್ನು ಕತ್ತರಿಸುವುದನ್ನು ಸಹಿಸದಂತೆ–ಕರ್ಣನೂ ಸಹ ಅತ್ಯುಗ್ರವಾದ ತನ್ನ ಧನುರ್ಭಂಗವನ್ನು ಸಹಿಸಿಕೊಳ್ಳಲಿಲ್ಲ. ಕ್ರೋಧದಿಂದ ಕೆಂಗಣ್ಣನಾಗಿದ್ದ ಕರ್ಣನು ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ಸುದೀರ್ಘವಾಗಿ ನಿಟ್ಟು ಸಿರುಬಿಡುತ್ತಾ ಮಹಾಬಲನಾದ ಧೃಷ್ಟದ್ಯುಮ್ನನನ್ನು ಬಾಣಗಳ ಸಮೂಹ ದಿಂದ ಆಕ್ರಮಿಸಿದನು. ಕರ್ಣನು ಬಹಳವಾಗಿ ಕೋಪಗೊಂಡಿರುವುದನ್ನು ನೋಡಿ ವೀರರಾದ ದ್ರೋಣ, ದುರ್ಯೋಧನ, ಅಶ್ವತ್ಥಾಮಾ, ಶಲ್ಯ, ದುಃಶಾ ಸನ, ಶಕುನಿ–ಆ ಆರುಮಂದಿ ಮಹಾರಥರು ಪಾಂಚಾಲ್ಯಪುತ್ರನನ್ನು ಸಂಹರಿ ಸುವ ಇಚ್ಛೆಯಿಂದ ಬಹಳ ಬೇಗ ಧೃಷ್ಟದ್ಯುಮ್ನನನ್ನು ಮುತ್ತಿದರು. ನಿನ್ನ

ಕಡೆಯ ಆರು ಮಂದಿ ಯೋಧರಿಂದಲೂ ಪುರಸ್ಕೃತನಾಗಿದ್ದ (ಎದುರಿಸಲ್ಪಟ್ಟ) ಧೃಷ್ಟದ್ಯುಮ್ನನು ಮೃತ್ಯುವಿನ ಬಾಯನ್ನು ಹೊಕ್ಕುಬಿಟ್ಟಿದ್ದಾನೆಂದೇ ನಾವು ಭಾವಿಸಿದೆವು. ಆ ಸಮಯಕ್ಕೆ ಸರಿಯಾಗಿ ದಾಶಾರ್ಹಕುಲತಿಲಕನಾದ ಸಾತ್ಯಕಿಯು ಶತ್ರುಗಳ ಮೇಲೆ ಬಾಣಗಳನ್ನೆರಚುತ್ತಾ ಪರಾಕ್ರಮಿಯಾದ ಧೃಷ್ಟದ್ಯುಮ್ನನ ಸಮೀಪಕ್ಕೆ ಬಂದನು. ಮೇಲೆ ಬೀಳಲು ರಭಸದಿಂದ ಬರುತ್ತಿದ್ದ, ಮಹಾಧನುಷ್ಮಂತನಾದ, ಯುದ್ಧದುರ್ಮದನಾದ ಸಾತ್ಯಕಿಯನ್ನು ರಾಧೇಯನು ನೇರವಾಗಿ ಹೋಗುವ ಹತ್ತು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಸಾತ್ಯಕಿಯು ಎಲ್ಲ ಮಹಾರಥರೂ ನೋಡುತ್ತಿದ್ದಂತೆಯೇ ಕರ್ಣನನ್ನು ಹತ್ತು ಬಾಣಗಳಿಂದ ಪ್ರಹರಿಸಿ 'ಓಡಿಹೋಗಬೇಡ ಕರ್ಣ! ನಿಲ್ಲು' ಎಂದೂ ಕೂಗುತ್ತಿದ್ದನು. ಆ ಸಮಯದಲ್ಲಿ ಬಲಿಷ್ಠನಾದ ಸಾತ್ಯಕಿಗೂ ಮತ್ತು ಮಹಾತ್ಮನಾದ ಕರ್ಣನಿಗೂ ನಡೆದ ದ್ವೈರಥಯುದ್ಧವು–ಹಿಂದೆ ಬಲಿಚಕ್ರವರ್ತಿಗೂ–ಇಂದ್ರನಿಗೂ ನಡೆದ ಯುದ್ಧದಂತೆಯೇ ಇದ್ದಿತು. ಕ್ಷತ್ರಿಯರ್ಷಭನಾದ ಸಾತ್ಯಕಿಯು ರಥಘೋಷದಿಂದ ಕ್ಷತ್ರಿಯರನ್ನು ಭಯಪಡಿಸುತ್ತಾ ರಾಜೀವಲೋಚನನಾದ ಕರ್ಣನನ್ನು ಪುನಃ ಬಾಣಗಳಿಂದ ಪ್ರಹರಿಸಿದನು. ಬಲಿಷ್ಠನಾದ ಸೂತಪುತ್ರನು ಧನುಸ್ಸಿನ ಘೋಷದಿಂದ ಭೂಮಿಯನ್ನೇ ನಡುಗಿಸುತ್ತಿರುವನೋ ಎಂಬಂತೆ ಧನುಸ್ಸನ್ನು ಬಾರಿ-ಬಾರಿಗೂ ಟೇಂಕರಿಸುತ್ತಾ ಸಾತ್ಯಕಿಯನ್ನು ಅನೇಕಬಾಣಗಳಿಂದ ಪ್ರಹರಿಸಿದನು. ಕರ್ಣನು ಶಿನಿಯ ಮೊಮ್ಮಗನಾದ ಶೈನೇಯನನ್ನು ವಿಪಾಠ, ಕರ್ಣೀ, ನಾರಾಚ, ವಜ್ರದಂತ, ಕ್ಷುರ–ಇವೇ ಮೊದಲಾದ ನೂರಾರು ಬಾಣಗಳಿಂದ ಕ್ಷತ-ವಿಕ್ಷತಗೊಳಿಸಿದನು. ಅದೇ ರೀತಿಯಲ್ಲಿ ವೃಷ್ಣಿಶ್ರೇಷ್ಠನಾದ ಶೈನೇಯನೂ ಕರ್ಣನೊಡನೆ ಯುದ್ಧಮಾಡುತ್ತಾ ಅವನನ್ನು ಬಾಣಗಳಿಂದಲೇ ಅಭಿಷೇಚಿಸಿದನು. ಅವರಿಬ್ಬರ ಯುದ್ಧವು ಸಮ-ಸಮವಾಗಿಯೇ ಇದ್ದಿತು.

ಅನಂತರ ನಿನ್ನ ಕಡೆಯ ಅನೇಕ ಯೋಧರೂ ಮತ್ತು ಕವಚವನ್ನು ಧರಿಸಿದ್ದ ಕರ್ಣನ ಮಗನಾದ ವೃಷಸೇನನೂ ಸೇರಿಕೊಂಡು ಸಾತ್ಯಕಿಯನ್ನು ನಾಲ್ಕುದಿಕ್ಕುಗಳಿಂದಲೂ ನಿಶಿತವಾದ ಬಾಣಗಳಿಂದ ಪ್ರಹರಿಸಿದರು. ಕ್ರುದ್ಧನಾದ ಸಾತ್ಯಕಿಯು ಆ ಮಹಾರಥರ ಮತ್ತು ಕರ್ಣನ ಅಸ್ತ್ರಗಳೆಲ್ಲವನ್ನೂ ಅಸ್ತ್ರಗಳಿಂದಲೇ ನಿರಸನಗೊಳಿಸಿ ವೃಷಸೇನನನ್ನು ವಕ್ಷಃಸ್ಥಳದಲ್ಲಿ ಪ್ರಹರಿಸಿ

ದನು. ಸಾತ್ಯಕಿಯು ಪ್ರಹರಿಸಿದ ಆ ಬಾಣದಿಂದ ಬಹಳವಾಗಿ ಗಾಯಗೊಂಡ ವೀರ್ಯವಂತನಾದ ವೃಷಸೇನನು ಪ್ರಜ್ಞಾಹೀನನಾಗಿ ಧನುಸ್ಸನ್ನು ಬಿಟ್ಟು ರಥದ ಪೀಠದಲ್ಲಿಯೇ ಬಿದ್ದುಬಿಟ್ಟನು. ಅನಂತರ ಕರ್ಣನು, ಮಹಾರಥನಾದ ವೃಷಸೇನನು ಮೃತನಾದನೆಂದೇ ಭಾವಿಸಿ ಪುತ್ರಶೋಕದಿಂದ ಪೀಡಿತನಾಗಿ ಸಾತ್ಯಕಿಯನ್ನು ಬಾಣಗಳಿಂದ ಬಹಳವಾಗಿ ಪೀಡಿಸತೊಡಗಿದನು. ಕರ್ಣನಿಂದ ಪೀಡಿಸಲ್ಪಟ್ಟ ಮಹಾರಥನಾದ ಸಾತ್ಯಕಿಯು ಕರ್ಣನನ್ನು ಅನೇಕ ಬಾಣಗಳಿಂದ ಪುನಃ ಪ್ರಹರಿಸಿದನು (ಆ ವೇಳೆಗೆ ವೃಷಸೇನನೂ ಚೇತರಿಸಿಕೊಂಡು ಸಾತ್ಯಕಿಯನ್ನು ಪೀಡಿಸತೊಡಗಿದನು). ಪುನಃ ಸಾತ್ಯಕಿಯು ಕರ್ಣನನ್ನು ಹತ್ತು ಬಾಣಗಳಿಂದಲೂ, ವೃಷಸೇನನನ್ನು ಏಳು ಬಾಣಗಳಿಂದಲೂ ಪ್ರಹರಿಸಿ ಅವರ ಕೈಚೀಲಗಳನ್ನೂ ಮತ್ತು ಧನುಸ್ಸುಗಳನ್ನೂ ಕತ್ತರಿಸಿದನು. ಪಿತಾ-ಪುತ್ರರು ಒಡನೆಯೇ ಬೇರೆಯ ಶತ್ರುಭಯಂಕರವಾದ ಎರಡು ಧನುಸ್ಸುಗಳನ್ನು ತೆಗೆದುಕೊಂಡು ಮೌರ್ವಿಯನ್ನು ಸೆಳೆದು ಕಟ್ಟಿ ಎಲ್ಲೆಡೆಗಳಿಂದಲೂ ನಿಶಿತವಾದ ಬಾಣಗಳನ್ನು ಸುರಿಸುತ್ತಾ ಸಾತ್ಯಕಿಯೊಡನೆ ಯುದ್ಧಮಾಡತೊಡಗಿದರು. ವೀರಶ್ರೇಷ್ಠರನ್ನು ಕ್ಷಯಿಸುವ ಭಯಂಕರವಾದ ಸಂಗ್ರಾಮವು ನಡೆಯುತ್ತಿರಲಾಗಿ, ಗಾಂಡೀವಧನುಸ್ಸಿನ ಧ್ವನಿಯು ಬಹಳವಾಗಿ ಕೇಳತೊಡ ಗಿತು. ಅರ್ಜುನನ ರಥದ ಗಡ-ಗಡಾಶಬ್ದವನ್ನೂ ಗಾಂಡೀವಧನುಸ್ಸಿನ ಟೇಂಕಾರಶಬ್ದವನ್ನೂ ಕೇಳಿದ ಸೂತಪುತ್ರನಾದ ಕರ್ಣನು ದುರ್ಯೋಧನ ನೊಡನೆ ಈ ಮಾತುಗಳನ್ನು ಹೇಳಿದನು :

"ಮಹಾರಾಜ! ಮಹಾಧನುರ್ಧಾರಿಯಾದ, ಕುಂತೀಪುತ್ರನಾದ ಅರ್ಜುನನು ನಮ್ಮ ಎಲ್ಲ ಸೈನಿಕರನ್ನೂ ಸಂಹರಿಸಿ, ನಮ್ಮ ಕಡೆಯ ಮುಖ್ಯ ಮುಖ್ಯರಾದ ಕುರುಯೋಧರನ್ನೂ ವಧೆಮಾಡಿ, ಶ್ರೇಷ್ಠವಾದ ಗಾಂಡೀವಧನು ಸ್ಸನ್ನು ಠೇಂಕರಿಸುತ್ತಿದ್ದಾನೆ. ಅವನೀಗ ಅಲ್ಲಿ ವಿಜಯಿಯಾಗಿದ್ದಾನೆ. ಗಾಂಡೀವಧನುಸ್ಸಿನ ಟೇಂಕಾರದೊಂದಿಗೆ ರಥದ ಗಡ-ಗಡಾ ಶಬ್ದವೂ ವಾಸು ದೇವನ ಗರ್ಜನೆಯೂ ಕೇಳಿಬರುತ್ತಿವೆ. ಪಾಂಡವನು ತನಗೆ ಅನುರೂಪವಾದ ಕಾರ್ಯವನ್ನೇ ಮಾಡುತ್ತಿದ್ದಾನೆಂಬುದು ವ್ಯಕ್ತವಾಗಿದೆ. ಅವನು ನಮ್ಮ ಕುರು ಸೇನೆಯನ್ನು ನಾನಾಪ್ರಕಾರವಾಗಿ ವಿಧ್ವಂಸನಗೊಳಿಸುತ್ತಿದ್ದಾನೆ. ನಮ್ಮ ಅನೇಕ ಸೈನ್ಯಸಮೂಹಗಳೂ ಚೆಲ್ಲಾ-ಪಿಲ್ಲಿಯಾಗಿ ಹೋಗಿವೆ. ಅವನ ಎದುರಿಗೆ

ಯಾರೂ ನಿಲ್ಲಲಾರರು. ಯಾವ ರೀತಿಯಲ್ಲಿ ವಾತಾಹತವಾದ ಮೇಘಗಳ ಸಮೂಹವು ಚದುರಿಹೋಗುತ್ತದೆಯೋ–ಅದೇ ರೀತಿಯಲ್ಲಿ ಅರ್ಜುನನನ್ನು ಎದುರಿಸಲು ಹೋದ ನಮ್ಮ ಸೈನ್ಯವು ಚೆದುರಿ ದಿಕ್ಕಾಪಾಲಾಗಿ ಹೋಗುತ್ತಿದೆ. ನಮ್ಮ ಸೈನಿಕರ ಅವಸ್ಥೆಯು ಸಮುದ್ರದಲ್ಲಿರುವ ಭಿನ್ನವಾದ ಹಡಗಿನಂತಾಗಿದೆ. ಗಾಂಡೀವಧನುಸ್ಸಿನಿಂದ ಬಿಡಲ್ಪಟ್ಟ ಬಾಣಗಳಿಂದ ಗಾಯಗೊಂಡು ಓಡಿಹೋಗುತ್ತಿರುವ ನೂರಾರು ಯೋಧರ ಘೋರವಾದ ಆರ್ತನಾದಗಳು ಇಲ್ಲಿಗೂ ಕೇಳಿಸುತ್ತಿವೆ.

ದುರ್ಯೋಧನ! ಈ ರಾತ್ರಿಯಲ್ಲಿ ಆಕಾಶದಲ್ಲಾಗುವ ಮೇಘದ ಗರ್ಜನೆಯಂತೆ–ಅರ್ಜುನನ ರಥದ ಸಮೀಪದಲ್ಲಿ ವಿಜಯಸೂಚಕವಾದ ದುಂದುಭಿಯ ಧ್ವನಿಯಾಗುತ್ತಿರುವುದನ್ನು ಕೇಳು. ಮಹಾರಾಜ! ಅರ್ಜುನನ ರಥದ ಸಮೀಪದಲ್ಲಿ ಹಾಹಾಕಾರವಾಗುತ್ತಿರುವುದನ್ನೂ, ಯಥೇಚ್ಛವಾದ ಸಿಂಹನಾದಗಳನ್ನೂ, ಇನ್ನೂ ಅನೇಕವಿಧವಾದ ಶಬ್ದಗಳನ್ನೂ ಆಲಿಸು. ನಮ್ಮ ಮಧ್ಯದಲ್ಲಿ ಸಾತ್ವತಶ್ರೇಷ್ಠನಾದ ಸಾತ್ಯಕಿಯು ನಿಂತಿದ್ದಾನೆ. ಇವನೇನಾದರೂ ನಮ್ಮ ಲಕ್ಷ್ಯಕ್ಕೆ ಸಿಕ್ಕುವುದಾದರೆ (ಇವನನ್ನೇನಾದರೂ ನಾವು ಸಂಹಾರಮಾಡಿದರೆ ) ಉಳಿದೆಲ್ಲಾ ಶತ್ರುಗಳನ್ನೂ ನಾವು ಜಯಿಸುತ್ತೇವೆಂಬುದು ನಿಶ್ಚಯ. ಪಾಂಚಾಲರಾಜನ ಮಗನಾದ ಈ ಧೃಷ್ಟದ್ಯುಮ್ನನು ರಥಶ್ರೇಷ್ಠರಾದ ಮತ್ತು ಶೂರರಾದ ಯೋಧರಿಂದ ಎಲ್ಲ ಕಡೆಗಳಿಂದಲೂ ಪರಿವೃತನಾಗಿ ದ್ರೋಣರೊಡನೆ ಯುದ್ಧದಲ್ಲಿ ತೊಡಗಿದ್ದಾನೆ. ನಾವೇನಾದರೂ ಸಾತ್ಯಕಿಯನ್ನೂ ದ್ರುಪದನ ಮಗನಾದ ಧೃಷ್ಟದ್ಯುಮ್ನನನ್ನೂ ಸಂಹರಿಸಿದ್ದೇ ಆದರೆ ನಿಃಸಂಶಯವಾಗಿ ನಮಗೆ ವಿಜಯವು ಲಭಿಸುತ್ತದೆ. ಆದುದರಿಂದ ನಾವೆಲ್ಲರೂ ಒಟ್ಟಾಗಿ ಸೇರಿ ಸುಭದ್ರೆಯ ಮಗನಾದ ಅಭಿಮನ್ಯುವನ್ನು ಸಂಹರಿಸಿದಂತೆ ಮಹಾರಥರಾದ, ವೀರರಾದ ಸಾತ್ಯಕಿ-ಧೃಷ್ಟದ್ಯುಮ್ನರನ್ನು ಸುತ್ತುವರಿದು ಇವರನ್ನು ಸಂಹರಿಸಲು ಸಂಪೂರ್ಣವಾಗಿ ಪ್ರಯತ್ನಿಸೋಣ. ಸಾತ್ಯಕಿಯು ಅನೇಕ ಕುರುಶ್ರೇಷ್ಠರೊಡನೆ ಯುದ್ಧದಲ್ಲಿ ತೊಡಗಿರುವನೆಂಬ ವಿಷಯವನ್ನು ತಿಳಿದು ಸವ್ಯಸಾಚಿಯು ದ್ರೋಣಾಚಾರ್ಯರ ಸೈನ್ಯದ ಕಡೆಗೆ ಬರುವ ಮೊದಲೇ ಇಲ್ಲಿರುವ ಅನೇಕ ರಥಶ್ರೇಷ್ಠರು ಅರ್ಜುನನ ಬಳಿಗೇ ಹೋಗಲಿ. ಸಾತ್ಯಕಿಯು ಅನೇಕ ಕೌರವಯೋಧರಿಂದ ಆಕ್ರಾಂತನಾಗಿರುವನೆಂಬ ವಿಷ

ಯವು ಅರ್ಜುನನ ಗಮನಕ್ಕೆ ಬರುವುದರೊಳಗಾಗಿಯೇ ಶೂರರಾದ ನೀವು ಅಪಾರಸಂಖ್ಯೆಯಲ್ಲಿ ಬಾಣಗಳನ್ನು ಬಿಡುವುದರಲ್ಲಿ ತ್ವರೆಮಾಡಿರಿ. ಸರಿಯಾದ ಯುದ್ಧನೀತಿಯನ್ನು ಸಿದ್ಧಪಡಿಸಬೇಕು ಮತ್ತು ಅದನ್ನು ಸರಿಯಾದ ಸಮಯದಲ್ಲಿ ಕಾರ್ಯರೂಪಕ್ಕೆ ತರಬೇಕು. ಈ ವಿಧಾನದಿಂದ ಸಾತ್ಯಕಿಯು ಪರಲೋಕಕ್ಕೆ ಹೋಗುವಂತೆ ಮಾಡು, ದುರ್ಯೋಧನ!"

ಮಹಾರಾಜ! ಕರ್ಣನ ಅಭಿಪ್ರಾಯವನ್ನು ತಿಳಿದು–ಇಂದ್ರನು ಯುದ್ಧ ಸಮಯದಲ್ಲಿ ವಿಷ್ಣುವನ್ನು ಕುರಿತು ಹೇಳಿದಂತೆ–ನಿನ್ನ ಮಗನು ಶಕುನಿಯನ್ನು ಕುರಿತು ಹೇಳಿದನು :

"ಮಾವ! ನೀನು, ಯುದ್ಧದಲ್ಲಿ ಹಿಂದಿರುಗದಿರುವ ಹತ್ತು ಸಾವಿರ ಗಜಸೈನ್ಯದೊಡನೆಯೂ ಮತ್ತು ಹತ್ತುಸಾವಿರ ರಥಸೈನ್ಯದೊಡನೆಯೂ ಶೀಘ್ರವಾಗಿ ಧನಂಜಯನಿರುವೆಡೆಗೆ ಹೋಗು. ದುಃಶಾಸನ, ದುರ್ವಿಷಹ, ಸುಬಾಹು ಮತ್ತು ದುಷ್ಪ್ರಧರ್ಷಣ–ಈ ಮಹಾರಥರು ಬಹುಸಂಖ್ಯಾತ ಪದಾತಿಗಳೊಡನೆ ನಿನ್ನನ್ನು ಅನುಸರಿಸಿ ಬರುತ್ತಾರೆ. ಮಹಾಬಾಹೋ! ಮಾತುಲ! ನೀನು ಕೃಷ್ಣಾರ್ಜುನರನ್ನೂ, ಧರ್ಮರಾಜನನ್ನೂ, ನಕುಲ-ಸಹದೇವರನ್ನೂ ಮತ್ತು ಭೀಮಸೇನನನ್ನೂ ಸಂಹರಿಸು. ದೇವತೆಗಳೆಲ್ಲರೂ ದೇವೇಂದ್ರನ ಮೇಲೆ ತಮ್ಮ ವಿಜಯದ ಭರವಸೆಯನ್ನಿಡುವಂತೆ ನಾನು ನನ್ನ ವಿಜಯದ ಭರವಸೆಯನ್ನು ನಿನ್ನ ಮೇಲೆಯೇ ಇಟ್ಟಿದ್ದೇನೆ (ನನ್ನ ವಿಜಯವು ಸಂಪೂರ್ಣವಾಗಿ ನಿನ್ನನ್ನೇ ಅವಲಂಬಿಸಿದೆ). ಅಗ್ನಿಯ ಮಗನಾದ ಸ್ಕಂದನು ಅಸುರರನ್ನು ಸಂಹರಿಸಿದಂತೆ–ನೀನು ಪಾಂಡವರನ್ನು ಸಂಹರಿಸು."

ದುರ್ಯೋಧನನ ಅಭಿಪ್ರಾಯವನ್ನು ತಿಳಿದ ಶಕುನಿಯು ದೊಡ್ಡದಾದ ಸೈನ್ಯದೊಡನೆಯೂ, ನಿನ್ನ ಮಕ್ಕಳೊಡನೆಯೂ ಪಾರ್ಥರಿದ್ದೆಡೆಗೆ ಧಾವಿಸಿದನು. ನಿನ್ನ ಮಕ್ಕಳಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಪಾಂಡುಪುತ್ರನನ್ನು ದಹಿಸುವ ಇಚ್ಛೆಯಿಂದ ಶಕುನಿಯು ಅರ್ಜುನನ ಬಳಿಗೆ ಹೋದನು. ಅನಂತರ ನಿನ್ನ ಕಡೆಯವರಿಗೂ ಮತ್ತು ಶತ್ರುಪಕ್ಷದವರಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು. ಪಾಂಡವರ ಸೈನ್ಯದ ಕಡೆಗೆ ಸೌಬಲನು ಸಸೈನ್ಯವಾಗಿ ಹೊರಟುಹೋದನಂತರ ಮಹಾಬಲಿಷ್ಠನಾದ ಕರ್ಣನು ಯುದ್ಧ ಸಮಯದಲ್ಲಿ ಅನೇಕಾನೇಕ ಬಾಣಗಳನ್ನು ಸುರಿಸುತ್ತಾ ಸಾತ್ಯಕಿಯನ್ನು

ಆಕ್ರಮಿಸಿದನು. ಕರ್ಣನನ್ನೇ ಅನುಸರಿಸಿ ನಿನ್ನ ಕಡೆಯ ಎಲ್ಲ ರಾಜರೂ ಸಾತ್ಯಕಿಯನ್ನು ಮುತ್ತಿದರು. ಅನಂತರ ದ್ರೋಣರು ಧೃಷ್ಟದ್ಯುಮ್ನನ ರಥದ ಬಳಿಗೆ ಹೋಗಿ ಅವನೊಡನೆ ಯುದ್ಧದಲ್ಲಿ ತೊಡಗಿದರು. ಆ ರಾತ್ರಿಯಲ್ಲಿ ದ್ರೋಣರಿಗೂ ಮತ್ತು ಪಾಂಚಾಲಯೋಧರಿಂದ ಪರಿವೃತನಾಗಿದ್ದ ಧೃಷ್ಟದ್ಯುಮ್ನನಿಗೂ ಅದ್ಭುತವಾದ ಮಹಾಯುದ್ಧವು ನಡೆಯಿತು.

೧೭೦ನೆಯ ಅಧ್ಯಾಯವು ಮುಗಿಯಿತು.

೧೭೧ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯು ದುರ್ಯೋಧನನನ್ನೂ, ಅರ್ಜುನನು ಶಕುನಿ-ಉಲೂಕರನ್ನೂ, ಧೃಷ್ಟದ್ಯುಮ್ನನು ಕೌರವರ ಸೈನ್ಯವನ್ನೂ ಪರಾಜಯಗೊಳಿಸಿದುದು

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ :

ಮಹಾರಾಜ! ಅನಂತರ ಯುದ್ಧದುರ್ಮದರಾದ ನಿನ್ನ ಕಡೆಯ ಎಲ್ಲ ಯೋಧರೂ ಅಸಹನೆಯಿಂದ ಕೂಡಿದವರಾಗಿ ಪರಮಕ್ರುದ್ಧರಾಗಿ ಯುಯುಧಾನನ ರಥದ ಬಳಿಗೆ ಬಹಳ ವೇಗದಿಂದ ಧಾವಿಸಿದರು. ಆ ಯೋಧರು ಚಿನ್ನ-ಬೆಳ್ಳಿಗಳಿಂದ ವಿಭೂಷಿತವಾದ ಸುಸಜ್ಜಾದ ರಥಗಳಲ್ಲಿಯೂ, ಕುದುರೆಗಳ ಮೇಲೂ, ಆನೆಗಳ ಮೇಲೂ ಕುಳಿತು ಸಾತ್ಯಕಿಯನ್ನು ಎಲ್ಲ ಕಡೆಗಳಿಂದಲೂ ಆಕ್ರಮಿಸಿದರು. ಕೌರವಮಹಾರಥರೆಲ್ಲರೂ ಕೋಟೆಯ ಆಕಾರದಲ್ಲಿ ಸಾತ್ಯಕಿಯನ್ನು ಸುತ್ತುವರಿದು ನಿಂತು ಸಿಂಹನಾದಗಳನ್ನು ಬಾರಿ- ಬಾರಿಗೂ ಮಾಡುತ್ತಾ ಸಾತ್ಯಕಿಯನ್ನು ಭಯಪಡಿಸುತ್ತಿದ್ದರು. ಸಾತ್ಯಕಿಯನ್ನು ವಧಿಸಲು ಇಚ್ಛಿಸಿದ್ದ ಮಹಾವೀರರಾದ ಕೌರವಯೋಧರು ತ್ವರೆಯಿಂದ ಸತ್ಯವಿಕ್ರಮನಾದ ಸಾತ್ಯಕಿಯನ್ನು ನಿಶಿತವಾದ ಬಾಣಗಳಿಂದ ಅಭಿಷೇಚಿಸಿದರು. ಶತ್ರುವೀರಹಂತಕನಾದ ಮಹಾಬಾಹುವಾದ ಸಾತ್ಯಕಿಯು ಎಲ್ಲರೂ ಒಟ್ಟಾಗಿ ಸೇರಿ ತನ್ನ ಮೇಲೆ ಬೀಳುತ್ತಿರುವುದನ್ನು ಕಂಡು ಅವರ ಮೇಲೆ ಅಪಾರಸಂಖ್ಯೆಯಲ್ಲಿ ಬಾಣಗಳನ್ನು ಸುರಿಸುತ್ತಾ ಅವರೆಲ್ಲರನ್ನೂ ಏಕಾಕಿಯಾಗಿಯೇ ಎದುರಿಸಿದನು. ಮಹಾಧನುಷ್ಮಂತನಾದ, ಯುದ್ಧದುರ್ಮದನಾದ, ವೀರನಾದ ಸಾತ್ಯಕಿಯು ಬಗ್ಗಿದ ಗಿಣ್ಣುಗಳಿದ್ದ ಉಗ್ರವಾದ ಬಾಣಗಳಿಂದ ಕೌರವಯೋಧರು ಬಿಟ್ಟ ಬಾಣಗಳೆಲ್ಲವನ್ನೂ ಕತ್ತರಿಸಿದನು.

ಮಾಧವನು ನಿನ್ನ ಸೈನ್ಯದಲ್ಲಿದ್ದ ಆನೆಗಳ ಸೊಂಡಿಲುಗಳನ್ನೂ, ಕುದುರೆ ಗಳ ಕತ್ತುಗಳನ್ನೂ, ಸೈನಿಕರ ಆಯುಧಸಹಿತವಾದ ತೋಳುಗಳನ್ನೂ ಕ್ಷುರಪ್ರ ಗಳಿಂದ ಕತ್ತರಿಸಿದನು. ಸಾತ್ಯಕಿಯ ಬಾಣಗಳಿಂದ ಕೆಳಕ್ಕೆ ಬಿದ್ದ ಚಾಮರ ಗಳಿಂದಲೂ, ಶ್ವೇತಛತ್ರಗಳಿಂದಲೂ ಸಮಾವೃತವಾಗಿದ್ದ ಭೂಮಿಯು ನಕ್ಷತ್ರ ಗಳಿಂದ ಕೂಡಿದ ಆಕಾಶದಂತೆಯೇ ಪ್ರಕಾಶಿಸುತ್ತಿದ್ದಿತು. ರಣಭೂಮಿಯಲ್ಲಿ ಸಾತ್ಯಕಿಯೊಡನೆ ಯುದ್ಧಮಾಡುತ್ತಿದ್ದ ಯೋಧರ ಮಹಾಘೋರವಾದ ಆರ್ತನಾದಗಳು–ಅಳುತ್ತಿರುವ ಪ್ರೇತಗಳ ಧ್ವನಿಗಳಂತೆಯೇ–ಕೇಳಿಬರುತ್ತಿ ದ್ದುವು. ಅಂತಹ ಘೋರವಾದ ಕೋಲಾಹಲಶಬ್ದದಿಂದ ಭೂಮಿಯು ತುಂಬಿಹೋಗಿದ್ದಿತು. ಆ ರಾತ್ರಿಯೂ ಸಹ ಅತ್ಯಂತ ತೀವ್ರವಾಗಿ ಭಯ ವನ್ನುಂಟುಮಾಡುವುದಾಗಿದ್ದಿತು. ರೋಮಾಂಚಕರವಾದ ಆ ರಾತ್ರಿಯಲ್ಲಿ ಯುಯುಧಾನನ ಬಾಣಗಳಿಂದ ಪ್ರಹೃತವಾದ ತನ್ನ ಸೈನ್ಯವು ಭಗ್ನವಾಗುತ್ತಿರು ವುದನ್ನು ನೋಡಿ ಮತ್ತು ಭಯಂಕರವಾದ ಅವರ ಆರ್ತನಾದಗಳನ್ನೂ ಕೇಳಿ ರಥಿಗಳಲ್ಲಿ ಶ್ರೇಷ್ಠನಾದ ನಿನ್ನ ಮಗ ದುರ್ಯೋಧನನು ಘೋರವಾದ ಆರ್ತನಾದವು ಬರುತ್ತಿದ್ದ ಸ್ಥಳಕ್ಕೇ ಕುದುರೆಗಳನ್ನು ಓಡಿಸುವಂತೆ ಸಾರಥಿಗೆ ಹೇಳಿದನು. ದುರ್ಯೋಧನನಿಂದ ಪ್ರೇರಿತನಾದ ಸಾರಥಿಯು ಶ್ರೇಷ್ಠವಾದ ಕುದುರೆಗಳನ್ನು ಸಾತ್ಯಕಿಯ ರಥವಿದ್ದೆಡೆಗೆ ಹೋಗುವಂತೆ ಚಪ್ಪರಿಸಿದನು. ಕ್ರುದ್ಧನಾಗಿದ್ದ, ಧೃಢಧನ್ವನಾದ, ಶ್ರಮವನ್ನು ಜಯಿಸಿದ್ದ, ಶೀಘ್ರಹಸ್ತನಾದ, ಚಿತ್ರಯೋಧಿಯಾದ ದುರ್ಯೋಧನನು ಸಾತ್ಯಕಿಯ ಮೇಲೆ ದಾಳಿಮಾಡಿ ದನು. ಸಾತ್ಯಕಿಯು, ರಕ್ತವೇ ಭೋಜನವಾಗಿರುವ, ಹನ್ನೆರಡು ಬಾಣಗಳನ್ನು ಕಿವಿಯ ತುದಿಯವರೆಗೂ ಸೆಳೆದು ದುರ್ಯೋಧನನನ್ನು ಪ್ರಹರಿಸಿದನು. ತಾನಿನ್ನೂ ಬರುತ್ತಿರುವಾಗಲೇ–ಬಾಣಗಳಿಂದ ಪ್ರಹರಿಸುವ ಮೊದಲೇ– ತನ್ನನ್ನು ಬಾಣಗಳಿಂದ ಗಾಯಗೊಳಿಸಿದ ಸಾತ್ಯಕಿಯನ್ನು ಅಸಹನಶೀಲನಾದ ದುರ್ಯೋಧನನು ಹತ್ತು ಬಾಣಗಳಿಂದ ಪ್ರಹರಿಸಿದನು. ಅನಂತರ ಎಲ್ಲ ಪಾಂಚಾಲಯೋಧರಿಗೂ ಮತ್ತು ಕೌರವಯೋಧರಿಗೂ ಅತ್ಯಂತಭಯಂಕರ ವಾದ, ದಾರುಣವಾದ ಯುದ್ಧವು ಪ್ರಾರಂಭವಾಯಿತು. ಕ್ರುದ್ಧನಾದ ಶೈನೇಯನು ಮಹಾರಥನಾದ ನಿನ್ನ ಮಗನನ್ನು ಎಂಬತ್ತು ಬಾಣಗಳಿಂದ ಎದೆ

ಯಲ್ಲಿ ಪ್ರಹರಿಸಿ, ಮತ್ತೆ ಕೆಲವು ಬಾಣಗಳಿಂದ ಕುದುರೆಗಳನ್ನೂ ಯಮಾಲಯಕ್ಕೆ ಕಳುಹಿಸಿದನು. ಮತ್ತೊಂದು ಬಾಣದಿಂದ ಸಾರಥಿಯನ್ನೂ ಬಹಳ ಬೇಗ ರಥದಿಂದ ಉರುಳಿಸಿದನು. ಕುದುರೆಗಳು ಸತ್ತುಹೋದುದನ್ನೂ, ಸಾರಥಿಯು ಹತನಾಗಿ ಕೆಳಕ್ಕೆ ಬಿದ್ದುದನ್ನೂ ಲೆಕ್ಕಿಸದೇ ನಿನ್ನ ಮಗನಾದ ದುರ್ಯೋಧನನು ರಥದ ಮೇಲೆಯೇ ಕುಳಿತು ನಿಶಿತವಾದ ಬಾಣಗಳನ್ನು ಶೈನೇಯನ ರಥದ ಕಡೆಗೆ ಪ್ರಯೋಗಿಸಿದನು. ಹೀಗೆ ನಿನ್ನ ಮಗನಿಂದ ಪ್ರಮುಕ್ತವಾದ ಐವತ್ತು ಬಾಣಗಳನ್ನೂ, ಬಾಣಬಿಡುವುದರಲ್ಲಿ ಸಿದ್ಧಹಸ್ತನಾದ ಯೋಧನೋಪಾದಿಯಲ್ಲಿ–ಸಾತ್ಯಕಿಯು ತನ್ನ ನಿಶಿತವಾದ ಬಾಣಗಳಿಂದ ಕತ್ತರಿಸಿಹಾಕಿದನು. ಅನಂತರ ಮಾಧವನು ಮತ್ತೊಂದು ಭಲ್ಲವನ್ನು ಧನುಸ್ಸಿನಲ್ಲಿ ಯೋಜಿಸಿ ಬಹಳ ಶೀಘ್ರವಾಗಿ ದುರ್ಯೋಧನನ ಮಹಾಧನುಸ್ಸನ್ನು ಮುಷ್ಟಿಯ ಪ್ರದೇಶದಲ್ಲಿ ಕತ್ತರಿಸಿದನು. ರಥದಿಂದಲೂ–ಧನುಸ್ಸಿನಿಂದಲೂ ಹೀನನಾಗಿದ್ದ, ಸರ್ವಲೋಕೇಶ್ವರನಾದ, ಪ್ರಭುವಾದ ದುರ್ಯೋಧನನು ಬಹಳ ಬೇಗ ಅತ್ಯಂತಕಾಂತಿಯುಕ್ತವಾಗಿದ್ದ ಕೃತವರ್ಮನ ರಥವನ್ನು ಹತ್ತಿದನು.

ಮಹಾರಾಜ! ಹೀಗೆ ದುರ್ಯೋಧನನು ಪರಾಜಿತನಾದನಂತರ ಶೈನೇಯನು ಆ ಮಧ್ಯರಾತ್ರಿಯಲ್ಲಿ ನಿಶಿತವಾದ ಬಾಣಗಳಿಂದ ನಿನ್ನ ಸೈನ್ಯವನ್ನು ದಿಕ್ಕಾಪಾಲಾಗಿ ಓಡುವಂತೆ ಮಾಡಿದನು.

ದುರ್ಯೋಧನನ ಆದೇಶದಂತೆ ಶಕುನಿಯು ಸಸೈನ್ಯನಾಗಿ ಅರ್ಜುನನೊಡನೆ ಯುದ್ಧಮಾಡಲು ಹೋದನೆಂದು ಹಿಂದೆ ಹೇಳಿದ್ದೆನಲ್ಲವೇ? ಶಕುನಿ ಮತ್ತು ಅರ್ಜುನರ ಯುದ್ಧವಾರ್ತೆಯನ್ನು ಹೇಳುವೆನು ; ಕೇಳು.

ಅನೇಕ ಸಾವಿರ ರಥಗಳಿಂದಲೂ, ಸಾವಿರಾರು ಗಜಸೈನಿಕರಿಂದಲೂ, ಸಾವಿರಾರು ಅಶ್ವಸೈನಿಕರಿಂದಲೂ ಕೂಡಿದ್ದ ಶಕುನಿಯು ಅರ್ಜುನನನ್ನು ನಾಲ್ಕು ಕಡೆಗಳಿಂದಲೂ ಆಕ್ರಮಿಸಿ ನಾನಾವಿಧವಾದ ಶಸ್ತ್ರಗಳಿಂದ ಅವನನ್ನು ಮುಚ್ಚಿದನು. ಕಾಲಚೋದಿತರಾದ ಕ್ಷತ್ರಿಯರು ಸಕಲವಿಧವಾದ ಮಹಾಸ್ತ್ರಗಳನ್ನೂ ಅರ್ಜುನನ ಮೇಲೆ ಪ್ರಯೋಗಿಸುತ್ತಾ ಯುದ್ಧಮಾಡುತ್ತಿದ್ದರು. ಅರ್ಜುನನು ಬಹುಸಂಖ್ಯಾತರಾದ ಶತ್ರುಸೈನಿಕರನ್ನು ಸಂಹರಿಸಿ ಬಹಳವಾಗಿ ಬಳಲಿದ್ದರೂ ಶಕುನಿಯೊಡನಿದ್ದ ಸಾವಿರಾರು ಗಜ-ರಥಾಶ್ವಸೈನಿಕರನ್ನು

ತಡೆದು ನಿಲ್ಲಿಸಿದನು. ಅನಂತರ ಸುಬಲನ ಮಗನಾದ, ಶೂರನಾದ ಶಕುನಿಯು ಯುದ್ಧದಲ್ಲಿ ನಿಶಿತವಾದ ಬಾಣಗಳಿಂದ ಅರ್ಜುನನನ್ನು ನಗು-ನಗುತ್ತಲೇ ಪ್ರಹರಿಸಿದನು. ಪುನಃ ನೂರು ಬಾಣಗಳಿಂದ ಶಕುನಿಯು ಅರ್ಜುನನ ರಥವನ್ನು ಮುಂದೆ ಹೋಗದಂತೆ ತಡೆದನು. ಅದಕ್ಕೆ ಪ್ರತಿಯಾಗಿ ಅರ್ಜುನನೂ ಶಕುನಿಯನ್ನು ಇಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಮಹಾ ಧನುಷ್ಮಂತರಾದ ಇತರ ಯೋಧರನ್ನೂ ಅರ್ಜುನನು ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ಧನಂಜಯನು ಬಾಣಗಳ ಸಮೂಹದಿಂದ ನಿನ್ನ ಕಡೆಯ ಯೋಧರೆಲ್ಲರನ್ನೂ ತಡೆದು ವಜ್ರಪಾಣಿಯಾದ ಇಂದ್ರನು ಅಸುರರನ್ನು ಗಾಯಗೊಳಿಸಿದಂತೆ–ಎಲ್ಲರನ್ನೂ ಬಹಳವಾಗಿ ಗಾಯಗೊಳಿಸಿದನು. ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟು ಕೆಳಗೆ ಬಿದ್ದಿದ್ದ, ಆನೆಯ ಸೊಂಡಿಲಿಗೆ ಸಮಾನವಾಗಿದ್ದ ಯೋಧರ ತೋಳುಗಳಿಂದ ವ್ಯಾಪ್ತವಾಗಿದ್ದ ರಣಭೂಮಿಯು ಐದು ಹೆಡೆಗಳಿಂದ ಕೂಡಿದ ಸರ್ಪಗಳಿಂದ ವ್ಯಾಪ್ತವಾಗಿರುವಂತೆಯೇ ಕಾಣುತ್ತಿದ್ದಿತು. ಕಿರೀಟಗಳಿಂದಲೂ, ಸುಂದರವಾದ ಮೂಗುಗಳಿಂದಲೂ, ಮನೋಹರವಾದ ಕುಂಡಲಗಳಿಂದಲೂ, ಕೋಪಗೊಂಡು ಕಚ್ಚಲ್ಪಟ್ಟಿದ್ದ ಅವುಡುಗಳಿಂದಲೂ, ಹೊರಬಂದಿರುವ ಕಣ್ಣುಗುಡ್ಡೆಗಳಿಂದಲೂ, ನಿಷ್ಕ-ಚೂಡಾಮಣಿ-ಹಾರಗಳಿಂದಲೂ, ಪ್ರಿಯವಾದ ಮಾತುಗಳನ್ನಾಡುತ್ತಿದ್ದ ವದನಗಳಿಂದಲೂ ಕೂಡಿದ್ದ ಶಿರಸ್ಸುಗಳಿಂದ ವ್ಯಾಪ್ತವಾಗಿದ್ದ ರಣಾಂಗಣವು ಕಮಲಗಳಿಂದ ವ್ಯಾಪ್ತವಾಗಿರುವಂತೆಯೇ ಪ್ರಕಾಶಿಸುತ್ತಿದ್ದಿತು. ಉಗ್ರಪರಾಕ್ರಮನಾದ ಅರ್ಜುನನು ಬಹಳ ಭಯಂಕರವಾದ ಸಂಹಾರ ಕಾರ್ಯವನ್ನು ಮಾಡಿ ಬಗ್ಗಿದ ಗಿಣ್ಣುಗಳಿದ್ದ ಐದು ಬಾಣಗಳಿಂದ ಶಕುನಿಯನ್ನು ಪುನಃ ಪ್ರಹರಿಸಿದನು. ಅನಂತರ ಮೂರು ಬಾಣಗಳಿಂದ ಶಕುನಿಯ ಮಗನಾದ ಉಲೂಕನನ್ನೂ ಪ್ರಹರಿಸಿದನು. ಅರ್ಜುನನ ಬಾಣಗಳಿಂದ ಗಾಯಗೊಂಡ ಉಲೂಕನು ಅರ್ಜುನನ ಸಖನಾದ ವಾಸುದೇವನನ್ನು ಬಾಣಗಳಿಂದ ಪ್ರಹರಿಸಿದನು ಮತ್ತು ಜಗತ್ತನ್ನೇ ತನ್ನ ಧ್ವನಿಯಿಂದ ಮುಚ್ಚಿಬಿಡುವನೋ ಎಂಬ ರೀತಿಯಲ್ಲಿ ಗಟ್ಟಿಯಾಗಿ ಗರ್ಜನೆಮಾಡಿದನು. ಅರ್ಜುನನು ಬಾಣಗಳಿಂದ ಶಕುನಿಯ ಧನುಸ್ಸನ್ನು ಕತ್ತರಿಸಿ ಅವನ ರಥದ ನಾಲ್ಕು ಕುದುರೆಗಳನ್ನೂ ಯಮನ ಮನೆಗೆ ಕಳುಹಿಸಿಕೊಟ್ಟನು. ಒಡನೆಯೇ ಶಕುನಿಯು

ತನ್ನ ರಥದಿಂದ ಕೆಳಕ್ಕೆ ಧುಮುಕಿ ಬಹಳ ಬೇಗ ಉಲೂಕನ ರಥವನ್ನು ಹತ್ತಿದನು. ಮಹಾರಥರಾದ ತಂದೆ-ಮಕ್ಕಳು ಒಂದೇ ರಥದಲ್ಲಿ ಕುಳಿತು–ಎರಡು ದಟ್ಟವಾದ ಮೇಘಗಳು ಪರ್ವತವನ್ನು ಜಲಧಾರೆಗಳಿಂದ ತೋಯಿಸುವಂತೆ–ಪಾರ್ಥನನ್ನು ಬಾಣಗಳಿಂದ ಅಭಿಷೇಚಿಸಿದರು. ಅರ್ಜುನನು ಆ ಇಬ್ಬರನ್ನೂ ನಿಶಿತವಾದ ಬಾಣಗಳಿಂದ ಪ್ರಹರಿಸಿ, ನಿನ್ನ ಸೈನ್ಯವನ್ನೂ ಅನೇಕಬಾಣಗಳ ಪ್ರಹಾರದಿಂದ ಪಲಾಯಿತರನ್ನಾಗಿ ಮಾಡುತ್ತಾ ಭಗ್ನಗೊಳಿಸಿದನು. ಯಾವ ರೀತಿಯಲ್ಲಿ ಚಂಡಮಾರುತದಿಂದ ಆಕಾಶದಲ್ಲಿರುವ ಮೋಡಗಳು ಚೆಲ್ಲಾಪಿಲ್ಲಿಯಾಗುತ್ತವೆಯೋ ಅದೇ ರೀತಿಯಲ್ಲಿ ಚಂಡಮಾರುತರೂಪವಾದ ಅರ್ಜುನನ ಬಾಣಗಳಿಂದ ನಿನ್ನ ಸೈನಿಕರು ಚೆಲ್ಲಾ-ಪಿಲ್ಲಿಯಾಗಿ ಓಡಿಹೋದರು. ಆ ಮಧ್ಯರಾತ್ರಿಯಲ್ಲಿ ಅರ್ಜುನನಿಂದ ವಧಿಸಲ್ಪಡುತ್ತಿದ್ದ ನಿನ್ನ ಸೈನ್ಯವು ಭಯಗೊಂಡು ಎಲ್ಲ ದಿಕ್ಕುಗಳನ್ನೂ ನೋಡುತ್ತಾ (ಯಾವ ದಿಕ್ಕಿಗೆ ಹೋಗಬೇಕೆಂಬ ಅರಿವೇ ಇಲ್ಲದೇ) ಓಡಿಹೋಯಿತು. ಕೆಲವು ಸೈನಿಕರು ತಮ್ಮ ವಾಹನಗಳನ್ನು (ಆನೆ-ಕುದುರೆಗಳನ್ನು ) ಯುದ್ಧಭೂಮಿಯಲ್ಲಿಯೇ ಬಿಟ್ಟು ಓಡಿಹೋದರು. ಮತ್ತೆ ಕೆಲವರು ಶೀಘ್ರವಾಗಿ ಹೋಗುವಂತೆ ವಾಹನಗಳನ್ನು ಚಾವಟಿಗಳಿಂದ ಪ್ರಹರಿಸುತ್ತಾ ಅಂಕುಶಗಳಿಂದ ತಿವಿಯುತ್ತಾ ಗಾಬರಿಗೊಂಡವರಾಗಿ ಆ ಗಾಢಾಂಧಕಾರದಲ್ಲಿ ಅತ್ತಲಿತ್ತ ಓಡಾಡುತ್ತಿದ್ದರು.

ಮಹಾರಾಜ! ಈ ರೀತಿಯಲ್ಲಿ ಕೃಷ್ಣಾರ್ಜುನರು ನಿನ್ನ ಕಡೆಯ ಯೋಧರನ್ನು ಗೆದ್ದು ಪರಮಹೃಷ್ಟರಾಗಿ ತಮ್ಮ-ತಮ್ಮ ಶಂಖಗಳನ್ನೂದಿದರು.

ಅತ್ತಲಾಗಿ ಧೃಷ್ಟದ್ಯುಮ್ನನು ದ್ರೋಣರನ್ನು ಮೂರು ಬಾಣಗಳಿಂದ ಪ್ರಹರಿಸಿ ನಿಶಿತವಾದೊಂದು ಬಾಣದಿಂದ ದ್ರೋಣರ ಧನುಸ್ಸಿನ ಮೌರ್ವಿಯನ್ನೂ ಕತ್ತರಿಸಿದನು. ಕ್ಷತ್ರಿಯಮರ್ದನರಾದ, ಶೂರರಾದ ದ್ರೋಣರು ಒಡನೆಯೇ ಆ ಧನುಸ್ಸನ್ನು ಕೆಳಗಿಟ್ಟು ಸಾರವತ್ತಾಗಿಯೂ (ದೃಢವಾಗಿಯೂ) ಮತ್ತು ವೇಗವುಳ್ಳದ್ದಾಗಿಯೂ ಇದ್ದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡರು. ಮರುಕ್ಷಣದಲ್ಲಿಯೇ ದ್ರೋಣರು ಧೃಷ್ಟದ್ಯುಮ್ನನನ್ನು ಏಳು ಬಾಣಗಳಿಂದ ಪ್ರಹರಿಸಿ, ಐದು ಬಾಣಗಳಿಂದ ಸಾರಥಿಯನ್ನೂ ಪ್ರಹರಿಸಿದರು. ಮಹಾರಥನಾದ ಧೃಷ್ಟದ್ಯುಮ್ನನು ತನ್ನ ಬಾಣಗಳಿಂದ ದ್ರೋಣರು ಬಿಟ್ಟ ಬಾಣಗಳನ್ನು ವಿನಾಶಗೊಳಿಸಿ–ಇಂದ್ರನು ಅಸುರಸೈನ್ಯವನ್ನು ಧ್ವಂಸಮಾಡಿ

ದಂತೆ–ಕೌರವರ ಸೈನ್ಯವನ್ನು ಧ್ವಂಸಮಾಡಿದನು. ಮಾರಿಷ! ನಿನ್ನ ಮಗನ ಸೈನ್ಯವು ಈ ರೀತಿಯಲ್ಲಿ ವಧಿಸಲ್ಪಡುತ್ತಿರಲಾಗಿ, ರಕ್ತವೇ ಅಲೆಗಳ ರೂಪದ ಲ್ಲಿದ್ದ ಮಹಾಘೋರವಾದ ನದಿಯೊಂದು ಪ್ರವಹಿಸತೊಡಗಿತು. ಯಮ



ರಾಜನ ಪಟ್ಟಣದ ಕಡೆಗೆ ಹರಿಯುವ ವೈತರಣೀನದಿಯಂತೆ ಆನೆ-ಕುದುರೆ ಮತ್ತು ಮನುಷ್ಯರ ಪ್ರಾಣಗಳನ್ನು ಹೊತ್ತ ಗಜಾಶ್ವ-ಪದಾತಿಗಳ ಶರೀರಗಳನ್ನೇ ರಕ್ತಪ್ರವಾಹದಲ್ಲಿ ಒಯ್ಯುತ್ತಿದ್ದ ಆ ಘೋರನದಿಯು ಎರಡೂ ಸೈನ್ಯಗಳ ಮಧ್ಯದಲ್ಲಿ ಹರಿಯುತ್ತಿದ್ದಿತು. ಪ್ರತಾಪವಂತನಾದ ಧೃಷ್ಟದ್ಯುಮ್ನನು ಕುರುಸೈನ್ಯವನ್ನು ಓಡಿಹೋಗುವಂತೆ ಮಾಡಿ ದೇವತೆಗಳ ಸಮೂಹದಲ್ಲಿ ಇಂದ್ರನು ತೇಜಸ್ಸಿನಿಂದ ರಾರಾಜಿಸುವಂತೆ–ಪಾಂಡವರ ಮಧ್ಯದಲ್ಲಿ ರಾರಾಜಿ ಸಿದನು.

ಅನಂತರ ಶಿಖಂಡಿ-ಧೃಷ್ಟದ್ಯುಮ್ನರೂ, ನಕುಲ-ಸಹದೇವರೂ,

ಸಾತ್ಯಕಿ-ವೃಕೋದರರೂ ವಿಜಯಸೂಚಕವಾಗಿ ತಮ್ಮ ದೊಡ್ಡ-ದೊಡ್ಡ ಶಂಖಗಳನ್ನೂದಿದರು. ಮಹಾರಥರಾದ, ವಿಜಯದಿಂದ ಉಲ್ಲಸಿತರಾದ, ರಣೋತ್ಕಟರಾದ ಪಾಂಡವರು–ನಿನ್ನ ಮಗ ದುರ್ಯೋಧನ, ಕರ್ಣ, ಶೂರ ರಾದ ದ್ರೋಣರು ಮತ್ತು ಅಶ್ವತ್ಥಾಮಾ–ಇವರೆಲ್ಲರೂ ನೋಡುತ್ತಿದ್ದಂತೆಯೇ ನಿನ್ನ ಕಡೆಯ ಸಾವಿರಾರು ರಥಸೈನಿಕರನ್ನು ಜಯಿಸಿ ಸಿಂಹಗಳು ಗರ್ಜನೆಮಾಡುವಂತೆಯೇ ಗರ್ಜನೆಮಾಡಿದರು."

೧೭೧ನೆಯ ಅಧ್ಯಾಯವು ಮುಗಿಯಿತು.

೧೭೨ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ದುರ್ಯೋಧನನ ನಿಂದನೆಯಿಂದ ಖತಿಗೊಂಡ ದ್ರೋಣ-ಕರ್ಣರ ಭೀಕರಯುದ್ಧ: ಪಾಂಡವಸೈನಿಕರ ಪಲಾಯನ : ಭೀಮಸೇನನು ಸೈನಿಕರನ್ನು ಹಿಂದಿರುಗಿಸಿದುದು : ಭೀಮಾರ್ಜುನರು ಕೌರವ ಸೈನ್ಯವನ್ನು ಪುನಃ ಆಕ್ರಮಿಸಿದುದು

ಸಂಜಯನು ರಾತ್ರಿಯ ಯುದ್ಧಕಥನವನ್ನು ಮುಂದುವರಿಸುತ್ತಾನೆ :

ಮಹಾರಾಜ! ಮಹಾತ್ಮರಾದ ಪಾಂಡವರಿಂದ ತನ್ನ ಸೈನ್ಯವು ಅವ್ಯಾಹತವಾಗಿ ವಧಿಸಲ್ಪಡುತ್ತಿರುವುದನ್ನೂ ಪಲಾಯನಮಾಡುತ್ತಿರುವು ದನ್ನೂ ಕಂಡು ನಿನ್ನ ಮಗನು ಕೋಪದಿಂದ ಕಿಡಿ-ಕಿಡಿಯಾದನು. ಯಾರೊ ಡನೆ–ಯಾವ ಸಮಯದಲ್ಲಿ–ಹೇಗೆ ಮಾತನಾಡಬೇಕೆಂಬ ಮಾತಿನ ಕಲೆ ಯನ್ನು ಬಲ್ಲವನಾಗಿದ್ದ ದುರ್ಯೋಧನನು ಕ್ರೋಧಪರವಶನಾಗಿ ವಿಜಯಿ ಗಳಲ್ಲಿ ಶ್ರೇಷ್ಠರಾದ ದ್ರೋಣರ ಮತ್ತು ಕರ್ಣನ ಬಳಿಗೆ ತ್ವರೆಯಿಂದ ಹೋಗಿ ಅವರೊಡನೆ ಈ ಮಾತುಗಳನ್ನು ಹೇಳಿದನು :

"ಸವ್ಯಸಾಚಿಯು ಸೈಂಧವನನ್ನು ಸಂಹರಿಸಿದುದನ್ನು ಕಂಡು ನೀವಿ ಬ್ಬರೂ ಕೋಪಾವಿಷ್ಟರಾಗಿ ಶತ್ರುಗಳನ್ನು ಧ್ವಂಸಮಾಡಬೇಕೆನ್ನುವ ನಿಶ್ಚಯ ದಿಂದ ರಾತ್ರಿಯಲ್ಲಿಯೇ ಯುದ್ಧವನ್ನು ಪ್ರಾರಂಭಿಸಿದಿರಿ. ಆದರೆ ಈಗಲೂ ಸಹ ಪಾಂಡವರ ಸೈನ್ಯವು ನನ್ನ ಸೈನ್ಯವನ್ನು ವಿನಾಶಗೊಳಿಸುತ್ತಲೇ ಇದೆ. ನೀವಿಬ್ಬರೂ ಪಾಂಡವರನ್ನು ಜಯಿಸಲು ಶಕ್ತರಾಗಿದ್ದರೂ ಅಶಕ್ತರೋ ಎಂಬಂತೆ ತೋರ್ಪಡಿಸಿಕೊಳ್ಳುತ್ತಿರುವಿರಿ. ಮಾನದರೇ! ನಿಮ್ಮಿಬ್ಬರಿಗೂ

ನಾನು ಬೇಡದವನಾಗಿದ್ದರೆ 'ಆವಾಂ ಪಾಣ್ಡುಸುತಾನ್ ಸಂಖ್ಯೇ ಜೇಷ್ಯಾವಃ' 'ನಾವಿಬ್ಬರೂ ಪಾಂಡುವಿನ ಮಕ್ಕಳನ್ನು ಯುದ್ಧದಲ್ಲಿ ಜಯಿಸುತ್ತೇವೆ'–ಎಂಬ ಮಾತನ್ನು ನನ್ನೊಡನೆ ಹೇಳಬಾರದಾಗಿತ್ತು.

**ತದೈವಾಹಂ ವಚಃ ಶ್ರುತ್ವಾ ಭವದ್ಭ್ಯಾಮನುಸಮ್ಮತಮ್ ।**
**ನಾಕರಿಷ್ಯಮಿದಂ ಪಾರ್ಥೈರ್ವೈರಂ ಯೋಧವಿನಾಶನಮ್ ॥೬॥**

ಪಾಂಡವರನ್ನು ಜಯಿಸಲು ಸಾಧ್ಯವಾಗಲಾರದೆಂದು ಆಗಲೇ ನೀವು ಹೇಳಿಬಿಟ್ಟಿದ್ದರೆ–ಪಾಂಡವರೊಡನೆ ಯುದ್ಧಮಾಡುವುದಕ್ಕೆ ನಿಮ್ಮ ಸಮ್ಮತಿ ಯಿರದಿದ್ದರೆ–ಸರ್ವಯೋಧರ ವಿನಾಶಕ್ಕೂ ಮೂಲಕಾರಣವಾದ ಈ ವೈರ ವನ್ನು ಪಾಂಡವರೊಡನೆ ನಾನು ಕಟ್ಟಿಕೊಳ್ಳುತ್ತಲೇ ಇರಲಿಲ್ಲ.

**ಯದಿ ನಾಹಂ ಪರಿತ್ಯಾಜ್ಯೋ ಭವದ್ಭ್ಯಾಂ ಪುರುಷರ್ಷಭೌ ।**
**ಯುಧ್ಯತಾಮನುರೂಪೇಣ ವಿಕ್ರಮೇಣ ಸುವಿಕ್ರಮೌ ॥೭॥**

ಪುರುಷರ್ಷಭರೇ! ಸುವಿಕ್ರಮರೇ! ನಿಮಗೆ ನಾನು ಬೇಕಾದವನಾಗಿ ದ್ದರೆ–ಈ ಸಮಯದಲ್ಲಿ ನನ್ನನ್ನು ಪರಿತ್ಯಾಗಮಾಡುವುದು ಉಚಿತವಲ್ಲವೆಂದು ನೀವು ಭಾವಿಸುವುದಾದರೆ–ನಿಮಗಿರುವ ಪರಾಕ್ರಮಕ್ಕೆ ಅನುರೂಪವಾಗಿ ಯುದ್ಧಮಾಡಿರಿ."

ಮಹಾರಾಜ! ತುಳಿಯಲ್ಪಟ್ಟ ಸರ್ಪಗಳೋಪಾದಿಯಲ್ಲಿ ನಿನ್ನ ಮಗನ ಮಾತೆಂಬ ಚಾವಟಿಯಿಂದ ಪ್ರಹೃತರಾದ ಕರ್ಣ-ದ್ರೋಣರು ಪುನಃ ಯುದ್ಧ ವನ್ನು ಪ್ರಾರಂಭಿಸಿದರು. ಸರ್ವಲೋಕಗಳಲ್ಲಿಯೂ ಶ್ರೇಷ್ಠಧನುರ್ಧಾರಿ ಗಳಾದ, ರಥಿಶ್ರೇಷ್ಠರಾದ ದ್ರೋಣ-ಕರ್ಣರಿಬ್ಬರೂ ಶೈನೇಯಪ್ರಮುಖರಾದ ಪಾಂಡವರನ್ನು ಆಕ್ರಮಿಸಿದರು. ಅದೇ ರೀತಿಯಲ್ಲಿ ಪಾಂಡವರೂ ಸಹ ತಮ್ಮ ಎಲ್ಲ ಸೈನ್ಯಗಳಿಂದಲೂ ಪರಿವೃತರಾಗಿ ಬಾರಿ-ಬಾರಿಗೂ ಗರ್ಜನೆಮಾಡುತ್ತಿದ್ದ ವೀರರಿಬ್ಬರನ್ನೂ ಎದುರಿಸಿದರು. ಸರ್ವಶಸ್ತ್ರವಿದರಲ್ಲಿ ಶ್ರೇಷ್ಠರಾದ, ಕ್ರುದ್ಧ ರಾಗಿದ್ದ, ಮಹಾಧನುಷ್ಮಂತರಾದ ದ್ರೋಣರು ಬಹಳ ಬೇಗ ಶಿನಿಪುಂಗವ ನನ್ನು ಹತ್ತು ಬಾಣಗಳಿಂದ ಪ್ರಹರಿಸಿದರು. ಕರ್ಣನು ಹತ್ತು ಬಾಣ ಗಳಿಂದಲೂ, ದುರ್ಯೋಧನನು ಏಳು ಬಾಣಗಳಿಂದಲೂ, ವೃಷಸೇನನು ಹತ್ತು ಬಾಣಗಳಿಂದಲೂ, ಶಕುನಿಯು ಏಳು ಬಾಣಗಳಿಂದಲೂ ಸಾತ್ಯಕಿ ಯನ್ನು ಪ್ರಹರಿಸಿದರು. ಕೌರವೇಶ್ವರ! ನಿನ್ನ ಕಡೆಯ ಆ ಯೋಧರೇ ಪುನಃ

ಶೈನೇಯನನ್ನು ಆಕ್ರಮಿಸಿದರು. ದ್ರೋಣರು ಪಾಂಡವರ ಸೈನ್ಯವನ್ನು ಧ್ವಂಸ ಮಾಡುತ್ತಿರುವುದನ್ನು ಕಂಡು ಸೋಮಕರು ಎಲ್ಲ ಕಡೆಗಳಿಂದಲೂ ಬಾಣಗಳ ಮಳೆಗಳಿಂದ ದ್ರೋಣರನ್ನು ಬಹಳವಾಗಿ ಗಾಯಗೊಳಿಸಿದರು. ಸೂರ್ಯ ದೇವನು ಸುತ್ತಲೂ ಇರುವ ಕತ್ತಲೆಯನ್ನು ಕಿರಣಗಳಿಂದ ನಾಶಪಡಿಸು ವಂತೆ–ದ್ರೋಣರು ಕ್ಷತ್ರಿಯಯೋಧರ ಪ್ರಾಣಗಳನ್ನು ರಶ್ಮಿರೂಪವಾದ ಬಾಣ ಗಳಿಂದ ಅಪಹರಿಸಿದರು. ದ್ರೋಣರು ಪಾಂಚಾಲಸೈನಿಕರನ್ನು ವಧಿಸುತ್ತಿರ ಲಾಗಿ, ಪರಸ್ಪರವಾಗಿ ಕೂಗಿಕೊಂಡು ರೋದನಮಾಡುತ್ತಿದ್ದ ಪಾಂಚಾಲರ ಭಯಂಕರ ಶಬ್ದವು ಕೇಳಿಬರುತ್ತಿದ್ದಿತು. ಜೀವವನ್ನು ಉಳಿಸಿಕೊಳ್ಳಬೇಕೆಂಬ ಗಾಬರಿಯಿಂದ ಓಡಿಹೋಗುತ್ತಿದ್ದ ಕೆಲವು ಸೈನಿಕರು ತಮ್ಮ ಮಕ್ಕಳನ್ನೂ ರಣಾಂಗಣದಲ್ಲಿಯೇ ಬಿಟ್ಟೋಡುತ್ತಿದ್ದರು. ಮತ್ತೆ ಕೆಲವರು ತಮ್ಮ ತಂದೆ ಯರನ್ನೇ ಬಿಟ್ಟೋಡುತ್ತಿದ್ದರು. ಅಣ್ಣ-ತಮ್ಮಂದಿರನ್ನೇ ಬಿಟ್ಟೋಡುತ್ತಿದ್ದರು. ಸೋದರಮಾವನು ಸೋದರಳಿಯನನ್ನೂ–ಸೋದರಳಿಯನು ಸೋದರ ಮಾವನನ್ನೂ ಬಿಟ್ಟೋಡುತ್ತಿದ್ದನು. "ಇವನು ನನ್ನ ಮಿತ್ರನು ; ಇವನನ್ನು ನನ್ನ ಜೊತೆಯಲ್ಲಿ ಕರೆದೊಯ್ಯಬೇಕು ; ಅವನೊಡನೆ ನಾನೂ ಯುದ್ಧಮಾಡ ಬೇಕು"–ಎಂಬ ಯಾವ ವಿವೇಚನೆಯೂ ಆ ಸಮಯದಲ್ಲಿ ಆ ಯೋಧರಿಗೆ ಇರಲಿಲ್ಲ. ಮಿತ್ರನು ಸಾಯುತ್ತಿದ್ದರೂ ಅವನ ಕಡೆಗೆ ಲಕ್ಷ್ಯವನ್ನೇ ಕೊಡದೇ ಓಡಿಹೋಗುತ್ತಿದ್ದರು. ಬಂಧು-ಬಾಂಧವರೆಂಬ ವಿವೇಚನೆಯೂ ಆ ಸಮಯ ದಲ್ಲಿ ಆ ಸೈನಿಕರಿಗೆ ಇರಲಿಲ್ಲ. ಪ್ರಾಣವುಳಿಸಿಕೊಂಡು ಪಲಾಯನಮಾಡುವುದೇ ಅವರ ಏಕೈಕಧ್ಯೇಯವಾಗಿದ್ದಿತು. ಬಂಧು-ಮಿತ್ರರೆಲ್ಲರನ್ನೂ ಅಲ್ಲಿಯೇ ಪರಿತ್ಯಜಿಸಿ ಜೀವವುಳಿಸಿಕೊಳ್ಳಬೇಕೆಂಬ ಕಾತರದಿಂದ ಓಡಿಹೋಗುತ್ತಿದ್ದರು. ಪಾಂಡವಯೋಧರಲ್ಲಿ ಕೆಲವರು ಮೋಹಪರವಶರಾಗಿ ತಾವು ಎಲ್ಲಿಗೆ ಹೋಗುತ್ತಿದ್ದೇವೆಂಬ ಅರಿವೇ ಇಲ್ಲದೇ ಪುನಃ ದ್ರೋಣರಿಗೆ ಅಭಿಮುಖ ರಾಗಿಯೇ ಹೋಗುತ್ತಿದ್ದರು. ಮತ್ತೆ ಕೆಲವರು ದ್ರೋಣರ ಬಾಣಗಳ ಮೂಲಕವಾಗಿ ಪರಲೋಕಯಾತ್ರೆಯನ್ನು ಮಾಡುತ್ತಿದ್ದರು.

ಮಹಾತ್ಮರಾದ ದ್ರೋಣರಿಂದ ಹೀಗೆ ಪೀಡಿಸಲ್ಪಡುತ್ತಿದ್ದ ಪಾಂಡವ ಸೈನಿಕರು ಕೈಗಳಲ್ಲಿದ್ದ ಸಾವಿರಾರು ಪಂಜುಗಳನ್ನೂ ಬಿಸುಟು ಭೀಮಸೇನ, ಕೃಷ್ಣಾರ್ಜುನರು, ನಕುಲ-ಸಹದೇವರು, ಧರ್ಮಪುತ್ರ ಮತ್ತು ಧೃಷ್ಟ

ದ್ಯುಮ್ನರು ನೋಡುತ್ತಿದ್ದಂತೆಯೇ ಓಡಿಹೋದರು. ಕತ್ತಲಿನಿಂದ ಆವೃತ ವಾಗಿದ್ದ ಆ ರಣಭೂಮಿಯಲ್ಲಿ ಯಾವುದೊಂದೂ ಕಾಣುತ್ತಿರಲಿಲ್ಲ. ಆದರೆ ಕೌರವರ ಪಕ್ಷದಲ್ಲಿದ್ದ ಪಂಜುಗಳ ಬೆಳಕಿನಿಂದ ಪಾಂಡವರು ದಿಕ್ಕಾಪಾಲಾಗಿ ಓಡುತ್ತಿದ್ದುದು ಕಾಣುತ್ತಿದ್ದಿತು. ಬೆನ್ನುತೋರಿಸಿಕೊಂಡು ಓಡಿಹೋಗುತ್ತಿದ್ದ ಪಾಂಡವರ ಸೈನ್ಯವನ್ನು ಮಹಾರಥರಾದ ದ್ರೋಣ-ಕರ್ಣರು ಹಿಂಬದಿ ಯಿಂದಲೇ ಬಾಣಗಳ ಮಳೆಗರೆಯುತ್ತಾ ಸಂಹರಿಸುತ್ತಿದ್ದರು.

ಪಾಂಚಾಲಸೇನೆಯು ಭಗ್ನವಾಗಿ ಸರ್ವತ್ರ ನಾಶಹೊಂದುತ್ತಿರಲಾಗಿ, ದೀನವಾದ ಮನಸ್ಸಿನಿಂದ ಕೂಡಿದ್ದ ಜನಾರ್ದನನು ಅರ್ಜುನನೊಡನೆ ಹೇಳಿದನು :

"ಅರ್ಜುನ! ಮಹಾಧನುಷ್ಮಂತರಾದ ದ್ರೋಣ-ಕರ್ಣರಿಬ್ಬರೂ ಒಟ್ಟಾಗಿ ಸೇರಿಕೊಂಡು ಧೃಷ್ಟದ್ಯುಮ್ನ-ಸಾತ್ಯಕಿಯರನ್ನೂ, ಪಾಂಚಾಲ ಸೈನಿಕರನ್ನೂ ಬಾಣಗಳಿಂದ ಬಹಳವಾಗಿ ಗಾಯಗೊಳಿಸುತ್ತಿದ್ದಾರೆ. ಇವರ ಬಾಣಗಳ ವರ್ಷದಿಂದಾಗಿ ನಮ್ಮ ಕಡೆಯ ಮಹಾರಥರೆಲ್ಲರೂ ವಿಧ್ವಂಸಿತರಾಗಿ ಹೋದರು. ದ್ರೋಣರಿಂದ ಪೀಡಿತರಾದ ನಮ್ಮ ಸೈನಿಕರು ನಾವು ಎಷ್ಟೇ ಧೈರ್ಯ ಹೇಳುತ್ತಿದ್ದರೂ ರಣರಂಗದಲ್ಲಿ ನಿಲ್ಲುತ್ತಿಲ್ಲ. ಹಿಂದು-ಮುಂದು ನೋಡದೇ ಪಲಾಯನಮಾಡುತ್ತಿದ್ದಾರೆ."

[ಮಹಾರಾಜ! ಶ್ರೀಕೃಷ್ಣನು ಈ ಮಾತನ್ನು ಹೇಳಿದನಂತರ ಓಡಿ ಹೋಗುತ್ತಿದ್ದ ತಮ್ಮ ಸೈನ್ಯವನ್ನು ನೋಡಿ ಕೃಷ್ಣಾರ್ಜುನರಿಬ್ಬರೂ ಏಕಕಂಠದಿಂದ ಸೈನಿಕರನ್ನುದ್ದೇಶಿಸಿ ಹೇಳಿದರು :]

**ಮಾ ವಿದ್ರವತ ವಿತ್ರಸ್ತಾ ಭಯಂ ತ್ಯಜತ ಪಾಣ್ಡವಾಃ ॥೨೬॥**

**ತಾವಾವಾಂ ಸರ್ವಸೈನ್ಯೈಶ್ಚ ವ್ಯೂಹ್ಯೈಃ ಸಮ್ಯಗುದಾಯುಧೈಃ ।**
**ದ್ರೋಣಂ ಚ ಸೂತಪುತ್ರಂ ಚ ಪ್ರಯತಾವಃ ಪ್ರಬಾಧಿತುಮ್ ॥೨೭॥**

"ಪಾಂಡವಸೈನಿಕರೇ! ಭಯಪಟ್ಟು ಓಡಿಹೋಗಬೇಡಿರಿ. ದ್ರೋಣ ರಿಂದ ಉಂಟಾಗಿರುವ ಭಯವನ್ನು ತ್ಯಜಿಸಿರಿ. ನಾವಿಬ್ಬರೂ ಎಲ್ಲ ಸೈನಿಕ ರಿಂದಲೂ ಕೂಡಿಕೊಂಡು ಸುಸಜ್ಜಿತವಾದ ವ್ಯೂಹವನ್ನು ರಚಿಸಿ ದ್ರೋಣರನ್ನೂ ಮತ್ತು ಸೂತಪುತ್ರನನ್ನೂ ಬಾಧೆಪಡಿಸಲು ಸಂಪೂರ್ಣವಾಗಿ ಪ್ರಯತ್ನಿಸುತ್ತೇವೆ."

ಮಹಾರಾಜ! ಶ್ರೀಕೃಷ್ಣನು ಸೈನಿಕರನ್ನು ಸಂಬೋಧಿಸಿ ಹೀಗೆ ಹೇಳಿ ಪುನಃ ಅರ್ಜುನನಿಗೆ ಹೇಳಿದನು :

"ಅರ್ಜುನ! ಕರ್ಣ-ದ್ರೋಣರು ಮಹಾಬಲಿಷ್ಠರು. ಮಹಾಶೂರರು. ಅಸ್ತ್ರವಿದ್ಯಾಪಾರಂಗತರು. ವಿಜಯವನ್ನು ಗಳಿಸಿ ಪ್ರಕಾಶಿಸತಕ್ಕವರು. ಇವರನ್ನೇನಾದರೂ ಉಪೇಕ್ಷಿಸಿದ್ದೇ ಆದರೆ ಈ ರಾತ್ರಿಯು ಮುಗಿಯುವುದರೊಳಗಾಗಿಯೇ ನಿನ್ನ ಎಲ್ಲ ಸೈನಿಕರನ್ನೂ ವಿನಾಶಮಾಡಿಬಿಡುತ್ತಾರೆ."

ಮಹಾರಾಜ! ಕೃಷ್ಣಾರ್ಜುನರಿಬ್ಬರೂ ಹೀಗೆ ಮಾತನಾಡಿಕೊಳ್ಳುತ್ತಿದ್ದಾಗ ಭಯಂಕರಕರ್ಮನಾದ, ಮಹಾಬಲನಾದ ವೃಕೋದರನು ಓಡಿಹೋಗುತ್ತಿದ್ದ ಸೈನ್ಯವನ್ನು ಹಿಂದಕ್ಕೆ ತಿರುಗಿಸಿಕೊಂಡು ದ್ರೋಣರೊಡನೆ ಯುದ್ಧಮಾಡಲು ಬರುತ್ತಿದ್ದನು. ಭೀಮಸೇನನು ಯುದ್ಧಮಾಡಲು ಬರುತ್ತಿರುವುದನ್ನು ಕಂಡು ಶ್ರೀಕೃಷ್ಣನು ಅರ್ಜುನನಿಗೆ ಸಂತೋಷವನ್ನುಂಟುಮಾಡುತ್ತಿರುವನೋ ಎಂಬಂತೆ ಹೇಳಿದನು :

"ಅರ್ಜುನ! ಸಮರಶ್ಲಾಘಿಯಾದ ಭೀಮಸೇನನು ಸೋಮಕ-ಪಾಂಡವಸೈನಿಕರಿಂದ ಸಮಾವೃತನಾಗಿ ವೇಗಪೂರ್ವಕವಾಗಿ ಮಹಾರಥರಾದ ಕರ್ಣ-ದ್ರೋಣರ ಕಡೆಗೆ ಧಾವಿಸುತ್ತಿದ್ದಾನೆ. ಈ ಸಮಯದಲ್ಲಿ ನೀನು ನಮ್ಮ ಕಡೆಯ ಸೈನಿಕರಿಗೆ ಆಶ್ವಾಸನೆಯನ್ನು ಕೊಡುವ ಸಲುವಾಗಿ ಭೀಮನಿಂದಲೂ ಮತ್ತು ಪಾಂಚಾಲಮಹಾರಥರಿಂದಲೂ ಕೂಡಿಕೊಂಡು ದ್ರೋಣ-ಕರ್ಣರೊಡನೆ ಯುದ್ಧಮಾಡು."

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿದ ನಂತರ ಪುರುಷವ್ಯಾಘ್ರರಾದ ಮಾಧವ-ಪಾರ್ಥರು ದ್ರೋಣ-ಕರ್ಣರ ಸಮೀಪಕ್ಕೆ ಹೋಗಿ ಯುದ್ಧಸನ್ನದ್ಧರಾಗಿ ನಿಂತರು. ಯುಧಿಷ್ಠಿರನ ಮಹಾಸೈನ್ಯವು ಹಿಂದಿರುಗಿತು. ದ್ರೋಣ-ಕರ್ಣರು ಪುನಃ ಪಾಂಡವಸೈನಿಕರನ್ನು ಯುದ್ಧದಲ್ಲಿ ಧ್ವಂಸಮಾಡಲು ತೊಡಗಿದರು. ಚಂದ್ರೋದಯದಿಂದ ಉಕ್ಕಿಬರುವ ಎರಡು ಸಮುದ್ರಗಳಂತೆಯೇ ಇದ್ದ ಎರಡೂ ಕಡೆಗಳ ಸೈನ್ಯಗಳಿಗೂ ಆ ರಾತ್ರಿಯಲ್ಲಿ ಮಹಾಭಯಂಕರವಾದ ಯುದ್ಧವು ಮತ್ತೆ ಪ್ರಾರಂಭವಾಯಿತು. ಅನಂತರ ನಿನ್ನ ಸೈನಿಕರು ತಮ್ಮ ಕೈಗಳಲ್ಲಿದ್ದ ಪಂಜುಗಳನ್ನು ಬಿಸುಟು ಪಾಂಡವ

ರೊಡನೆ ಉನ್ಮತ್ತರಾದವರಂತೆ ಸ್ಥಿರತೆಯಿಂದ ಯುದ್ಧಮಾಡತೊಡಗಿದರು. ಧೂಳಿನಿಂದಲೂ ಮತ್ತು ಕತ್ತಲಿನಿಂದಲೂ ಸಮಾವೃತವಾಗಿದ್ದ ಅತ್ಯಂತ ದಾರುಣವಾಗಿದ್ದ ಆ ರಾತ್ರಿಯಲ್ಲಿ ವಿಜಯೇಚ್ಛುಗಳಾದ ಎರಡೂ ಪಕ್ಷಗಳ ಯೋಧರು ತಮ್ಮ ನಾಮ-ಗೋತ್ರಗಳನ್ನು ಹೇಳಿಕೊಂಡೇ ಯುದ್ಧಮಾಡುತ್ತಿದ್ದರು. ಸ್ವಯಂವರಸಮಯದಲ್ಲಿ ತುಂಬಿದ ಮಹಾಸಭೆಯಲ್ಲಿ ತಮ್ಮ ಕುಲ-ಗೋತ್ರಗಳನ್ನು ಹೇಳಿಕೊಳ್ಳುವಂತೆ ಪರಸ್ಪರವಾಗಿ ಯುದ್ಧಮಾಡುವಾಗ ಕೌರವ-ಪಾಂಡವಯೋಧರು ತಮ್ಮ ನಾಮಗೋತ್ರಗಳನ್ನು ಎದುರಾಳಿಗೆ ಕೇಳಿಸುವಂತೆ ಹೇಳುತ್ತಿದ್ದರು. ಕ್ರುದ್ಧರಾಗಿ ಯುದ್ಧಮಾಡುತ್ತಿದ್ದ, ಪರಾಜಿತರಾಗುತ್ತಿದ್ದ ಮತ್ತು ವಿಜಯಗಳಿಸುತ್ತಿದ್ದ ಯೋಧರ ಗರ್ಜನೆಗಳು ಒಮ್ಮೆ ನಿಂತೇ ಹೋಗುತ್ತಿದ್ದುವು. ಸ್ವಲ್ಪಹೊತ್ತಿನಲ್ಲಿಯೇ ಪುನಃ ದೊಡ್ಡದಾದ ಕೋಲಾಹಲ ಶಬ್ದವು ಕೇಳಿಸುತ್ತಿದ್ದಿತು. ಕುರುಸತ್ತಮನೇ! ಯಾವ ಯಾವ ಸ್ಥಳದಲ್ಲಿ ಪಂಜುಗಳ ಬೆಳಕು ಕಾಣುತ್ತಿದ್ದಿತೋ–ಆಯಾ ಸ್ಥಳದಲ್ಲಿ ಬೆಂಕಿಯನ್ನು ಕಂಡು ಅದರ ಬಳಿಗೆ ಓಡಿಹೋಗುವ ಪತಂಗದ ಹುಳುಗಳೋಪಾದಿಯಲ್ಲಿ–ಯೋಧರು ಯುದ್ಧಮಾಡಲು ಓಡಿಹೋಗುತ್ತಿದ್ದರು. ಹಾಗೆ ಯುದ್ಧಮಾಡುತ್ತಿದ್ದ ಪಾಂಡವರ ಮತ್ತು ಕೌರವರ ಸುತ್ತಲೂ ಗಾಢವಾದ ರಾತ್ರಿಯ ಕತ್ತಲು ಕವಿಯಿತು."

೧೭೨ನೆಯ ಅಧ್ಯಾಯವು ಮುಗಿಯಿತು.

೧೭೩ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಕರ್ಣನು ಧೃಷ್ಟದ್ಯುಮ್ನನನ್ನೂ ಪಾಂಚಾಲರನ್ನೂ ಪರಾಜಯಗೊಳಿಸಿದುದು : ಯುಧಿಷ್ಠಿರನ ಆತಂಕ : ಕೃಷ್ಣಾರ್ಜುನರು ಕರ್ಣನೊಡನೆ ಯುದ್ಧಕ್ಕೆ ಹೋಗುವಂತೆ ಘಟೋತ್ಕಚನನ್ನು ಪ್ರೋತ್ಸಾಹಿಸಿ ಕರ್ಣನೊಡನೆ ಯುದ್ಧಮಾಡಲು ಕಳುಹಿಸಿದುದು

ಸಂಜಯನು ಮುಂದುವರಿದು ಹೇಳುತ್ತಾನೆ :

"ಮಹಾರಾಜ! ಶತ್ರುವೀರಹಂತಕನಾದ ಕರ್ಣನು ರಣಭೂಮಿಯಲ್ಲಿ ಮರ್ಮಭೇದಿಗಳಾದ ಹತ್ತು ಬಾಣಗಳನ್ನು ಧೃಷ್ಟದ್ಯುಮ್ನನ ವಕ್ಷಃಸ್ಥಳದಲ್ಲಿ ಪ್ರಯೋಗಿಸಿದನು. ಹೃಷ್ಟನಾಗಿದ್ದ ಧೃಷ್ಟದ್ಯುಮ್ನನೂ ಸಹ ಹತ್ತು ಬಾಣ

ಗಳಿಂದ ಬಹಳ ಶೀಘ್ರವಾಗಿ ಕರ್ಣನನ್ನು ಪ್ರಹರಿಸಿದನು ಮತ್ತು ಹೃಷ್ಟನಾಗಿ 'ನಿಲ್ಲು-ನಿಲ್ಲೆಂದು' ಗರ್ಜಿಸಿದನು. ಮಹಾರಥರಾದ ಕರ್ಣ-ಧೃಷ್ಟದ್ಯುಮ್ನರು ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಮುಚ್ಚಿದರು. ಪುನಃ ಆಕರ್ಣವಾಗಿ ಸೆಳೆದು ಬಿಡುತ್ತಿದ್ದ ಬಾಣಗಳಿಂದ ಪರಸ್ಪರವಾಗಿ ಗಾಯಗೊಳಿಸುತ್ತಿದ್ದರು. ಅನಂತರ ಕರ್ಣನು ಪಾಂಚಾಲಮುಖ್ಯನಾದ ಧೃಷ್ಟದ್ಯುಮ್ನನ ಸಾರಥಿಯನ್ನೂ, ರಥದ ನಾಲ್ಕು ಕುದುರೆಗಳನ್ನೂ ಬಾಣಗಳಿಂದ ಸಂಹರಿಸಿದನು. ಧೃಷ್ಟದ್ಯುಮ್ನನು ಹಿಡಿದಿದ್ದ ಶ್ರೇಷ್ಠವಾದ ಧನುಸ್ಸನ್ನೂ ಸಹ ಕರ್ಣನು ನಿಶಿತವಾದ ಬಾಣಗಳಿಂದ ಕತ್ತರಿಸಿದನು. ಅನಂತರ ಭಲ್ಲವನ್ನು ಪ್ರಯೋಗಿಸಿ ಸತ್ತುಹೋಗಿದ್ದ ಸಾರಥಿಯನ್ನು ಅವನು ಕುಳಿತಿದ್ದ ಆಸನದಿಂದ ಕೆಳಕ್ಕೆ ಬೀಳಿಸಿದನು. ಹತಾಶ್ವನಾದ, ಹತಸಾರಥಿಯಾದ, ಆ ಕಾರಣಗಳಿಂದಲೇ ರಥಹೀನನೂ ಆಗಿದ್ದ ಧೃಷ್ಟದ್ಯುಮ್ನನು ಘೋರವಾದ ಪರಿಘಾಯುಧವನ್ನು ಕೈಗೆತ್ತಿಕೊಂಡು ರಭಸದಿಂದ ಪ್ರಹರಿಸಿ ಕರ್ಣನ ಕುದುರೆಗಳನ್ನು ಅರೆದುಬಿಟ್ಟನು. ಆದರೂ ಸಹ ಕರ್ಣನು ಸರ್ಪೋಪಮವಾದ ಅಸಂಖ್ಯಾತವಾದ ಬಾಣಗಳನ್ನು ಧೃಷ್ಟದ್ಯುಮ್ನನ ಮೇಲೆ ಪ್ರಯೋಗಿಸುತ್ತಲೇ ಇದ್ದನು. ಅದರಿಂದ ಬಹಳವಾಗಿ ಪೀಡಿತನಾದ ಪಾರ್ಷತನು ಕಾಲ್ನಡಿಗೆಯಲ್ಲಿಯೇ ಯುಧಿಷ್ಠಿರನ ಸೈನ್ಯಕ್ಕೆ ಹೋಗಿ ಸೇರಿಕೊಂಡನು. ಅಲ್ಲವನು ಸಹದೇವನ ರಥವನ್ನು ಹತ್ತಿಕೊಂಡನು. ಕರ್ಣನೊಡನೆ ಪುನಃ ಯುದ್ಧಮಾಡಲಿಚ್ಛಿಸಿದ್ದ ಪಾರ್ಷತನನ್ನು ಯುಧಿಷ್ಠಿರನೇ ತಡೆದನು. ಅದರಿಂದ ಪರಮಹೃಷ್ಟನಾದ ಮಹಾತೇಜಸ್ವಿಯಾದ ಕರ್ಣನು ಸಿಂಹನಾದದೊಡನೆ ಧನುಸ್ಸನ್ನು ಟೇಂಕರಿಸುತ್ತಾ ಶಂಖವನ್ನೂ ಗಟ್ಟಿಯಾಗಿ ಊದಿದನು. ಪಾರ್ಷತನು ಕರ್ಣನಿಂದ ಪರಾಜಿತನಾದುದನ್ನು ಕಂಡು ಪಾಂಚಾಲ-ಸೋಮಕಮಹಾರಥರು ಕ್ರೋಧಪರವಶರಾಗಿ ಸೂತಪುತ್ರನನ್ನು ವಧಿಸುವ ಇಚ್ಛೆಯಿಂದ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಮೃತ್ಯುವನ್ನೇ ತಮ್ಮ ನಿವರ್ತನಸ್ಥಾನವನ್ನಾಗಿ ಕಲ್ಪಿಸಿಕೊಂಡು ('ಗೆಲ್ಲು ಅಥವಾ ಮಡಿ' ಎಂಬ ನಿರ್ಧಾರವನ್ನು ಕೈಗೊಂಡು ) ಕರ್ಣನ ಬಳಿಗೆ ಹೊರಟರು.

ಇತ್ತಲಾಗಿ ಕರ್ಣನ ಸಾರಥಿಯು ಶಂಖದಂತೆ ಬಿಳಿಯ ಬಣ್ಣದಿಂದ ಕೂಡಿದ್ದ, ವೇಗಯುಕ್ತವಾಗಿದ್ದ, ರಥವನ್ನು ವ್ಯವಸ್ಥಿತವಾದ ರೀತಿಯಲ್ಲಿ

ಎಳೆದುಕೊಂಡು ಹೋಗಲು ಸಮರ್ಥವಾಗಿದ್ದ (ಸುಶಿಕ್ಷಿತವಾಗಿದ್ದ) ಬೇರೆಯ ಸಿಂಧೀಕುದುರೆಗಳನ್ನು ರಥಕ್ಕೆ ಕಟ್ಟಿದನು. ಲಕ್ಷ್ಯಭೇದನದಲ್ಲಿ ಸಿದ್ಧಹಸ್ತನಾಗಿದ್ದ ರಾಧೇಯನು ಶ್ರಮಿಸುತ್ತಾ–ಮೇಘವು ಜಲವೃಷ್ಟಿಯಿಂದ ಪರ್ವತದ ಮಣ್ಣನ್ನು ಕೊಚ್ಚಿಸುವಂತೆ–ಬಾಣಗಳಿಂದ ಮಹಾರಥರಾದ ಪಾಂಚಾಲರನ್ನು, ಬಹಳವಾಗಿ ಪೀಡಿಸಿದನು. ಪಾಂಚಾಲರ ಆ ಮಹಾಸೈನ್ಯವು ಕರ್ಣನಿಂದ ಬಹಳವಾಗಿ ಪೀಡಿಸಲ್ಪಟ್ಟು ಸಿಂಹದಿಂದ ಭಯಗೊಂಡು ಓಡಿಹೋಗುವ ಜಿಂಕೆಗಳೋಪಾದಿಯಲ್ಲಿ ಭಯದಿಂದ ಓಡಿಹೋಯಿತು. ಹಾಗೆ ಓಡಿ ಹೋಗುತ್ತಿದ್ದಾಗ ಕುದುರೆಗಳಿಂದ ಬಿದ್ದವರೂ, ಆನೆಗಳಿಂದ ಬಿದ್ದವರೂ, ರಥಗಳಿಂದ ಬಿದ್ದವರೂ ರಣಭೂಮಿಯಲ್ಲಿ ಕಾಣಿಸುತ್ತಿದ್ದರು. ಮಹಾಯುದ್ಧ ಸಮಯದಲ್ಲಿ ಕರ್ಣನು ಭಯಗೊಂಡು ಓಡಿಹೋಗುತ್ತಿದ್ದ ಯೋಧನ ಕೈಗಳನ್ನೂ, ಕುಂಡಲಯುಕ್ತವಾದ ಶಿರಸ್ಸನ್ನೂ ಕ್ಷುರಪ್ರಗಳಿಂದ ಕತ್ತರಿಸುತ್ತಿದ್ದನು. ಮತ್ತೊಬ್ಬನ ತೊಡೆಗಳನ್ನೇ ಕತ್ತರಿಸಿದನು. ಹೀಗೆ ಕರ್ಣನು, ಯುದ್ಧದಿಂದ ಓಡಿಹೋಗುತ್ತಿರುವವನು ಆನೆಯ ಮೇಲೆಯೇ ಕುಳಿತಿರಲಿ ; ಕುದುರೆಯ ಮೇಲೆಯೇ ಕುಳಿತಿರಲಿ ; ಪದಾತಿಯೇ ಆಗಿರಲಿ–ಅವನ ತೋಳು, ಶಿರಸ್ಸು ಮತ್ತು ತೊಡೆಗಳನ್ನು ಕತ್ತರಿಸಿಹಾಕುತ್ತಿದ್ದನು. ಓಡಿಹೋಗುತ್ತಿದ್ದ ಅನೇಕ ಮಹಾರಥರಿಗೆ ತಮ್ಮ ಶರೀರಗಳ ಅಂಗಗಳು ಕತ್ತರಿಸಿಹೋಗಿವೆಯೆಂದಾಗಲೀ–ತಮ್ಮ ವಾಹನಗಳಿಗೆ (ಆನೆ-ಕುದುರೆಗಳಿಗೆ) ಪೆಟ್ಟುಬಿದ್ದಿದೆಯೆಂದಾಗಲೀ–ತಿಳಿಯುತ್ತಲೇ ಇರಲಿಲ್ಲ. ಕರ್ಣನ ಬಾಣಗಳಿಂದ ಸತತವಾಗಿ ವಧಿಸಲ್ಪಡುತ್ತಿದ್ದ ಸೃಂಜಯ-ಪಾಂಚಾಲರು ಹುಲ್ಲುಕಡ್ಡಿಯು ಅಳ್ಳಾಡಿದರೂ ಕರ್ಣನೇ ಬಂದುಬಿಟ್ಟನೆಂದು ಗಾಬರಿಗೊಳ್ಳುತ್ತಿದ್ದರು. ತಮ್ಮ ಪಕ್ಷದವನೇ ಆದ ಯೋಧನೊಬ್ಬನು ಮತಿಗೆಟ್ಟು ತಮ್ಮ ಕಡೆಗೆ ಓಡಿಬರುತ್ತಿದ್ದರೂ ಅವನನ್ನೂ ಕರ್ಣನೆಂದೇ ಭ್ರಮಿಸಿ ಭಯದಿಂದ ಪಲಾಯನಮಾಡುತ್ತಿದ್ದರು. ಈ ರೀತಿಯಲ್ಲಿ ಪಾಂಚಾಲ ಸೃಂಜಯಸೈನ್ಯಸಮೂಹಗಳು ಭಗ್ನವಾಗಿ ಹೋದುವು. ಸೈನಿಕರು ದಿಕ್ಕಾಪಾಲಾಗಿ ಓಡಲಾರಂಭಿಸಿದರು. ಓಡಿಹೋಗುತ್ತಿದ್ದ ಆ ಸೈನಿಕರನ್ನೂ ಬಿಡದೇ ಕರ್ಣನು ಅವರ ಮೇಲೂ ಬಾಣಗಳನ್ನು ಸುರಿಸುತ್ತಾ ಅವರನ್ನು ಬೆನ್ನಟ್ಟಿ ಹೋಗುತ್ತಿದ್ದನು. ಮಹಾತ್ಮನಾದ ಕರ್ಣನಿಂದ ಮರ್ದಿತರಾಗುತ್ತಿದ್ದ ಪಾಂಚಾಲಯೋಧರು ಒಬ್ಬರು ಮತ್ತೊಬ್ಬರನ್ನು

ದೈನ್ಯದೃಷ್ಟಿಯಿಂದ ನೋಡುತ್ತಿದ್ದರು. ಕಿಂಕರ್ತವ್ಯತಾಮೂಢರಾಗಿದ್ದರು. ಬುದ್ಧಿಗೆಟ್ಟಿದ್ದರು. ಕರ್ಣನ ಮುಂದೆ ಅವರು ಒಂದು ಕ್ಷಣವಾದರೂ ನಿಲ್ಲಲು ಸಮರ್ಥರಾಗಿರಲಿಲ್ಲ. ಕರ್ಣನಿಂದಲೂ ಮತ್ತು ದ್ರೋಣರಿಂದಲೂ ಶ್ರೇಷ್ಠ ವಾದ ಬಾಣಗಳ ಮೂಲಕವಾಗಿ ಪ್ರಹೃತರಾದ ಪಾಂಚಾಲಯೋಧರು ದೀನರಾಗಿ ಎಲ್ಲ ದಿಕ್ಕುಗಳನ್ನೂ ನೋಡುತ್ತಾ ಓಡಿಹೋಗುತ್ತಿದ್ದರು.

ಆ ಸಮಯದಲ್ಲಿ ಯುಧಿಷ್ಠಿರನು ತನ್ನ ಸೈನಿಕರು ದಿಕ್ಕುಗೆಟ್ಟು ಓಡಿ ಹೋಗುತ್ತಿರುವುದನ್ನು ನೋಡಿ, ತಾನೂ ಸಹ ಯುದ್ಧಭೂಮಿಯಿಂದ ಹೊರಟುಹೋಗಬೇಕೆಂದು (ಆಗಿನ ಯುದ್ಧವನ್ನು ನಿಲ್ಲಿಸಿ ಹಿಂದಿರುಗ ಬೇಕೆಂದು) ನಿಶ್ಚಯಿಸಿ ಅರ್ಜುನನೊಡನೆ ಹೇಳಿದನು :

"ದಾರುಣವಾದ ಈ ರಾತ್ರಿಯಲ್ಲಿ ಪರಿತಪಿಸುವ ಸೂರ್ಯನೋಪಾದಿ ಯಲ್ಲಿ ಮಹಾಧನುಷ್ಮಂತನಾದ ಕರ್ಣನು ಧನುಷ್ಪಾಣಿಯಾಗಿ ನಿಂತಿರುವುದನ್ನು ನೋಡು, ಅರ್ಜುನ! ಕರ್ಣನ ಬಾಣಗಳಿಂದ ಗಾಯಗೊಂಡು ಅನಾಥರಂತೆ ಗೋಳಾಡುತ್ತಿರುವ ನಿನ್ನ ಬಂಧುಗಳ ಆರ್ತನಾದವು ಸರ್ವದಾ ಕೇಳುತ್ತಲೇ ಇದೆ. ಅವನು ಬಾಣಗಳನ್ನು ಧನುಸ್ಸಿನಲ್ಲಿ ಸಂಧಾನಮಾಡುವುದು ಮತ್ತು ಅವುಗಳನ್ನು ಆಕರ್ಣವಾಗಿ ಸೆಳೆದುಬಿಡುವುದು–ಎಂಬ ಈ ಎರಡು ಕ್ರಿಯೆಗಳ ನಡುವೆ ನಾನು ಯಾವ ವಿಧವಾದ ಅಂತರವನ್ನೂ ಕಾಣುತ್ತಿಲ್ಲ. ನಿಶ್ಚಯವಾಗಿಯೂ ಕರ್ಣನು ನಮ್ಮ ಸಮಸ್ತಸೈನಿಕರನ್ನೂ ವಿನಾಶಗೊಳಿಸು ತ್ತಾನೆ. ಅರ್ಜುನ! ಈಗ ನೀನು ಕರ್ಣನ ವಧೆಯ ಸಂಬಂಧದಲ್ಲಿ ಸಮಯೋಚಿತವಾದ ಯಾವ ಕರ್ತವ್ಯವನ್ನು ಮಾಡುವುದಿದೆಯೋ ಅದನ್ನು ಶೀಘ್ರವಾಗಿ ಮಾಡು."

ಮಹಾರಾಜ! ಯುಧಿಷ್ಠಿರನ ಮಾತನ್ನು ಕೇಳಿದ ಪಾರ್ಥನು ಕೃಷ್ಣನೊಡನೆ ಹೇಳಿದನು :

"ಕೃಷ್ಣ! ರಾಧೇಯನು ಈಗ ತೋರಿಸುತ್ತಿರುವ ಪರಾಕ್ರಮದಿಂದಾಗಿ ಯುಧಿಷ್ಠಿರನು ಬಹಳ ಭಯಗೊಂಡಿದ್ದಾನೆ. ಇಂತಹ ಅವಸ್ಥೆಯಲ್ಲಿ ಕರ್ಣನ ಸೈನ್ಯದಲ್ಲಿ ನಾವು ಸಮಯೋಚಿತವಾದ ಯಾವ ಕಾರ್ಯವನ್ನು ಮಾಡ ಬೇಕಾಗಿದೆಯೆಂಬುದನ್ನು ನೀನು ಈ ಕೂಡಲೇ ನಿಶ್ಚಯಿಸು. ಕೃಷ್ಣ! ನಮ್ಮ

ಸೈನಿಕರು ರಾಧೇಯನ ಬಾಣಪ್ರಹಾರವನ್ನು ಸಹಿಸಿಕೊಳ್ಳಲಾರದೆ ಪುನಃ ಪುನಃ ಓಡಿಹೋಗುತ್ತಿದ್ದಾರೆ.

ಮಧುಸೂದನ! ದ್ರೋಣರ ಬಾಣಗಳಿಂದ ಗಾಯಗೊಂಡು ಭಗ್ನರಾದ ಮತ್ತು ಕರ್ಣನಿಂದ ಭಯಗೊಂಡಿರುವ ನಮ್ಮ ಸೈನಿಕರಿಗೆ ನಿಲ್ಲಲೊಂದು ಸ್ಥಾನವೇ ಇಲ್ಲವಾಗಿದೆ. ಕರ್ಣನು ಸ್ವಲ್ಪವೂ ಭಯವೇ ಇಲ್ಲದವನಂತೆ ರಣಾಂಗಣದ ಸುತ್ತಲೂ ಸಂಚರಿಸುತ್ತಿದ್ದಾನೆ. ಓಡಿಹೋಗುತ್ತಿರುವ ರಥ ಶ್ರೇಷ್ಠರನ್ನೂ ಸಹ ಬಿಡದೆ ಅವರ ಮೇಲೆ ಬಾಣಗಳ ಮಳೆಗರೆಯುತ್ತಿರುವು ದನ್ನು ನಾನೀಗ ಕಾಣುತ್ತಿದ್ದೇನೆ. ಕರ್ಣನು ರಣಾಂಗಣದಲ್ಲಿ ಇಷ್ಟು ನಿರ್ಭಯನಾಗಿ ಸಂಚರಿಸುತ್ತಿರುವುದನ್ನು ಪ್ರತ್ಯಕ್ಷವಾಗಿ ನೋಡಿಕೊಂಡು ಸಹನೆಯಿಂದಿರಲು ನನಗೆ ಸಾಧ್ಯವಿಲ್ಲವಾಗಿದೆ. ಕಾಲಿನಿಂದ ಮೆಟ್ಟಿದ ಹಾವಿ ನಂತೆ ನಾನು ಸಹನೆಯನ್ನು ಕಳೆದುಕೊಳ್ಳುತ್ತಿದ್ದೇನೆ. ಮಧುಸೂದನ! ಮಹಾರಥನಾದ ಕರ್ಣನಿರುವೆಡೆಗೇ ಬೇಗ ಹೋಗು. ಈ ಸಮಯದಲ್ಲಿ ನಾನಾದರೂ ಅವನನ್ನು ಸಂಹರಿಸುತ್ತೇನೆ. ಅವನಾದರೂ ನನ್ನನ್ನು ಸಂಹರಿಸಲಿ."

"ಕೌಂತೇಯ! ದೇವರಾಜನಾದ ಇಂದ್ರನೋಪಾದಿಯಲ್ಲಿ ಈ ರಣಾಂಗಣದ ಸುತ್ತಲೂ ನರವ್ಯಾಘ್ರನಾದ, ಅತಿಮಾನುಷಪರಾಕ್ರಮನಾದ ಕರ್ಣನು ಸಂಚರಿಸುತ್ತಿರುವುದನ್ನು ನಾನು ನೋಡುತ್ತಿದ್ದೇನೆ.

ಪುರುಷಸಿಂಹನೇ! ಧನಂಜಯ! ರಣರಂಗದಲ್ಲಿ ನೀನು ಅಥವಾ ಘಟೋತ್ಕಚರಾಕ್ಷಸ–ಈ ಇಬ್ಬರನ್ನು ಬಿಟ್ಟು ಕರ್ಣನ ಎದುರಾಗಿ ನಿಂತು ಯುದ್ಧಮಾಡುವವನು ಬೇರೊಬ್ಬನಿಲ್ಲ. ಆದರೆ ಮಹಾಬಾಹುವೇ! ಅನಘನೇ! ಸೂತಪುತ್ರನೊಡನೆ ನೀನು ಯುದ್ಧಮಾಡುವ ಕಾಲವಿನ್ನೂ ಸನ್ನಿಹಿತವಾಗಿಲ್ಲವೆಂದೇ ನಾನು ಭಾವಿಸುತ್ತೇನೆ.

**ದೀಪ್ಯಮಾನಾ ಮಹೋಲ್ಕೇವ ತಿಷ್ಠತ್ಯಸ್ಯ ಹಿ ವಾಸವೀ ।**
**ತ್ವದರ್ಥಂ ಹಿ ಮಹಾಬಾಹೋ ಸೂತಪುತ್ರೇಣ ಸಂಯುಗೇ ।**
**ರಕ್ಷ್ಯತೇ ಶಕ್ತಿರೇಷಾ ಹಿ ರೌದ್ರಂ ರೂಪಂ ಬಿಭರ್ತಿ ಚ ॥೩೮॥**

ಅವನ ಬಳಿಯಲ್ಲಿ ದೇದೀಪ್ಯಮಾನವಾದ ಬಾಲಚುಕ್ಕಿಯಂತಿರುವ

ಇಂದ್ರನು ಕೊಟ್ಟ ಶಕ್ತ್ಯಾಯುಧವಿದೆ. ಮಹಾಬಾಹುವೇ! ನಿನ್ನ ಸಲುವಾಗಿಯೇ ಕರ್ಣನು ಆ ಶಕ್ತ್ಯಾಯುಧವನ್ನು ಬಹಳ ಜೋಪಾನವಾಗಿ ರಕ್ಷಿಸುತ್ತಿದ್ದಾನೆ. ಆ ಶಕ್ತ್ಯಾಯುಧವು ಭಯಂಕರವಾದ ರೂಪದಿಂದಲೂ ಕೂಡಿದೆ.

ಆದುದರಿಂದ ಈ ಸಮಯದಲ್ಲಿ ಮಹಾಬಲನಾದ ಘಟೋತ್ಕಚನು ಕರ್ಣನನ್ನು ಎದುರಿಸಲಿ. ಅವನು ಬಲಿಷ್ಠನಾದ ಭೀಮನಿಂದ ಹುಟ್ಟಿದವನು. ಆದುದರಿಂದ ಅವನೂ ಮಹಾಬಲಿಷ್ಠನೇ ಆಗಿದ್ದಾನೆ. ದೇವತೆಗಳಲ್ಲಿರುವ ಪರಾಕ್ರಮವೇ ಅವನಲ್ಲಿದೆ. ಅವನಲ್ಲಿ ದೇವ-ರಾಕ್ಷಸಾಸುರರ ಮಹಾಸ್ತ್ರ ಗಳೆಲ್ಲವೂ ಇವೆ. ಅವನು ಪಾಂಡವರ ವಿಷಯದಲ್ಲಿ ಬಹಳ ಅನುರಕ್ತನಾಗಿ ನಮ್ಮ ಹಿತೈಷಿಯೂ ಆಗಿದ್ದಾನೆ. ಅವನು ಯುದ್ಧದಲ್ಲಿ ಖಂಡಿತವಾಗಿಯೂ ಕರ್ಣನನ್ನು ಜಯಿಸುತ್ತಾನೆಂಬುದರಲ್ಲಿ ನನಗೆ ಸಂಶಯವೇ ಇಲ್ಲ."

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿದನಂತರ ಕಮಲಾಕ್ಷನಾದ, ಮಹಾಬಾಹುವಾದ ಪಾರ್ಥನು ಘಟೋತ್ಕಚನಿಗೆ ಹೇಳಿಕಳುಹಿಸಿದನು. ಕ್ಷಣ ಮಾತ್ರದಲ್ಲಿ ರಾಕ್ಷಸನು ಅರ್ಜುನನ ಸಮ್ಮುಖದಲ್ಲಿ ನಿಂತುಕೊಂಡನು. ಕವಚ ವನ್ನು ತೊಟ್ಟಿದ್ದ, ಧನುರ್ಬಾಣಗಳನ್ನು ಹಿಡಿದಿದ್ದ, ಕತ್ತಿಯನ್ನು ಸೊಂಟಕ್ಕೆ ಬಿಗಿದಿದ್ದ ಘಟೋತ್ಕಚನು ಶ್ರೀಕೃಷ್ಣನಿಗೂ-ಅರ್ಜುನನಿಗೂ ಅಭಿವಾದನ ಪೂರ್ವಕವಾಗಿ ನಮಸ್ಕರಿಸಿ ಶ್ರೀಕೃಷ್ಣನಿಗೆ ಹೇಳಿದನು : "**ಅಯಮಸ್ಮಿ । ಅನುಶಾಧಿ ಮಾಮ್ ।** ನೀನು ಹೇಳಿಕಳುಹಿಸಿದ ಘಟೋತ್ಕಚರಾಕ್ಷಸನೇ ನಾನಾಗಿದ್ದೇನೆ. ನಾನೇನು ಮಾಡಬೇಕೆಂಬುದರ ಬಗೆಗೆ ಆಜ್ಞಾಪಿಸು."

ಮಹಾರಾಜ! ರಾಕ್ಷಸನು ಹೀಗೆ ಹೇಳಿದನಂತರ ಮೇಘಸದೃಶನಾಗಿದ್ದ, ಪ್ರಜ್ವಲಿಸುವ ಮುಖವನ್ನೂ, ಕುಂಡಲಗಳನ್ನೂ ಹೊಂದಿದ್ದ ಹಿಡಿಂಬೆಯ ಮಗನಾದ ಘಟೋತ್ಕಚನನ್ನು ಕುರಿತು ಶ್ರೀಕೃಷ್ಣನು ನಸುನಗುತ್ತಾ ಹೇಳಿದನು:

"ಮಗು ಘಟೋತ್ಕಚ! ನಾನೇನು ಹೇಳುವೆನೆಂಬುದನ್ನು ಚೆನ್ನಾಗಿ ಅರ್ಥಮಾಡಿಕೊ. ನೀನೀಗ ನಿನ್ನ ಅತುಲಪರಾಕ್ರಮವನ್ನು ತೋರಿಸುವ ಕಾಲವು ಸನ್ನಿಹಿತವಾಗಿದೆ. ನಿನಗೊಬ್ಬನಿಗಲ್ಲದೇ ಇಂತಹ ಸುಸಮಯವು ಯಾರಿಗೂ ಒದಗಿಬಂದಿಲ್ಲ. ನಿನ್ನ ಬಂಧುಗಳೀಗ ಸಂಕಟಸಮುದ್ರದಲ್ಲಿ

ಮುಳುಗಿಹೋಗುತ್ತಿದ್ದಾರೆ. ಅವರಿಗೆ ನೀನು ನೌಕಾಪ್ರಾಯನಾಗು. ಅವರನ್ನು ಸಂಕಟದಿಂದ ಉದ್ಧರಿಸು. ನಿನ್ನಲ್ಲಿ ಅನೇಕವಿಧವಾದ ಅಸ್ತ್ರಗಳೂ ಇವೆ. ರಾಕ್ಷಸೀಮಾಯೆಗಳೂ ಇವೆ. ಘಟೋತ್ಕಚ! ಗೋಪಾಲಕನು ಹಸುಗಳನ್ನು ಅಡ್ಡಾಡಿಸಿಕೊಂಡು ಹೊಡೆಯುವಂತೆ–ಕರ್ಣನು ಪಾಂಡವರ ಸೈನ್ಯವನ್ನು ಮಥಿಸುತ್ತಿರುವುದನ್ನು ನೋಡು. ಕರ್ಣನು ಸಾಮಾನ್ಯನಲ್ಲ. ಮಹಾ ಧನುಷ್ಮಂತನು. ಬುದ್ಧಿವಂತನು. ದೃಢಪರಾಕ್ರಮನು. ಅವನೀಗ ಪಾಂಡವರ ಸೈನ್ಯದಲ್ಲಿರುವ ಕ್ಷತ್ರಿಯಶ್ರೇಷ್ಠರೆಲ್ಲರನ್ನೂ ಸಂಹರಿಸುತ್ತಿದ್ದಾನೆ. ದೃಢವಾದ ದೊಡ್ಡ-ದೊಡ್ಡ ಧನುಸ್ಸುಗಳನ್ನು ಧರಿಸಿರುವ ಮತ್ತು ಬಾಣಗಳ ಮಳೆಯನ್ನೇ ಸುರಿಸುವ ನಮ್ಮ ಕಡೆಯ ಮಹಾಯೋಧರೆಲ್ಲರೂ ಕರ್ಣನು ಬಿಡುತ್ತಿರುವ ಅಗ್ನಿಸದೃಶವಾದ ಬಾಣಗಳಿಂದ ಪೀಡಿಸಲ್ಪಟ್ಟವರಾಗಿ ಅವನೆದುರಿನಲ್ಲಿ ನಿಲ್ಲ ಲಾರದವರಾಗಿದ್ದಾರೆ. ಈ ರಾತ್ರಿಯಲ್ಲಿ ಸೂತಪುತ್ರನಾದ ಕರ್ಣನ ಬಾಣ ಗಳಿಂದ ಪೀಡಿತರಾದ ಪಾಂಚಾಲರು–ಸಿಂಹದಿಂದ ಪೀಡಿಸಲ್ಪಟ್ಟ ಮೃಗಗಳೋ ಪಾದಿಯಲ್ಲಿ ಓಡಿಹೋಗುತ್ತಿದ್ದಾರೆ. ಭೀಮವಿಕ್ರಮನೇ! ಈ ರೀತಿಯಲ್ಲಿ ತನ್ನ ಪರಾಕ್ರಮದಿಂದ ಕ್ಷಣ-ಕ್ಷಣಕ್ಕೂ ವೃದ್ಧಿಸುತ್ತಿರುವ ಮಹಾರಥನಾದ ಕರ್ಣನನ್ನು ತಡೆಯುವವರು ನಿನ್ನ ಹೊರತಾಗಿ ನಮ್ಮ ಸೈನ್ಯದಲ್ಲಿ ಮತ್ತಾರೂ ಇರುವುದಿಲ್ಲ. ಮಹಾಬಾಹುವೇ! ಈ ಕಾರಣದಿಂದ ನೀನು ನಿನಗೂ, ನಿನ್ನ ಮಾತುಲವರ್ಗಕ್ಕೂ (ತಾಯಿಯ ವಂಶಕ್ಕೂ), ಪಿತೃಗಳ ವಂಶಕ್ಕೂ, ನಿನ್ನ ತೇಜಸ್ಸಿಗೂ, ನಿನ್ನಲ್ಲಿರುವ ಅಸ್ತ್ರಬಲಕ್ಕೂ ಅನುರೂಪವಾದ ಪರಾಕ್ರಮವನ್ನು ಪ್ರದರ್ಶಿಸು. ಹೈಡಿಂಬನೇ! ಈ ಕಾರಣದಿಂದಲೇ ಮಾನವರು ಮಕ್ಕಳನ್ನ ಪೇಕ್ಷಿಸುತ್ತಾರೆ. ತಮ್ಮ ಮಗನು ಯಾವ ರೀತಿಯಲ್ಲಿ ತಮ್ಮನ್ನು ದುಃಖದಿಂದ ಪಾರುಮಾಡುತ್ತಾನೆಂಬುದೇ ಅವರ ಚಿಂತೆಯಾಗಿರುತ್ತದೆ (ನಿನ್ನ ಪಿತೃಗಳೂ ಇದನ್ನೇ ಚಿಂತಿಸುತ್ತಿದ್ದಾರೆ). ಆದುದರಿಂದ ನೀನು ಈ ಸಮಯದಲ್ಲಿ ದುಃಖಸಾಗರದಲ್ಲಿ ಮುಳುಗಿರುವ ನಿನ್ನ ಬಂಧುಗಳನ್ನು ಉದ್ಧರಿಸು.

**ಇಚ್ಛನ್ತಿ ಪಿತರಃ ಪುತ್ರಾನ್ಸ್ವಾರ್ಥಹೇತೋರ್ಘಟೋತ್ಕಚ ।**
**ಇಹಲೋಕಾತ್ಪರೇ ಲೋಕೇ ತಾರಯಿಷ್ಯನ್ತಿ ಯೇ ಹಿತಾಃ ॥೫೪॥**

ಘಟೋತ್ಕಚ! ಸಾಮಾನ್ಯವಾಗಿ ಮನುಷ್ಯರು ಸ್ವಾರ್ಥದ ಕಾರಣ

ದಿಂದಲೇ ಮಕ್ಕಳನ್ನು ಅಪೇಕ್ಷಿಸುತ್ತಾರೆ. ಹಿತೈಷಿಗಳಾದ ಮಕ್ಕಳು ತಮ್ಮನ್ನು ಈ ಲೋಕದಿಂದ ಉತ್ತಮಲೋಕಕ್ಕೆ ದಾಟಿಸುವರೆಂಬುದೇ ಅವರ ಆಶಯ ವಾಗಿರುತ್ತದೆ (ಉತ್ತಮಲೋಕವನ್ನು ಪಡೆಯಬೇಕೆನ್ನುವ ಆಸೆಯಿಂದಲೇ ಮನುಷ್ಯರು ಮಕ್ಕಳನ್ನು ಅಪೇಕ್ಷಿಸುತ್ತಾರೆ).

ಭೀಮನಂದನನೇ! ರಣಾಂಗಣದಲ್ಲಿ ಯುದ್ಧಮಾಡುತ್ತಿರುವಾಗ ನಿನ್ನ ಭಯಂಕರವಾದ ಬಲವು ಹೆಚ್ಚುತ್ತಲೇ ಇರುತ್ತದೆ. ನೀನು ಯುದ್ಧಸಮಯದಲ್ಲಿ ಕಲ್ಪಿಸುವ ಮಾಯೆಯೂ ಅತ್ಯಂತದುಸ್ತರವಾದುದು. ಈ ರಾತ್ರಿಯಲ್ಲಿ ಕರ್ಣನ ಬಾಣಗಳಿಂದ ಕ್ಷತ-ವಿಕ್ಷತರಾಗಿರುವ ಪಾಂಡವಸೈನಿಕರು ಸಮುದ್ರ ರೂಪವಾಗಿರುವ ಧೃತರಾಷ್ಟ್ರನ ಸೈನ್ಯದಲ್ಲಿ ಮುಳುಗಿಹೋಗುತ್ತಿದ್ದಾರೆ. ಅವರಿಗೆ ನೀನು ತೀರಪ್ರದೇಶನಾಗು (ಸಮುದ್ರದಲ್ಲಿ ಮುಳುಗಿಹೋಗುತ್ತಿರುವ ಅವರನ್ನು ಉದ್ಧರಿಸು).

**ರಾತ್ರೌ ಹಿ ರಾಕ್ಷಸಾ ಭೂಯೋ ಭವನ್ತ್ಯಮಿತವಿಕ್ರಮಾಃ ।**
**ಬಲವನ್ತಃ ಸುದುರ್ಧರ್ಷಾಃ ಶೂರಾ ವಿಕ್ರಾನ್ತಚಾರಿಣಃ ॥೫೭॥**

ರಾತ್ರಿಯ ಕಾಲದಲ್ಲಿ ರಾಕ್ಷಸರು ಹೆಚ್ಚಿನ ಪರಾಕ್ರಮವುಳ್ಳವರೂ, ಮಹಾ ಬಲಿಷ್ಠರೂ, ಎದುರಿಸಲು ಅಸಾಧ್ಯರೂ, ಮಹಾಶೂರರೂ, ಪರಾಕ್ರಮದಿಂದ ಎಲ್ಲೆಡೆಯಲ್ಲಿಯೂ ಸಂಚರಿಸತಕ್ಕವರೂ ಆಗುತ್ತಾರೆ. ಆದುದರಿಂದ ಈ ರಾತ್ರಿಯಲ್ಲಿ ನೀನು ಮಹಾಧನುಷ್ಮಂತನಾದ ಕರ್ಣನನ್ನು ಮಾಯೆಯಿಂದ ಸಂಹರಿಸು. ಧೃಷ್ಟದ್ಯುಮ್ನಪುರಃಸ್ಸರರಾದ ಪಾರ್ಥರು ದ್ರೋಣರನ್ನು ಸಂಹಾರಮಾಡುತ್ತಾರೆ."

ಮಹಾರಾಜ! ಕೇಶವನು ಹೇಳಿದ ಮಾತುಗಳನ್ನು ಕೇಳಿ ಅರ್ಜುನನೂ ಅರಿಂದಮನಾದ ಘಟೋತ್ಕಚನನ್ನು ಕುರಿತು ಹೇಳಿದನು :

"ಘಟೋತ್ಕಚ! ನೀನು, ದೀರ್ಘಬಾಹುವಾದ ಸಾತ್ಯಕಿ ಮತ್ತು ಭೀಮ ಸೇನ–ಈ ಮೂವರೇ ನಮ್ಮ ಸೈನ್ಯದಲ್ಲಿ ವೀರಶ್ರೇಷ್ಠರೆಂಬುದು ನನ್ನ ಅಭಿ ಪ್ರಾಯವಾಗಿದೆ. ನೀನು ಈ ರಾತ್ರಿಯಲ್ಲಿ ಕರ್ಣನೊಡನೆ ದ್ವೈರಥಯುದ್ಧ ವನ್ನು ಮಾಡು. ಮಹಾರಥನಾದ ಸಾತ್ಯಕಿಯು ನಿನ್ನ ಪೃಷ್ಠರಕ್ಷಕನಾಗಿರು ತ್ತಾನೆ. ಯಾವ ರೀತಿಯಲ್ಲಿ ಹಿಂದೆ ಇಂದ್ರನು ಸ್ಕಂದನೊಡನೆ ಕೂಡಿಕೊಂಡು

ತಾರಕಾಸುರನನ್ನು ಸಂಹರಿಸಿದನೋ–ಅದೇ ರೀತಿಯಲ್ಲಿ ನೀನೂ ಸಹ ಸಾತ್ಯಕಿಯ ಸಹಾಯವನ್ನು ಪಡೆದು ಕರ್ಣನನ್ನು ಸಂಹರಿಸು."

ಕೃಷ್ಣಾರ್ಜುನರ ಮಾತಿಗೆ ಉತ್ತರವಾಗಿ ಘಟೋತ್ಕಚನು ಹೇಳಿದನು :

"ಕೃಷ್ಣಾರ್ಜುನರೇ! ಕರ್ಣನನ್ನು ಸಂಹರಿಸಲು ನಾನೊಬ್ಬನೇ ಸಾಕು. ದ್ರೋಣರನ್ನು ಸಂಹರಿಸಲು ಕೂಡ ನನಗೆ ಬೇರೊಬ್ಬರ ಸಹಾಯವು



ಅನಗತ್ಯ. ನಾನೊಬ್ಬನೇ ಅವರನ್ನೂ ಸಂಹರಿಸುತ್ತೇನೆ. ಇವರಿಬ್ಬರೇ ಅಲ್ಲದೇ ಬೇರೆ ಮಹಾತ್ಮರಾದ, ಅಸ್ತ್ರವಿದ್ಯಾವಿಶಾರದರಾದ, ಶೂರರಾದ ಎಷ್ಟೇ ಕ್ಷತ್ರಿಯರು ಬಂದರೂ ನಾನೊಬ್ಬನೇ ಅವರೆಲ್ಲರನ್ನೂ ಸಂಹರಿಸುತ್ತೇನೆ. ಇಂದು ರಾತ್ರಿ ನಾನು ಕರ್ಣನಿಗೆ ಯುದ್ಧದ ಆತಿಥ್ಯವನ್ನು ಕೊಡುತ್ತೇನೆ. ಈ

ಯುದ್ಧದ ವರ್ಣನೆಯನ್ನು ಈ ಭೂಮಿಯು ಉಳಿದಿರುವವರೆಗೂ ಜನರು ಮಾಡುತ್ತಲೇ ಇರುತ್ತಾರೆ. ನಾನಿಂದು ರಾಕ್ಷಸಧರ್ಮವನ್ನು ಪರಿಪಾಲನೆ ಮಾಡುತ್ತಾ ನನ್ನೆದುರಾಗಿ ಸಿಕ್ಕುವ ಯಾವ ಶೂರನನ್ನೂ ಜೀವಸಹಿತವಾಗಿ ಬಿಡುವುದಿಲ್ಲ. ಅವರು ಭಯಪಟ್ಟುಕೊಂಡು ಪಲಾಯನಮಾಡುತ್ತಿರಲಿ, ಬದ್ಧಾಂಜಲಿಗಳಾಗಿ ಪ್ರಾಣಭಿಕ್ಷೆಯನ್ನು ಬೇಡುತ್ತಿರಲಿ–ಅಂತಹವರನ್ನೂ ಬಿಡದೇ ಎಲ್ಲರನ್ನೂ ಸಂಹರಿಸುತ್ತೇನೆ."

ಶ್ರೇಷ್ಠವೀರಹಂತಕನಾದ, ಮಹಾಬಾಹುವಾದ, ಘಟೋತ್ಕಚನು ಹೀಗೆ ಹೇಳಿ ಭಯಂಕರಸಂಗ್ರಾಮದಲ್ಲಿ ನಿನ್ನ ಸೈನ್ಯವನ್ನು ಭಯಪಡಿಸುತ್ತಾ ಕರ್ಣನನ್ನು ಆಕ್ರಮಿಸಿದನು. ಸೂತನ ಮಗನಾದ, ಪುರುಷವ್ಯಾಘ್ರನಾದ ಕರ್ಣನು ತನ್ನ ಕಡೆಗೆ ರಭಸದಿಂದ ಬರುತ್ತಿದ್ದ, ಕ್ರುದ್ಧನಾಗಿದ್ದ, ಪ್ರದೀಪ್ತವಾದ ಮುಖವನ್ನೂ–ಹೊಳೆಯುವ ತಲೆಗೂದಲನ್ನೂ ಹೊಂದಿದ್ದ ಘಟೋತ್ಕಚನನ್ನು ನಗು-ನಗುತ್ತಲೇ ಪ್ರತಿಯೋಧನನ್ನಾಗಿ ಸ್ವೀಕರಿಸಿದನು. ಹಿಂದೆ ಶಕ್ರನಿಗೂ ಮತ್ತು ಪ್ರಹ್ಲಾದನಿಗೂ ನಡೆದ ಯುದ್ಧದಂತೆ–ಗರ್ಜಿಸುತ್ತಿದ್ದ ಕರ್ಣನಿಗೂ ಮತ್ತು ರಾಕ್ಷಸನಿಗೂ ಘೋರವಾದ ಯುದ್ಧವು ನಡೆಯಿತು.

೧೭೩ನೆಯ ಅಧ್ಯಾಯವು ಮುಗಿಯಿತು.

೧೭೪ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಘಟೋತ್ಕಚನಿಗೂ-ಜಟಾಸುರನ ಮಗನಾದ ಅಲಂಬುಷನಿಗೂ ಘೋರಯುದ್ಧ: ಘಟೋತ್ಕಚನು ಅಲಂಬುಷನನ್ನು ಸಂಹರಿಸಿದುದು

ಸಂಜಯನು ಕರ್ಣ-ಘಟೋತ್ಕಚರ ಯುದ್ಧವನ್ನು ವರ್ಣಿಸುತ್ತಾನೆ :

ಮಹಾರಾಜ! ಯುದ್ಧದಲ್ಲಿ ಕರ್ಣನನ್ನು ಸಂಹರಿಸುವ ಇಚ್ಛೆಯಿಂದ ಕರ್ಣನ ರಥದ ಸಮೀಪಕ್ಕೆ ಬರುತ್ತಿದ್ದ ಘಟೋತ್ಕಚನನ್ನು ನೋಡಿ ನಿನ್ನ ಮಗನಾದ ದುರ್ಯೋಧನನು ದುಃಶಾಸನನನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ದುಃಶಾಸನ! ಈ ರಾಕ್ಷಸನು ರಣರಂಗದಲ್ಲಿ ಕರ್ಣನ ಪರಾಕ್ರಮ

ವನ್ನು ನೋಡಿ ಅವನನ್ನು ಆಕ್ರಮಿಸುವ ಅಪೇಕ್ಷೆಯಿಂದ ಧಾವಿಸಿ ಬರುತ್ತಿದ್ದಾನೆ. ಮಹಾರಥನಾದ ಅವನನ್ನು ನೀನು ತಡೆದು ನಿಲ್ಲಿಸು. ದೊಡ್ಡದಾದ ಸೈನ್ಯವನ್ನು ತೆಗೆದುಕೊಂಡು ಮಹಾಬಲನಾದ ವೈಕರ್ತನಕರ್ಣನು ಘಟೋತ್ಕಚ ರಾಕ್ಷಸನೊಡನೆ ಯುದ್ಧಮಾಡುತ್ತಿರುವಲ್ಲಿಗೇ ಹೋಗು. ಮಾನದನೇ! ನಮ್ಮ ಸೈನ್ಯದಿಂದ ಪರಿವೃತನಾದ ನೀನು ಪ್ರಯತ್ನಪೂರ್ವಕವಾಗಿ ಕರ್ಣನನ್ನು ರಕ್ಷಿಸು. ನಾವು ಮಾಡುವ ಪ್ರಮಾದದಿಂದಾಗಿ ಘೋರನಾದ ರಾಕ್ಷಸನು ಕರ್ಣನನ್ನು ನಾಶಮಾಡುವಂತಾಗಬಾರದು."

ಮಹಾರಾಜ! ಈ ಮಧ್ಯದಲ್ಲಿ ಮಹಾಬಲಿಷ್ಠನಾದ, ಜಟಾಸುರನ ಮಗನಾದ, ಯೋಧಶ್ರೇಷ್ಠನಾದ ಅಲಂಬುಷನು ದುರ್ಯೋಧನನ ಬಳಿಗೆ ಬಂದು ಹೇಳಿದನು :

"ದುರ್ಯೋಧನ! ಪ್ರಖ್ಯಾತರಾದ, ಯುದ್ಧದುರ್ಮದರಾದ, ನಿನ್ನ ಶತ್ರುಗಳಾದ ಪಾಂಡವರನ್ನು ಅವರ ಅನುಯಾಯಿಗಳ ಸಹಿತವಾಗಿ ನಿನ್ನ ಅನುಜ್ಞೆಯನ್ನು ಪಡೆದು ಸಂಹರಿಸಲು ಇಚ್ಛಿಸಿದ್ದೇನೆ. ರಾಕ್ಷಸರ ಅಧಿಪತಿಯಾದ ಜಟಾಸುರನೆಂಬುವನು ನನ್ನ ತಂದೆ. ಹಿಂದೆ ಈ ಪಾಂಡವರು ರಾಕ್ಷಸ ವಿನಾಶಕವಾದ ಕರ್ಮಮಾಡಿ ನನ್ನ ತಂದೆಯನ್ನು ಸಂಹರಿಸಿದರು. ಈ ಶತ್ರು ಗಳ ರಕ್ತದಿಂದಲೂ ಮತ್ತು ಮಾಂಸದಿಂದಲೂ ನನ್ನ ತಂದೆಯನ್ನು ತೃಪ್ತಿ ಗೊಳಿಸಬೇಕೆಂದಿರುತ್ತೇನೆ. ಇವರನ್ನು ಸಂಹರಿಸಿ ನನ್ನ ತಂದೆಯನ್ನು ಸಂಹರಿಸಿದುದಕ್ಕೆ ಇವರಿಗೆ ತಕ್ಕ ಪ್ರತೀಕಾರಮಾಡಬೇಕೆಂಬ ಆಶಯವಿದೆ. ಈ ಕಾರ್ಯಕ್ಕೆ ನನಗೆ ಅನುಜ್ಞೆಯನ್ನು ದಯಪಾಲಿಸು."

ಅಲಂಬುಷನ ಮಾತನ್ನು ಕೇಳಿ ದುರ್ಯೋಧನನಿಗೆ ಪರಮಾನಂದ ವಾಯಿತು. ಪ್ರಸನ್ನಚಿತ್ತನಾಗಿ ಅಲಂಬುಷನನ್ನು ಕುರಿತು ಪುನಃ-ಪುನಃ ಹೇಳಿದನು : "ವೀರಶ್ರೇಷ್ಠನೇ! ದ್ರೋಣ-ಕರ್ಣಾದಿಗಳೊಡನೆ ಕೂಡಿ ಕೊಂಡು ನಾನು ಶತ್ರುಗಳನ್ನು ಜಯಿಸಬಲ್ಲೆನು. ನನ್ನ ಶತ್ರುಗಳನ್ನು ಜಯಿಸಲು ನನಗೆ ಬೇರೆಯವರ ಸಹಾಯದ ಅವಶ್ಯಕತೆಯಿಲ್ಲ. ಆದರೆ ನಿನ್ನ ಸಹಾಯವು ನನಗೆ ಬೇಡವೆಂದಲ್ಲ. ಈ ಸಮಯದಲ್ಲಿ ನಿನ್ನ ಸಹಾಯವೂ ನನಗೆ ಅವಶ್ಯವಾಗಿ ಬೇಕೇಬೇಕು. ನನ್ನಿಂದ ಆಜ್ಞಪ್ತನಾದ ನೀನು

ಘಟೋತ್ಕಚನಿರುವೆಡೆಗೆ ಹೋಗು. ಮಾನವನಿಂದ ರಾಕ್ಷಸಿಯಲ್ಲಿ ಹುಟ್ಟಿರುವ ಕ್ರೂರಕರ್ಮನಾದ ಘಟೋತ್ಕಚನನ್ನು ಯುದ್ಧದಲ್ಲಿ ಸಂಹರಿಸು. ನಿನ್ನ ಶತ್ರುಗಳಾದ ಪಾಂಡವರ ಹಿತದಲ್ಲಿಯೇ ಅವನು ಸದಾಕಾಲದಲ್ಲಿಯೂ ನಿರತನಾಗಿರುತ್ತಾನೆ. ನಮ್ಮ ಕಡೆಯ ಗಜಾಶ್ವ-ರಥಸೈನಿಕರನ್ನು ಎಡೆಬಿಡದೇ ಸಂಹರಿಸುತ್ತಿದ್ದಾನೆ. ಅವನು ವಾಯುಮಾರ್ಗದಲ್ಲಿಯೂ ಸಂಚರಿಸಬಲ್ಲನು. ಅವನನ್ನು ನೀನು ಯುದ್ಧದಲ್ಲಿ ಸಂಹರಿಸಿ ಯಮಾಲಯಕ್ಕೆ ಕಳುಹಿಸು."

ಮಹಾರಾಜ! ಮಹಾಕಾಯನಾದ ಜಟಾಸುರಿಯು (ಅಲಂಬುಷನು) ಹಾಗೆಯೇ ಆಗಲೆಂದು ದುರ್ಯೋಧನನಿಗೆ ಹೇಳಿ, ಘಟೋತ್ಕಚನನ್ನು ಯುದ್ಧಕ್ಕೆ ಆಹ್ವಾನಿಸಿ ಅವನನ್ನು ನಾನಾವಿಧವಾದ ಶಸ್ತ್ರಗಳಿಂದ ಮುಚ್ಚಿದನು. ಚಂಡಮಾರುತವು ಮೇಘಗಳ ಸಮೂಹವನ್ನು ವಿನಾಶಗೊಳಿಸುವಂತೆ–ಘಟೋತ್ಕಚನು ಕರ್ಣನನ್ನೂ, ಅಲಂಬುಷನನ್ನೂ, ದುಸ್ತರವಾದ ಕುರು ಸೈನ್ಯವನ್ನೂ ನಾನಾವಿಧವಾದ ಆಯುಧಗಳಿಂದ ಮಥಿಸಿಬಿಟ್ಟನು. ಅಲಂಬುಷರಾಕ್ಷಸನು ಘಟೋತ್ಕಚನ ಮಾಯಾಬಲವನ್ನು ನೋಡಿ ನಾನಾ ವಿಧವಾದ ಬಾಣಗಳ ಸಮೂಹಗಳಿಂದ ಅವನನ್ನು ಪ್ರಹರಿಸಲು ಉಪಕ್ರಮಿಸಿದನು. ಮಹಾಬಲನಾದ ಅಲಂಬುಷನು ಅನೇಕ ಬಾಣಗಳಿಂದ ಘಟೋತ್ಕಚನನ್ನು ಪ್ರಹರಿಸಿ ಪಾಂಡವರ ಸೈನ್ಯವನ್ನು ಬಾಣಗಳ ಸಮೂಹದಿಂದ ಓಡಿ ಹೋಗುವಂತೆ ಮಾಡಿದನು. ಬಿರುಗಾಳಿಯಿಂದ ಚೆದುರಿಹೋದ ಮೇಘಗಳೋಪಾದಿಯಲ್ಲಿ–ಆ ರಾತ್ರಿಯಲ್ಲಿ ಅಲಂಬುಷರಾಕ್ಷಸನಿಂದ ಓಡಿಸಲ್ಪಟ್ಟ ಪಾಂಡವರ ಸೈನಿಕರು ದಿಕ್ಕಾಪಾಲಾಗಿ ಚೆದುರಿಹೋದರು. ಅದೇ ರೀತಿಯಲ್ಲಿ ಘಟೋತ್ಕಚನ ಬಾಣಗಳಿಂದ ಛಿನ್ನ-ಭಿನ್ನರಾದ ನಿನ್ನ ಸೈನಿಕರೂ ಸಹ ಆ ರಾತ್ರಿಯಲ್ಲಿ ತಮ್ಮ ಕೈಯಲ್ಲಿದ್ದ ಸಾವಿರಾರು ಪಂಜುಗಳನ್ನೂ ಬಿಸುಟು ಓಡಿ ಹೋದರು. ಮಹಾಗಜವನ್ನು ಅಂಕುಶದಿಂದ ಚುಚ್ಚುವಂತೆ–ಕ್ರುದ್ಧನಾದ ಅಲಂಬುಷನು ಘಟೋತ್ಕಚನನ್ನು ಹತ್ತು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಘಟೋತ್ಕಚನೂ ಅತಿದಾರುಣವಾಗಿ ಗರ್ಜನೆಮಾಡುತ್ತಾ ಅಲಂಬುಷನ ಸಾರಥಿ-ಕುದುರೆಗಳು ಮತ್ತು ಸಕಲವಿಧವಾದ ಅಸ್ತ್ರ-ಶಸ್ತ್ರಾಯುಧಗಳು ಎಲ್ಲವನ್ನೂ ನುಚ್ಚುನೂರು ಮಾಡಿಬಿಟ್ಟನು. ಅನಂತರ ಕರ್ಣನನ್ನು ಬಾಣಗಳ ಸಮೂಹಗಳಿಂದಲೂ, ಇತರ ಕುರುಯೋಧರನ್ನು ಸಾವಿ

ರಾರು ಬಾಣಗಳಿಂದಲೂ ಪ್ರಹರಿಸಿ–ಕಾರ್ಮುಗಿಲು ಮೇರುಪರ್ವತವನ್ನು ಮಳೆಯಿಂದ ಅಭಿಷೇಚಿಸುವಂತೆ–ಅಲಂಬುಷನನ್ನು ಬಾಣಗಳಿಂದ ಅಭಿಷೇಚಿಸಿದನು. ಘಟೋತ್ಕಚರಾಕ್ಷಸನಿಂದ ಪೀಡಿತವಾದ ಕೌರವರ ಚತುರಂಗ ಸೈನ್ಯವೂ ಅಲ್ಲೋಲಕಲ್ಲೋಲವಾಗಿ ಮೇಲೆ ನುಗ್ಗಿ ಪರಸ್ಪರವಾಗಿ ತಮ್ಮ ಸೈನ್ಯವನ್ನೇ ತುಳಿದು ನಾಶಪಡಿಸಿತು. ಹತಸಾರಥಿಯೂ–ರಥದಿಂದ ವಿಹೀನನೂ ಆಗಿದ್ದ ಜಟಾಸುರನ ಮಗನಾದ ಅಲಂಬುಷನು ಪರಮಕ್ರುದ್ಧನಾಗಿ ಘಟೋತ್ಕಚನನ್ನು ದೃಢಮುಷ್ಟಿಯಿಂದ ಗುದ್ದಿದನು. ಅಲಂಬುಷನ ದೃಢ ಮುಷ್ಟಿಯಿಂದ ಪ್ರಹೃತನಾದ ಘಟೋತ್ಕಚನು–ಭೂಕಂಪದ ಸಮಯದಲ್ಲಿ ಮರ-ಬಳ್ಳಿ-ಪೊದೆಗಳಿಂದ ಕೂಡಿದ ಪರ್ವತವು ನಡುಗುವಂತೆ–ನಡುಗಿದನು. ಘಟೋತ್ಕಚನು ಶತ್ರುಗಳ ಸಮೂಹವನ್ನೇ ಕೊಲ್ಲಲು ಸಮರ್ಥವಾದ ಪರಿಘೋಪಮವಾದ ತೋಳಿನಿಂದಲೂ, ಮುಷ್ಟಿಯಿಂದಲೂ ಅಲಂಬುಷನನ್ನು ಬಹಳವಾಗಿ ಪ್ರಹರಿಸಿದನು. ಕ್ರುದ್ಧನಾದ ಘಟೋತ್ಕಚನು ಅಲಂಬುಷನನ್ನು ಚೆನ್ನಾಗಿ ಮಥಿಸಿ (ಮುಷ್ಟಿಯಿಂದ ಅಂಗಾಂಗಗಳೆಲ್ಲವನ್ನೂ ಜಜ್ಜಿ ) ನೆಲದ ಮೇಲೆ ಬೀಳಿಸಿದನು. ಅನಂತರ ನೆಲದ ಮೇಲೆ ಬಿದ್ದಿದ್ದ ಅಲಂಬುಷನನ್ನು ಇಂದ್ರಧ್ವಜಸದೃಶವಾಗಿದ್ದ ತನ್ನೆರಡು ತೋಳುಗಳಿಂದಲೂ ಹಿಡಿದೆತ್ತಿ ಕುಕ್ಕುತ್ತಾ ಹಿಟ್ಟನ್ನು ನಾದುವಂತೆ ನಾದಿಬಿಟ್ಟನು. ಮಹಾಶೂರನಾದ ಅಲಂಬುಷನು ಹೆಣಗಾಡಿ ಘಟೋತ್ಕಚನಿಂದ ಬಿಡಿಸಿಕೊಂಡು ಬಹಳ ವೇಗವಾಗಿ ಅವನನ್ನು ಪುನಃ ಆಕ್ರಮಿಸಿದನು. ರೋಷಾವಿಷ್ಟನಾದ ಅಲಂಬುಷನು ಘಟೋತ್ಕಚನನ್ನು ಹಿಡಿದೆತ್ತಿ ಕೆಳಕ್ಕಪ್ಪಳಿಸಿ ನೆಲದ ಮೇಲೆ ಬೀಳಿಸಿಕೊಂಡು ಇಡಿ-ಪುಡಿಮಾಡಿದನು. ಗಟ್ಟಿಯಾಗಿ ಗರ್ಜಿಸುತ್ತಿದ್ದ ಮಹಾಕಾಯರಾದ ಘಟೋತ್ಕಚಾಲಂಬುಷರ ಯುದ್ಧವು ನಿಶ್ಚಯವಾಗಿಯೂ ಮಹಾಭಯಂಕರವೂ ರೋಮಾಂಚಕರವೂ ಆಗಿದ್ದಿತು.

ಒಬ್ಬರು ಮತ್ತೊಬ್ಬರನ್ನು ಅತಿಶಯಿಸಿ ಯುದ್ಧಮಾಡುತ್ತಿದ್ದರು. ಅತ್ಯಂತಮಾಯಾವಿಗಳಾದ ಇಬ್ಬರು ರಾಕ್ಷಸರೂ ಅನೇಕ ಮಾಯೆಗಳನ್ನು ಸೃಷ್ಟಿಸಿ ಯುದ್ಧಮಾಡುತ್ತಿದ್ದರು. ಅವರ ಯುದ್ಧವು ಹಿಂದೆ ಮಹಾವೀರರಾದ ಇಂದ್ರ ಮತ್ತು ಬಲಿಚಕ್ರವರ್ತಿಗಳಿಗೆ ನಡೆದ ಯುದ್ಧದಂತೆಯೇ ಇದ್ದಿತು.

**ಪಾವಕಾಮ್ಬುನಿಧೀ ಭೂತ್ವಾ ಪುನರ್ಗರುಡತಕ್ಷಕೌ ।**
**ಪುನರ್ಮೇಘಮಹಾವಾತೌ ಪುನರ್ವಜ್ರಮಹಾಚಲೌ ।**
**ಪುನಃ ಕುಞ್ಜರಶಾರ್ದೂಲೌ ಪುನಃ ಸ್ವರ್ಭಾನುಭಾಸ್ಕರೌ ॥೩೧॥**

ಒಬ್ಬ ರಾಕ್ಷಸನು ಪ್ರಳಯಕಾಲದ ಬೆಂಕಿಯಾಗಿ ಉರಿಯತೊಡಗಿದರೆ ಮತ್ತೊಬ್ಬ ರಾಕ್ಷಸನು ಸಮುದ್ರರೂಪವನ್ನು ತಾಳಿ ಪ್ರಳಯಾಗ್ನಿಯನ್ನೂ ಉಪಶಮನಗೊಳಿಸುತ್ತಿದ್ದನು. ಒಬ್ಬನು ತಕ್ಷಕನ ರೂಪವನ್ನು ಧರಿಸಿ ಕಚ್ಚಲು ಬಂದರೆ–ಮತ್ತೊಬ್ಬನು ಒಡನೆಯೇ ಗರುಡನ ರೂಪವನ್ನು ಧರಿಸಿ ತಕ್ಷಕನ ಸೊಕ್ಕನ್ನು ಮುರಿಯುತ್ತಿದ್ದನು. ಒಬ್ಬ ರಕ್ಕಸನು ಮೇಘದ ರೂಪವನ್ನು ಧರಿಸಿ ಧಾರಾಕಾರವಾಗಿ ಮಳೆಗರೆಯಲು ಪ್ರಾರಂಭಿಸಿದರೆ ಮತ್ತೊಬ್ಬ ದೈತ್ಯನು ಚಂಡಮಾರುತನ ರೂಪವನ್ನು ತಾಳಿ ಮೇಘಗಳನ್ನು ದಿಕ್ಕಾಪಾಲಾಗಿ ಚೆದುರಿಸಿಬಿಡುತ್ತಿದ್ದನು. ಒಬ್ಬ ರಾಕ್ಷಸನು ಪರ್ವತದ ರೂಪವನ್ನು ತಾಳಿದರೆ ಮತ್ತೊಬ್ಬನು ವಜ್ರಾಯುಧದ ರೂಪವನ್ನು ತಾಳುವನು. ಒಬ್ಬ ರಕ್ಕಸನು ಮದಗಜದ ರೂಪವನ್ನು ಧರಿಸಿ ಧ್ವಂಸಮಾಡಲು ಬಂದರೆ–ಮತ್ತೊಬ್ಬನು ಸಿಂಹದ ರೂಪವನ್ನು ಧರಿಸಿ ಆನೆಯ ಕೊಬ್ಬನ್ನು ಅಡಗಿಸುತ್ತಿದ್ದನು. ಒಬ್ಬ ಅಸುರನು ಪ್ರಳಯಕಾಲದ ಸೂರ್ಯನಾಗಿ ದಹಿಸಲು ಪ್ರಾರಂಭಿಸಿದರೆ–ಮತ್ತೊಬ್ಬ ದಾನವನು ರಾಹುವಿನ ರೂಪವನ್ನು ತಾಳಿ ಸೂರ್ಯನ ಪ್ರತಾಪ ವನ್ನು ಕುಂಠಿತಗೊಳಿಸುತ್ತಿದ್ದನು.

ಪರಸ್ಪರವಧಾಕಾಂಕ್ಷಿಗಳಾಗಿದ್ದ, ನೂರಾರು ಮಾಯೆಗಳನ್ನು ಸೃಷ್ಟಿಸುತ್ತಿದ್ದ ಅಲಂಬುಷ-ಘಟೋತ್ಕಚರು ಈ ರೀತಿಯಾಗಿ ವಿಚಿತ್ರರೀತಿಯಲ್ಲಿ ಯುದ್ಧ ಮಾಡುತ್ತಿದ್ದರು. ಪರಿಘಾಯುಧಗಳಿಂದಲೂ, ಗದೆಗಳಿಂದಲೂ, ಪ್ರಾಸ-ಮುದ್ಗರ-ಪಟ್ಟಿಶಗಳಿಂದಲೂ, ಮುಸಲಾಯುಧಗಳಿಂದಲೂ, ಪರ್ವತಗಳ ಶಿಖರಗಳಿಂದಲೂ ಅವರಿಬ್ಬರೂ ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ರಾಕ್ಷಸಶ್ರೇಷ್ಠರಾದ ಮಾಯಾಯುದ್ಧವಿಶಾರದರಾದ ಅಲಂಬುಷ-ಘಟೋತ್ಕಚರು ಕುದುರೆಗಳಿಂದಲೇ ಯುದ್ಧಮಾಡುತ್ತಿದ್ದರು. ಪದಾತಿ ಗಳಿಂದಲೇ ಯುದ್ಧಮಾಡುತ್ತಿದ್ದರು (ಆ ಘೋರರಾಕ್ಷಸರಿಗೆ ಕೆಲಸಮಯಗಳಲ್ಲಿ ಗಜಾಶ್ವ-ರಥ ಪದಾತಿಗಳೇ ಆಯುಧಗಳಾಗುತ್ತಿದ್ದುವು).

ಮಹಾರಾಜ! ಅನಂತರ ಕ್ರುದ್ಧನಾದ ಘಟೋತ್ಕಚನು ಅಲಂಬುಷ ನನ್ನು ವಧಿಸುವ ಇಚ್ಛೆಯಿಂದ ಮೇಲಕ್ಕೆ ಹಾರಿ ಗಿಡಗಹಕ್ಕಿಯಂತೆ ಅಲಂಬುಷನ ಮೇಲೆ ಬಿದ್ದನು. ಮಹಾಕಾಯನಾದ ರಾಕ್ಷಸೇಂದ್ರನಾದ



ಅಲಂಬುಷನನ್ನು ಹಿಡಿದು ಮೇಲೆತ್ತಿ ಭೂಮಿಗಪ್ಪಳಿಸಿ–ಮಯಾಸುರನನ್ನು ವಿಷ್ಣುವು ಸಂಹರಿಸಿದಂತೆ–ಸಂಹರಿಸಿದನು. ಅಮಿತಪರಾಕ್ರಮಿಯಾದ ಘಟೋತ್ಕಚನು ಪರಮಾದ್ಭುತವಾಗಿ ಕಾಣುತ್ತಿದ್ದ ತನ್ನ ಖಡ್ಗವನ್ನೆತ್ತಿ ಅತ್ಯಂತ ಭಯಂಕರಾಕಾರನಾದ, ತಪ್ಪಿಸಿಕೊಳ್ಳಲು ಒದ್ದಾಡುತ್ತಿದ್ದ, ಭಯಂಕರವಾಗಿ ಕೂಗಿಕೊಳ್ಳುತ್ತಿದ್ದ, ಶತ್ರುವಾದ ಅಲಂಬುಷನ ಶರೀರದಿಂದ

ತಲೆಯನ್ನು ಕತ್ತರಿಸಿದನು. ಬಳಿಕ ಮಹಾಪರಾಕ್ರಮಿಯಾದ ಘಟೋತ್ಕಚನು ರಕ್ತದಿಂದ ತೋಯ್ದುಹೋಗಿದ್ದ ಅಲಂಬುಷನ ಶಿರಸ್ಸನ್ನು ತಲೆಗೂದಲಿನ ಮೂಲಕವಾಗಿ ಹಿಡಿದುಕೊಂಡು ದುರ್ಯೋಧನನ ರಥದ ಸಮೀಪಕ್ಕೆ ಹೋಗಿ ಗಹ-ಗಹಿಸಿ ನಗುತ್ತಾ ವಿಕೃತವಾದ ಮುಖದಿಂದಲೂ ತಲೆಗೂದಲಿನಿಂದಲೂ ಕೂಡಿದ್ದ ಅಲಂಬುಷನ ಶಿರಸ್ಸನ್ನು ದುರ್ಯೋಧನನ ರಥದಲ್ಲಿರಿಸಿ–ವರ್ಷರ್ತುವಿನಲ್ಲಿ ಮೇಘವು ಗರ್ಜಿಸುವಂತೆ–ಭಯಂಕರನಾಗಿ ಗರ್ಜಿಸಿ ದನು. ಬಳಿಕ ದುರ್ಯೋಧನನನ್ನು ಕುರಿತು ಹೇಳಿದನು :

**ಏಷ ತೇ ನಿಹತೋ ಬನ್ಧುಸ್ತ್ವಯಾ ದೃಷ್ಟೋಽಸ್ಯ ವಿಕ್ರಮಃ ।**
**ಪುನರ್ದ್ರಷ್ಟಾಸಿ ಕರ್ಣಸ್ಯ ನಿಷ್ಠಾಮೇತಾಂ ತಥಾऽऽತ್ಮನಃ ॥೪೧॥**

"ದುರ್ಯೋಧನ! ಈ ನಿನ್ನ ಬಂಧುವನ್ನು ನಾನು ಸಂಹರಿಸಿದ್ದೇನೆ. ಇವನ ಪರಾಕ್ರಮವೆಷ್ಟೆಂಬುದನ್ನೂ ನೀನೇ ನೋಡಿದೆಯಲ್ಲವೇ? ಪುನಃ ಇದೇ ರೀತಿಯಲ್ಲಿ ಕರ್ಣನ ಸಮಾಪ್ತಿಯನ್ನೂ ನೀನು ನೋಡಲಿರುವೆ. ನಿನ್ನ ಅವಸ್ಥೆಯೇನಾಗುವುದೆಂಬುದನ್ನೂ ನೀನು ನೋಡಲಿರುವೆ. ಅಲಂಬುಷನ ತಲೆಯನ್ನು ನಿನ್ನ ರಥದಲ್ಲಿಟ್ಟುದಕ್ಕೆ ಕಾರಣವನ್ನೂ ನೀನು ಪ್ರಶ್ನಿಸಬಹುದು.

**ಸ್ವಧರ್ಮಮರ್ಥಂ ಕಾಮಂ ಚ ತ್ರಿತಯಂ ಯೋಽಭಿವಾಞ್ಛತಿ ।**
**ರಿಕ್ತಪಾಣಿರ್ನ ಪಶ್ಯೇತ ರಾಜಾನಂ ಬ್ರಾಹ್ಮಣಂ ಸ್ತ್ರಿಯಮ್ ॥೪೨॥**

ಸ್ವಧರ್ಮ, ಅರ್ಥ ಮತ್ತು ಕಾಮ–ಈ ಮೂರನ್ನೂ ಪಡೆದುಕೊಳ್ಳ ಬೇಕೆಂದು ಯಾವನು ಇಚ್ಛಿಸುತ್ತಾನೆಯೋ–ಅವನು ರಾಜನನ್ನಾಗಲೀ, ಬ್ರಾಹ್ಮಣನನ್ನಾಗಲೀ, ಹೆಂಗಸನ್ನಾಗಲೀ–ಬರಿಗೈಯಿಂದ (ಏನನ್ನೂ ತೆಗೆದು ಕೊಂಡುಹೋಗದೇ) ನೋಡಬಾರದು. ಈ ಕಾರಣದಿಂದ ನಾನು ನಿನಗೆ ಅಲಂಬುಷನ ತಲೆಯನ್ನು ರಾಜಕಾಣಿಕೆಯನ್ನಾಗಿ ಒಪ್ಪಿಸಿದ್ದೇನೆ.

ದುರ್ಯೋಧನ! ನಾನು ಕರ್ಣನನ್ನು ವಧಿಸುವವರೆಗೆ ನೀನು ಹರ್ಷ ದಿಂದಲೇ ಇರು."

ನರೇಶ್ವರ! ಕ್ರುದ್ಧನಾದ ಘಟೋತ್ಕಚನು ಹೀಗೆ ಹೇಳಿ ರಣಭೂಮಿ ಯಲ್ಲಿ ತೀಕ್ಷ್ಣವಾದ ಬಾಣಗಳನ್ನು ಸುರಿಸುತ್ತಾ ಕರ್ಣನ ಬಳಿಗೆ ಹೊರಟು

ಹೋದನು. ಬಳಿಕ ನರ-ರಾಕ್ಷಸರಿಗೆ ಘೋರರೂಪವೂ ಭಯಂಕರವೂ ಆದ ಮಹಾಯುದ್ಧವು ನಡೆಯಿತು."

೧೭೪ನೆಯ ಅಧ್ಯಾಯವು ಮುಗಿಯಿತು.

೧೭೫ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಘಟೋತ್ಕಚನ ಮತ್ತು ಅವನ ರಥಾದಿಗಳ ಸ್ವರೂಪವರ್ಣನೆ : ಕರ್ಣ-ಘಟೋತ್ಕಚರ ಘೋರಸಂಗ್ರಾಮ

ಕರ್ಣ-ಘಟೋತ್ಕಚರ ಯುದ್ಧದ ವಿಷಯವಾಗಿ ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

"ಸಂಜಯ! ಅರ್ಧರಾತ್ರಿಯಲ್ಲಿ ವೈಕರ್ತನಕರ್ಣನೂ-ಘಟೋತ್ಕಚ ರಾಕ್ಷಸನೂ ಭಯಂಕರಯುದ್ಧದಲ್ಲಿ ತೊಡಗಿದರು. ಅವರ ಯುದ್ಧವು ಹೇಗೆ ನಡೆಯಿತು? ಘೋರರಾಕ್ಷಸನ ರೂಪವು ಹೇಗಿದ್ದಿತು? ಅವನ ರಥವು ಎಂತಹುದು? ಅವನ ಕುದುರೆಗಳೂ ಮತ್ತು ಆಯುಧಗಳೂ ಎಂತಹವು? ಅವನ ಕುದುರೆಗಳು, ರಥ, ಕೇತು ಮತ್ತು ಧನುಸ್ಸುಗಳು ಯಾವ ಪ್ರಮಾಣದಲ್ಲಿದ್ದುವು? ಅವನ ಕವಚವು ಹೇಗಿದ್ದಿತು? ಅವನ ಕಿರೀಟವು ಹೇಗಿದ್ದಿತು? ನೀನು ನನ್ನ ಪ್ರಶ್ನೆಗಳಿಗೆ ಯಥಾವತ್ತಾದ ಉತ್ತರವನ್ನು ಕೊಡು. ವಿಷಯನಿರೂಪಣೆಯಲ್ಲಿ ನೀನು ಬಹಳ ಕುಶಲವಾಗಿರುವೆ."

**ಲೋಹಿತಾಕ್ಷೋ ಮಹಾಕಾಯಸ್ತಾಮ್ರಾಸ್ಯೋ ನಿಮ್ನತೋದರಃ ।**
**ಊರ್ಧ್ವರೋಮಾ ಹರಿಶ್ಮಶ್ರುಃ ಶಙ್ಕುಕರ್ಣೋ ಮಹಾಹನುಃ ।**
**ಆಕರ್ಣದಾರಿತಾಸ್ಯಶ್ಚ ತೀಕ್ಷ್ಣದಂಷ್ಟ್ರಃ ಕರಾಲವಾನ್ ॥೫॥**

"ಮಹಾರಾಜ! ಘಟೋತ್ಕಚನ ಶರೀರವು ಬಹಳ ದೊಡ್ಡದಾಗಿದ್ದಿತು. ಅವನ ಕಣ್ಣುಗಳು ಕೆಂಪಾಗಿದ್ದುವು. ಮುಖವು ತಾಮ್ರವರ್ಣದ್ದಾಗಿದ್ದಿತು. ಹೊಟ್ಟೆಯು ಆಳವಾಗಿದ್ದಿತು. ರೋಮಗಳು ನಿಮಿರಿ ನಿಂತಿದ್ದುವು. ಅವನಿಗೆ ಹಸಿರು ಬಣ್ಣದ ಗಡ್ಡ-ಮೀಸೆಗಳಿದ್ದುವು. ಗೂಟದಂತೆ ಅವನ ಕಿವಿಯಿದ್ದಿತು. ದವಡೆಯು ಬಹಳ ದೊಡ್ಡದಾಗಿದ್ದಿತು. ಕಿವಿಗಳ ಪರ್ಯಂತವಾಗಿ ಅವನ

ಬಾಯಿದ್ದಿತು. ತೀಕ್ಷ್ಣವಾದ ಕೋರೆದಾಡೆಗಳಿದ್ದುವು. ಆದುದರಿಂದಲೇ ಅವನು ಭಯಂಕರರೂಪನಾಗಿದ್ದನು.

**ಸುದೀರ್ಘತಾಮ್ರಜಿಹ್ವೋಷ್ಠೋ ಲಮ್ಬಭ್ರೂಃ ಸ್ಥೂಲನಾಸಿಕಃ ।**
**ನೀಲಾಙ್ಗೋ ಲೋಹಿತಗ್ರೀವೋ ಗಿರಿವರ್ಷ್ಮಾ ಭಯಂಕರಃ ॥೬॥**

ಅವನ ನಾಲಿಗೆಯೂ ಮತ್ತು ತುಟಿಗಳೂ ನೀಳವಾಗಿಯೂ ಕೆಂಪಾಗಿಯೂ ಇದ್ದುವು. ಹುಬ್ಬುಗಳು ಜೋಲಾಡುತ್ತಿದ್ದುವು. ಮೂಗು ದಪ್ಪವಾಗಿದ್ದಿತು. ಶರೀರವು ನೀಲಿಯ ಬಣ್ಣದ್ದಾಗಿದ್ದಿತು. ಕುತ್ತಿಗೆಯು ಮಾತ್ರ ಕೆಂಪಾಗಿದ್ದಿತು. ಅವನ ಶರೀರವು ಪರ್ವತಾಕಾರವಾಗಿದ್ದಿತು. ಆದುದರಿಂದಲೇ ಅವನು ನೋಡಲು ಭಯಂಕರನಾಗಿ ಕಾಣುತ್ತಿದ್ದನು.

**ಮಹಾಕಾಯೋ ಮಹಾಬಾಹುರ್ಮಹಾಶೀರ್ಷೋ ಮಹಾಬಲಃ ।**
**ವಿಕೃತಃ ಪರುಷಸ್ಪರ್ಶೋ ವಿಕಟೋದ್ಬದ್ಧಪಿಣ್ಡಿಕಃ ॥೭॥**

ಘಟೋತ್ಕಚನು ಮಹಾಕಾಯನು. ಅವನಿಗೆ ದಪ್ಪವಾದ ಮತ್ತು ನೀಳವಾದ ತೋಳುಗಳಿದ್ದುವು. ತಲೆಯು ಬಹಳ ದಪ್ಪವಾಗಿದ್ದಿತು. ಅವನು ಮಹಾಬಲಿಷ್ಠನಾಗಿದ್ದನು. ವಿಕಾರಸ್ವರೂಪನಾಗಿದ್ದನು. ಅವನ ಸ್ಪರ್ಶವು ಕಾಠಿಣ್ಯದಿಂದ ಕೂಡಿದ್ದಿತು. ಅವನ ಕಣಕಾಲಿನ ಹಿಂಭಾಗವು ವಿಕಾರವಾಗಿಯೂ ಮಾಂಸಲವಾಗಿಯೂ ಇದ್ದಿತು.

**ಸ್ಥೂಲಸ್ಫಿಗ್ಗೂಢನಾಭಿಶ್ಚ ಶಿಥಿಲೋಪಚಯೋ ಮಹಾನ್ ।**
**ತಥೈವ ಹಸ್ತಾಭರಣೀ ಮಹಾಮಾಯೋಽಙ್ಗದೀ ತಥಾ ॥೮॥**

ಅವನ ನಿತಂಬವು ಬಹಳ ದಪ್ಪವಾಗಿದ್ದಿತು. ಹೊಕ್ಕಳು ಪ್ರದೇಶವು ಬಹಳ ಚಿಕ್ಕುದಾಗಿದ್ದು ಬಹಳ ಗೂಢವೂ ಆಗಿದ್ದಿತು. ಅವನ ಶರೀರವು ದೊಡ್ಡದಾಗಿ ಬೆಳೆದಿದ್ದಿತು. ಅವನು ಕೈಗಳಲ್ಲಿ ಆಭರಣಗಳನ್ನು ತೊಟ್ಟುಕೊಂಡಿದ್ದನು. ಭುಜಗಳಲ್ಲಿ ಅಂಗದ-ಕೇಯೂರಗಳನ್ನು ಧರಿಸಿದ್ದನು. ರಾಕ್ಷಸನು ಮಹಾಮಾಯಾವಿಯಾಗಿದ್ದನು.

**ಉರಸಾ ಧಾರಯನ್ನಿಷ್ಕಮಗ್ನಿಮಾಲಾಂ ಯಥಾಚಲಃ ।**
**ತಸ್ಯ ಹೇಮಮಯಂ ಚಿತ್ರಂ ಬಹುರೂಪಾಙ್ಗಶೋಭಿತಮ್ ।**
**ತೋರಣಪ್ರತಿಮಂ ಶುಭ್ರಂ ಕಿರೀಟಂ ಮೂರ್ಧ್ನ್ಯಶೋಭತ ॥೯॥**

ಪರ್ವತವು ಅಗ್ನಿಯನ್ನೇ ಮಾಲೆಯನ್ನಾಗಿ ಹೊಂದಿರುವಂತೆ–ಘಟೋತ್ಕಚರಾಕ್ಷಸನು ತನ್ನ ವಕ್ಷಃಸ್ಥಳದಲ್ಲಿ ಸುವರ್ಣಮಾಲೆಯನ್ನು ಧರಿಸಿದ್ದನು. ಸುವರ್ಣಮಯವಾಗಿದ್ದ, ಚಿತ್ರಿತವಾಗಿದ್ದ, ತೋರಣಸದೃಶವಾಗಿದ್ದ, ಬಹುರೂಪವಾದ, ಸುಂದರವಾದ ವಿಭಾಗಗಳಿಂದ ಶೋಭಾಯಮಾನವಾಗಿ ಕಾಣುತ್ತಿದ್ದ ಕಿರೀಟವು ರಾಕ್ಷಸನ ತಲೆಯಲ್ಲಿ ಬೆಳಗುತ್ತಿದ್ದಿತು.



**ಕುಣ್ಡಲೇ ಬಾಲಸೂರ್ಯಾಭೇ ಮಾಲಾಂ ಹೇಮಮಯೀಂ ಶುಭಾಮ್ ।**
**ಧಾರಯನ್ವಿಪುಲಂ ಕಾಂಸ್ಯಂ ಕವಚಂ ಚ ಮಹಾಪ್ರಭಮ್ ॥೧೦॥**

ಬಾಲಸೂರ್ಯನಂತೆ ಹೊಳೆಯುತ್ತಿದ್ದ ಕುಂಡಲಗಳನ್ನೂ, ಸುವರ್ಣ

ಮಯವಾದ ಮಾಲೆಯನ್ನೂ, ಕಂಚಿನಿಂದ ಮಾಡಲ್ಪಟ್ಟಿದ್ದ ಪ್ರಭಾಯುಕ್ತವಾದ ವಿಶಾಲವಾದ ಕವಚವನ್ನೂ ಘಟೋತ್ಕಚನು ಧರಿಸಿದ್ದನು.

**ಕಿಂಕಿಣೀಶತನಿರ್ಘೋಷಂ ರಕ್ತಧ್ವಜಪತಾಕಿನಮ್ ।**
**ಋಕ್ಷಚರ್ಮಾವನದ್ಧಾಙ್ಗಂ ನಲ್ವಮಾತ್ರಂ ಮಹಾರಥಮ್ ॥೧೧॥**



ಘಟೋತ್ಕಚನ ರಥವು ನೂರಾರು ಗಂಟೆಗಳಿಂದ ಶಬ್ದಾಯಮಾನವಾಗಿದ್ದಿತು. ರಥದಲ್ಲಿ ಕೆಂಪಾದ ಧ್ವಜ-ಪತಾಕೆಗಳಿದ್ದುವು. ರಥವನ್ನು ಕರಡಿಯ ಚರ್ಮದಿಂದ ಹೊದ್ದಿಸಿದ್ದರು. ಮಹಾರಥದ ಸುತ್ತಳತೆಯು ಸುಮಾರು ನಾಲ್ಕುನೂರು ಮೊಳಗಳಷ್ಟು ವಿಸ್ತಾರವಾಗಿದ್ದಿತು.

**ಸರ್ವಾಯುಧವರೋಪೇತಮಾಸ್ಥಿತೋ ಧ್ವಜಶಾಲಿನಮ್ ।**
**ಅಷ್ಟಚಕ್ರಸಮಾಯುಕ್ತಂ ಮೇಘಗಮ್ಭೀರನಿಃಸ್ವನಮ್ ॥೧೨॥**

ಆ ಮಹಾರಥವು ಎಲ್ಲ ವಿಧವಾದ ಆಯುಧಗಳಿಂದಲೂ ಸಮೃದ್ಧ ವಾಗಿದ್ದಿತು. ಮೇಘದ ಗಂಭೀರಧ್ವನಿಗೆ ಸಮಾನವಾಗಿ ಧ್ವನಿಮಾಡುತ್ತಿತ್ತು. ಎಂಟು ಚಕ್ರಗಳು ಅವನ ರಥಕ್ಕಿದ್ದುವು. ಆ ರಥಕ್ಕೆ ದೊಡ್ಡದಾದ ಧ್ವಜವಿದ್ದಿತು. ಅಂತಹ ರಥದಲ್ಲಿ ಘಟೋತ್ಕಚನು ಕುಳಿತಿದ್ದನು.

**ಮತ್ತಮಾತಙ್ಗಸಂಕಾಶಾ ಲೋಹಿತಾಕ್ಷಾ ವಿಭೀಷಣಾಃ ।**
**ಕಾಮವರ್ಣಜವಾ ಯುಕ್ತಾ ಬಲವನ್ತಃ ಶತಂ ಹಯಾಃ ॥೧೩॥**

ಮದಿಸಿದ ಆನೆಗಳಿಗೆ ಸಮಾನವಾದ, ಕೆಂಪಾದ ಕಣ್ಣುಗಳನ್ನು ಹೊಂದಿದ್ದ, ಭಯಂಕರವಾದ, ಇಚ್ಛೆಬಂದಂತೆ ರೂಪಗಳನ್ನು ಬದಲಾಯಿಸುತ್ತಿದ್ದ, ಶೀಘ್ರವಾಗಿ ಹೋಗುವ, ಮಹಾಬಲಿಷ್ಠವಾದ ನೂರು ಕುದುರೆಗಳನ್ನು ಘಟೋತ್ಕಚನ ರಥಕ್ಕೆ ಹೂಡಿದ್ದರು.

ಶ್ರಮವನ್ನು ಸಂಪೂರ್ಣವಾಗಿ ಜಯಿಸಿದ್ದ, ಘೋರರೂಪದ ಬಾಲ ಗಳನ್ನು ಧರಿಸಿದ್ದ, ವಿಪುಲವಾಗಿ ಬೆಳೆದಿದ್ದ ಕತ್ತಿನ ಕೂದಲುಗಳಿಂದ ಪ್ರಕಾಶಿಸುತ್ತಿದ್ದ ಆ ಕುದುರೆಗಳು ಬಾರಿ-ಬಾರಿಗೂ ಕೆನೆಯುತ್ತಿದ್ದುವು.

ವಿರೂಪಾಕ್ಷಕನೆಂಬ ರಾಕ್ಷಸನು ಘಟೋತ್ಕಚನಿಗೆ ಸಾರಥಿಯಾಗಿದ್ದನು. ಪ್ರದೀಪ್ತವಾದ ಮುಖದಿಂದಲೂ, ಕುಂಡಲಗಳಿಂದಲೂ ಶೋಭಿಸುತ್ತಿದ್ದನು. ಸೂರ್ಯನ ರಶ್ಮಿಗೆ ಸಮಾನವಾದ ಹಗ್ಗಗಳಿಂದ (ಲಗಾಮು) ಅವನು ಕುದುರೆ ಗಳನ್ನು ನಿಯಂತ್ರಿಸುತ್ತಿದ್ದನು. ಸೂರ್ಯನು ಸಾರಥಿಯಾದ ಅರುಣನಿಂದ ಕೂಡಿರುವಂತೆ–ಅಂತಹ ಮಹಾಬಲಿಷ್ಠನಾದ ಸಾರಥಿಯೊಡನೆ ಘಟೋ ತ್ಕಚನು ಯುದ್ಧಸನ್ನದ್ಧನಾಗಿದ್ದನು. ಪರ್ವತವು ದೊಡ್ಡ ಮೋಡದೊಡನೆ ಸಂಸಕ್ತವಾಗಿರುವಂತೆ (ಸೇರಿರುವಂತೆ) ಆಕಾಶವನ್ನೂ ಮುಟ್ಟುವುದಾಗಿದ್ದ, ಬಹಳ ದೊಡ್ಡದಾಗಿದ್ದ ಬಾವುಟವು ಘಟೋತ್ಕಚನ ರಥದಲ್ಲಿ ಹಾರಿಸಲ್ಪಟ್ಟಿ ದ್ದಿತು. ಕೆಂಪಾದ ಶಿರಸ್ಸನ್ನು ಹೊಂದಿದ್ದ ಅತ್ಯಂತಭಯಂಕರವಾಗಿ ಕಾಣುತ್ತಿದ್ದ, ಮಾಂಸಾಶಿಯಾದ ರಣಹದ್ದು ಘಟೋತ್ಕಚನ ಧ್ವಜದಲ್ಲಿದ್ದಿತು.

ಇಂದ್ರನ ವಜ್ರಾಯುಧದ ಘೋಷಕ್ಕೆ ಸಮಾನವಾದ ಟೇಂಕಾರಶಬ್ದ ದಿಂದಲೂ, ದೃಢವಾದ ಮೌರ್ವಿಯಿಂದಲೂ ಕೂಡಿದ್ದ, ಒಂದು ಕಿಷ್ಕುವಿನಷ್ಟು (ಮೊಳದಷ್ಟು) ಅಗಲವಾಗಿದ್ದ, ಹನ್ನೆರಡು *ಅರತ್ನಿಗಳಷ್ಟು ಉದ್ದವಾಗಿದ್ದ ಧನುಸ್ಸನ್ನು ಕರ್ಣಪರ್ಯಂತವಾಗಿ ಸೆಳೆಯುತ್ತಾ, ರಥದ ಅಚ್ಚುಮರದ ಗಾತ್ರದಷ್ಟು ಗಾತ್ರದ ಬಾಣಗಳಿಂದ ಎಲ್ಲ ದಿಕ್ಕುಗಳನ್ನೂ ಮುಚ್ಚುತ್ತಾ, ವೀರರ ಪ್ರಾಣಾಪಹಾರಕವಾದ ಆ ಘೋರರಾತ್ರಿಯಲ್ಲಿ ಘಟೋತ್ಕಚನು ಕರ್ಣನ ಬಳಿಗೆ ಧಾವಿಸಿದನು. ರಥದಲ್ಲಿ ಸ್ಥಿರತೆಯಿಂದ ಕುಳಿತಿದ್ದ ಘಟೋತ್ಕಚನು ಧನುಸ್ಸನ್ನು (ಧನುಸ್ಸಿನ ಶಿಂಜಿನಿಯನ್ನು) ಸೆಳೆದುಬಿಡುತ್ತಿದ್ದಾಗ ಅದರ ಠೇಂಕಾರಶಬ್ದವು ಸಿಡಿಲಿನ ಶಬ್ದದಂತೆಯೇ ಕೇಳಿಸುತ್ತಿದ್ದಿತು. ಧನುಸ್ಸಿನ ಆ ಘೋರಶಬ್ದದಿಂದ ಭಯಗೊಂಡ ನಿನ್ನ ಸೈನ್ಯಗಳು ಸಮುದ್ರದಲ್ಲಿರುವ ದೊಡ್ಡ-ದೊಡ್ಡ ಅಲೆಗಳೋಪಾದಿಯಲ್ಲಿ ಕಂಪಿಸಿದುವು.

ವಿರೂಪವಾದ ಕಣ್ಣುಗಳಿಂದ ಕೂಡಿದ್ದ, ಭಯಂಕರಾಕಾರನಾಗಿದ್ದ ಘಟೋತ್ಕಚನು ತನ್ನ ಮೇಲೆ ಬೀಳುತ್ತಿರುವುದನ್ನು ಕಂಡು ರಾಧೇಯನು ನಗು-ನಗುತ್ತಲೇ ಬಹಳ ಬೇಗ ಅವನನ್ನು ತಡೆದು ನಿಲ್ಲಿಸಿದನು. ಮದಿಸಿದ ಸಲಗವನ್ನು ಮತ್ತೊಂದು ಮದಿಸಿದ ಸಲಗವು ಎದುರಿಸುವಂತೆ ಬಾಣಗಳ ಮಳೆಗರೆಯುತ್ತಿದ್ದ ಘಟೋತ್ಕಚನ ಮೇಲೆ ಕರ್ಣನು ಬಾಣಗಳ ಮಳೆಗರೆ ಯುತ್ತಾ ಅತ್ಯಂತ ಹತ್ತಿರದಿಂದಲೇ ಅವನನ್ನು ಆಕ್ರಮಿಸಿದನು. ಕರ್ಣ-ರಾಕ್ಷಸರ ಭಯಂಕರವಾದ ಆ ಸಂಘರ್ಷವು ಹಿಂದೆ ಇಂದ್ರ ಮತ್ತು ಶಂಬರ ರಿಗೆ ನಡೆದ ಯುದ್ಧದಂತೆಯೇ ಇದ್ದಿತು. ಕರ್ಣ-ಘಟೋತ್ಕಚರು ಭಯಂಕರ ವಾದ ಶಬ್ದದಿಂದ ಕೂಡಿದ್ದ ಮಹಾವೇಗಯುಕ್ತವಾಗಿದ್ದ ಧನುಸ್ಸುಗಳನ್ನೆತ್ತಿ ಕೊಂಡು ದೊಡ್ಡದಾದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಕ್ಷತ-ವಿಕ್ಷತ ರನ್ನಾಗಿ ಮಾಡುತ್ತಾ ಪರಸ್ಪರವಾಗಿ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಮುಚ್ಚಿಬಿಟ್ಟರು. ಆಕರ್ಣವಾಗಿ ಸೆಳೆದುಬಿಡುತ್ತಿದ್ದ, ಬಗ್ಗಿದ ಗಿಣ್ಣುಗಳಿದ್ದ

---

* ಅರತ್ನಿಃ = ಮೊಣಕೈಯಿಂದ ಹಿಡಿದು ಕಿರುಬೆರಳಿನ ತುದಿಯವರೆಗಿನ ಅಳತೆ–ಒಂದು ಗುದ್ದುಮೊಳ. ಅರತ್ನಿರ್ನಾ ಸಪ್ರಕೋಷ್ಠತತಾಙ್ಗುಲಿಕರೇಽಪಿ ಚ । [ಮೇದಿನೀ]

ಬಾಣಗಳಿಂದ ಕಂಚಿನ ಕವಚಗಳನ್ನೂ ಪರಸ್ಪರವಾಗಿ ಭೇದಿಸಿ ಒಬ್ಬರು ಮತ್ತೊಬ್ಬರನ್ನು ಮುಂದೆ ಬರದಂತೆ ತಡೆದು ನಿಲ್ಲಿಸಿದರು. ಮದಿಸಿದ ಎರಡು ಸಿಂಹಗಳು ಪಂಜಗಳಿಂದ ಸೆಣೆಸಾಡುವಂತೆ ಮತ್ತು ಎರಡು ಮಹಾಗಜಗಳು ದಂತಗಳಿಂದಲೇ ತಿವಿದಾಡುವಂತೆ–ಆ ನರ-ರಾಕ್ಷಸರು ರಥಶಕ್ತಿಗಳಿಂದಲೂ, ಬಾಣಗಳಿಂದಲೂ ಪರಸ್ಪರವಾಗಿ ಕ್ಷತ-ವಿಕ್ಷತಗೊಳಿಸಿದರು. ಬಾಣಗಳನ್ನು ಧನುಸ್ಸುಗಳಲ್ಲಿ ಅನುಸಂಧಾನಮಾಡುತ್ತಾ ಒಬ್ಬರು ಮತ್ತೊಬ್ಬರ ಅಂಗಾಂಗ ಗಳನ್ನೂ ಛಿನ್ನ-ಭಿನ್ನಗೊಳಿಸುತ್ತಿದ್ದರು. ಬೆಂಕಿಯ ರೂಪವಾದ ಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ದಹಿಸುತ್ತಾ ಪ್ರೇಕ್ಷಕರಿಗೆ ನೋಡಲು ಬಹಳ ದುರ್ಧರ್ಷರಾಗಿ ಕಾಣುತ್ತಿದ್ದರು. ಕರ್ಣ-ಘಟೋತ್ಕಚರ ಅಂಗಾಂಗಗಳು ಕ್ಷತ-ವಿಕ್ಷತವಾಗಿದ್ದು ಆ ಗಾಯಗಳಿಂದ ಹೊರಬರುತ್ತಿದ್ದ ರಕ್ತದ ಧಾರೆಗಳಿಂದ ಇಬ್ಬರೂ ಸಂಪೂರ್ಣವಾಗಿ ನೆನೆದುಹೋಗಿ–ಹರಿಯುವ ನೀರಿನಿಂದ ಕೂಡಿ ರುವ ಗೈರಿಕಾದಿಧಾತುಗಳ ಎರಡು ಪರ್ವತಗಳಂತೆಯೇ ಪರಿಶೋಭಿಸು ತ್ತಿದ್ದರು. ಒಬ್ಬರು ಮತ್ತೊಬ್ಬರನ್ನು ಜಯಿಸಬೇಕೆಂದು ಪ್ರಯತ್ನಪೂರ್ವಕವಾಗಿ ಯುದ್ಧಮಾಡುತ್ತಿದ್ದ ಮಹಾದ್ಯುತಿಮಂತರಾದ ನರ-ರಾಕ್ಷಸರು ಬಾಣಗಳ ಅಗ್ರಭಾಗಗಳಿಂದ ಚುಚ್ಚಲ್ಪಟ್ಟ ಅಂಗಗಳುಳ್ಳವರಾಗಿದ್ದರೂ ಒಬ್ಬರು ಮತ್ತೊಬ್ಬರನ್ನು ಛಿನ್ನ-ಭಿನ್ನಗೊಳಿಸುತ್ತಿದ್ದರೂ, ಇಬ್ಬರಲ್ಲಿ ಯಾರೊಬ್ಬರೂ ಯುದ್ಧದಿಂದ ವಿಚಲಿತರಾಗಲಿಲ್ಲ.

ಪ್ರಾಣಗಳನ್ನೇ ಪಣವನ್ನಾಗಿಟ್ಟು ಯುದ್ಧಮಾಡುತ್ತಿದ್ದ, ಕರ್ಣ-ಘಟೋತ್ಕಚರಿಗೆ ನಡೆಯುತ್ತಿದ್ದ ಆ ರಾತ್ರಿಯ ಯುದ್ಧವು ಬಹಳ ಹೊತ್ತಿನ ವರೆಗೂ ಸಮ-ಸಮವಾಗಿಯೇ ಇದ್ದಿತು. ತೀಕ್ಷ್ಣವಾದ ಬಾಣಗಳನ್ನು ಧನುಸ್ಸಿ ನಲ್ಲಿ ಅನುಸಂಧಾನಮಾಡುತ್ತಾ ಒಂದಕ್ಕೊಂದಕ್ಕೆ ಅಂಟಿಕೊಂಡಿರುವಂತೆಯೇ ಬಾಣಗಳನ್ನು ಸತತವಾಗಿ ಬಿಡುತ್ತಿದ್ದ ಘಟೋತ್ಕಚನ ಧನುಸ್ಸಿನ ಠೇಂಕಾರ ಶಬ್ದವನ್ನು ಕೇಳಿ ನಿನ್ನ ಕಡೆಯ ಯೋಧರೂ ಮತ್ತು ಶತ್ರುಗಳ ಕಡೆಯ ಯೋಧರೂ ಭಯಗೊಂಡರು. ಅಸ್ತ್ರವಿದರಲ್ಲಿ ಶ್ರೇಷ್ಠನಾದ ಕರ್ಣನು ಘಟೋತ್ಕಚನನ್ನು ಅತಿಶಯಿಸುವುದಕ್ಕಾಗದಿದ್ದ ಆ ಸಮಯದಲ್ಲಿ, ದಿವ್ಯಾಸ್ತ್ರಗಳನ್ನು ಪ್ರದರ್ಶಿಸಲು ಉಪಕ್ರಮಿಸಿದನು. ಕರ್ಣನು ದಿವ್ಯಾಸ್ತ್ರವನ್ನು

ಧನುಸ್ಸಿನಲ್ಲಿ ಅನುಸಂಧಾನಮಾಡಿದುದನ್ನು ಕಂಡು ಪಾಂಡುನಂದನನು ರಾಕ್ಷಸೀಮಹಾಮಾಯೆಯನ್ನು ಪ್ರದರ್ಶಿಸಿದನು. ಆ ಸಮಯದಲ್ಲವನು ಶೂಲ-ಮುದ್ಗರಗಳನ್ನೂ, ಪರ್ವತ-ವೃಕ್ಷಗಳನ್ನೂ ಕೈಗಳಲ್ಲಿ ಹಿಡಿದಿದ್ದ ಘೋರರೂಪವಾದ ರಾಕ್ಷಸರ ಮಹಾಸೈನ್ಯದಿಂದ ಪರಿವೃತನಾಗಿದ್ದನು. ಉಗ್ರವಾದ ಕಾಲದಂಡವನ್ನು ಧರಿಸಿರುವ, ಸಮಸ್ತಪ್ರಾಣಿಗಳ ಹಂತಕನಾದ ಯಮರಾಜನಂತೆ–ದೊಡ್ಡದಾದ ಧನುಸ್ಸನ್ನು ಮೇಲೆತ್ತಿಕೊಂಡು ಬರುತ್ತಿದ್ದ ಘಟೋತ್ಕಚನನ್ನು ನೋಡಿ ಎಲ್ಲ ರಾಜರೂ ಹೆದರಿದರು. ಘಟೋತ್ಕಚನು ಮಾಡಿದ ಸಿಂಹನಾದಗಳಿಂದ ಭಯಗೊಂಡ ಆನೆಗಳು ಮೂತ್ರವಿಸರ್ಜನೆ ಮಾಡಿದುವು. ಮನುಷ್ಯರು ಬಹಳವಾಗಿ ವ್ಯಥಿತರಾದರು. ಆ ಅರ್ಧರಾತ್ರಿಯಲ್ಲಿ ಅಧಿಕವಾದ ಬಲದಿಂದ ಕೂಡಿದ್ದ ರಾಕ್ಷಸಸೈನಿಕರು ಅತಿಭಯಂಕರ ವಾದ ಕಲ್ಲಿನ ಮಳೆಯನ್ನು ಸುತ್ತಲೂ ಸುರಿಸಿದರು. ಕಬ್ಬಿಣದ ಚಕ್ರಗಳೂ, ಭುಶುಂಡಿಗಳೂ, ಶಕ್ತಿ-ತೋಮರಗಳೂ, ಶೂಲ-ಶತಘ್ನೀ-ಪಟ್ಟಿಶಗಳೂ ಅವಿರತವಾಗಿ ಬೀಳುತ್ತಲೇ ಇದ್ದುವು. ಅತ್ಯುಗ್ರವೂ, ಅತಿಭಯಂಕರವೂ ಆಗಿದ್ದ ಆ ಯುದ್ಧವನ್ನು ನೋಡಿ ನಿನ್ನ ಮಕ್ಕಳೂ ಮತ್ತು ಯೋಧರೂ ವ್ಯಥಿತರಾಗಿ ಪಲಾಯನಮಾಡಿದರು. ಆ ಸಮಯದಲ್ಲಿ ಅಸ್ತ್ರಬಲಶ್ಲಾಘಿಯಾದ, ಅಭಿಮಾನಶಾಲಿಯಾದ ಕರ್ಣನೊಬ್ಬನು ಮಾತ್ರ ಸ್ವಲ್ಪವಾದರೂ ವ್ಯಥೆಗೊಳ್ಳಲಿಲ್ಲ. ಘಟೋತ್ಕಚನಿಂದ ನಿರ್ಮಿತವಾಗಿದ್ದ ಆ ಮಾಯೆಯನ್ನು ದಿವ್ಯಾಸ್ತ್ರಗಳಿಂದ ಧ್ವಂಸಮಾಡಿದನು. ತಾನು ಕಲ್ಪಿಸಿದ್ದ ಮಾಯೆಯು ನಾಶವಾದನಂತರ ಸಹನೆಮೀರಿದ ಘಟೋತ್ಕಚನು ಘೋರವಾದ ಬಾಣಗಳನ್ನು ಸೂತಪುತ್ರನ ಮೇಲೆ ಪ್ರಯೋಗಿಸಿದನು. ಅವು ಕರ್ಣನ ಶರೀರದಲ್ಲಿ ನಾಟಿಕೊಂಡುವು. ಕರ್ಣನನ್ನು ಭೇದಿಸಿ ರಕ್ತಸಿಕ್ತವಾದ ಆ ಬಾಣಗಳು ಕೋಪಗೊಂಡ ಸರ್ಪಗಳಂತೆ ಭೂಮಿಯನ್ನು ಪ್ರವೇಶಿಸಿದುವು. ಕರ್ಣನ ದಿವ್ಯಾಸ್ತ್ರಗಳನ್ನೂ ರಾಕ್ಷಸನು ಮಾಯಾಬಲದಿಂದ ನಾಶಗೊಳಿಸಿದನು. ಪ್ರತಾಪವಂತನಾದ, ಲಘುಹಸ್ತನಾದ ಸೂತಪುತ್ರನು ಬಹಳ ಕೋಪಗೊಂಡು ಘಟೋತ್ಕಚನನ್ನು ಅತಿಕ್ರಮಿಸಿ (ಗಣನೆಗೆ ತೆಗೆದುಕೊಳ್ಳದೇ) ಅವನನ್ನು ಹತ್ತು ಬಾಣಗಳಿಂದ ಪ್ರಹರಿಸಿದನು. ಸೂತಪುತ್ರನಿಂದ ಮರ್ಮಸ್ಥಾನಗಳಲ್ಲಿ ಗಾಯಗೊಳಿಸಲ್ಪಟ್ಟ ಘಟೋತ್ಕಚನು ಅತ್ಯಂತವ್ಯಥಿತನಾಗಿ ಸಾವಿರ ಅರೆಕಾಲುಗಳಿಂದ

ಕೂಡಿದ್ದ ದಿವ್ಯವಾದ ಚಕ್ರವನ್ನು ಕೈಗೆತ್ತಿಕೊಂಡನು. ಕ್ರುದ್ಧನಾದ ಘಟೋತ್ಕಚನು ತೀಕ್ಷ್ಣವಾದ ಅಲುಗುಗಳ ಅಗ್ರಭಾಗಗಳಿಂದ ಕೂಡಿದ್ದ, ಬಾಲಸೂರ್ಯನಂತೆ ಪ್ರಕಾಶಮಾನವಾಗಿದ್ದ, ಮಣಿಗಳಿಂದಲೂ–ರತ್ನಗಳಿಂದಲೂ ಸಮಲಂಕೃತವಾಗಿದ್ದ ಚಕ್ರವನ್ನು ಸೂತಪುತ್ರನನ್ನು ಸಂಹರಿಸುವ ಇಚ್ಛೆಯಿಂದ ಅವನ ಮೇಲೆ ಬೀಸಿದನು.

ಅಭಾಗ್ಯನ ಮನೋರಥಗಳು ವ್ಯರ್ಥವಾಗಿಹೋಗುವಂತೆ–ರಾಕ್ಷಸ ಪ್ರಮುಕ್ತವಾದ ಆ ಭಯಂಕರಚಕ್ರವು ಕರ್ಣನ ಬಾಣಗಳಿಂದ ಬಹಳ ವೇಗವಾಗಿ ಪ್ರಹರಿಸಲ್ಪಟ್ಟು ಕೆಳಕ್ಕೆ ಬಿದ್ದುಹೋಯಿತು. ತನ್ನ ಚಕ್ರವು ಭೂಮಿಯಲ್ಲಿ ಬಿದ್ದುದನ್ನು ಕಂಡು ಕ್ರುದ್ಧನಾದ ಘಟೋತ್ಕಚನು–ಸೂರ್ಯ ನನ್ನು ರಾಹುವು ಮುಚ್ಚುವಂತೆ–ಕರ್ಣನನ್ನು ಅನೇಕ ಬಾಣಗಳಿಂದ ಮುಚ್ಚಿದನು. ರುದ್ರ, ಇಂದ್ರ ಮತ್ತು ಉಪೇಂದ್ರರಿಗೆ ಸಮಾನಪರಾಕ್ರಮವುಳ್ಳವನಾದ ಕರ್ಣನು ಸ್ವಲ್ಪವಾದರೂ ಗಾಬರಿಗೊಳ್ಳದೇ ಘಟೋತ್ಕಚನ ರಥವನ್ನು ಬಹಳ ಬೇಗ ಬಾಣಗಳಿಂದ ಮುಚ್ಚಿದನು. ಕ್ರುದ್ಧನಾದ ಘಟೋತ್ಕಚನು, ಸುವರ್ಣ ಮಯವಾದ ಆಭರಣಗಳಿಂದ ಸಮಲಂಕೃತವಾಗಿದ್ದ ಗದೆಯನ್ನೆತ್ತಿಕೊಂಡು ಗರ-ಗರನೆ ತಿರುಗಿಸಿ ಕರ್ಣನ ಕಡೆಗೆ ರಭಸದಿಂದ ಎಸೆದನು. ಆ ಗದೆಯನ್ನೂ ಸಹ ಕರ್ಣನು ಬಾಣಗಳಿಂದ ಪ್ರಹರಿಸಿ ಕೆಳಕ್ಕೆ ಕೆಡುಹಿದನು. ಅನಂತರ ಮಹಾಕಾಯನಾದ ಘಟೋತ್ಕಚನು ಅಂತರಿಕ್ಷಕ್ಕೆ ಹಾರಿ ಪ್ರಳಯಕಾಲದ ಮೇಘದೋಪಾದಿಯಲ್ಲಿ ಗರ್ಜನೆಮಾಡುತ್ತಾ ಆಕಾಶದ ಕಡೆಯಿಂದ ವೃಕ್ಷಗಳ ವೃಷ್ಟಿಯನ್ನೇ ಸುರಿಸಿದನು. ಅನಂತರ ಮಾಯಾವಿಯಾದ, ಭೀಮಸೇನನ ಮಗನಾದ ಘಟೋತ್ಕಚನನ್ನು ಕರ್ಣನು–ಸೂರ್ಯನು ಕಿರಣಗಳಿಂದ ಮೇಘವನ್ನು ಭೇದಿಸುವಂತೆ–ಬಾಣಗಳಿಂದ ಪ್ರಹರಿಸಿದನು. ಬಳಿಕ ಕರ್ಣನು ರಾಕ್ಷಸನ ಕುದುರೆಗಳನ್ನು ಸಂಹರಿಸಿ, ರಥವನ್ನು ಬಾಣಗಳಿಂದ ನೂರಾರು ಚೂರುಗಳನ್ನಾಗಿ ಕತ್ತರಿಸಿ–ಮಳೆಗರೆಯುವ ಮೇಘದೋಪಾದಿಯಲ್ಲಿ ಬಾಣ ಗಳ ಮಳೆಗರೆಯಲು ಪ್ರಾರಂಭಿಸಿದನು. ಘಟೋತ್ಕಚನ ಶರೀರದಲ್ಲಿ ಬಾಣ ಗಳಿಂದ ಭಿನ್ನವಾಗದಿದ್ದ ಸ್ಥಳದ ಅಂತರವು ಎರಡು ಅಂಗುಲಗಳಷ್ಟು ಪ್ರದೇಶವೂ ಇರಲಿಲ್ಲ. ಘಟೋತ್ಕಚನ ಶರೀರಾದ್ಯಂತವಾಗಿ ಬಾಣಗಳು ನಾಟಿ ದ್ದುವು. ಸ್ವಲ್ಪ ಹೊತ್ತಿನಲ್ಲಿಯೇ ಅವನು ಮುಳ್ಳುಗಳಿಂದ ಕೂಡಿದ ಮುಳ್ಳು

ಹಂದಿಯಂತೆಯೇ ಕಂಡನು. ಸಮರಾಂಗಣದಲ್ಲಿ ಕರ್ಣನ ಬಾಣಗಳ ಸಮೂಹದಿಂದ ಆಚ್ಛಾದಿತನಾಗಿದ್ದ ಘಟೋತ್ಕಚನನ್ನಾಗಲೀ, ಅವನ ಕುದುರೆಗಳನ್ನಾಗಲೀ, ರಥವನ್ನಾಗಲೀ, ಧ್ವಜವನ್ನಾಗಲೀ ನಾವು ಕಾಣಲಿಲ್ಲ. ಕರ್ಣನು ಪ್ರಯೋಗಿಸಿದ್ದ ಆ ದಿವ್ಯಾಸ್ತ್ರವನ್ನು ರಾಕ್ಷಸನು ದಿವ್ಯಾಸ್ತ್ರದಿಂದಲೇ ಉಪಶಮನಗೊಳಿಸಿದನು. ಮಾಯಾವಿಯಾದ ರಾಕ್ಷಸನು ಕರ್ಣನನ್ನು ಮಾಯಾಯುದ್ಧದಿಂದಲೇ ಎದುರಿಸಿದನು. ಆ ಸಮಯದಲ್ಲಿ ರಾಕ್ಷಸನು ಕರ್ಣನೊಡನೆ ಮಾಯೆಯಿಂದಲೂ, ವೇಗದಿಂದಲೂ ಯುದ್ಧಮಾಡುತ್ತಿದ್ದನು. ಇದ್ದಕ್ಕಿದ್ದಂತೆಯೇ ಆಕಾಶದಿಂದ ಬಾಣಗಳ ಸಮೂಹಗಳು ಕರ್ಣನ ಮೇಲೆ ಬೀಳತೊಡಗಿದುವು. ಮಹಾಕಾಯನಾದ, ಮಹಾಮಾಯಾವಿಯಾದ ಘಟೋತ್ಕಚನು ಮಾಯೆಯಿಂದ ಎಲ್ಲರನ್ನೂ ಮೋಹಗೊಳಿಸುತ್ತಿರುವನೋ– ಎಂಬಂತೆ ರಣಾಂಗಣದಲ್ಲಿ ಸಂಚರಿಸುತ್ತಿದ್ದನು. ಘಟೋತ್ಕಚನು ವಿಕಾರವಾದ ರೂಪಗಳನ್ನೂ ಅಮಂಗಲಸೂಚಕವಾದ ಮುಖಗಳನ್ನೂ ಧರಿಸಿ ಮಾಯೆಯ ಆಶ್ರಯದಿಂದ ಸೂತಪುತ್ರನ ದಿವ್ಯಾಸ್ತ್ರಗಳೆಲ್ಲವನ್ನೂ ನುಂಗಿ ಹಾಕಿದನು. ಮಹಾಕಾಯನಾದ ಘಟೋತ್ಕಚನು ಪುನಃ ಕರ್ಣನ ಬಾಣಗಳಿಂದ ಶರೀರದ ನೂರಾರು ಕಡೆಗಳಲ್ಲಿ ಛಿನ್ನ-ಭಿನ್ನವಾಗಿ ಶಕ್ತಿಗುಂದಿ ನಿರುತ್ಸಾಹನಾಗಿ ಆಕಾಶದಿಂದ ಕೆಳಕ್ಕೆ ಬೀಳುತ್ತಿದ್ದುದು ಕಾಣಿಸಿತು (ಅದೂ ಒಂದು ರಾಕ್ಷಸನ ಮಾಯೆಯೇ ಆಗಿದ್ದಿತು). ಘಟೋತ್ಕಚನು ಹತನಾದನೆಂದೇ ಭಾವಿಸಿ ಕುರುಪುಂಗವರೆಲ್ಲರೂ ಜಯಘೋಷಮಾಡಿದರು. ಆದರೆ ಮರುಕ್ಷಣದಲ್ಲಿಯೇ ಘಟೋತ್ಕಚನು ನೂತನ ಶರೀರಗಳಿಂದ ಎಲ್ಲ ದಿಕ್ಕುಗಳಲ್ಲಿಯೂ ಕಾಣಿಸಿಕೊಂಡನು.

ಪುನಃ ಘಟೋತ್ಕಚನು ಮೈನಾಕಪರ್ವತದಂತೆ ಮಹಾಕಾಯನಾಗಿಯೂ–ಮಹಾಬಾಹುವಾಗಿಯೂ ಕಾಣಿಸಿಕೊಂಡನು. ಆ ಸಮಯದಲ್ಲಿ ಅವನಿಗೆ ನೂರು ತಲೆಗಳೂ-ನೂರು ಹೊಟ್ಟೆಗಳೂ ಇದ್ದುವು. ಅನಂತರ ಆ ರಾಕ್ಷಸನು ಅಂಗುಷ್ಠಮಾತ್ರಗಾತ್ರನಾಗಿ ಸಮುದ್ರದ ಅಲೆಗಳೋಪಾದಿಯಲ್ಲಿ ಕೆಲವೊಮ್ಮೆ ಮೇಲಕ್ಕೆ ಹೋಗುತ್ತಲೂ–ಕೆಲವೊಮ್ಮೆ ವಕ್ರವಾಗಿ ಸಂಚರಿಸುತ್ತಲೂ ಇದ್ದನು. ಆ ರಾಕ್ಷಸನು ಒಮ್ಮೆ ಭೂಮಿಯನ್ನು ಸೀಳಿಕೊಂಡು ಹೋಗುತ್ತಿದ್ದನು. ಮತ್ತೊಮ್ಮೆ ನೀರಿನಲ್ಲಿ ಮುಳುಗುತ್ತಿದ್ದನು. ಇನ್ನೊಮ್ಮೆ ಎಲ್ಲಿಯೋ ಮುಳುಗಿ ಎಲ್ಲಿಯೋ ಏಳುತ್ತಿದ್ದನು. ಪುನಃ ಹಿಂದಿರುಗಿಬಂದು

ಸುವರ್ಣಮಯವಾದ ರಥದಲ್ಲಿ ಕುಳಿತುಕೊಳ್ಳುತ್ತಿದ್ದನು. ಕುಂಡಲಗಳನ್ನು ಧರಿಸಿದ್ದ ಮುಖವುಳ್ಳ, ಕವಚಧಾರಿಯಾಗಿದ್ದ ಘಟೋತ್ಕಚನು ತನ್ನ ಮಾಯೆಯಿಂದ ಭೂಮ್ಯಾಕಾಶಗಳಲ್ಲಿಯೂ–ದಿಕ್ಕುಗಳಲ್ಲಿಯೂ ಸಂಚರಿಸಿ, ಅನಂತರ ಕರ್ಣನ ರಥದ ಸಮೀಪಕ್ಕೆ ಹೋಗಿ ಅಲ್ಲಿಯೂ ಕಾಣಿಸಿಕೊಳ್ಳುತ್ತಿದ್ದನು. ಆ ಸಮಯದಲ್ಲಿ ರಾಕ್ಷಸನು ಸ್ವಲ್ಪವೂ ಗಾಬರಿಗೊಳ್ಳದೇ ಕರ್ಣನೊಡನೆ ಹೇಳಿದನು:

"ಸೂತಪುತ್ರ! ನಿಲ್ಲು! ನೀನು ಜೀವಸಹಿತವಾಗಿ ನನ್ನಿಂದ ತಪ್ಪಿಸಿಕೊಂಡು ಹೋಗಲಾರೆ. ನಿನಗಿರುವ ಯುದ್ಧಶ್ರದ್ಧೆಯನ್ನಿಂದು ನಾನು ಈ ರಣಾಂಗಣದಲ್ಲಿ ಹೋಗಲಾಡಿಸುತ್ತೇನೆ."

ಮಹಾರಾಜ! ರಾಕ್ಷಸನು ಭಯಂಕರಪರಾಕ್ರಮನಾಗಿದ್ದ, ಕೋಪದಿಂದ ಕೆಂಗಣ್ಣನಾಗಿದ್ದ ಕರ್ಣನಿಗೆ ಹೀಗೆ ಹೇಳಿ, ಪುನಃ ಅಂತರಿಕ್ಷಕ್ಕೆ ಹಾರಿ ಬಹಳಹೊತ್ತಿನವರೆಗೆ ಅಟ್ಟಹಾಸದಿಂದ ನಗುತ್ತಲೇ ಇದ್ದನು. ಸಿಂಹವು ಆನೆಯನ್ನು ಪ್ರಹರಿಸುವಂತೆ–ರಾಕ್ಷಸನು ಕರ್ಣನನ್ನು ಪ್ರಹರಿಸಲು ಉಪಕ್ರಮಿಸಿದನು. ಮೇಘವು ಜಲಧಾರೆಗಳಿಂದ ಪರ್ವತವನ್ನು ಮುಚ್ಚುವಂತೆ–ರಥದ ಅಚ್ಚುಮರದಷ್ಟು ಗಾತ್ರದ ಬಾಣಗಳಿಂದ ರಥಶ್ರೇಷ್ಠನಾದ ಕರ್ಣನನ್ನು ರಾಕ್ಷಸನು ಮುಚ್ಚಿಬಿಟ್ಟನು. ಘಟೋತ್ಕಚನು ಸುರಿಸುತ್ತಿದ್ದ ಆ ಶರವೃಷ್ಟಿಯನ್ನು ಕರ್ಣನು ಬಹಳ ದೂರದಿಂದಲೇ ವಿನಾಶಗೊಳಿಸಿದನು. ಕರ್ಣನು ತನ್ನ ಮಾಯೆಯನ್ನು ಧ್ವಂಸಮಾಡಿದುದನ್ನು ಕಂಡು ರಾಕ್ಷಸನು ಪುನಃ ಅಂತರ್ಹಿತನಾಗಿ ಇನ್ನೂ ಅನೇಕ ಮಾಯೆಗಳನ್ನು ಸೃಷ್ಟಿಸಿದನು. ಘಟೋತ್ಕಚನು ವೃಕ್ಷಗಳ ಸಾಲುಗಳಿಂದಲೂ ಮತ್ತು ಶಿಖರಗಳಿಂದಲೂ ಕೂಡಿದ ದೊಡ್ಡ ಪರ್ವತವೇ ಆಗಿಬಿಟ್ಟನು. ಆ ಪರ್ವತದ ಮೇಲಿನಿಂದ ಶೂಲ, ಪ್ರಾಸ, ಕತ್ತಿ, ಮುಸಲ–ಇವೇ ಮೊದಲಾದ ಆಯುಧಗಳು ನೀರಿನ ರೂಪದಲ್ಲಿ ಹರಿದುಬರುತ್ತಿದ್ದುವು. ಘಟೋತ್ಕಚನು ಕಾಡಿಗೆಯ ರಾಶಿಯಂತೆ ದೊಡ್ಡ ಪರ್ವತದ ರೂಪವನ್ನು ಹೊಂದಿ ಆ ಪರ್ವತದ ಮೇಲಿನಿಂದ ಉಗ್ರವಾದ ಆಯುಧಗಳ ಪ್ರವಾಹವನ್ನು ತನ್ನ ಮೇಲೆ ಬೀಳುವಂತೆ ಮಾಡುತ್ತಿದ್ದರೂ ಸ್ವಲ್ಪವಾದರೂ ಭ್ರಾಂತನಾಗದ ಕರ್ಣನು ನಗು-ನಗುತ್ತಲೇ ಮಹಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದನು. ಕರ್ಣನು ಬಿಟ್ಟ ದಿವ್ಯಾಸ್ತ್ರಗಳಿಂದ ಪರ್ವತವು ಬಹಳ ದೂರದವರೆಗೆ ಎಸೆಯಲ್ಪಟ್ಟು ವಿನಾಶಹೊಂದಿತು. ಪುನಃ

ಉಗ್ರನಾದ ರಾಕ್ಷಸನು ಕಾಮನಬಿಲ್ಲಿನಿಂದ ಕೂಡಿದ ಕಾಲಮೇಘವಾಗಿ ಕಲ್ಲಿನ ಮಳೆಯಿಂದ ಸೂತಪುತ್ರನನ್ನು ಮುಚ್ಚಿದನು.

ಅನಂತರ ಅಸ್ತ್ರವಿದರಲ್ಲಿ ಶ್ರೇಷ್ಠನಾದ ವೈಕರ್ತನಕರ್ಣನು ವಾಯವ್ಯಾಸ್ತ್ರವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಆಕರ್ಣವಾಗಿ ಸೆಳೆದು ಪ್ರಯೋಗಿಸಿ ಕಾಲಮೇಘವನ್ನು ಧ್ವಂಸಮಾಡಿದನು. ಕರ್ಣನು ಬಾಣಗಳ ಸಮೂಹಗಳಿಂದ ಎಲ್ಲ ದಿಕ್ಕುಗಳನ್ನೂ ಮುಚ್ಚಿ ಘಟೋತ್ಕಚನಿಂದ ಬಿಡಲ್ಪಟ್ಟ ಅಸ್ತ್ರಗಳೆಲ್ಲವನ್ನೂ ವಿನಾಶಗೊಳಿಸಿದನು. ಮಹಾಬಲನಾದ ಭೈಮಸೇನಿಯು ಗಹ-ಗಹಿಸಿ ನಗುತ್ತಾ ಮಹಾರಥನಾದ ಕರ್ಣನಿಗೆ ಎದುರಾಗಿ ನಿಂತು ಪುನಃ ಮಹಾಮಾಯೆಯನ್ನು ಪ್ರದರ್ಶಿಸಿದನು. ರಥಿಗಳಲ್ಲಿ ಶ್ರೇಷ್ಠನಾದ, ಸ್ವಲ್ಪವಾದರೂ ಗಾಬರಿಗೊಳ್ಳದಿದ್ದ ಘಟೋತ್ಕಚನು ರಥದಲ್ಲಿ ಕುಳಿತು ಪುನಃ ತನ್ನ ಸಮೀಪಕ್ಕೆ ಬಂದುದನ್ನು ಕರ್ಣನು ನೋಡಿದನು. ಸಿಂಹ-ಶಾರ್ದೂಲಸದೃಶರಾಗಿದ್ದ, ಮದಿಸಿದ ಆನೆಯ ಪರಾಕ್ರಮವನ್ನು ಹೊಂದಿದ್ದ, ಬಹುಸಂಖ್ಯಾತರಾದ ರಾಕ್ಷಸರಿಂದ ಘಟೋತ್ಕಚನು ಪರಿವೃತನಾಗಿದ್ದನು. ಆ ರಾಕ್ಷಸರಲ್ಲಿ ಕೆಲವರು ಆನೆಗಳ ಮೇಲೆ ಕುಳಿತಿದ್ದರು ; ಕೆಲವರು ಕುದುರೆಗಳ ಮೇಲೆ ಕುಳಿತಿದ್ದರು ; ನಾನಾವಿಧವಾದ ಭಯಂಕರವಾದ ಶಸ್ತ್ರಾಸ್ತ್ರಗಳನ್ನು ಹಿಡಿದಿದ್ದರು ; ನಾನಾವಿಧವಾದ ಕವಚಗಳನ್ನೂ ಮತ್ತೂ ಆಭರಣಗಳನ್ನೂ ತೊಟ್ಟಿದ್ದರು. ಮರುತ್ತುಗಳಿಂದ ಪರಿವೃತನಾದ ಇಂದ್ರನಂತೆ–ರಾಕ್ಷಸರಿಂದ ಪರಿವೃತನಾಗದ ಘಟೋತ್ಕಚನು ಬಂದುದನ್ನು ನೋಡಿ ಮಹಾಧನುಷ್ಮಂತನಾದ ಕರ್ಣನು ರಾಕ್ಷಸನೊಡನೆ ಯುದ್ಧಮಾಡಲು ತೊಡಗಿದನು. ಘಟೋತ್ಕಚನು ಕರ್ಣನನ್ನು ಐದು ಬಾಣಗಳಿಂದ ಪ್ರಹರಿಸಿ, ಕೌರವರ ಕಡೆಯ ಎಲ್ಲ ರಾಜರನ್ನೂ ಭಯಪಡಿಸುತ್ತಾ ಭಯಂಕರವಾಗಿ ಗರ್ಜನೆಮಾಡಿದನು. ಪುನಃ ಘಟೋತ್ಕಚನು ಅಂಜಲಿಕವೆಂಬ ಬಾಣವಿಶೇಷದಿಂದ ಕರ್ಣನ ಕೈಯಲ್ಲಿದ್ದ ದೊಡ್ಡ ಧನುಸ್ಸನ್ನು ದೊಡ್ಡಬಾಣಗಳ ಸಮೂಹದೊಡನೆ ಕತ್ತರಿಸಿದನು. ಅನಂತರ ಕರ್ಣನು ದೃಢವಾಗಿಯೂ, ಭಾರವನ್ನು ಸಹಿಸುವುದಾಗಿಯೂ, ಇಂದ್ರನ ಧನುಸ್ಸಿನಂತೆ ಉದ್ದವಾಗಿಯೂ ಇದ್ದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ಬಾಣಗಳಿಂದ ಸಹಿತವಾದ ಶಿಂಜಿನಿಯನ್ನು ಸುದೀರ್ಘವಾಗಿ ಸೆಳೆದನು. ಚಿನ್ನದ ಮೂಲಭಾಗಗಳನ್ನು ಹೊಂದಿದ್ದ, ಶತ್ರುಗಳನ್ನು ಸಂಹರಿ

ಸುವ ಸಾಮರ್ಥ್ಯವನ್ನು ಹೊಂದಿದ್ದ ಬಾಣಗಳನ್ನು–ಆಕಾಶಗಾಮಿಗಳಾದ ರಾಕ್ಷಸರನ್ನು ಅನುಲಕ್ಷಿಸಿ–ಪ್ರಯೋಗಿಸಿದನು. ಕರ್ಣನ ಬಾಣಗಳಿಂದ ಪೀಡಿಸಲ್ಪಟ್ಟ ಉಬ್ಬಿದ ಎದೆಯುಳ್ಳ ರಾಕ್ಷಸರ ಗುಂಪು–ಸಿಂಹದಿಂದ ಪೀಡಿಸಲ್ಪಟ್ಟ ಅರಣ್ಯದ ಆನೆಗಳ ಹಿಂಡಿನೋಪಾದಿಯಲ್ಲಿ–ಬಹಳವಾಗಿ ವ್ಯಾಕುಲಗೊಂಡಿತು. ಭಗವಾನ್ ಯಜ್ಞೇಶ್ವರನು ಪ್ರಳಯಕಾಲದಲ್ಲಿ ಪ್ರಾಣಿಗಳನ್ನು ದಹಿಸುವಂತೆ–ಕರ್ಣನು ಅಶ್ವ-ಸೂತ-ಗಜಗಳಿಂದ ಸಹಿತರಾದ ರಾಕ್ಷಸರನ್ನು ಬಾಣಗಳಿಂದ ಮರ್ದಿಸಿ ದಹಿಸಿದನು. ಹಿಂದೆ ದೇವದೇವನಾದ ಮಹೇಶ್ವರನು ತ್ರಿಪುರಾಸುರನನ್ನು ಆಕಾಶದಲ್ಲಿ ಸಂಹಾರಮಾಡಿ ಪ್ರಕಾಶಿಸಿದಂತೆ–ಸೂತನ ಮಗನಾದ ಕರ್ಣನು ರಾಕ್ಷಸರ ಸೈನ್ಯವನ್ನು ಸಂಪೂರ್ಣವಾಗಿ ಸಂಹರಿಸಿ ವಿಜಯದ ಕಾಂತಿಯಿಂದ ಬೆಳಗಿದನು. ಆ ಸಮಯದಲ್ಲಿ ಪಾಂಡವರ ಪಕ್ಷದಲ್ಲಿ ಸಾವಿರಾರು ರಾಜರಲ್ಲಿ ಒಬ್ಬನಾದರೂ ಕರ್ಣನನ್ನು ದಿಟ್ಟಿಸಿ ನೋಡಲು ಶಕ್ತನಾಗಿರಲಿಲ್ಲ. ಕ್ರುದ್ಧನಾದ ಯಮರಾಜನೋಪಾದಿಯಲ್ಲಿದ್ದ, ರಾಕ್ಷಸೇಂದ್ರನಾದ, ಮಹಾಬಲನಾದ, ಭಯಂಕರವೀರ್ಯಪರಾಕ್ರಮಗಳಿಂದ ಸಂಪನ್ನನಾಗಿದ್ದ ಘಟೋತ್ಕಚನೊಬ್ಬನ ಹೊರತಾಗಿ ಬೇರೆ ಯಾರೂ ಕರ್ಣನನ್ನು ಆ ಸಮಯದಲ್ಲಿ ಎದುರಿಸಲು ಸಮರ್ಥರಾಗಿರಲಿಲ್ಲ. ಬೆಂಕಿಯಿಂದ ಕೂಡಿದ ಎಣ್ಣೆಯ ತೊಟ್ಟುಗಳು ದೊಡ್ಡ-ದೊಡ್ಡ ಪಂಜುಗಳಿಂದ ಕೆಳಗುದುರುವಂತೆ–ಕ್ರುದ್ಧನಾದ ಘಟೋತ್ಕಚನ ಎರಡು ಕಣ್ಣುಗಳಿಂದಲೂ ಬೆಂಕಿಯ ಕಿಡಿಗಳು ಉದುರುತ್ತಿದ್ದುವು. ಕ್ರುದ್ಧನಾದ ಘಟೋತ್ಕಚನು ಕೈಯಿಂದ ಕೈಯನ್ನು ಮಸೆಯುತ್ತಾ, ಹಲ್ಲುಗಳಿಂದ ಅವುಡುಗಚ್ಚುತ್ತಾ, ಮಾಯೆಯಿಂದ ನಿರ್ಮಿತವಾಗಿದ್ದ, ಗಜಸದೃಶವಾದ ಮತ್ತು ಪಿಶಾಚಿಯ ಮುಖದಿಂದ ಕೂಡಿದ್ದ ಹೇಸರಗತ್ತೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತು, ಸೂತಪುತ್ರನ ಸಮೀಪಕ್ಕೆ ರಥವನ್ನೊಯ್ಯುವಂತೆ ಸೂತನೊಡನೆ ಹೇಳಿದನು. ರಥಿಗಳಲ್ಲಿ ಶ್ರೇಷ್ಠನಾದ ಘಟೋತ್ಕಚನು ಘೋರರೂಪವಾಗಿದ್ದ ಆ ರಥದಲ್ಲಿ ಕುಳಿತು ಸೂತಪುತ್ರನೊಡನೆ ಪುನಃ *ದ್ವೈರಥಯುದ್ಧವನ್ನು ಪ್ರಾರಂಭಿಸಿದನು. ಕ್ರುದ್ಧನಾದ ರಾಕ್ಷಸನು ಸೂತಪುತ್ರನಾದ ಕರ್ಣನ ಮೇಲೆ ಎಂಟು ಚಕ್ರಗಳಿಂದ ಕೂಡಿದ್ದ, ಮಹಾಘೋರವಾಗಿದ್ದ, ರುದ್ರನಿರ್ಮಿತವಾಗಿದ್ದ ವಜ್ರಾ

---

* ದ್ವೈರಥಯುದ್ಧ : ಎರಡು ರಥಿಗಳಿಗೆ (ಇಬ್ಬರು ರಥಿಕರಿಗೆ ಮಾತ್ರ) ನಡೆಯುವ ಯುದ್ಧ.

ಯುಧವನ್ನು ಪ್ರಯೋಗಿಸಿದನು. ಆ ಅಶನಿಯು ಎರಡು ಯೋಜನಗಳಷ್ಟು ಉದ್ದವಾಗಿಯೂ–ಒಂದು ಯೋಜನದಷ್ಟು ವಿಸ್ತಾರವಾಗಿಯೂ ಇದ್ದಿತು. ಲೋಹಮಯವಾಗಿದ್ದ ಆ ಅಶನಿಯ ಸುತ್ತಲೂ ಕೇಸರಗಳಿಂದ ಯುಕ್ತವಾದ ಕದಂಬಕುಸುಮಗಳಂತೆ–ಶೂಲಗಳಿದ್ದುವು. ಮಹಾಘೋರವಾದ ಆ ಅಶನಿಯು ತನ್ನ ಕಡೆಗೆ ಬರುತ್ತಿರುವುದನ್ನು ಕಂಡು ಕರ್ಣನು ಧನುಸ್ಸನ್ನು ಕೆಳಗಿಟ್ಟು ರಥದಿಂದ ಹಾರಿ ಆ ಅಶನಿಯನ್ನು ಕೈಯಲ್ಲಿ ಹಿಡಿದನು. ಕರ್ಣನು ಅದೇ ಅಶನಿಯಿಂದಲೇ ಘಟೋತ್ಕಚನನ್ನು ಪ್ರಹರಿಸಿದನು. ಆ ವೇಳೆಗೆ ಸರಿ



ಯಾಗಿ ರಾಕ್ಷಸನೂ ರಥದಿಂದ ಕೆಳಕ್ಕೆ ಧುಮುಕಿದ್ದನು. ಮಹಾಪ್ರಭೆಯಿಂದ ಕೂಡಿದ್ದ ಆ ಅಶನಿಯು ಅಶ್ವ-ಸೂತ-ಧ್ವಜಸಹಿತವಾಗಿ ಘಟೋತ್ಕಚನ ರಥ ವನ್ನು ಭಸ್ಮಮಾಡಿ ಅನಂತರ ಭೂಮಿಯನ್ನು ಸೀಳಿಕೊಂಡು ಪ್ರವೇಶಿಸಿತು.

ಅದನ್ನು ನೋಡಿ ದೇವತೆಗಳೂ ಸಹ ವಿಸ್ಮಯಗೊಂಡರು. ಮಹಾದೇವನಿಂದ ನಿರ್ಮಿತವಾಗಿದ್ದ ಆ ದೊಡ್ಡ ಅಶನಿಯನ್ನೂ ಸಹ ಅನಾಯಾಸದಿಂದ ಕೈಯಲ್ಲಿ ಹಿಡಿದುದಕ್ಕಾಗಿ ಎಲ್ಲ ಪ್ರಾಣಿಗಳೂ ಕರ್ಣನನ್ನು ಪ್ರಶಂಸಿಸಿದುವು. ಮಹಾ ರಾಜ! ಕರ್ಣನು ಹೀಗೆ ಮಾಡಿ (ಘಟೋತ್ಕಚನು ಪ್ರಹರಿಸಿದ್ದ ಅಶನಿ ಯಿಂದಲೇ ಅವನನ್ನು ಪುನಃ ಪ್ರಹರಿಸಿ) ಪುನಃ ತನ್ನ ರಥಕ್ಕೆ ಹತ್ತಿದನು. ಅನಂತರ ಸೂತಪುತ್ರನು ಘಟೋತ್ಕಚನ ಮೇಲೆ ಪುನಃ ಬಾಣಗಳನ್ನು ಪ್ರಯೋಗಿಸಿದನು. ಭಯಂಕರವಾಗಿ ಕಾಣುತ್ತಿದ್ದ ಆ ಸಂಗ್ರಾಮದಲ್ಲಿ ಆಗ ಕರ್ಣನು ಮಾಡಿದ ಮಹಾಸಂಹಾರಕಾರ್ಯವನ್ನು ಪ್ರಪಂಚದಲ್ಲಿರುವ ಪ್ರಾಣಿಗಳಲ್ಲಿ ಯಾವುದೇ ಪ್ರಾಣಿಯಿಂದಲೂ ಮಾಡಲು ಅಸಾಧ್ಯವಾಗಿತ್ತು. ಪರ್ವತವು ಮಳೆಯ ಧಾರೆಗಳಿಂದ ಮುಚ್ಚಿಹೋಗುವಂತೆ–ಕರ್ಣನ ನಾರಾಚ ಗಳಿಂದ ಮುಚ್ಚಲ್ಪಟ್ಟು ಪ್ರಹೃತನಾದ ಘಟೋತ್ಕಚನು ಆಕಾಶದಲ್ಲಿನ ಗಂಧರ್ವನಗರದಂತೆ ಪುನಃ ಅದೃಶ್ಯನಾದನು. ಈ ರೀತಿಯಾಗಿ ಮಹಾ ಕಾಯನಾದ, ರಿಪುಸೂದನನಾದ ಘಟೋತ್ಕಚನು ಮಾಯೆಯಿಂದಲೂ ಮತ್ತು ಹಸ್ತಲಾಘವದಿಂದಲೂ ಕರ್ಣನು ಬಿಟ್ಟ ದಿವ್ಯಾಸ್ತ್ರಗಳೆಲ್ಲವನ್ನೂ ಧ್ವಂಸಮಾಡಿದನು. ಮಾಯೆಯ ಆಶ್ರಯದಿಂದ ರಾಕ್ಷಸನು ದಿವ್ಯಾಸ್ತ್ರಗಳೆಲ್ಲ ವನ್ನೂ ನಷ್ಟಗೊಳಿಸಲಾಗಿ, ಕರ್ಣನು ಸ್ವಲ್ಪವೂ ಭ್ರಾಂತನಾಗದೇ ರಾಕ್ಷಸ ನೊಡನೆ ಯುದ್ಧಮಾಡುತ್ತಲೇ ಇದ್ದನು. ಅದರಿಂದ ಪರಮಕ್ರುದ್ಧನಾದ ಮಹಾಬಲನಾದ ಭೈಮಸೇನಿಯು ಮಹಾರಥರನ್ನೂ ಭಯಪಡಿಸುತ್ತಾ ತನ್ನ ರೂಪವನ್ನು ಅನೇಕರೂಪಗಳನ್ನಾಗಿ ಪರಿವರ್ತಿಸಿಕೊಂಡನು. ಅನಂತರ ಎಲ್ಲ ದಿಕ್ಕುಗಳಿಂದಲೂ ಸಿಂಹಗಳೂ, ವ್ಯಾಘ್ರಗಳೂ, ಕಿರುಬಗಳೂ, ಅಗ್ನಿರೂಪ ವಾದ ನಾಲಿಗೆಗಳನ್ನು ಹೊಂದಿದ್ದ ಸರ್ಪಗಳೂ, ಲೋಹಮಯವಾದ ಕೊಕ್ಕು ಗಳನ್ನು ಹೊಂದಿದ್ದ ಪಕ್ಷಿಗಳೂ–ಏಕಕಾಲದಲ್ಲಿ ಕರ್ಣನ ಮೇಲೆ ಬಿದ್ದುವು. ಸರ್ಪಗಳ ರಾಜನಂತೆ ನೋಡಲು ದುಃಸಾಧ್ಯನಾಗಿದ್ದ ಘಟೋತ್ಕಚನು ಕರ್ಣನ ಬಾಣಗಳಿಂದ ಮುಚ್ಚಲ್ಪಟ್ಟವನಾಗಿ ಆ ಬಾಣಗಳ ಮಧ್ಯದಲ್ಲಿಯೇ ಅಂತರ್ಹಿತನಾದನು. ಆ ಸಮಯದಲ್ಲಿ ಅನೇಕ ರಾಕ್ಷಸರು, ಪಿಶಾಚರು, ಯಾತುಧಾನರು, ಹಲವು ನಾಯಿಗಳು, ವಿಕಾರವಾದ ಮುಖಗಳನ್ನು ಹೊಂದಿದ್ದ ತೋಳಗಳು–ಇವೇ ಮುಂತಾದ ಕ್ರೂರಪ್ರಾಣಿಗಳು ಕರ್ಣನನ್ನು

ನಾಶಮಾಡುವ ಇಚ್ಛೆಯಿಂದ ಎಲ್ಲ ಕಡೆಗಳಿಂದಲೂ ಆಕ್ರಮಿಸಿದುವು. ಆ ಘೋರಪ್ರಾಣಿಗಳು ಭಯಂಕರವಾದ ಗರ್ಜನೆಗಳಿಂದ ಕರ್ಣನನ್ನು ಭಯಪಡಿಸಲು ಉಪಕ್ರಮಿಸಿದುವು. ಕರ್ಣನು ರಕ್ತಸಿಕ್ತವಾಗಿದ್ದ, ಘೋರವಾಗಿದ್ದ, ಅನೇಕ ಆಯುಧಗಳಿಂದಲೂ ಮತ್ತು ಬಾಣಗಳಿಂದಲೂ ಬಹುಸಂಖ್ಯಾತರಾಗಿದ್ದ ರಾಕ್ಷಸರಲ್ಲಿ ಪ್ರತಿಯೊಬ್ಬನನ್ನೂ ಪ್ರಹರಿಸಿದನು. ಕರ್ಣನು ರಾಕ್ಷಸನ ಮಾಯೆಯನ್ನು ದಿವ್ಯಾಸ್ತ್ರಗಳಿಂದ ಧ್ವಂಸಮಾಡಿ ಅವನ ಕುದುರೆಗಳನ್ನೂ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಸಂಹರಿಸಿದನು. ರಾಕ್ಷಸನು ನೋಡುತ್ತಿದ್ದಂತೆಯೇ ಆ ಕುದುರೆಗಳು ಭಗ್ನವಾಗಿ, ಕ್ಷತ-ವಿಕ್ಷತವಾದ ಅಂಗಗಳಿಂದಲೂ ಭಿನ್ನವಾದ ಪೃಷ್ಠಭಾಗಗಳಿಂದಲೂ ಕೂಡಿ ಭೂಮಿಯ ಮೇಲೆ ಬಿದ್ದುವು. ಆ ಸಮಯದಲ್ಲಿ ಕುದುರೆಗಳನ್ನು ಕಳೆದುಕೊಂಡ ಘಟೋತ್ಕಚನು ಕರ್ಣನನ್ನು ಕುರಿತು–'ಏಷ ತೇ ವಿದಧೇ ಮೃತ್ಯುಂ'–'ಈಗಲೇ ನಾನು ನಿನಗೆ ಮರಣವನ್ನುಂಟುಮಾಡುತ್ತೇನೆ'–ಎಂಬುದಾಗಿ ಹೇಳಿ ಪುನಃ ಅಂತರ್ಹಿತನಾದನು.

೧೭೫ನೆಯ ಅಧ್ಯಾಯವು ಮುಗಿಯಿತು.

೧೭೬ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಅಲಾಯುಧನು ಯುದ್ಧಸ್ಥಳವನ್ನು ಪ್ರವೇಶಿಸಿದುದು : ಅವನ ಸ್ವರೂಪ ಮತ್ತು ರಥಾದಿಗಳ ವರ್ಣನೆ

ಸಂಜಯನು ಮುಂದುವರಿದು ಹೇಳುತ್ತಾನೆ :

ಮಹಾರಾಜ! ಕರ್ಣನಿಗೂ ಮತ್ತು ಘಟೋತ್ಕಚರಾಕ್ಷಸನಿಗೂ ಈ ರೀತಿಯಲ್ಲಿ ಯುದ್ಧವು ನಡೆಯುತ್ತಿರಲಾಗಿ, ವೀರ್ಯವಂತನಾದ ರಾಕ್ಷಸೇಂದ್ರನಾದ ಅಲಾಯುಧನು ಅಲ್ಲಿಗೆ ಆಗಮಿಸಿದನು. ವಿಕಾರವಾದ ಸ್ವರೂಪವನ್ನು ಹೊಂದಿದ್ದ, ಸಾವಿರಾರು ರಾಕ್ಷಸರಿಂದ ಪರಿವೃತನಾದ ಅಲಾಯುಧನು ದೊಡ್ಡದಾದ ರಾಕ್ಷಸಸೈನ್ಯದೊಡನೆ ದುರ್ಯೋಧನನ ಬಳಿಗೆ ಬಂದನು. ಅಲಾಯುಧನು ಪಾಂಡವರೊಡನೆ ತನಗಿದ್ದ ಹಿಂದಿನ ವೈರವನ್ನು ಸ್ಮರಿಸುತ್ತಾ ನಾನಾರೂಪಗಳನ್ನು ಧರಿಸಿದ್ದ ವೀರರೊಡನೆ ಅಲ್ಲಿಗೆ ಆಗಮಿಸಿದನು. ಬ್ರಾಹ್ಮಣಭಕ್ಷಕನಾದ, ಮಹಾಪರಾಕ್ರಮಿಯಾದ ಬಕನು ಅಲಾಯುಧನ ಜ್ಞಾತಿಯಾಗಿದ್ದನು. ಪಾಂಡವನಿಂದಲೇ ಹತರಾದ ಮಹಾತೇಜಸ್ವಿಗಳಾದ ಕಿರ್ಮೀರ ಮತ್ತು ಹಿಡಿಂಬರೂ ಸಹ ಅಲಾಯುಧನ ಮಿತ್ರರಾಗಿದ್ದರು. ಬಹಳ

ಹಿಂದಿನಿಂದಲೂ ಮನಸ್ಸಿನಲ್ಲಡಗಿದ್ದ ವೈರವನ್ನು ಸ್ಮರಣೆಗೆ ತಂದುಕೊಂಡು ಸೇಡನ್ನು ತೀರಿಸಿಕೊಳ್ಳುವ ಸಲುವಾಗಿ ಅಲಾಯುಧನು ಅಲ್ಲಿಗೆ ಬಂದನು. ರಾಕ್ಷಸರಿಗೆ ಬಹಳ ಪ್ರಿಯವಾದ ರಾತ್ರಿಯುದ್ಧವಾಗುತ್ತಿದೆಯೆಂಬುದನ್ನು ತಿಳಿದುಕೊಂಡು ತನ್ನ ಏಕೈಕಶತ್ರುವಾದ ಭೀಮಸೇನನನ್ನು ಸಂಹರಿಸುವ ಇಚ್ಛೆಯಿಂದ–ಮದಿಸಿದ ಆನೆಯಂತೆ ಮತ್ತು ಕೋಪಗೊಂಡ ಸರ್ಪದಂತೆ–ಕಾಣುತ್ತಿದ್ದ, ಯುದ್ಧಲಾಲಸೆಯಿಂದ ಕೂಡಿದ್ದ ಅಲಾಯುಧನು ದುರ್ಯೋಧನನನ್ನು ಕುರಿತು ಹೇಳಿದನು :

"ಮಹಾರಾಜ! ನನ್ನ ಬಾಂಧವರಾದ ಹಿಡಿಂಬ-ಬಕ-ಕಿರ್ಮೀರರು ಯಾವ ರೀತಿಯಲ್ಲಿ ಭೀಮನಿಂದ ಕೊಲ್ಲಲ್ಪಟ್ಟರೆಂಬುದು ನಿನಗೂ ತಿಳಿದೇ ಇದೆ. ಅಷ್ಟುಮಾತ್ರವಲ್ಲದೇ ನಮ್ಮಂತಹ ರಾಕ್ಷಸೇಂದ್ರರನ್ನೂ ತಿರಸ್ಕರಿಸಿ ಹುಲುಮನುಜನೊಬ್ಬನು ರಾಕ್ಷಸಕನ್ಯೆಯಾಗಿದ್ದ ಹಿಡಿಂಬೆಯ ಕೈಯನ್ನೂ ಹಿಡಿದು ಬಿಟ್ಟನು. ಇದಕ್ಕಿಂತಲೂ ಅವಮಾನಕರವಾದುದು ಮತ್ತೇನಿದೆ? ಇದರ ಸೇಡು ತೀರಿಸಿಕೊಳ್ಳಲು ಹಸ್ತ್ಯಶ್ವರಥಸಹಿತನಾದ ಮತ್ತು ಬಂಧುಗಣ ಸಮೇತನಾದ ಭೀಮಸೇನನನ್ನೂ, ಅಮಾತ್ಯಸಹಿತನಾದ ಘಟೋತ್ಕಚನನ್ನೂ ಸಂಹರಿಸಲು ಬಂದಿದ್ದೇನೆ. ಈಗ ನಾನು ವಾಸುದೇವಪ್ರಮುಖರಾದ ಕುಂತಿಯ ಎಲ್ಲ ಮಕ್ಕಳನ್ನೂ ಸಂಹರಿಸಿ, ನನ್ನ ಅನುಚರರೆಲ್ಲರೊಡನೆಯೂ ಕೂಡಿಕೊಂಡು ಅವರನ್ನು ಭಕ್ಷಿಸುತ್ತೇನೆ. ದುರ್ಯೋಧನ! ನೀನು ನಿನ್ನ ಸೈನ್ಯವನ್ನು ಹಿಂದಕ್ಕೆ ಕರೆಸು. ನಾವು ಪಾಂಡವರೊಡನೆ ಯುದ್ಧಮಾಡುತ್ತೇವೆ."

ಧೃತರಾಷ್ಟ್ರಮಹಾರಾಜ! ಅಲಾಯುಧನ ಮಾತುಗಳನ್ನು ಕೇಳುತ್ತಲೇ ದುರ್ಯೋಧನನಿಗೆ ಅಮಿತಾನಂದವಾಯಿತು. ತನ್ನ ಅನುಜರಿಂದ ಪರಿವೃತನಾಗಿದ್ದ ದುರ್ಯೋಧನನು ರಾಕ್ಷಸನನ್ನು ಆದರದಿಂದ ಬರಮಾಡಿ ಕೊಂಡು ಅವನೊಡನೆ ಹೇಳಿದನು :

"ರಾಕ್ಷಸೇಂದ್ರ! ಸಸೈನ್ಯನಾದ ನಿನ್ನನ್ನು ಮುಂದೆಮಾಡಿಕೊಂಡು ನಾವೂ ಸಹ ಶತ್ರುಗಳೊಡನೆ ಯುದ್ಧಮಾಡುತ್ತೇವೆ. ಏಕೆಂದರೆ : ಶತ್ರುಗಳನ್ನು ಧ್ವಂಸ ಮಾಡುವುದರ ಮೂಲಕ ವೈರವನ್ನು ಕಡೆಗಾಣಿಸುವ ಮನಸ್ಸಿನಿಂದ ಕೂಡಿರುವ ನನ್ನ ಸೈನಿಕರು ಸುಮ್ಮನೆ ಕುಳಿತಿರಲಾರರು."

ಕೌರವೇಶ್ವರ! ದುರ್ಯೋಧನನ ಆ ಮಾತಿಗೆ ರಾಕ್ಷಸಶ್ರೇಷ್ಠನಾದ

ಅಲಾಯುಧನು ಹಾಗೆಯೇ ಆಗಲೆಂದು ಹೇಳಿ, ತನ್ನನ್ನೇ ಅನುಸರಿಸಿಬಂದಿದ್ದ ರಾಕ್ಷಸರೊಡನೆ ಬಹಳ ಬೇಗ ಘಟೋತ್ಕಚನ ಬಳಿಗೆ ಹೋದನು. ದೇದೀಪ್ಯ ಮಾನವಾಗಿದ್ದ ಶರೀರಕಾಂತಿಯಿಂದ ಕೂಡಿದ್ದ ಅಲಾಯುಧನು ಘಟೋತ್ಕಚ ನಂತೆಯೇ ಸೂರ್ಯನ ಕಾಂತಿಗೆ ಅನುರೂಪವಾದ ಕಾಂತಿಯಿಂದ ಕೂಡಿದ್ದ ರಥದಲ್ಲಿ ಕುಳಿತಿದ್ದನು. ಅಲಾಯುಧನ ರಥವೂ ಬಹುತೋರಣಗಳಿಂದ ಚಿತ್ರಿತವಾಗಿದ್ದಿತು. ಅದಕ್ಕೂ ಕರಡಿಯ ಚರ್ಮವನ್ನು ಹೊದ್ದಿಸಿದ್ದರು. ಆ ಮಹಾರಥದ ಸುತ್ತಳತೆಯೂ ಘಟೋತ್ಕಚನ ರಥದಂತೆಯೇ ನಾಲ್ಕು ನೂರು ಮೊಳಗಳಷ್ಟಿದ್ದಿತು. ಆ ರಥದ ಚಕ್ರಗಳ ಗಡ-ಗಡಾ ಶಬ್ದವೂ ಅನುಪಮ ವಾಗಿದ್ದಿತು. ಅಲಾಯುಧನ ರಥದ ಕುದುರೆಗಳೂ ಶೀಘ್ರಗಾಮಿಗಳಾಗಿಯೂ, ಆನೆಗಳಷ್ಟು ಗಾತ್ರವಾಗಿಯೂ, ಕತ್ತೆಗಳಂತೆ ಅರಚುತ್ತಲೂ ಇದ್ದುವು. ಮಹಾಶರೀರದಿಂದ ಯುಕ್ತವಾಗಿದ್ದ ಅವುಗಳಿಗೆ ಮಾಂಸ ಮತ್ತು ರಕ್ತಗಳೇ ಆಹಾರವಾಗಿದ್ದುವು. ಅಂತಹ ನೂರು ಕುದುರೆಗಳನ್ನು ಅಲಾಯುಧನ ರಥಕ್ಕೆ ಕಟ್ಟಿದ್ದರು.

ಅಲಾಯುಧನ ರಥಘೋಷವೂ ಸಹ ಮಹಾಮೇಘದ ಶಬ್ದಕ್ಕೆ ಸಮಾನ ವಾಗಿಯೇ ಇದ್ದಿತು. ಅವನ ಬಳಿಯಲ್ಲಿಯೂ ದೊಡ್ಡದಾದ, ದೃಢವಾದ ಮೌರ್ವಿಯಿಂದ ಕೂಡಿದ್ದ, ಸುವರ್ಣದಿಂದ ಸಮಲಂಕೃತವಾಗಿ ಜಾಜ್ವಲ್ಯ ಮಾನವಾಗಿ ಕಾಣುತ್ತಿದ್ದ ಧನುಸ್ಸಿದ್ದಿತು. ಅಲಾಯುಧನ ಬಾಣಗಳು ರಥದ ಅಚ್ಚುಮರದಷ್ಟು ದಪ್ಪವಾಗಿದ್ದುವು. ಅವು ಚಿನ್ನದ ಮೂಲಭಾಗಗಳಿಂದ ಕೂಡಿದ್ದು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದುವು. ಘಟೋತ್ಕಚನು ಯಾವ ರೀತಿಯಲ್ಲಿ ಮಹಾಬಾಹುವೂ–ವೀರನೂ ಆಗಿದ್ದನೋ, ಅದೇ ರೀತಿ ಯಲ್ಲಿ ಅಲಾಯುಧನೂ ಮಹಾಬಾಹುವೂ–ವೀರನೂ ಆಗಿದ್ದನು. ಅಲಾ ಯುಧನ ಧ್ವಜವೂ ಸಹ ಪ್ರಜ್ವಲಿಸುವ ಅಗ್ನಿಗೂ ಮತ್ತು ಸೂರ್ಯನಿಗೂ ಸಮಾನವಾದ ಕಾಂತಿಯಿಂದ ಕೂಡಿದ್ದಿತು. ಗುಳ್ಳೇನರಿಗಳ ಸಮೂಹಗಳು ಆ ಧ್ವಜದಲ್ಲಿ ಲಾಂಛನರೂಪದಲ್ಲಿದ್ದು ಅದನ್ನು ರಕ್ಷಿಸುತ್ತಿದ್ದುವು. ಅವನ ರೂಪವೂ ಸಹ ಘಟೋತ್ಕಚನ ರೂಪದಂತೆಯೇ ಅತ್ಯಂತಕಾಂತಿಯಿಂದ ಯುಕ್ತವಾಗಿದ್ದಿತು. ಅಲಾಯುಧನ ಮುಖವೂ ಘಟೋತ್ಕಚನ ಮುಖ ದಂತೆಯೇ ವ್ಯಾಕುಲತೆಯಿಂದ ಕೂಡಿದುದಾಗಿಯೂ, ಪ್ರದೀಪ್ತವಾಗಿಯೂ

ಇದ್ದಿತು. ಅಲಾಯುಧನು ಥಳ-ಥಳಿಸುವ ಅಂಗದಗಳನ್ನು ಧರಿಸಿದ್ದನು. ಪ್ರದೀಪ್ತವಾದ ಅನೇಕ ಕಿರೀಟಗಳನ್ನೇ ಮಾಲೆಯಂತೆ ಧರಿಸಿದ್ದನು. ಹಾರವನ್ನು ಹಾಕಿಕೊಂಡಿದ್ದನು. ತಲೆಯಲ್ಲಿದ್ದ ಉಷ್ಣೀಷದಲ್ಲಿಯೇ (ರುಮಾಲಿನಲ್ಲಿಯೇ) ಅವನ ಕತ್ತಿಯೂ ನಿಬದ್ಧವಾಗಿದ್ದಿತು. ಆನೆಯಂತಹ ಶರೀರವನ್ನು ಹೊಂದಿದ್ದ ಅಲಾಯುಧನು ಗದೆ, ಭುಶುಂಡಿ, ಮುಸಲಾಯುಧ, ಹಲಾಯುಧ, ಮತ್ತು ಧನುಸ್ಸುಗಳನ್ನು ಹೊಂದಿದ್ದನು. ಅಗ್ನಿಗೆ ಸಮಾನನಾದ ತೇಜಸ್ಸಿನಿಂದ ಕೂಡಿದ್ದ ರಥದಲ್ಲಿ ಕುಳಿತಿದ್ದ ಅಲಾಯುಧನು ರಣಾಂಗಣದ ಸುತ್ತಲೂ ಸಂಚರಿಸುತ್ತಾ, ಪಾಂಡವರ ಆ ಮಹಾಸೇನೆಯನ್ನು ಪಲಾಯನಗೊಳಿಸುತ್ತಾ, ಅಂತರಿಕ್ಷದಲ್ಲಿರುವ ಮಿಂಚಿನಿಂದ ಕೂಡಿದ ಮೇಘದಂತೆಯೇ ಪ್ರಕಾಶಿಸಿದನು. ಸರ್ವಶ್ರೇಷ್ಠರಾದ, ಮಹಾಬಲರಾದ, ಕವಚಗಳನ್ನೂ–ಗುರಾಣಿಗಳನ್ನೂ ಧರಿಸಿದ್ದ, ವೀರರಾದ ಪಾಂಡವರ ಕಡೆಯ ಯೋಧರಾದ ನರೇಂದ್ರರೂ ಸಹ ಹರ್ಷಯುಕ್ತರಾಗಿ ಎಲ್ಲ ಕಡೆಗಳಿಂದಲೂ ಅಲಾಯುಧನನ್ನು ಆಕ್ರಮಿಸಿ ಅವನೊಡನೆ ಯುದ್ಧದಲ್ಲಿ ತೊಡಗಿದರು.

೧೭೬ನೆಯ ಅಧ್ಯಾಯವು ಮುಗಿಯಿತು.

೧೭೭ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಭೀಮಸೇನ ಮತ್ತು ಅಲಾಯುಧರ ಘೋರಯುದ್ಧ

ಸಂಜಯನು ಮುಂದುವರಿದು ಹೇಳುತ್ತಾನೆ :

ಮಹಾರಾಜ! ಯುದ್ಧದಲ್ಲಿ ಭಯಂಕರವಾಗಿ ಸಂಹಾರಕಾರ್ಯವನ್ನು ಮಾಡುವ ಅಲಾಯುಧನು ಬಂದುದನ್ನು ನೋಡಿ ಎಲ್ಲ ಕೌರವರೂ ಪರಮ ಹೃಷ್ಟರಾದರು. ಸಮುದ್ರವನ್ನು ದಾಟಲಿಚ್ಛಿಸಿದವರು ನೌಕೆಯಿಲ್ಲದೆ ವ್ಯಾಕುಲ ದಿಂದ ನಿಂತಿರುವಾಗ ನೌಕೆಯೊಂದು ಆಕಸ್ಮಿಕವಾಗಿ ಸಿಕ್ಕಿದರೆ ಆ ಸಮುದ್ರ ಗಾಮಿಗಳಿಗೆ ಎಷ್ಟು ಸಂತೋಷವುಂಟಾಗುವುದೋ–ಅಷ್ಟೇ ಸಂತೋಷವು ದುರ್ಯೋಧನಪ್ರಮುಖರಾದ ನಿನ್ನ ಮಕ್ಕಳಿಗೂ ಆಯಿತು. ಪುರುಷರ್ಷಭ ರಾದ ಕೌರವಯೋಧರು ತಮಗೆ ಪುನರ್ಜನ್ಮವು ಬಂದಿತೆಂದೇ ಭಾವಿಸಿದವರಾಗಿ ರಾಕ್ಷಸೇಂದ್ರನಾದ ಅಲಾಯುಧನನ್ನು ಸ್ವಾಗತಿಸಿ ಸತ್ಕರಿ ಸಿದರು. ಆ ರಾತ್ರಿಯಲ್ಲಿ ಮಹಾಭಯಂಕರವಾದ, ದಾರುಣರೂಪವಾದ

ಯುದ್ಧವು ಕರ್ಣ-ಘಟೋತ್ಕಚರಿಗೆ ನಡೆಯುತ್ತಿರಲಾಗಿ, ಪಾಂಚಾಲ ಯೋಧರೂ ಮತ್ತು ಇತರ ರಾಜರೂ ವಿಸ್ಮಿತರಾಗಿ ಅವರಿಬ್ಬರ ದ್ವೈರಥ ಯುದ್ಧವನ್ನೇ ವೀಕ್ಷಿಸುತ್ತಿದ್ದರು. ಇದೇ ರೀತಿಯಲ್ಲಿ ನಿನ್ನ ಕಡೆಯ ಯೋಧರೂ ಸಹ ನಿಂತಲ್ಲಿಯೇ ನಿಂತು ಆ ಯುದ್ಧವನ್ನೇ ನೋಡುತ್ತಿದ್ದರು. ಘಟೋತ್ಕಚನ ಭಯಂಕರಕರ್ಮವನ್ನು ನೋಡಿ ಗಾಬರಿಗೊಂಡ ದ್ರೋಣ-ದ್ರೌಣಿ-ಕೃಪಾದಿ ಗಳು, "ಕರ್ಣನಿನ್ನಿಲ್ಲ ; ನಮ್ಮ ಸೈನ್ಯವು ಖಂಡಿತವಾಗಿಯೂ ಉಳಿಯ ಲಾರದು" ಎಂದು ಕೂಗಿಕೊಂಡರು. ನಿನ್ನ ಸೈನಿಕರಿಗೆ ಕರ್ಣನ ಉಳಿಯುವಿಕೆ ಯಲ್ಲಿಯೇ ನಿರಾಶೆಯುಂಟಾಗಿ ಉದ್ವಿಗ್ನರಾದರು. ಎಲ್ಲ ಕಡೆಗಳಲ್ಲಿಯೂ ಹಾಹಾಕಾರವೆದ್ದಿತು. ಅನೇಕರು ಭಯದಿಂದ ಪ್ರಜ್ಞೆಯನ್ನು ಕಳೆದುಕೊಂಡರು. ಕರ್ಣನು ಅತ್ಯಂತ ಆರ್ತಾವಸ್ಥೆಯಲ್ಲಿದ್ದುದನ್ನು ಕಂಡ ದುರ್ಯೋಧನನು ರಾಕ್ಷಸೇಂದ್ರನಾದ ಅಲಾಯುಧನನ್ನು ಆಹ್ವಾನಿಸಿ ಅವನೊಡನೆ ಈ ಮಾತನ್ನು ಹೇಳಿದನು : "ಘಟೋತ್ಕಚನೊಡನೆ ಯುದ್ಧದಲ್ಲಿ ತೊಡಗಿರುವ ವೈಕರ್ತನಕರ್ಣನು ತನಗೆ ಎಲ್ಲಿಯವರೆಗೆ ಶತ್ರುವನ್ನು ಸಂಹರಿಸಲು ಪ್ರಯತ್ನಮಾಡಲು ಸಾಧ್ಯವೋ ಅಲ್ಲಿಯವರೆಗೂ ಪ್ರಯತ್ನಮಾಡಿದ್ದಾನೆ. ಇನ್ನೂ ತನ್ನ ಪರಾಕ್ರಮವನ್ನು ತೋರುತ್ತಲೇ ಇದ್ದಾನೆ. ಆದರೆ ರಾಕ್ಷಸೇಂದ್ರ! ಧನುಷ್ಮಂತನಾದ ಭೈಮಸೇನಿಯು ನಮ್ಮ ಕಡೆಯ ಮಹಾಶೂರರಾದ ರಾಜರನ್ನು–ವೃಕ್ಷಗಳ ಬುಡವನ್ನು ಕತ್ತರಿಸಿ ಭೂಮಿಯ ಮೇಲೆ ಕೆಡಹು ವಂತೆ–ನಾನಾವಿಧವಾದ ಶಸ್ತ್ರಾಸ್ತ್ರಗಳಿಂದ ಸಂಹರಿಸಿ ರಣಾಂಗಣದಲ್ಲಿ ಬೀಳಿಸಿರು ವುದನ್ನು ನೋಡು. ಮಹಾವೀರನೇ! ನಿನ್ನ ಅನುಮತಿಯನ್ನು ಪಡೆದುಕೊಂಡೇ ನಾನು ರಾಜರ ನಡುವೆ ಘಟೋತ್ಕಚನನ್ನು ನಿನ್ನ ಭಾಗಕ್ಕೆ ವಹಿಸಿಕೊಟ್ಟೆನು. ಅದರಂತೆ ನೀನು ನಿನ್ನ ಸಂಪೂರ್ಣವಾದ ಪರಾಕ್ರಮವನ್ನೂ ಯೋಜಿಸಿ, ಈ ರಾಕ್ಷಸನನ್ನು ಸಂಹರಿಸು. ಶತ್ರುಘಾತಕನೇ! ವೈಕರ್ತನಕರ್ಣನನ್ನು ಈ ಪಾಪಿಯಾದ ಘಟೋತ್ಕಚನು ತನ್ನ ಮಾಯಾಬಲವನ್ನು ಆಶ್ರಯಿಸಿ ಸಂಹರಿಸುವುದರೊಳಗಾಗಿ ನೀನು ಘಟೋತ್ಕಚನನ್ನು ಸಂಹರಿಸಬೇಕಾಗಿದೆ."

ಮಹಾರಾಜ! ರಾಜನಾದ ದುರ್ಯೋಧನನಿಂದ ಹೀಗೆ ಪ್ರಾರ್ಥಿತ ನಾದ, ಭೀಮವಿಕ್ರಮನಾದ, ಮಹಾಬಾಹುವಾದ ಅಲಾಯುಧನು ಹಾಗೆಯೇ ಆಗಲೆಂದು ಹೇಳಿ ಘಟೋತ್ಕಚನ ಬಳಿಗೆ ಹೋಗಿ ಅವನನ್ನು ಆಕ್ರಮಿಸಿದನು.

ಅನಂತರ ಘಟೋತ್ಕಚನೂ ಸಹ ಕರ್ಣನನ್ನು ಅಲ್ಲಿಯೇ ಬಿಟ್ಟು ತನ್ನ ಕಡೆಗೇ ರಭಸದಿಂದ ಬರುತ್ತಿದ್ದ ಶತ್ರುವಾದ ಅಲಾಯುಧನನ್ನು ಬಾಣಗಳಿಂದ ಸಮ್ಮರ್ದಿಸಲು ಪ್ರಾರಂಭಿಸಿದನು.

ಅರಣ್ಯದಲ್ಲಿ ಒಂದು ಹೆಣ್ಣಾನೆಯ ಸಲುವಾಗಿ ಎರಡು ಮದಗಜಗಳ ನಡುವೆ ಸೆಣೆಸಾಟವು ನಡೆಯುವಂತೆ–ಕ್ರುದ್ಧರಾಗಿದ್ದ ಈ ರಾಕ್ಷಸೇಂದ್ರರ ನಡುವೆ ಘೋರವಾದ ಯುದ್ಧವು ನಡೆಯುತ್ತಿದ್ದಿತು. ಘಟೋತ್ಕಚನು ರಥಿಗಳಲ್ಲಿ ಶ್ರೇಷ್ಠನಾದ ಕರ್ಣನನ್ನು ಬಿಟ್ಟು ಅಲಾಯುಧನ ಸಮೀಪಕ್ಕೆ ಹೋಗಲಾಗಿ, ಕರ್ಣನು ಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ರಥದಲ್ಲಿ ಕುಳಿತು ಭೀಮಸೇನನನ್ನು ಆಕ್ರಮಿಸಿದನು. ಆದರೆ ಯೋಧಶ್ರೇಷ್ಠನಾದ ಭೀಮಸೇನನು ಕರ್ಣನನ್ನು ನಿರ್ಲಕ್ಷಿಸಿ–ಸಿಂಹದಿಂದ ಗೂಳಿಯು ಪೀಡಿಸಲ್ಪಡುವಂತೆ–ಅಲಾಯುಧನಿಂದ ಪೀಡಿತನಾಗುತ್ತಿದ್ದ ಘಟೋತ್ಕಚನನ್ನು ರಕ್ಷಿಸಲು ಸೂರ್ಯನಂತೆ ಪ್ರಕಾಶಮಾನವಾಗಿದ್ದ ರಥದಲ್ಲಿ ಕುಳಿತು ಬಾಣಗಳ ಸಮೂಹವನ್ನು ಸುರಿಸುತ್ತಾ ಅಲಾಯುಧನ ರಥದ ಕಡೆಗೆ ಹೊರಟುಹೋದನು. ಭೀಮಸೇನನು ತನ್ನ ಮೇಲೆ ಬೀಳಲು ಬರುತ್ತಿರುವುದನ್ನು ಕಂಡು ಅಲಾಯುಧನು ಘಟೋತ್ಕಚನೊಡನೆ ಯುದ್ಧಮಾಡುವುದನ್ನು ನಿಲ್ಲಿಸಿ ಭೀಮನನ್ನೇ ಯುದ್ಧಕ್ಕೆ ಆಹ್ವಾನಿಸಿದನು. ರಾಕ್ಷಸಾಂತಕನಾದ ಭೀಮಸೇನನು ತ್ವರೆಯಿಂದ ಅಲಾಯುಧನ ಬಳಿಗೆ ಬಂದು ರಾಕ್ಷಸಸೈನ್ಯ ಸಹಿತನಾದ ಅವನನ್ನು ಬಾಣಗಳಿಂದ ಮುಚ್ಚಿದನು. ಅದೇ ರೀತಿಯಲ್ಲಿ ಅಲಾಯುಧನೂ ಸಹ ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ನೇರವಾಗಿ ಹೋಗುವ ಬಾಣಗಳಿಂದ ಕೌಂತೇಯನನ್ನು ಪುನಃ ಪುನಃ ಅಭಿಷೇಚಿಸಿದನು. ಅಲಾಯುಧನನ್ನೇ ಅನುಸರಿಸಿ ನಿನ್ನ ಮಕ್ಕಳ ಹಿತವನ್ನು ಇಚ್ಛಿಸಿ ಬಂದಿದ್ದ ಭಯಂಕರಸ್ವರೂಪರಾದ ಎಲ್ಲ ರಾಕ್ಷಸರೂ ನಾನಾವಿಧವಾದ ಆಯುಧಗಳೊಡನೆ ಭೀಮಸೇನನನ್ನು ಆಕ್ರಮಿಸಿದರು. ಅನೇಕ ರಾಕ್ಷಸರು ಸುತ್ತುವರಿದು ಭೀಮಸೇನನನ್ನು ಪ್ರಹರಿಸುತ್ತಿರಲಾಗಿ, ಮಹಾಬಲನಾದ ಭೀಮಸೇನನು ನಿಶಿತವಾದ ಐದೈದು ಬಾಣಗಳಿಂದ ಆ ಎಲ್ಲ ರಾಕ್ಷಸರನ್ನೂ ಪ್ರಹರಿಸಿದನು. ಭೀಮಸೇನನ ತೀಕ್ಷ್ಣವಾದ ಬಾಣಗಳಿಂದ ಪ್ರಹೃತರಾದ ಕ್ರೂರಬುದ್ಧಿಯ ರಾಕ್ಷಸರು ಭಯಂಕರವಾಗಿ ಚೀತ್ಕಾರ ಮಾಡುತ್ತಾ ಎಲ್ಲ ದಿಕ್ಕುಗಳಿಗೂ ಓಡಿಹೋದರು. ಭೀಮಸೇನನಿಂದ

ರಾಕ್ಷಸರು ಭಯಭೀತರಾಗಿ ಸುತ್ತಲೂ ಓಡಿಹೋಗುತ್ತಿರುವುದನ್ನು ಕಂಡು ಅಲಾಯುಧರಾಕ್ಷಸನು ಬಹಳ ಬೇಗ ಮಹಾಬಲನಾದ ಭೀಮಸೇನನನ್ನು ಆಕ್ರಮಿಸಿ ಅವನನ್ನು ಬಾಣಗಳಿಂದ ಮುಚ್ಚಿದನು. ಅದಕ್ಕೆ ಪ್ರತಿಯಾಗಿ ಭೀಮಸೇನನೂ ತೀಕ್ಷ್ಣವಾದ ಅಗ್ರಭಾಗಗಳನ್ನು ಹೊಂದಿದ್ದ ಬಾಣಗಳಿಂದ ಅಲಾಯುಧನನ್ನು ಕ್ಷತ-ವಿಕ್ಷತಗೊಳಿಸಿದನು. ಅಲಾಯುಧನು ಭೀಮಸೇನನು



ಬಿಟ್ಟ ಬಾಣಗಳಲ್ಲಿ ಕೆಲವನ್ನು ಕತ್ತರಿಸಿದನು. ಮತ್ತೆ ಕೆಲವನ್ನು ಅತಿಶೀಘ್ರವಾಗಿ ಕೈಯಿಂದಲೇ ಹಿಡಿದನು. ಭೀಮಪರಾಕ್ರಮನಾದ ಭೀಮಸೇನನು ಅಲಾಯುಧನಲ್ಲಿದ್ದ ಅದ್ಭುತಪರಾಕ್ರಮವನ್ನು ಕಂಡು ವಜ್ರಾಯುಧಕ್ಕೆ ಸಮಾನವಾಗಿದ್ದ ಗದೆಯನ್ನು ವೇಗದಿಂದ ಅಲಾಯುಧನ ಕಡೆಗೆಸೆದನು. ಜ್ವಾಲೆಗಳಿಂದ ಆವೃತವಾಗಿದ್ದ ಭೀಮನ ಗದೆಯು ತನ್ನ ಕಡೆಗೆ ರಭಸದಿಂದ

ಬರುತ್ತಿರುವುದನ್ನು ಕಂಡು ಅಲಾಯುಧನು ತನ್ನ ಗದೆಯಿಂದ ಭೀಮನ ಗದೆಯನ್ನು ಅಪ್ಪಳಿಸಿದನು. ಅದರಿಂದಾಗಿ ಭೀಮನ ಗದೆಯು ಪುನಃ ಭೀಮನ ರಥದ ಕಡೆಗೇ ರಭಸದಿಂದ ಹೊರಟುಹೋಯಿತು.

ಅನಂತರ ಭೀಮಸೇನನು ರಾಕ್ಷಸನನ್ನು ಬಾಣಗಳ ವೃಷ್ಟಿಯಿಂದ ಪುನಃ ಮುಚ್ಚಿದನು. ಅಲಾಯುಧನು ನಿಶಿತವಾದ ಬಾಣಗಳಿಂದ ಭೀಮನು ಬಿಟ್ಟ ಎಲ್ಲ ಬಾಣಗಳನ್ನೂ ನಿರರ್ಥಕಗೊಳಿಸಿದನು. ಆ ರಾತ್ರಿಯಲ್ಲಿ ಭಯಂಕರ ರೂಪಿಗಳಾಗಿದ್ದ ರಾಕ್ಷಸರು ಅಲಾಯುಧನ ಆಜ್ಞಾನುಸಾರವಾಗಿ ಪಾಂಡವರ ಕಡೆಯ ರಥ-ಗಜಗಳನ್ನು ಧ್ವಂಸಮಾಡಿದರು. ರಾಕ್ಷಸರಿಂದ ಬಹಳವಾಗಿ ಪೀಡಿತರಾದ ಪಾಂಚಾಲ-ಸೃಂಜಯಯೋಧರೂ ಮತ್ತು ಅವರ ಗಜಾಶ್ವ ಸೈನಿಕರೂ ಮನಃಶಾಂತಿಯೆಂಬುದನ್ನೇ ಹೊಂದಲಿಲ್ಲ (ಅವರ ಮನಸ್ಸು ಉದ್ವಿಗ್ನವಾಗಿದ್ದಿತು). ಪಾಂಡವ-ಕೌರವರ ಘೋರವಾದ ಮಹಾಯುದ್ಧದಲ್ಲಿ ಅಲಾಯುಧನು ಮಧ್ಯದಲ್ಲಿ ಪ್ರವೇಶಿಸಿರುವುದನ್ನು ಕಂಡು ಪುಂಡರೀಕಾಕ್ಷನು ಧನಂಜಯನನ್ನು ಕುರಿತು ಹೇಳಿದನು :

"ಅರ್ಜುನ! ಅದೋ ಅಲ್ಲಿ ನೋಡು! ಭೀಮಸೇನನು ರಾಕ್ಷಸೇಂದ್ರ ನಾದ ಅಲಾಯುಧನ ವಶನಾಗಿಬಿಟ್ಟಿದ್ದಾನೆ. ನೀನು ಸ್ವಲ್ಪವೂ ವಿಚಾರಮಾಡದೆ ಭೀಮಸೇನನನ್ನು ಅನುಸರಿಸಿ ಹೋಗು (ಅವನಿಗೆ ಯುದ್ಧದಲ್ಲಿ ಸಹಾಯ ಮಾಡು). ಧೃಷ್ಟದ್ಯುಮ್ನ, ಶಿಖಂಡೀ, ಯುಧಾಮನ್ಯು, ಉತ್ತಮೌಜಸ, ದ್ರೌಪದಿಯ ಮಕ್ಕಳು ಮತ್ತು ಇತರ ಮಹಾರಥರು–ಎಲ್ಲರೂ ಒಟ್ಟಾಗಿ ಸೇರಿಕೊಂಡು ಕರ್ಣನೊಡನೆ ಯುದ್ಧಮಾಡಲು ಹೋಗಲಿ. ನಿನ್ನ ಆಜ್ಞೆಯಂತೆ ವೀರ್ಯವಂತನಾದ ಸಾತ್ಯಕಿ ಮತ್ತು ನಕುಲ-ಸಹದೇವರು ಇತರ ರಾಕ್ಷಸರನ್ನು ಸಂಹರಿಸಲಿ. ನರವ್ಯಾಘ್ರನೇ! ಮಹಾಬಾಹೋ! ದ್ರೋಣಪುರಸ್ಸರವಾದ ಈ ಸೈನ್ಯವನ್ನು ನೀನು ಪ್ರತಿಬಂಧಿಸು. ನನ್ನ ಅಭಿಪ್ರಾಯದಂತೆ ಈಗ ನಮಗೆ ದೊಡ್ಡದಾದ ಆಪತ್ತು ಬಂದೊದಗಿದೆ."

ಮಹಾರಾಜ! ಶ್ರೀಕೃಷ್ಣನು ಹೀಗೆ ಹೇಳಿದನಂತರ ಅವನು ಹೇಳಿದಂತೆಯೇ ಧೃಷ್ಟದ್ಯುಮ್ನನೇ ಮೊದಲಾದ ಮಹಾರಥರು ವೈಕರ್ತನ

ಕರ್ಣನೊಡನೆ ಯುದ್ಧಮಾಡಲು ತೆರಳಿದರು. ನಕುಲ-ಸಹದೇವ-ಸಾತ್ಯಕಿ ಗಳೂ ರಾಕ್ಷಸರನ್ನು ಎದುರಿಸಲು ಹೊರಟರು.

ಅನಂತರ ಪ್ರತಾಪವಂತವಾದ, ರಾಕ್ಷಸೇಂದ್ರನಾದ ಅಲಾಯುಧನು ಆಕರ್ಣವಾಗಿ ಸೆಳೆದುಬಿಟ್ಟ ಸರ್ಪೋಪಮವಾದ ಬಾಣಗಳಿಂದ ಭೀಮಸೇನನ ಧನುಸ್ಸನ್ನು ಕತ್ತರಿಸಿದನು. ಭೀಮಸೇನನು ನೋಡುತ್ತಿದ್ದಂತೆಯೇ ಮಹಾ ಬಲನಾದ ರಾಕ್ಷಸನು ನಿಶಿತವಾದ ಬಾಣಗಳಿಂದ ಭೀಮಸೇನನ ಕುದುರೆ ಗಳನ್ನೂ ಮತ್ತು ಸಾರಥಿಯನ್ನೂ ಸಂಹರಿಸಿದನು. ಹತಾಶ್ವನಾದ ಮತ್ತು ಹತಸಾರಥಿಯಾದ ಭೀಮಸೇನನು ರಥದ ಪೀಠದಿಂದ ಕೆಳಗಿಳಿದು ಗರ್ಜನೆ ಮಾಡುತ್ತಾ ಮಹಾಭಾರವಾಗಿದ್ದ ಮತ್ತು ಮಹಾಘೋರವಾಗಿದ್ದ ಗದೆಯನ್ನು ಅಲಾಯುಧನ ಮೇಲೆ ಎಸೆದನು. ಭಯಂಕರವಾಗಿ ಶಬ್ದಮಾಡುತ್ತಾ ತನ್ನ ಮೇಲೆ ಬೀಳಲು ಬರುತ್ತಿದ್ದ ಭೀಮನ ಆ ಮಹಾಗದೆಯನ್ನು ಘೋರನಾದ ರಾಕ್ಷಸನು ತನ್ನ ಗದೆಯಿಂದ ಪ್ರಹರಿಸಿ ಗರ್ಜನೆಮಾಡಿದನು. ರಾಕ್ಷಸೇಂದ್ರನ ಭಯಂಕರವಾದ ಮತ್ತು ಘೋರವಾದ ಆ ಸಾಹಸಕಾರ್ಯವನ್ನು ನೋಡಿ ಭೀಮಸೇನನು ಸಂತೋಷಗೊಂಡು ಹಿಂದಿರುಗಿಬಂದ ತನ್ನ ಗದೆಯನ್ನು ಶೀಘ್ರವಾಗಿ ಹಿಡಿದುಕೊಂಡನು. ಗದೆಗಳ ಪ್ರಹಾರ ಮತ್ತು ಪ್ರತಿಪ್ರಹಾರ ಗಳಿಂದುಂಟಾದ ಶಬ್ದಗಳಿಂದ ಭೂಮಿಯನ್ನೇ ನಡುಗಿಸುತ್ತಿದ್ದ ನರ-ರಾಕ್ಷಸರ ಆ ಯುದ್ಧವು ಅತ್ಯಂತಭಯಂಕರವಾಗಿ ಪರಿಣಮಿಸಿತು. ಗದೆಯ ಪ್ರಹಾರ ಮತ್ತು ಪ್ರತಿಪ್ರಹಾರಗಳಲ್ಲಿ ತೊಡಗಿದ್ದ ಭೀಮ ಮತ್ತು ಅಲಾಯುಧರು ವಜ್ರಾಯುಧಪ್ರಹಾರಶಬ್ದಕ್ಕೆ ಸಮಾನವಾದ ಶಬ್ದದಿಂದ ಕೂಡಿದ್ದ ಮುಷ್ಟಿ ಗಳಿಂದಲೇ ಪರಸ್ಪರವಾಗಿ ಬಡಿದಾಡತೊಡಗಿದರು. ಅನಂತರ ಅವರು ರಥ ಗಳ ಚಕ್ರಗಳಿಂದಲೂ, ನೊಗಗಳಿಂದಲೂ, ಅಚ್ಚುಮರಗಳಿಂದಲೂ, ಪೀಠ ಗಳಿಂದಲೂ, ಯುದ್ಧೋಪಯೋಗಿಗಳಾದ ವಸ್ತುಗಳಿಂದಲೂ ಪರಸ್ಪರವಾಗಿ ಕಾದಾಡಿದರು. ಕೊನೆಗೆ ತಮ್ಮ ಹತ್ತಿರದಲ್ಲಿ ಯಾವುದು ಸಿಕ್ಕಿದರೆ ಅದನ್ನೇ ತೆಗೆದುಕೊಂಡು ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದರು. ಮದೋದಕ ವನ್ನು ಸುರಿಸುವ ಎರಡು ಸಲಗಗಳಂತೆ–ಅಲಾಯುಧ-ಭೀಮರು ತಮ್ಮ ಶರೀರಗಳಿಂದ ರಕ್ತವನ್ನು ಸುರಿಸುತ್ತಾ ಪರಸ್ಪರವಾಗಿ ಸಂಘರ್ಷಿಸುತ್ತಾ ಒಬ್ಬರು ಮತ್ತೊಬ್ಬರನ್ನು ಪುನಃ ಪುನಃ ಎಳೆದಾಡುತ್ತಿದ್ದರು.

ಪಾಂಡವರ ಹಿತದಲ್ಲಿಯೇ ಸರ್ವದಾ ನಿರತನಾದ ಹೃಷೀಕೇಶನು ಭೀಮಸೇನನ ರಕ್ಷಣಾರ್ಥವಾಗಿ ಹೋಗುವಂತೆ ಘಟೋತ್ಕಚನನ್ನು ಹುರಿದುಂಬಿಸಿದನು."

೧೭೭ನೆಯ ಅಧ್ಯಾಯವು ಮುಗಿಯಿತು.

೧೭೮ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಉಭಯಪಕ್ಷಗಳ ಸೈನ್ಯಗಳ ನಡುವೆ ಭಯಂಕರಯುದ್ಧ: ಘಟೋತ್ಕಚನು ಅಲಾಯುಧನನ್ನು ಸಂಹರಿಸಿದುದು : ದುರ್ಯೋಧನನ ಪಶ್ಚಾತ್ತಾಪ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಭೀಮಸೇನನು ಅಲಾಯುಧರಾಕ್ಷಸನ ಹಿಡಿತಕ್ಕೆ ಸಿಕ್ಕಿಬಿದ್ದಿರುವುದನ್ನು ಶ್ರೀಕೃಷ್ಣನು ಘಟೋತ್ಕಚನಿಗೆ ಬಹಳ ಹತ್ತಿರದಿಂದಲೇ ತೋರಿಸುತ್ತಾ ಅವನನ್ನು ಕುರಿತು ಹೇಳಿದನು :

"ಮಹಾದ್ಯುತಿಮಂತನೇ! ಮಹಾಬಾಹೋ! ನಮ್ಮ ಕಡೆಯ ಎಲ್ಲ ಸೈನಿಕರೂ ಮತ್ತು ನೀನೂ ನೋಡುತ್ತಿರುವಂತೆಯೇ ಭೀಮಸೇನನು ರಾಕ್ಷಸನಿಂದ ಆಕ್ರಮಿಸಲ್ಪಟ್ಟಿರುವುದನ್ನು ನೋಡು. ನೀನೀಗ ಕರ್ಣನೊಡನೆ ಯುದ್ಧ ಮಾಡುವುದನ್ನು ನಿಲ್ಲಿಸಿ ರಾಕ್ಷಸೇಂದ್ರನಾದ ಅಲಾಯುಧನನ್ನು ಕ್ಷಿಪ್ರವಾಗಿ ಸಂಹರಿಸು. ಅನಂತರ ನೀನು ಕರ್ಣನನ್ನು ಸಂಹರಿಸಬಹುದು."

ಕೌರವೇಶ್ವರ! ವೀರ್ಯವಂತನಾದ ಘಟೋತ್ಕಚನು ವಾರ್ಷ್ಣೇಯನ (ಶ್ರೀಕೃಷ್ಣನ) ಮಾತನ್ನು ಕೇಳಿ ಒಡನೆಯೇ ಕರ್ಣನೊಡನೆ ಯುದ್ಧಮಾಡುವುದನ್ನು ನಿಲ್ಲಿಸಿ ಬಕಾಸುರನ ಸಹೋದರನಾದ ಅಲಾಯುಧನೊಡನೆ ಯುದ್ಧಮಾಡಲು ತೊಡಗಿದನು. ಆ ಮಧ್ಯರಾತ್ರಿಯಲ್ಲಿ ಅಲಾಯುಧ-ಘಟೋತ್ಕಚ ರಾಕ್ಷಸರಿಬ್ಬರಿಗೂ ಅತ್ಯುಗ್ರವೂ ಅತ್ಯಂತಭಯಂಕರವೂ ಆದ ಯುದ್ಧವೂ ನಡೆಯಿತು. ಧನುಸ್ಸುಗಳನ್ನು ಕೈಗಳಲ್ಲಿ ಹಿಡಿದಿದ್ದ, ಭಯಂಕರರಾಗಿ ಕಾಣುತ್ತಿದ್ದ, ವೇಗವಾಗಿ ಮೇಲೆ ಬೀಳುತ್ತಿದ್ದ ಅಲಾಯುಧನ ಕಡೆಯ ರಾಕ್ಷಸಯೋಧರನ್ನು, ಆಯುಧವನ್ನು (ಧನುಸ್ಸನ್ನು) ಹಿಡಿದಿದ್ದ, ಕ್ರುದ್ಧನಾಗಿದ್ದ ಮಹಾರಥನಾದ ಸಾತ್ಯಕಿಯೂ ಮತ್ತು ನಕುಲ-ಸಹದೇವರೂ ನಿಶಿತ

ವಾದ ಬಾಣಗಳಿಂದ ತುಂಡರಿಸಿದರು. ಕಿರೀಟವನ್ನು ಧರಿಸಿದ್ದ ಅರ್ಜುನನು ಸರ್ವತ್ರ ಬಾಣಗಳ ಮಳೆಗರೆಯುತ್ತಾ ಕೌರವರ ಕಡೆಯ ಎಲ್ಲ ಕ್ಷತ್ರಿಯ ಶ್ರೇಷ್ಠರನ್ನೂ ಪಲಾಯಿತರನ್ನಾಗಿ ಮಾಡಿದನು. ಕರ್ಣನು ಧೃಷ್ಟದ್ಯುಮ್ನ ಮತ್ತು ಶಿಖಂಡಿಯೇ ಮೊದಲಾದ ಎಲ್ಲ ಪಾಂಚಾಲಮಹಾರಥರನ್ನೂ ಪಾಂಡವರ ಕಡೆಯ ರಾಜರನ್ನೂ ರಣರಂಗದಿಂದ ಓಡಿಸಿಬಿಟ್ಟನು. ಕರ್ಣನು ಧೃಷ್ಟದ್ಯುಮ್ನಪ್ರಮುಖರಾದ ಪಾಂಚಾಲಯೋಧರನ್ನು ಪ್ರಹರಿಸುತ್ತಿರುವುದನ್ನು ನೋಡಿ ಭಯಂಕರಪರಾಕ್ರಮನಾದ ಭೀಮಸೇನನು ಬಾಣಗಳನ್ನು ಸುರಿಸುತ್ತಾ ಬಹಳ ಶೀಘ್ರವಾಗಿ ಕರ್ಣನನ್ನು ಎದುರಿಸಿದನು. ಮಹಾರಥನಾದ ಸಾತ್ಯಕಿ ಮತ್ತು ನಕುಲ-ಸಹದೇವರು ಅಲಾಯುಧನ ಕಡೆಯ ರಾಕ್ಷಸಯೋಧರನ್ನು ಸಂಹರಿಸಿ ಕರ್ಣನಿದ್ದೆಡೆಗೆ ಆಗಮಿಸಿದರು. ಅನಂತರ ಸಾತ್ಯಕಿ-ನಕುಲ-ಸಹದೇವರು ಕರ್ಣನೊಡನೆಯೂ, ಪಾಂಚಾಲರು ದ್ರೋಣರೊಡನೆಯೂ ಯುದ್ಧದಲ್ಲಿ ತೊಡಗಿದರು.

ಕ್ರುದ್ಧನಾಗಿದ್ದ ಅಲಾಯುಧನು ಶತ್ರುದಮನನಾದ ಘಟೋತ್ಕಚನ ತಲೆಯನ್ನು ದೊಡ್ಡದಾಗಿದ್ದ ಪರಿಘಾಯುಧದಿಂದ ಪ್ರಹರಿಸಿದನು. ಮಹಾಬಲನಾದ, ವೀರ್ಯವಂತನಾದ ಭೈಮಸೇನಿಯು ಆ ಪ್ರಹಾರದಿಂದ ಕ್ಷಣಕಾಲ ವಿಸಂಜ್ಞನಾದರೂ ಸ್ವಲ್ಪಹೊತ್ತಿನಲ್ಲಿಯೇ ಚೇತರಿಸಿಕೊಂಡನು. ಬಳಿಕ ಘಟೋತ್ಕಚನು ಪ್ರದೀಪ್ತವಾದ, ಅಗ್ನಿಗೆ ಸಮಾನವಾಗಿದ್ದ, ನೂರು ಘಂಟೆಗಳಿಂದ ಸಮಲಂಕೃತವಾಗಿದ್ದ, ಸುವರ್ಣಭೂಷಿತವಾಗಿದ್ದ ಗದೆಯನ್ನು ಅಲಾಯುಧನ ಕಡೆಗೆ ಎಸೆದನು. ಭಯಂಕರಕರ್ಮನಾದ, ಮಹಾತ್ಮನಾದ ಘಟೋತ್ಕಚನಿಂದ ಪ್ರಮುಕ್ತವಾದ ಆ ಗದೆಯು ಅಲಾಯುಧನ ಕುದುರೆಗಳನ್ನೂ, ರಥವನ್ನೂ ಮತ್ತು ಸಾರಥಿಯನ್ನೂ ಚೂರ್ಣೀಕರಿಸಿತು. ಅಲಾಯುಧನ ರಥದ ಚಕ್ರಗಳೂ ಮತ್ತು ಅಚ್ಚುಮರಗಳೂ ಭಗ್ನವಾಗಿ ಹೋದುವು. ಧ್ವಜ ಮತ್ತು ಮೂಕಿಗಳು ಚೂರು-ಚೂರಾಗಿ ಬಿದ್ದಿದ್ದುವು. ಅಶ್ವ-ಸಾರಥಿಗಳಿಂದ ವಿಹೀನನಾದ ಅಲಾಯುಧನು ಮಾಯೆಯನ್ನು ಆಶ್ರಯಿಸಿ ಭಗ್ನವಾಗಿ ಹೋಗಿದ್ದ ರಥದಿಂದ ಬಹಳ ಬೇಗ ಮೇಲಕ್ಕೆ ಹಾರಿದನು. ಆ ಸಮಯದಲ್ಲಿ ಆಕಾಶವು ಭಯಂಕರವಾದ ಮೇಘದಿಂದ ಕವಿಯಿತು.

ಮೇಘವು ಮಿಂಚಿನಿಂದ ಪ್ರಕಾಶಮಾನವಾಗಿ ಕಾಣುತ್ತಿದ್ದಿತು.

ಅಲಾಯುಧನು ಮಾಯೆಯನ್ನಾಶ್ರಯಿಸಿ ಆ ಕಾರ್ಮುಗಿಲಿನಿಂದ ರಕ್ತದ ಮಳೆಯನ್ನೇ ಸುರಿಸಿದನು. ಮೋಡವು ಗುಡುಗುಗಳೊಡನೆಯೂ, ಮಿಂಚು ಗಳೊಡನೆಯೂ ಕೂಡಿತ್ತು. ಸಿಡಿಲುಗಳೂ ಆಗಾಗ ಸಿಡಿದುಬೀಳುತ್ತಿದ್ದುವು. ಆ ರಣರಂಗದಲ್ಲಿ ದೊಡ್ಡದಾದ ಚಟ-ಚಟಾ ಶಬ್ದಗಳು ಕೇಳಿಬಂದುವು.

ಅಲಾಯುಧರಾಕ್ಷಸನು ಕಲ್ಪಿಸಿದ್ದ ಆ ಮಹಾಮಾಯೆಯನ್ನು ನೋಡಿ ಘಟೋತ್ಕಚರಾಕ್ಷಸನು ಆಕಾಶಕ್ಕೆ ಹಾರಿ ಅಲಾಯುಧಕಲ್ಪಿತವಾಗಿದ್ದ ಆ ಮಾಯೆಯನ್ನು ತನ್ನ ಮಾಯಾವಿದ್ಯೆಯಿಂದ ಧ್ವಂಸಮಾಡಿದನು. ಮಾಯಾವಿ ಯಾದ ಅಲಾಯುಧನು ತಾನು ಕಲ್ಪಿಸಿದ್ದ ಮಾಯೆಯನ್ನು ಘಟೋತ್ಕಚನು ಮಾಯೆಯಿಂದಲೇ ಧ್ವಂಸಮಾಡಿದುದನ್ನು ಕಂಡು ಪುನಃ ಮಾಯೆಯನ್ನೇ ಆಶ್ರಯಿಸಿ ಭಯಂಕರವಾದ ಕಲ್ಲುಮಳೆಯನ್ನು ಘಟೋತ್ಕಚನ ಮೇಲೆ ಸುರಿಸಿದನು. ವೀರ್ಯವಂತನಾದ ಘಟೋತ್ಕಚನು ಅಲಾಯುಧನು ಸೃಷ್ಟಿ ಸಿದ್ದ ಘೋರವಾದ ಕಲ್ಲಿನ ಮಳೆಯನ್ನು ಎಲ್ಲ ದಿಕ್ಕುಗಳಲ್ಲಿಯೂ ಬಾಣ ಗಳನ್ನೂ ಸುರಿಸುತ್ತಾ ಧ್ವಂಸಮಾಡಿದನು. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಅನಂತರ ಇಬ್ಬರು ರಾಕ್ಷಸರೂ ನಾನಾವಿಧವಾದ ಆಯುಧಗಳನ್ನು ಒಬ್ಬರು ಮತ್ತೊಬ್ಬರ ಮೇಲೆ ಸುರಿಸತೊಡಗಿದರು. ಲೋಹಮಯವಾದ ಪರಿಘಾಯುಧಗಳು, ಶೂಲಗಳು, ಗದೆಗಳು, ಮುಸಲಗಳು, ಮುದ್ಗರಗಳು, ಪಿನಾಕಗಳು, ಖಡ್ಗಗಳು, ತೋಮರಗಳು, ಪ್ರಾಸಗಳು, ಕಂಪನಗಳು, ನಿಶಿತ ವಾದ ನಾರಾಚಗಳು, ಭಲ್ಲಗಳು, ಬಾಣಗಳು, ಚಕ್ರಗಳು ಗಂಡುಗೊಡಲಿ ಗಳು, ಕಬ್ಬಿಣದ ಗುಂಡುಗಳು, ಭಿಂದಿಪಾಲಗಳು, ಗೋಶೀರ್ಷಗಳು, ಉಲೂಖಗಳು–ಇವೇ ಮೊದಲಾದ ಆಯುಧಗಳಿಂದಲೂ ಮತ್ತು ಬುಡ ಮೇಲಾಗಿ ಮಾಡಿದ ದೊಡ್ಡ-ದೊಡ್ಡ ರೆಂಬೆಗಳಿಂದ ಕೂಡಿದ ವಿಧ-ವಿಧವಾದ ಶಮೀ, ಪೀಲು, ಕದಂಬ, ಸಂಪಿಗೆ, ಇಂಗುದ, ಬದರೀ, ಸುಪುಷ್ಪಿತವಾದ ಕೋವಿದಾರ, ಮುತ್ತುಗ, ಶತ್ರುಗಳನ್ನು ವಿಧ್ವಂಸನಗೊಳಿಸುವ ಪ್ಲಕ್ಷ, ಆಲ, ಅರಳಿ–ಇವೇ ಮುಂತಾದ ದೊಡ್ಡ-ದೊಡ್ಡ ವೃಕ್ಷಗಳಿಂದಲೂ ಘಟೋತ್ಕಚಾ ಲಾಯುಧರು ಪರಸ್ಪರವಾಗಿ ಬಡಿದಾಡಿದರು. ನಾನಾವಿಧವಾದ ಗೈರಿಕಾದಿ ಧಾತುಗಳಿಂದ ಸಮಾಕುಲವಾಗಿದ್ದ ಬಹಳ ದೊಡ್ಡದಾದ ಪರ್ವತಶಿಖರ ಗಳನ್ನೇ ಕಿತ್ತು ಪರಸ್ಪರವಾಗಿ ಯುದ್ಧಮಾಡಿದರು. ಹಾಗೆ ಪರಸ್ಪರವಾಗಿ

ಯುದ್ಧಮಾಡುತ್ತಿದ್ದಾಗ ಉಂಟಾದ ಮಹಾಶಬ್ದವು–ವಜ್ರಾಯುಧಗಳು ಭಗ್ನ ವಾದಾಗ ಉಂಟಾಗುವ ಮಹಾಶಬ್ದದಂತೆಯೇ ಇದ್ದಿತು. ಘಟೋತ್ಕಚ ಮತ್ತು ಅಲಾಯುಧರ ಆ ಮಹಾಯುದ್ಧವು ತ್ರೇತಾಯುಗದಲ್ಲಿ ಕಪಿಶ್ರೇಷ್ಠ ರಾದ ವಾಲಿ-ಸುಗ್ರೀವರಿಗೆ ನಡೆದ ಘೋರಯುದ್ಧದಂತೆಯೇ ಮಹಾಘೋರ ವಾಗಿಯೂ ಭಯಂಕರವಾಗಿಯೂ ಇದ್ದಿತು. ಆ ರಾಕ್ಷಸರು ಪರಸ್ಪರವಾಗಿ ಅನೇಕವಿಧವಾದ ಭಯಂಕರಾಯುಧಗಳಿಂದಲೂ, ಬಾಣಗಳಿಂದಲೂ ಯುದ್ಧಮಾಡಿದನಂತರ ಹರಿತವಾಗಿದ್ದ ಎರಡು ಕತ್ತಿಗಳನ್ನು ತೆಗೆದುಕೊಂಡು ಯುದ್ಧಮಾಡಿದರು. ಮಹಾಕಾಯರಾದ, ಮಹಾಬಲರಾದ ರಾಕ್ಷಸದ್ವಯರು ಪರಸ್ಪರವಾಗಿ ಆಕ್ರಮಿಸಿ ಒಬ್ಬರು ಮತ್ತೊಬ್ಬರ ಮುಡಿಯನ್ನು ಕೈಗಳಿಂದ ಹಿಡಿದುಕೊಂಡರು. ಅತಿಯಾಗಿ ಮಳೆಗರೆಯುವ ಎರಡು ಮೋಡಗಳೋ ಪಾದಿಯಲ್ಲಿ–ಬೆವರಿನಿಂದ ತುಂಬಿಹೋಗಿದ್ದ ಆ ರಾಕ್ಷಸರು ಶರೀರಗಳಿಂದ ಬೆವರನ್ನೂ ಮತ್ತು ಅದರ ಜೊತೆಯಲ್ಲಿ ರಕ್ತವನ್ನೂ ಸುರಿಸಿದರು. ಬಳಿಕ ಘಟೋತ್ಕಚನು ಅಲಾಯುಧನನ್ನು ಹಿಡಿದೆತ್ತಿ ಹತ್ತಾರು ಬಾರಿ ಗರ-ಗರನೆ ತಿರುಗಿಸಿ ಬಲಪೂರ್ವಕವಾಗಿ ನೆಲದ ಮೇಲೆ ಅಪ್ಪಳಿಸಿದನು. ಮರುಕ್ಷಣ ದಲ್ಲಿಯೇ ಬಹಳ ದೊಡ್ಡದಾಗಿದ್ದ ಅವನ ಶಿರಸ್ಸನ್ನೂ ಕತ್ತರಿಸಿಬಿಟ್ಟನು. ಮಹಾ ಬಲನಾದ ಘಟೋತ್ಕಚನು ಕುಂಡಲಗಳಿಂದ ವಿಭೂಷಿತವಾಗಿದ್ದ ಅಲಾ ಯುಧನ ಶಿರಸ್ಸನ್ನು ಅಪಹರಿಸಿ ಭಯಂಕರವಾಗಿ ಗರ್ಜನೆಮಾಡಿದನು. ಬಕಾಸುರನ ಸಹೋದರನಾದ, ಅರಿಂದಮನಾದ, ಮಹಾಕಾಯನಾದ ಅಲಾ ಯುಧನು ಹತನಾದುದನ್ನು ನೋಡಿ ಪಾಂಚಾಲ-ಪಾಂಡವೇಯರು ಸಿಂಹ ನಾದಗಳನ್ನು ಮಾಡಿದರು. ಅಲಾಯುಧರಾಕ್ಷಸನು ಹತನಾಗಲಾಗಿ, ಪಾಂಡು ಪುತ್ರರು ಸಾವಿರಾರು ಭೇರಿಗಳನ್ನು ಬಾರಿಸಿದರು. ಸಾವಿರಾರು ಶಂಖಗಳ ನ್ನೂದಿದರು. ನಾಲ್ಕು ದಿಕ್ಕುಗಳಲ್ಲಿಯೂ ದೀಪಾವಳಿಗಳಿಂದ ಪ್ರಕಾಶಮಾನ ವಾಗಿ ಕಾಣುತ್ತಿದ್ದ ಆ ರಾತ್ರಿಯು ಪಾಂಡವರಿಗೆ ವಿಜಯದಾಯಿನಿಯಾಗಿ ಮತ್ತಷ್ಟು ಪ್ರಕಾಶಿಸಿತು. ಮಹಾಬಲನಾದ ಘಟೋತ್ಕಚನು ಪ್ರಾಣದಿಂದ ವಿಹೀನನಾಗಿದ್ದ ಅಲಾಯುಧನ ಶಿರಸ್ಸನ್ನು ದುರ್ಯೋಧನನ ಮುಂದೆಯೇ ಹಾಕಿದನು. ದುರ್ಯೋಧನರಾಜನು ಅಲಾಯುಧನು ಹತನಾದುದನ್ನು ಕಂಡು ಉದ್ವಿಗ್ನನಾದನು. ಅವನ ಸೈನಿಕರೆಲ್ಲರೂ ಉದ್ವಿಗ್ನರಾದರು.

ಅಲಾಯುಧನು ಭೀಮಸೇನನ ಮೇಲಿದ್ದ ವೈರವನ್ನು ಸ್ಮರಿಸಿಕೊಂಡು ಸ್ವತಃ ರಣಾಂಗಣಕ್ಕೆ ಬಂದು 'ಭೀಮಸೇನನನ್ನು ನಾನೇ ಯುದ್ಧದಲ್ಲಿ ಸಂಹರಿಸು ತ್ತೇನೆ'–ಎಂದು ಪ್ರತಿಜ್ಞೆಮಾಡಿದ್ದನು. ಅಲಾಯುಧನ ಪ್ರತಿಜ್ಞೆಯನ್ನು ಕೇಳಿದ ದುರ್ಯೋಧನನು ನಿಶ್ಚಯವಾಗಿಯೂ ಅವನು ಭೀಮಸೇನನನ್ನು ಕೊಲ್ಲುವನೆಂದೇ ಭಾವಿಸಿದ್ದನು. ಅದರಿಂದ ತಾನೂ ಮತ್ತು ತನ್ನ ಅನುಜರೂ ಚಿರಕಾಲ ಬದುಕಿರಬಹುದೆಂದೂ ದುರ್ಯೋಧನನ ಆಶಯವಾಗಿದ್ದಿತು. ಭೀಮಸೇನನ ಮಗನಿಂದಲೇ ಅಲಾಯುಧನು ಹತನಾದುದನ್ನು ಕಂಡು ದುರ್ಯೋಧನನು ಭೀಮಸೇನನ (ಧೃತರಾಷ್ಟ್ರನ ಮಕ್ಕಳೆಲ್ಲರನ್ನೂ ಕೊಲ್ಲುವೆ ನೆಂಬ) ಪ್ರತಿಜ್ಞೆಯು ಪೂರ್ಣವಾಯಿತೆಂದೇ ಭಾವಿಸಿದನು."

೧೭೮ನೆಯ ಅಧ್ಯಾಯವು ಮುಗಿಯಿತು.

೧೭೯ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಘಟೋತ್ಕಚನ ಘೋರಯುದ್ಧ: ಕರ್ಣನ ಶಕ್ತ್ಯಾಯುಧದಿಂದ ಘಟೋತ್ಕಚನ ಸಂಹಾರ

ಸಂಜಯನು ಪ್ರಕರಣವನ್ನು ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಅಲಾಯುಧನನ್ನು ಸಂಹರಿಸಿ ಪರಮಸಂತುಷ್ಟನಾದ ಘಟೋತ್ಕಚರಾಕ್ಷಸನು ನಿನ್ನ ಸೈನ್ಯಕ್ಕೆದುರಾಗಿ ನಿಂತು ನಾನಾಪ್ರಕಾರವಾಗಿ ಸಿಂಹನಾದಗಳನ್ನು ಮಾಡಿದನು. ಆನೆಗಳನ್ನೂ ಹೆದರಿಸುವಂತಹ ಭಯಂಕರ ವಾದ ಅವನ ಗರ್ಜನೆಯನ್ನು ಕೇಳಿ ನಿನ್ನ ಕಡೆಯ ಸೈನಿಕರಿಗೆ ಅತ್ಯಂತ ದಾರುಣವಾದ ಭಯವುಂಟಾಯಿತು. ಮಹಾರಾಜ! ನಾನು ಹಿಂದೆ ಹೇಳಿದ್ದಂತೆ ಅಲಾಯುಧನು ಮಹಾಬಲನಾದ ಘಟೋತ್ಕಚನೊಡನೆ ಯುದ್ಧದಲ್ಲಿ ತೊಡಗಿರಲಾಗಿ, ಮಹಾಬಾಹುವಾದ ಕರ್ಣನು ಪಾಂಚಾಲ ಯೋಧರನ್ನು ಆಕ್ರಮಿಸಿ ಯುದ್ಧಮಾಡುತ್ತಿದ್ದನು. ಬಗ್ಗದ ಗಿಣ್ಣುಗಳಿಂದ ಕೂಡಿದ್ದ ದೃಢವಾಗಿದ್ದ, ಆಕರ್ಣವಾಗಿ ಸೆಳೆದುಬಿಟ್ಟ ಹತ್ತು-ಹತ್ತು ಬಾಣ ಗಳಿಂದ ಕರ್ಣನು ಧೃಷ್ಟದ್ಯುಮ್ನ-ಶಿಖಂಡಿಗಳನ್ನು ಪ್ರಹರಿಸಿದನು. ಅನಂತರ

ಕರ್ಣನು ಶ್ರೇಷ್ಠವಾದ ನಾರಾಚಗಳಿಂದ ಯುಧಾಮನ್ಯೂತ್ತಮೌಜಸರನ್ನೂ ಪ್ರಹರಿಸಿದನು. ರಥಶ್ರೇಷ್ಠನಾದ ಸಾತ್ಯಕಿಯನ್ನೂ ಬಾಣಗಳ ಪ್ರಹಾರದಿಂದ ನಡುಗಿಸಿಬಿಟ್ಟನು. ಧೃಷ್ಟದ್ಯುಮ್ನಾದಿಗಳೂ ಸಹ ಕರ್ಣನ ಮೇಲೆ ಎಡ-ಬಲ ಪಾರ್ಶ್ವಗಳಿಂದಲೂ ಬಾಣಗಳನ್ನು ಬಿಡುತ್ತಲೇ ಇದ್ದರು. ಅವರ ಧನುಸ್ಸುಗಳು ಯಾವಾಗಲೂ ಮಂಡಲಾಕಾರವಾಗಿರುವಂತೆಯೇ ಕಾಣಿಸುತ್ತಿದ್ದುವು. ಅವರು ಮಾಡುತ್ತಿದ್ದ ಟೇಂಕಾರಶಬ್ದಗಳೂ ಮತ್ತು ಅವರ ರಥ ಚಕ್ರಗಳ ಗಡ-ಗಡಾ ಶಬ್ದಗಳೂ ವರ್ಷಾಕಾಲದಲ್ಲಿನ ಮೇಘಗಳ ಶಬ್ದದಂತೆ ಬಹುಭಯಂಕರವಾಗಿ ಕೇಳಿಬರುತ್ತಿದ್ದಿತು.

ಮಹಾರಾಜ! ಆ ಸಂಗ್ರಾಮವು ವರ್ಷಾಕಾಲದ ಮೇಘದೋಪಾದಿಯಲ್ಲಿದ್ದಿತು. ಧನುಸ್ಸುಗಳ ಟೇಂಕಾರಶಬ್ದಗಳೂ ಮತ್ತು ರಥಚಕ್ರಗಳ ಗಡ-ಗಡಾ ಶಬ್ದಗಳೂ ವರ್ಷಾಕಾಲದ ಮೇಘದ ಗರ್ಜನೆಗೆ ಸಮಾನವಾಗಿದ್ದುವು. ಸಂಗ್ರಾಮದಲ್ಲಿ ಯೋಧರ ಕೈಗಳಲ್ಲಿದ್ದ ಧನುಸ್ಸುಗಳು ಮೇಘದಲ್ಲಿ ಕ್ಷಣ-ಕ್ಷಣಕ್ಕೂ ಕಾಣುತ್ತಿದ್ದ ವಿದ್ಯುನ್ಮಂಡಲಕ್ಕೆ ಅನುರೂಪವಾಗಿದ್ದುವು. ರಥದಲ್ಲಿದ್ದ ಕೇತುಗಳೇ ಮೇಘಗಳಲ್ಲಿನ ಎತ್ತರವಾದ ಶಿಖರಗಳಂತೆ ಕಾಣುತ್ತಿದ್ದುವು. ಸಂಗ್ರಾಮದಲ್ಲಾಗುತ್ತಿದ್ದ ಬಾಣಸಮೂಹಗಳ ವೃಷ್ಟಿಯು ಮೇಘದಿಂದ ಸುರಿಯುವ ಜಲವೃಷ್ಟಿಗೆ ಸದೃಶವಾಗಿದ್ದಿತು. ಪರ್ವತದಂತೆ ಅವಿಚಲನಾಗಿದ್ದ, ಮಹಾಶೈಲದಂತೆ ಶಕ್ತಿವಂತನೂ ಆಗಿದ್ದ ಕರ್ಣನು ಶತ್ರುಗಳು ಸುರಿಸುತ್ತಿದ್ದ ಅದ್ಭುತವಾದ ಬಾಣಗಳ ವೃಷ್ಟಿಯನ್ನು ಧ್ವಂಸಮಾಡಿದನು. ನಿನ್ನ ಮಗನ ಹಿತದಲ್ಲಿಯೇ ನಿರತನಾಗಿದ್ದ ಮಹಾತ್ಮನಾದ ಕರ್ಣನು ವಜ್ರಾಯುಧದ ಪ್ರಹಾರಕ್ಕೆ ಸಮಾನವಾಗಿ ಶತ್ರುಗಳನ್ನು ಪ್ರಹರಿಸುತ್ತಿದ್ದ, ಸುವರ್ಣದಿಂದ ಚಿತ್ರಿತವಾದ ಮೂಲಭಾಗಗಳನ್ನು ಹೊಂದಿದ್ದ, ಅಪ್ರಮೇಯವಾದ, ನಿಶಿತವಾದ ಬಾಣಗಳಿಂದ ಶತ್ರುಗಳನ್ನು ಧ್ವಂಸಮಾಡಿದನು. ವೈಕರ್ತನನ ಆ ಬಾಣಪ್ರಹಾರದಿಂದಾಗಿ ಕೆಲವು ಯೋಧರ ಧ್ವಜಗಳು ಹರಿದು, ದಂಡಗಳು ಮುರಿದುಹೋಗಿದ್ದುವು. ಕೆಲವು ಯೋಧರ ಶರೀರಗಳು ಕ್ಷತ-ವಿಕ್ಷತವಾಗಿದ್ದುವು. ಕೆಲವರು ಹತಸೂತರೂ ಮತ್ತೆ ಕೆಲವರು ಹತಾಶ್ವರೂ ಆಗಿದ್ದರು. ಯುದ್ಧದಲ್ಲಿ ಸ್ವಲ್ಪವಾದರೂ ನೆಮ್ಮದಿಯನ್ನೇ ಹೊಂದದ ಪಾಂಚಾಲವೀರರು ಯುಧಿಷ್ಠಿರನ

ಸೈನ್ಯದೊಳಕ್ಕೆ ಸೇರಿಕೊಂಡರು. ಯುಧಿಷ್ಠಿರನ ಸೈನ್ಯವೂ ಭಗ್ನವಾಗಿ ಹೋಯಿತು. ಪಾಂಡವರ ಸೈನ್ಯವು ಭಗ್ನವಾದುದನ್ನೂ ಮತ್ತು ಸೈನಿಕರು ಯುದ್ಧದಿಂದ ವಿಮುಖರಾಗುತ್ತಿರುವುದನ್ನೂ ಕಂಡು ಘಟೋತ್ಕಚನು ಬಹಳ ಕುಪಿತನಾದನು. ಸುವರ್ಣದಿಂದಲೂ ಮತ್ತು ನಾನಾಜಾತಿಗಳ ರತ್ನ ಗಳಿಂದಲೂ ಚಿತ್ರಿತವಾಗಿದ್ದ ಶ್ರೇಷ್ಠವಾದ ರಥದಲ್ಲಿ ಕುಳಿತು ಸಿಂಹನಾದ ಮಾಡಿದನು. ವೈಕರ್ತನಕರ್ಣನ ಬಳಿಗೆ ಹೋಗಿ ಅವನನ್ನು ವಜ್ರಾಯುಧಕ್ಕೆ ಸದೃಶವಾದ ಬಾಣಗಳಿಂದ ಪ್ರಹರಿಸಿದನು.

ನರ-ರಾಕ್ಷಸರಿಬ್ಬರೂ ಕರ್ಣೀ, ನಾರಾಚ, ಶಿಲೀಮುಖ, ನಾಲೀಕ, ದಂಡ, ಅಸನ, ವತ್ಸದಂತ, ವರಾಹಕರ್ಣ, ವಿಪಾಠ, ಶೃಂಗ–ಇವೇ ಮುಂತಾದ ಆಯುಧಗಳಿಂದ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಾ, ಕ್ಷುರಪ್ರಗಳನ್ನು ಒಬ್ಬರು ಮತ್ತೊಬ್ಬರ ಮೇಲೆ ಸುರಿಸುತ್ತಾ, ಆ ಘೋರ ಶಬ್ದದಿಂದ ಆಕಾಶದಲ್ಲಿ ಪ್ರತಿಧ್ವನಿಯನ್ನುಂಟುಮಾಡುತ್ತಿದ್ದರು. ನರ-ರಾಕ್ಷಸ ರಿಬ್ಬರೂ ಬಿಡುತ್ತಿದ್ದ ಧಾರಾಸಮಾನವಾದ (ಅವಿಚ್ಛಿನ್ನವಾದ) ಬಾಣಗಳಿಂದ ಆಕಾಶವೇ ತುಂಬಿಹೋಯಿತು. ಆ ಸಮಯದಲ್ಲಿ ಎರಡೂ ಕಡೆಗಳ ಬಾಣಗಳು ಮಧ್ಯದಲ್ಲಿ ಸಂಘರ್ಷಿತವಾಗಿ ಪುನಃ ಹಿಂದಕ್ಕೆ ಹೋಗುತ್ತಿದ್ದುವು. ಸುವರ್ಣದ ಮೂಲಭಾಗಗಳನ್ನು ಹೊಂದಿ ಪ್ರಜ್ವಲಿಸುವ ಪ್ರಭೆಯಿಂದ ಕೂಡಿದ್ದ ಆ ಬಾಣಗಳ ಸಾಲುಗಳು ವಿಚಿತ್ರಪುಷ್ಪಯುಕ್ತವಾದ ಮಾಲೆಗಳಂತೆಯೇ ಕಾಣುತ್ತಿದ್ದು ಅಂತಹ ಮಾಲೆಗಳಿಂದ ಆಕಾಶವು ಸಮಲಂಕೃತವಾಗಿರುವಂತೆ ಕಾಣುತ್ತಿದ್ದಿತು. ಇಬ್ಬರು ಯೋಧರೂ ಒಬ್ಬರು ಮತ್ತೊಬ್ಬರನ್ನು ಜಯಿಸ ಬೇಕೆಂಬುವುದರಲ್ಲಿಯೇ ಏಕಾಗ್ರಚಿತ್ತರಾಗಿದ್ದರು. ಅಪ್ರತಿಮವಾದ, ಅಸಾಧಾರಣವಾದ ಪ್ರಭಾವವುಳ್ಳವರಾಗಿದ್ದರು. ಉತ್ತಮಾಸ್ತ್ರಗಳಿಂದ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದರು. ಆ ಇಬ್ಬರು ವೀರೋತ್ತಮರಲ್ಲಿ ಯಾವನೊಬ್ಬನೂ ಸಹ ತಾನೇ ಹೆಚ್ಚು ಪ್ರಭಾವಶಾಲಿಯೆಂಬುದನ್ನು ತೋರಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಇಬ್ಬರ ಪರಾಕ್ರಮವು ಸಮ-ಸಮ ವಾಗಿಯೇ ಇದ್ದಿತು. ಸೂರ್ಯನ ಮಗನಾದ ಕರ್ಣನಿಗೂ ಮತ್ತು ಭೀಮನ ಮಗನಾದ ಘಟೋತ್ಕಚನಿಗೂ ನಡೆಯುತ್ತಿದ್ದ ಆ ಮಹಾಯುದ್ಧವು ಅತಿವಿಚಿತ್ರ ವಾಗಿದ್ದಿತು. ಅದಕ್ಕೆ ಸಮಾನವಾದ ಯುದ್ಧವು ಹಿಂದೆ ನಡೆದೇ ಇರಲಿಲ್ಲ. ಶಸ್ತ್ರ

ಗಳ ಪರಸ್ಪರಪ್ರಹಾರಗಳಿಂದ ಬಹಳ ಘೋರವಾಗಿದ್ದ ಆ ಮಹಾಯುದ್ಧವು ಆಕಾಶದಲ್ಲಿ ನಡೆಯುವ ರಾಹು-ಸೂರ್ಯರ ಭಯಂಕರಯುದ್ಧದಂತೆಯೇ ಕಾಣುತ್ತಿದ್ದಿತು. ಮಹಾರಾಜ! ಘಟೋತ್ಕಚನನ್ನು ಸಾಧಾರಣವಾದ ಬಾಣಗಳ ಪ್ರಯೋಗಗಳಿಂದ ಅತಿಶಯಿಸಿಲು ಕರ್ಣನಿಗೆ ಯಾವಾಗ ಸಾಧ್ಯವಾಗ ಲಿಲ್ಲವೋ–ಆಗ ಅಸ್ತ್ರವಿದರಲ್ಲಿ ಶ್ರೇಷ್ಠನಾದ ಕರ್ಣನು ಭಯಂಕರವಾದ ಅಸ್ತ್ರ ವನ್ನು ಪ್ರಕಟಿಸಿದನು. ಆ ಮಹಾಸ್ತ್ರದಿಂದ ಕರ್ಣನು ಅಶ್ವ-ಸಾರಥಿಗಳಿಂದ ಯುಕ್ತವಾಗಿದ್ದ ಘಟೋತ್ಕಚನ ರಥವನ್ನು ಧ್ವಂಸಮಾಡಿದನು. ರಥಹೀನನಾದ ಘಟೋತ್ಕಚನು ಒಡನೆಯೇ ಕಣ್ಣಿಗೆ ಕಾಣಿಸದೇ ಹೋದನು."

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಕೂಟಯೋಧಿಯಾದ (ಕಪಟದಿಂದ ಅಥವಾ ಮಾಯೆ ಯಿಂದ ಯುದ್ಧಮಾಡುವ) ರಾಕ್ಷಸನು ಕಣ್ಣಿಗೆ ಕಾಣಿಸದೇ ಇರುವಾಗ ನನ್ನ ಮಕ್ಕಳು ಯಾವ ಮಾರ್ಗವನ್ನು ಅನುಸರಿಸಿ ಯುದ್ಧಮಾಡಿದರೆಂಬುದನ್ನು ಹೇಳು."

ಮಹಾರಾಜ! ರಾಕ್ಷಸೇಂದ್ರನು ಅಂತರ್ಹಿತನಾದನೆಂಬುದನ್ನು ತಿಳಿದು ಎಲ್ಲ ಕುರುಗಳೂ ಗಟ್ಟಿಯಾಗಿ ಕೂಗಿಕೊಂಡರು. "ಕೂಟಯೋಧಿಯಾದ ಈ ರಾಕ್ಷಸನು ಅದೃಶ್ಯನಾಗಿಯೇ ಇದ್ದು ಕರ್ಣನನ್ನು ಸಂಹರಿಸದೇ ಇರು ವನೇ?"–ಎಂದೇ ಅವರು ಬಗೆದರು.

ಅನಂತರ ಶೀಘ್ರವಾಗಿ ವಿಚಿತ್ರಗತಿಯಿಂದ ಅಸ್ತ್ರಯುದ್ಧವನ್ನು ಮಾಡಲು ಸಮರ್ಥನಾದ ಕರ್ಣನು ಎಲ್ಲ ದಿಕ್ಕುಗಳನ್ನೂ ಬಾಣಗಳ ಸಮೂಹಗಳಿಂದ ಮುಚ್ಚಿದನು. ಬಾಣಗಳ ಸಮೂಹಗಳಿಂದ ಅಂತರಿಕ್ಷವು ಕತ್ತಲಿನ ಸ್ವರೂಪ ವನ್ನು ತಾಳಿತು. ಆ ಸಮಯದಲ್ಲಿ ಯಾವುದೇ ಪ್ರಾಣಿಯೂ ಆ ಕತ್ತಲಿನಲ್ಲಿ ಸಂಚರಿಸುತ್ತಿರಲಿಲ್ಲ. ಸೂತಪುತ್ರನು ಆಕಾಶವನ್ನು ಬಾಣಗಳಿಂದ ತುಂಬುತ್ತಿದ್ದ ಸಮಯದಲ್ಲಿ ಅವನ ಕೈಚಳಕದ ಕಾರಣದಿಂದ ಅವನು ಬಾಣಗಳನ್ನು ಬತ್ತಳಿಕೆಯಿಂದ ತೆಗೆಯುವುದಾಗಲೀ, ಧನುಸ್ಸಿನಲ್ಲಿ ಅನುಸಂಧಾನ ಮಾಡುವುದಾಗಲೀ, ಕೈಯಿನ ಅಗ್ರಭಾಗದಿಂದ ಬಾಣದೊಡನೆ ಶಿಂಜಿನಿಯನ್ನು ಆಕರ್ಣವಾಗಿ ಸೆಳೆದು ಬಾಣಬಿಡುವುದಾಗಲೀ–ಕಾಣುತ್ತಲೇ ಇರಲಿಲ್ಲ.

ಅನಂತರ ನಾವು ರಾಕ್ಷಸನಿಂದ ನಿರ್ಮಿತವಾದ ದಾರುಣವಾದ ಘೋರವಾದ ಮಾಯೆಯನ್ನು ಅಂತರಿಕ್ಷದಲ್ಲಿ ನೋಡಿದೆವು. ಮೊದಲು ನಾವು ಅಂತರಿಕ್ಷ ದಲ್ಲಿ ಅಗ್ನಿಯ ಜ್ವಾಲೆಗಳೋಪಾದಿಯಲ್ಲಿ ದೇದೀಪ್ಯಮಾನವಾಗಿ ಕಾಣುತ್ತಿದ್ದ, ಉಗ್ರವಾದ, ಕೆಂಪಾದ ಬಣ್ಣದಿಂದ ಕೂಡಿದ್ದ ಮೋಡಗಳ ಪ್ರಕಾಶವನ್ನು ಕಂಡೆವು. ಆ ಕೆಂಪಾದ ಮುಗಿಲಿನಲ್ಲಿ ವಿದ್ಯುತ್ತು ಪ್ರಾದುರ್ಭವಿಸಿತು. ಪ್ರಜ್ವಲಿ ಸುತ್ತಿದ್ದ ಉಲ್ಕೆಗಳೂ ಕಾಣಿಸಿಕೊಂಡುವು. ಒಂದು ಸಾವಿರ ದುಂದುಭಿಗಳು ಏಕಕಾಲದಲ್ಲಿ ಮೊಳಗುತ್ತಿದ್ದರೆ ಉಂಟಾಗುವಂತಹ ಭಯಂಕರವಾದ ಶಬ್ದವೂ ಅಲ್ಲಿ ಹುಟ್ಟಿತು. ಅನಂತರ ಅದೇ ರಕ್ತಮೇಘದಿಂದ ಚಿನ್ನದ ಮೂಲ ಭಾಗವನ್ನು ಹೊಂದಿದ್ದ ಬಾಣಗಳು ಬೀಳತೊಡಗಿದುವು. ಅಷ್ಟು ಮಾತ್ರ ವಲ್ಲದೇ–ಶಕ್ತ್ಯಾಯುಧ, ಋಷ್ಟಿ, ಪ್ರಾಸ, ಮುಸಲ, ಗಂಡುಗೊಡಲಿ, ಎಣ್ಣೆ ಯಲ್ಲಿ ಹದಮಾಡಿದ್ದ ಕತ್ತಿಗಳು, ಪ್ರದೀಪ್ತವಾದ ಅಲಗುಗಳನ್ನು ಹೊಂದಿದ್ದ ತೋಮರಗಳು, ಪಟ್ಟಿಶಗಳು, ಕಿರಣಗಳಿಂದ ಕೂಡಿದ್ದ ಪರಿಘಾಯುಧಗಳು, ಲೋಹದಿಂದ ಬದ್ಧವಾದ ವಿಚಿತ್ರವಾದ ಗದೆಗಳು, ನಿಶಿತವಾದ ಅಲಗು ಗಳುಳ್ಳ ಶೂಲಗಳು, ಸುವರ್ಣದ ಪಟ್ಟೆಯನ್ನು ಹೊಂದಿದ್ದ ಭಾರವಾದ ಗದೆಗಳು ಮತ್ತು ಶತಘ್ನಿಗಳು ನಾಲ್ಕು ದಿಕ್ಕುಗಳಲ್ಲಿಯೂ ಕಾಣಿಸಿಕೊಂಡುವು. ಅಲ್ಲಲ್ಲಿ ದೊಡ್ಡ-ದೊಡ್ಡ ಬಂಡೆಗಳೂ ಬಿದ್ದುವು. ಮಿಂಚಿನೊಡನೆ ಸಾವಿರಾರು ಸಿಡಿಲುಗಳೂ ಬಿದ್ದುವು. ಉಜ್ಜ್ವಲವಾದ ಪ್ರಭೆಯನ್ನು ಹೊಂದಿದ್ದ ಚಕ್ರಗಳೂ ಮತ್ತು ನೂರಾರು ಸಾವಿರಾರು ಕ್ಷುರಗಳೂ ಕಾಣಿಸಿಕೊಂಡುವು. ಶಕ್ತ್ಯಾಯುಧ, ದೊಡ್ಡ-ದೊಡ್ಡ ಬಂಡೆಗಳು, ಗಂಡುಗೊಡಲಿಗಳು, ಪ್ರಾಸಗಳು, ಖಡ್ಗಗಳು, ಸಿಡಿಲುಗಳು, ವಿದ್ಯುತ್ತುಗಳು ಮತ್ತು ಮುದ್ಗರಗಳು–ಇವುಗಳು ವ್ಯಾಪಕವಾದ ರಣಾಂಗಣದ ಮೇಲೆ ಸುರಿಯುತ್ತಿರುವ ಉಜ್ಜ್ವಲ ವೃಷ್ಟಿಯನ್ನು ಅನೇಕಬಾಣಗಳ ಸಮೂಹಗಳಿಂದಲೂ ನಾಶಮಾಡಲು ಕರ್ಣನಿಗೆ ಸಾಧ್ಯವಾಗಲಿಲ್ಲ. ಬಾಣಗಳ ಪ್ರಹಾರಗಳಿಂದ ಕೆಳಕ್ಕೆ ಬೀಳುತ್ತಿದ್ದ ಕುದುರೆಗಳ, ಸಿಡಿಲಿನ ಪ್ರಹಾರಗಳಿಂದ ಕೆಳಕ್ಕೆ ಬೀಳುತ್ತಿರುವ ಆನೆಗಳ ಮತ್ತು ಕಲ್ಲುಬಂಡೆಗಳ ಪ್ರಹಾರಗಳಿಂದ ಕೆಳಗೆ ಬೀಳುತ್ತಿರುವ ಮಹಾ ರಥರ ಘೋರವಾದ ಆರ್ತನಾದಗಳುಂಟಾದುವು. ಘಟೋತ್ಕಚನ ಮಾಯೆಯಿಂದ ಪ್ರಮುಕ್ತವಾದ ಭಯಂಕರವಾದ ನಾನಾವಿಧವಾದ ಶಸ್ತ್ರ

ಪಾತಗಳಿಂದ ರಣಾಂಗಣದ ಸುತ್ತಲೂ ದುರ್ಯೋಧನನ ಸೈನ್ಯವು ದೈನ್ಯದಿಂದ ಓಡಾಡುತ್ತಲೂ ಮತ್ತು ಸುತ್ತುತ್ತಲೂ ಇದ್ದುದು ಕಂಡುಬಂದಿತು.

ನಿನ್ನ ಸೈನ್ಯದಲ್ಲಿದ್ದ ಸಾಧಾರಣಸೈನಿಕರು ವಿಷಣ್ಣವದನರಾಗಿ ಹಾಹಾ ಕಾರಮಾಡುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುತ್ತಾ ನಿಗೂಢಸ್ಥಳವು ಸಿಕ್ಕಿದಲ್ಲಿ ಆಯುಧಗಳ ಪ್ರಹಾರಗಳಿಂದ ತಪ್ಪಿಸಿಕೊಳ್ಳಲು ಬಚ್ಚಿಟ್ಟು ಕೊಳ್ಳುತ್ತಾ ಇದ್ದರು. ಆದರೆ ಪುರುಷಶ್ರೇಷ್ಠರಾದ ಉತ್ತಮಯೋಧರು ಆರ್ಯಭಾವವನ್ನೇ ಹೊಂದಿದ್ದ ಕಾರಣದಿಂದ (ಆರ್ಯರ ಧರ್ಮವನ್ನೇ ಅನುಸರಿಸುತ್ತಿದ್ದ ಕಾರಣದಿಂದ) ಅಂತಹ ದಾರುಣವಾದ ಸಮಯದಲ್ಲಿಯೂ ಪರಾಙ್ಮುಖರಾಗಲಿಲ್ಲ. ರಾಕ್ಷಸನ ಸಂಬಂಧವಾದ ಭಯಂಕರರೂಪದ, ಸುಘೋರವಾದ, ಮಹಾಶಸ್ತ್ರಮಯವಾದ ವೃಷ್ಟಿಯು ಸತತವಾಗಿ ಬೀಳು ತ್ತಿರುವುದನ್ನೂ ಮತ್ತು ಆ ಶಸ್ತ್ರಗಳ ವೃಷ್ಟಿಯಿಂದ ಸೈನಿಕರು ಅಸುನೀಗಿ ತೊಪ-ತೊಪನೆ ಬೀಳುತ್ತಿರುವುದನ್ನೂ ನೋಡಿ ನಿನ್ನ ಮಕ್ಕಳ ಮನಸ್ಸಿನಲ್ಲಿ ಭಯವು ಆವರಿಸಿತು. ಅಗ್ನಿಗೆ ಸಮಾನವಾಗಿ ಪ್ರಜ್ವಲಿಸುವ ನಾಲಿಗೆಗಳನ್ನು ಹೊಂದಿದ್ದ, ಭಯಂಕರವಾಗಿ ಶಬ್ದಮಾಡುತ್ತಿದ್ದ ನೂರಾರು ಗುಳ್ಳೇನರಿಗಳ ಚೀತ್ಕಾರಗಳನ್ನೂ ಕೇಳಿ, ರಾಕ್ಷಸಗಣಗಳು ರಣಾಂಗಣದಲ್ಲಿ ಗರ್ಜಿಸುತ್ತಿರುವು ದನ್ನೂ ನೋಡಿ, ನಿನ್ನ ಕಡೆಯ ಯೋಧರೆಲ್ಲರೂ ಬಹಳ ವ್ಯಥಿತರಾದರು. ಪರ್ವತಸದೃಶವಾದ ಶರೀರಗಳನ್ನು ಹೊಂದಿದ್ದ, ಪ್ರದೀಪ್ತವಾದ ಅಗ್ನಿಗೆ ಸಮಾನವಾದ ನಾಲಿಗೆಗಳನ್ನೂ–ತೀಕ್ಷ್ಣವಾದ ಕೋರೆಹಲ್ಲುಗಳನ್ನೂ ಹೊಂದಿದ್ದ, ಭಯಂಕರವಾದ ಆಕಾರಗಳನ್ನು ಹೊಂದಿದ್ದ, ಘಟೋತ್ಕಚನ ಅನುಯಾಯಿಗಳಾದ ರಾಕ್ಷಸರು ಶಕ್ತ್ಯಾಯುಧಗಳನ್ನು ಕೈಗಳಲ್ಲಿ ಹಿಡಿದು ಆಕಾಶಕ್ಕೆ ಹಾರಿ ಮೇಘಗಳು ಮಳೆಗರೆಯುವಂತೆ ಉಗ್ರವಾದ ಆಯುಧಗಳ ವೃಷ್ಟಿಯನ್ನು ದುರ್ಯೋಧನನ ಸೈನಿಕರ ಮೇಲೆ ಸುರಿಸುತ್ತಿದ್ದರು. ಆ ರಾಕ್ಷಸರು ಅವ್ಯಾಹತವಾಗಿ ಸುರಿಸುತ್ತಿದ್ದ ಬಾಣ, ಶಕ್ತಿ, ಶೂಲ, ಗದೆ, ಪ್ರಜ್ವಲಿಸುತ್ತಿದ್ದ ಪರಿಘ, ವಜ್ರ, ಪಿನಾಕ, ವಿದ್ಯುತ್, ಶತಘ್ನೀ, ಚಕ್ರ–ಇವೇ ಮುಂತಾದ ಅಸ್ತ್ರಗಳಿಂದ ಸಮ್ಮರ್ದಿತರಾದ ಯೋಧರು ಅಸುನೀಗಿ ಕೆಳಗುರುಳಿದರು. ಆ ರಾಕ್ಷಸರು ನಿನ್ನ ಸೈನಿಕರ ಮೇಲೆ ಶೂಲಗಳನ್ನೂ, ಭುಶುಂಡಿಗಳನ್ನೂ, ಕಲ್ಲುಬಂಡೆಗಳನ್ನೂ, ಶತಘ್ನಿಗಳನ್ನೂ, ಕಬ್ಬಿಣದ ಪಟ್ಟಿ

ಗಳಿಂದ ಕೂಡಿದ್ದ ಸ್ಥೂಣಗಳನ್ನೂ (ಕಂಬಗಳನ್ನೂ) ಅವ್ಯಾಹತವಾಗಿ ಸುರಿಸುತ್ತಿದ್ದರು. ಅನಂತರ ನಿನ್ನ ಸೈನ್ಯದಲ್ಲಿ ಭಯಂಕರವಾದ ಸಂಕಟವು ಪ್ರಾಪ್ತವಾಯಿತು. ಕಲ್ಲುಬಂಡೆಗಳ ಸುರಿಯುವಿಕೆಯಿಂದಾಗಿ ನಿನ್ನ ಸೈನ್ಯದ ಅನೇಕಯೋಧರ ತಲೆಗಳು ಒಡೆದುಹೋಗಿದ್ದುವು. ಅಂಗಾಂಗಗಳೆಲ್ಲವೂ ಮುರಿದುಹೋಗಿದ್ದುವು. ಕರುಳುಗಳು ಹೊರಬಂದಿದ್ದುವು. ಅಂತಹ ಸ್ಥಿತಿಯಲ್ಲವರು ಗತಪ್ರಾಣರಾಗಿ ರಣಾಂಗಣದಲ್ಲಿ ಮಲಗಿದ್ದರು. ಕಲ್ಲಿನ ಮಳೆಯಿಂದ ಕುದುರೆಗಳೂ ಛಿನ್ನ-ಭಿನ್ನವಾಗಿದ್ದುವು. ಆನೆಗಳೂ ಭಗ್ನವಾಗಿ ಹೋಗಿದ್ದುವು. ರಥಗಳೂ ನುಚ್ಚುನೂರಾಗಿದ್ದುವು. ಘಟೋತ್ಕಚನ ಮಾಯೆಯಿಂದ ಹುಟ್ಟಿದ್ದ ಘೋರರೂಪವಾದ ರಾಕ್ಷಸರು ದೊಡ್ಡದಾದ ಆಯುಧಗಳ ಮಳೆಯನ್ನೇ ಸೃಷ್ಟಿಸುತ್ತಾ ಭೂಮಿಯಲ್ಲಿ ಭಯಗೊಂಡು ಓಡುತ್ತಿದ್ದವರನ್ನಾಗಲೀ ಪ್ರಾಣಭಿಕ್ಷೆಯನ್ನು ಬೇಡುತ್ತಿದ್ದವರನ್ನಾಗಲೀ ಬಿಡುತ್ತಿರಲಿಲ್ಲ. ಅವರನ್ನೂ ಬಿಡದೇ ಸಂಹರಿಸುತ್ತಿದ್ದರು.

ಕುರುವೀರವಿನಾಶಕವಾದ, ಕ್ಷತ್ರಿಯಾಂತಕವಾದ, ಕಾಲಪುರುಷ ನಿಂದಲೇ ನಿಯೋಜಿತವಾದ ಆ ಘೋರಸಂಗ್ರಾಮದಲ್ಲಿ ಭಗ್ನೋತ್ಸಾಹರಾದ ಎಲ್ಲ ಕೌರವಯೋಧರೂ ಚೀತ್ಕಾರಮಾಡುತ್ತಾ ಓಡಿಹೋದರು.

**ಪಲಾಯಧ್ವಂ ಕುರುವೋ ನೈತದಸ್ತಿ ।**
**ಸೇನ್ದ್ರಾ ದೇವಾ ಘ್ನನ್ತಿ ನಃ ಪಾಣ್ಡವಾರ್ಥೇ ॥೪೧॥**

"ಕುರುಯೋಧರೇ! ಪಲಾಯನಮಾಡಿರಿ! ಯಾವುದೇ ಕಾರಣ ದಿಂದಲೂ ಕುರುಸೇನೆಯು ಇನ್ನು ಉಳಿಯಲಾರದು. ಪಾಂಡವರ ಸಲುವಾಗಿ ಇಂದ್ರಸಹಿತರಾದ ದೇವತೆಗಳೇ ನಮ್ಮನ್ನು ಸಂಹರಿಸುತ್ತಿದ್ದಾರೆ" ಹೀಗೆಂಬು ದಾಗಿ ಹೇಳಿಕೊಂಡು ಘಟೋತ್ಕಚನ ಮಾಯಾಸಾಗರದಲ್ಲಿ ಮುಳುಗಿ ಹೋಗುತ್ತಿದ್ದ ಭಾರತೀಸೈನಿಕರಿಗೆ ಆ ಸಮಯದಲ್ಲಿ ಸೂತಪುತ್ರನಾದ ಕರ್ಣನು ಸಮುದ್ರಮಧ್ಯದಲ್ಲಿ ಆಶ್ರಯನೀಡುವ ದ್ವೀಪವಾಗಿ ಪರಿಣಮಿಸಿ ದನು. ಮಹಾರಾಜ! ಅತಿಭಯಂಕರವಾದ ಆ ಯುದ್ಧವು ನಡೆಯುತ್ತಿರು ವಾಗ, ಕೌರವರ ಸೈನ್ಯವು ಭಗ್ನವಾಗಿ ರಕ್ಷಣೆಗಾಗಿ ಸಿಕ್ಕಿದ ಸ್ಥಳಗಳಲ್ಲಿ ಅಡಗಿ ಕೊಳ್ಳುತ್ತಿರುವಾಗ, ಸೈನ್ಯಗಳ ಪ್ರತ್ಯೇಕ-ಪ್ರತ್ಯೇಕ ವಿಭಾಗವು ಸ್ವಲ್ಪವಾದರೂ

ಕಾಣದಿದ್ದ ಆ ಸಮಯದಲ್ಲಿ ಕೌರವರಿಗಾಗಲೀ-ಪಾಂಡವರಿಗಾಗಲೀ ಯಾರು ಎಲ್ಲಿದ್ದಾರೆ? ಏನು ಮಾಡುತ್ತಿದ್ದಾರೆ?–ಎಂಬ ಯಾವ ವಿಷಯವೂ ತಿಳಿಯುತ್ತಿರಲಿಲ್ಲ. ಭಯಂಕರರೂಪವನ್ನು ತಾಳಿದ್ದ ಆ ಸಮಯದಲ್ಲಿ ಯುದ್ಧ ಮರ್ಯಾದೆಯನ್ನೇ ಮೀರಿ ಪಲಾಯನಮಾಡುತ್ತಿದ್ದ ಸೈನಿಕರೆಲ್ಲರೂ ಶೂನ್ಯ ದೃಷ್ಟಿಯಿಂದ ಎಲ್ಲ ದಿಕ್ಕುಗಳನ್ನೂ ನೋಡುತ್ತಿದ್ದರು. ವಕ್ಷಃಸ್ಥಳವನ್ನು ಮುಂದೆಮಾಡಿಕೊಂಡು ಅಂತಹ ಅಪಾರವಾದ ಶಸ್ತ್ರವೃಷ್ಟಿಯನ್ನೂ ದಾಟಲು ಪ್ರಯತ್ನಿಸುತ್ತಿದ್ದ ಏಕಮಾತ್ರ ಕರ್ಣನನ್ನು ಆ ಸಮಯದಲ್ಲಿ ಕೌರವರು ನೋಡಿದರು. ರಾಕ್ಷಸನ ದಿವ್ಯಮಾಯೆಯೊಡನೆ ಯುದ್ಧಮಾಡುತ್ತಾ ಲಜ್ಜಾಶೀಲನಾದ ಕರ್ಣನು ತನ್ನ ಬಾಣಗಳಿಂದ ಅಂತರಿಕ್ಷವನ್ನು ಮುಚ್ಚಿದನು. ಯುದ್ಧದಲ್ಲವನು ಶ್ರೇಷ್ಠರಾದ ವೀರರಿಗೆ ಉಚಿತವಾದ ದುಷ್ಕರವಾದ ಕರ್ಮವನ್ನು ಮಾಡುತ್ತಿರುವಾಗ ಮೋಹಪರವಶನಾಗಲಿಲ್ಲ. ಮಹಾರಾಜ! ಎಲ್ಲ ಸೈಂಧವಸೈನಿಕರೂ ಮತ್ತು ಬಾಹ್ಲಿಕಸೈನಿಕರೂ ರಾಕ್ಷಸನು ವಿಜಯ ಗಳಿಸುತ್ತಿರುವುದನ್ನು ನೋಡುತ್ತಾ ಭಯಗೊಂಡಿದ್ದರೂ ಅಂತಹ ಸಂದರ್ಭ ದಲ್ಲಿಯೂ ಕರ್ಣನು ಮೋಹಪರವಶನಾಗದಿರುವುದನ್ನು ಕಂಡು ಅವನನ್ನು ಬಹಳವಾಗಿ ಶ್ಲಾಘಿಸಿದರು. ಆ ಸಮಯದಲ್ಲಿ ಘಟೋತ್ಕಚನು ಪ್ರಯೋಗಿಸಿದ ಚಕ್ರಯುಕ್ತವಾದ ಶತಘ್ನಿಯು ಕರ್ಣನ ರಥದಲ್ಲಿದ್ದ ನಾಲ್ಕು ಕುದುರೆಗಳನ್ನೂ ಒಂದೇ ಬಾರಿಗೆ ಕೊಂದಿತು. ಆ ಕುದುರೆಗಳ ಹಲ್ಲುಗಳೂ, ಕಣ್ಣು ಗಳೂ ಮತ್ತು ನಾಲಿಗೆಗಳೂ ಹೊರಚಾಚಿದ್ದುವು. ಅದನ್ನು ನೋಡಿದ ಕುರುಯೋಧರೆಲ್ಲರೂ ಓಡಿಹೋಗುತ್ತಿರಲಾಗಿ, ತಾನು ಬಿಟ್ಟ ದಿವ್ಯಾಸ್ತ್ರಗಳೆಲ್ಲವೂ ಘಟೋತ್ಕಚನ ಮಾಯೆಯಿಂದ ವಿನಾಶಹೊಂದುತ್ತಿರಲಾಗಿ, ಕರ್ಣನು ಕುದುರೆಗಳಿಂದ ವಿಹೀನವಾಗಿದ್ದ ರಥದಿಂದಿಳಿದು, ಆ ಸಮಯದಲ್ಲಿ ತಾನು ಮಾಡಬೇಕಾದ ಕರ್ತವ್ಯದ ವಿಷಯವಾಗಿ ತನ್ನಲ್ಲಿಯೇ ಚಿಂತಿಸುತ್ತಿದ್ದನು. ಆ ಸಮಯದಲ್ಲಿ ಅವನು ವಿಮೂಢನಾಗಲಿಲ್ಲ. ಮಹಾರಾಜ! ಘೋರರೂಪವಾದ ಆ ಮಾಯೆಯನ್ನೂ ಮತ್ತು ಕರ್ಣನನ್ನೂ ನೋಡಿ ಎಲ್ಲ ಕುರುಗಳೂ ಒಕ್ಕೊರಲಿನಿಂದ ಕರ್ಣನನ್ನು ಸಂಬೋಧಿಸಿ ಹೇಳಿದರು :

ಶಕ್ತ್ಯಾ ರಕ್ಷೋ ಜಹಿ ಕರ್ಣಾದ್ಯ ತೂರ್ಣಂ
ನಶ್ಯನ್ತ್ಯೇತೇ ಕುರವೋ ಧಾರ್ತರಾಷ್ಟ್ರಾಃ ॥೪೮॥

**ಕರಿಷ್ಯತಃ ಕಿಞ್ಚನೋ ಭೀಮಪಾರ್ಥೌ**
**ತಪನ್ತಮೇನಂ ಜಹಿ ಪಾಪಂ ನಿಶೀಥೇ ।**
**ಯೋ ನಃ ಸಂಗ್ರಾಮಾದ್ಘೋರರೂಪಾದ್ವಿಮುಚ್ಯೇ-**
**ತ್ಸನಃ ಪಾರ್ಥಾನ್ಸಬಲಾನ್ಯೋಧಯೇತ ॥೬೯॥**

“ಕರ್ಣ! ನಿನ್ನಲ್ಲಿರುವ ಇಂದ್ರನ ಶಕ್ತ್ಯಾಯುಧದಿಂದ ಈ ರಾಕ್ಷಸನನ್ನು ಕೂಡಲೇ ಸಂಹರಿಸು. ಹಾಗೇನಾದರೂ ನೀನಿವನನ್ನು ಸಂಹರಿಸದಿದ್ದರೆ ಧೃತರಾಷ್ಟ್ರನ ಎಲ್ಲ ಮಕ್ಕಳೂ ಮತ್ತು ಕುರುಯೋಧರೂ ಇವನಿಂದಲೇ ವಿನಾಶಹೊಂದುತ್ತಾರೆ. ಇವನು ಮಾಡುತ್ತಿರುವ ಅಗಾಧವಾದ ಈ ಸಂಹಾರ ಕ್ರಿಯೆಯೊಡನೆ ಹೋಲಿಸಿದ್ದೇ ಆದರೆ ಭೀಮ-ಪಾರ್ಥರು ಇದಕ್ಕಿಂತಲೂ ಹೆಚ್ಚಿನದನ್ನು ಮಾಡಲಾರರು. ಆದುದರಿಂದ ನಮ್ಮನ್ನು ಸತತವಾಗಿ ಸುಡುತ್ತಿರುವ ಈ ಪಾಪಿಷ್ಠನನ್ನು ಈ ರಾತ್ರಿಯಲ್ಲಿಯೇ ಸಂಹರಿಸು. ನಮ್ಮಲ್ಲಿ ಯಾವನು ನಮ್ಮನ್ನು ಘೋರರೂಪವಾದ ಈ ಸಂಗ್ರಾಮದಿಂದ ವಿಮೋಚನೆಗೊಳಿಸುತ್ತಾನೆಯೋ–ಅವನೇ ಸಸೈನ್ಯರಾದ ಪಾರ್ಥರೊಡನೆ ಯುದ್ಧಮಾಡಲು ಸಮರ್ಥನು.

**ತಸ್ಮಾದೇನಂ ರಾಕ್ಷಸಂ ಘೋರರೂಪಂ**
**ಶಕ್ತ್ಯಾ ಜಹಿ ತ್ವಂ ದತ್ತಯಾ ವಾಸವೇನ ।**
**ಮಾ ಕೌರವಾಃ ಸರ್ವ ಏವೇನ್ದ್ರಕಲ್ಪಾ**
**ರಾತ್ರಿಯುದ್ಧೇ ಕರ್ಣ ನೇಶುಃ ಸಯೋಧಾಃ ॥೭೦॥**

ಕರ್ಣ! ಆದುದರಿಂದ ಇಂದ್ರನು ದಯಪಾಲಿಸಿರುವ ಶಕ್ತ್ಯಾಯುಧದಿಂದ ಘೋರರೂಪನಾದ ಈ ರಾಕ್ಷಸನನ್ನು ಈಗಲೇ ಸಂಹರಿಸು. ಇಂದ್ರಸದೃಶರಾದ ಎಲ್ಲ ಕೌರವರೂ ರಾತ್ರಿಯಲ್ಲಿ ನಡೆಯುತ್ತಿರುವ ಈ ಭಯಂಕರಯುದ್ಧದಲ್ಲಿ ತಮ್ಮ ಯೋಧರೊಡನೆ ವಿನಾಶಹೊಂದದಿರಲಿ.”

ಮಹಾರಾಜ! ಆ ರಾತ್ರಿಯಲ್ಲಿ ಘಟೋತ್ಕಚರಾಕ್ಷಸನಿಂದ ಬಹಳವಾಗಿ ಗಾಯಗೊಳ್ಳುತ್ತಿದ್ದ ಕರ್ಣನು, ಕೌರವರ ಸೈನ್ಯವು ಭಯದಿಂದ ನಡುಗುತ್ತಿರುವುದನ್ನು ನೋಡಿ, ಕೌರವರ ಆಕ್ರಂದನವನ್ನೂ ಕೇಳಿ, ಶಕ್ತಿಯನ್ನು ರಾಕ್ಷಸನ ಮೇಲೆ ಪ್ರಯೋಗಿಸಲು ನಿರ್ಧರಿಸಿದನು. ಪರಮಕ್ರುದ್ಧನಾಗಿದ್ದ, ಸಿಂಹದೋಪಾದಿಯಲ್ಲಿ ಅಸಹನಶೀಲನಾಗಿದ್ದ ಕರ್ಣನು ರಣಾಂಗಣದಲ್ಲಿ ಘಟೋತ್ಕಚನ

ಮೂಲಕವಾಗಿ ತನ್ನ ಅಸ್ತ್ರಗಳಿಗೆ ಉಂಟಾಗುತ್ತಿದ್ದ ಪ್ರತಿಘಾತವನ್ನು ಸಹಿಸಿಕೊಳ್ಳಲಿಲ್ಲ. ಘಟೋತ್ಕಚನನ್ನು ವಧೆಮಾಡಲಿಚ್ಛಿಸಿ ಶ್ರೇಷ್ಠವಾದ, ಶತ್ರುಗಳಿಂದ ಸಹಿಸಿಕೊಳ್ಳಲು ಅಸಾಧ್ಯವಾದ ವೈಜಯಂತೀಶಕ್ತಿಯನ್ನು ಕೈಗೆತ್ತಿಕೊಂಡನು.

ಯಾಸೌ ರಾಜನ್ನಿಹಿತಾ ವರ್ಷಪೂಗಾ-
ನ್ವಧಾಯಾಜೌ ಸತ್ಕೃತಾ ಫಾಲ್ಗುನಸ್ಯ ।
ಯಾಂ ವೈ ಪ್ರಾದಾತ್ಸೂತಪುತ್ರಾಯ ಶಕ್ರಃ
ಶಕ್ತಿಂ ಶ್ರೇಷ್ಠಾಂ ಕುಣ್ಡಲಾಭ್ಯಾಂ ನಿಮಾಯ ॥೫೩॥

ತಾಂ ವೈ ಶಕ್ತಿಂ ಲೇಲಿಹಾನಾಂ ಪ್ರದೀಪ್ತಾಂ
ಪಾಶೈರ್ಯುಕ್ತಾಮನ್ತಕಸ್ಯೇವ ಜಿಹ್ವಾಮ್ ।
ಮೃತ್ಯೋಃ ಸ್ವಸಾರಂ ಜ್ವಲಿತಾಮಿವೋಲ್ಕಾಂ
ವೈಕರ್ತನಃ ಪ್ರಾಹಿಣೋದ್ರಾಕ್ಷಸಾಯ ॥೫೪॥

ಕರ್ಣನು ಯುದ್ಧದಲ್ಲಿ ಅರ್ಜುನನನ್ನು ವಧೆಮಾಡುವ ಸಲುವಾಗಿಯೇ ಅನೇಕ ವರ್ಷಗಳಿಂದ ಆ ಶಕ್ತ್ಯಾಯುಧವನ್ನು ಪೂಜಿಸುತ್ತಾ ಜಾಗರೂಕತೆಯಿಂದ ಇಟ್ಟುಕೊಂಡಿದ್ದನು. ಕರ್ಣನಲ್ಲಿದ್ದ ಶ್ರೇಷ್ಠವಾದ ಕುಂಡಲಗಳಿಗೆ ವಿನಿಮಯರೂಪವಾಗಿ ಆ ಶಕ್ತಿಯನ್ನು ಇಂದ್ರನು ಸೂತಪುತ್ರನಿಗೆ ಅನುಗ್ರಹಿಸಿಕೊಟ್ಟಿದ್ದನು. ಎಲ್ಲರ ಜೀವಗಳನ್ನೂ ಆಸ್ವಾದಿಸುವ, ಯಮರಾಜನ ನಾಲಿಗೆಯಂತಿರುವ, ಪ್ರದೀಪ್ತವಾದ, ಪಾಶಗಳಿಂದ ಯುಕ್ತವಾದ, ಮೃತ್ಯುವಿನ ತಂಗಿಯಂತಿದ್ದ, ಉಲ್ಕೆಯಂತೆ ಪ್ರಜ್ವಲಿಸುತ್ತಿದ್ದ ಮಹಾಶಕ್ತ್ಯಾಯುಧವನ್ನು ಕರ್ಣನು ಘಟೋತ್ಕಚನ ಮೇಲೆ ಪ್ರಯೋಗಿಸಿದನು.

ಶತ್ರುಗಳ ಶರೀರಗಳನ್ನು ಸೀಳಿಹಾಕುವ ಸಾಮರ್ಥ್ಯವನ್ನು ಹೊಂದಿದ್ದ, ಉತ್ತಮೋತ್ತಮವಾದ, ಪ್ರಜ್ವಲಿಸುತ್ತಿದ್ದ ಶಕ್ತ್ಯಾಯುಧವು ಕರ್ಣನ ಕೈಯಲ್ಲಿದ್ದುದನ್ನು ಕಂಡು ಭೀತನಾದ ರಾಕ್ಷಸನು ತನ್ನ ಶರೀರವನ್ನು ವಿಂಧ್ಯ ಪರ್ವತದಷ್ಟು ದೊಡ್ಡದನ್ನಾಗಿ ಮಾಡಿಕೊಂಡು ಓಡಿಹೋದನು. ಕರ್ಣನ ಬಾಹುಗಳ ಅಂತರದಲ್ಲಿದ್ದ ಇಂದ್ರಶಕ್ತಿಯನ್ನು ನೋಡಿ ಅಂತರಿಕ್ಷದಲ್ಲಿದ್ದ ಪ್ರಾಣಿಗಳು ಭಯದಿಂದ ಕೋಲಾಹಲಶಬ್ದಗಳನ್ನು ಮಾಡಿದುವು. ಬಿರು

ಗಾಳಿಯು ಬೀಸತೊಡಗಿತು. ಆರ್ಭಟದಿಂದ ಸಿಡಿಲು ಭೂಮಿಗೆ ಬಡಿಯಿತು. ಕರ್ಣನಿಂದ ಪ್ರಮುಕ್ತವಾದ ಆ ಶಕ್ತ್ಯಾಯುಧವು ರಾಕ್ಷಸನ ಮಾಯೆಯನ್ನು ಭಸ್ಮೀಭೂತವನ್ನಾಗಿ ಮಾಡಿ ಪ್ರಜ್ವಲಿಸುತ್ತಾ, ರಾಕ್ಷಸನ ವಕ್ಷಃಸ್ಥಳವನ್ನು ಬಹಳ ಆಳದವರೆಗೂ ಭೇದಿಸಿ ಆ ರಾತ್ರಿಯಲ್ಲಿ ಎಲ್ಲ ದಿಕ್ಕುಗಳನ್ನೂ ತನ್ನ



ಪ್ರಭೆಯಿಂದ ಬೆಳಗುತ್ತಾ ಅಂತರಿಕ್ಷವನ್ನು ಪ್ರವೇಶಿಸಿ ನಕ್ಷತ್ರಗಳ ಮಧ್ಯ ಭಾಗಕ್ಕೆ ಹೋಗಿ ವಿಲೀನವಾಯಿತು. ಆ ಹಿಂದೆಯೇ ಕರ್ಣನಿಂದ ಪ್ರಮುಕ್ತ ವಾಗಿದ್ದ ವಿಧ-ವಿಧವಾದ ದಿವ್ಯ, ನಾಗ, ಮಾನುಷ ಮತ್ತು ರಾಕ್ಷಸಗಳೆಂಬ ಅಸ್ತ್ರಗಳ ಸಮೂಹಗಳಿಂದ ಕ್ಷತ-ವಿಕ್ಷತನಾಗಿದ್ದ ರಾಕ್ಷಸನು–ಕರ್ಣನು ಕಡೆಯ

ಬಾರಿ ಪ್ರಯೋಗಿಸಿದ ಶಕ್ರಶಕ್ತಿಯಿಂದ ಪ್ರಹೃತನಾಗಿ ಅನೇಕ ಪ್ರಕಾರವಾಗಿ ಭಯಂಕರವಾಗಿ ಆರ್ತನಾದಮಾಡುತ್ತಾ, ತನಗೆ ಅತ್ಯಂತಪ್ರಿಯವಾಗಿದ್ದ ಪ್ರಾಣಗಳಿಂದ ಪರಿತ್ಯಕ್ತನಾದನು. ಘಟೋತ್ಕಚನು ಕೂಗಿಕೊಳ್ಳುತ್ತಿದ್ದಂತೆಯೇ ಅವನ ಪ್ರಾಣಪಕ್ಷಿಯೂ ಹಾರಿಹೋಯಿತು.

ಮಹಾರಾಜ! ಸಾಯುವ ಸಮಯದಲ್ಲಿಯೂ ಸಹ ಘಟೋತ್ಕಚನು ಶತ್ರುಗಳನ್ನು ಸಂಹರಿಸುವ ಸಲುವಾಗಿಯೇ ಮತ್ತೊಂದು ವಿಚಿತ್ರವಾದ ಆಶ್ಚರ್ಯಕರವಾದ ಕಾರ್ಯವನ್ನೂ ಮಾಡಿದನು.

ಘಟೋತ್ಕಚನು ಶಕ್ತ್ಯಾಯುಧದಿಂದ ಭಿನ್ನವಾದ ಮರ್ಮಸ್ಥಾನ ವುಳ್ಳವನಾಗಿದ್ದರೂ ಪರ್ವತದಂತೆ ಮತ್ತು ಮೇಘದಂತೆ ಬಹಳ ದೊಡ್ಡದಾಗಿ ಬೆಳೆದನು. ರಾಕ್ಷಸೇಂದ್ರನಾದ ಘಟೋತ್ಕಚನು ಈ ರೀತಿಯಲ್ಲಿ ತನ್ನ ಶರೀರ ವನ್ನು ಬಹಳ ದೊಡ್ಡದನ್ನಾಗಿ ಮಾಡಿಕೊಂಡು ಭಿನ್ನದೇಹವುಳ್ಳವನಾಗಿ ಗತಪ್ರಾಣನಾಗಿ ತಲೆಕೆಳಗಾಗಿ ಅಂತರಿಕ್ಷದಿಂದ ಕೆಳಕ್ಕೆ ಬಿದ್ದನು. ಆ ಸಮಯ ದಲ್ಲಿ ಅವನ ಶರೀರವು ಸೆಟೆದುಕೊಂಡಿದ್ದಿತು ಮತ್ತು ನಾಲಿಗೆಯು ಹೊರಚಾಚಿದ್ದಿತು. ಭಯಂಕರಕರ್ಮನಾದ ಘಟೋತ್ಕಚನು ಭಯಂಕರ ವಾಗಿದ್ದ ತನ್ನ ಸ್ವರೂಪವನ್ನು ಮತ್ತಷ್ಟು ದೊಡ್ಡದನ್ನಾಗಿ ಮಾಡಿಕೊಂಡು ಕೆಳಕ್ಕೆ ಬಿದ್ದನು. ಅವನು ಹತನಾದರೂ ಮಹಾಕಾಯನಾಗಿ ಭೂಮಿಯ ಮೇಲೆ ಬಿದ್ದಾಗ ನಿನ್ನ ಸೈನ್ಯದ ಏಕದೇಶವನ್ನು (ಸ್ವಲ್ಪಭಾಗವನ್ನು) ತನ್ನ ಪ್ರಾಣರಹಿತ ವಾದ ದೇಹದಿಂದಲೇ ಧ್ವಂಸಮಾಡಿದನು. ಪಾಂಡವರಿಗೆ ಪ್ರಿಯವನ್ನುಂಟು ಮಾಡುವ ಸಲುವಾಗಿ ಕೆಳಕ್ಕೆ ಬೀಳುತ್ತಿರುವ ಘಟೋತ್ಕಚರಾಕ್ಷಸನು ಪ್ರಾಣಶೂನ್ಯನಾದ ನಂತರವೂ ಬಹಳ ದೊಡ್ಡದಾಗಿ ವರ್ಧಿಸುತ್ತಿದ್ದ ತನ್ನ ಶರೀರದಿಂದ ನಿನ್ನ ಒಂದು ಅಕ್ಷೌಹಿಣೀಸೈನ್ಯವನ್ನು ಬಹಳ ಬೇಗ ಧ್ವಂಸಮಾಡಿದನು.

ಅನಂತರ ಸಿಂಹನಾದಗಳೊಡನೆ ಭೇರೀ, ಶಂಖ, ನಗಾರಿ ಮತ್ತು ಆನಕ ಇವೇ ಮೊದಲಾದ ರಣವಾದ್ಯಗಳು ಮೊಳಗಿದುವು. ರಾಕ್ಷಸನ ಮಾಯೆಯು ಭಸ್ಮೀಭೂತವಾದುದನ್ನೂ, ರಾಕ್ಷಸನು ಹತನಾದುದನ್ನೂ ಕಂಡು ಪರಮಹೃಷ್ಟರಾದ ಕೌರವೇಯರು ಗಟ್ಟಿಯಾಗಿ ಗರ್ಜನೆಗಳನ್ನು

ಮಾಡಿದರು. ವೃತ್ರಾಸುರನ ಸಂಹಾರವಾದ ಸಮಯದಲ್ಲಿ ದೇವೇಂದ್ರನು ಮರುದ್ಗಣಗಳಿಂದ ಸಂಪೂಜಿತನಾದಂತೆ–ಘಟೋತ್ಕಚನ ವಧೆಯಾದನಂತರ



ದಲ್ಲಿ ಕರ್ಣನು ಕುರುಮುಖ್ಯರಿಂದ ಸಂಪೂಜಿತನಾಗಿ ನಿನ್ನ ಮಗನಾದ ದುರ್ಯೋಧನನ ರಥದಲ್ಲಿ ಕುಳಿತು ಪರಮಹೃಷ್ಟನಾಗಿ ತನ್ನ ಸೈನ್ಯವನ್ನು ಪ್ರವೇಶಿಸಿದನು.”

೧೭೯ನೆಯ ಅಧ್ಯಾಯವು ಮುಗಿಯಿತು.

## ಘಟೋತ್ಕಚನ ವಧೆಯಿಂದಾಗಿ ಪಾಂಡವರ ಶೋಕ : ಕೃಷ್ಣನ ಸಂತೋಷ ಮತ್ತು ಅದಕ್ಕೆ ಕಾರಣನಿರೂಪಣೆ

ಸಂಜಯನು ಘಟೋತ್ಕಚನ ವಧೆಯಾದನಂತರದ ವೃತ್ತಾಂತವನ್ನು ಹೇಳುತ್ತಾನೆ :

"ಮಹಾರಾಜ! ಕುಸಿದುಬಿದ್ದಿರುವ ಪರ್ವತದಂತೆ ಗತಪ್ರಾಣನಾಗಿ ನೆಲದ ಮೇಲೆ ಬಿದ್ದಿದ್ದ ಘಟೋತ್ಕಚನನ್ನು ನೋಡಿ ಎಲ್ಲ ಪಾಂಡವರ ಕಣ್ಣುಗಳಲ್ಲೂ ಶೋಕದಿಂದ ಕಣ್ಣೀರು ತುಂಬಿಕೊಂಡಿತು. ಆದರೆ ಶ್ರೀಕೃಷ್ಣನು ಮಾತ್ರ ಅತ್ಯಗಾಧವಾದ ಸಂತೋಷಸಾಗರದಲ್ಲಿಯೇ ಮುಳುಗಿಹೋದನು. ಸಿಂಹದಂತೆ ಗರ್ಜನೆಮಾಡುತ್ತಾ ಅರ್ಜುನನನ್ನು ಗಾಢವಾಗಿ ಆಲಿಂಗನೆ ಮಾಡಿಕೊಂಡನು.

ಅಷ್ಟು ಮಾತ್ರವಲ್ಲ ; ಶ್ರೀಕೃಷ್ಣನು ಗಟ್ಟಿಯಾಗಿ ಗರ್ಜನೆಮಾಡುತ್ತಾ ಕಡಿವಾಣಗಳನ್ನೆಳೆದು ಕುದುರೆಗಳನ್ನು ನಿಲ್ಲಿಸಿ–ಚಂಡಮಾರುತದಿಂದ ಬುಡ ಮೇಲಾದ ವೃಕ್ಷವು ಗಾಳಿಯಲ್ಲಿ ತೂರಿಕೊಂಡು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುವಂತೆ–ಹರ್ಷೋದ್ವೇಗದಿಂದ ಇಲ್ಲಿಂದಲ್ಲಿಗೆ- ಅಲ್ಲಿಂದಿಲ್ಲಿಗೆ ಕುಣಿದಾಡುತ್ತಾ ನರ್ತನಮಾಡಿದನು. ಪುನಃ ಪಾರ್ಥನನ್ನು ಆಲಿಂಗಿಸಿಕೊಂಡನು. ಹತ್ತಾರು ಬಾರಿ ಅವನ ಬೆನ್ನುತಟ್ಟಿದನು (ಘಟೋತ್ಕಚನ ವಧೆಯಿಂದಾಗಿ ಅಥವಾ ಇಂದ್ರಶಕ್ತಿಯ ಅಳಿಯುವಿಕೆಯಿಂದಾಗಿ ಶ್ರೀಕೃಷ್ಣನಿಗಾದ ಸಂತೋಷಕ್ಕೆ ಪಾರವೇ ಇಲ್ಲ). ಪುನಃ ರಥಕ್ಕೆ ಹತ್ತಿ ಕಡಿವಾಣಗಳನ್ನು ಹಿಡಿದು ಕುಳಿತು ಮನಸ್ಸು ತಣಿಯುವಷ್ಟು ಗರ್ಜನೆ ಮಾಡುತ್ತಲೇ ಇದ್ದನು. ಶ್ರೀಕೃಷ್ಣನ ಚರ್ಯೆಯಿಂದಾಗಿ ಅವನು ಸಂತೋಷಭರಿತನಾಗಿರುವನೆಂಬುದನ್ನು ಗಮನಿಸಿದ ಮಹಾಬಲನಾದ ಅರ್ಜುನನು ಸ್ವಲ್ಪ ಅಸಮಾಧಾನದಿಂದಲೇ ಶ್ರೀಕೃಷ್ಣನಿಗೆ ಹೇಳಿದನು :

**ಅತಿಹರ್ಷೋಽಯಮಸ್ಥಾನೇ ತವಾದ್ಯ ಮಧುಸೂದನ ।**
**ಶೋಕಸ್ಥಾನೇ ತು ಸಮ್ಪ್ರಾಪ್ತೇ ಹೈಡಿಂಬಸ್ಯ ವಧೇನ ತು ॥೬॥**

"ಮಧುಸೂದನ! ಹಿಡಿಂಬೆಯ ಮಗನಾದ ಘಟೋತ್ಕಚನ ವಧೆಯಿಂದಾಗಿ ಶೋಕಪಡಬೇಕಾಗಿರುವ ಈ ಸಮಯದಲ್ಲಿ ನಿನಗುಂಟಾಗಿರುವ ಅತಿಹರ್ಷವು ಸಮಯೋಚಿತವಲ್ಲ (ಈ ಸಮಯದಲ್ಲಿ ನಿನ್ನ ಹರ್ಷರೂಪವಾದ ಪ್ರತಿಕ್ರಿಯೆಯು ಉಚಿತವಾಗಿ ಕಾಣುವುದಿಲ್ಲ). ಘಟೋತ್ಕಚನು ಹತನಾದುದನ್ನು ಕಂಡು ನಮ್ಮ ಸೈನಿಕರೆಲ್ಲರೂ ಯುದ್ಧದಿಂದ ವಿಮುಖರಾಗು



ತ್ತಿದ್ದಾರೆ. ಭೈಮಸೇನಿಯ ಪತನದಿಂದಾಗಿ ನಾವೂ ಸಹ ಬಹಳ ಉದ್ವಿಗ್ನರಾಗಿದ್ದೇವೆ. ಆದರೆ ನೀನು ಅತಿಯಾಗಿ ಸಂತೋಷಿಸುತ್ತಿರುವುದಕ್ಕೂ ಕಾರಣವು ಅತ್ಯಲ್ಪವಾಗಿರಲಾರದು. ಅಲ್ಪಕಾರಣಕ್ಕಾಗಿ ನೀನಿಷ್ಟು ಸಂತೋಷವನ್ನು ವ್ಯಕ್ತಪಡಿಸಲಾರೆ. ನಿನ್ನ ಸಂತೋಷಕ್ಕೆ ಕಾರಣವು ಮಹತ್ವದ್ದೇ ಆಗಿರಬೇಕು.

ಸತ್ಯವಂತರಲ್ಲಿ ಶ್ರೇಷ್ಠನಾದವನೇ! ಪ್ರಶ್ನಿಸುತ್ತಿರುವ ನನಗೆ ಸತ್ಯಸಂಗತಿಯನ್ನು ತಿಳಿಸು. ಈ ವಿಷಯವು ನನಗೂ ತಿಳಿಯಬಾರದೆನ್ನುವಷ್ಟು ರಹಸ್ಯಮಯ ವಾಗಿರದಿದ್ದರೆ ಅದನ್ನು ನನ್ನೊಡನೆ ಹೇಳು. ಸುಖ-ದುಃಖಗಳೆರಡನ್ನೂ ಒಂದೇ ಸಮನಾಗಿ ಕಾಣುವ ಧೀರನು ನೀನು. ಆದರೆ ಈಗ (ಅತಿಯಾದ ಸಂತೋಷವನ್ನು ವ್ಯಕ್ತಪಡಿಸುತ್ತಿರುವುದರಿಂದ ) ನಿನ್ನ ಆ ಧೈರ್ಯಕ್ಕೆ ವಿಕಾರ ವುಂಟಾಗಿದೆ. ಇದರ ಕಾರಣವನ್ನೂ ಹೇಳು.

**ಸಮುದ್ರಸ್ಯೇವ ಸಂಶೋಷಂ ಮೇರೋರಿವ ವಿಸರ್ಪಣಮ್ ।**
**ತಥೈತದದ್ಯ ಮನ್ಯೇಽಹಂ ತವ ಕರ್ಮ ಜನಾರ್ದನ ॥೧೦॥**

ಜನಾರ್ದನ! ಸಮುದ್ರದ ಶೋಷಣೆಯಾಗಿಬಿಟ್ಟಿತೆಂದರೆ ಎಷ್ಟು ಆಶ್ಚರ್ಯವಾಗುವುದೋ, ಮೇರುಪರ್ವತವು ಚಲಿಸಿತೆಂದರೆ ಎಷ್ಟು ಆಶ್ಚರ್ಯವಾಗುವುದೋ–ಅಷ್ಟೇ ಆಶ್ಚರ್ಯವು ನಿನ್ನ ಕರ್ಮದಿಂದ (ಶೋಕಿಸಬೇಕಾಗಿರುವಾಗ ಸಂತೋಷಿಸುತ್ತಿರುವುದರಿಂದ ) ನನಗುಂಟಾಗಿದೆ. ಶೋಕಿಸಬೇಕಾಗಿರುವಾಗ ಸಂತೋಷಪಡುತ್ತಿರುವುದೂ ಅಷ್ಟೇ ಆಶ್ಚರ್ಯಕರ ವೆಂದು ನಾನು ಭಾವಿಸುತ್ತೇನೆ.”

“ಧನಂಜಯ! ನಿಶ್ಚಯವಾಗಿಯೂ ನನಗೆ ಅತ್ಯಂತಹರ್ಷದಾಯಕ ವಾದ ಸಮಯವು ಪ್ರಾಪ್ತವಾಗಿದೆ. ತತ್‌ಕ್ಷಣದಲ್ಲಿಯೇ ನನ್ನ ಮನಸ್ಸಿಗೆ ಅತ್ಯಂತವಾಗಿ ಪ್ರಸನ್ನತೆಯುಂಟುಮಾಡಿದ ಉತ್ತಮೋತ್ತಮವಾದ ವಿಷಯವು ಯಾವುದೆಂಬುದನ್ನು ಹೇಳುವೆನು, ಕೇಳು. ಮಹಾದ್ಯುತಿಮಂತನೇ! ಧನಂಜಯ! ಇಂದ್ರನು ಕೊಟ್ಟಿದ್ದ ಶಕ್ತಿಯನ್ನು ಘಟೋತ್ಕಚನ ಮೂಲಕವಾಗಿ ಭ್ರಷ್ಟಗೊಳಿಸಿದನಂತರ ಯುದ್ಧದಲ್ಲಿ ಕರ್ಣನು ಹತನಾದನೆಂದು ನೀನು ಈಗಲೇ ಭಾವಿಸಬಹುದಾಗಿದೆ.

ಕಾರ್ತಿಕೇಯನಿಗೆ ಸಮಾನವಾಗಿ ಕೈಯಲ್ಲಿ ಶಕ್ತಿಯನ್ನು ಧರಿಸಿ ಯುದ್ಧಕ್ಕೆ ಬರುವ ಕರ್ಣನನ್ನು ಎದುರಿಸಿ ನಿಲ್ಲುವ ಪುರುಷನು ಈ ಲೋಕದಲ್ಲಿ ಯಾವನಿದ್ದಾನೆ?

**ದಿಷ್ಟ್ಯಾಪನೀತಕವಚೋ ದಿಷ್ಟ್ಯಾಪಹೃತಕುಣ್ಡಲಃ ।**
**ದಿಷ್ಟ್ಯಾ ಸಾ ವ್ಯಂಸಿತಾ ಶಕ್ತಿರಮೋಘಸ್ಯ ಘಟೋತ್ಕಚೇ ॥೧೪॥**

ಸೌಭಾಗ್ಯದಿಂದ ಕರ್ಣನ ಕವಚವು ತೆಗೆಸಲ್ಪಟ್ಟಿತು. ಸೌಭಾಗ್ಯವಶಾತ್

ಅವನ ಕುಂಡಲಗಳೂ ಅಪಹೃತವಾದುವು. ಅದೃಷ್ಟವಶಾತ್ ಅಮೋಘ ವಾಗಿದ್ದ ಶಕ್ತಿಯೂ ಸಹ ಘಟೋತ್ಕಚನ ಮೇಲೆ ಪ್ರಯುಕ್ತವಾಗಿ ಕರ್ಣನಿಂದ ಹೊರಟುಹೋಯಿತು.

**ಯದಿ ಹಿ ಸ್ಯಾತ್ಸಕವಚಸ್ತಥೈವ ಸ್ಯಾತ್ಸಕುಣ್ಡಲಃ ।**
**ಸಾಮರಾನಪಿ ಲೋಕಾಂಸ್ತ್ರೀನೇಕಃ ಕರ್ಣೋ ಜಯೇದ್ರಣೇ ॥೧೫॥**

ಕರ್ಣನು ಕವಚ-ಕುಂಡಲಗಳ ಸಹಿತನಾಗಿಯೇ ಇದ್ದಿದ್ದರೆ–ದೇವತೆ ಗಳಿಂದ ಸಹಿತವಾದ ಮೂರು ಲೋಕಗಳನ್ನೂ ಕರ್ಣನೊಬ್ಬನೇ ಜಯಿಸು ತ್ತಿದ್ದನು.

**ವಾಸವೋ ವಾ ಕುಬೇರೋ ವಾ ವರುಣೋ ವಾ ಜಲೇಶ್ವರಃ ।**
**ಯಮೋ ವಾ ನೋತ್ಸಹೇತ್ಕರ್ಣಂ ರಣೇ ಪ್ರತಿಸಮಾಸಿತುಮ್ ॥೧೬॥**

ಕರ್ಣನು ಕವಚ-ಕುಂಡಲಧರನಾಗಿದ್ದಾಗ–ಇಂದ್ರನಾಗಲೀ, ಕುಬೇರ ನಾಗಲೀ, ಜಲೇಶ್ವರನಾದ ವರುಣನಾಗಲೀ ಅಥವಾ ಯಮರಾಜನೇ ಆಗಲೀ–ರಣರಂಗದಲ್ಲಿ ಕರ್ಣನನ್ನು ಎದುರಿಸಲು ಶಕ್ತರಾಗುತ್ತಿರಲಿಲ್ಲ.

**ಗಾಣ್ಡೀವಮುದ್ಯಮ್ಯ ಭವಾಂಶ್ಚಕ್ರಂ ಚಾಹಂ ಸುದರ್ಶನಮ್ ।**
**ನ ಶಕ್ತೌ ಸ್ವೋ ರಣೇ ಜೇತುಂ ತಥಾಯುಕ್ತಂ ನರರ್ಷಭಮ್ ॥೧೭॥**

ಗಾಂಡೀವಧನುಸ್ಸನ್ನೆತ್ತಿ ಹಿಡಿದ ನೀನು, ಸುದರ್ಶನಚಕ್ರವನ್ನು ಹಿಡಿದ ನಾನು–ಇಬ್ಬರೂ ಒಟ್ಟಾಗಿ ಸೇರಿ ಯುದ್ಧಮಾಡಿದ್ದರೂ ಕವಚ-ಕುಂಡಲಗಳನ್ನು ಧರಿಸಿರುವ ನರಶ್ರೇಷ್ಠನಾದ ಕರ್ಣನನ್ನು ಜಯಿಸಲು ಸಾಧ್ಯವಾಗುತ್ತಿರಲಿಲ್ಲ.

**ತ್ವದ್ಧಿತಾರ್ಥಂ ತು ಶಕ್ರೇಣ ಮಾಯಾಪಹೃತಕುಣ್ಡಲಃ ।**
**ವಿಹೀನಕವಚಶ್ಚಾಯಂ ಕೃತಃ ಪರಪುರಂಜಯಃ ॥೧೮॥**

ನಿನ್ನ ಹಿತಾರ್ಥವಾಗಿಯೇ ಇಂದ್ರನು ಪರಪುರಂಜಯನಾದ ಕರ್ಣನ ಕುಂಡಲಗಳನ್ನೂ–ಕವಚವನ್ನೂ ಮಾಯೆಯಿಂದ ಅಪಹರಿಸಿದನು.

**ಉತ್ಕೃತ್ಯ ಕವಚಂ ಯಸ್ಮಾತ್ಕುಣ್ಡಲೇ ವಿಮಲೇ ಚ ತೇ ।**
**ಪ್ರಾದಾಚ್ಛಕ್ರಾಯ ಕರ್ಣೋ ವೈ ತೇನ ವೈಕರ್ತನಃ ಸ್ಮೃತಃ ॥೧೯॥**

ಕರ್ಣನು ಕವಚವನ್ನೂ ಮತ್ತು ಶುಭ್ರವಾದ ಕುಂಡಲಗಳನ್ನೂ

ಕತ್ತರಿಸಿ ತೆಗೆದು ಇಂದ್ರನಿಗೆ ಕೊಟ್ಟುದರಿಂದಲೇ ಅವನಿಗೆ ವೈಕರ್ತನನೆಂಬ ಹೆಸರು ಬಂದಿತು.

**ಆಶೀವಿಷ ಇವ ಕ್ರುದ್ಧೋ ಜೃಮ್ಭಿತೋ ಮನ್ತ್ರತೇಜಸಾ ।**
**ತಥಾದ್ಯ ಭಾತಿ ಕರ್ಣೋ ಮೇ ಶಾನ್ತಜ್ವಾಲ ಇವಾನಲಃ ॥೨೦॥**

ಕೋಪಗೊಂಡ ವಿಷಸರ್ಪವು ಮಂತ್ರದಿಂದ ಸ್ತಬ್ಧವಾಗುವಂತೆ ಯಜ್ಞೇಶ್ವರನು ಧಗ-ಧಗಿಸುವ ಜ್ವಾಲೆಯಿಂದ ವಿಹೀನನಾಗುವಂತೆ–ಈಗ ಶಕ್ತಿಯಿಂದ ರಹಿತನಾದ ಕರ್ಣನು ನಿಸ್ತೇಜನಾಗಿ ಕಾಣುತ್ತಿದ್ದಾನೆ. ಮಹಾತ್ಮನಾದ ವಾಸವನು ಕುಂಡಲಗಳಿಗೂ, ಕವಚಕ್ಕೂ ವಿನಿಮಯರೂಪವಾಗಿ ಶಕ್ತ್ಯಾಯುಧವನ್ನು ಯಾವಾಗ ಕರ್ಣನಿಗೆ ಕೊಟ್ಟನೋ–ಅಂದಿನಿಂದಲೂ ಆ ಮಹಾಶಕ್ತಿಯನ್ನು ಪಡೆದುಕೊಂಡಿದ್ದ ಕರ್ಣನು ನಿನ್ನನ್ನು ಯುದ್ಧದಲ್ಲಿ ಹತನಾದನೆಂದೇ ಭಾವಿಸಿಬಿಟ್ಟಿದ್ದನು. ನಿನ್ನ ಸಂಹಾರಕ್ಕೆಂದೇ ಮೀಸಲಾಗಿಟ್ಟಿದ್ದ ಅಮೋಘವಾದ ಆ ಶಕ್ತಿಯನ್ನೇ ಕರ್ಣನೀಗ ಘಟೋತ್ಕಚನ ಮೇಲೆ ಪ್ರಯೋಗಿಸಿದನು.

**ಏವಂಗತೋಽಪಿ ಶಕ್ಯೋಽಯಂ ಹನ್ತುಂ ನಾನ್ಯೇನ ಕೇನಚಿತ್ ।**
**ಋತೇ ತ್ವಾಂ ಪುರುಷವ್ಯಾಘ್ರ ಶಪೇ ಸತ್ಯೇನ ಚಾನಘ ॥೨೩॥**

ಪಾಪರಹಿತನೇ! ಪುರುಷವ್ಯಾಘ್ರನೇ! ಯದ್ಯಪಿ ಅವನಿಂದು ನಿನ್ನ ಸಂಹಾರಕ್ಕಾಗಿಯೇ ಮೀಸಲಾಗಿಟ್ಟಿದ್ದ ಶಕ್ತ್ಯಾಯುಧವನ್ನು ಕಳೆದುಕೊಂಡಿದ್ದರೂ ನಿನ್ನೊಬ್ಬನನ್ನು ಬಿಟ್ಟು ಬೇರೆ ಯಾರಿಂದಲೂ ಅವನನ್ನು ಸಂಹರಿಸುವ ಸಾಧ್ಯತೆಯಿಲ್ಲ. ಈ ಮಾತನ್ನು ನಾನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ.

**ಬ್ರಹ್ಮಣ್ಯಃ ಸತ್ಯವಾದೀ ಚ ತಪಸ್ವೀ ನಿಯತವ್ರತಃ ।**
**ರಿಪುಷ್ವಪಿ ದಯಾವಾಂಶ್ಚ ತಸ್ಮಾತ್ಕರ್ಣೋ ವೃಷಃ ಸ್ಮೃತಃ ॥೨೪॥**

ಕರ್ಣನು ಬ್ರಾಹ್ಮಣಭಕ್ತನು ; ಸತ್ಯನಿಷ್ಠನು ; ತಪಸ್ವಿಯು ; ನಿಯತವಾದ ವ್ರತಾನುಷ್ಠಾನಗಳುಳ್ಳವನು ; ಶತ್ರುಗಳ ವಿಷಯದಲ್ಲಿಯೂ ದಯಾವಂತನಾಗಿರತಕ್ಕವನು. ಈ ಕಾರಣದಿಂದಲೇ ಇವನು ವೃಷಃ (ಧರ್ಮಾತ್ಮ) ಎಂಬ ಹೆಸರಿನಿಂದಲೂ ಪ್ರಸಿದ್ಧನಾಗಿದ್ದಾನೆ.

ಮಹಾಬಾಹುವಾದ ಕರ್ಣನು ಯುದ್ಧಕುಶಲನು. ನಿರಂತರವಾಗಿ

ಧನುಸ್ಸನ್ನು ಮೇಲೆತ್ತಿಕೊಂಡೇ ಇರತಕ್ಕವನು (ಯುದ್ಧಕ್ಕೆ ಸಜ್ಜಾಗಿ ನಿಂತಿರತಕ್ಕವನು). ಅರಣ್ಯದಲ್ಲಿ ಸಿಂಹವು ಗರ್ಜಿಸುವಂತೆ ಸದಾ ಗರ್ಜಿಸು ತ್ತಿರುವವನು. ಮದಿಸಿದ ಸಲಗವು ಇತರ ಯೂಥಪತಿಗಳಾದ ಆನೆಗಳನ್ನು ಮದರಹಿತವನ್ನಾಗಿ ಮಾಡುವಂತೆ–ಯುದ್ಧಸಮಯದಲ್ಲಿ ಕರ್ಣನು ರಾಜ ಶ್ರೇಷ್ಠರನ್ನು ಮದರಹಿತರನ್ನಾಗಿ ಮಾಡುತ್ತಾನೆ. ನಡುನೆತ್ತಿಯ ಮೇಲೆ ಬಂದಿರುವ ಸೂರ್ಯನನ್ನು ನೋಡಲು ಶಕ್ಯವಾಗದಂತೆ–ಸಮರಾಂಗಣದಲ್ಲಿ ಯುದ್ಧಕ್ಕೆ ಸಜ್ಜಾಗಿ ನಿಂತಿರುವ ಕರ್ಣನನ್ನು ನಿನ್ನ ಕಡೆಯ ಮಹಾತ್ಮರಾದ ಯೋಧಮುಖ್ಯರಾರಿಂದಲೂ ನೋಡಲು ಸಾಧ್ಯವಾಗುವುದಿಲ್ಲ. ಶರತ್ಕಾಲ ದಲ್ಲಿ ಸೂರ್ಯನು ಕಿರಣಗಳಿಂದ ಪ್ರಖರವಾಗಿ ಬೆಳಗುವಂತೆ–ರಣರಂಗದಲ್ಲಿ ಕರ್ಣನು ಸಾವಿರಾರು ಬಾಣಜಾಲರೂಪವಾದ ಕಿರಣಗಳಿಂದ ಬೆಳಗುತ್ತಿರು ತ್ತಾನೆ. ವರ್ಷಾಕಾಲದಲ್ಲಿ ಮೋಡಗಳು ಮಳೆಗರೆಯುವಂತೆ–ಬಾಣಗಳ ವೃಷ್ಟಿ ಯನ್ನು ಬಾರಿ-ಬಾರಿಗೂ ಸುರಿಸುತ್ತಾ, ದಿವ್ಯಾಸ್ತ್ರಗಳ ವೃಷ್ಟಿಗೆ ಮೇಘರೂಪ ನಾಗಿರುವ ಕರ್ಣನು ವೃಷ್ಟಿಯನ್ನು ಸುರಿಸುವ ಪರ್ಜನ್ಯನಂತೆಯೇ ಪ್ರಕಾಶಿಸು ತ್ತಾನೆ. ನಾಲ್ಕು ದಿಕ್ಕುಗಳಲ್ಲಿಯೂ ಬಾಣಗಳ ಮಳೆಗರೆಯುತ್ತಾ ಶತ್ರುಗಳ ಶರೀರಗಳಿಂದ ಮಾಂಸಶೋಣಿತಗಳನ್ನು ಪ್ರವಹಿಸುವಂತೆ ಮಾಡುವ ಕರ್ಣ ನನ್ನು ದೇವತೆಗಳಿಂದಲೂ ಜಯಿಸಲು ಸಾಧ್ಯವಾಗುವುದಿಲ್ಲ.

**ಕವಚೇನ ವಿಹೀನಶ್ಚ ಕುಣ್ಡಲಾಭ್ಯಾಂ ಚ ಪಾಣ್ಡವ ।**
**ಸೋಽದ್ಯ ಮಾನುಷತಾಂ ಪ್ರಾಪ್ತೋ ವಿಮುಕ್ತಃ ಶಕ್ರದತ್ತಯಾ ॥೩೦॥**

ಪಾರ್ಥ! ಕವಚದಿಂದಲೂ–ಕುಂಡಲಗಳಿಂದಲೂ ವಿಹೀನನಾಗಿದ್ದ ಕರ್ಣನು ಈಗ ಶಕ್ರದತ್ತವಾದ ಶಕ್ತಿಯಿಂದಲೂ ವಿಹೀನನಾಗಿ ಮನುಷ್ಯ ಮಾತ್ರದವನಾಗಿದ್ದಾನೆ (ಇದುವರೆಗೂ ಅವನು ಅತಿಮಾನವನಾಗಿದ್ದನು).

**ಏಕೋ ಹಿ ಯೋಗೋಽಸ್ಯ ಭವೇದ್ವಧಾಯ-**
**ಚ್ಛಿದ್ರೇ ಹ್ಯೇನಂ ಸ್ವಪ್ರಮತ್ತಃ ಪ್ರಮತ್ತಮ್ ।**
**ಕೃಚ್ಛ್ರಂ ಪ್ರಾಪ್ತಂ ರಥಚಕ್ರೇ ವಿಮಗ್ನೇ**
**ಹನ್ಯಾಃ ಪೂರ್ವಂ ತ್ವಂ ತು ಸಂಜ್ಞಾಂ ವಿಚಾರ್ಯ ॥೩೧॥**

(ಶಕ್ತಿ-ಕವಚ-ಕುಂಡಲಗಳನ್ನು ಕಳೆದುಕೊಂಡಿದ್ದರೂ ಕರ್ಣನನ್ನು ಜಯಿ ಸುವುದು ಸುಲಭಸಾಧ್ಯವಲ್ಲ). ಇವನನ್ನು ಸಂಹರಿಸಲು ಒಂದೇ ಒಂದು

ಉಪಾಯವಿದೆ. ಅವನು ಕಷ್ಟದಲ್ಲಿರುವ ಸಮಯದಲ್ಲಿಯೇ ಅವನನ್ನು ಸಂಹರಿಸಬೇಕು. ಅವನು ಅಸಾವಧಾನತೆಯಿಂದಿರುವಾಗಲೇ ನೀನು ಸಾವಧಾನತೆಯಿಂದಿದ್ದು ಅವನನ್ನು ಸಂಹರಿಸಬೇಕು. ಅವನು ಕಷ್ಟಕ್ಕೆ ಸಿಕ್ಕಿಬಿದ್ದಿರುವ ಸಮಯದಲ್ಲಿ (ಶಾಪದಿಂದ) ಅವನ ರಥದ ಚಕ್ರಗಳು ಹೂತುಹೋಗಿರುವಾಗ ನಾನು ಸೂಚಿಸುವ ಸಂಕೇತವನ್ನು ಗಮನಿಸಿ ಅವನು ಜಾಗರೂಕನಾಗುವ ಮೊದಲೇ ಅವನನ್ನು ಸಂಹರಿಸಬೇಕು.

**ನ ಹ್ಯುದ್ಯತಾಸ್ತ್ರಂ ಯುಧಿ ಹನ್ಯಾದಜಯ್ಯ-**
**ಮಪ್ಯೇಕವೀರೋ ಬಲಭಿತ್ಸವಜ್ರಃ ।**
**ಜರಾಸನ್ಧಶ್ಚೇದಿರಾಜೋ ಮಹಾತ್ಮಾ**
**ಮಹಾಬಾಹುಶ್ಚೈಕಲವ್ಯೋ ನಿಷಾದಃ ।**
**ಏಕೈಕಶೋ ನಿಹತಾಃ ಸರ್ವ ಏತೇ**
**ಯೋಗೈಸ್ತೈಸ್ತೈಸ್ತ್ವದ್ಧಿತಾರ್ಥಂ ಮಯ್ಯೈವ ॥೩೨॥**

ಯುದ್ಧದಲ್ಲಿ ಆಯುಧವನ್ನೆತ್ತಿ ನಿಂತಿರುವ ಅಜಯ್ಯನಾದ ಕರ್ಣನನ್ನು ಮೂರು ಲೋಕಗಳಲ್ಲಿಯೂ ಏಕೈಕವೀರನಾದ ಬಲಾಸುರಹಂತಕನಾದ ಇಂದ್ರನೂ ಕೊಲ್ಲಲಾರನು. ಆದುದರಿಂದ ಅವನನ್ನು ಮಾನವರು ಜಯಿಸುವ ಸಾಧ್ಯತೆಯೇ ಇಲ್ಲ. ಉಪಾಯದಿಂದಲೇ ಅವನನ್ನು ಜಯಿಸಬೇಕಾಗಿದೆ. ನಾನು ಈ ಹಿಂದೆ ನಿನ್ನ ಹಿತಾರ್ಥವಾಗಿಯೇ ಜರಾಸಂಧ, ಚೇದಿಗಳ ರಾಜನಾದ ಮಹಾತ್ಮನಾದ ಶಿಶುಪಾಲ, ಮಹಾಬಾಹುವಾದ ನಿಷಾದರಾಜನಾದ ಏಕಲವ್ಯ–ಇವರೆಲ್ಲರನ್ನೂ ಒಂದೊಂದು ಸಮಯದಲ್ಲಿ ಒಂದೊಂದು ಉಪಾಯವನ್ನು ಪ್ರಯೋಗಿಸಿ ಸಂಹರಿಸಿದ್ದೇನೆ.

**ಅಥಾಪರೇ ನಿಹತಾ ರಾಕ್ಷಸೇನ್ದ್ರಾ**
**ಹಿಡಿಮ್ಬಕಿರ್ಮೀರಬಕಪ್ರಧಾನಾಃ ।**
**ಅಲಾಯುಧಃ ಪರಚಕ್ರಾವಮರ್ದೀ**
**ಘಟೋತ್ಕಚಶ್ಚೋಗ್ರಕರ್ಮಾ ತರಸ್ವೀ ॥೩೩॥**

ಹಿಡಿಂಬ, ಕಿರ್ಮೀರ, ಬಕ–ಇವರೇ ಮೊದಲಾದ ರಾಕ್ಷಸೇಂದ್ರರೂ, ಶತ್ರುಗಳ ಸೇನಾಚಕ್ರವನ್ನು ಧ್ವಂಸಮಾಡುವ ಅಲಾಯುಧನೂ, ಭಯಂಕರ

ಕರ್ಮನಾದ ಮತ್ತು ವೇಗಶಾಲಿಯಾದ ಘಟೋತ್ಕಚನೂ ಬೇರೆ-ಬೇರೆ ಸಮಯಗಳಲ್ಲಿ ಬೇರೆ-ಬೇರೆ ಉಪಾಯಗಳಿಂದ ಬೇರೆ-ಬೇರೆಯವರ ಮೂಲಕ ಹತರಾದರು."

೧೮೦ನೆಯ ಅಧ್ಯಾಯವು ಮುಗಿಯಿತು.

೧೮೧ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಜರಾಸಂಧನೇ ಮೊದಲಾದ ಧರ್ಮದ್ರೋಹಿಗಳನ್ನು ವಧಿಸಲು ಕಾರಣವನ್ನು ಅರ್ಜುನನಿಗೆ ವಿವರಿಸಿ ಹೇಳಿದುದು

(ಹಿಂದಿನ ಅಧ್ಯಾಯದಲ್ಲಿ ಶ್ರೀಕೃಷ್ಣನು 'ಜರಾಸಂಧಾದಿಗಳನ್ನು ನಿನ್ನ ಹಿತಾರ್ಥವಾಗಿಯೇ ಉಪಾಯಾಂತರಗಳಿಂದ ನಾನು ಸಂಹರಿಸಿದೆನು'–ಎನ್ನುತ್ತಾನೆ. ಅರ್ಜುನನು ಆ ವಿಷಯವನ್ನೇ ಕುರಿತು ಈ ಅಧ್ಯಾಯದಲ್ಲಿ ಪ್ರಶ್ನಿಸುತ್ತಾನೆ.

**ಕಥಮಸ್ಮದ್ಧಿತಾರ್ಥಂ ತೇ ಕೈಶ್ಚ ಯೋಗೈರ್ಜನಾರ್ದನ ।**
**ಜರಾಸನ್ಧಪ್ರಭೃತಯೋ ಘಾತಿತಾಃ ಪೃಥಿವೀಶ್ವರಾಃ ॥೧॥**

"ಜನಾರ್ದನ! ನೀನು ನಮ್ಮ ಹಿತಾರ್ಥಕ್ಕಾಗಿ ಜರಾಸಂಧನೇ ಮೊದಲಾದ ಪೃಥಿವೀಪಾಲರನ್ನು ಯಾವ ರೀತಿಯಲ್ಲಿ ಯಾವ-ಯಾವ ಉಪಾಯಗಳಿಂದ ಸಂಹರಿಸಿದೆ?"

"ಅರ್ಜುನ! ಜರಾಸಂಧ, ಶಿಶುಪಾಲ ಮತ್ತು ಮಹಾಬಲನಾದ ಏಕಲವ್ಯ–ಇವರು ಈ ಮೊದಲೇ ಹತರಾಗದಿದ್ದರೆ ಈಗ ಅವರು ನಮಗೆ ಅತಿಭಯಂಕರರಾಗುತ್ತಿದ್ದರು. ದುರ್ಯೋಧನನು ಆ ರಥಶ್ರೇಷ್ಠರೆಲ್ಲರನ್ನೂ ತನ್ನ ಕಡೆಗೇ ಆಹ್ವಾನಿಸುತ್ತಿದ್ದನು. ನಿತ್ಯವೈರಿಗಳಾಗಿದ್ದ ಅವರು ನಮ್ಮ ಮೇಲಿನ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಕೌರವರನ್ನೇ ಆಶ್ರಯಿಸುತ್ತಿದ್ದರು. ಅವರೆಲ್ಲರೂ ಮಹಾವೀರರಾಗಿಯೂ, ಮಹಾಧನುಷ್ಮಂತರಾಗಿಯೂ ಅಸ್ತ್ರವಿದ್ಯಾಪರಿಣತರಾಗಿಯೂ, ದೃಢಯೋಧಿಗಳಾಗಿಯೂ ಇದ್ದರು. ಅವರು ದುರ್ಯೋಧನನ ಸಮಸ್ತಚತುರಂಗಬಲವನ್ನೂ ದೇವತೆಗಳಂತೆಯೇ ಸಂರಕ್ಷಿಸುತ್ತಿದ್ದರು. ಸೂತಪುತ್ರನಾದ ಕರ್ಣ, ಜರಾಸಂಧ, ಚೇದಿರಾಜ

ನಾದ ಶಿಶುಪಾಲ ಮತ್ತು ಏಕಲವ್ಯ–ಈ ನಾಲ್ವರೂ ದುರ್ಯೋಧನನನ್ನು ಆಶ್ರಯಿಸಿ ಈ ಪೃಥಿವಿಯನ್ನೇ ಜಯಿಸುತ್ತಿದ್ದರು. ಅವರು ಯಾವ ಉಪಾಯ ಗಳಿಂದ ಕೊಲ್ಲಲ್ಪಟ್ಟರೆಂಬುದನ್ನು ಹೇಳುವೆನು, ಕೇಳು :

**ಅಜಯ್ಯಾ ಹಿ ವಿನಾ ಯೋಗೈರ್ಮೃಧೇ ತೇ ದೈವತೈರಪಿ ॥೬॥**

ಉಪಾಯಗಳಿಂದಲ್ಲದೇ ಅವರು ದೇವತೆಗಳಿಂದಲೂ ಯುದ್ಧದಲ್ಲಿ ಜಯಿಸಲ್ಪಡತಕ್ಕವರಾಗಿರಲಿಲ್ಲ.

**ಏಕೈಕೋ ಹಿ ಪೃಥಕ್ತೇಷಾಂ ಸಮಸ್ತಾಂ ಸುರವಾಹಿನೀಮ್ ।**
**ಯೋಧಯೇತ್ಸಮರೇ ಪಾರ್ಥ ಲೋಕಪಾಲಾಭಿರಕ್ಷಿತಾಮ್ ॥೭॥**

ಜರಾಸಂಧಾದಿ ವೀರರಲ್ಲಿ ಒಬ್ಬೊಬ್ಬರೂ ಪ್ರತ್ಯೇಕ-ಪ್ರತ್ಯೇಕವಾಗಿ ಲೋಕಪಾಲಕರಿಂದ ಸಂರಕ್ಷಿತವಾದ ದೇವಸೈನ್ಯದೊಡನೆಯೂ ಯುದ್ಧ ಮಾಡಬಲ್ಲವರಾಗಿದ್ದರು. ಹಿಂದೊಮ್ಮೆ ಬಲರಾಮನು ಜರಾಸಂಧನನ್ನು ಆಕ್ರಮಿಸಿದ್ದನು. ಅದರಿಂದ ಕುಪಿತನಾದ ಜರಾಸಂಧನು ನಮ್ಮನ್ನು ವಧಿಸುವ ಸಲುವಾಗಿ ಸರ್ವಘಾತಿಯಾದ ಮಹಾಗದೆಯನ್ನು ನಮ್ಮ ಕಡೆಗೆಸೆದನು. ಇಂದ್ರನಿಂದ ಪ್ರಮುಕ್ತವಾದ ವಜ್ರಾಯುಧದೋಪಾದಿಯಲ್ಲಿ–ಅಗ್ನಿಯ ಪ್ರಭೆ ಯಿಂದ ಕೂಡಿದ್ದ ಆ ಮಹಾಗದೆಯು ಆಕಾಶದಲ್ಲಿ ಬೈತಲೆಯ ರೇಖೆಯಂತೆ ರೇಖೆಯನ್ನು ಕಲ್ಪಿಸಿಕೊಂಡು ನಮ್ಮ ಕಡೆಗೆ ರಭಸದಿಂದ ಬರುತ್ತಿರುವುದನ್ನು ನಾವು ಕಂಡೆವು. ಆ ಮಹಾಗದೆಯು ಬರುತ್ತಿರುವುದನ್ನು ನೋಡಿದೊಡನೆಯೇ ಬಲರಾಮನು ಆ ಗದೆಗೆ ಪ್ರತಿಘಾತವನ್ನುಂಟುಮಾಡುವ ಸಲುವಾಗಿ (ಗದೆಯನ್ನು ನಿರರ್ಥಗೊಳಿಸುವ ಸಲುವಾಗಿ) ಸ್ಥೂಣಾಕರ್ಣನೆಂಬ ಅಸ್ತ್ರವನ್ನು ಪ್ರಯೋಗಿಸಿದನು. ಅಸ್ತ್ರವೇಗದಿಂದ ಪ್ರತಿಹತವಾದ ಆ ಗದೆಯು ಭೂದೇವಿ ಯನ್ನು ಸೀಳುತ್ತಾ ಪರ್ವತಗಳನ್ನೇ ನಡುಗಿಸುತ್ತಿರುವುದೋ–ಎಂಬಂತೆ ಭೂಮಿಯ ಮೇಲೆ ಬಿದ್ದಿತು. ಆ ಗದೆಯು ಬಿದ್ದ ಸ್ಥಳದಲ್ಲಿಯೇ ಪರಾಕ್ರಮ ಸಂಪನ್ನಳಾದ, ಮಹಾಘೋರಳಾದ ಜರಾ ಎಂಬ ಹೆಸರಿನ ರಾಕ್ಷಸಿಯೂ ಇದ್ದಳು. ಅವಳು ಹಿಂದೆ ಎರಡು ಭಾಗಗಳಾಗಿ ಹುಟ್ಟಿದ್ದ ಜರಾಸಂಧನ ಅವಯವಗಳನ್ನು ಒಂದುಗೂಡಿಸಿದ್ದಳು.

**ದ್ವಾಭ್ಯಾಂ ಜಾತೋ ಹಿ ಮಾತೃಭ್ಯಾಮರ್ಧದೇಹಃ ಪೃಥಕ್ಪೃಥಕ್ ।**
**ಜರಯಾ ಸಂಧಿತೋ ಯಸ್ಮಾಜ್ಜರಾಸಂಧಸ್ತತೋಽಭವತ್ ॥೧೩॥**

ಪ್ರತ್ಯೇಕ-ಪ್ರತ್ಯೇಕವಾದ ಎರಡು ಅರ್ಧದೇಹಗಳಿಂದ ಇಬ್ಬರು ತಾಯಿಯರಲ್ಲಿ ಹುಟ್ಟಿ, ಜರಾ ಎಂಬ ರಾಕ್ಷಸಿಯಿಂದ ಸೇರಿಸಲ್ಪಟ್ಟವನಾಗಿ ಪೂರ್ಣಮನುಷ್ಯನಾದ ಅವನು ಜರಾಸಂಧನಾಮಕನಾದನು.

ಭೂಮಿಯ ಕೆಳಭಾಗದಲ್ಲಿ ವಾಸಮಾಡುತ್ತಿದ್ದ ಜರಾ ಎಂಬ ಆ ರಾಕ್ಷಸಿಯು ಆ ಗದೆಯ ಪ್ರಹಾರದಿಂದಲೂ ಮತ್ತು ಅದರೊಡನೆಯೇ ಇದ್ದ ಸ್ಥೂಣಾಕರ್ಣಾಸ್ತ್ರದ ಪ್ರಹಾರದಿಂದಲೂ ಮಕ್ಕಳು-ಮರಿಗಳೊಡನೆಯೂ–ಬಂಧುಗಳೊಡನೆಯೂ ಮೃತಳಾದಳು. ಆ ಮಹಾಗದೆಯು ಅವನಲ್ಲಿ ಇಲ್ಲದೇ ಇದ್ದ ಕಾರಣದಿಂದ ಜರಾಸಂಧನು ಭೀಮಸೇನನೊಡನೆ ಮಾಡಿದ ದ್ವಂದ್ವಯುದ್ಧದಲ್ಲಿ ನೀನು ನೋಡುತ್ತಿದ್ದಂತೆಯೇ ಹತನಾದನು.

**ಯದಿ ಹಿ ಸ್ಯಾದ್ಗದಾಪಾಣಿರ್ಜರಾಸಂಧಃ ಪ್ರತಾಪವಾನ್ ।**
**ಸೇನ್ದ್ರಾ ದೇವಾ ನ ತಂ ಹನ್ತುಂ ರಣೇ ಶಕ್ತಾ ನರೋತ್ತಮ ॥೧೬॥**

ನರೋತ್ತಮನೇ! ಪ್ರತಾಪವಂತನಾದ ಜರಾಸಂಧನು ಗದಾಪಾಣಿಯೇ ಆಗಿದ್ದರೆ ಯುದ್ಧದಲ್ಲಿ ಇಂದ್ರಸಹಿತರಾದ ದೇವತೆಗಳೂ ಅವನನ್ನು ಸಂಹರಿಸಲು ಸಮರ್ಥರಾಗುತ್ತಿರಲಿಲ್ಲ.

**ತ್ವದ್ಧಿತಾರ್ಥಂ ಚ ನೈಷಾದಿರಙ್ಗುಷ್ಠೇನ ವಿಯೋಜಿತಃ ।**
**ದ್ರೋಣೇನಾಚಾರ್ಯಕಂ ಕೃತ್ವಾ ಛದ್ಮನಾ ಸತ್ಯವಿಕ್ರಮಃ ॥೧೭॥**

ದ್ರೋಣರು ನಿನ್ನ ಹಿತಾರ್ಥವಾಗಿಯೇ ಏಕಲವ್ಯನ ಆಚಾರ್ಯತ್ವವನ್ನು ವಹಿಸಿಕೊಂಡು ಸತ್ಯವಿಕ್ರಮನಾದ ಏಕಲವ್ಯನ ಹೆಬ್ಬೆರಳನ್ನು ಛಲಪೂರ್ವಕವಾಗಿ ಅಪಹರಿಸಿದರು.

ದೃಢವಿಕ್ರಮನಾದ, ಅತಿಮಾನಿಯಾದ ಏಕಲವ್ಯನು ಅಂಗುಲಿತ್ರಾಣಗಳನ್ನು (ಕೈಚೀಲಗಳನ್ನು ) ಹಾಕಿಕೊಂಡು ಅರಣ್ಯದಲ್ಲಿ ಸಂಚರಿಸುತ್ತಾ ಮತ್ತೊಬ್ಬ ಶ್ರೀರಾಮನಂತೆಯೇ ಕಾಣುತ್ತಿದ್ದನು.

**ಏಕಲವ್ಯಂ ಹಿ ಸಾಙ್ಗುಷ್ಠಮಶಕ್ತಾ ದೇವದಾನವಾಃ ।**
**ಸರಾಕ್ಷಸೋರಗಾಃ ಪಾರ್ಥ ವಿಜೇತುಂ ಯುಧಿ ಕರ್ಹಿಚಿತ್ ॥೧೮॥**

ಪಾರ್ಥ! ಏಕಲವ್ಯನು ಅಂಗುಷ್ಠಸಹಿತನಾಗಿಯೇ ಇದ್ದಿದ್ದರೆ–ಅವನನ್ನು ದೇವ-ದಾನವ-ರಾಕ್ಷಸೋರಗರು ಒಟ್ಟಾಗಿ ಸೇರಿ ಯುದ್ಧಮಾಡಿದ್ದರೂ

ಜಯಿಸಲು ಸಾಧ್ಯವಾಗುತ್ತಿರಲಿಲ್ಲ. ಹೀಗಿರುವಾಗ ಮನುಷ್ಯಮಾತ್ರದವರು ಅವನನ್ನು ದಿಟ್ಟಿಸಿ ನೋಡಲು ಕೂಡ ಹೇಗೆ ಸಾಧ್ಯವಾಗುತ್ತಿದ್ದಿತು? ಅವನು ದೃಢಮುಷ್ಠಿಯಾಗಿದ್ದನು (ದೃಢವಾದ ಮುಷ್ಠಿಯಿಂದ ಧನುಸ್ಸನ್ನು ಹಿಡಿಯುತ್ತಿದ್ದನು). ಅಸ್ತ್ರವಿದ್ಯಾಪಾರಂಗತನಾಗಿದ್ದನು. ಹಗಲು-ರಾತ್ರಿಗಳೆಂಬ ಪರಿವೆಯೇ ಇಲ್ಲದೇ ಬಾಣಗಳ ಆದಾನ-ಸಂಧಾನ-ಪ್ರಯೋಗಗಳನ್ನು ಅಭ್ಯಾಸಮಾಡುತ್ತಿದ್ದನು.

ನಿನ್ನ ಹಿತಾರ್ಥವಾಗಿಯೇ ನಾನು ರಣಾಂಗಣದಲ್ಲಿ ಚೇದಿರಾಜನಾದ ಮಹಾಪರಾಕ್ರಮಿಯಾದ ಶಿಶುಪಾಲನನ್ನು ನಿನ್ನ ಸಮ್ಮುಖದಲ್ಲಿಯೇ ಸಂಹರಿಸಿದೆನು. ಸರ್ವದೇವತೆಗಳಿಂದಲೂ ಮತ್ತು ಅಸುರರಿಂದಲೂ ಅವನು ಅಜಯ್ಯನಾಗಿದ್ದನು. ಶಿಶುಪಾಲನ ಮತ್ತು ದೇವತೆಗಳ ಶತ್ರುಗಳ ಸಂಹಾರಕ್ಕಾಗಿಯೂ, ಲೋಕಗಳ ಹಿತಕ್ಕಾಗಿಯೂ ನಿನ್ನೊಡನೆ ನಾನು ಈ ಲೋಕದಲ್ಲಿ ಅವತರಿಸಿದ್ದೇನೆ.

ಬ್ರಾಹ್ಮಣರನ್ನೂ ಮತ್ತು ಯಜ್ಞಗಳನ್ನೂ ವಿನಾಶಮಾಡುತ್ತಿದ್ದ ರಾವಣಸಮಾನವಿಕ್ರಮರಾದ ಹಿಡಿಂಬ-ಬಕ-ಕಿರ್ಮೀರರು ಭೀಮಸೇನನಿಂದ ಹತರಾದರು. ಅದೇ ರೀತಿಯಲ್ಲಿ ಮಾಯಾವಿಯಾದ ಅಲಾಯುಧನೂ ಘಟೋತ್ಕಚನಿಂದ ಹತನಾದನು. ಘಟೋತ್ಕಚನೂ ಸಹ ನನ್ನ ಯುಕ್ತಿಯ ಪರಿಣಾಮದಿಂದಲೇ ಕರ್ಣನ ಶಕ್ತ್ಯಾಯುಧದಿಂದ ಕೊಲ್ಲಲ್ಪಟ್ಟನು.

**ಯದಿ ಹ್ಯೇನಂ ನಾಹನಿಷ್ಯತ್ಕರ್ಣಃ ಶಕ್ತ್ಯಾ ಮಹಾಮೃಧೇ ।**
**ಮಯಾ ವಧ್ಯೋಽಭವಿಷ್ಯತ್ಸ ಭೈಮಸೇನಿರ್ಘಟೋತ್ಕಚಃ ॥೨೫॥**

ಈ ಮಹಾಯುದ್ಧದಲ್ಲಿ ಕರ್ಣನೇನಾದರೂ ಭೀಮಸೇನನ ಮಗನಾದ ಘಟೋತ್ಕಚನನ್ನು ಶಕ್ತ್ಯಾಯುಧದಿಂದ ವಧಿಸದೇ ಇದ್ದಿದ್ದರೆ ನಾನೇ ಅವನನ್ನು ಸಂಹರಿಸಬೇಕಾಗಿದ್ದಿತು.

**ಮಯಾ ನ ನಿಹತಃ ಪೂರ್ವಮೇಷ ಯುಷ್ಮತ್ಪ್ರಿಯೇಪ್ಸಯಾ ।**
**ಏಷ ಹಿ ಬ್ರಾಹ್ಮಣದ್ವೇಷೀ ಯಜ್ಞದ್ವೇಷೀ ಚ ರಾಕ್ಷಸಃ ।**
**ಧರ್ಮಸ್ಯ ಲೋಪ್ತಾ ಪಾಪಾತ್ಮಾ ತಸ್ಮಾದೇಷ ನಿಪಾತಿತಃ ॥೨೭॥**

ನಿಮಗೆ ಪ್ರಿಯವನ್ನುಂಟುಮಾಡುವ ಅಪೇಕ್ಷೆಯಿಂದಲೇ ಹಿಂದೆಯೇ

ನಾನು ಇವನನ್ನು ಸಂಹರಿಸಲಿಲ್ಲ. ಈ ಘಟೋತ್ಕಚನು ಬ್ರಹ್ಮದ್ವೇಷೀ ; ಯಜ್ಞದ್ವೇಷೀ ; ಧರ್ಮಲೋಪೀ (ಧರ್ಮವನ್ನು ಹಾಳುಮಾಡತಕ್ಕವನು) ; ಪಾಪಾತ್ಮನು. ಆದುದರಿಂದಲೇ ನಾನು ಇವನನ್ನು ಉಪಾಯಾಂತರದಿಂದ ಸಾಯುವಂತೆ ಮಾಡಿದೆನು.

**ವ್ಯಂಸಿತಾ ಚಾಪ್ಯುಪಾಯೇನ ಶಕ್ರದತ್ತಾ ಮಯಾನಘ ।**
**ಯೇ ಹಿ ಧರ್ಮಸ್ಯ ಲೋಪ್ತಾರೋ ವಧ್ಯಾಸ್ತೇ ಮಮ ಪಾಣ್ಡವ ॥೨೮॥**

ಪಾಂಡವ! ಶಕ್ರನಿಂದ ಕರ್ಣನಿಗೆ ಕೊಡಲ್ಪಟ್ಟಿದ್ದ ಶಕ್ತ್ಯಾಯುಧವನ್ನು ಉಪಾಯದಿಂದ ಕರ್ಣನ ಕೈಬಿಡುವಂತೆ ಮಾಡಿದೆನು. ಯಾರು ಧರ್ಮ ಲೋಪವನ್ನು ಮಾಡುವರೋ ಅವರು ನನ್ನಿಂದ ವಧ್ಯರಾಗುತ್ತಾರೆ.

**ಧರ್ಮಸಂಸ್ಥಾಪನಾರ್ಥಂ ಹಿ ಪ್ರತಿಜ್ಞೈಷಾ ಮಮಾವ್ಯಯಾ ।**
**ಬ್ರಹ್ಮ ಸತ್ಯಂ ದಮಃ ಶೌಚಂ ಧರ್ಮೋ ಹ್ರೀಃ ಶ್ರೀರ್ಧೃತಿಃ ಕ್ಷಮಾ ।**
**ಯತ್ರ ತತ್ರ ರಮೇ ನಿತ್ಯಮಹಂ ಸತ್ಯೇನ ತೇ ಶಪೇ ॥೨೯॥**

ಅರ್ಜುನ! ಧರ್ಮದ ಸಂಸ್ಥಾಪನೆಗಾಗಿಯೇ ನಾನು ಅಚಲವಾದ ಈ ಪ್ರತಿಜ್ಞೆಯನ್ನು ಮಾಡಿರುವೆನು. ವೇದಾಭ್ಯಾಸ, ಸತ್ಯನಿಷ್ಠೆ, ಜಿತೇಂದ್ರಿಯತೆ, ಶುಚಿತ್ವ, ಧರ್ಮಾಚರಣೆ, ಪಾಪಕಾರ್ಯಮಾಡುವುದರಲ್ಲಿ ಲಜ್ಜೆ, ಸಾತ್ವಿಕ ಸಂಪತ್ತು, ಧೈರ್ಯ, ಕ್ಷಮಾಗುಣ–ಇವುಗಳು ಎಲ್ಲಿರುತ್ತವೆಯೋ ಅಲ್ಲಿ ನಾನು ಆನಂದವಾಗಿ ವಾಸಮಾಡುತ್ತಿರುತ್ತೇನೆ. ಪಾರ್ಥ! ಈ ಮಾತನ್ನು ನಾನು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ.

ನಾನು ಕರ್ಣನ ಅತುಲಪರಾಕ್ರಮವನ್ನು ವಿವರಿಸಿ ಹೇಳಿದುದಕ್ಕಾಗಿ ನೀನು ವಿಷಾದಿಸಬೇಕಾಗಿಲ್ಲ. ಸಮಯದಲ್ಲಿ ನಾನು ಅವನ ವಧೋಪಾಯ ವನ್ನು ಹೇಳುತ್ತೇನೆ. ಆಗ ನೀನು ಅವನನ್ನು ಧೈರ್ಯವಾಗಿ ಎದುರಿಸಬಹುದು. ಯುದ್ಧದಲ್ಲಿ ಭೀಮಸೇನನು ದುರ್ಯೋಧನನನ್ನು ಸಂಹರಿಸುತ್ತಾನೆ. ಅವನ ವಧೋಪಾಯವನ್ನೂ ನಾನು ನಿನ್ನೊಡನೆ ಸಮಯ ಬಂದಾಗ ಹೇಳುತ್ತೇನೆ.

ಅರ್ಜುನ! ಶತ್ರುಗಳ ಸೈನ್ಯದಲ್ಲಿ ಭಯಂಕರವಾದ ಗರ್ಜನೆಗಳ ಶಬ್ದವು ವೃದ್ಧಿಸುತ್ತಲೇ ಇದೆ. ನಿನ್ನ ಕಡೆಯ ಸೈನಿಕರು ದಿಕ್ಕಾಪಾಲಾಗಿ

ಪಲಾಯನಮಾಡುತ್ತಿದ್ದಾರೆ. ಲಕ್ಷ್ಯಭೇದನದಲ್ಲಿ ಸಿದ್ಧಹಸ್ತರಾದ ಕೌರವರು ನಿನ್ನ ಸೈನಿಕರನ್ನು ಧ್ವಂಸಮಾಡುತ್ತಿದ್ದಾರೆ. ಯೋಧಶ್ರೇಷ್ಠರಾದ ದ್ರೋಣರು ನಿಮ್ಮ ಸೈನ್ಯವನ್ನು ಬಾಣಾಗ್ನಿಯಿಂದ ದಹಿಸುತ್ತಿದ್ದಾರೆ."

೧೮೧ನೆಯ ಅಧ್ಯಾಯವು ಮುಗಿಯಿತು.

೧೮೨ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಕರ್ಣನು ಅರ್ಜುನನ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸದಿದ್ದುದಕ್ಕೆ ಕಾರಣವನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳಿದುದು

(ಧೃತರಾಷ್ಟ್ರನಿಗೆ ಒಂದು ಸಂದೇಹವುಂಟಾಗುತ್ತದೆ. ಇಂದ್ರದತ್ತವಾದ ಶಕ್ತಿಯು ಒಬ್ಬ ವೀರನನ್ನು ಖಂಡಿತವಾಗಿಯೂ ಸಂಹರಿಸುವುದೆಂಬ ವಿಷಯವು ತಿಳಿದಿದ್ದಿತು. ಅನಂತರ ಅದು ಪುನಃ ಇಂದ್ರನನ್ನೇ ಹೋಗಿ ಸೇರುವುದೆಂದೂ ತಿಳಿದಿದ್ದಿತು. ಅದನ್ನು ಎರಡನೆಯ ಬಾರಿಗೆ ಪ್ರಯೋಗಿಸುವ ಸಾಧ್ಯತೆಯಿರಲಿಲ್ಲ. ಕರ್ಣನ ಅವಶ್ಯಕತೆಯೂ ಅಷ್ಟೇ ಇದ್ದಿತು. ಅರ್ಜುನನೊಬ್ಬನನ್ನು ಕೊಲ್ಲುವ ಸಲುವಾಗಿಯೇ ಅವನು ಆ ಶಕ್ತಿಯನ್ನು ಪಡೆದುಕೊಂಡಿದ್ದನು. ಹಿಂದೆಯೂ ಸಹ ಕರ್ಣನು ಶಕ್ತ್ಯಾಯುಧದಿಂದ ಅರ್ಜುನನನ್ನು ಕೊಲ್ಲುವುದಾಗಿಯೂ, ಅನಂತರ ಉಳಿದ ಪಾಂಡವರು ನಿಷ್ಕ್ರಿಯರಾಗುವರೆಂದೂ ಕೃಪರೊಡನೆ ಹೇಳಿದ್ದಾನೆ. ವಿಷಯವು ಇಷ್ಟು ಸ್ಪಷ್ಟವಾಗಿರುವಾಗ ಕರ್ಣನು ಮೊದಲೇ ಆ ಶಕ್ತಿಯನ್ನು ಪ್ರಯೋಗಿಸಿ ಅರ್ಜುನನನ್ನೇಕೆ ಕೊಲ್ಲಲಿಲ್ಲ? ಒಂದೆರಡು ಸಮಯಗಳಲ್ಲಿ ಕರ್ಣನೊಡನೆ ಯುದ್ಧಕ್ಕೆ ಹೋಗಕೂಡದೆಂದು ಶ್ರೀಕೃಷ್ಣನು ಅರ್ಜುನನನ್ನು ತಡೆದ ಸನ್ನಿವೇಶಗಳೂ ಇವೆ. ಆದರೆ ಹಿಂದೆ ಹಲವು ಬಾರಿ ಕರ್ಣನಿಗೂ ಮತ್ತು ಅರ್ಜುನನಿಗೂ ನೇರವಾಗಿಯೇ ಯುದ್ಧವಾಗಿದೆ. ಕರ್ಣನು ಪರಾಜಿತನಾಗಿಯೂ ಹಿಂದಿರುಗಿದ್ದಾನೆ. ಅಂತಹ ಸಂದರ್ಭದಲ್ಲಾದರೂ ಕರ್ಣನು ಶಕ್ತಿಯನ್ನು ಪ್ರಯೋಗಿಸಬಹುದಾಗಿತ್ತಲ್ಲವೇ? ಈ ಹಿನ್ನೆಲೆಯಲ್ಲಿ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ).

**ಏಕವೀರವಧೇ ಮೋಘಾ ಶಕ್ತಿಃ ಸೂತಾತ್ಮಜೇ ಯದಾ ।**
**ಕಸ್ಮಾತ್ಸರ್ವಾನ್ಸಮುತ್ಸೃಜ್ಯ ಸ ತಾಂ ಪಾರ್ಥೇ ನ ಮುಕ್ತವಾನ್ ॥೧॥**

“ಸಂಜಯ! ಸೂತನ ಮಗನಾದ ಕರ್ಣನಲ್ಲಿದ್ದ ಶಕ್ತಿಯು ಒಬ್ಬ ವೀರನನ್ನು ಸಂಹರಿಸಿದೊಡನೆಯೇ ಪ್ರಯೋಜನವಿಲ್ಲದ್ದಾಗುವುದೆಂದು ತಿಳಿದಿದ್ದರೂ ಎಲ್ಲರನ್ನೂ ಬಿಟ್ಟು (ಮೊಟ್ಟಮೊದಲೇ) ಆ ಶಕ್ತಿಯನ್ನು ಕರ್ಣನು ಅರ್ಜುನನ ಮೇಲೆ ಏಕೆ ಪ್ರಯೋಗಿಸಲಿಲ್ಲ?

**ತಸ್ಮಿನ್ಹತೇ ಹತಾ ಹಿ ಸ್ಯುಃ ಸರ್ವೇ ಪಾಣ್ಡವಸೃಞ್ಜಯಾಃ ।**
**ಏಕವೀರವಧೇ ಕಸ್ಮಾದ್ಯುದ್ಧೇನ ಜಯಮಾದಧೇ ॥೨॥**

ಆ ಶಕ್ತಿಯಿಂದ ಅರ್ಜುನನೊಬ್ಬನು ಹತನಾಗಿದ್ದರೆ ಉಳಿದ ಪಾಂಡವ-ಸೃಂಜಯರು ಮೃತಪ್ರಾಯರೇ ಆಗುತ್ತಿದ್ದರು. ಒಬ್ಬ ಮಹಾವೀರನನ್ನು ನಿಃಸಂಶಯವಾಗಿ ವಧೆಮಾಡುವ ಸಾಧ್ಯತೆಯಿದ್ದಾಗ ಮತ್ತು ಒಬ್ಬ ವೀರನ ವಧೆಯಿಂದಲೇ ವಿಜಯವು ಲಭಿಸುವುದೆಂಬ ಭರವಸೆಯಿದ್ದಾಗ–ಆ ಒಬ್ಬ ವೀರನನ್ನೇ ಮೊದಲು ಸಂಹರಿಸಿ ವಿಜಯವನ್ನೇಕೆ ಪಡೆದುಕೊಳ್ಳಲಿಲ್ಲ?

**ಆಹೂತೋ ನ ನಿವರ್ತೇಯಮಿತಿ ತಸ್ಯ ಮಹಾವ್ರತಮ್ ।**
**ಸ್ವಯಂ ಮಾರ್ಗಯಿತವ್ಯಃ ಸ ಸೂತಪುತ್ರೇಣ ಫಾಲ್ಗುನಃ ॥೩॥**

‘ಯುದ್ಧಕ್ಕೆ ಆಹ್ವಾನಿಸಿದರೆ ಆಹ್ವಾನಿಸಿದವನೊಡನೆ ಯುದ್ಧಮಾಡದೇ ಹಿಂದಿರುಗುವುದಿಲ್ಲ’–ಎಂಬುದು ಅರ್ಜುನನ ಮಹಾವ್ರತವಾಗಿದ್ದಿತು. ಒಂದು ವೇಳೆ ಅರ್ಜುನನು ಕರ್ಣನೊಡನೆ ಯುದ್ಧಕ್ಕೆ ಬರದಿದ್ದರೆ ಕರ್ಣನೇ ಅರ್ಜುನನನ್ನು ಹುಡುಕಿಕೊಂಡು ಹೋಗಿ ಯುದ್ಧಕ್ಕೆ ಆಹ್ವಾನಿಸಬಹುದಾಗಿದ್ದಿತು.

ಕರ್ಣನು ಹೀಗೆ ಅರ್ಜುನನನ್ನು ದ್ವೈರಥಯುದ್ಧಕ್ಕೆ ಆಹ್ವಾನಿಸಿ ಶಕ್ರನು ದಯಪಾಲಿಸಿದ್ದ ಶಕ್ತ್ಯಾಯುಧದಿಂದ ಅರ್ಜುನನನ್ನು ಯಾವ ಕಾರಣದಿಂದ ಪ್ರಹರಿಸಲಿಲ್ಲವೆಂದು ಹೇಳು, ಸಂಜಯ!

ನಿಶ್ಚಯವಾಗಿಯೂ ನನ್ನ ಮಗನು ಬುದ್ಧಿಹೀನನು. ಅಸಹಾಯನು. ಪಾಪಿಷ್ಠನಾದ ಅವನನ್ನು ಶತ್ರುಗಳು ಸಂಪೂರ್ಣವಾಗಿ ವಂಚಿಸಿಬಿಟ್ಟರು. ಅಂತಹವನು ಶತ್ರುಗಳನ್ನು ಹೇಗೆ ತಾನೇ ಜಯಿಸಿಯಾನು? ಯಾವ ಮಹಾ ಶಕ್ತಿಯು ವಿಜಯಕ್ಕೆ ಆಶ್ರಯಸ್ಥಾನವಾಗಿದ್ದಿತೋ–ಆ ಶಕ್ತಿಯೇ ಶ್ರೀಕೃಷ್ಣನ ತಂತ್ರದಿಂದಾಗಿ ಘಟೋತ್ಕಚನ ಮೇಲೆ ಬಿಡಲ್ಪಟ್ಟು ವ್ಯರ್ಥವಾಗಿಹೋಯಿತು.

**ಕುಣೇರ್ಯಥಾ ಹಸ್ತಗತಂ ಹ್ರಿಯೇತ್ಫಲಂ ಬಲೀಯಸಾ ।**
**ತಥಾ ಶಕ್ತಿರಮೋಘಾ ಸಾ ಮೋಘೀಭೂತಾ ಘಟೋತ್ಕಚೇ ॥೭॥**

ಬಲಿಷ್ಠನೊಬ್ಬನಿಂದ ಹಸ್ತಸ್ವಾಧೀನವಿಲ್ಲದವನ ಕೈಯಲ್ಲಿರುವ ಹಣ್ಣು ಅಪಹರಿಸಲ್ಪಡುವಂತೆ–ಅಮೋಘವಾದ ಆ ಶಕ್ತಿಯು ಘಟೋತ್ಕಚನ ಮೇಲೆ ಪ್ರಮುಕ್ತವಾಗಿ ವ್ಯರ್ಥಮಾಡಲ್ಪಟ್ಟಿತು.

**ಯಥಾ ವರಾಹಸ್ಯ ಶುನಶ್ಚ ಯುಧ್ಯತೋ-**
**ಸ್ತಯೋರಭಾವೇ ಶ್ವಪಚಸ್ಯ ಲಾಭಃ ।**
**ಮನ್ಯೇ ವಿದ್ವನ್ವಾಸುದೇವಸ್ಯ ತದ್ವ-**
**ದ್ಯುದ್ಧೇ ಲಾಭಃ ಕರ್ಣಹೈಡಿಮ್ಬಯೋರ್ವೈ ॥೮॥**

ವಿದ್ವಾಂಸನೇ! ಹಂದಿ ಮತ್ತು ನಾಯಿಗಳಿಗೆ ಪರಸ್ಪರ ಜಗಳವಾದಾಗ ಆ ಎರಡರಲ್ಲಿ ಯಾವುದೊಂದು ಸತ್ತುಹೋದರೂ ಅಥವಾ ಎರಡೂ ಸತ್ತು ಹೋದರೂ ಅದರ ಲಾಭವು ಶ್ವಪಚನಿಗೇ (ಹಂದಿ-ನಾಯಿಗಳ ಮಾಂಸವನ್ನು ತಿನ್ನುವವನಿಗೇ) ಆಗುವಂತೆ–ಕರ್ಣ ಮತ್ತು ಘಟೋತ್ಕಚರ ಯುದ್ಧದಲ್ಲಿ ವಾಸುದೇವನಿಗೇ ಪರಮಲಾಭವಾಯಿತೆಂದು ನಾನು ಭಾವಿಸುತ್ತೇನೆ.

**ಘಟೋತ್ಕಚೋ ಯದಿ ಹನ್ಯಾದ್ಧಿ ಕರ್ಣಂ**
**ಪರೋ ಲಾಭಃ ಸ ಭವೇತ್ಪಾಣ್ಡವಾನಾಮ್ ।**
**ವೈಕರ್ತನೋ ವಾ ಯದಿ ತಂ ನಿಹನ್ಯಾ-**
**ತ್ತಥಾಪಿ ಕೃತ್ಯಂ ಶಕ್ತಿನಾಶಾತ್ಕೃತಂ ಸ್ಯಾತ್ ॥೯॥**

'ಒಂದು ವೇಳೆ ಘಟೋತ್ಕಚನೇ ಕರ್ಣನನ್ನು ಸಂಹರಿಸಿದರೆ ಅದರಿಂದ ಪಾಂಡವರಿಗೆ ಅತಿ ಹೆಚ್ಚಿನ ಲಾಭವೇ ಆಗುತ್ತದೆ. ಕರ್ಣನೇ ಘಟೋತ್ಕಚನನ್ನು ಸಂಹರಿಸುವುದಾದರೂ ಅಮೋಘವಾದ ಶಕ್ತ್ಯಾಯುಧದ ನಾಶದಿಂದ ಕಾರ್ಯಸಿದ್ಧಿಯಾದಂತಾಗುತ್ತದೆ. ಆಗಲೂ ಸಹ ಪಾಂಡವರಿಗೆ ಪರಮ ಪ್ರಯೋಜನವೇ ಆಗುತ್ತದೆ'–ಹೀಗೆಂಬುದಾಗಿ ಪ್ರಾಜ್ಞನಾದ, ಮನುಷ್ಯ ಶ್ರೇಷ್ಠನಾದ, ಪರಾಕ್ರಮಿಯಾದ, ಬುದ್ಧಿವಂತನಾದ ವಾಸುದೇವನು ತನ್ನ ಬುದ್ಧಿಯಿಂದ ಸಮಾಲೋಚಿಸಿಯೇ ಪಾಂಡವರಿಗೆ ಪ್ರಿಯವನ್ನೂ, ಹಿತ ವನ್ನೂ ಉಂಟುಮಾಡುವ ಸಲುವಾಗಿ ರಾತ್ರಿಯ ಯುದ್ಧದಲ್ಲಿ ಕರ್ಣನು ಘಟೋತ್ಕಚನನ್ನು ಸಂಹರಿಸುವಂತೆ ಮಾಡಿದನು."

"ಮಹಾರಾಜ! ನಿನ್ನ ಊಹೆಯಲ್ಲಿ ಹೆಚ್ಚು ಭಾಗ ನಿಜ. ಕರ್ಣನು ಶಕ್ತಿಯಿಂದ ಅರ್ಜುನನನ್ನು ಸಂಹರಿಸಲಿಚ್ಛಿಸಿರುವನೆಂದು ತಿಳಿದೇ ಮಹಾ ಬುದ್ಧಿಯಾದ, ಮಧುಹಂತಕನಾದ ಜನಾರ್ಧನನು ಅಮೋಘವಾದ ಆ ಶಕ್ತಿಯನ್ನು ನಿರರ್ಥಕಗೊಳಿಸುವ ಸಲುವಾಗಿಯೇ ಮಹಾವೀರ್ಯನಾದ, ರಾಕ್ಷಸೇಶ್ವರನಾದ ಘಟೋತ್ಕಚನನ್ನು ಕರ್ಣನೊಡನೆ ದ್ವೈರಥಯುದ್ಧ ಮಾಡಲು ನಿಯೋಜಿಸಿದನು (ಇದರಿಂದ ಶತ್ರುಗಳು ನಿನ್ನ ಮಗನನ್ನು ವಂಚಿಸಿದರೆಂದು ಭಾವಿಸಬೇಡ). ಹಿಂದಿನಿಂದಲೂ ನೀನು ಪಾಂಡವರ ವಿಷಯದಲ್ಲಿ ಮಾಡುತ್ತಿದ್ದ ದುರಾಲೋಚನೆಯ ಫಲವೇ ಇದಾಗಿದೆ. ಶ್ರೀಕೃಷ್ಣನು ಪಾರ್ಥನನ್ನು ಮಹಾರಥನಾದ ಕರ್ಣನಿಂದ ರಕ್ಷಿಸದೇ ಇದ್ದಿದ್ದರೆ ಆಗಲೇ ನಾವು ಕೃತಾರ್ಥರಾಗಿಬಿಡುತ್ತಿದ್ದೆವು.

**ಸಾಶ್ವಧ್ವಜರಥಃ ಸಂಖ್ಯೇ ಧೃತರಾಷ್ಟ್ರ ಪತೇದ್ಭುವಿ ।**
**ವಿನಾ ಜನಾರ್ದನಂ ಪಾರ್ಥೋ ಯೋಗಾನಾಮೀಶ್ವರಂ ಪ್ರಭುಮ್ ॥**

ಯೋಗೇಶ್ವರನಾದ, ಪ್ರಭುವಾದ ಜನಾರ್ದನನಿಲ್ಲದಿದ್ದರೆ ಪಾರ್ಥನು ಅಶ್ವ-ಧ್ವಜ-ರಥಸಮೇತನಾಗಿ ಎಂದೋ ರಣಾಂಗಣದಲ್ಲಿ ಹತನಾಗಿ ಬಿದ್ದು ಹೋಗುತ್ತಿದ್ದನು. ಶ್ರೀಕೃಷ್ಣನ ತತ್ಕಾಲಯೋಗ್ಯವಾದ, ನಾನಾವಿಧವಾದ ಉಪಾಯಗಳಿಂದ ಪಾರ್ಥನು ಸದಾ ರಕ್ಷಿಸಲ್ಪಡುತ್ತಿದ್ದಾನೆ. ಶ್ರೀಕೃಷ್ಣನಿಂದ ಪಾಲಿತನಾದ ಅರ್ಜುನನು ಶತ್ರುಗಳಿಗೆ ಅಭಿಮುಖವಾಗಿ ನಿಂತು ಅವರನ್ನು ಜಯಿಸುತ್ತಾನೆ.

**ಸ ವಿಶೇಷಾತ್ತ್ವಮೋಘಾಯಾಃ ಕೃಷ್ಣೋಽರಕ್ಷತ ಪಾಣ್ಡವಮ್ ।**
**ಹನ್ಯಾತ್ಕ್ಷಿಪ್ರಂ ಹಿ ಕೌನ್ತೇಯಂ ಶಕ್ತಿರ್ವೃಕ್ಷಮಿವಾಶನಿಃ ॥೧೬॥**

ಶ್ರೀಕೃಷ್ಣನು ವಿಶೇಷಪ್ರಯತ್ನದಿಂದಲೇ ಕರ್ಣನಲ್ಲಿದ್ದ ಅಮೋಘವಾದ ಶಕ್ತಿಯ ದೆಸೆಯಿಂದ ಅರ್ಜುನನನ್ನು ರಕ್ಷಿಸಿದನು. ಶ್ರೀಕೃಷ್ಣನು ಅರ್ಜುನನ ರಕ್ಷಣೆಯಲ್ಲಿ ಜಾಗರೂಕನಾಗಿರದಿದ್ದರೆ ಆ ಮಹಾಶಕ್ತಿಯು–ಸಿಡಿಲು ವೃಕ್ಷವನ್ನು ಬಹಳ ಬೇಗ ಧ್ವಂಸಮಾಡುವಂತೆ–ಅರ್ಜುನನನ್ನು ಬಹಳ ಬೇಗ ಧ್ವಂಸಮಾಡಿಬಿಡುತ್ತಿದ್ದಿತು."

ಧೃತರಾಷ್ಟ್ರನು ಪುನಃ ಹೇಳುತ್ತಾನೆ :

**ವಿರೋಧೀ ಚ ಕುಮನ್ತ್ರೀ ಚ ಪ್ರಾಜ್ಞಮಾನೀ ಮಮಾತ್ಮಜಃ ।**
**ಯಸ್ಯೈಷ ಸಮತಿಕ್ರಾನ್ತೋ ವಧೋಪಾಯೋ ಜಯಂ ಪ್ರತಿ ॥೧೭॥**

"ನನ್ನ ಮಗನು ಪಾರ್ಥರಿಗೆ ಅತ್ಯಂತವಿರೋಧಿಯಾಗಿದ್ದನು. ಅವನಿಗೆ ಕುಟಿಲೋಪಾಯಗಳನ್ನು ಬೋಧಿಸುವ ಕುಮಂತ್ರಿಗಳೂ ಅನೇಕರಿದ್ದರು. ಮೇಲಾಗಿ ತಾನೇ ಸರ್ವಜ್ಞನೆಂಬ ದುರಭಿಮಾನವೂ ಅವನಿಗಿದ್ದಿತು. ಹೀಗಿದ್ದರೂ ವಿಜಯದ ವಿಷಯವಾಗಿ ಅರ್ಜುನನ ವಧೋಪಾಯವು ಅವನ ಬುದ್ಧಿಯನ್ನೂ ಅತಿಕ್ರಮಿಸಿ ಹೋಯಿತು (ಅವನ ಬುದ್ಧಿಗದು ಹೊಳೆಯಲೇ ಇಲ್ಲ). ಇದು ಏಕೆ ಹೀಗಾಯಿತು?

**ಸ ವಾ ಕರ್ಣೋ ಮಹಾಬುದ್ಧಿಃ ಸರ್ವಶಸ್ತ್ರಭೃತಾಂ ವರಃ ।**
**ನ ಮುಕ್ತವಾನ್ಕಥಂ ಸೂತ ತಾಮಮೋಘಾಂ ಧನಂಜಯೇ ॥೧೮॥**

ಕರ್ಣನಾದರೋ ಮಹಾಬುದ್ಧಿಶಾಲಿ. ಶಸ್ತ್ರಧಾರಿಗಳಲ್ಲಿಯೇ ಶ್ರೇಷ್ಠನಾದವನು. ಇಂತಹವನೂ ಆ ಅಮೋಘಶಕ್ತಿಯನ್ನು ಪಾರ್ಥನ ಮೇಲೇಕೆ ಬಿಡಲಿಲ್ಲ? ತಡಮಾಡುತ್ತಿದ್ದುದೇಕೆ?

ಅದೂ ಹೋಗಲಿ, ಸಂಜಯ! ಮಹಾಬುದ್ಧಿಯವನಾದ ನೀನಾದರೂ ಈ ವಿಷಯವನ್ನು ಯೋಚಿಸಬಹುದಾಗಿತ್ತಲ್ಲವೇ? ಈ ವಿಷಯವು ನಿನ್ನ ಬುದ್ಧಿಯನ್ನೂ ಅತಿಕ್ರಮಿಸಿ ಹೇಗೆ ಹೋಯಿತು? ನೀನಾದರೂ ಕರ್ಣನಿಗೆ ಈ ವಿಷಯದಲ್ಲಿ ತಿಳಿವಳಿಕೆಯನ್ನು ಕೊಡಲಿಲ್ಲವೇಕೆ?"

"ಮಹಾರಾಜ! ನಮಗೆಲ್ಲರಿಗೂ ಈ ವಿಷಯವು ತಿಳಿದಿತ್ತು. ನಾವೆಲ್ಲರೂ ಈ ವಿಷಯವನ್ನು ಕರ್ಣನಿಗೆ ಹೇಳುತ್ತಲೇ ಇದ್ದೆವು. ದುರ್ಯೋಧನ, ಶಕುನಿ, ದುಃಶಾಸನ ಮತ್ತು ನಾನು–ಪ್ರತಿನಿತ್ಯವೂ ರಾತ್ರಿಯಲ್ಲಿ ಈ ಕಾರ್ಯವನ್ನೇ ಸಮರ್ಥಿಸುತ್ತಿದ್ದೆವು.

**ಶ್ವಃ ಸರ್ವಸೈನ್ಯಾನ್ಯುತ್ಸೃಜ್ಯ ಜಹಿ ಕರ್ಣ ಧನಂಜಯಮ್ ।**
**ಪ್ರೇಷ್ಯವತ್ಪಾಣ್ಡುಪಾಞ್ಚಾಲಾನುಪಭೋಕ್ಷ್ಯಾಮಹೇ ತತಃ ॥೨೧॥**

"ಕರ್ಣ! ನಾಳೆ ನೀನು ಎಲ್ಲ ಸೈನಿಕರನ್ನೂ ಬಿಟ್ಟು (ಶತ್ರುಪಕ್ಷದ ಇತರ ಸೈನಿಕರೊಡನೆ ಯುದ್ಧದಲ್ಲಿ ತೊಡಗದೆ) ಧನಂಜಯನೊಡನೆಯೇ ಯುದ್ಧದಲ್ಲಿ ತೊಡಗಿ ಶಕ್ತಿಯಿಂದ ಅವನನ್ನು ಸಂಹರಿಸು. ಅನಂತರ ನಾವು

ಪಾಂಡು-ಪಾಂಚಾಲರನ್ನು ಸೇವಕರಂತೆ ನಮ್ಮ ಕಾರ್ಯಕ್ಕೆ ಉಪಯೋಗಿಸಿ ಕೊಳ್ಳುತ್ತೇವೆ.

**ಅಥವಾ ನಿಹತೇ ಪಾರ್ಥೇ ಪಾಣ್ಡವಾನ್ಯತಮಂ ತತಃ ।**
**ಸ್ಥಾಪಯೇದ್ಯದಿ ವಾರ್ಷ್ಣೇಯಸ್ತಸ್ಮಾತ್ಕೃಷ್ಣೋ ಹಿ ಹನ್ಯತಾಮ್ ॥೨೨॥**

ಒಂದು ವೇಳೆ ಪಾರ್ಥನು ಹತನಾದರೂ ಶ್ರೀಕೃಷ್ಣನು ಪಾಂಡವರಲ್ಲಿ ಮತ್ತೊಬ್ಬನನ್ನು ಇಟ್ಟುಕೊಂಡು ಯುದ್ಧವನ್ನು ಮುಂದುವರಿಸಿ ನಮ್ಮನ್ನು ನಾಶಮಾಡುವನೆಂಬ ಸಂಶಯವಿದ್ದಲ್ಲಿ ಆ ಮಹಾಶಕ್ತಿಯಿಂದ ಶ್ರೀಕೃಷ್ಣನನ್ನೇ ಸಂಹರಿಸು.

**ಕೃಷ್ಣೋ ಹಿ ಮೂಲಂ ಪಾಣ್ಡೂನಾಂ ಪಾರ್ಥಃ ಸ್ಕನ್ಧ ಇವೋದ್ಗತಃ ।**
**ಶಾಖಾ ಇವೇತರೇ ಪಾರ್ಥಾಃ ಪಞ್ಚಾಲಾಃ ಪತ್ರಸಂಜ್ಞಿತಾಃ ॥೨೩॥**

ಪಾಂಡವರೆಂಬ ವೃಕ್ಷಕ್ಕೆ ಶ್ರೀಕೃಷ್ಣನೇ ಬೇರಿನ ರೂಪದಲ್ಲಿದ್ದಾನೆ. ಅರ್ಜುನನು ಕಾಂಡರೂಪದಲ್ಲಿದ್ದಾನೆ. ಯುಧಿಷ್ಠಿರಾದಿಗಳು ರೆಂಬೆಗಳಂತಿದ್ದಾರೆ. ಪಾಂಚಾಲರು ಎಲೆಗಳ ರೂಪದಲ್ಲಿದ್ದಾರೆ.

**ಕೃಷ್ಣಾಶ್ರಯಾಃ ಕೃಷ್ಣಬಲಾಃ ಕೃಷ್ಣನಾಥಾಶ್ಚ ಪಾಣ್ಡವಾಃ ।**
**ಕೃಷ್ಣಃ ಪರಾಯಣಂ ಚೈಷಾಂ ಜ್ಯೋತಿಷಾಮಿವ ಚನ್ದ್ರಮಾಃ ॥೨೪॥**

ಪಾಂಡವರು ಶ್ರೀಕೃಷ್ಣನನ್ನೇ ಆಶ್ರಯವನ್ನಾಗಿ ಹೊಂದಿರತಕ್ಕವರು. ಶ್ರೀಕೃಷ್ಣನನ್ನೇ ತಮ್ಮ ಬಲವೆಂದೂ ಭಾವಿಸಿರತಕ್ಕವರು. ಶ್ರೀಕೃಷ್ಣನನ್ನು ತಮ್ಮ ಸ್ವಾಮಿಯೆಂದೇ ಅವರು ದೃಢವಾಗಿ ನಂಬಿದ್ದಾರೆ. ನಕ್ಷತ್ರಗಳಿಗೆ ಚಂದ್ರನೇ ಆಶ್ರಯವಾಗಿರುವಂತೆ–ಪಾಂಡವರಿಗೆ ಶ್ರೀಕೃಷ್ಣನೇ ಆಶ್ರಯಭೂತನಾಗಿದ್ದಾನೆ.

**ತಸ್ಮಾತ್ಪರ್ಣಾನಿ ಶಾಖಾಶ್ಚ ಸ್ಕನ್ಧಂ ಚೋತ್ಸೃಜ್ಯ ಸೂತಜ ।**
**ಕೃಷ್ಣಂ ನಿಕೃನ್ಧಿ ಪಾಣ್ಡೂನಾಂ ಮೂಲಂ ಸರ್ವತ್ರ ಸರ್ವದಾ ॥೨೫॥**

ಕರ್ಣ! ಆದುದರಿಂದ ಎಲೆಗಳು, ರೆಂಬೆಗಳು, ಕಾಂಡ–ಎಲ್ಲವನ್ನೂ ಬಿಟ್ಟು ಪಾಂಡವರಿಗೆ ಸರ್ವತ್ರ ಎಲ್ಲ ಕಾಲಗಳಲ್ಲಿಯೂ ಮೂಲರೂಪನಾಗಿರುವ (ಬೇರಿನ ರೂಪದಲ್ಲಿರುವ) ಶ್ರೀಕೃಷ್ಣನನ್ನು ಕತ್ತರಿಸು (ಸಂಹರಿಸು)."

ಮಹಾರಾಜ! ಹೀಗೆಲ್ಲಾ ನಾವು ಕರ್ಣನಿಗೆ ಪ್ರತಿದಿನವೂ ರಾತ್ರಿಯಲ್ಲಿ ಬೋಧಿಸುತ್ತಲೇ ಇದ್ದೆವು.

**ಹನ್ಯಾದ್ಯದಿ ಹಿ ದಾಶಾರ್ಹಂ ಕರ್ಣೋ ಯಾದವನನ್ದನಮ್ ।**
**ಕೃತ್ಸ್ನಾ ವಸುಮತೀ ರಾಜನ್ವಶೇ ತಸ್ಯ ನ ಸಂಶಯಃ ॥೨೬॥**

ನಮ್ಮ ಸಲಹೆಯಂತೆ ಕರ್ಣನೇನಾದರೂ ಯಾದವನಂದನನಾದ ಶ್ರೀಕೃಷ್ಣನನ್ನೇ ಶಕ್ತಿಯಿಂದ ಸಂಹರಿಸಿಬಿಟ್ಟಿದ್ದರೆ ಈ ಅಖಂಡಭೂಮಂಡಲವೂ ದುರ್ಯೋಧನನ ವಶವಾಗಿಬಿಡುತ್ತಿದ್ದಿತು. ಈ ವಿಷಯದಲ್ಲಿ ಸಂಶಯವೇ ಇಲ್ಲ.

**ಯದಿ ಹಿ ಸ ನಿಹತಃ ಶಯೀತ ಭೂಮೌ**
**ಯದುಕುಲಪಾಣ್ಡವನನ್ದನೋ ಮಹಾತ್ಮಾ ।**
**ನನು ತವ ವಸುಧಾ ನರೇನ್ದ್ರ ಸರ್ವಾ**
**ಸಗಿರಿಸಮುದ್ರವನಾ ವಶಂ ವ್ರಜೇತ ॥೨೭॥**

ನರೇಂದ್ರ! ಒಂದು ವೇಳೆ ಯದುಕುಲದವರಿಗೂ ಮತ್ತು ಪಾಂಡವರಿಗೂ ಆನಂದಕಂದನಾದ, ಮಹಾತ್ಮನಾದ ಶ್ರೀಕೃಷ್ಣನೇನಾದರೂ ಕರ್ಣಶಕ್ತಿಯಿಂದ ಹತನಾಗಿ ರಣಭೂಮಿಯಲ್ಲಿ ಮಲಗಿದ್ದುದೇ ಆದರೆ ಗಿರಿ-ಸಮುದ್ರ ಸಹಿತವಾದ ಅಖಂಡಭೂಮಂಡಲವೂ ನಿನ್ನ ವಶವಾಗಿಬಿಡುತ್ತಿತ್ತಲ್ಲವೇ!

ನಮ್ಮ ಸಲಹೆಯಂತೆ ಕರ್ಣನ ಬುದ್ಧಿಯು ಹೀಗೆಯೇ ಮಾಡುವುದಾಗಿ ನಿಶ್ಚಯಿಸಿದ್ದರೂ ಯುದ್ಧಕಾಲದಲ್ಲಿ ತ್ರಿದಶೇಶ್ವರನಾದ, ಅಪ್ರಮೇಯನಾದ, ಹೃಷೀಕೇಶನಾದ ಶ್ರೀಕೃಷ್ಣನು–ಎದುರಿನಲ್ಲಿರುವಾಗ ಕರ್ಣನ ಆ ಬುದ್ಧಿಯು ವಿಮೋಹಗೊಳ್ಳುತ್ತಿದ್ದಿತು.

**ಅರ್ಜುನಂ ಚಾಪಿ ರಾಧೇಯಾತ್ಸದಾ ರಕ್ಷತಿ ಕೇಶವಃ ।**
**ನ ಹ್ಯೇನಮೈಚ್ಛತ್ಪ್ರಮುಖೇ ಸೌತೇಃ ಸ್ಥಾಪಯಿತುಂ ರಣೇ ॥೨೮॥**

ಕೇಶವನು ಅರ್ಜುನನನ್ನು ಸದಾಕಾಲದಲ್ಲಿಯೂ ರಾಧೇಯನಿಂದ ರಕ್ಷಿಸುತ್ತಲೇ ಇರುವನು. ಸೂತಪುತ್ರನಾದ ಕರ್ಣನೆದುರಿನಲ್ಲಿ ಅರ್ಜುನನನ್ನು ಯುದ್ಧಕ್ಕೆ ನಿಲ್ಲಿಸಲು ಶ್ರೀಕೃಷ್ಣನು ಸಾಮಾನ್ಯವಾಗಿ ಇಚ್ಛಿಸುತ್ತಿರಲಿಲ್ಲ. ಶ್ರೀಕೃಷ್ಣನು ಬೇರೆ ಯಾರನ್ನಾದರೂ ರಥಶ್ರೇಷ್ಠರನ್ನು ಕರ್ಣನೊಡನೆ ಯುದ್ಧಮಾಡಲು ಕಳುಹಿಸಿಬಿಡುತ್ತಿದ್ದನು. ಅಮೋಘವಾದ ಈ ಇಂದ್ರಶಕ್ತಿಯನ್ನು ವ್ಯರ್ಥಗೊಳಿಸುವುದು ಹೇಗೆಂಬುದೇ ಶ್ರೀಕೃಷ್ಣನ ನಿರಂತರವಾದ ಚಿಂತೆಯಾಗಿದ್ದಿತು (ಕೃಷ್ಣನನ್ನು ಸಂಹರಿಸುವಂತೆ ನಾವು ಅನುದಿನವೂ

ಕರ್ಣನಿಗೆ ಸಲಹೆಯನ್ನಿತ್ತರೂ ಆ ಕಾರ್ಯವೂ ಅಷ್ಟೇನೂ ಸುಲಭಸಾಧ್ಯ ವಾಗಿರಲಿಲ್ಲ).

**ಯಶ್ಚೈವಂ ರಕ್ಷತೇ ಪಾರ್ಥಂ ಕರ್ಣಾತ್ಪ್ರಿಯಕೃನ್ಮಹಾಮನಾಃ ।**
**ಆತ್ಮಾನಂ ಸ ಕಥಂ ರಾಜನ್ನ ರಕ್ಷೇತ್ಪುರುಷೋತ್ತಮಃ ॥೩೦॥**

ಮಹಾತ್ಮನಾದ, ಪುರುಷೋತ್ತಮನಾದ ಶ್ರೀಕೃಷ್ಣನು ಈ ರೀತಿಯಲ್ಲಿ ಕರ್ಣನಿಂದ ಅರ್ಜುನನನ್ನೇ ರಕ್ಷಿಸುತ್ತಿರುವಾಗ ತನ್ನನ್ನು ತಾನು ರಕ್ಷಿಸಿಕೊಳ್ಳದೇ ಇರುವನೇ?

ಮಹಾರಾಜ! ಈ ವಿಷಯಗಳೆಲ್ಲವನ್ನೂ ಸಮಾಲೋಚಿಸಿ ಹೇಳುತ್ತೇನೆ. ಚಕ್ರಾಯುಧನಾದ, ಅರಿಮರ್ದನನಾದ ಜನಾರ್ದನನನ್ನು ಜಯಿಸುವವರು ಮೂರು ಲೋಕಗಳಲ್ಲಿಯೇ ಯಾರೂ ಇರುವುದಿಲ್ಲ.

ಅನಂತರ ರಥಶ್ರೇಷ್ಠನಾದ, ಸತ್ಯವಿಕ್ರಮನಾದ ಸಾತ್ಯಕಿಯು ಮಹಾ ಬಾಹುವಾದ ಶ್ರೀಕೃಷ್ಣನನ್ನು ಕುರಿತು ಕರ್ಣನ ವಿಷಯವಾಗಿ ಒಮ್ಮೆ ಪ್ರಶ್ನಿಸಿದನು:

**ಅಯಂ ಚ ಪ್ರತ್ಯಯಃ ಕರ್ಣೇ ಶಕ್ತ್ಯಾಮಿತವಿಕ್ರಮಾ ।**
**ಕಿಮರ್ಥಂ ಸೂತಪುತ್ರೇಣ ನ ಮುಕ್ತಾ ಫಾಲ್ಗುನೇ ತು ಸಾ ॥೩೪॥**

"ಅಮಿತಪ್ರಭಾವದ ಶಕ್ತಿಯು ತನ್ನಲ್ಲಿರುವುದೆಂಬ ದೃಢವಿಶ್ವಾಸವು ಕರ್ಣನಲ್ಲಿದ್ದಿತು. ತನ್ನಲ್ಲಿರುವುದು ಅಮೋಘಶಕ್ತಿಯೆಂದೂ ಅದರಿಂದ ಒಬ್ಬ ಮಹಾವೀರನನ್ನು ಸಂಹರಿಸಬಹುದೆಂದೂ ಕರ್ಣನಿಗೆ ತಿಳಿದಿದ್ದರೂ ಕರ್ಣನು ಅರ್ಜುನನ ಮೇಲೆ ಆ ಶಕ್ತಿಯನ್ನು ಏಕೆ ಪ್ರಯೋಗಿಸಲಿಲ್ಲ?"

ಶ್ರೀಕೃಷ್ಣನು ಸಾತ್ಯಕಿಗೆ ಹೇಳುತ್ತಾನೆ :

"ಶೈನೇಯ! ದುರ್ಯೋಧನಪುರಃಸರರಾದ ದುಃಶಾಸನ-ಕರ್ಣ-ಶಕುನಿ-ಸೈಂಧವರೆಲ್ಲರೂ ಸತತವಾಗಿ ಯುದ್ಧದ ವಿಷಯದಲ್ಲಿ ಮಂತ್ರಾ ಲೋಚನೆಯನ್ನು ಮಾಡುತ್ತಲೇ ಇದ್ದರು. ಆ ಸಮಯದಲ್ಲವರು ಕರ್ಣ ನೊಡನೆ ಹೀಗೆ ಹೇಳುತ್ತಿದ್ದರು :

"ಕರ್ಣ! ಕರ್ಣ! ಮಹಾಧನುಷ್ಮಂತನೇ! ಯುದ್ಧದಲ್ಲಿ ಅಮಿತವಾದ ಪರಾಕ್ರಮವನ್ನು ತೋರುವವನೇ! ಜಯಿಸುವವರಲ್ಲಿ ಶ್ರೇಷ್ಠನೇ! ಮಹಾರಥನಾದ, ಕುಂತೀಪುತ್ರನಾದ ಧನಂಜಯನೊಬ್ಬನನ್ನು ಬಿಟ್ಟು ನೀನು

ಇನ್ನಾರಮೇಲೂ ನಿನ್ನಲ್ಲಿರುವ ಅಮೋಘಶಕ್ತಿಯನ್ನು ಪ್ರಯೋಗಿಸಬಾರದು. ದೇವತೆಗಳಲ್ಲಿ ವಾಸವನು ಪರಮಯಶೋವಂತನಾಗಿರುವಂತೆ–ಅರ್ಜುನನೇ ಪಾಂಡವರಲ್ಲಿ ಮಹಾಯಶೋವಂತನಾಗಿದ್ದಾನೆ. ಅವನೊಬ್ಬನು ಹತನಾದ ನೆಂದರೆ ಸೃಂಜಯರೂ ಮತ್ತು ಪಾಂಡವರೂ–ಮುಖಸ್ವರೂಪನಾದ ಅಗ್ನಿ ಯಿಂದ ವಿಹೀನರಾದ ದೇವತೆಗಳಂತೆ–ಮೃತಪ್ರಾಯರೇ ಆಗುತ್ತಾರೆ."

ಶೈನೇಯ! ದುರ್ಯೋಧನಾದಿಗಳು ಹೇಳಿದ ಆ ಸಲಹೆಗೆ ಕರ್ಣನು ಒಪ್ಪಿ–"ಹಾಗೆಯೇ ಮಾಡುತ್ತೇನೆ. ಯುದ್ಧದಲ್ಲಿ ಗಾಂಡೀವಿಯನ್ನು ವಧಿಸು ತ್ತೇನೆ"–ಎಂದು ಪ್ರತಿನಿತ್ಯವೂ ಪ್ರತಿಜ್ಞೆಮಾಡುತ್ತಿದ್ದನು. ಗಾಂಡೀವಧನ್ವನಾದ ಅರ್ಜುನನನ್ನು ವಧಿಸಬೇಕೆಂದು ನಿತ್ಯವೂ ಅವನ ಮನಸ್ಸಿನಲ್ಲಿ ಇರುತ್ತಲೇ ಇದ್ದಿತು. ಆದರೆ ನಾನೇ ಅನುದಿನವೂ ರಾಧೇಯನನ್ನು ವಿಮೋಹ ಗೊಳಿಸುತ್ತಿದ್ದೆನು. ಆದುದರಿಂದ ಕರ್ಣನು ಶ್ವೇತವಾಹನನ ಮೇಲೆ ಶಕ್ತಿಯನ್ನು ಪ್ರಯೋಗಿಸಲಿಲ್ಲ. ಫಾಲ್ಗುನನಿಗೆ ಆ ಶಕ್ತಿಯೇ ಮೃತ್ಯು–ಎಂದು ಸದಾಕಾಲವೂ ಚಿಂತಿಸುತ್ತಿದ್ದ ನನಗೆ ನಿದ್ರೆಯೂ ಬರುತ್ತಿರಲಿಲ್ಲ. ನನ್ನ ಮನಸ್ಸಿನಲ್ಲಿ ಯಾವ ಹರ್ಷವೂ ಇರಲಿಲ್ಲ.

ಶಿನಿಪುಂಗವನೇ! ಆ ಶಕ್ತಿಯನ್ನು ಕರ್ಣನು ಘಟೋತ್ಕಚನ ಮೇಲೆ ಬಿಟ್ಟಿದ್ದನ್ನು ನೋಡಿದನಂತರ, ಅರ್ಜುನನು ಮೃತ್ಯುವಿನ ಬಾಯಿಂದ ಹೊರಬಂದಿರುವುದನ್ನು ನಾನು ಕಾಣುತ್ತಿದ್ದೇನೆ.

ಶೈನೇಯ! ನನಗೆ ಯುದ್ಧದಲ್ಲಿ ಅರ್ಜುನನನ್ನು ರಕ್ಷಿಸುವುದಕ್ಕಿಂತಲೂ ತಂದೆ-ತಾಯಿ, ಅಣ್ಣ-ತಮ್ಮಂದಿರು, ನೀವು ಮತ್ತು ಎಲ್ಲಕ್ಕಿಂತಲೂ ಪ್ರಿಯ ವಾದ ನನ್ನ ಪ್ರಾಣಗಳೂ ಸಹ ಹೆಚ್ಚೆನಿಸುವುದಿಲ್ಲ. ತ್ರೈಲೋಕ್ಯರಾಜ್ಯ ಕ್ಕಿಂತಲೂ ಸುದುರ್ಲಭವಾದ ವಸ್ತುವೊಂದಿದ್ದು ಆ ವಸ್ತುವು ನನಗೆ ಲಭಿಸು ವುದಾಗಿದ್ದರೂ ಕುಂತಿಯ ಮಗನಾದ ಅರ್ಜುನನನ್ನು ಬಿಟ್ಟು ಆ ವಸ್ತುವನ್ನು ನಾನೊಬ್ಬನೇ ಉಪಭೋಗಿಸಲು ಇಚ್ಛೆಪಡುವುದಿಲ್ಲ. ಯುಯುಧಾನನೇ! ಕರ್ಣನ ಶಕ್ತಿಯ ವಿನಾಶದಿಂದಾಗಿ ಸತ್ತುಹೋದ ಧನಂಜಯನು ಬದುಕಿ ಬಂದನೆಂಬ ಭಾವನೆಯಿಂದಾಗಿ ನನಗೆ ಅತಿಯಾದ ಆನಂದವಾಗಿದೆ. ಈ ಕಾರಣದಿಂದಲೇ ನಾನು ಕರ್ಣನೊಡನೆ ಯುದ್ಧಮಾಡಲು ರಾಕ್ಷಸನನ್ನೇ

ಕಳುಹಿಸಿದೆನು. ಈ ರಾತ್ರಿಯಲ್ಲಿ ಕರ್ಣನನ್ನು ಎದುರಿಸಿ ಯುದ್ಧಮಾಡಲು ಬೇರೆ ಯಾರೂ ಶಕ್ತರಾಗಿರಲಿಲ್ಲ."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಧನಂಜಯನ ಹಿತದಲ್ಲಿಯೇ ಮತ್ತು ಅವನಿಗೆ ಪ್ರಿಯವನ್ನುಂಟುಮಾಡುವುದರಲ್ಲಿಯೇ ಸರ್ವದಾ ನಿರತನಾದ ಶ್ರೀಕೃಷ್ಣನು ಸಾತ್ಯಕಿಯೊಡನೆ ಈ ಮಾತುಗಳನ್ನು ಹೇಳಿದನು."

ಗಲ೨ನೆಯ ಅಧ್ಯಾಯವು ಮುಗಿಯಿತು.

೧೮೩ನೆಯ ಅಧ್ಯಾಯ ಘಟೋತ್ಕಚವಧಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ಪಶ್ಚಾತ್ತಾಪ : ಸಂಜಯನ ಉತ್ತರ : ಘಟೋತ್ಕಚನ ವಧೆಗಾಗಿ ಯುಧಿಷ್ಠಿರನ ಶೋಕ : ಶ್ರೀಕೃಷ್ಣ ಮತ್ತು ಕೃಷ್ಣದ್ವೈಪಾಯನರಿಂದ ಸಮಾಧಾನ

ವ್ಯಾಕುಲನಾದ ಧೃತರಾಷ್ಟ್ರನು ಹೇಳುತ್ತಾನೆ :

"ಸಂಜಯ! ಕರ್ಣ, ದುರ್ಯೋಧನ, ಸುಬಲಪುತ್ರನಾದ ಶಕುನಿ ಮತ್ತು ಎಲ್ಲರಿಗಿಂತಲೂ ವಿಶೇಷವಾಗಿ ನೀನು ಈ ಎಲ್ಲರೂ ಮಹತ್ತರವಾದ ಅನೀತಿಯನ್ನೇ ಅನುಸರಿಸಿದಿರಿ. ಕರ್ಣನಲ್ಲಿರುವ ಶಕ್ತಿಯು ಅನಿವಾರ್ಯ ವಾದುದು ; ಇಂದ್ರಸಹಿತರಾದ ದೇವತೆಗಳಿಂದಲೂ ಎದುರಿಸಲು ಅಸಾಧ್ಯ ವಾದುದು ; ಒಬ್ಬನೇ ಒಬ್ಬನನ್ನು ಸಂಹರಿಸತಕ್ಕುದು–ಎಂಬುದನ್ನು ನೀವೆ ಲ್ಲರೂ ತಿಳಿದವರಾಗಿದ್ದರೂ ಅರ್ಜುನನನ್ನು ಒಡನೆಯೇ ಸಂಹರಿಸುವಂತೆ ಕರ್ಣನಿಗೇಕೆ ಒತ್ತಾಯಮಾಡಿ ಹೇಳಲಿಲ್ಲ? ಯುದ್ಧವು ಪ್ರಾರಂಭವಾದಾಗಲೇ (ದ್ರೋಣರು ಸೇನಾಪತಿಗಳಾದ ಕೂಡಲೇ) ಕರ್ಣನು ಆ ಮಹಾಶಕ್ತಿಯನ್ನು ದೇವಕಿಯ ಮಗನಾದ ಶ್ರೀಕೃಷ್ಣನ ಮೇಲಾಗಲೀ ಅರ್ಜುನನ ಮೇಲಾಗಲೀ ಏಕೆ ಬಿಡಲಿಲ್ಲ?"

"ಮಹಾರಾಜ! ಇದರಲ್ಲಿ ನಮ್ಮದು ಯಾವ ಅಪರಾಧವೂ ಇಲ್ಲ. ಕುರುಕುಲಶ್ರೇಷ್ಠನೇ! ಪ್ರತಿದಿನವೂ ಯುದ್ಧಭೂಮಿಯಿಂದ ಹಿಂದಿರುಗಿದ ನಂತರ ರಾತ್ರಿಯಲ್ಲಿ ನಾವೆಲ್ಲರೂ ಸೇರಿ ಸಮಾಲೋಚನೆಮಾಡಿ ಈ ಸಲಹೆ ಯನ್ನೇ ನಾವು ಕರ್ಣನಿಗೆ ನೀಡುತ್ತಿದ್ದೆವು :

**ಪ್ರಭಾತಮಾತ್ರೇ ಶ್ವೋಭೂತೇ ಕೇಶವಾಯಾರ್ಜುನಾಯ ವಾ ।**
**ಶಕ್ತಿರೇಷಾ ಹಿ ಮೋಕ್ತವ್ಯಾ ಕರ್ಣ ಕರ್ಣೇತಿ ನಿತ್ಯಶಃ ॥೫॥**

'ಕರ್ಣ!ಕರ್ಣ! ನಾಳೆ ಬೆಳಗಾಗುತ್ತಲೇ ಕೇಶವನ ಮೇಲಾಗಲೀ, ಅರ್ಜುನನ ಮೇಲಾಗಲೀ ಈ ಶಕ್ತಿಯನ್ನು ನೀನು ಪ್ರಯೋಗಿಸಲೇಬೇಕು'–ಎಂದೇ ನಾವು ಕರ್ಣನಿಗೆ ಅನುದಿನವೂ ಹೇಳುತ್ತಲೇ ಇದ್ದೆವು. ಆದರೆ ಬೆಳಗಾಗುತ್ತಲೇ ದೇವತೆಗಳ ಪ್ರಭಾವದಿಂದಲೋ ಎಂಬಂತೆ ಕರ್ಣನ, ದುರ್ಯೋಧನನ ಮತ್ತು ಇತರ ಯೋಧರ ಹಿಂದಿನ ರಾತ್ರಿಯಲ್ಲಿದ್ದ ಬುದ್ಧಿಯು ನಷ್ಟವಾಗಿ ಹೋಗುತ್ತಿತ್ತು (ಕಳೆದ ರಾತ್ರಿಯಲ್ಲಿ ಕೈಗೊಂಡ ನಿರ್ಧಾರದ ಸ್ಮರಣೆಯೇ ಬರುತ್ತಿರಲಿಲ್ಲ).

**ದೈವಮೇವ ಪರಂ ಮನ್ಯೇ ಯತ್ಕರ್ಣೋ ಹಸ್ತಸಂಸ್ಥಯಾ ।**
**ನ ಜಘಾನ ರಣೇ ಪಾರ್ಥಂ ಕೃಷ್ಣಂ ವಾ ದೇವಕೀಸುತಮ್ ॥೬॥**

ಕರ್ಣನು ತನ್ನ ಕೈಯಲ್ಲಿದ್ದ ಶಕ್ತಿಯಿಂದ ಪಾರ್ಥನನ್ನಾಗಲೀ, ದೇವಕಿಯ ಮಗನಾದ ಶ್ರೀಕೃಷ್ಣನನ್ನಾಗಲೀ–ಸಂಹರಿಸದೇ ಇರುವುದಕ್ಕೆ ದೈವವೇ ಮುಖ್ಯ ಕಾರಣವೆಂದು ನಾನು ಭಾವಿಸುತ್ತೇನೆ. ಕರ್ಣನ ಹಸ್ತಗತವಾಗಿದ್ದ ಶಕ್ತಿಯು ಕಾಳರಾತ್ರಿಯಂತೆ ಸರ್ವದಾ ಜಾಗ್ರತವಾಗಿಯೇ ಇದ್ದಿತು. ಅವನ ಬುದ್ಧಿಯು ದೈವದಿಂದ ನಷ್ಟವಾಗುತ್ತಿದ್ದ ಕಾರಣದಿಂದಲೇ ಕರ್ಣನು ಆ ಶಕ್ತ್ಯಾಯುಧವನ್ನು ಪ್ರಯೋಗಿಸಲಿಲ್ಲ. ದೇವಮಾಯೆಯಿಂದ ವಿಮೋಹಿತನಾದ ಕರ್ಣನು ದೇವಕಿಯ ಮಗನಾದ ಕೃಷ್ಣನ ಮೇಲಾಗಲೀ, ಇಂದ್ರಸದೃಶನಾದ ಅರ್ಜುನನ ಮೇಲಾಗಲೀ–ವಧಾರ್ಥವಾಗಿ ವಾಸವೀಶಕ್ತಿಯನ್ನು ಪ್ರಯೋಗಿಸಲಿಲ್ಲ."

"ಸಂಜಯ! ನೀವೆಲ್ಲರೂ ಈಗಾಗಲೇ ದೈವದಿಂದ ನಷ್ಟರಾಗಿ ಹೋಗಿದ್ದೀರಿ. ಕೇಶವನ ಬುದ್ಧಿವಂತಿಕೆಯಿಂದಾಗಿ ಇಂದ್ರನ ಆ ಮಹಾಶಕ್ತಿಯು ತೃಣಪ್ರಾಯನಾದ ಘಟೋತ್ಕಚನನ್ನು ಸಂಹರಿಸಿ ಹೊರಟುಹೋಯಿತು. ನಿಮ್ಮ ದುರ್ನೀತಿಯಿಂದಾಗಿ ಕರ್ಣನೂ, ನನ್ನ ಎಲ್ಲ ಮಕ್ಕಳೂ ಮತ್ತು ಉಳಿದೆಲ್ಲ ರಾಜರೂ ಯಮಾಲಯಕ್ಕೆ ಹೋದರೆಂದು ನಾನು ಈಗಾಗಲೇ ಭಾವಿಸಿಬಿಟ್ಟಿದ್ದೇನೆ. ಸಂಜಯ! ಘಟೋತ್ಕಚನ ವಧೆಯಾದನಂತರ ಕೌರವರಿಗೂ ಮತ್ತು ಪಾಂಡವರಿಗೂ ಯಾವ ರೀತಿಯಲ್ಲಿ ಯುದ್ಧವು ನಡೆಯಿತೆಂಬು

ದನ್ನು ಹೇಳು. ಪ್ರಹಾರಕುಶಲರಾದ ಸೃಂಜಯ-ಪಾಂಚಾಲರು ತಮ್ಮ ಸೈನ್ಯವನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿ ದ್ರೋಣರನ್ನು ಆಕ್ರಮಿಸಿದರಲ್ಲವೇ? ಅವರು ಯಾವ ರೀತಿಯಲ್ಲಿ ದ್ರೋಣರೊಡನೆ ಯುದ್ಧಮಾಡಿದರು? ಭೂರಿಶ್ರವಸನ ಮತ್ತು ಸೈಂಧವನ ವಧೆಯಿಂದಾಗಿ ದ್ರೋಣರು ಬಹಳ ಕುಪಿತರಾಗಿದ್ದರು. ಜೀವಿತದ ಹಂಗನ್ನೇ ತೊರೆದು ಸೈನ್ಯದೊಳಗೆ ನುಗ್ಗುತ್ತಿದ್ದ, ಆಕಳಿಸುವ ವ್ಯಾಘ್ರದಂತಿದ್ದ, ಬಾಯ್ದೆರೆದ ಅಂತಕನಂತೆಯೇ ಕಾಣುತ್ತಿದ್ದ, ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಿದ್ದ ದ್ರೋಣರನ್ನು ಪಾಂಡು-ಸೃಂಜಯರು ಹೇಗೆ ಎದುರಿಸಿದರು? ಆಚಾರ್ಯರಾದ ದ್ರೋಣರನ್ನು ರಕ್ಷಿಸುತ್ತಿದ್ದ ದುರ್ಯೋಧನಪುರಃಸರರಾದ ಕೃಪ-ಕರ್ಣಾಶ್ವತ್ಥಾಮರು ಆ ಸಮಯದಲ್ಲಿ ಏನು ಮಾಡುತ್ತಿದ್ದರು? ದ್ರೋಣರನ್ನು ಸಂಹರಿಸಲು ಇಚ್ಛಿಸಿ ಯುದ್ಧಮಾಡುತ್ತಿದ್ದ ಸವ್ಯಸಾಚಿಯನ್ನೂ–ವೃಕೋದರನನ್ನೂ ನನ್ನ ಕಡೆಯ ಸೈನಿಕರು ಯಾವ ರೀತಿಯಲ್ಲಿ ಎದುರಿಸಿದರು?–ಈ ಎಲ್ಲ ವಿಷಯಗಳನ್ನೂ ನನ್ನೊಡನೆ ಹೇಳು, ಸಂಜಯ! ಸಿಂಧುರಾಜನಾದ ಜಯದ್ರಥನ ವಧೆಯಿಂದಾಗಿ ಪರಮಕ್ರುದ್ಧರಾಗಿದ್ದ ಕೌರವರೂ–ಘಟೋತ್ಕಚನ ವಧೆಯಿಂದಾಗಿ ಪರಮಕ್ರುದ್ಧರಾಗಿದ್ದ ಪಾಂಡವರೂ ಆ ರಾತ್ರಿಯಲ್ಲಿ ಯಾವ ರೀತಿ ಯುದ್ಧ ಮಾಡಿದರೆಂಬುದನ್ನು ಸವಿಸ್ತರವಾಗಿ ಹೇಳು."

"ಕೌರವೇಶ್ವರ! ಆ ಕರಾಳರಾತ್ರಿಯಲ್ಲಿ ಕರ್ಣನು ಘಟೋತ್ಕಚನನ್ನು ಸಂಹರಿಸಲಾಗಿ, ನಿನ್ನ ಸೈನಿಕರೆಲ್ಲರೂ ಪರಮಹೃಷ್ಟರಾಗಿ ಯುದ್ಧೋತ್ಸಾಹ ದಿಂದ ಗರ್ಜನೆಮಾಡುತ್ತಾ ಬಹಳ ವೇಗವಾಗಿ ಶತ್ರುಸೈನಿಕರ ಮೇಲೆ ಬೀಳುತ್ತಾ ಧ್ವಂಸಮಾಡುತ್ತಿರಲಾಗಿ, ಗಾಢವಾದ ಆ ರಾತ್ರಿಯಲ್ಲಿ ಯುಧಿಷ್ಠಿರರಾಜನು ಪರಮದುಃಖಿಯಾಗಿದ್ದನು. ತನ್ನ ಸಮೀಪದಲ್ಲಿಯೇ ಇದ್ದ ಮಹಾಬಾಹುವಾದ ಭೀಮಸೇನನನ್ನು ಕುರಿತು ಹೇಳಿದನು :

"ಮಹಾಬಾಹುವೇ! ದುರ್ಯೋಧನನ ಸೈನಿಕರನ್ನು ತಡೆದು ನಿಲ್ಲಿಸು. ಘಟೋತ್ಕಚನ ಮರಣದಿಂದಾಗಿ ನಾನು ಮೋಹಾವಿಷ್ಟನಾಗಿದ್ದೇನೆ."

ಹೀಗೆ ಭೀಮಸೇನನಿಗೆ ಆದೇಶನೀಡಿ ಯುಧಿಷ್ಠಿರನು ತನ್ನ ರಥ ದಲ್ಲಿಯೇ ಖಿನ್ನಮನಸ್ಕನಾಗಿ ಕುಳಿತಿದ್ದನು. ಅವನ ಮುಖವು ಕಣ್ಣೀರಿನಿಂದ ತೋಯ್ದುಹೋಗಿದ್ದಿತು. ಪುನಃ-ಪುನಃ ಸುದೀರ್ಘವಾಗಿ ನಿಟ್ಟುಸಿರು

ಬಿಡುತ್ತಿದ್ದನು. ಕರ್ಣನ ಅದ್ಭುತಪರಾಕ್ರಮವನ್ನು ಕಂಡು ಯುಧಿಷ್ಠಿರನ ಮನಸ್ಸಿನಲ್ಲಿ ಘೋರವಾದ ಚಿಂತೆಯು ಉದ್ಭವಿಸಿತು. ವ್ಯಥಿತನಾಗಿ, ದೀನ ಚಿತ್ತನಾಗಿ ಕುಳಿತಿದ್ದ ಯುಧಿಷ್ಠಿರನನ್ನು ನೋಡಿ ಶ್ರೀಕೃಷ್ಣನು ಹೇಳಿದನು :

"ಕೌಂತೇಯ! ವ್ಯಥಿತನಾಗಬೇಡ. ಸಾಧಾರಣಮನುಷ್ಯರಂತೆ ದುಃಖಪಡುವುದು ನಿನ್ನಂತಹವನಿಗೆ ಉಚಿತವೆನಿಸುವುದಿಲ್ಲ. ಎದ್ದೇಳು, ಯುಧಿಷ್ಠಿರ! ಯುದ್ಧಮಾಡು. ಗುರುತರವಾದ ಈ ಭಾರವನ್ನು ಧೈರ್ಯದಿಂದ ವಹಿಸು, ನೀನೇ ಗಾಬರಿಗೊಂಡೆಯಾದರೆ ವಿಜಯದಲ್ಲಿಯೇ ಸಂದೇಹ ವುಂಟಾಗುತ್ತದೆ."

ಮಹಾರಾಜ! ಶ್ರೀಕೃಷ್ಣನ ಮಾತುಗಳನ್ನು ಕೇಳಿ ಧರ್ಮರಾಜನಾದ ಯುಧಿಷ್ಠಿರನು ಕಣ್ಣೀರನ್ನು ಕೈಗಳಿಂದ ಒರೆಸಿಕೊಂಡು ಶ್ರೀಕೃಷ್ಣನೊಡನೆ ಹೇಳಿದನು :

"ಮಹಾಬಾಹುವೇ! ಶ್ರೀಕೃಷ್ಣ! ಧರ್ಮಗಳ ಶ್ರೇಷ್ಠವಾದ ಮಾರ್ಗವು ನನಗೆ ತಿಳಿದಿದೆ.

**ಬ್ರಹ್ಮಹತ್ಯಾ ಫಲಂ ತಸ್ಯ ಯೈಃ ಕೃತಂ ನಾವಬುಧ್ಯತೇ ॥೨೭॥**

ಒಬ್ಬನು ಸಮಯದಲ್ಲಿ ಮಾಡಿದ ಉಪಕಾರವನ್ನು ಯಾವನು ಸ್ಮರಿಸಿ ಕೊಳ್ಳುವುದಿಲ್ಲವೋ–ಅಂತಹವನಿಗೆ ಬ್ರಹ್ಮಹತ್ಯೆಯನ್ನು ಮಾಡಿದ ಫಲವು ಲಭ್ಯವಾಗುತ್ತದೆ. ನಾವು ಅರಣ್ಯದಲ್ಲಿದ್ದಾಗ ಘಟೋತ್ಕಚನಿನ್ನೂ ಚಿಕ್ಕವ ನಾಗಿಯೇ ಇದ್ದನು. ಆದರೂ ಸಹ ಮಹಾತ್ಮನಾದ, ಸತ್ಪುರುಷನಾದ ಅವನು ನಮಗೆ ಅನೇಕರೀತಿಗಳಲ್ಲಿ ಉಪಕಾರಗಳನ್ನು ಮಾಡಿದ್ದಾನೆ. ಅಸ್ತ್ರಗಳನ್ನು ಪಡೆದು ಬರುವ ಸಲುವಾಗಿ ಶ್ವೇತವಾಹನನು ಹೋಗಿರುವನೆಂಬುದನ್ನು ತಿಳಿದು ಮಹಾಧನುಷ್ಮಂತನಾದ ಘಟೋತ್ಕಚನು ಕಾಮ್ಯಕವನದಲ್ಲಿ ನನ್ನ ಸೇವೆಯಲ್ಲಿಯೇ ನಿರತನಾಗಿಬಿಟ್ಟಿದ್ದನು. ಧನಂಜಯನು ಬರುವವರೆಗೂ ಅವನು ನಮ್ಮ ಜೊತೆಯಲ್ಲಿಯೇ ಇದ್ದನು. ಗಂಧಮಾದನಪರ್ವತದ ಯಾತ್ರೆಮಾಡುತ್ತಿದ್ದಾಗ ದುರ್ಗಮವಾದ ಪ್ರದೇಶಗಳನ್ನು ಅವನ ಸಹಾಯ ದಿಂದಲೇ ನಾವು ದಾಟಿದೆವು. ದಾರಿನಡೆದ ಆಯಾಸದಿಂದ ಪರಿಶ್ರಾಂತಳಾಗಿದ್ದ ದ್ರೌಪದಿಯು ಅವನ ಹೆಗಲಮೇಲೆಯೇ ಕುಳಿತು ಪ್ರಯಾಣಮಾಡಿದಳು. ಈ ಮಹಾಯುದ್ಧದ ಆರಂಭದಿಂದಲೂ ನನ್ನ ಸಲುವಾಗಿ ಘಟೋತ್ಕಚನು ಅತ್ಯಂತದುಷ್ಕರವಾದ ಸಾಹಸಕರ್ಮಗಳನ್ನೂ ಮಾಡಿರುವನು. ಸಹದೇವನ

ವಿಷಯದಲ್ಲಿ ನನಗೆ ಯಾವ ಸ್ವಾಭಾವಿಕವಾದ ಪ್ರೀತಿಯಿರುವುದೋ–ಅದೇ ಪ್ರೀತಿಯು ರಾಕ್ಷಸೇಂದ್ರನಾದ ಘಟೋತ್ಕಚನಲ್ಲಿಯೂ ಇದ್ದಿತು. ಮಹಾ ಬಾಹುವಾದ ರಾಕ್ಷಸನು ನನಗೆ ಪರಮಭಕ್ತನಾಗಿದ್ದನು. ನಾನೂ ಅವನಿಗೆ ಅತ್ಯಂತಪ್ರಿಯನಾಗಿದ್ದೆನು. ಅವನೂ ಸಹ ನನಗೆ ಬಹಳ ಪ್ರಿಯನಾಗಿದ್ದನು. ಅಂತಹವನು ನನ್ನನ್ನಗಲಿ ಹೋದ ಕಾರಣದಿಂದ ನಾನೀಗ ಶೋಕತಪ್ತ ನಾಗಿದ್ದೇನೆ. ನನ್ನ ಬುದ್ಧಿಯೇ ಭ್ರಂಶವಾಗಿದೆ.

ನೋಡು, ಕೃಷ್ಣ! ನಮ್ಮ ಸೈನಿಕರು ಕೌರವಸೈನಿಕರಿಂದ ಪಲಾಯಿತ ರಾಗುತ್ತಿದ್ದಾರೆ. ಮಹಾರಥರಾದ ದ್ರೋಣ-ಕರ್ಣರು ಪ್ರಯತ್ನಪೂರ್ವಕವಾಗಿ ಯುದ್ಧಮಾಡುತ್ತಿದ್ದಾರೆ. ಜೊಂಡುಹುಲ್ಲಿರುವ ವನವು ಮದಿಸಿದ ಎರಡು ಆನೆಗಳಿಂದ ವಿಧ್ವಂಸಿತವಾಗುವಂತೆ–ಈ ರಾತ್ರಿಯಲ್ಲಿ ಪಾಂಡವರ ಸೈನ್ಯವು ದ್ರೋಣ-ಕರ್ಣರ ಸೈನ್ಯದಿಂದ ಪ್ರಮರ್ದಿತವಾಗುತ್ತಿದೆ. ಭೀಮಸೇನನ ಬಾಹುವೀರ್ಯವನ್ನೂ ಮತ್ತು ಪಾರ್ಥನ ವಿಚಿತ್ರವಾದ ಅಸ್ತ್ರಪ್ರಹಾರ ಕೌಶಲ ವನ್ನೂ ಅನಾದರಣೆಮಾಡುತ್ತಾ ಕೌರವಯೋಧರು ನಮ್ಮ ಸೈನಿಕರ ಮೇಲೆ ಪರಾಕ್ರಮವನ್ನು ತೋರಿಸುತ್ತಿದ್ದಾರೆ. ದ್ರೋಣರು, ಕರ್ಣ ಮತ್ತು ದುರ್ಯೋಧನರಾಜ–ಇವರೆಲ್ಲರೂ ಯುದ್ಧದಲ್ಲಿ ರಾಕ್ಷಸನನ್ನು ಸಂಹರಿಸಿ ಪರಮಹೃಷ್ಟರಾಗಿ ಗರ್ಜನೆಮಾಡುತ್ತಿದ್ದಾರೆ. ಜನಾರ್ದನ! ನಾವೆಲ್ಲರೂ ಮತ್ತು ನೀನೂ ಜೀವಂತರಾಗಿರುವಾಗಲೇ ಸೂತಪುತ್ರನೊಡನೆ ಯುದ್ಧಮಾಡುತ್ತಿದ್ದ ಘಟೋತ್ಕಚನು ಹೇಗೆ ಮರಣಹೊಂದಿದನು? ನಮ್ಮೆಲ್ಲರನ್ನೂ ನಿಷ್ಪ್ರಯೋಜಕರನ್ನಾಗಿ ಮಾಡಿ ಸವ್ಯಸಾಚಿಯ ಸಮಕ್ಷದಲ್ಲಿಯೇ ಮಹಾಬಲ ನಾದ, ಭೀಮನ ಮಗನಾದ ಘಟೋತ್ಕಚರಾಕ್ಷಸನು ಶತ್ರುಗಳಿಂದ ಕೊಲ್ಲಲ್ಪ ಟ್ಟನು. ಧೃತರಾಷ್ಟ್ರನ ದುರಾತ್ಮರಾದ ಮಕ್ಕಳು ಅಭಿಮನ್ಯುವನ್ನು ಸಂಹರಿಸಿದಾಗ ಸವ್ಯಸಾಚಿಯಾದ, ಮಹಾರಥನಾದ ಅರ್ಜುನನು ಅಲ್ಲಿರಲಿಲ್ಲ. ದುರಾತ್ಮನಾದ ಸೈಂಧವನು ನಮ್ಮನ್ನು ವ್ಯೂಹದೊಳಕ್ಕೆ ಹೋಗದಂತೆ ತಡೆದುಬಿಟ್ಟಿದ್ದನು. ಆಗ ಪುತ್ರಸಹಿತರಾದ ದ್ರೋಣರೇ ಅಭಿಮನ್ಯುವಿನ ವಧೆಗೆ ಮುಖ್ಯಕಾರಣರಾಗಿದ್ದರು.

**ಉಪದಿಷ್ಟೋ ವಧೋಪಾಯಃ ಕರ್ಣಸ್ಯ ಗುರುಣಾ ಸ್ವಯಮ್ ।**
**ವ್ಯಾಯಚ್ಛತಶ್ಚ ಖಡ್ಗೇನ ದ್ವಿಧಾ ಖಡ್ಗಂ ಚಕಾರ ಹ ॥೪೩॥**

ಗುರುಗಳಾದ ದ್ರೋಣರು ತಾವಾಗಿಯೇ ಅಭಿಮನ್ಯುವಿನ ವಧೋಪಾಯವನ್ನು ಕರ್ಣನಿಗೆ ಉಪದೇಶಿಸಿದರು. ಅದೂ ಅಲ್ಲದೇ ಅಭಿಮನ್ಯುವು ಕತ್ತಿಯನ್ನು ಹಿಡಿದು ಪರಿಶ್ರಮಪೂರ್ವಕವಾಗಿ ಯುದ್ಧಮಾಡುತ್ತಿದ್ದಾಗ ಅಭಿಮನ್ಯುವಿನ ಖಡ್ಗವನ್ನೂ ದ್ರೋಣರೇ ಎರಡಾಗಿ ಕತ್ತರಿಸಿದರು. ಖಡ್ಗವನ್ನೂ ಕಳೆದುಕೊಂಡು ಅಭಿಮನ್ಯುವು ಚಿಂತಿಸುತ್ತಿದ್ದ ಆ ಸಮಯದಲ್ಲಿ ಕ್ರೂರಿಯಾದ ಮನುಷ್ಯನಂತೆ ಕೃತವರ್ಮನು ಅಭಿಮನ್ಯುವಿನ ರಥದ ಕುದುರೆಗಳನ್ನೂ ಮತ್ತು ಪಾರ್ಶ್ವರಕ್ಷಕನ್ನೂ ಸಂಹರಿಸಿದನು. ಅನಂತರ ಇತರ ಮಹಾಧನುಷ್ಮಂತರೆಲ್ಲರೂ ಸೇರಿಕೊಂಡು ಅಭಿಮನ್ಯುವನ್ನು ಯುದ್ಧದಲ್ಲಿ ಸಂಹರಿಸಿದರು. ಅಭಿಮನ್ಯುವಿನ ವಧೆಯಲ್ಲಿ ಸೈಂಧವನ ಪಾತ್ರವು ನಿಶ್ಚಯ ವಾಗಿಯೂ ಅತ್ಯಲ್ಪ.

**ಅಲ್ಪೇ ಚ ಕಾರಣೇ ಕೃಷ್ಣ ಹತೋ ಗಾಣ್ಡೀವಧನ್ವನಾ ।**
**ಸೈನ್ಧವೋ ಯಾದವಶ್ರೇಷ್ಠ ತಚ್ಚ ನಾತಿಪ್ರಿಯಂ ಮಮ ॥೪೫॥**

ಯಾದವಶ್ರೇಷ್ಠನೇ! ಕೃಷ್ಣ! ಅತ್ಯಲ್ಪಕಾರಣಕ್ಕಾಗಿ ಅರ್ಜುನನು ಸೈಂಧವನನ್ನು ಸಂಹರಿಸಿದನು. ಇದು ನನಗೆ ಅಷ್ಟೇನೂ ಪ್ರಿಯವಾಗಲಿಲ್ಲ.

**ಯದಿ ಶತ್ರುವಧೋ ನ್ಯಾಯ್ಯೋ ಭವೇತ್ಕರ್ತುಂ ಹಿ ಪಾಣ್ಡವೈಃ ।**
**ಕರ್ಣದ್ರೋಣೌ ರಣೇ ಪೂರ್ವಂ ಹನ್ತವ್ಯಾವಿತಿ ಮೇ ಮತಿಃ ॥೪೬॥**

ಪಾಂಡವರು ಶತ್ರುವಧೆಯು ನ್ಯಾಯವಾದುದೆಂದು ಭಾವಿಸಿ ಯುದ್ಧ ಮಾಡುವುದಾಗಿದ್ದ ಪಕ್ಷದಲ್ಲಿ ಪ್ರಥಮತಃ ಕರ್ಣ-ದ್ರೋಣರನ್ನೇ ಸಂಹರಿಸಬೇಕಾಗಿದ್ದಿತೆಂದು ನಾನು ಭಾವಿಸುತ್ತೇನೆ.

**ಏತೌ ಹಿ ಮೂಲಂ ದುಃಖಾನಾಮಸ್ಮಾಕಂ ಪುರುಷರ್ಷಭ ।**
**ಏತೌ ರಣೇ ಸಮಾಸಾದ್ಯ ಸಮಾಶ್ವಸ್ತಃ ಸುಯೋಧನಃ ॥೪೭॥**

ಪುರುಷರ್ಷಭನೇ! ಈ ಕರ್ಣ-ದ್ರೋಣರೇ ನಮ್ಮ ದುಃಖಗಳೆಲ್ಲಕ್ಕೂ ಮೂಲಕಾರಣರು. ಯುದ್ಧದಲ್ಲಿ ಇವರಿಬ್ಬರನ್ನೂ ಸಹಾಯಕರನ್ನಾಗಿ ಹೊಂದಿಯೇ ದುರ್ಯೋಧನನು ಸಮಾಧಾನದಿಂದಿದ್ದಾನೆ.

**ಯತ್ರ ವಧ್ಯೋ ಭವೇದ್ದ್ರೋಣಃ ಸೂತಪುತ್ರಶ್ಚ ಸಾನುಗಃ ।**
**ತತ್ರಾವಧೀನ್ಮಹಾಬಾಹುಃ ಸೈನ್ಧವಂ ದೂರವಾಸಿನಮ್ ॥೪೮॥**

ಎಲ್ಲಿ ದ್ರೋಣರ ಮತ್ತು ಅನುಯಾಯಿಗಳಿಂದೊಡಗೂಡಿದ ಕರ್ಣನ

ವಧೆಯಾಗಬೇಕಾಗಿದ್ದಿತೋ–ಅಲ್ಲಿ ಮಹಾಬಾಹುವಾದ ಅರ್ಜುನನು ಅಭಿಮನ್ಯುವಿಗಿಂತ ಬಹಳ ದೂರದಲ್ಲಿದ್ದ (ಅಭಿಮನ್ಯುವಿನ ವಧೆಗೆ ನೇರವಾಗಿ ಸಂಬಂಧಪಡದೇ ಇದ್ದ ) ಸೈಂಧವನನ್ನು ಸಂಹರಿಸಿದನು. (ಅಭಿಮನ್ಯುವಿನ ವಧೆಗೆ ಮುಖ್ಯಕಾರಣರಾದ ಕರ್ಣ-ದ್ರೋಣರನ್ನು ಸಂಹರಿಸದೇ ಅಭಿಮನ್ಯು ವಿನಿಂದ ಬಹಳ ದೂರದಲ್ಲಿದ್ದ ಸೈಂಧವನನ್ನು ಅರ್ಜುನನು ಸಂಹರಿಸಿದನು.)

ಅಭಿಮನ್ಯುವಿನ ವಧೆಗೆ ಕಾರಣನಾದ ಸೂತಪುತ್ರನೇ ಈಗ ನನಗೆ ಬಹಳ ಪ್ರಿಯನಾಗಿದ್ದ ಘಟೋತ್ಕಚನನ್ನೂ ಸಂಹರಿಸಿರುತ್ತಾನೆ. ಆದುದರಿಂದ-

**ಅವಶ್ಯಂ ತು ಮಯಾ ಕಾರ್ಯಃ ಸೂತಪುತ್ರಸ್ಯ ನಿಗ್ರಹಃ ।**
**ತತೋ ಯಾಸ್ಯಾಮ್ಯಹಂ ವೀರ ಸ್ವಯಂ ಕರ್ಣಜಿಘಾಂಸಯಾ ।**
**ಭೀಮಸೇನೋ ಮಹಾಬಾಹುರ್ದ್ರೋಣಾನೀಕೇನ ಸಂಗತಃ ॥೫೦॥**

ನಾನು ಸೂತಪುತ್ರನನ್ನು ಅವಶ್ಯವಾಗಿ ಸಂಹರಿಸಲೇಬೇಕು. ಆದುದ ರಿಂದ, ವೀರನೇ! ನಾನೇ ಈಗ ಕರ್ಣನನ್ನು ಸಂಹರಿಸುವ ಇಚ್ಛೆಯಿಂದ ಹೋಗುತ್ತೇನೆ. ಮಹಾಬಾಹುವಾದ ಭೀಮಸೇನನು ದ್ರೋಣರ ಸೈನ್ಯದೊಡನೆ ಯುದ್ಧದಲ್ಲಿ ತೊಡಗಿದ್ದಾನೆ."

ಕೌರವೇಂದ್ರ! ಯುಧಿಷ್ಠಿರನು ಶ್ರೀಕೃಷ್ಣನೊಡನೆ ಹೀಗೆ ಹೇಳಿ ಅತ್ಯಂತತ್ವರೆಯಿಂದ ಧನುಸ್ಸನ್ನು ಠೇಂಕರಿಸುತ್ತಾ ಭಯಂಕರವಾಗಿ ಶಂಖಧ್ವನಿ ಮಾಡುತ್ತಾ ಹೊರಟುಹೋದನು. ಅನಂತರ ಶಿಖಂಡಿಯೂ ಸಹ ಅತ್ಯವಸರ ದಿಂದ ಸಾವಿರ ರಥಗಳಿಂದಲೂ, ಮೂರುನೂರು ಗಜಸೈನಿಕರಿಂದಲೂ, ಐದುಸಾವಿರ ಅಶ್ವಸೈನಿಕರಿಂದಲೂ, ಪಾಂಚಾಲ-ಪ್ರಭದ್ರಕಯೋಧರಿಂದಲೂ ಪರಿವೃತನಾಗಿ ಯುಧಿಷ್ಠಿರನ ಹಿಂದೆಯೇ ಹೋದನು. ಯುಧಿಷ್ಠಿರಪುರಃಸ್ಸರ ರಾದ ಪಾಂಡು-ಪಾಂಚಾಲಸೈನಿಕರು ಕವಚಗಳನ್ನು ಧರಿಸಿದವರಾಗಿ ಭೇರಿ ಗಳನ್ನು ಬಾರಿಸಿದರು. ಶಂಖಗಳನ್ನೂದಿದರು. ಆ ಸಮಯದಲ್ಲಿ ಮಹಾ ಬಾಹುವಾದ ವಾಸುದೇವನು ಧನಂಜಯನಿಗೆ ಹೇಳಿದನು :

"ಅರ್ಜುನ! ಕ್ರೋಧಾವಿಷ್ಟನಾದ, ನಿರ್ಮ್ಮಣ್ಣನಾದ ಯುಧಿಷ್ಠಿರನು ಅವಸರದಿಂದ ಸೂತಪುತ್ರನನ್ನು ಸಂಹರಿಸುವ ಇಚ್ಛೆಯಿಂದ ಹೋಗು ತ್ತಿದ್ದಾನೆ. ಈ ಸಮಯದಲ್ಲಿ ಉಪೇಕ್ಷೆಯಿಂದಿದ್ದು ಯುಧಿಷ್ಠಿರನೊಬ್ಬನನ್ನೇ ಕರ್ಣನೊಡನೆ ಯುದ್ಧಕ್ಕೆ ಕಳುಹಿಸುವುದು ಉಚಿತವಾಗಿ ಕಾಣುವುದಿಲ್ಲ."

ಅರ್ಜುನನಿಗೆ ಹೀಗೆ ಹೇಳಿದ ಹೃಷೀಕೇಶನು ಕುದುರೆಗಳನ್ನು ಶೀಘ್ರವಾಗಿ ಹೋಗುವಂತೆ ಚಪ್ಪರಿಸಿದನು. ಜನಾರ್ದನನು ದೂರದಲ್ಲಿ ಹೋಗುತ್ತಿದ್ದ ಯುಧಿಷ್ಠಿರನನ್ನೇ ಅನುಸರಿಸಿ ಹೋದನು.

ಘಟೋತ್ಕಚನು ಮರಣಹೊಂದಿದ ಶೋಕದಿಂದ, ವಿಚಾರಶಕ್ತಿಯಿಂದ ಶೂನ್ಯನಾಗಿದ್ದ, ಸೂತಪುತ್ರನನ್ನು ಸಂಹರಿಸಬೇಕೆಂಬ ಇಚ್ಛೆಯಿಂದ ಶೋಕಾಗ್ನಿಯಿಂದ ದಹಿಸಲ್ಪಡುತ್ತಿದ್ದ, ಕ್ರುದ್ಧನಾಗಿ ಬಹಳ ವೇಗದಿಂದ



ಹೋಗುತ್ತಿದ್ದ, ಧರ್ಮಪುತ್ರನಾದ ಯುಧಿಷ್ಠಿರನ ಬಳಿಗೆ ವ್ಯಾಸರು ಆಗಮಿಸಿ ಹೇಳಿದರು :

“ಯುಧಿಷ್ಠಿರ! ರಣರಂಗದಲ್ಲಿ ಹಲವು ಬಾರಿ ಅರ್ಜುನನು ಕರ್ಣನನ್ನು

ಎದುರಿಸಿದರೂ ಜೀವಸಹಿತವಾಗಿ ಹೊರಬಂದುದು ನಿಶ್ಚಯವಾಗಿಯೂ ಸೌಭಾಗ್ಯವೇ ಸರಿ. ಏಕೆಂದರೆ : ಅರ್ಜುನನನ್ನು ವಧಿಸಬೇಕೆನ್ನುವ ಇಚ್ಛೆಯಿಂದಲೇ ಕರ್ಣನು ಇಂದ್ರದತ್ತವಾದ ಶಕ್ತಿಯನ್ನು ರಕ್ಷಿಸಿಟ್ಟುಕೊಂಡಿದ್ದನು. ಅದೃಷ್ಟವಿಶೇಷದಿಂದ ಅರ್ಜುನನು ಕರ್ಣನೊಡನೆ ದ್ವೈರಥಯುದ್ಧದಲ್ಲಿ ತೊಡಗಲಿಲ್ಲ. ಹಾಗೇನಾದರೂ ಅರ್ಜುನನು ಕರ್ಣನೊಡನೆ ದ್ವೈರಥಯುದ್ಧದಲ್ಲಿ ತೊಡಗಿದ್ದರೆ ಪರಸ್ಪರಸ್ಪರ್ಧೆಯಿಂದ ಇಬ್ಬರೂ ದಿವ್ಯಾಸ್ತ್ರಗಳನ್ನೇ ಸೃಷ್ಟಿಸುತ್ತಿದ್ದರು. ಅರ್ಜುನನು ಕರ್ಣನು ಬಿಟ್ಟ ದಿವ್ಯಾಸ್ತ್ರಗಳೆಲ್ಲವನ್ನೂ ಪ್ರತ್ಯಸ್ತ್ರಗಳಿಂದ ಧ್ವಂಸಮಾಡಿ ಅವನನ್ನು ಪೀಡಿಸುತ್ತಿದ್ದುದೂ ನಿಜ. ಅಂತಹ ಸಮಯದಲ್ಲಿ ಕರ್ಣನು ನಿಶ್ಚಯವಾಗಿಯೂ ಇಂದ್ರನ ಶಕ್ತಿಯನ್ನು ಅರ್ಜುನನ ಮೇಲೆ ಪ್ರಯೋಗಿಸುತ್ತಿದ್ದನು (ಆ ಶಕ್ತಿಯು ಅರ್ಜುನನ ಪ್ರಾಣವನ್ನೇ ಹೀರುತ್ತಿದ್ದಿತು). ಭರತಸತ್ತಮ! ಹಾಗೇನಾದರೂ ಆಗಿದ್ದರೆ ನಿನಗೆ ಇದಕ್ಕಿಂತಲೂ ಅತ್ಯಧಿಕವಾದ, ಮಹಾಘೋರವಾದ ವ್ಯಸನವುಂಟಾಗುತ್ತಿದ್ದಿತು ; ಅಲ್ಲವೇ? ಸೂತಪುತ್ರನಿಂದ ಘಟೋತ್ಕಚನು ಹತನಾದುದೂ ಅದೃಷ್ಟದ ವಿಷಯವೇ ಆಗಿದೆ. ಇಂದ್ರಶಕ್ತಿಯನ್ನೇ ವ್ಯಾಜವನ್ನಾಗಿ ಮಾಡಿಕೊಂಡು ಕಾಲನೇ ಘಟೋತ್ಕಚನನ್ನು ಸಂಹರಿಸಿದ್ದಾನೆ (ಘಟೋತ್ಕಚನಿಗೂ ಮೃತ್ಯುವು ಇಂದಿಗೆ ಸಿದ್ಧವಾಗಿಯೇ ಇದ್ದಿತು. ಆದರೆ ಇಂದ್ರಶಕ್ತಿಯ ಪ್ರಹಾರವೆಂಬುದು ನಿಮಿತ್ತಮಾತ್ರವಾಯಿತು). ನಿನ್ನ ಹಿತಕ್ಕೋಸ್ಕರವೇ ಯುದ್ಧದಲ್ಲಿ ರಾಕ್ಷಸನು ಹತನಾದನು. ಭರತಶ್ರೇಷ್ಠನೇ! ಆದುದರಿಂದ ಕೋಪಗೊಳ್ಳಬೇಡ. ಮನಸ್ಸಿನಲ್ಲಿ ಶೋಕಕ್ಕೂ ಎಡೆಗೊಡಬೇಡ. ಪ್ರಪಂಚದಲ್ಲಿ ಹುಟ್ಟುವ ಸಮಸ್ತಪ್ರಾಣಿಗಳಿಗೂ ಕಡೆಯಲ್ಲಿ ಇಂತಹ ಅವಸ್ಥೆಯೇ ಸಂಭವಿಸುತ್ತದೆ. ಯುಧಿಷ್ಠಿರ! ನಿನ್ನ ಅನುಜರೊಡನೆಯೂ, ಮಹಾತ್ಮರಾದ ರಾಜರೊಡನೆಯೂ ಕೂಡಿಕೊಂಡು ರಣರಂಗದಲ್ಲಿ ಕೌರವರನ್ನೆದುರಿಸಿ ಯುದ್ಧಮಾಡು. ಇಂದಿಗೆ ಐದನೆಯ ದಿವಸದಲ್ಲಿ ಭೂಮಂಡಲವು ನಿನ್ನ ಅಧೀನವಾಗುತ್ತದೆ. ಪುರುಷವ್ಯಾಘ್ರನೇ! ಅನುದಿನವೂ ನೀನು ಧರ್ಮದ ವಿಷಯವಾಗಿಯೇ ಚಿಂತನೆಮಾಡುತ್ತಿರು.

**ಆನೃಶಂಸ್ಯಂ ತಪೋ ದಾನಂ ಕ್ಷಮಾ ಸತ್ಯಂ ಚ ಪಾಣ್ಡವ ।**
**ಸೇವೇಥಾಃ ಪರಮಪ್ರೀತೋ ಯತೋ ಧರ್ಮಸ್ತತೋ ಜಯಃ ॥೬೬॥**

ಪಾಂಡವ! ದಯಾಭಾವ, ತಪಸ್ಸು, ದಾನ, ಕ್ಷಮೆ, ಸತ್ಯನಿಷ್ಠೆ–ಇವು ಗಳನ್ನು ನೀನು ಪರಮಪ್ರೀತಿಯಿಂದ ಸರ್ವದಾ ಸೇವಿಸುತ್ತಿರು (ಆಚರಿಸು ತ್ತಿರು). ಎಲ್ಲಿ ಧರ್ಮನಿಷ್ಠೆಯಿರುವುದೋ ಅಲ್ಲಿ ಜಯವೂ ಇರುತ್ತದೆ (ಧರ್ಮವಿದ್ದೆಡೆಯಲ್ಲಿಯೇ ಜಯವೂ ಲಭಿಸುತ್ತದೆ)."

ಮಹಾರಾಜ! ವ್ಯಾಸರು ಹೀಗೆ ಹೇಳಿ ಅಲ್ಲಿಯೇ ಅಂತರ್ಹಿತರಾದರು."

೧೮೩ನೆಯ ಅಧ್ಯಾಯವು ಮುಗಿಯಿತು.

೧೮೪ನೆಯ ಅಧ್ಯಾಯ ದ್ರೋಣವಧಪರ್ವ (ಮುಂದುವರಿದಿದೆ.)

## ನಿದ್ರೆಯಿಲ್ಲದೇ ವ್ಯಾಕುಲರಾಗಿದ್ದ ಸೈನಿಕರು ಅರ್ಜುನನ ಮಾತಿನಂತೆ ನಿದ್ರೆಹೋದುದು : ಚಂದ್ರೋದಯವಾದನಂತರ ಪುನಃ ಯುದ್ಧವನ್ನು ಪ್ರಾರಂಭಿಸಿದುದು

ಸಂಜಯನು ಧೃತರಾಷ್ಟ್ರನೊಡನೆ ಹೇಳುತ್ತಾನೆ :

"ಕೌರವೇಶ್ವರ! ವ್ಯಾಸರು ಹೀಗೆ ಹೇಳಿದನಂತರ ಧರ್ಮಪುತ್ರನಾದ, ವೀರನಾದ ಯುಧಿಷ್ಠಿರನು ಕರ್ಣನನ್ನು ತಾನೇ ಸಂಹರಿಸಬೇಕೆಂಬ ನಿಶ್ಚಯ ದಿಂದ ವಿರಮಿಸಿದನು. ನಾನು ಈ ಹಿಂದೆ ಹೇಳಿದಂತೆ ಸೂತಪುತ್ರನಿಂದ ಘಟೋತ್ಕಚನು ಹತನಾದ ಆ ರಾತ್ರಿಯಲ್ಲಿ ಧರ್ಮರಾಜನು ದುಃಖಿತನೂ, ಕ್ರೋಧವಶನೂ ಆಗಿದ್ದನು. ಭೀಮಸೇನನು ನಿನ್ನ ಸೈನ್ಯವನ್ನು ತಡೆಯು ತ್ತಿರುವುದನ್ನು ಕಂಡು ಯುಧಿಷ್ಠಿರನು ದ್ರೋಣರನ್ನು ತಡೆಯುವಂತೆ ಧೃಷ್ಟದ್ಯುಮ್ನನಿಗೆ ಆಜ್ಞಾಪಿಸಿದನು :

**ತ್ವಂ ಹಿ ದ್ರೋಣವಿನಾಶಾಯ ಸಮುತ್ಪನ್ನೋ ಹುತಾಶನಾತ್ ।**
**ಸಶರಃ ಕವಚೀ ಖಡ್ಗೀ ಧನ್ವೀ ಚ ಪರತಾಪನಃ ॥೪॥**

"ಧೃಷ್ಟದ್ಯುಮ್ನ! ನೀನು ದ್ರೋಣರನ್ನು ಸಂಹರಿಸಲೆಂದೇ ಧನು ರ್ಬಾಣಗಳನ್ನೂ, ಕತ್ತಿಯನ್ನೂ ಹಿಡಿದುಕೊಂಡು, ಕವಚವನ್ನೂ ಧರಿಸಿದವ ನಾಗಿ ಶತ್ರುಗಳನ್ನು ಪರಿತಾಪಗೊಳಿಸುವ ಸಲುವಾಗಿಯೇ ಅಗ್ನಿಕುಂಡದಿಂದ

ಹುಟ್ಟಿರುವೆ. ಆದುದರಿಂದ ನೀನು ದ್ರೋಣರನ್ನು ಆಕ್ರಮಿಸು. ನೀನು ಸ್ವಲ್ಪ ವಾದರೂ ಭಯಪಡಬೇಕಾಗಿಲ್ಲ. ಜನಮೇಜಯ, ಶಿಖಂಡೀ, ದುರ್ಮುಖನ ಮಗ ಯಶೋಧರ–ಇವರೆಲ್ಲರೂ ಪರಮಹೃಷ್ಟರಾಗಿ ದ್ರೋಣರನ್ನು ಎಲ್ಲ ಕಡೆಗಳಿಂದಲೂ ಆಕ್ರಮಿಸಲಿ. ನಕುಲ-ಸಹದೇವರು, ದ್ರೌಪದಿಯ ಐವರು ಮಕ್ಕಳು, ಪ್ರಭದ್ರಕರು, ಪುತ್ರ-ಭ್ರಾತೃಸಹಿತರಾದ ದ್ರುಪದ-ವಿರಾಟರು, ಸಾತ್ಯಕಿ, ಕೇಕಯರು, ಪಾಂಡುಪುತ್ರನಾದ ಧನಂಜಯ ಇವರೆಲ್ಲರೂ ದ್ರೋಣರನ್ನು ಸಂಹರಿಸುವ ದೃಢೇಚ್ಛೆಯಿಂದ ಅವರ ಬಳಿಗೆ ಈಗಲೇ ತ್ವರೆಯಿಂದ ಹೋಗಲಿ. ಎಲ್ಲ ರಥಿಗಳೂ, ಅಳಿದುಳಿದಿರುವ ಗಜಾಶ್ವ-ಪದಾತಿ ಸೈನ್ಯಗಳೂ ಮಹಾರಥರಾದ ದ್ರೋಣರನ್ನು ಸಂಹರಿಸಲಿ."

ಮಹಾರಾಜ! ಮಹಾತ್ಮನಾದ ಯುಧಿಷ್ಠಿರನು ಹೀಗೆ ಆಜ್ಞೆಮಾಡಲಾಗಿ, ಒಡನೆಯೇ ಕುಂಭಯೋನಿಗಳನ್ನು (ದ್ರೋಣರನ್ನು ) ಸಂಹರಿಸುವ ಇಚ್ಛೆಯಿಂದ ಎಲ್ಲರೂ ವೇಗಪೂರ್ವಕವಾಗಿ ದ್ರೋಣರಿದ್ದಲ್ಲಿಗೇ ಹೋದರು. ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ಸರ್ವಪ್ರಯತ್ನದಿಂದಲೂ ತಮ್ಮನ್ನು ಸಂಹರಿಸಬೇಕೆಂಬ ಇಚ್ಛೆಯಿಂದ ತಮ್ಮ ಕಡೆಗೇ ವೇಗವಾಗಿ ಬರುತ್ತಿದ್ದ ಪಾಂಡವಸೈನಿಕರನ್ನು ಸಮರಭೂಮಿಯಲ್ಲಿ ಎದುರಿಸಿದರು. ಅನಂತರ ದುರ್ಯೋಧನನು ದ್ರೋಣರನ್ನು ಜೀವಂತವಾಗಿ ಉಳಿಸಿಕೊಳ್ಳಬೇಕೆಂಬ ಆಶಯದಿಂದ ಪರಮಕ್ರುದ್ಧನಾಗಿ ಸಂಪೂರ್ಣಪ್ರಯತ್ನದಿಂದ ಪಾಂಡವರನ್ನು ಆಕ್ರಮಿಸಿದನು. ಸೈನಿಕರೂ ಮತ್ತು ಆನೆ-ಕುದುರೆ ಮೊದಲಾದ ವಾಹನಗಳೂ ಬಹಳವಾಗಿ ಬಳಲಿದ್ದರೂ ಪರಸ್ಪರವಾಗಿ ಗರ್ಜಿಸುತ್ತಿದ್ದ ಪಾಂಡವ-ಕೌರವರ ನಡುವೆ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಆ ಸಮಯದಲ್ಲಿ ಎರಡೂ ಪಕ್ಷಗಳ ಸೈನಿಕರೂ ನಿದ್ರೆಯಿಂದ ಅಂಧರಾಗಿಬಿಟ್ಟಿದ್ದರು (ಎಷ್ಟೇ ಪ್ರಯತ್ನಿಸಿದರೂ ಅವರಿಗೆ ಕಣ್ಣುಗಳನ್ನು ತೆರೆದುಕೊಂಡಿರಲು ಸಾಧ್ಯವಾಗು ತ್ತಲೇ ಇರಲಿಲ್ಲ. ತಾವೇ ತಾವಾಗಿ ಮುಚ್ಚಿಕೊಳ್ಳುತ್ತಿದ್ದುವು. ಆದರಿಂದ ಅವರು ಅಂಧಪ್ರಾಯರಾಗಿದ್ದರು). ಯುದ್ಧವನ್ನು ಮಾಡಿ-ಮಾಡಿ ಬಹಳವಾಗಿ ಬಳಲಿದ್ದರು. ಆದುದರಿಂದ ಯಾವ ವಿಧವಾದ ಪ್ರಹಾರಕಾರ್ಯವನ್ನು ಮಾಡಲೂ ಅವರಿಂದ ಸಾಧ್ಯವಾಗುತ್ತಲೇ ಇರಲಿಲ್ಲ. ಘೋರರೂಪವಾದ, ಭಯಂಕರವಾದ, ಮೂರು ಯಾಮಗಳಿಂದ ಪರಿಮಿತವಾದ ಆ ರಾತ್ರಿಯು

ಯೋಧರಿಗೆ ಸಾವಿರ ಯಾಮಗಳನ್ನೊಳಗೊಂಡಿರುವ, ಸಕಲಪ್ರಾಣಹಾರಿಣಿ ಯಾದ ಕರಾಳರಾತ್ರಿಯೋ ಎಂಬ ಭಾವನೆಯನ್ನುಂಟುಮಾಡುತ್ತಿದ್ದಿತು.

ಪರಸ್ಪರಪ್ರಹಾರಗಳಿಂದ ಹತರಾಗುತ್ತಿದ್ದು–ಅದರಲ್ಲಿಯೂ ವಿಶೇಷ ವಾಗಿ ನಿದ್ರೆಯಿಂದ ಬುದ್ಧಿಗೆಟ್ಟಿದ್ದ ಆ ಸೈನಿಕರು ಕ್ಷತ-ವಿಕ್ಷತರಾಗುತ್ತಿದ್ದಾಗ ಅರ್ಧರಾತ್ರಿಯೂ ಕಳೆಯಿತು. ದೀನಮನಸ್ಕರಾಗಿದ್ದ ಆ ಕ್ಷತ್ರಿಯರು ಯುದ್ಧ ದಲ್ಲಿ ನಿರುತ್ಸಾಹಿಗಳೂ ಆಗಿದ್ದರು. ನಿನ್ನ ಕಡೆಯ ಮತ್ತು ಶತ್ರುಪಕ್ಷದ ಸೈನಿಕರ ಕೈಗಳಿಂದ ಅಸ್ತ್ರಗಳೂ ಮತ್ತು ಬಾಣಗಳೂ ಜಾರಿಬೀಳುತ್ತಿದ್ದುವು. ಈ ರೀತಿ ಯಲ್ಲಿ ಕಾಲಕಳೆಯುತ್ತಿದ್ದ ಆ ಸೈನಿಕರು ಲಜ್ಜಾಶೀಲರಾಗಿದ್ದರು. ಅದರಲ್ಲಿಯೂ ವಿಶೇಷವಾಗಿ ತಮ್ಮ ಧರ್ಮದ ಮೇಲೆ ದೃಷ್ಟಿಯುಳ್ಳವರಾಗಿದ್ದ ಅವರು ಅಂತಹ ನಿದ್ರೆಯಲ್ಲಿಯೂ ತಮ್ಮ ತುಕಡಿಗಳನ್ನು ಬಿಟ್ಟು ಹೊರಟು ಹೋಗಲಿಲ್ಲ. ಮತ್ತೆ ಕೆಲವರು ನಿದ್ರೆಯಿಂದ ಕುರುಡರಾಗಿ ಅಸ್ತ್ರಗಳನ್ನು ವಿಸರ್ಜಿಸಿ ಹಾಗೆಯೇ ನಿದ್ರೆಮಾಡುತ್ತಿದ್ದರು. ಕೆಲವರು ರಥಗಳಲ್ಲಿಯೂ ಮತ್ತೆ ಕೆಲವರು ಆನೆ-ಕುದುರೆಗಳ ಮೇಲೂ ಕುಳಿತುಕೊಂಡೇ ನಿದ್ರೆಮಾಡುತ್ತಿದ್ದರು. ನಿದ್ರೆಯಿಂದ ಅಂಧರಾಗಿ ತೂಕಡಿಸುತ್ತಿದ್ದ ಆ ಸೈನಿಕರಿಗೆ 'ಎಲ್ಲಿ ಏನು ನಡೆಯುತ್ತಿದೆ?' ಎಂಬುದೊಂದೂ ತಿಳಿಯುತ್ತಿರಲಿಲ್ಲ. ಆದರೆ ಉಳಿದ ಯೋಧರು ತೂಕಡಿಸುತ್ತಿದ್ದವರ ಮೇಲೆಯೇ ಬಾಣಗಳನ್ನು ಪ್ರಯೋಗಿಸಿ ಯಮಪಟ್ಟಣಕ್ಕೆ ಕಳುಹಿಸುತ್ತಿದ್ದರು. ಸ್ವಪ್ನಶೀಲರಾಗಿದ್ದ ಕೆಲವು ಸೈನಿಕರು ಬುದ್ಧಿಗೆಟ್ಟವರಾಗಿ ಸ್ವಪ್ನಾವಸ್ಥೆಯಲ್ಲಿಯೇ ಶತ್ರುಗಳನ್ನೂ ಧ್ವಂಸಮಾಡು ತ್ತಿದ್ದರು. ತಾವೂ ಸಾಯುತ್ತಿದ್ದರು. ತಮ್ಮ ಕಡೆಯವರನ್ನೇ ಸಂಹರಿಸುತ್ತಿದ್ದರು. ನಿದ್ರೆಯಿಂದ ವಿವೇಚನಾರಹಿತರಾಗಿದ್ದ ಕೆಲವರು ಬಾಯಿಗೆ ಬಂದಂತೆ ಮಾತನ್ನಾಡುತ್ತಿದ್ದರು. ನಮ್ಮ ಕಡೆಯಲ್ಲಿಯೂ ಅನೇಕ ಸೈನಿಕರು ಶತ್ರುಗಳೊಡನೆ ಯುದ್ಧಮಾಡಬೇಕೆಂಬ ನಿಷ್ಠೆಯಿಂದ ನಿಂತಿದ್ದರು. ಅವರ ಕಣ್ಣುಗಳು ನಿದ್ರೆಯ ಕಾರಣದಿಂದಾಗಿ ಕೆಂಪುಬಣ್ಣಕ್ಕೆ ತಿರುಗಿದ್ದುವು. ಕೆಲವು ಶೂರಸೈನಿಕರು ನಿದ್ರೆಯಿಂದ ಕುರುಡರಾಗಿದ್ದರೂ ರಣರಂಗದಲ್ಲಿ ಸಂಚರಿಸುತ್ತಾ ದಾರುಣ ವಾದ ಆ ರಾತ್ರಿಯಲ್ಲಿ ಶತ್ರುಪಕ್ಷದ ಶೂರರನ್ನು ಸಂಹರಿಸುತ್ತಿದ್ದರು. ಅನೇಕ ಸೈನಿಕರು ನಿದ್ರಾಪರವಶರಾಗಿದ್ದುದರಿಂದ ಎದುರಾಳಿಗಳು ತಮ್ಮನ್ನು ಸಂಹರಿಸಿದರೂ ಅವರಿಗೆ ಅದು ತಿಳಿಯುತ್ತಲೇ ಇರಲಿಲ್ಲ. ನಿದ್ರೆಯಲ್ಲಿ

ದ್ದವರು ಎಚ್ಚರಗೊಳ್ಳದೆಯೇ ಇರುವ ಚಿರನಿದ್ರೆಯನ್ನು ಅನುಭವಿಸುತ್ತಿದ್ದರು. ಸೈನಿಕರ ಆ ವಿಧವಾದ ದುರವಸ್ಥೆಯನ್ನು ಕಂಡು ಪುರುಷರ್ಷಭನಾದ ಅರ್ಜುನನು ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸುವಂತೆ ಉಚ್ಚಧ್ವನಿಯಿಂದ ಹೇಳಿದನು :

**ಶ್ರಾನ್ತಾ ಭವನ್ತೋ ನಿದ್ರಾನ್ಧಾಃ ಸರ್ವೆ ಏವ ಸವಾಹನಾಃ ।**
**ತಮಸಾ ಚ ವೃತೇ ಸೈನ್ಯೇ ರಜಸಾ ಬಹುಲೇನ ಚ ॥೨೬॥**

**ತೇ ಯೂಯಂ ಯದಿ ಮನ್ಯಧ್ವಮುಪಾರಮತ ಸೈನಿಕಾಃ ।**
**ನಿಮೀಲಯತ ಚಾತ್ರೈವ ರಣಭೂಮೌ ಮುಹೂರ್ತಕಮ್ ॥೨೭॥**

"ಗಜಾಶ್ವ-ವಾಹನಸಹಿತರಾದ ನೀವೆಲ್ಲರೂ ಬಹಳವಾಗಿ ಬಳಲಿದ್ದೀರಿ. ನಿದ್ರೆಯಿಂದ ಕುರುಡರೂ ಆಗಿದ್ದೀರಿ. ಈ ಸಂಪೂರ್ಣಸೈನ್ಯವೂ ಗಾಢಾಂಧ ಕಾರದಿಂದಲೂ ಮತ್ತು ಧೂಳಿನಿಂದಲೂ ಸಂವೃತವಾಗಿಬಿಟ್ಟಿದೆ. ಸೈನಿಕರೇ! ನಿಮ್ಮೆಲ್ಲರಿಗೂ ಸೂಕ್ತವೆನಿಸಿದರೆ ಎಲ್ಲರೂ ಯುದ್ಧದಿಂದ ವಿರತರಾಗಿರಿ. ಈ ರಣಾಂಗಣದಲ್ಲಿಯೇ ಮುಹೂರ್ತಪರ್ಯಂತವಾಗಿ ಕಣ್ಣುಗಳನ್ನು ಮುಚ್ಚಿ ಕೊಂಡು ನಿರ್ಭಯರಾಗಿ ನಿದ್ರೆಮಾಡಿರಿ.

**ತತೋ ವಿನಿದ್ರಾ ವಿಶ್ರಾನ್ತಾಶ್ಚನ್ದ್ರಮಸ್ಯುದಿತೇ ಪುನಃ ।**
**ಸಂಸಾಧಯಿಷ್ಯಥಾನ್ಯೋನ್ಯಂ ಸಂಗ್ರಾಮಂ ಕುರುಪಾಣ್ಡವಾಃ ॥೨೮॥**

ಕುರು-ಪಾಂಡವಸೈನಿಕರೇ! ವಿಶ್ರಾಂತಿಯನ್ನು ಪಡೆದು ನಿದ್ರೆಯಿಂದ ಎಚ್ಚರಗೊಂಡ ನೀವು ಚಂದ್ರೋದಯವಾದನಂತರ ಹಿಂದಿನಂತೆಯೇ ಸಂಗ್ರಾಮವನ್ನು ಪ್ರಾರಂಭಿಸಿರಿ."

ಕೌರವೇಶ್ವರ! ಅರ್ಜುನನು ಹೇಳಿದ ಮಾತುಗಳನ್ನು ಸರ್ವಧರ್ಮಜ್ಞ ರಾದ, ಧಾರ್ಮಿಕರಾದ ಸರ್ವಸೈನಿಕರೂ ಒಪ್ಪಿದರು (ಸರ್ವಸೈನಿಕರಿಗೂ ಅರ್ಜುನನು ಹೇಳಿದ ಸಲಹೆಯು ಸಮಂಜಸವಾಗಿ ತೋರಿತು). ಹಾಗೆಯೇ ಅವರು ಪರಸ್ಪರವಾಗಿ ಉದ್ಘೋಷಿಸಿದರು :

"ಕರ್ಣ! ಕರ್ಣ! ದುರ್ಯೋಧನ! ಎಲ್ಲರೂ ಯುದ್ಧವನ್ನು ಕೂಡಲೇ ನಿಲ್ಲಿಸಿರಿ. ಪಾಂಡವರ ಸೈನ್ಯವು ಯುದ್ಧದಿಂದ ವಿರತವಾಗಿದೆ."

ಇತ್ತಲಾಗಿ ಅರ್ಜುನನೂ ಸಹ ತನ್ನ ಸೈನಿಕರಿಗೆ ಯುದ್ಧವನ್ನು ನಿಲ್ಲಿಸುವಂತೆ ಉಚ್ಚಸ್ವರದಿಂದ ಪದೇ-ಪದೇ ಹೇಳುತ್ತಲೇ ಇದ್ದನು. ಸ್ವಲ್ಪಹೊತ್ತಿನಲ್ಲಿಯೇ ನಿನ್ನ ಕಡೆಯ ಮತ್ತು ಪಾಂಡವರ ಕಡೆಯ ಸೈನಿಕರು ಯುದ್ಧದಿಂದ ವಿಮುಖರಾದರು. ಮಹಾತ್ಮನಾದ ಅರ್ಜುನನ ಶ್ರೇಷ್ಠವಾದ ಆ ಸಲಹೆಯನ್ನು ದೇವತೆಗಳೂ ಮಹಾತ್ಮರಾದ ಋಷಿಗಳೂ ಮತ್ತು ಎಲ್ಲ ಸೈನಿಕರೂ ಪರಮ ಹೃಷ್ಟರಾಗಿ ಶ್ಲಾಘಿಸಿದರು. ದಯಾಯುಕ್ತವಾಗಿದ್ದ ಅರ್ಜುನನ ಆ ಮಾತನ್ನು ಶ್ಲಾಘಿಸುತ್ತಾ ಬಹಳವಾಗಿ ಬಳಲಿದ್ದ ಎಲ್ಲ ಸೈನಿಕರೂ ಮುಹೂರ್ತಕಾಲ ರಣರಂಗದಲ್ಲಿಯೇ ಮಲಗಿದರು. ನಿನ್ನ ಸೈನಿಕರೂ ವಿಶ್ರಾಂತಿಸುಖವನ್ನು ಪಡೆದು ವೀರನಾದ ಅರ್ಜುನನನ್ನು ಪ್ರಶಂಸೆಮಾಡುತ್ತಾ ಹೇಳಿದರು :

**ತ್ವಯಿ ವೇದಾಸ್ತಥಾಸ್ತ್ರಾಣಿ ತ್ವಯಿ ಬುದ್ಧಿಪರಾಕ್ರಮೌ ।**
**ಧರ್ಮಸ್ತ್ವಯಿ ಮಹಾಬಾಹೋ ದಯಾ ಭೂತೇಷು ಚಾನಘ ॥೩೫॥**

“ಮಹಾಬಾಹುವೇ! ನಿನ್ನಲ್ಲಿಯೇ ಎಲ್ಲ ವೇದಗಳು ಮೂರ್ತಿಮತ್ತಾಗಿ ನೆಲೆಸಿವೆ. ಮಹಾಸ್ತ್ರಗಳ ಅಧಿದೇವತೆಗಳೂ ನಿನ್ನಲ್ಲಿ ಅಧಿಷ್ಠಾನಹೊಂದಿದ್ದಾರೆ. ನಿನ್ನಲ್ಲಿ ಸುಬುದ್ಧಿಯಿದೆ. ಅಮಿತವಾದ ಪರಾಕ್ರಮವಿದೆ. ಧರ್ಮವೇ ನಿನ್ನಲ್ಲಿ ನೆಲೆಸಿದೆ. ಅನಘನೇ! ಪ್ರಾಣಿಗಳ ವಿಷಯದಲ್ಲಿ ನೀನು ಬಹಳ ದಯಾಪರನಾಗಿರುವೆ.

**ಯಚ್ಚಾಶ್ವಸ್ತಾಸ್ತಮೇಚ್ಛಾಮಃ ಶರ್ಮ ಪಾರ್ಥ ತದಸ್ತು ತೇ ।**
**ಮನಸಶ್ಚ ಪ್ರಿಯಾನರ್ಥಾನ್ವೀರ ಕ್ಷಿಪ್ರಮವಾಪ್ನುಹಿ ॥೩೬॥**

ನಿದ್ರಾಂಧರಾಗಿದ್ದ, ಬಹಳವಾಗಿ ಬಳಲಿದ್ದ ನಮಗೆ ನೀನು ಆಶ್ವಾಸನೆಯನ್ನಿತ್ತು ನಿದ್ರೆಯ ಪರಮಸುಖವನ್ನು ಅನುಭವಿಸುವಂತೆ ಮಾಡಿದೆ. ಆದುದರಿಂದ ನಾವು ನಿನಗೆ ಸುಖಬಯಸುತ್ತೇವೆ. ನಿನ್ನ ಮನಸ್ಸಿನಲ್ಲಿರುವ ಇಷ್ಟಾರ್ಥಗಳೆಲ್ಲವನ್ನೂ ಬಹಳ ಬೇಗ ನೀನು ಪಡೆದುಕೊಳ್ಳುವೆ.”

ಮಹಾರಾಜ! ಈ ರೀತಿಯಾಗಿ ಮಹಾರಥರಾದ ನಿನ್ನ ಕಡೆಯ ಯೋಧರು ನರಶ್ರೇಷ್ಠನಾದ ಅರ್ಜುನನನ್ನು ಪ್ರಶಂಸೆಮಾಡುತ್ತಾ ಸ್ವಲ್ಪ ಹೊತ್ತಿನಲ್ಲಿಯೇ ನಿದ್ರಾಪರವಶರಾಗಿ ಮಾತುಗಳನ್ನು ನಿಲ್ಲಿಸಿದರು. ಕೆಲವರು ಕುದುರೆಗಳ ಮೇಲೆಯೇ ಮಲಗಿದರು. ಮತ್ತೆ ಕೆಲವರು ರಥಗಳ ಆಸನ

ಗಳಲ್ಲಿಯೇ ಮಲಗಿದರು. ಇನ್ನೂ ಕೆಲವರು ಆನೆಗಳ ಹೆಗಲಿನ ಮೇಲೆಯೇ ಮಲಗಿದರು. ಉಳಿದ ಹಲವರು ಭೂಮಿಯ ಮೇಲೆ ಮಲಗಿದರು. ಕೆಲವರು ಎಲ್ಲ ಆಯುಧಗಳನ್ನು ಇಟ್ಟುಕೊಂಡೇ ಮಲಗಿದರು. ಕೆಲವರು ಗದಾಪಾಣಿ ಗಳಾಗಿಯೂ, ಖಡ್ಗಪಾಣಿಗಳಾಗಿಯೂ ಮಲಗಿದ್ದರು. ಮತ್ತೆ ಕೆಲವರ ಕೈಗಳಲ್ಲಿ ಗಂಡುಗೊಡಲಿಗಳಿದ್ದುವು. ಅವರು ಹಾಗೆಯೇ ಮಲಗಿದ್ದರು. ಕೆಲವರು ಪ್ರಾಸಗಳನ್ನಿಟ್ಟುಕೊಂಡೇ ಮಲಗಿದ್ದರು. ಎಲ್ಲ ಸೈನಿಕರೂ ಸಾಮಾನ್ಯವಾಗಿ ಕವಚಗಳನ್ನೂ ಧರಿಸಿಯೇ ಮಲಗಿದ್ದರು. ಈ ರೀತಿಯಲ್ಲಿ ಎರಡೂ ಪಕ್ಷಗಳ ಸೈನಿಕರು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಪ್ರತ್ಯೇಕ-ಪ್ರತ್ಯೇಕವಾಗಿ ಮಲಗಿ ನಿದ್ರಿಸುತ್ತಿದ್ದರು.

ನಿದ್ರೆಯಿಂದ ಕುರುಡಾಗಿದ್ದ ಆನೆಗಳು ಸರ್ಪಕ್ಕೆ ಸಮಾನವಾಗಿದ್ದ ಮತ್ತು ಭೂಮಿಯ ಧೂಳಿನಿಂದ ಅವಲಿಪ್ತವಾಗಿದ್ದ ಸೊಂಡಿಲುಗಳಿಂದ ಶ್ವಾಸೋ ಚ್ಛ್ವಾಸಗಳನ್ನು ಸುದೀರ್ಘವಾಗಿ ಬಿಡುತ್ತಾ ಮತ್ತು ಎಳೆದುಕೊಳ್ಳುತ್ತಾ ಉಚ್ಛ್ವಾಸದ ಗಾಳಿಯಿಂದ ಆ ರಣಾಂಗಣವನ್ನೇ ಶೀತಲಗೊಳಿಸಿದುವು. ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಮಲಗಿದ್ದ ಆನೆಗಳು ಆ ರಣಾಂಗಣದಲ್ಲಿ ಬುಸುಗುಟ್ಟುವ ಸರ್ಪಗಳಿಂದ ಕೂಡಿದ ವಿಸ್ತೃತವಾಗಿ ಬಿದ್ದಿರುವ ಪರ್ವತಗಳಂತೆಯೇ ಕಾಣುತ್ತಿದ್ದುವು. ಸುವರ್ಣಮಯವಾದ ಕಡಿವಾಣ ಗಳನ್ನು ಹೊಂದಿದ್ದ ಕುದುರೆಗಳು ನಿದ್ರೆಯ ಸಮಯದಲ್ಲಿ ಕತ್ತಿನ ಕೂದಲಿನ ಮೇಲೆ ಆಶ್ರಯ ಹೊಂದಿದ್ದ ನೊಗಗಳಿಂದಲೂ ಮತ್ತು ಗೊರಸುಗಳ ಅಗ್ರ ಭಾಗಗಳಿಂದಲೂ ಭೂಮಿಯನ್ನು ಕೆರೆಯುತ್ತಾ ಸಮವಾಗಿದ್ದ ರಣಭೂಮಿ ಯನ್ನು ವಿಷಮಗೊಳಿಸಿದುವು (ಹಳ್ಳ-ತಿಟ್ಟುಗಳಾಗುವಂತೆ ಮಾಡಿದುವು). ರಾಜೇಂದ್ರ! ಕೆಲವು ಕುದುರೆಗಳು ರಥಗಳಲ್ಲಿ ಹೂಡಿದ್ದಂತೆಯೇ ನಿದ್ರೆಮಾಡಿ ದುವು. ಈ ರೀತಿಯಲ್ಲಿ ಅತ್ಯಂತಶ್ರಮದಿಂದ ಬಳಲಿದ್ದ ಕುದುರೆಗಳೂ, ಆನೆಗಳೂ, ಯೋಧರೂ ಯುದ್ಧದಿಂದ ವಿರಮಿಸಿ ನಿದ್ರೆಹೋದರು. ಹೀಗೆ ನಿದ್ರೆಯಲ್ಲಿ ಮಗ್ನವಾಗಿಹೋಗಿದ್ದ, ತೂಕಡಿಸುತ್ತಿದ್ದ ಸೈನ್ಯವು ಬಹಳ ಬೇಗ ಗಾಢನಿದ್ರೆಯಲ್ಲಿ ಮುಳುಗಿಹೋಯಿತು. ಎಲ್ಲ ಸೈನಿಕರೂ ತಮ್ಮ ವಾಹನ ಗಳೊಡನೆ ಅತ್ತಲಿತ್ತ ಚಲಿಸದೇ ಗಾಢನಿದ್ರೆಯಲ್ಲಿ ಮಲಗಿರುವುದನ್ನು ನೋಡಿದರೆ-ಕುಶಲರಾದ ಶಿಲ್ಪಿಗಳು ಚಿತ್ರಪಟದ ಮೇಲೆ ಅದ್ಭುತವಾದೊಂದು

ಚಿತ್ರವನ್ನು ಬರೆದಿರುವರೋ–ಎಂಬಂತೆ ಕಾಣುತ್ತಿದ್ದಿತು. ಪರಸ್ಪರಬಾಣಗಳ ಪ್ರಹಾರಗಳಿಂದ ಕ್ಷತ-ವಿಕ್ಷತವಾಗಿದ್ದ ಶರೀರಗಳಿಂದ ಕೂಡಿದ್ದ, ಕುಂಡಲಗಳನ್ನು ಧರಿಸಿದ್ದ ಕ್ಷತ್ರಿಯಯುವಕರು ಆನೆಗಳ ಕುಂಭಸ್ಥಳಗಳ ಮೇಲೆ ಮುಖವನ್ನಿಟ್ಟುಕೊಂಡು ಮಲಗಿರುವುದನ್ನು ನೋಡಿದರೆ ಕಾಮಿನಿಯರ ಕುಚಗಳ ನಡುವೆ ಮುಖವನ್ನು ಹುದುಗಿಸಿಕೊಂಡು ಮಲಗುವ ಕಾಮುಕ ರಂತೆಯೇ ಕಾಣುತ್ತಿದ್ದರು.

**ತತಃ ಕುಮುದನಾಥೇನ ಕಾಮಿನೀಗಣ್ಡಪಾಣ್ಡುನಾ ।**
**ನೇತ್ರಾನನ್ದೇನ ಚನ್ದ್ರೇಣ ಮಾಹೇನ್ದ್ರೀ ದಿಗಲಙ್ಕೃತಾ ॥೪೬॥**

**ದಶಶತಾಕ್ಷಕಕುಬ್ದರಿನಿಃಸೃತಃ**
**ಕಿರಣಕೇಸರಭಾಸುರಪಿಞ್ಜರಃ ।**
**ತಿಮಿರವಾರಣಯೂಥವಿದಾರಣಃ**
**ಸಮುದಿಯಾದುದಯಾಚಲ ಕೇಸರೀ ॥೪೭॥**

ಅನಂತರ ಕಾಮಿನಿಯರ ಕಪೋಲಗಳಂತೆ ಬಿಳುಪಾಗಿದ್ದ, ನಯನಾ ನಂದಕರನಾದ, ಕುಮುದನಾಥನಾದ ಚಂದ್ರನು ಮಹೇಂದ್ರನ ದಿಕ್ಕಾದ ಪೂರ್ವದಿಕ್ಕನ್ನು ಅಲಂಕರಿಸಿದನು. ಉದಯಾಚಲಪರ್ವತಶಿಖರದಿಂದ ಸಿಂಹ ರೂಪಿಯಾದ ಚಂದ್ರನು ಉದಯಿಸಿದನು. ಅವನು ದಶಶತಾಕ್ಷನ (ಸಹಸ್ರಾಕ್ಷನ) ದಿಕ್ಕಾದ ಪೂರ್ವದಿಕ್ಕೆಂಬ ಗುಹೆಯಿಂದ ಹೊರಬಂದಿದ್ದನು. ಕಿರಣಗಳೆಂಬ ಕೇಸರಗಳಿಂದ ಪ್ರಕಾಶಮಾನವಾಗಿ ಕಂದುಹಳದೀಬಣ್ಣದಿಂದ ಕೂಡಿದ್ದನು. ಚಂದ್ರರೂಪಿಯಾದ ಸಿಂಹವು ಹುಟ್ಟಿದೊಡನೆಯೇ ಕತ್ತಲೆಯ ರೂಪವಾದ ಆನೆಗಳ ಸಮೂಹವನ್ನೇ ಧ್ವಂಸಮಾಡಿದನು.

**ಹರದ್ವೃಷೋತ್ತಮಗಾತ್ರಸಮದ್ಯುತಿಃ**
**ಸ್ಮರಶರಾಸನಪೂರ್ಣಸಮಪ್ರಭಃ ।**
**ನವವಧೂಸ್ಮಿತಚಾರುಮನೋಹರಃ**
**ಪ್ರವಿಸೃತಃ ಕುಮುದಾಕರಬಾನ್ಧವಃ ॥೪೮॥**

ಭಗವಾನ್ ಶಂಕರನ ಶ್ರೇಷ್ಠವಾಹನವಾದ ನಂದಿಕೇಶ್ವರನ ಶರೀರದ ಕಾಂತಿಗೆ ಸಮಾನವಾದ ಧವಳಕಾಂತಿಯಿಂದ ಕೂಡಿದ್ದ, ಮನ್ಮಥನ ಪುಷ್ಪ ಧನುಸ್ಸಿನ ಪೂರ್ಣಪ್ರಭೆಗೆ ಸಮಾನವಾದ ಪ್ರತಿಭೆಯಿಂದ ಕೂಡಿದ್ದ, ನೂತನ

ವಧುವಿನ ಮನೋಹರವಾದ ಮಂದಹಾಸದಂತೆ ಸುಮನೋಹರವಾಗಿದ್ದ, ಕುಮುದಪುಷ್ಪಗಳ ಬಂಧುವಾದ ಚಂದ್ರನು ಉದಯಾಚಲದಿಂದ ಹೊರಟು ಮೇಲೆ ಬರುತ್ತಿದ್ದನು. ಮೊಲದ ಚಿಹ್ನೆಗಳುಳ್ಳ ಭಗವಂತನಾದ ಚಂದ್ರನು ಸ್ವಲ್ಪ ಹೊತ್ತಿನನಂತರ ನಕ್ಷತ್ರಗಳ ಬೆಳಕನ್ನು ತಾನೇ ಹೀರುತ್ತಾ (ಅವುಗಳ ಬೆಳಕನ್ನು ಕುಂಠಿತಗೊಳಿಸುತ್ತಾ) ಮೊದಲು ಅರುಣನನ್ನು ಪ್ರಪಂಚಕ್ಕೆ ತೋರಿಸಿದನು. ಅರುಣನ ಉದಯವನ್ನು ಅನುಸರಿಸಿ ಚಂದ್ರನು ಸುವರ್ಣದ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ದೊಡ್ಡ ಕಿರಣಗಳ ಸಮೂಹವನ್ನು ಸ್ವಲ್ಪ-ಸ್ವಲ್ಪವಾಗಿ ಹೊರಹೊಮ್ಮಿಸಿದನು. ಚಂದ್ರನ ಆ ರಶ್ಮಿಗಳು ತಮ್ಮ ಪ್ರಭೆಯಿಂದ ಕತ್ತಲೆಯನ್ನು ಓಡಿಸುತ್ತಾ, ಮೆಲ್ಲ-ಮೆಲ್ಲಗೆ ಎಲ್ಲ ದಿಕ್ಕುಗಳನ್ನೂ ಅಂತರಿಕ್ಷವನ್ನೂ ಮತ್ತು ಭೂಮಿಯನ್ನೂ ವ್ಯಾಪಿಸಿದುವು. ಮುಹೂರ್ತ ಮಾತ್ರದಲ್ಲಿ ವಿಶ್ವವೇ ಜ್ಯೋತಿರ್ಮಯವಾಗಿ ಬೆಳಗಿತು. ಹೇಳ ಹೆಸರಿಲ್ಲದಂತೆ ಕತ್ತಲೆಯು ಎಲ್ಲಿಗೋ ಓಡಿಹೋಯಿತು. ನಿಶಾಕರನು ಪೂರ್ಣಪ್ರಕಾಶದಿಂದ ಬೆಳಗುತ್ತಿರಲಾಗಿ, ಹಗಲಿನಂತೆಯೇ ಲೋಕವು ಚಂದ್ರನ ಬೆಳಕಿನಿಂದ ಬೆಳಗು ತ್ತಿರಲಾಗಿ, ನಕ್ತಂಚರಗಳಾದ ಕೆಲವು ಪ್ರಾಣಿಗಳು ಸಂಚರಿಸತೊಡಗಿದುವು. ಕೆಲವು ಪ್ರಾಣಿಗಳು ಎಲ್ಲಿದ್ದುವೋ ಅಲ್ಲಿಯೇ ಇದ್ದುವು. ಕಮಲಪುಷ್ಪಗಳ ಸಮೂಹವು ಸೂರ್ಯನ ರಶ್ಮಿಗಳ ಸ್ಪರ್ಶದಿಂದ ವಿಕಸಿತವಾಗುವಂತೆ– ಚಂದ್ರನ ಕಿರಣಗಳ ಸ್ಪರ್ಶದಿಂದ ಸೈನ್ಯವು ಎಚ್ಚರಗೊಂಡಿತು. ಚಂದ್ರೋದಯ ದಿಂದ ಪ್ರಭಾವಿತವಾದ ಸಮುದ್ರವು ಅಲ್ಲೋಲ-ಕಲ್ಲೋಲವಾಗುವಂತೆ– ಚಂದ್ರೋದಯದಿಂದ ಎಚ್ಚರಗೊಂಡ ಸೈನ್ಯಸಾಗರವೂ ಕ್ಷೋಭೆಗೊಂಡಿತು. ಅನಂತರ ಶ್ರೇಷ್ಠವಾದ ಲೋಕವನ್ನು (ವೀರಸ್ವರ್ಗವನ್ನು) ಅಪೇಕ್ಷಿಸಿದ್ದ ಉಭಯಪಕ್ಷಗಳ ಯೋಧರ ನಡುವೆ ಲೋಕದ ವಿನಾಶಾರ್ಥವಾಗಿ ಘೋರ ವಾದ ಯುದ್ಧವು ಪುನಃ ಪ್ರಾರಂಭವಾಯಿತು."

ನೂರೆಂಬತ್ನಾಲ್ಕನೆಯ ಅಧ್ಯಾಯವು ಮುಗಿಯಿತು.

---

## ೧೪ನೆಯ ದಿವಸದ ರಾತ್ರಿಯುದ್ಧದ ವಿಶ್ಲೇಷಣೆ

೧೫೩ ನೆಯ ಅಧ್ಯಾಯ : ಯುದ್ಧವು ಇದ್ದಕ್ಕಿದ್ದಂತೆಯೇ ಪ್ರಾರಂಭ ವಾಗುತ್ತದೆ. ವ್ಯೂಹರಚನೆಯೂ ಇಲ್ಲ. ಯಾವ ವ್ಯವಸ್ಥೆಯೂ ಇಲ್ಲ.

ಇದು ರಾತ್ರಿಯ ಯುದ್ಧ. ಇದು ೧೦ನೆಯ ಶ್ಲೋಕದಲ್ಲಿ ಸ್ಪಷ್ಟವಾಗಿದೆ. **ಭಾಸ್ಕರೇಽಸ್ತಂಗತೇ ನ ಭ್ರಾಜನ್ತೇ ಯಥಾತತ್ತ್ವಂ।** ಆದರೆ ಮುಂದೆ ವೀರರು ಯುದ್ಧಮಾಡುವಾಗ ರಾತ್ರಿಯಲ್ಲಿ ಯುದ್ಧವಾಗುತ್ತಿದೆಯೆಂದು ಭಾವಿಸುವ ಪ್ರಕರಣಗಳೇನೂ ಕಾಣುವುದಿಲ್ಲ. ದುರ್ಯೋಧನನು 'ಮಾಡು ಅಥವಾ ಮಡಿ' ಎಂಬ ನಿರ್ಧಾರವನ್ನು ಕೈಗೊಂಡು ಪಾಂಡವರೊಡನೆ ಯುದ್ಧಕ್ಕೆ ಧುಮುಕುತ್ತಾನೆ. ಬಹಳ ಶೌರ್ಯದಿಂದ ಕಾದಾಡುತ್ತಾನೆ. ಯುಧಿಷ್ಠಿರನ ಅಶ್ವ-ಸಾರಥಿಗಳನ್ನೂ ಗಾಯಗೊಳಿಸುತ್ತಾನೆ. ಧ್ವಜವನ್ನೂ ತುಂಡರಿಸುತ್ತಾನೆ. ಧನುಸ್ಸನ್ನೂ ತುಂಡರಿಸುತ್ತಾನೆ. ಅದಕ್ಕೆ ಪ್ರತಿಯಾಗಿ ಯುಧಿಷ್ಠಿರನೂ ಒಂದೇ ಒಂದು ಬಾಣದಿಂದ ದುರ್ಯೋಧನನನ್ನು ಮೂರ್ಛೆಗೊಳಿಸುತ್ತಾನೆ. ಕೌರವನು ಸತ್ತುಹೋದನೆಂದೇ ಪಾಂಡವರ ಕಡೆಯವರು ಭಾವಿಸುತ್ತಾರೆ. ಆ ವೇಳೆಗೆ ದ್ರೋಣರು ಬರುತ್ತಾರೆ. ದುರ್ಯೋಧನನೂ ಚೇತರಿಸಿಕೊಳ್ಳುತ್ತಾನೆ. ಪುನಃ ಭಯಂಕರವಾದ ಯುದ್ಧವು ಪ್ರಾರಂಭವಾಗುತ್ತದೆ. ೧೫೪ನೆಯ ಅಧ್ಯಾಯ : ಇಲ್ಲಿ ಧೃತರಾಷ್ಟ್ರನು ದ್ರೋಣರ ಚಕ್ರರಕ್ಷಕರು, ಹಿಂಬಾಲಕರು ಮತ್ತು ಅವರನ್ನು ಎದುರಿಸಿದವರು ಯಾರೆಂದು ಪ್ರಶ್ನಿಸುತ್ತಾನೆ. ಸಂಜಯನು ದ್ರೋಣರನ್ನು ಎದುರಿಸುವ ಯೋಧರನ್ನು ಮಾತ್ರವೇ ಹೆಸರಿಸುತ್ತಾನೆ. ಚಕ್ರರಕ್ಷಕರನ್ನಾಗಲೀ, ಹಿಂಬಾಲಕರನ್ನಾಗಲೀ ಹೇಳುವುದಿಲ್ಲ. ಅವರು ಏಕಾಕಿಯಾಗಿಯೇ ಯುದ್ಧಮಾಡಿದರೆಂಬ ಅಭಿಪ್ರಾಯ ವಿರಬಹುದು. ಅಧ್ಯಾಯದ ಕಡೆಯಲ್ಲಿ **ದ್ರೋಣೇನೈಕೇನ ನಾರಾಚೈಃ** ನಿರ್ಭಿನ್ನಾನಿ ಎಂಬ ವಾಕ್ಯವೂ ಇದೆ. ಅಧ್ಯಾಯಪೂರ್ತಿಯಾಗಿ ರಾತ್ರಿಯುದ್ಧದ ವರ್ಣನೆಯಿದೆ. ೧೫೫ನೆಯ ಅಧ್ಯಾಯ : ಈ ಅಧ್ಯಾಯವು ಭೀಮಪರಾಕ್ರಮಾಧ್ಯಾಯ. ದ್ರೋಣರ ಪರಾಕ್ರಮವು ಇಲ್ಲಿ ಗೌಣ. ಅವರು ಶಿಬಿಯನ್ನು ಸಂಹರಿಸುತ್ತಾರೆ. ಭೀಮಸೇನನು ಒಂದೊಂದು ಗುದ್ದಿನಿಂದಲೇ ಒಬ್ಬೊಬ್ಬ ಯೋಧನನ್ನು ಸಂಹರಿಸುತ್ತಾನೆ. ಧೃತರಾಷ್ಟ್ರನ ಮಕ್ಕಳ ರಥವನ್ನು ಒದೆತದಿಂದಲೇ ಕೆಳಕ್ಕೆ ಬೀಳಿಸುತ್ತಾನೆ. ಅನಂತರ ಅವರನ್ನೂ ಗುದ್ದಿ ಸಾಯಿಸುತ್ತಾನೆ. ಇಲ್ಲಿಯ ಇಬ್ಬರು ಮಕ್ಕಳೂ ಸೇರಿ ದ್ರೋಣಪರ್ವದಲ್ಲಿ ಧೃತರಾಷ್ಟ್ರನ ೩೩ ಮಕ್ಕಳು ಅಸುನೀಗಿದಂತಾಗುತ್ತದೆ. ಭೀಷ್ಮಪರ್ವದ ೨೫ ಮಂದಿಯೂ ಸೇರಿ ಇದುವರೆಗೆ ಒಟ್ಟು ೫೮ ಮಕ್ಕಳು ಅಸುನೀಗಿದಂತಾಯಿತು.

೧೫೬ನೆಯ ಅಧ್ಯಾಯ : ಇದನ್ನು ಅಶ್ವತ್ಥಾಮಪರಾಕ್ರಮಾಧ್ಯಾಯವೆಂದೇ ಕರೆಯಬಹುದು. ಅಧ್ಯಾಯದ ಪ್ರಾರಂಭದಲ್ಲಿ ಸೋಮದತ್ತನು ತನ್ನ ಮಗನನ್ನು ಸಂಹರಿಸಿದ ಸಾತ್ಯಕಿಯನ್ನು ಸಂಹರಿಸುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ಅದಕ್ಕೆ ಪ್ರತಿಯಾಗಿ ಸಾತ್ಯಕಿಯೂ ಪ್ರತಿಜ್ಞೆಮಾಡುತ್ತಾನೆ. ಆದರೆ ಪ್ರತಿಜ್ಞಾವಚನವು ಪೂರ್ಣವಾಗಿಲ್ಲ. **ಯದಿ ತ್ವಾಂ ಸಸುತಂ ಪಾಪಂ ನ ಹನ್ಯಾಂ ಯುಧಿ ರೋಷಿತಃ ।** ಪುತ್ರಸಹಿತನಾದ, ಪಾಪಿಷ್ಠನಾದ ನಿನ್ನನ್ನು ರೋಷಾವಿಷ್ಟನಾದ ನಾನು ಯುದ್ಧದಲ್ಲಿ ಸಂಹರಿಸದಿದ್ದರೆ'–ಇಷ್ಟಕ್ಕೇ ವಾಕ್ಯವು ನಿಂತುಹೋಗುತ್ತದೆ. 'ನನಗೆ ಸದ್ಗತಿಯು ಸಿಕ್ಕದಿರಲಿ' ಎಂಬುದನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಸೋಮದತ್ತನಿಗೂ-ಸಾತ್ಯಕಿಗೂ ಯುದ್ಧವಾಗುತ್ತದೆ. ಸೋಮದತ್ತನು ಮೂರ್ಛಿತನಾಗುತ್ತಾನೆ. ಇಲ್ಲಿ ಒಂದು ಸ್ವಾರಸ್ಯವಾದ ಶ್ಲೋಕವಿದೆ. **ತಂ ವಿಸಂಜ್ಞಂ ಸಮಾಲಕ್ಷ್ಯ ಯುಯುಧಾನಶರಾರ್ದಿತಮ್ । ಅಭ್ಯದ್ರವತ್ತತೋ ದ್ರೋಣೋ ಯದುವೀರಜಿಘಾಂ ಸಯಾ ॥೩೦॥** ಸಾತ್ವತನನ್ನು ಸಂಹರಿಸುವ ಇಚ್ಛೆಯಿಂದ ದ್ರೋಣರು ಅವನನ್ನು ಆಕ್ರಮಿಸಿದರು. ಈ ಪಾಠ ಒಂದು ಪುಸ್ತಕದಲ್ಲಿದೆ. ಇದನ್ನೇ ನಾವೂ ಅನುಸರಿಸಿದ್ದೇವೆ. ಮತ್ತೊಂದು ಪುಸ್ತಕದಲ್ಲಿ '**ದ್ರೋಣಃ**' ಎಂಬುದಕ್ಕೆ ಬದಲಾಗಿ '**ದ್ರೌಣಿಃ**' ಅಶ್ವತ್ಥಾಮಾ ಎಂದಿದೆ. ದ್ರೋಣರ ಪ್ರಕರಣವೇ ಅಲ್ಲಿ ಬರುವುದಿಲ್ಲ. ಇಲ್ಲಿ ಬರುವ ದ್ರೋಣರ ಯುದ್ಧಪ್ರಸಂಗದಲ್ಲಿ ಕೆಲವು ಅಸಂಗತಗಳು ಕಾಣುತ್ತವೆ. ದ್ರೋಣರು ಸಾತ್ಯಕಿಯನ್ನೇ ಸಂಹಾರಮಾಡಬೇಕೆಂದು ಇಚ್ಛಿಸಿ ಅವನೊಡನೆ ಯುದ್ಧವನ್ನು ಉಪಕ್ರಮಿಸುತ್ತಾರೆ. ಸಾತ್ಯಕಿಯನ್ನು ಹತ್ತು ಬಾಣಗಳಿಂದಲೂ, ಭೀಮಸೇನನನ್ನು ಒಂಬತ್ತು ಬಾಣಗಳಿಂದಲೂ ಪ್ರಹರಿಸುತ್ತಾರೆ (೩೪-೩೫). ದ್ರೋಣರ ಮುಂದೆ ನಿಲ್ಲಲಾರದೇ ಎಲ್ಲರೂ ಪಲಾಯನಮಾಡುತ್ತಾರೆ (೩೮). ಪಾಂಡವರ ರಕ್ಷಣೆಗಾಗಿ ಅರ್ಜುನನು ದ್ರೋಣರ ಬಳಿಗೆ ಧಾವಿಸುತ್ತಾನೆ (೩೬). ಅರ್ಜುನನು ದ್ರೋಣರೊಡನೆ ಯುದ್ಧಮಾಡಲು ಹೋಗುತ್ತಿರುವುದನ್ನು ನೋಡಿ ಪಾಂಡವಸೈನಿಕರು ಯುದ್ಧಕ್ಕೆ ಹಿಂದಿರುಗುತ್ತಾರೆ (೪೦). ಪುನಃ ಯುದ್ಧವಾಗಿ ದ್ರೋಣರು ಎದುರಿಗೆ ಸಿಕ್ಕಿದವರೆಲ್ಲರನ್ನೂ ಸಂಹರಿಸುತ್ತಾರೆ (೪೪). ಸವ್ಯಸಾಚಿಯ ಸಮ್ಮುಖದಲ್ಲಿಯೇ ಪಾಂಡವಸೈನಿಕರು ಪಲಾಯನ

ಮಾಡುತ್ತಾರೆ (೪೫). ಮುಂದಿನ ಶ್ಲೋಕದಲ್ಲಿ **ಗೋವಿನ್ದಮಬ್ರವೀಜ್ಜಿಷ್ಣುಃ ಗಚ್ಛ ದ್ರೋಣರಥಂ ಪ್ರತಿ ।** ಅರ್ಜುನನು ಗೋವಿಂದನಿಗೆ ದ್ರೋಣರ ರಥದ ಕಡೆಗೆ ಹೋಗುವಂತೆ ಹೇಳಿದನು (೪೬) ಎಂದಿದೆ. ಎಂದರೆ ಈ ಹಿಂದೆ ಅರ್ಜುನನು ದ್ರೋಣರೊಡನೆ ಯುದ್ಧಮಾಡುತ್ತಿರಲಿಲ್ಲವೆ? ಎಂಬ ಸಂದೇಹವುಂಟಾಗುತ್ತದೆ.

ಅರ್ಜುನನು ದ್ರೋಣರೊಡನೆ ಯುದ್ಧಮಾಡಲು ಹೋಗುತ್ತಿರುವುದನ್ನು ನೋಡಿ ಭೀಮಸೇನನೂ ದ್ರೋಣರ ರಥದ ಸಮೀಪಕ್ಕೆ ಹೋಗುತ್ತಾನೆ. ಅರ್ಜುನನು ದಕ್ಷಿಣಪಾರ್ಶ್ವದಲ್ಲಿಯೂ, ಭೀಮಸೇನನು ಉತ್ತರ ಪಾರ್ಶ್ವದಲ್ಲಿಯೂ ನಿಂತು ದ್ರೋಣರೊಡನೆ ಯುದ್ಧಮಾಡುತ್ತಾರೆ (೪೨). ಭೀಮಾರ್ಜುನರು ದ್ರೋಣರೊಡನೆ ಯುದ್ಧಮಾಡುತ್ತಿರುವುದನ್ನು ನೋಡಿ ಸಾತ್ಯಕಿ-ಧೃಷ್ಟದ್ಯುಮ್ನರೂ ದ್ರೋಣರೊಡನೆ ಯುದ್ಧಮಾಡಲು ಹೋಗುತ್ತಾರೆ (೫೩).

ದ್ರೋಣರು ಸಾತ್ಯಕಿಯೊಡನೆ ಯುದ್ಧಮಾಡಲು ಬರುತ್ತಾರೆ. ಯುದ್ಧ ಮಾಡುವಾಗ ಪಾಂಡವಸೈನಿಕರು ಪಲಾಯನಮಾಡಿದರೆಂದು ಇದೆಯೇ ಹೊರತು, ಭೀಮಸೇನ-ಸಾತ್ಯಕಿಯರು ಯುದ್ಧಮಾಡಿದ ವಿಷಯವಾಗಲೀ, ಅವರೂ ಪರಾಜಿತರಾಗಿ ಓಡಿಹೋದ ವಿಷಯವಾಗಲೀ ಬರುವುದಿಲ್ಲ. ಆದರೆ ಇಲ್ಲಿನ ಪ್ರಕರಣವನ್ನು ವಿವೇಚಿಸಿದರೆ ಭೀಮ-ಸಾತ್ಯಕಿ-ಯುಧಿಷ್ಠಿರ-ಧೃಷ್ಟದ್ಯುಮ್ನರೂ ಸೈನಿಕರೊಡನೆ ಪಲಾಯನಮಾಡಿದರೆಂದೇ ಹೇಳಬೇಕಾಗುತ್ತದೆ. ಇದುವರೆಗೆ ಅವರ ಪರಾಕ್ರಮಕಥನದ ಪ್ರಕಾರ ಭೀಮ-ಸಾತ್ಯಕಿಯರು ಅಷ್ಟು ಸುಲಭವಾಗಿ ಪಲಾಯನಮಾಡತಕ್ಕವರಲ್ಲ.

ಸಾತ್ಯಕಿಯು ಭೀಮಾರ್ಜುನರೊಡನೆ ಸೇರಿಕೊಂಡು ದ್ರೋಣರೊಡನೆ ಯುದ್ಧಮಾಡುತ್ತಿರುತ್ತಾನೆ. ಸಾತ್ಯಕಿಯನ್ನು ಯುದ್ಧದಲ್ಲಿ ನೋಡಿದ ಕೂಡಲೇ ಭೂರಿಶ್ರವಸನ ವಧೆಯನ್ನು ನೆನೆದು ಅಶ್ವತ್ಥಾಮನು ಸಾತ್ಯಕಿಯೊಡನೆ ಯುದ್ಧವನ್ನು ಪ್ರಾರಂಭಿಸುತ್ತಾನೆ. ಅದುವರೆಗೂ ಅಶ್ವತ್ಥಾಮನು ದ್ರೋಣರೊಡನೆ ಸೇರಿಕೊಂಡು ಯುದ್ಧಮಾಡುತ್ತಿದ್ದನೆಂಬ ವಿಷಯವು ಬಂದಿರುವುದಿಲ್ಲ. ಇಲ್ಲಿಂದ ಮುಂದಕ್ಕೆ ದ್ರೋಣರ ಯುದ್ಧದ ಪ್ರಕರಣ ಬರುವುದಿಲ್ಲ. ಸಾತ್ಯಕಿಯ ಮೇಲೆ ಅಶ್ವತ್ಥಾಮನು ಯುದ್ಧಕ್ಕೆ ಬರುತ್ತಿರುವು

ದನ್ನು ಕಂಡು ಘಟೋತ್ಕಚನು ಅವನನ್ನು ತಡೆಯುತ್ತಾನೆ. ಮುಂದೆ ಸಾತ್ಯಕಿಯ ವಿಷಯವು ಬರುವುದಿಲ್ಲ. ಅಶ್ವತ್ಥಾಮಾ-ಘಟೋತ್ಕಚರ ಯುದ್ಧಪ್ರಸಂಗವು ಬರುತ್ತದೆ. ೭೯ನೆಯ ಶ್ಲೋಕದಲ್ಲಿ **'ದ್ರೌಣಿಂ ಪ್ರಾಚ್ಛಾದಯದ್ಬಾಣೈಃ ಸ್ವರ್ಭಾನುರಿವ ಭಾಸ್ಕರಮ್'**–ಘಟೋತ್ಕಚನು ಅಶ್ವತ್ಥಾಮನನ್ನು ರಾಹುವು ಸೂರ್ಯನನ್ನು ಮುಚ್ಚಿಬಿಡುವಂತೆ ಬಾಣಗಳಿಂದ ಮುಚ್ಚಿಬಿಡುತ್ತಾನೆ. ಮುಂದಿನ ಶ್ಲೋಕದಲ್ಲಿ ಇದ್ದಕ್ಕಿದ್ದಂತೆಯೇ ಘಟೋತ್ಕಚನ ಮಗನು **'ದ್ರೌಣಿಮಾಯಾನ್ತಂ ರುರೋಧ'** ಎಂದು ಬರುತ್ತದೆ. ಹಿಂದಿನ ಶ್ಲೋಕದಲ್ಲಿ ದ್ರೌಣಿಯನ್ನು ಘಟೋತ್ಕಚನು ಬಾಣಗಳಿಂದ ಮುಚ್ಚಿಬಿಟ್ಟಿದ್ದಾನೆ. ಈ ಶ್ಲೋಕದಲ್ಲಿ ಬರುತ್ತಿರುವ ದ್ರೌಣಿಯನ್ನು ಅಂಜನಪರ್ವನು ತಡೆದ ಪ್ರಕರಣವು ಬರುತ್ತದೆ. ಈ ಪ್ರಕರಣವು ತೇಪೆಹಾಕಿದಂತೆಯೇ ಇದೆ. ಅಂಜನಪರ್ವನ ವಧೆಯಾಗುವವರೆಗೂ ಘಟೋತ್ಕಚನು ಏನು ಮಾಡುತ್ತಿದ್ದನೆಂಬ ವಿಷಯವೇ ಬರುವುದಿಲ್ಲ. ತಂದೆ-ಮಕ್ಕಳು ಒಟ್ಟಾಗಿ ಯುದ್ಧಮಾಡಿದರೆಂಬ ವಿಷಯವೂ ಇಲ್ಲಿ ಬರುವುದಿಲ್ಲ. ಮಗನು ಹತನಾದನಂತರ ಪುನಃ ಘಟೋತ್ಕಚನು ಬಂದನೆಂಬ ವಾಕ್ಯವಿದೆ. **ಅಥ ದೃಷ್ಟ್ವಾ ಹತಂ ಪುತ್ರಂ ದ್ರೌಣೇಃ ಸಕಾಶಮಭ್ಯೇತ್ಯ** (೯೦) ಮುಂದೆ ಇಬ್ಬರಿಗೂ ವಾಗ್ವಾದವು ನಡೆದು ಪುನಃ ಯುದ್ಧವು ಪ್ರಾರಂಭವಾಗುತ್ತದೆ. ಆಗ ನಡೆಯುತ್ತಿದ್ದ ಯುದ್ಧದಲ್ಲಿ ಘಟೋತ್ಕಚನು ಮಾಯಾಯುದ್ಧವನ್ನು ಮಾಡುತ್ತಿದ್ದನೆಂಬುದು ಉಕ್ತವಾಗಿಲ್ಲ. ಒಬ್ಬರು ಮತ್ತೊಬ್ಬರ ಮೇಲೆ ಬಾಣಗಳ ವೃಷ್ಟಿಯನ್ನು ಸುರಿಸುತ್ತಿದ್ದರೆಂದೇ ಇದೆ. **ರಥಾಕ್ಷಮಾತ್ರೈರಿಷುಭಿಃ ಅಭ್ಯವರ್ಷದ್ಘಟೋತ್ಕಚಃ** (೧೦೧) **ಶರವೃಷ್ಟಿಂ ಶರೈರ್ದ್ರೌಣಿಃ ಅಪ್ರಾಪ್ತಾಂ ತಾಂ ವ್ಯಶಾತಯತ್** (೧೦೨). ಆದರೆ ೧೦೪ನೆಯ ಶ್ಲೋಕದಲ್ಲಿ 'ನಿಶಾಮ್ಯ ನಿಹತಾಂ ಮಾಯಾಂ ದ್ರೌಣಿನಾ ರಣಮಾನಿನಾ' 'ಅಶ್ವತ್ಥಾಮನಿಂದ ಮಾಯೆಯು ನಾಶವಾದುದನ್ನು ಕಂಡು' ಎಂದಿದೆ.

ಈ ಕಾರಣದಿಂದಲೇ ಕಥೆಯ ಎಳೆಯು ಹರಿದುಹೋಗಿ ಮಧ್ಯದಲ್ಲಿ ಅಸಂಗತವಿಷಯಗಳು ಸೇರಿಕೊಂಡಿವೆಯೆಂಬುದನ್ನು ಊಹಿಸಬಹುದಾಗಿದೆ. ಘಟೋತ್ಕಚನು ಮಾಯಾಯುದ್ಧವನ್ನಾಶ್ರಯಿಸಿದ ವಿಷಯವು ಈ ಹಿಂದೆ ಬಂದಿರುತ್ತದೆ. ಅದರ ಸಂಬಂಧವಾಗಿ ಅಲ್ಲಿ ಬಂದಿರುವ ಶ್ಲೋಕವು ಹೀಗಿದೆ.

**ತತ್ರೈಕೋऽಸ್ತ್ರಬಲಶ್ಲಾಘೀ ದ್ರೌಣಿರ್ಮಾನೀ ನ ವಿವ್ಯಥೇ ।**
**ವ್ಯಧಮಚ್ಚ ಶರೈರ್ಮಾಯಾಂ ಘಟೋತ್ಕಚವಿನಿರ್ಮಿತಾಮ್ ॥೭೨॥**

ಅದಾದನಂತರ ೧೧೦ಳನೆಯದಾದ ಈ ಶ್ಲೋಕವು ಬಂದರೆ ಸುಸಂಗತವಾಗಿ ಕಾಣುವುದು. **ನಿಶಾಮ್ಯ ನಿಹತಾಂ ಮಾಯಾಂ ದ್ರೌಣಿನಾಂ ರಣಮಾನಿನಾ । ಘಟೋತ್ಕಚಸ್ತತೋ ಮಾಯಾಂ ಸಸರ್ಜಾನ್ತರ್ಹಿತಃ ಪುನಃ ॥** ಆದರೆ ಈ ಮಧ್ಯದಲ್ಲಿರುವ ಎಲ್ಲ ಶ್ಲೋಕಗಳೂ ಎಲ್ಲ ಪುಸ್ತಕಗಳಲ್ಲಿಯೂ ಇವೆ. ಈ ಅಧ್ಯಾಯವು ಅಶ್ವತ್ಥಾಮನ ವಿಜಯದಲ್ಲಿ ಕೊನೆಗೊಳ್ಳುತ್ತದೆ.

೧೫೭ನೆಯ ಅಧ್ಯಾಯ : ಸೋಮದತ್ತನು ಪುನಃ ಸಾತ್ಯಕಿಯೊಡನೆ ಯುದ್ಧ ಮಾಡುತ್ತಾನೆ. ಭೀಮನು ಸಾತ್ಯಕಿಯ ಸಹಾಯಕ್ಕೆ ಹೋಗುತ್ತಾನೆ. ಭೀಮ- ಸಾತ್ಯಕಿಯರ ಆಯುಧಪ್ರಹಾರಗಳಿಂದ ಸೋಮದತ್ತನು ಮೂರ್ಛಿತನಾಗುತ್ತಾನೆ. ಸೋಮದತ್ತನ ತಂದೆ ಬಾಹ್ಲೀಕನು ಯುದ್ಧಕ್ಕೆ ಬಂದು ಭೀಮನಿಂದ ಹತನಾಗುತ್ತಾನೆ. ಹತ್ತು ಮಂದಿ ಧೃತರಾಷ್ಟ್ರನ ಮಕ್ಕಳನ್ನೂ ಭೀಮಸೇನನು ಸಂಹರಿಸುತ್ತಾನೆ. ಧೃತರಾಷ್ಟ್ರನ ಮಕ್ಕಳಲ್ಲಿ ಸತ್ತವರ ಸಂಖ್ಯೆ ೬೭ಕ್ಕೆ ಏರುತ್ತದೆ. ಭೀಮನು ಇನ್ನೂ ಅನೇಕ ಗಾಂಧಾರಯೋಧರನ್ನು ಸಂಹರಿಸುತ್ತಾನೆ. ಮುಂದೆ ಯುಧಿಷ್ಠಿರ-ದ್ರೋಣರಿಗೆ ಯುದ್ಧವು ಪ್ರಾರಂಭವಾಗುತ್ತದೆ. ಅನೇಕ ಮಹಾಸ್ತ್ರಗಳ ಪ್ರಯೋಗಕಥನವಿದೆ. ದ್ರೋಣರು ಪರಾಜಯಗೊಳ್ಳದಿದ್ದರೂ ಯುಧಿಷ್ಠಿರನೊಡನೆ ಮಾಡುತ್ತಿದ್ದ ಯುದ್ಧದಿಂದ ವಿಮುಖರಾಗಬೇಕಾಗುತ್ತದೆ. ದ್ರೋಣರು ಪಾಂಚಾಲರನ್ನು ಸಂಹರಿಸಲು ಪ್ರಾರಂಭಿಸುತ್ತಾರೆ. ಅರ್ಜುನನು ಮಧ್ಯದಲ್ಲಿ ಪ್ರವೇಶಿಸುತ್ತಾನೆ. ಪರಿಸ್ಥಿತಿಯು ತಿರುಗು-ಮುರುಗಾಗಿ ಕೌರವರ ಸೈನ್ಯವು ಪಲಾಯನಮಾಡುತ್ತದೆ. ಕೌರವರ ಪರಾಜಯದಲ್ಲಿ ಈ ಅಧ್ಯಾಯವು ಕೊನೆಗೊಳ್ಳುತ್ತದೆ.

೧೫೮ನೆಯ ಅಧ್ಯಾಯ : ಕರ್ಣನು ಎಷ್ಟು ಗಾಂಭೀರ್ಯದಿಂದ ಮಾತನಾಡುತ್ತಾನೆಂಬುದನ್ನು ತೋರಿಸುವ ಅಧ್ಯಾಯವಿದು. ಆಶ್ವಾಸನೆಯನ್ನಪೇಕ್ಷಿಸಿದ್ದ ದುರ್ಯೋಧನನಿಗೆ ನಿಜವಾದ ಆಶ್ವಾಸನೆಯನ್ನೇ ಕೊಡುತ್ತಾನೆ. ಇಂದ್ರನು ಕೊಟ್ಟಿದ್ದ ಶಕ್ತಿಯನ್ನೇ ಅವಲಂಬಿಸಿ ಅದರಿಂದಲೇ ಅರ್ಜುನನನ್ನು ಸಂಹರಿಸುತ್ತೇನೆಂದು ಹೇಳುತ್ತಾನೆ. ಆ ಶಕ್ತ್ಯಾಯುಧವಿರುವುದರಿಂದಲೇ ಶ್ರೀಕೃಷ್ಣನು ಅರ್ಜುನನಿಗೆ ಅವನ ಸಮೀಪಕ್ಕೂ ಹೋಗಬೇಡವೆಂದು ಈ

ಹಿಂದೆ ಒಮ್ಮೆ ಹೇಳಿದ್ದಾನೆ (೧೪೭-೩೪). ಆದರೆ ಕೃಪರು ಈ ಸಮಯದಲ್ಲಿ ಕರ್ಣನನ್ನು ಬಹಳವಾಗಿ ನಿಂದಿಸುತ್ತಾರೆ. ಅವನು ಹಿಂದೆ ಪರಾಜಿತನಾದುದನ್ನು ಎತ್ತಿಯಾಡುತ್ತಾರೆ. ಪಾಂಡವರೇ ಗೆಲ್ಲುವರೆಂಬುದನ್ನೂ ಸ್ಪಷ್ಟವಾಗಿ ಹೇಳುತ್ತಾರೆ. ಅವರ ಆ ಮಾತಿಗೂ ಕರ್ಣನು ತಕ್ಕುದಾದ ಉತ್ತರವನ್ನೇ ಕೊಡುತ್ತಾನೆ. ಪಾಂಡವರ ಪರಾಕ್ರಮವನ್ನು ಅಲ್ಲಗಳೆಯಲು ಹೋಗುವುದಿಲ್ಲ. ತನ್ನಲ್ಲಿ ಶಕ್ತ್ಯಾಯುಧವಿರುವುದರಿಂದ ತಾನೇ ಗೆಲ್ಲುವೆನೆಂಬುದನ್ನು ನಿಶ್ಚಯಿಸಿ ಹೇಳುತ್ತಾನೆ. 'ಬ್ರಾಹ್ಮಣಾಧಮ' 'ನಾಲಿಗೆಯನ್ನು ಕತ್ತರಿಸುತ್ತೇನೆ' ಮುಂತಾಗಿ ನಾಲ್ಕಾರು ಕಟುವಾದ ಮಾತುಗಳನ್ನಾಡಿದರೂ ಕರ್ಣನು ಆಡುವ ಮಾತುಗಳು ಯುಕ್ತಿಯುಕ್ತವಾಗಿಯೂ ತಾರ್ಕಿಕವಾಗಿಯೂ ಕಾಣುತ್ತವೆ. 'ದುರ್ಯೋಧನನ ಪಕ್ಷದಲ್ಲಿದ್ದುಕೊಂಡು ಪಾಂಡವರನ್ನು ಹೊಗಳಿ ನಮ್ಮ ಸೈನಿಕರಿಗೆ ಭಯವನ್ನುಂಟುಮಾಡುತ್ತಿರುವಿರಿ' ಎಂದು ಆಪಾದಿಸುತ್ತಾನೆ. ಸೈನ್ಯದ ವಲಯದಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಾದ ಅಂಶವಿದು. ಯಾವುದೇ ಕಾರಣದಿಂದಲೂ ತಮ್ಮ ಕಡೆಯ ಸೈನಿಕರು ಅಧೀರರಾಗುವಂತೆ ಮಾಡಬಾರದು. ಕಡೆಯ ಶ್ಲೋಕದ ಕಡೆಯ ಪಾದವಂತೂ ಕರ್ಣನು ಎಂತಹ ಸಂಸ್ಕಾರಿಯೆಂಬುದನ್ನು ಸ್ಪಷ್ಟವಾಗಿ ತೋರಿಸುತ್ತದೆ. "ಜಯೋ ದೈವೇ ಪ್ರತಿಷ್ಠಿತಃ" 'ಯಥಾಶಕ್ತಿ ಪ್ರಯತ್ನಿಸುತ್ತೇನೆ. ಆದರೆ ಜಯವು ದೈವಾಧೀನವಾದುದು' ಎನ್ನುತ್ತಾನೆ.

೧೫೯ನೆಯ ಅಧ್ಯಾಯ : ಕರ್ಣನು ಕೃಪರನ್ನು ನಿಂದಿಸಿದುದಕ್ಕಾಗಿ ಅಶ್ವತ್ಥಾಮನು ಕರ್ಣನನ್ನು ಕೊಲ್ಲಲು ಹೋಗುತ್ತಾನೆ. 'ಅಂತಃಕಲಹವು ವಿನಾಶಕ್ಕೆ ಮೂಲ' ಎಂಬ ಹಿರಿಯರ ವಾರ್ತೆಯು ಇಲ್ಲಿ ಸ್ಮರಣೆಗೆ ಬರುತ್ತದೆ. ದುರ್ಯೋಧನನು ಅಶ್ವತ್ಥಾಮನನ್ನು ಸಮಾಧಾನಗೊಳಿಸುತ್ತಾನೆ. ಕರ್ಣನು ಪಾಂಡವರೊಡನೆ ಯುದ್ಧಕ್ಕೆ ಹೋಗುತ್ತಾನೆ. ಕರ್ಣನ ಅದ್ಭುತಪರಾಕ್ರಮದ ವರ್ಣನೆಯಿದೆ. ಪಾಂಡವಸೈನ್ಯವು ಪರಾಜಯಹೊಂದಿ ಓಡಿಹೋಗುತ್ತಿರುವ ಸಮಯದಲ್ಲಿ ಅರ್ಜುನನು ಬರುತ್ತಾನೆ. ಆ ಸಮಯದಲ್ಲಿ ದುರ್ಯೋಧನನು ಕರ್ಣನ ಸಹಾಯಕ್ಕಾಗಿ ಅಶ್ವತ್ಥಾಮಾ, ಕೃಪ, ಶಲ್ಯ ಮತ್ತು ಹಾರ್ದಿಕ್ಯರನ್ನು ಕಳುಹಿಸುತ್ತಾನೆ. ಆದರೆ ಇದರಿಂದ ಹೆಚ್ಚೇನೂ ಪ್ರಯೋಜನವಾಗುವುದಿಲ್ಲ. ಕರ್ಣಾರ್ಜುನರ ಯುದ್ಧವು ಸ್ವಲ್ಪ ಹೊತ್ತು ಸಮ-ಸಮವಾಗಿ ನಡೆದ

ನಂತರ ಅರ್ಜುನನು ಕರ್ಣನ ಅಶ್ವ-ಸಾರಥಿಗಳನ್ನು ಸಂಹರಿಸುತ್ತಾನೆ. ರಥ ಹೀನವಾದ ಕರ್ಣನು ಕೃಪರ ರಥವನ್ನು ಹತ್ತಿಕೊಳ್ಳುತ್ತಾನೆ. ದುರ್ಯೋಧನನ ಸೈನ್ಯವು ಪಲಾಯನಮಾಡುತ್ತದೆ. ದುರ್ಯೋಧನನಿಗೆ ಎಲ್ಲರ ಮೇಲೂ ಸಂಶಯ. ಯಾರೊಬ್ಬರೂ ತನ್ನ ವಿಜಯಕ್ಕಾಗಿ ಮನಸ್ಸಿಟ್ಟು ಯುದ್ಧ ಮಾಡುತ್ತಿಲ್ಲವೆಂಬುದು ಅವನ ಭಾವನೆ. ತಾನೇ ಅರ್ಜುನನೊಡನೆ ಯುದ್ಧಕ್ಕೆ ಹೊರಡುತ್ತಾನೆ. ಓಡಿಹೋಗುತ್ತಿದ್ದ ಸೈನ್ಯವು ಹಿಂದಿರುಗುತ್ತದೆ. ಆ ಸಮಯದಲ್ಲಿ ರಾಜನನ್ನು ಅರ್ಜುನನೊಡನೆ ಯುದ್ಧಮಾಡಲು ಬಿಡುವುದು ಅಪಾಯವೆಂದು ಭಾವಿಸಿದ ಕೃಪರು ಅಶ್ವತ್ಥಾಮನಿಗೆ ರಾಜನನ್ನು ಯುದ್ಧದಿಂದ ಹಿಂದಿರುಗಿಸಲು ಹೇಳುತ್ತಾರೆ. ಅಶ್ವತ್ಥಾಮನು ದುಯೋಧನನನ್ನು ಯುದ್ಧಕ್ಕೆ ಹೋಗದಂತೆ ತಡೆಯುತ್ತಾನೆ. ಆ ಸಮಯದಲ್ಲಿ ದುರ್ಯೋಧನನು ತನ್ನ ದುಃಖವನ್ನು ತೋಡಿಕೊಳ್ಳುತ್ತಾನೆ. 'ಆಚಾರ್ಯರು ಪಾಂಡವರನ್ನು ಮಕ್ಕಳಂತೆ ರಕ್ಷಿಸುತ್ತಿದ್ದಾರೆ'–ಎಂಬುದು ದುರ್ಯೋಧನನ ಆಪಾದನೆ. ರಾಜನು ಅಶ್ವತ್ಥಾಮನನ್ನೂ ಹಾಗೆಯೇ ಆಕ್ಷೇಪಿಸುತ್ತಾನೆ. 'ನಿನ್ನ ವೀರ್ಯಕ್ಕೆ ಅನುಗುಣವಾಗಿ ನೀನು ಯುದ್ಧಮಾಡುತ್ತಿಲ್ಲ. ಬಹಳ ಮಂದಗತಿಯಲ್ಲಿ ಯುದ್ಧಮಾಡುತ್ತಿರುವೆ'–ಎನ್ನುತ್ತಾನೆ. ಪಾಂಚಾಲ-ಸೋಮಕರನ್ನು ಸಂಹರಿಸ ಬೇಕೆಂದು ಪ್ರಾರ್ಥಿಸುತ್ತಾನೆ ; ಪುಸಲಾಯಿಸುತ್ತಾನೆ.

೧೬೦ನೆಯ ಅಧ್ಯಾಯ : ಹಿಂದಿನ ಅಧ್ಯಾಯದಲ್ಲಿ ದುರ್ಯೋಧನನು ದ್ರೋಣರ ವಿಷಯದಲ್ಲಾಡಿದ ಸಂಶಯರೂಪದ ಮಾತುಗಳಿಗೆ ಅಶ್ವತ್ಥಾಮನು ಈ ಅಧ್ಯಾಯದಲ್ಲಿ ಅನುರೂಪವಾದ ಉತ್ತರವನ್ನು ಕೊಡುತ್ತಾನೆ. ಆದರೆ ಅವನು ನಿಂದನೆಮಾಡುವಾಗ ಪಾಪಾತ್ಮಾ-ಪಾಪಪೂರುಷ-ಕ್ಷುದ್ರ-ಪಾಪಭಾವನ-ಕುತ್ಸಿತ–ಇತ್ಯಾದಿ ಶಬ್ದಗಳನ್ನೆಲ್ಲಾ ಉಪಯೋಗಿಸುತ್ತಾನೆ (೧೦). ರಾಜನ ದುರ್ನೀತಿಗಳನ್ನು ಖಂಡಿಸುವ ಪ್ರಕರಣಗಳು ಅನೇಕವಾಗಿ ಬರುತ್ತವೆ. ಆದರೂ ಈ ನಿಂದನೆಗಳು ಬಹಳ ಅತಿಯಾಗಿ ಕಾಣುತ್ತವೆ. ಒಂದು ಪುಸ್ತಕದಲ್ಲಿ ಈ ಶ್ಲೋಕವಿಲ್ಲ. ಅದೇ ಒಂದು ಸಮಾಧಾನ. ತನ್ನ ಪರಾಕ್ರಮದ ವಿಷಯವಾಗಿಯೂ ವೀರೋಚಿತವಾದ ಶ್ಲಾಘನೆಮಾಡಿ ಕೊಂಡ ಅಶ್ವತ್ಥಾಮನು ಪಾಂಡವರೊಡನೆ ಯುದ್ಧಕ್ಕೆ ಹೋಗುತ್ತಾನೆ. ಅಶ್ವತ್ಥಾಮನ ಯುದ್ಧದ ವರ್ಣನೆಯಿದೆ. ಧೃಷ್ಟದ್ಯುಮ್ನನಿಗೂ–ಅಶ್ವತ್ಥಾಮನಿಗೂ ಘೋರಯುದ್ಧವಾಗುತ್ತದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶ

ವೆಂದರೆ : ಈಗ ನಡೆಯುತ್ತಿರುವುದು ರಾತ್ರಿಯ ಯುದ್ಧ. ಕತ್ತಲೆಯಲ್ಲಿಯೇ ಯುದ್ಧವು ನಡೆಯುತ್ತಿದೆ. ಆದರೆ ಈ ಭಾವನೆಯು ಬರುವ ರೀತಿಯಲ್ಲಿ ಯುದ್ಧದ ವರ್ಣನೆಯಿಲ್ಲ. ಇದಕ್ಕೆ ಪ್ರತಿಯಾಗಿ ಹಗಲಿನಲ್ಲಿಯೇ ಯುದ್ಧ ವಾಗುತ್ತಿರುವುದೆಂದು ಮನವರಿಕೆಯಾಗುವ ಸಂದರ್ಭಗಳೂ ಇವೆ. **ಅಲಕ್ಷ್ಯೌ ಸಮಯುಧ್ಯೇತಾಂ ಮಹತ್ಕೃತ್ವಾ ಶರೈಸ್ತಮಃ** (೪೬). ತಮ್ಮ ಬಾಣಗಳ ಸಮೂಹಗಳಿಂದ ಆಕಾಶಗಳನ್ನೂ–ದಿಕ್ಕುಗಳನ್ನೂ ತುಂಬಿಸಿ, ತನ್ಮೂಲಕವಾಗಿ ಅಂಧಕಾರವನ್ನು ಸೃಷ್ಟಿಸಿ ಎಂದಿದೆ. ಬೆಳಕಿದ್ದರೆ ಬಾಣಗಳು ಮುಚ್ಚಿ ಕತ್ತಲಾಗುವುದು ಸಹಜ. ರಾತ್ರಿಯಲ್ಲಿ ಬಾಣಗಳಿಂದ ಕತ್ತಲಾಯಿತು ಎಂದಿದೆ (ಚಂದ್ರ-ನಕ್ಷತ್ರಗಳ ಬೆಳಕೂ ಕಾಣದೇ ಕತ್ತಲಾಯಿತು ಎಂದು ಭಾವಿಸಿಕೊಳ್ಳಬೇಕು). ಇಬ್ಬರೂ ಸಮ-ಸಮವಾಗಿಯೇ ಯುದ್ಧಮಾಡು ತ್ತಿರುತ್ತಾರೆ. **ಯುದ್ಧಂ ಸಮರೂಪಂ ತದಾಭವತ್** (೫೧) ಇದರ ಮುಂದಿನ ಶ್ಲೋಕದಲ್ಲಿಯೇ ಅಶ್ವತ್ಥಾಮನು ಧೃಷ್ಟದ್ಯುಮ್ನನ ಸಾರಥಿ, ಕುದುರೆಗಳು, ಪಾರ್ಶ್ವರಕ್ಷಕರು ಎಲ್ಲರನ್ನೂ ಸಂಹರಿಸಿ ಧ್ವಜ-ಧನುಸ್ಸು-ಛತ್ರಗಳನ್ನೂ ಕತ್ತರಿಸುತ್ತಾನೆ ಎಂದಿದೆ. ಧೃಷ್ಟದ್ಯುಮ್ನನು ಮುಂದೇನಾದನೆಂಬುದರ ಬಗೆಗೆ ಇಲ್ಲಿ ವಿಷಯವು ಬರುವುದಿಲ್ಲ. ಪಾಂಡವಸೈನಿಕರು ಪಲಾಯನಮಾಡಿದ ರೆಂದೂ, ಅಶ್ವತ್ಥಾಮನು ಸಿಂಹನಾದಮಾಡಿದನೆಂದೂ, ಕೌರವರು ಬಹಳ ವಾಗಿ ಪ್ರಶಂಸಿಸಿದರೆಂದೂ ತಿಳಿಸಿ ಅಧ್ಯಾಯವು ಮುಗಿಯುತ್ತದೆ.

೧೬೧ನೆಯ ಅಧ್ಯಾಯ : ಈ ಅಧ್ಯಾಯವು ಪ್ರಾರಂಭವಾಗುವುದು ಒಂದು ರೀತಿ ; ಮುಗಿಯುವುದು ಮತ್ತೊಂದು ರೀತಿ. ಮೊದಲನೆಯ ಶ್ಲೋಕದಲ್ಲಿ ಯುಧಿಷ್ಠಿರ-ಭೀಮರಿಬ್ಬರೂ ಅಶ್ವತ್ಥಾಮನನ್ನು ಆಕ್ರಮಿಸಿದರು ಎಂದಿದೆ. ಪುನಃ ಈ ಅಧ್ಯಾಯದ ಪೂರ್ತಿಯಾಗಿ ಅಶ್ವತ್ಥಾಮನ ಹೆಸರಾಗಲೀ– ಯುಧಿಷ್ಠಿರನ ಹೆಸರಾಗಲೀ ಬರುವುದಿಲ್ಲ. ಅಶ್ವತ್ಥಾಮನೊಡನೆ ಯುದ್ಧ ವನ್ನಾರಂಭಿಸಿದ ಭೀಮ-ಯುಧಿಷ್ಠಿರರಲ್ಲಿ ಭೀಮನು ಮಾತ್ರ ಕೌರವಸೈನ್ಯ ವನ್ನು ಧ್ವಂಸಮಾಡುತ್ತಿರುತ್ತಾನೆ. ಕಿರೀಟಿಯು ಯುದ್ಧಕ್ಕೆ ಯಾವಾಗ ಬಂದ ನೆಂಬುದು ಇಲ್ಲದಿದ್ದರೂ ಅವನೂ ಕೌರವಸೈನ್ಯವನ್ನು ಧ್ವಂಸಮಾಡುತ್ತಿರುತ್ತಾನೆ.

ಪಾಂಡವರ ಸೈನ್ಯವು ದ್ರೋಣರ ಕಡೆಗೆ ನುಗ್ಗಿಬರುತ್ತದೆ. ದ್ರೋಣರು ವಾಯವ್ಯಾಸ್ತ್ರವನ್ನು ಪ್ರಯೋಗಿಸಿ ಪಾಂಚಾಲಸೈನ್ಯವನ್ನು ಧ್ವಂಸಮಾಡುತ್ತಾರೆ. ಆಗ ಭೀಮಾರ್ಜುನರು ಸೈನ್ಯದೊಡನೆ ಯುದ್ಧಮಾಡಿ ಕುರುಯೋಧರು ಪಲಾಯಿತರಾಗುವಂತೆ ಮಾಡುತ್ತಾರೆ. ಈ ಅಧ್ಯಾಯದಲ್ಲಿ ಮೊದಲನೆಯ ಎರಡು ಶ್ಲೋಕಗಳೂ 'ತತಃ'–ಎಂದೇ ಪ್ರಾರಂಭವಾಗುತ್ತದೆ. ಮೊದಲನೆಯ ಶ್ಲೋಕವು ಹೆಚ್ಚಿರಬಹುದೆಂದು ನಮ್ಮ ಭಾವನೆಯಾಗಿದೆ. ಈ ಶ್ಲೋಕವನ್ನು ಬಿಟ್ಟರೆ ಶ್ಲೋಕಗಳು ಪುನರಾವರ್ತಿತವಾಗಿದ್ದರೂ ವಿರೋಧಾಭಾಸಗಳಿರುವುದಿಲ್ಲ. ಸ್ವಲ್ಪ ವ್ಯತ್ಯಾಸದೊಡನೆ ಇಲ್ಲಿಯ ಶ್ಲೋಕಗಳು ಹಿಂದಿನ ಅಧ್ಯಾಯಗಳಲ್ಲಿ ಬಂದಿವೆ. ೧೫೭-೨೮=೧೬೧-(೩) ೧೫೭-೨೯=೧೬೧-(೪) ೧೫೭-೩೦=೧೬೧-(೫) ೧೫೭-೩೧-೧೬೧-(೯) ೧೫೭-೩೩=೧೬೧-(೧೦) ೧೫೭-೪೪=೧೬೧-(೧೧) ೧೫೭-೪೫=೧೬೧-(೧೨) ೧೫೭-೪೬=೧೬೧-(೧೩) ೧೫೭-೪೭=೧೬೧-(೧೪) ೧೫೭-೪೮=೧೬೧-(೧೬) ೧೫೬-೪೯=೧೬೧-(೧೭) ೧೫೬-೧೭೦=೧೬೧-(೬) ೧೫೬-೧೭೧=೧೬೧-(೭) ೧೫೬-೧೭೨=೧೬೧-(೮) ಇವುಗಳು ಒಂದೆಡೆಯಿಂದ ತಂದು ಇಲ್ಲಿ ಜೋಡಿಸಿದಂತಿವೆ.

ಮಹಾಭಾರತದಲ್ಲಿ ಒಮ್ಮೆ ಬಂದ ಶ್ಲೋಕಗಳು ಮತ್ತೆ ಬರಕೂಡದೆಂಬುದೇನೂ ಇಲ್ಲ. ಆದರೆ ೧೯ ಶ್ಲೋಕವಿರುವ ಅಧ್ಯಾಯದಲ್ಲಿ ೧೪ ಶ್ಲೋಕಗಳು ಯಥಾವತ್ತಾಗಿ ಸ್ವಲ್ಪಮಾತ್ರ ವ್ಯತ್ಯಾಸದೊಡನೆ ಪುನರಾವರ್ತಿತವಾಗಿರುವುದನ್ನು ನಾವಿಲ್ಲಿ ಗಮನಿಸಬಹುದಾಗಿದೆ.

೧೬೨ನೆಯ ಅಧ್ಯಾಯ : ಅಧ್ಯಾಯದ ಪ್ರಾರಂಭದಲ್ಲಿ ಸಾತ್ಯಕಿಯು ಸೋಮದತ್ತನ ಬಳಿಗೆ ಯುದ್ಧಮಾಡುವ ಸಲುವಾಗಿಯೇ ಹೋಗುತ್ತಾನೆ ಮತ್ತು ಅವನನ್ನು ಸಂಹರಿಸದ ಹೊರತು ಹಿಂದಿರುಗುವುದಿಲ್ಲವೆಂದೂ ಪ್ರತಿಜ್ಞೆಮಾಡುತ್ತಾನೆ. ಇಬ್ಬರಿಗೂ ಯುದ್ಧವು ಪ್ರಾರಂಭವಾಗುತ್ತದೆ. ಇಲ್ಲಿಯ ಯುದ್ಧವರ್ಣನೆಯು ಬಹಳ ಸೊಗಸಾಗಿದೆ ಮತ್ತು ಬಹಳ ನೈಜವಾಗಿಯೂ ಕಾಣುತ್ತದೆ. ೫೨ ಶ್ಲೋಕಗಳಲ್ಲಿ ಇವರ ಯುದ್ಧವು ವರ್ಣಿಸಲ್ಪಟ್ಟಿದೆ. ೩೩ನೆಯ ಶ್ಲೋಕದಲ್ಲಿ ಸೋಮದತ್ತನ ಸಂಹಾರವಾಗುತ್ತದೆ. ಅನಂತರ ಸಾತ್ಯಕಿಯನ್ನು ಶತ್ರುಸೈನಿಕರು ಮುತ್ತುತ್ತಾರೆ. ಯುಧಿಷ್ಠಿರಾದಿಗಳು ಸಾತ್ಯಕಿಯ ಸಹಾಯಕ್ಕೆ ಹೋಗುತ್ತಾರೆ. ಆಗ ಯುಧಿಷ್ಠಿರನಿಗೂ–ದ್ರೋಣ

ರಿಗೂ ಯುದ್ಧವು ಪ್ರಾರಂಭವಾಗುತ್ತದೆ. ಇಬ್ಬರೂ ಸಮ-ಸಮನಾಗಿಯೇ ಯುದ್ಧಮಾಡುತ್ತಿರುತ್ತಾರೆ. ಯುಧಿಷ್ಠಿರನ ಕೈಮೇಲೆನಿಸಿರುವಾಗ ಶ್ರೀಕೃಷ್ಣನು ಯುಧಿಷ್ಠಿರನಿಗೆ 'ರಾಜನಲ್ಲದವನೊಡನೆ ರಾಜನಾದ ನೀನು ಯುದ್ಧಮಾಡ ಬಾರದೆಂದು' ಯುಕ್ತಿಯುಕ್ತವಾಗಿ ಹೇಳುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೧೬೩ನೆಯ ಅಧ್ಯಾಯ : ರಾತ್ರಿಯಲ್ಲಿ ಯುದ್ಧಮಾಡಲು ಕೌರವ-ಪಾಂಡವರು ಪಂಜುಗಳನ್ನು ಹಚ್ಚಿಕೊಂಡರು. ಆ ಪಂಜುಗಳನ್ನೂ ಮತ್ತು ಎಣ್ಣೆಯನ್ನೂ ಎಲ್ಲ ಪದಾತಿಸೈನಿಕರೂ ಹಿಡಿದಿದ್ದರು–ಎಂಬುದು ಈ ಅಧ್ಯಾಯದ ತಾತ್ಪರ್ಯ. ಎರಡೂ ಕಡೆಗಳಲ್ಲಿ ಹೊತ್ತಿಸಿದ್ದ ದೀಪಗಳ ವರ್ಣನೆಯಿಂದ ಅಧ್ಯಾಯವು ತುಂಬಿಹೋಗಿದೆ. ಮಧ್ಯದಲ್ಲಿ ಒಂದು ಅಸಂಗತವೂ ಕಾಣುತ್ತದೆ. ೧೩ನೆಯ ಶ್ಲೋಕದಲ್ಲಿ ಅಂತರಿಕ್ಷದಲ್ಲಿದ್ದ ದೇವರ್ಷಿ-ಗಂಧರ್ವರೆಲ್ಲರೂ ದೀಪಗಳನ್ನು ಹಿಡಿದುಕೊಂಡರು. ಹೃಷ್ಟಾ ದಿವಿಸ್ಥಾ ಜಗೃಹುಃ ಪ್ರದೀಪಾನ್ ಎಂದಿದೆ. ೩೩ನೆಯ ಶ್ಲೋಕದಲ್ಲಿ ಸ್ವರ್ಗಲೋಕಕ್ಕೂ ವ್ಯಾಪ್ತವಾದ ದೀಪಗಳ ಬೆಳಕಿನಿಂದ ಉದ್ಬೋಧಿತರಾದ ದೇವತೆಗಳೇ ಮೊದಲಾದವರು ರಣಾಂಗಣಕ್ಕೆ ಬಂದರು ; 'ಸಮಾಗಮನ್ನಪ್ಸರಸಶ್ಚ ಸರ್ವಾಃ' ಎಂದಿದೆ. ಅಲಂಕಾರಿಕವಾಗಿಯೇ ಆದರೂ ಈ ಶ್ಲೋಕವು ಸಮಂಜಸವಾಗಿ ಕಾಣುವುದಿಲ್ಲ. ೧೩ ಮತ್ತು ೩೩ ನೆಯ ಶ್ಲೋಕಗಳಲ್ಲಿ ವಿರೋಧಾಭಾಸಗಳಿವೆ. ೩೩ ನೆಯ ಶ್ಲೋಕದ ಪ್ರಕಾರ ೧೩ನೆಯ ಶ್ಲೋಕವು ಅಸಂಗತವಾಗಿ ಕಾಣುತ್ತದೆ. ೧೩ನೆಯ ಶ್ಲೋಕವು ಒಂದು ಪುಸ್ತಕದಲ್ಲಿರುವುದಿಲ್ಲ. ಇದೊಂದು ಸಮಾಧಾನ.

೧೬೪ನೆಯ ಅಧ್ಯಾಯ : ಸಂಜಯನು ರಾತ್ರಿಯ ಯುದ್ಧಪ್ರಕರಣವನ್ನೇ ಮುಂದುವರಿಸಿಕೊಂಡು ಹೋಗುತ್ತಾನೆ. ಅರ್ಜುನನು ಕೌರವಸೇನೆಯೊಳಕ್ಕೆ ಪ್ರವೇಶಿಸಿದನೆಂದು ಸಂಜಯನು ಹೇಳುತ್ತಾನೆ. ಈ ವಿಷಯದ ಮೇಲೆ ಧೃತರಾಷ್ಟ್ರನು ಹಲವಾರು ಪ್ರಶ್ನೆಗಳನ್ನು ಹಾಕುತ್ತಾನೆ. ದ್ರೋಣರ ರಕ್ಷಣೆಯ ವಿಷಯವಾಗಿಯೂ ಪ್ರಶ್ನಿಸುತ್ತಾನೆ. ದುರ್ಯೋಧನನು ದ್ರೋಣರಿಗೆ ರಕ್ಷಣೆಯನ್ನು ವ್ಯವಸ್ಥೆಗೊಳಿಸುತ್ತಾನೆ. ಆ ಕಾರಣದಿಂದಾಗಿ ದುರ್ಯೋಧನನ ಮನಸ್ಸಿನಲ್ಲಿದ್ದ ಆಸೆ-ಆಕಾಂಕ್ಷೆಗಳು ವ್ಯಕ್ತವಾಗಿವೆ. ಕೌರವರಿಗೂ-ಪಾಂಡವರಿಗೂ ಅದೃಷ್ಟಪೂರ್ವವಾದ ಯುದ್ಧವು ಪ್ರಾರಂಭವಾಗುತ್ತದೆ.

೧೬೫ನೆಯ ಅಧ್ಯಾಯ: ಕೌರವರ ಕಡೆಯ ಯೋಧರಿಗೂ– ಪಾಂಡವರ ಕಡೆಯ ಯೋಧರಿಗೂ ಯುದ್ಧವು ನಡೆಯುತ್ತದೆ. ಕೃತವರ್ಮಾ-ಯುಧಿಷ್ಠಿರ, ಸಾತ್ಯಕಿ-ಭೂರಿ, ಸಹದೇವ-ಕರ್ಣ, ಭೀಮಸೇನ-ದುರ್ಯೋಧನ, ನಕುಲ- ಶಕುನಿ, ಶಿಖಂಡೀ-ಕೃಪ, ಪ್ರತಿವಿಂಧ್ಯ-ದುಃಶಾಸನ, ಘಟೋತ್ಕಚ-ಅಶ್ವತ್ಥಾಮಾ, ದ್ರುಪದ-ವೃಷಸೇನ, ವಿರಾಟ-ಶಲ್ಯ, ಶತಾನೀಕ-ಚಿತ್ರಸೇನ, ಅರ್ಜುನ-ಅಲಂಬುಷ, ದ್ರೋಣ-ಧೃಷ್ಟದ್ಯುಮ್ನ–ಹೀಗೆ ತಮಗೆ ಅನುರೂಪರಾದವರೊಡನೆ ಯುದ್ಧಮಾಡುತ್ತಿರುತ್ತಾರೆ. ಅಧ್ಯಾಯದ ಕಡೆಯ ವರೆಗೂ ಕೃತವರ್ಮ-ಯುಧಿಷ್ಠಿರರ ಯುದ್ಧವರ್ಣನೆಯಿದೆ. ಯುಧಿಷ್ಠಿರನು ಪರಾಜಿತನಾಗುತ್ತಾನೆ. ಅಲ್ಲಿಗೆ ಅಧ್ಯಾಯವು ಮುಗಿಯುತ್ತದೆ. ೧೬೬ನೆಯ ಅಧ್ಯಾಯ : ೧೬೫ನೆಯ ಅಧ್ಯಾಯದಲ್ಲಿ ಕೊಟ್ಟಿರುವ ಪಟ್ಟಿಯ ಪ್ರಕಾರ ಶೈನೇಯ ಮತ್ತು ಭೂರಿಯ ಯುದ್ಧವನ್ನು ಈ ಅಧ್ಯಾಯದಲ್ಲಿ ಮೊದಲು ವಿವರಿಸುತ್ತಾರೆ. ಶೈನೇಯನಿಂದ ಭೂರಿಯ ವಧೆಯಾಗುತ್ತದೆ. ಭೂರಿಯ ವಧೆಯಾದುದನ್ನು ಕಂಡು ಅಶ್ವತ್ಥಾಮನು ಶೈನೇಯನೊಡನೆ ಯುದ್ಧಮಾಡಲು ಬರುತ್ತಾನೆ. ೧೬೫ ನೆಯ ಅಧ್ಯಾಯದಲ್ಲಿ ಅಶ್ವತ್ಥಾಮಾ ಮತ್ತು ಘಟೋತ್ಕಚರಿಗೆ ಯುದ್ಧವು ಪ್ರಾರಂಭವಾಯಿತು ಎಂದು ಹೇಳಿದೆ (೧೨). ಶೈನೇಯನ ಬಳಿಗೆ ಹೊರಟ ಅಶ್ವತ್ಥಾಮನನ್ನು ಘಟೋತ್ಕಚನು ತಡೆದು ಪುನಃ ಯುದ್ಧಮಾಡುತ್ತಾನೆ. ಕಡೆಗೆ ಅಶ್ವತ್ಥಾಮನ ಬಾಣಪ್ರಹಾರದಿಂದ ಮೂರ್ಛಿತನಾಗುತ್ತಾನೆ. ಅವನ ಸಾರಥಿಯು ರಥವನ್ನು ರಣಾಂಗಣದಿಂದ ಹೊರಕ್ಕೆ ಒಯ್ಯುತ್ತಾನೆ. ಭೀಮಸೇನನನ್ನು ದುರ್ಯೋಧನನು ತಡೆದನೆಂದು ೧೬೫ನೆಯ ಅಧ್ಯಾಯ ದಲ್ಲಿಯೇ ಹೇಳಿದೆ. ಇಲ್ಲಿ ಅವರ ಯುದ್ಧದ ವಿವರಣೆಯಿದೆ. ಅಧ್ಯಾಯದ ಕಡೆಯವರೆಗೂ ಯುದ್ಧದ ವರ್ಣನೆಯೇ ಸಾಗಿ ದುರ್ಯೋಧನನು ಹೇಗೋ ಪ್ರಾಣವುಳಿಸಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ನಾವು ಅನುಸರಿಸುತ್ತಿರುವ ಪಾಠದಲ್ಲಿ ಕಥೆಯು ಅಸ್ಪಷ್ಟವಾಗಿದೆ. ಭೀಮನು ಪ್ರಯೋಗಿಸಿದ ಗದೆಯಿಂದ ದುರ್ಯೋಧನನ ರಥವೇ ಸಂಪೂರ್ಣವಾಗಿ ಧ್ವಂಸವಾಗುತ್ತದೆ. **ತತಃ ಸ ಸಹಸಾ ವಾಹಾಂಸ್ತವ ಪುತ್ರಸ್ಯ ಸಂಯುಗೇ । ಸಾರಥಿಂ ಚ ಗದಾ ಗುರ್ವೀ ಮಮರ್ದಾಸ್ಯ ರಥಂ ಪುನಃ ॥೫೭॥** **ವಾಹಾನ್**–ಕುದುರೆಗಳನ್ನೂ **ಸಾರಥಿಂ**–ಸಾರಥಿಯನ್ನೂ **ರಥಂ**–ರಥವನ್ನೂ **ಗುರ್ವೀ ಗದಾ ಮಮರ್ದ**=ಭಾರವಾದ ಗದೆಯು ಧ್ವಂಸಮಾಡಿತು. ಆಗ

ದುರ್ಯೋಧನನೆಲ್ಲಿದ್ದನು? ಮುಂದಿನ ಶ್ಲೋಕವು ಹೀಗಿದೆ : **ಪುತ್ರಸ್ತು ತವ ರಾಜೇನ್ದ್ರ ಭೀಮಾದ್ಭೀತಃ ಪ್ರಣಶ್ಯ ಚ। ಆರುರೋಹ ರಥಂ ಚಾನ್ಯಂ** ಭೀಮನಿಂದ ಭೀತನಾದ ನಿನ್ನ ಮಗನು ಪ್ರಣಶ್ಯ= ಅದೃಶ್ಯನಾಗಿ ಮತ್ತೊಂದು ರಥವನ್ನೇರಿದನು. ಯಾವಾಗ ಅದೃಶ್ಯನಾದನು? ಹೇಗೆ ಅದೃಶ್ಯನಾದನು? ಎಂಬುದಿಲ್ಲಿ ಸ್ಪಷ್ಟವಾಗಿಲ್ಲ. ಅಸ್ಪಷ್ಟವಾದ ಬೆಳಕಿನಲ್ಲಿ ಅವನು ಓಡಿಹೋದುದು ಕಾಣಲಿಲ್ಲವೆಂದು ಭಾವಿಸಬೇಕಾಗುತ್ತದೆ. ಒಂದು ಪುಸ್ತಕದಲ್ಲಿ ಪಾಠವು ಹೀಗಿದೆ: **ಪುತ್ರಸ್ತು ತವ ರಾಜೇನ್ದ್ರ ರಥಾದ್ಧೇಮಪರಿಷ್ಕೃತಾತ್। ಆಪ್ಲುತಃ ಸಹಸಾ ಯಾನಂ ನನ್ದಕಸ್ಯ ಮಹಾತ್ಮನಃ॥** ತನ್ನ ಸುವರ್ಣಮಯವಾದ ರಥದಿಂದ ಬಹಳ ಬೇಗ ನಂದಕನ ರಥಕ್ಕೆ ಹಾರಿಕೊಂಡುಬಿಟ್ಟನು. ಮುಂದೆ ಎಲ್ಲರೂ ದುರ್ಯೋಧನನು ಸತ್ತುಹೋದನೆಂದೇ ಭಾವಿಸುತ್ತಾರೆ. ದ್ರೋಣರೊಡನೆ ಪಾಂಚಾಲ-ಕೇಕಯ-ಮತ್ಸ್ಯ-ಸೃಂಜಯರು ಪುನಃ ಯುದ್ಧಕ್ಕೆ ಹೋಗುತ್ತಾರೆ. ಯದ್ಯಪಿ ಪಂಜುಗಳನ್ನು ಹಚ್ಚಿಕೊಂಡಿದ್ದರೂ ಕೆಲವು ಕಡೆಗಳಲ್ಲಿ ಕತ್ತಲಿದ್ದಿತೆಂಬ ಭಾವನೆಯು ಬರುವ ಪದಪ್ರಯೋಗಗಳೂ ಇವೆ. ಇದೇ ಅಧ್ಯಾಯದ ಕಡೆಯ ಶ್ಲೋಕದಲ್ಲಿ **ಘೋರೇ ತಮಸಿ ಮಗ್ನಾನಾಂ** ಗಾಢಾಂಧಕಾರದಲ್ಲಿ ಮುಳುಗಿದ್ದರು ಎಂದು ಸ್ಪಷ್ಟವಾಗಿಯೇ ಇದೆ. ೧೬೭ ನೆಯ ಅಧ್ಯಾಯದಲ್ಲಿ : ೧೬೪ನೆಯ ಅಧ್ಯಾಯದ ೭ನೆಯ ಶ್ಲೋಕದಲ್ಲಿ ಹೇಳಿರುವ ಸಹದೇವ-ಕರ್ಣರ ಯುದ್ಧವರ್ಣನೆಯು ಈ ಅಧ್ಯಾಯದ ಪ್ರಾರಂಭದಲ್ಲಿದೆ. ಸಹದೇವನೂ ಕರ್ಣನೊಡನೆ ಕೆಚ್ಚಿನಿಂದಲೇ ಹೋರಾಡು ತ್ತಾನೆ. ಆದರೆ ರಥಾಶ್ವ-ಸಾರಥಿ-ಧ್ವಜಗಳೆಲ್ಲವನ್ನೂ ಕಳೆದುಕೊಳ್ಳುತ್ತಾನೆ. ಸಹದೇವನು ಪ್ರಯೋಗಿಸಿದ ಖಡ್ಗ ಮತ್ತು ಗದೆಗಳನ್ನೂ ಕರ್ಣನು ಕತ್ತರಿಸುತ್ತಾನೆ. ಸಹದೇವನು ರಥಚಕ್ರವನ್ನೇ ಕಿತ್ತೊಗೆಯುತ್ತಾನೆ. ಕಡೆಗೆ ಯಾವು ಯಾವುದು ಸಿಕ್ಕುತ್ತವೆಯೋ ಅವುಗಳೆಲ್ಲವನ್ನೂ ಕರ್ಣನ ಕಡೆಗೆ ರಭಸದಿಂದ ಎಸೆಯು ತ್ತಾನೆ. ೧೩೯ನೆಯ ಅಧ್ಯಾಯದಲ್ಲಿ ಬರುವ ಕರ್ಣ-ಭೀಮರ ಯುದ್ಧ ವರ್ಣನೆಯ ಮಾದರಿಯಲ್ಲಿಯೇ ಈ ಅಧ್ಯಾಯದಲ್ಲಿ ಸಹದೇವ-ಕರ್ಣರ ಯುದ್ಧವರ್ಣನೆಯಿದೆ. ಕರ್ಣನ ಕೈ ಮೇಲಾದಾಗ ಸಹದೇವನು ರಣಾಂಗಣ ವನ್ನು ಬಿಟ್ಟು ಹೊರಟುಹೋಗುತ್ತಾನೆ. ಸಹದೇವೋ ರಣಂ ಜಹೌ ಇಲ್ಲಿಂದ ಮುಂದಕ್ಕೆ ಕಥೆಯು ಸುರಸವಾಗಿಲ್ಲ. ಆದರೆ ಇದು ಎಲ್ಲ ಪುಸ್ತಕಗಳಲ್ಲಿಯೂ ಇದೆ.

ಯುದ್ಧನಿಯಮದಂತೆ ನಿರಾಯುಧನನ್ನು ಯಾರೂ ಅಟ್ಟಿಸಿಕೊಂಡು ಹೋಗುವುದಿಲ್ಲ. ಈ ವಿಷಯವು ಹಿಂದೆ ಹಲವು ಬಾರಿ ಬಂದಿದೆ. ಆದರೆ ಇಲ್ಲಿ ರಾಧೇಯನು ಮುಹೂರ್ತಕಾಲಪರ್ಯಂತವಾಗಿ (ಎರಡು ಘಳಿಗೆ ಗಳಾಗಬಹುದು ಅಥವಾ ಸ್ವಲ್ಪಹೊತ್ತು ಎಂದಾದರೂ ಆಗಬಹುದು). ಸಹ ದೇವನನ್ನು ಅಟ್ಟಿಸಿಕೊಂಡೇ ಹೋಗುತ್ತಾನೆ. ರಥದ ಮೇಲೆ ಕುಳಿತಿರುವವನು ಪದಾತಿಯನ್ನು ಮುಹೂರ್ತಕಾಲ ಅಟ್ಟಿಸಿಕೊಂಡು ಹೋಗಬೇಕೆ? ಇಲ್ಲಿ, ಕರ್ಣನು ಭೀಮನನ್ನು ನಿಂದಿಸಿದಷ್ಟು ತುಚ್ಛವಾಗಿ ಸಹದೇವನನ್ನು ನಿಂದಿಸ ದಿದ್ದರೂ, 'ನಮ್ಮಂತಹವರೊಡನೆ ಯುದ್ಧಮಾಡಬೇಡ. ಅರ್ಜುನನು ಯುದ್ಧಮಾಡುತ್ತಿರುವಲ್ಲಿಗೆ ಹೋಗು ಅಥವಾ ಮನೆಗಾದರೂ ಹೋಗು' ಎಂದು ಹೇಳುವುದೂ ಮತ್ತು ಸಹದೇವನನ್ನು ಕರ್ಣನು ಧನುಸ್ಸಿನಿಂದ ತಿವಿಯುವುದೂ–ಈ ಎಲ್ಲ ಪ್ರಕರಣಗಳೂ ಭೀಮಸೇನನ ಪ್ರಕರಣದಿಂದ ಪುನರಾವರ್ತಿತವಾಗಿದೆ. ಕರ್ಣನು ಸಹದೇವನನ್ನು ರಥದಿಂದಿಳಿದು ಧನುಸ್ಸಿನಿಂದ ತಿವಿದನೇ? ಎಂಬ ವಿಷಯವಿಲ್ಲ–ಇದಕ್ಕೆ ಸಹದೇವನ ಪ್ರತಿಕ್ರಿಯೆಯೂ ಇಲ್ಲಿ ಉಕ್ತವಾಗಿಲ್ಲ. ಅವನಿಗೆ ಜೀವನದ ಮೇಲೆಯೇ ವೈರಾಗ್ಯ ಬಂದಿತು–ಎಂದಿದೆ. ಕುಂತಿಗೆ ಮಾತುಕೊಟ್ಟಿದ್ದ ಕರ್ಣನು ಸಹದೇವನನ್ನು ಸಂಹರಿಸಲಿಲ್ಲ ಎಂದು ಪುನಃ ಇಲ್ಲಿ ಉಕ್ತವಾಗಿದೆ. ೨೨ನೆಯ ಶ್ಲೋಕದಲ್ಲಿ **'ಆರುರೋಹ ರಥಂ ಚಾಪಿ'** 'ಸಹದೇವನು ಜನಮೇಜಯನ ರಥವನ್ನೇರಿದನು' ಎಂದಿದೆ. ಕರ್ಣನ ಧನುಸ್ಸಿನಿಂದ ತಿವಿಸಿಕೊಳ್ಳುವುದ ಕ್ಕೋಸ್ಕರವೇ ಅಲ್ಲಿಯವರೆಗೂ ಸಹದೇವನು ಜನಮೇಜಯನ ರಥವನ್ನು ಹತ್ತಲಿಲ್ಲವೇ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಆದುದರಿಂದ **ಸಹದೇವೋ ರಣಂ ಜಹೌ**–ಸಹದೇವನು ಕರ್ಣನೊಡನೆ ಯುದ್ಧವನ್ನು ನಿಲ್ಲಿಸಿ ಅಲ್ಲಿಂದ ಹೊರಟುಹೋದನು. ಅನಂತರ **ಆರುರೋಹ ರಥಂ ಚಾಪಿ** ಜನಮೇಜಯನ ರಥವನ್ನು ಹತ್ತಿದನು–ಎಂಬುದು ಸ್ವಾಭಾವಿಕವಾಗಿ ಕಾಣುತ್ತದೆ. ಈ ಹಿಂದೆ ೧೬೫ನೆಯ ಅಧ್ಯಾಯದಲ್ಲಿ ಕೃತವರ್ಮನು ಯುಧಿಷ್ಠಿರನಿಗೂ ಇದೇ ಸ್ಥಿತಿಯನ್ನು ಉಂಟುಮಾಡಿ ಪಲಾಯನಮಾಡು ವಂತೆ ಮಾಡುತ್ತಾನೆ. ಆದರೆ ಪಲಾಯಿತನಾದ ಯುಧಿಷ್ಠಿರನನ್ನು ಅಟ್ಟಿಸಿ ಕೊಂಡು ಹೋದ ಪ್ರಕರಣವಿಲ್ಲ. ಯುದ್ಧಧರ್ಮವೇ ಇದು. ಯುದ್ಧಧರ್ಮ ವನ್ನರಿತ ಕರ್ಣನೂ ಹಾಗೆ ಮಾಡಿರಲಾರನೆಂಬುದು ನಮ್ಮ ಅಭಿಪ್ರಾಯ

ವಾಗಿದೆ. ಆದುದರಿಂದ ೧೫ ರಿಂದ ೨೧ ರ ವರೆಗಿರುವ ಶ್ಲೋಕಗಳು ಹೆಚ್ಚು ಶ್ಲೋಕಗಳಿರಬಹುದು.

ಅನಂತರ ವಿರಾಟ-ಶಲ್ಯರ ಯುದ್ಧವು ವರ್ಣಿತವಾಗಿದೆ : ವಿರಾಟನು ಶತಾನೀಕನ ರಥದಲ್ಲಿ ಕುಳಿತು ಯುದ್ಧಮಾಡಿ ಶಲ್ಯನ ಬಾಣಗಳಿಂದ ಮೂರ್ಛಿತನಾಗುತ್ತಾನೆ. ಶಲ್ಯನನ್ನೆದುರಿಸಲು ಅರ್ಜುನನು ಬರುತ್ತಾನೆ. ಮಧ್ಯದಲ್ಲಿ ಅಲಂಬುಷನು–ಶಲ್ಯನ ಸಮೀಪಕ್ಕೆ ಹೋಗದಂತೆ–ಅರ್ಜುನನನ್ನು ತಡೆದು ಅವನೊಡನೆ ಯುದ್ಧಮಾಡುತ್ತಾನೆ. ಘೋರಯುದ್ಧವಾದ ನಂತರ ಅಲಂಬುಷನು ಭಯದಿಂದ ಪಲಾಯನಮಾಡುತ್ತಾನೆ. ತಡೆಯಲು ಬಂದ ಅಲಂಬುಷನು ಪರಾಜಿತನಾದನಂತರ ಅರ್ಜುನನು ಸ್ವಾಭಾವಿಕವಾಗಿ ಶಲ್ಯನನ್ನು ಎದುರಿಸಬೇಕಾಗಿದ್ದಿತು. ಆದರೆ ಅರ್ಜುನನು ದ್ರೋಣರ ಬಳಿಗೆ ಹೋದನೆಂದು ವಾಕ್ಯವಿದೆ. **ದ್ರೋಣಾನ್ತಿಕಮುಪಾಯಯೌ** (೪೮) ಅರ್ಜುನನು ಅಲಂಬುಷನೊಡನೆ ಯುದ್ಧಮಾಡುತ್ತಿದ್ದಾಗ ಶಲ್ಯನು ದ್ರೋಣರ ರಕ್ಷಣೆಗೆ ಹೋಗಿರಬಹುದೆಂದು ಊಹೆಮಾಡಿಕೊಳ್ಳಬೇಕಾಗುತ್ತದೆ.

೧೬೮ನೆಯ ಅಧ್ಯಾಯ : ೧೬೫ನೆಯ ಅಧ್ಯಾಯದ ೧೫ನೆಯ ಶ್ಲೋಕದಲ್ಲಿ ಹೇಳಿರುವಂತೆ ಈ ಅಧ್ಯಾಯದಲ್ಲಿ ನಕುಲನ ಮಗನಾದ ಶತಾನೀಕನಿಗೂ–ಧೃತರಾಷ್ಟ್ರನ ಮಗನಾದ ಚಿತ್ರಸೇನನಿಗೂ ನಡೆಯುವ ಯುದ್ಧದ ವರ್ಣನೆಯಿದೆ. ಈ ಅಧ್ಯಾಯವನ್ನು ವೃಷಸೇನಪರಾಕ್ರಮಾಧ್ಯಾಯವೆಂದೇ ಪರಿಗಣಿಸಬಹುದಾಗಿದೆ. ವೃಷಸೇನನಿಂದ ದ್ರುಪದನು ಪರಾಜಿತನಾಗುತ್ತಾನೆ. ಮುಂದೆ ಪ್ರತಿವಿಂಧ್ಯನಿಗೂ-ದುಃಶಾಸನನಿಗೂ ಯುದ್ಧವಾಗುತ್ತದೆ. ಪ್ರತಿವಿಂಧ್ಯನು ಧನುಸ್ಸನ್ನೂ–ರಥವನ್ನೂ ಕಳೆದುಕೊಂಡಾಗ ಸಹಾಯಕ್ಕಾಗಿ ಅವನ ಅನುಜರಾದ ಸುತಸೋಮಾದಿಗಳು ಬರುತ್ತಾರೆ. ದುಃಶಾಸನನಿಗೆ ಸಹಾಯಕರಾಗಿ ಕೌರವರು ಬರುತ್ತಾರೆ. ಎರಡು ಪಕ್ಷಗಳಿಗೂ ಘೋರಯುದ್ಧವು ಪುನಃ ಪ್ರಾರಂಭವಾಗುತ್ತದೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ. ೧೬೯ನೆಯ ಅಧ್ಯಾಯ : ೧೬೫ನೆಯ ಅಧ್ಯಾಯದ ೯ನೇ ಶ್ಲೋಕದಲ್ಲಿ ಯುದ್ಧಾನುಕ್ರಮಣಿಕಾರೂಪದಲ್ಲಿ ಹೇಳಿರುವ ನಕುಲ-ಶಕುನಿಗಳ ಯುದ್ಧವನ್ನೇ ಇಲ್ಲಿ ವಿಸ್ತರಿಸಿ ಹೇಳಲಾಗಿದೆ. ನಕುಲನು ಶಕುನಿಯನ್ನು ಮೂರ್ಛೆಗೊಳಿಸಿ ದ್ರೋಣರೊಡನೆ

ಯುದ್ಧಮಾಡಲು ಹೊರಟುಹೋಗುತ್ತಾನೆ. ದ್ರೋಣರ ಸಮೀಪಕ್ಕೆ ಹೋಗದಂತೆ ಪಾಂಡವಯೋಧರನ್ನು ತಡೆಯುವುದೇ ಕೌರವಯೋಧರ ಉದ್ದೇಶವಾಗಿರುತ್ತದೆ. ನಕುಲ-ಶಕುನಿಗಳ ಯುದ್ಧದ ವರ್ಣನೆಯನಂತರ ೧೬೫ನೆಯ ಅಧ್ಯಾಯದ ೧೧೦ನೆಯ ಶ್ಲೋಕದಲ್ಲಿ ಹೇಳಿರುವ ಶಿಖಂಡೀ-ಕೃಪರ ಯುದ್ಧದ ವರ್ಣನೆಯಿದೆ. ಶಿಖಂಡಿಯು ಪರಾಜಿತನಾಗಿ ಹಿಂದಿರುಗುವ ಸಂದರ್ಭದಲ್ಲಿ ಅವನಿಗೆ ಬೆಂಬಲಿಗರಾಗಿ ಪಾಂಚಾಲ-ಸೋಮಕಸೈನಿಕರು ಬರುತ್ತಾರೆ. ಇತ್ತ ಕಡೆ ಕೃಪರನ್ನು ಬೆಂಬಲಿಸಿ ಕೌರವಸೈನಿಕರು ಯುದ್ಧದಲ್ಲಿ ತೊಡಗುತ್ತಾರೆ. ಶಿಖಂಡೀ-ಕೃಪರಿಬ್ಬರಿಗೇ ನಡೆಯುತ್ತಿದ್ದ ದ್ವೈರಥಯುದ್ಧವು ಸಾಮೂಹಿಕ ಯುದ್ಧವಾಗಿ ಪರಿವರ್ತನೆಗೊಳ್ಳುತ್ತದೆ. ಮುಂದೆ ಹದಿನೈದು ಶ್ಲೋಕಗಳಲ್ಲಿ ತುಮುಲಯುದ್ಧದ ವರ್ಣನೆಯಿದೆ.

೧೭೦ನೆಯ ಅಧ್ಯಾಯ : ೧೬೫ನೆಯ ಅಧ್ಯಾಯದ ೧೭ನೆಯ ಶ್ಲೋಕದಲ್ಲಿ ಹೇಳಿರುವ ಧೃಷ್ಟದ್ಯುಮ್ನ-ದ್ರೋಣರ ಯುದ್ಧವು ಈ ಅಧ್ಯಾಯದಲ್ಲಿ ವರ್ಣಿತವಾಗಿದೆ. ಧೃಷ್ಟದ್ಯುಮ್ನನು ಮಹಾಶರವೊಂದನ್ನು ಧನುಸ್ಸಿನಲ್ಲಿ ಯೋಜಿಸಿ ದ್ರೋಣರ ಮೇಲೆ ಪ್ರಹರಿಸಲಿದ್ದಾಗ ಕರ್ಣನು ಆ ಬಾಣವನ್ನು ಕತ್ತರಿಸುತ್ತಾನೆ. ಅನಂತರ ಕೌರವರ ಕಡೆಯ ಏಳು ಮಂದಿ ಯೋಧರು ಧೃಷ್ಟದ್ಯುಮ್ನನೊಡನೆ ಯುದ್ಧಮಾಡುತ್ತಾರೆ. ಆ ಮಧ್ಯದಲ್ಲಿ ಕೌರವಪಕ್ಷದ ದ್ರುಮಸೇನನನ್ನು ಧೃಷ್ಟದ್ಯುಮ್ನನು ಸಂಹರಿಸುತ್ತಾನೆ. ಧೃಷ್ಟದ್ಯುಮ್ನನಿಗೂ–ಕೌರವಯೋಧರಿಗೂ ಯುದ್ಧವು ಮುಂದುವರಿಯುತ್ತದೆ. ಆ ಸಮಯಕ್ಕೆ ಸಾತ್ಯಕಿಯೂ ಬರುತ್ತಾನೆ. ಸಾತ್ಯಕಿಗೂ–ಕರ್ಣನಿಗೂ ಯುದ್ಧವು ಪ್ರಾರಂಭವಾಗುತ್ತದೆ. ಭಯಂಕರವಾದ ಯುದ್ಧವು ನಡೆಯುತ್ತಿದ್ದಾಗ ಅರ್ಜುನನ ಗಾಂಡೀವಧನುಸ್ಸಿನ ಧ್ವನಿಯು ಕೇಳಿಬರುತ್ತದೆ. ಆ ಸಮಯದಲ್ಲಿ ಕರ್ಣನು ಅರ್ಜುನನು ಅಲ್ಲಿಗೆ ಬಾರದಂತೆ ಮಾಡಲು ಮತ್ತು ಅವನಿರುವೆಡೆಗೆ ಅಪಾರ ಸೈನ್ಯವನ್ನು ಕಳುಹಿಸಲು ದುರ್ಯೋಧನನಿಗೆ ಸಲಹೆನೀಡುತ್ತಾನೆ. ಅದರಂತೆಯೇ ದುರ್ಯೋಧನನು ಶಕುನಿಯನ್ನು ಅಪಾರಸೈನ್ಯದೊಡನೆ ಅರ್ಜುನನಿರುವೆಡೆಗೆ ಕಳುಹಿಸುತ್ತಾನೆ. ಪುನಃ ಸಾತ್ಯಕಿಗೂ-ಕರ್ಣನಿಗೂ ಮತ್ತು ದ್ರೋಣರಿಗೂ-ಧೃಷ್ಟದ್ಯುಮ್ನನಿಗೂ ಭಯಂಕರವಾದ ಯುದ್ಧವು ಪ್ರಾರಂಭವಾಗುತ್ತದೆ. ಇಲ್ಲಿಗೆ ಈ ಅಧ್ಯಾಯವು ಮುಗಿಯುತ್ತದೆ.

೧೭೧ನೆಯ ಅಧ್ಯಾಯ : ಕರ್ಣನ ಯೋಜನೆಯನ್ನು ಈ ಅಧ್ಯಾಯ ದಲ್ಲಿ ಕಾರ್ಯರೂಪಕ್ಕೆ ತರುತ್ತಾರೆ. ಕೌರವಯೋಧರೆಲ್ಲರೂ ಸೇರಿ ಸಾತ್ಯಕಿ ಯನ್ನು ಮಧ್ಯದಲ್ಲಿ ಸೇರಿಸಿಕೊಂಡು ಮರ್ದನಮಾಡಲು ಉಪಕ್ರಮಿಸುತ್ತಾರೆ. ಆದರೆ ಸಾತ್ಯಕಿಯದೇ ಮೇಲುಗೈ ಆಗುತ್ತದೆ. ಆ ಸಮಯದಲ್ಲಿ ದುರ್ಯೋ ಧನನೂ ಸಾತ್ಯಕಿಯೊಡನೆ ಯುದ್ಧಕ್ಕೆ ಹೋಗಿ ಪರಾಜಿತನಾಗುತ್ತಾನೆ. ದುರ್ಯೋಧನನ ಸಲಹೆಯಂತೆ ಅಪಾರಸೈನ್ಯದೊಡನೆ ಅರ್ಜುನನಿರುವೆಡೆಗೆ ಹೋದ ಶಕುನಿಗೂ–ಅರ್ಜುನನಿಗೂ ಭಯಂಕರವಾದ ಯುದ್ಧವು ನಡೆಯು ತ್ತದೆ. ಶಕುನಿಯ ಮಗನಾದ ಉಲೂಕನೂ ಅರ್ಜುನನೊಡನೆ ಯುದ್ಧ ಮಾಡುತ್ತಾನೆ. ರಥವನ್ನು ಕಳೆದುಕೊಂಡ ಶಕುನಿಯು ಉಲೂಕನ ರಥವನ್ನು ಹತ್ತುತ್ತಾನೆ. ತಂದೆ-ಮಕ್ಕಳಿಬ್ಬರೂ ಅರ್ಜುನನೊಡನೆ ಯುದ್ಧಮಾಡುತ್ತಾರೆ. ಅರ್ಜುನನು ಅನೇಕ ಕೌರವಸೈನಿಕರನ್ನು ಸಂಹರಿಸುತ್ತಾನೆ. ಕೌರವಸೈನಿಕರು ರಕ್ಷಣೆಯು ಸಿಕ್ಕದೇ ಪಲಾಯನಮಾಡುತ್ತಾರೆ. ಮುಂದೆ ಮತ್ತೊಂದು ರಂಗ ದಲ್ಲಿ ಧೃಷ್ಟದ್ಯುಮ್ನನಿಗೂ-ದ್ರೋಣರಿಗೂ ನಡೆಯುತ್ತಿದ್ದ ಯುದ್ಧದ ವರ್ಣ ನೆಯು ಬರುತ್ತದೆ. ಆ ರಂಗದಲ್ಲಿಯೂ ಸಹ ಧೃಷ್ಟದ್ಯುಮ್ನನದೇ ಮೇಲುಗೈ ಆಗುತ್ತದೆ. ವಿಜಯಿಗಳಾದ ಪಾಂಡವರು ಶಂಖಗಳನ್ನು ಊದುತ್ತಾರೆ.

೧೭೨ನೆಯ ಅಧ್ಯಾಯ : ಇದುವರೆಗೂ ದುರ್ಯೋಧನನು ದ್ರೋಣ ರೊಬ್ಬರನ್ನೇ ನಿಂದಿಸುತ್ತಿದ್ದನು. ಕರ್ಣನೊಬ್ಬನೇ ತನ್ನ ವಿಜಯಕ್ಕಾಗಿ ಯುದ್ಧಮಾಡುವವನೆಂದೂ ಹೇಳುತ್ತಿದ್ದನು. ವಿಷಮಪರಿಸ್ಥಿತಿಯಿಂದಾಗಿ ದುರ್ಯೋಧನನಿಗೆ ಕರ್ಣನ ಮೇಲಿನ ವಿಶ್ವಾಸವೂ ಕಡಿಮೆಯಾದಂತೆ ತೋರುತ್ತದೆ. ಈ ಅಧ್ಯಾಯದಲ್ಲಿ ದ್ರೋಣ-ಕರ್ಣರಿಬ್ಬರನ್ನೂ ಸೂಚ್ಯವಾಗಿ ನಿಂದಿಸುತ್ತಾನೆ. ಮರುಮಾತನಾಡದೆಯೇ ಅವರಿಬ್ಬರೂ ಒಟ್ಟಾಗಿ ಪುನಃ ಪಾಂಡವರೊಡನೆ ಯುದ್ಧವನ್ನು ಪ್ರಾರಂಭಿಸುತ್ತಾರೆ. ಪಾಂಚಾಲಯೋಧರನ್ನು ಅವ್ಯಾಹತವಾಗಿ ಸಂಹಾರಮಾಡುತ್ತಾರೆ. ಆ ಸಮಯದಲ್ಲಿ ಶ್ರೀಕೃಷ್ಣನು ಅರ್ಜುನನೊಡನೆ ಕೆಲವು ಮಾತುಗಳನ್ನು ಹೇಳುತ್ತಾನೆ. ಈ ಪ್ರಕರಣದಲ್ಲಿ ೨೫ ನೆಯ ಶ್ಲೋಕಕ್ಕೂ ೨೬ನೆಯ ಶ್ಲೋಕಕ್ಕೂ ಸಂಬಂಧವಿಲ್ಲ. ೨೨ನೆಯ ಶ್ಲೋಕವಾದ 'ದ್ರವಮಾಣಂ ತು ತತ್ಸೈನ್ಯಂ' ಶ್ಲೋಕವಾದನಂತರ 'ತಾಂ ತು ವಿದ್ರವತೀಂ ದೃಷ್ಟ್ವಾ' ಎಂಬ ೨೬ನೆಯ ಶ್ಲೋಕವಿದ್ದರೆ ಸಮನ್ವಯವಾಗು

ತ್ತಿದ್ದಿತು. ಆದರೆ ೨೫ನೆಯ ಶ್ಲೋಕಕ್ಕೂ ೨೬ನೆಯ ಶ್ಲೋಕಕ್ಕೂ ಸಂಬಂಧ ಕಲ್ಪಿಸಲು ಕಂಸದಲ್ಲಿ ಒಂದೆರಡು ವಾಕ್ಯಗಳನ್ನು ಹಾಕಿದ್ದೇವೆ. ಒಂದು ಪುಸ್ತಕದಲ್ಲಿ **ತಾಂ ತು ವಿದ್ರವತೀಂ** ಎಂಬ ೨೬ನೆಯ ಶ್ಲೋಕವಿರುವುದಿಲ್ಲ. ಈ ಶ್ಲೋಕವಿಲ್ಲದಿದ್ದರೂ ಅರ್ಥಸಮನ್ವಯವಾಗುತ್ತದೆ. 'ಸೈನಿಕರಿಗೆ ಆಶ್ವಾಸನೆ ಯನ್ನು ಕೊಡುವ ಸಲುವಾಗಿ ಭೀಮನೊಡನೆ ಸೇರಿ ಯುದ್ಧಮಾಡು'– ಎಂದು ಹೇಳಿ ಶ್ರೀಕೃಷ್ಣನು ತನ್ನ ಮಾತನ್ನು ಮುಗಿಸುತ್ತಾನೆ (೩೨). ಮುಂದಿನ ೩೩ನೆಯ ಶ್ಲೋಕವು ಸ್ವಾಭಾವಿಕವಾಗಿಯೇ ಸಂಜಯನು ಧೃತರಾಷ್ಟ್ರನಿಗೆ ಹೇಳುವುದಾಗಿರುತ್ತದೆ. 'ಅನಂತರ ಕೃಷ್ಣಾರ್ಜುನರು ದ್ರೋಣ-ಕರ್ಣರ ಮುಂದೆ ಹೋಗಿ ನಿಲ್ಲುತ್ತಾರೆ' (೩೩). ಈ ಶ್ಲೋಕವಾದನಂತರ 'ಸಂಜಯ ಉವಾಚ' ಎಂಬ ವಾಕ್ಯವು ಕೆಲವು ಪುಸ್ತಕಗಳಲ್ಲಿದೆ. ಈ ವಾಕ್ಯವು ಮುದ್ರಾರಾಕ್ಷಸನ ಪ್ರಭಾವದಿಂದಲೋ, ಬರವಣಿಗೆಗಾರರ ದೋಷದಿಂದಲೋ ನುಸುಳಿರುವುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಆದರೂ ಸಹ ಇದು ಅಧಿಕೃತ ಪಾಠವಾಗಿದ್ದರೆ ಇದರ ಹಿಂದಿನ ಶ್ಲೋಕವು ನುಸುಳಿಬಂದಿ ರುವುದೆಂದು ಹೇಳಬೇಕಾಗುತ್ತದೆ. ಹಾಗಿಲ್ಲದಿದ್ದರೆ 'ಸಂಜಯ ಉವಾಚ' ಎಂಬ ವಾಕ್ಯವು ಅಸಮಂಜಸವಾಗಿ ಕಾಣುತ್ತದೆ. ಅಥವಾ ಈ 'ಸಂಜಯ ಉವಾಚ' ಎಂಬುದು ೩೩ನೆಯ ಶ್ಲೋಕಕ್ಕೆ ಮೊದಲಾದರೂ ಇರಬೇಕಾಗಿದ್ದಿತು. ಇದನ್ನು ಅಧಿಕೃತಪಾಠವಾಗಿ ಅಂಗೀಕರಿಸಿರುವ ಭಾಷಾಂತರಕಾರರೊಬ್ಬರು 'ಸಂಜಯನು ಮುಂದುವರಿದು ಹೇಳಿದನು' ಎಂದು ಅರ್ಥ ಮಾಡಿರುತ್ತಾರೆ :

ಪಾಂಡವರಿಗೂ-ಕೌರವರಿಗೂ ಘೋರವಾದ ಯುದ್ಧವು ನಡೆಯು ತ್ತಿರುವಂತೆ ಅಧ್ಯಾಯವು ಮುಗಿಯುತ್ತದೆ.

೧೭೩ನೆಯ ಅಧ್ಯಾಯ : ಕರ್ಣನಿಗೂ-ಧೃಷ್ಟದ್ಯುಮ್ನನಿಗೂ ಯುದ್ಧವು ಪ್ರಾರಂಭವಾಗುತ್ತದೆ. ೪ನೆಯ ಶ್ಲೋಕದಲ್ಲಿ **ಕರ್ಣಃ ಸಾರಥಿಂ ಅಶ್ವಾನ್ ಸಾಯಕೈಃ ವಿವ್ಯಾಧ**–ಕರ್ಣನು ಸಾರಥಿಯನ್ನೂ ಕುದುರೆಗಳನ್ನೂ ಬಾಣ ಗಳಿಂದ ಸಂಹರಿಸಿದನು ಎಂದಿದೆ. ಪುನಃ ಐದನೆಯ ಶ್ಲೋಕದಲ್ಲಿಯೂ **'ಸಾರಥಿಂ ಭಲ್ಲೇನ ರಥನೀಡಾದಪಾತಯತ್'** ಭಲ್ಲದಿಂದ ಸಾರಥಿಯನ್ನು ರಥದಿಂದ ಕೆಳಕ್ಕೆ ಬೀಳಿಸಿದನು ಎಂದಿದೆ. ೪ನೆಯ ಶ್ಲೋಕದಲ್ಲಿ ಸಂಹರಿಸಿದ

ನೆಂದೂ, ಐದನೆಯ ಶ್ಲೋಕದಲ್ಲಿ ಸತ್ತುಹೋಗಿದ್ದವನನ್ನೇ ಕೆಳಕ್ಕೆ ಕೆಡವಿದ ನೆಂದೂ ಅರ್ಥಸಮನ್ವಯಮಾಡಲಾಗಿದೆ. 'ವಿವ್ಯಾಧ' ಎಂಬುದಕ್ಕೆ ಗಾಯ ಗೊಳಿಸಿದನು ಎಂದು ಅರ್ಥಮಾಡಬಹುದಾದರೂ ಮುಂದಿನ ೬ನೆಯ ಶ್ಲೋಕದಲ್ಲಿ **ಹತಾಶ್ವಃ** ಎಂದು ಸ್ಪಷ್ಟವಾಗಿರುವುದರಿಂದ ೩ನೆಯ ಶ್ಲೋಕದಲ್ಲಿ ಬರುವ 'ವಿವ್ಯಾಧ' ಶಬ್ದಕ್ಕೆ ಸಂಹರಿಸಿದನು ಎಂದೇ ಅರ್ಥಮಾಡಬೇಕಾಗು ತ್ತದೆ. ಏಕೆಂದರೆ : ೪-೫ನೆಯ ಶ್ಲೋಕಗಳಲ್ಲಿ ಕುದುರೆಗಳನ್ನು ಕೊಂದ ಪ್ರಕರಣವು ಬರುವುದಿಲ್ಲ. ಸಮನ್ವಯಮಾಡಬಹುದಾದ ಮತ್ತೊಂದು ಕ್ರಮವೆಂದರೆ : ವಿವ್ಯಾಧ ಶಬ್ದಕ್ಕೆ ಎರಡು ಅರ್ಥಗಳನ್ನೂ ಹೇಳುವುದು. **ಸಾರಥಿಂ ವಿವ್ಯಾಧ**=ಸಾರಥಿಯನ್ನು ಗಾಯಗೊಳಿಸಿದನು. **ಅಶ್ವಾನ್ ವಿವ್ಯಾಧ**= ಕುದುರೆಗಳನ್ನು ಸಂಹರಿಸಿದನು ಎಂದು ಒಂದು ರೀತಿಯಲ್ಲಿ ಸಮನ್ವಯಮಾಡಬಹುದು. ಧೃಷ್ಟದ್ಯುಮ್ನನು ಪರಾಜಿತನಾಗುತ್ತಾನೆ. ಪಾಂಚಾಲಯೋಧರು 'ಮೃತ್ಯುಂ ಕೃತ್ವಾ ನಿವರ್ತನಂ' ಎಂದರೆ ನಿವರ್ತನಸ್ಥಾನ = ಹಿಂದಿರುಗುವ ಸ್ಥಾನ. ಮೃತ್ಯುವನ್ನು ಗೆದ್ದು ಪ್ರಾಣಸಹಿತ ಹಿಂದಿರುಗಬೇಕು. ಅಥವಾ ಯುದ್ಧಮಾಡುತ್ತಲೇ ಸಾಯಬೇಕು ಎಂಬ ಪ್ರತಿಜ್ಞೆ. ಯಾವುದೇ ಕಾರಣದಿಂದಲೂ ಪರಾಜಿತರಾಗಿ ಹಿಂದಿರುಗಬಾರದು– ಎಂಬ ವಿವರಣೆಯನ್ನು 'ಮೃತ್ಯುಂ ಕೃತ್ವಾ ನಿವರ್ತನಂ' ಎಂಬುದಕ್ಕೆ ಕೊಡಬಹುದಾಗಿದೆ. ಪಾಂಚಾಲಯೋಧರು ಹೀಗೆ ಪ್ರತಿಜ್ಞೆಮಾಡಿ ಹೊರಡು ತ್ತಾರೆ. ಇದು ೧೧ನೆಯ ಶ್ಲೋಕ. ೧೪ನೆಯ ಶ್ಲೋಕದಲ್ಲಿಯೇ ಪಾಂಚಾಲರು ಕರ್ಣನಿಗೆ ಭಯಗೊಂಡು ಓಡಿಹೋದರೆಂಬ ವಾಕ್ಯವಿದೆ. **ಸಾ ಪಂಚಾಲಾನಾಂ ಮಹಾಚಮೂಃ ಸಮ್ಪ್ರಾದ್ರವತ್ ।** ಇಂತಹ ಕಡೆಗಳಲ್ಲಿ ಪ್ರತಿಜ್ಞಾಭಂಗದ ವಿಷಯವು ಬರುವುದಿಲ್ಲ. ಪ್ರತಿಜ್ಞೆಮಾಡುವುದೂ ಸ್ವಾಭಾವಿಕ ; ಓಡಿಹೋಗುವುದೂ ಸ್ವಾಭಾವಿಕವಾಗಿರುತ್ತದೆ. ಓಡಿಹೋಗು ವವರನ್ನೂ ಕರ್ಣನು ಸಂಹರಿಸುತ್ತಾನೆ. ಇದು ರಾಕ್ಷಸಧರ್ಮ. ಮುಂದೆ ಘಟೋತ್ಕಚನೂ ಸಹ ಈ ಧರ್ಮವನ್ನೇ ಅನುಸರಿಸಿ ಯುದ್ಧಮಾಡುವುದಾಗಿ ಹೇಳುತ್ತಾನೆ. ಕರ್ಣನ ಪರಾಕ್ರಮವೆಷ್ಟೆಂಬುದು ಈ ಅಧ್ಯಾಯದಲ್ಲಿ ಮನದಟ್ಟಾಗುವಂತೆ ವರ್ಣಿತವಾಗಿದೆ. ಯುಧಿಷ್ಠಿರನು ತನ್ನ ಭಯವನ್ನು ಅರ್ಜುನನಿಗೆ ಹೇಳುತ್ತಾನೆ. ಕೃಷ್ಣನು ಈ ಸಮಯದಲ್ಲಿ ಕರ್ಣನೊಡನೆ

ಯುದ್ಧಕ್ಕೆ ಹೋಗುವುದು ಸರಿಯಲ್ಲವೆಂದು ಅರ್ಜುನನನ್ನು ತಡೆಯುತ್ತಾನೆ. ಘಟೋತ್ಕಚನನ್ನು ಕರೆಯಿಸಿ ಕರ್ಣನೊಡನೆ ಯುದ್ಧಮಾಡಲು ಕೃಷ್ಣಾರ್ಜುನರಿಬ್ಬರೂ ಪ್ರಚೋದಿಸುತ್ತಾರೆ. ಆ ಸಮಯದಲ್ಲಿಯೇ ಘಟೋತ್ಕಚನು ರಾಕ್ಷಸ ಧರ್ಮವನ್ನಾಶ್ರಯಿಸಿ 'ಶರಣಾಗತರಾಗಿ ಕೈಜೋಡಿಸಿಕೊಂಡು ಬಂದವರನ್ನೂ, ಓಡಿಹೋಗುತ್ತಿರುವವರನ್ನೂ ಸಹ ಸಂಹಾರಮಾಡುತ್ತೇನೆ'–ಎನ್ನುತ್ತಾನೆ. ಕರ್ಣ-ಘಟೋತ್ಕಚರ ಯುದ್ಧವು ಪ್ರಾರಂಭವಾಗುತ್ತದೆ.

೧೭೪ನೆಯ ಅಧ್ಯಾಯ : ಕೃಷ್ಣಾರ್ಜುನರ ಪ್ರೇರಣೆಯಂತೆ ಘಟೋತ್ಕಚನು ಕರ್ಣನೊಡನೆ ಯುದ್ಧಕ್ಕೆ ಹೋಗುತ್ತಾನೆ. ದುರ್ಯೋಧನನು ಘಟೋತ್ಕಚನನ್ನು ಕರ್ಣನ ಬಳಿಗೆ ಹೋಗದಂತೆ ತಡೆಯಬೇಕೆಂದು ದುಃಶಾಸನನಿಗೆ ಹೇಳುತ್ತಾನೆ. ಆ ವೇಳೆಗೆ ಸರಿಯಾಗಿ ಅಲಂಬುಷನೆಂಬ ರಾಕ್ಷಸನು ದುರ್ಯೋಧನನ ಸಮೀಪಕ್ಕೆ ಬಂದು ಘಟೋತ್ಕಚನೊಡನೆ ಯುದ್ಧ ಮಾಡಲು ಅನುಮತಿಯನ್ನು ಬೇಡುತ್ತಾನೆ. ಅಲಂಬುಷನ ಮುಖ್ಯೋದ್ದೇಶವು ಪಾಂಡವರನ್ನು ಸಂಹರಿಸಬೇಕೆಂಬುದೇ ಆಗಿರುತ್ತದೆ. ಏಕೆಂದರೆ : ಅವನ ತಂದೆಯಾದ ಜಟಾಸುರನು ಭೀಮನಿಂದ ಹತನಾಗಿರುತ್ತಾನೆ. ಆ ಸೇಡನ್ನು ಅವನೀಗ ತೀರಿಸಿಕೊಳ್ಳಬೇಕಾಗಿದೆ. ದುರ್ಯೋಧನನೂ ಆ ಸಮಯದಲ್ಲಿ ಘಟೋತ್ಕಚನ ಉಪಟಳದಿಂದ ತಪ್ಪಿಸಿಕೊಳ್ಳಬೇಕಾಗಿದೆ. ಆದುದರಿಂದ ಅವನು ಘಟೋತ್ಕಚನೊಡನೆ ಯುದ್ಧಮಾಡಲು ಅಲಂಬುಷನಿಗೆ ಹೇಳುತ್ತಾನೆ. ಘಟೋತ್ಕಚನಿಗೂ–ಅಲಂಬುಷನಿಗೂ ಭಯಂಕರಯುದ್ಧ ವಾಗುತ್ತದೆ. ಅಲಂಬುಷನ ತಲೆಯನ್ನು ಘಟೋತ್ಕಚನು ಕತ್ತರಿಸಿ ದುರ್ಯೋಧನನ ರಥದೊಳಕ್ಕೆ ಹಾಕುತ್ತಾನೆ. ಅನಂತರ ಕರ್ಣನೊಡನೆ ಯುದ್ಧಮಾಡಲು ಘಟೋತ್ಕಚನು ಮುನ್ನುಗ್ಗುತ್ತಾನೆ. ನರನಿಗೂ ಮತ್ತು ರಾಕ್ಷಸನಿಗೂ ಘೋರವಾದ ಯುದ್ಧವು ಪ್ರಾರಂಭವಾಗುತ್ತದೆ.

೧೭೫ನೆಯ ಅಧ್ಯಾಯ : ಈ ಅಧ್ಯಾಯದಲ್ಲಿ ಘಟೋತ್ಕಚನ ಸ್ವರೂಪ ವರ್ಣನೆಯಿದೆ. ಸ್ವರೂಪವರ್ಣನೆಮಾಡುವಂತೆ ಧೃತರಾಷ್ಟ್ರನೇ ಸಂಜಯನನ್ನು ಕೇಳುತ್ತಾನೆ. ಅವನ ಕುದುರೆ ಮತ್ತು ರಥ-ಧ್ವಜಗಳ ವರ್ಣನೆಯೂ ಇದೆ. ಅನಂತರ ಕರ್ಣ-ಘಟೋತ್ಕಚರ ಯುದ್ಧವು ವರ್ಣಿತವಾಗಿದೆ. ಸಾಮಾನ್ಯವಾಗಿ ಈ ಅಧ್ಯಾಯಪೂರ್ತಿಯಾಗಿ ಕರ್ಣ-ಘಟೋತ್ಕಚರ

ಯುದ್ಧದ ವರ್ಣನೆಯೇ ಇದೆ. ಘಟೋತ್ಕಚನ ಮಾಯಾಯುದ್ಧದ ವಿವರಣೆಯೂ ಇದೆ. ಕಡೆಯಲ್ಲಿ ಕರ್ಣನೇ ಘಟೋತ್ಕಚನನ್ನು ಅತಿಶಯಿಸುತ್ತಾನೆ. ೧೫೬ನೆಯ ಅಧ್ಯಾಯದಲ್ಲಿ ಬರುವ ಅಶ್ವತ್ಥಾಮ-ಘಟೋತ್ಕಚರ ಯುದ್ಧಕ್ಕೂ ಈ ಅಧ್ಯಾಯದಲ್ಲಿ ಬರುವ ಕರ್ಣ-ಘಟೋತ್ಕಚರ ಯುದ್ಧಕ್ಕೂ ಅನೇಕರೀತಿಯಲ್ಲಿ ಸಾಮ್ಯವಿದೆ. ಒಂದು ಪ್ರಕರಣದಲ್ಲಿ ಅಶ್ವತ್ಥಾಮನು ತೋರಿದ ಪರಾಕ್ರಮವನ್ನೇ ಕರ್ಣನೂ ತೋರುತ್ತಾನೆ. ಅಲ್ಪ-ಸ್ವಲ್ಪ ವ್ಯತ್ಯಾಸದಲ್ಲಿ ಶ್ಲೋಕಗಳೂ ಒಂದೇ ಆಗಿವೆ.

**ಚಿಕ್ಷೇಪಾವಿಧ್ಯ ಸಂಗ್ರಾಮೇ ದ್ರೋಣಪುತ್ರಾಯ ರಾಕ್ಷಸಃ ।**
**ಅಷ್ಟಾಘಣ್ಟಾಂ ಮಹಾಘೋರಾಮಶನಿಂ ದೇವನಿರ್ಮಿತಾಮ್ ॥**

(ಅಧ್ಯಾಯ ೧೫೬)

**ಸ ಚಿಕ್ಷೇಪ ಪುನಃ ಕ್ರುದ್ಧಃ ಸೂತಪುತ್ರಾಯ ರಾಕ್ಷಸಃ ।**
**ಅಷ್ಟಾಚಕ್ರಾಂ ಮಹಾಘೋರಾಮಶನಿಂ ರುದ್ರನಿರ್ಮಿತಾಮ್ ॥೯೬॥**

(ಅಧ್ಯಾಯ ೧೭೫)

**ತಾಮವಪ್ಲುತ್ಯ ಜಗ್ರಾಹ ದ್ರೌಣಿರ್ನ್ಯಸ್ಯ ರಥೇ ಧನುಃ ।**
**ಚಿಕ್ಷೇಪ ಚೈನಾಂ ತಸ್ಯೈವ ಸ್ಯನ್ದನಾತ್ಸೋಽವಪುಪ್ಲುವೇ ॥೧೫೮॥**

(ಅಧ್ಯಾಯ ೧೫೬)

**ತಾಮವಪ್ಲುತ್ಯ ಜಗ್ರಾಹ ಕರ್ಣೋ ನ್ಯಸ್ಯ ಮಹದ್ಧನುಃ ।**
**ಚಿಕ್ಷೇಪ ಚೈನಾಂ ತಸ್ಯೈವ ಸ್ಯನ್ದನಾತ್ಸೋಽವಪುಪ್ಲುವೇ ॥೯೮॥**

(ಅಧ್ಯಾಯ ೧೭೫)

**ಸಾಶ್ವಸೂತಧ್ವಜಂ ಯಾನಂ ಭಸ್ಮ ಕೃತ್ವಾ ಮಹಾಪ್ರಭಾ ।**
**ವಿವೇಶ ವಸುಧಾಂ ಭಿತ್ತ್ವಾ ಸಾಶನಿರ್ಭೃಶದಾರುಣಾ ॥೧೫೯॥**

(ಅಧ್ಯಾಯ ೧೫೬)

**ಸಾಶ್ವಸೂತಧ್ವಜಂ ಯಾನಂ ಭಸ್ಮ ಕೃತ್ವಾ ಮಹಾಪ್ರಭಾ ।**
**ವಿವೇಶ ವಸುಧಾಂ ಭಿತ್ತ್ವಾ ಸುರಾಸ್ತತ್ರ ವಿಸಿಸ್ಮಿಯುಃ ॥೯೯॥**

(ಅಧ್ಯಾಯ ೧೭೫)

**ದ್ರೌಣೇಸ್ತತ್ಕರ್ಮ ದೃಷ್ಟ್ವಾ ತು ಸರ್ವಭೂತಾನ್ಯಪೂಜಯನ್ ।**
**ಯದವಪ್ಲುತ್ಯ ಜಗ್ರಾಹ ಘೋರಾಂ ಶಙ್ಕರನಿರ್ಮಿತಾಮ್ ॥೬೦॥**

(ಅಧ್ಯಾಯ ೧೫೬)

**ಕರ್ಣಂ ತು ಸರ್ವಭೂತಾನಿ ಪೂಜಯಾಮಾಸುರಞ್ಜಸಾ ।**
**ಯದವಪ್ಲುತ್ಯ ಜಗ್ರಾಹ ದೇವಸೃಷ್ಟಾಂ ಮಹಾಶನಿಮ್ ॥೧೦೦॥**

(ಅಧ್ಯಾಯ ೧೭೫)

ಅಶ್ವತ್ಥಾಮಾ ಮತ್ತು ಕರ್ಣರ ಪರಾಕ್ರಮವು ಸಮವಾಗಿದ್ದಿತೆಂದು ನಾವು ಇದರಿಂದ ಊಹಿಸಬಹುದಾಗಿದೆ. ಇಲ್ಲಿ ಶಂಕರನಿರ್ಮಿತ ಮತ್ತು ದೇವನಿರ್ಮಿತ ಎಂಬ ಪದಗಳು ವಿಪರ್ಯಾಸಗೊಂಡಿರುವುದನ್ನು ಗಮನಿಸ ಬಹುದಾಗಿದೆ.

೧೭೬ನೆಯ ಅಧ್ಯಾಯ : ಇದು ಕೇವಲ ೨೨ ಶ್ಲೋಕಗಳ ಚಿಕ್ಕ ಅಧ್ಯಾಯ. ಇದರಲ್ಲಿ ಅಲಾಯುಧನ ಆಗಮನ ಮತ್ತು ಅವನ ಸ್ವರೂಪಗಳು ವರ್ಣಿತವಾಗಿವೆ. ಅಲಾಯುಧ, ಅಲಂಬುಷ ಇವರೇ ಮೊದಲಾದ ರಾಕ್ಷಸರು ಆಹ್ವಾನವಿಲ್ಲದೆಯೇ ದುರ್ಯೋಧನನ ಕಡೆಗೆ ಯುದ್ಧಮಾಡಲು ಬರುತ್ತಾರೆ. ದುರ್ಯೋಧನನಿಗೆ ಇದು ಸಂತೋಷದ ವಿಷಯ. ಅಲಾಯುಧನ ರಥ, ಕುದುರೆಗಳು, ಬಾಣಗಳು. ಧನುಸ್ಸು–ಎಲ್ಲವೂ ಸಾಮಾನ್ಯವಾಗಿ ಘಟೋ ತ್ಕಚನ ರಥಾಶ್ವ-ಧ್ವಜ-ಧನುಸ್ಸುಗಳಂತೆಯೇ ಇರುತ್ತವೆ. ಪಾಂಡವವೀರ ಯೋಧರು ಅಲಾಯುಧನೊಡನೆ ಯುದ್ಧದಲ್ಲಿ ತೊಡಗುತ್ತಾರೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೧೭೭ನೆಯ ಅಧ್ಯಾಯ : ಅಲಾಯುಧನು ತಮ್ಮ ಕಡೆಗೆ ಯುದ್ಧ ಮಾಡಲು ಬಂದುದಕ್ಕೆ ದುರ್ಯೋಧನಾದಿಗಳ ಸಂತೋಷಕ್ಕೆ ಪಾರವೇ ಇಲ್ಲ ವಾಗುತ್ತದೆ. ರಾಕ್ಷಸನಿಗೆ ಸ್ವಾಗತೋಪಚಾರಗಳೆಲ್ಲವೂ ಯಥೋಚಿತವಾಗಿ ನಡೆಯುತ್ತವೆ. ಆ ವೇಳೆಗೆ ಸರಿಯಾಗಿ ಘಟೋತ್ಕಚನು ಕರ್ಣನನ್ನು ಅತಿ ಶಯಿಸುತ್ತಾನೆ. ಹೆಚ್ಚು ಹೊತ್ತು ಕರ್ಣನು ರಾಕ್ಷಸನೊಡನೆ ಯುದ್ಧಮಾಡ ಲಾರನೆಂದು ಕೌರವರು ಭಾವಿಸುತ್ತಾರೆ. ಆಗ ದುರ್ಯೋಧನನು ಅಲಾಯುಧ ನನ್ನು ಘಟೋತ್ಕಚನೊಡನೆ ಯುದ್ಧಮಾಡಲು ಕಳುಹಿಸುತ್ತಾನೆ. ಅಲಾಯು ಧನು ಯುದ್ಧದಲ್ಲಿ ತೊಡಗುತ್ತಾನೆ. ಕರ್ಣನು ಭೀಮಸೇನನೊಡನೆ ಯುದ್ಧ ಮಾಡಲು ಹೋಗುತ್ತಾನೆ. ಆದರೆ ಭೀಮಸೇನನು ತನ್ನ ಮಗನು ಅಲಾ ಯುಧನೊಡನೆ ಯುದ್ಧಮಾಡಲಾರನೆಂದು ಭಾವಿಸಿ ತಾನೇ ಅಲಾಯುಧ ನೊಡನೆ ಯುದ್ಧಕ್ಕೆ ಹೋಗುತ್ತಾನೆ. ಅಲಾಯುಧನಿಗೂ ಭೀಮಸೇನನಿಗೂ

ಘೋರವಾದ ಯುದ್ಧವು ನಡೆಯುತ್ತದೆ. ಈ ಅಧ್ಯಾಯದಲ್ಲಿ ೩೨ನೆಯ ಶ್ಲೋಕದಿಂದ ಅಧ್ಯಾಯದ ಕಡೆಯವರೆಗೆ ಗಮನಿಸಬೇಕಾದ ಕೆಲವು ಅಂಶ ಗಳಿವೆ. ಶ್ರೀಕೃಷ್ಣನು ಅರ್ಜುನನನ್ನು ಭೀಮನ ಸಹಾಯಕ್ಕೆ ಹೋಗು ವಂತೆ ಹೇಳುತ್ತಾನೆ. **'ಪದಮಸ್ಯಾನುಗಚ್ಛ ತ್ವಂ ಮಾ ವಿಚಾರಯ ಪಾಣ್ಡವ'** (೩೩) ನೀನೂ ಸಹ ದ್ರೋಣಪುರಃಸರವಾದ ಸೈನ್ಯದ ಬಳಿಗೆ ಹೋಗು. **ತ್ವಮಪೀಮಾಂ ಮಹಾಬಾಹೋ ಚಮೂಂ ದ್ರೋಣಪುರಸ್ಕೃತಾಮ್ ॥** (೩೬) ಎಂದೂ ಶ್ರೀಕೃಷ್ಣನು ಹೇಳುತ್ತಾನೆ. ಪಾಂಡವರ ಕಡೆಯಲ್ಲಿ ಉಳಿದ ಮಹಾರಥರನ್ನೂ ಅಲ್ಲಿಗೇ ಹೋಗಿ ಯುದ್ಧಮಾಡಬೇಕೆಂಬುದರ ಬಗೆಗೆ ಶ್ರೀಕೃಷ್ಣನೇ ನಿಯೋಜಿಸುತ್ತಾನೆ. ಶ್ರೀಕೃಷ್ಣನ ಆಜ್ಞೆಯಂತೆ ಎಲ್ಲರೂ ಹೊರಟುಹೋಗುತ್ತಾರೆ. **ಜಗ್ಮುರ್ವೈಕರ್ತನಂ ಕರ್ಣಂ ರಾಕ್ಷಸಾಂಶ್ಚೈವ ತಾನ್ರಣೇ ॥೩೭॥** ಶ್ರೀಕೃಷ್ಣನ ಆಜ್ಞೆಯಂತೆ ಅರ್ಜುನನು ಭೀಮಸೇನನ ಸಹಾಯಕ್ಕೆ ನಿಲ್ಲಬೇಕಾಗಿದ್ದಿತು. ದ್ರೋಣರ ಸೈನ್ಯದ ಬಳಿಗಾದರೂ ಹೋಗಬೇಕಾಗಿದ್ದಿತು. ಅರ್ಜುನನು ಶ್ರೀಕೃಷ್ಣನೊಡನೆ ಅಲ್ಲಿಯೇ ಇರುತ್ತಾನೆ. ಆದರೆ ಭೀಮಸೇನನು ಅಶ್ವ-ಸಾರಥಿಗಳನ್ನು ಕಳೆದುಕೊಂಡರೂ ಅರ್ಜುನನು ಮಧ್ಯದಲ್ಲಿ ಪ್ರವೇಶಿಸುವುದಿಲ್ಲ. ಕಡೆಯಲ್ಲಿ ಶ್ರೀಕೃಷ್ಣನು ಘಟೋತ್ಕಚನನ್ನು ಭೀಮನ ಸಹಾಯಕ್ಕೆ ಹೋಗುವಂತೆ ಪ್ರಚೋದಿಸು ತ್ತಾನೆ. ಈ ಮಧ್ಯದಲ್ಲಿ ಭೀಮಸೇನನ ಸಾರಥಿಯು ಹತನಾದನೆಂಬ ಒಂದಂಶ ವಿದೆ. ಭೀಮಸೇನನ ಸಾರಥಿಯು ವಿಶೋಕ. ಸಾಮಾನ್ಯವಾಗಿ ಮಹಾ ಭಾರತದಲ್ಲಿ ಕೆಲವರ ಸಾರಥಿಗಳು ಬದಲಾಗುವುದಿಲ್ಲ ; ಸಾಯುವುದೂ ಇಲ್ಲ. ಅಂತಹ ಪ್ರಸಿದ್ಧಸಾರಥಿಗಳಲ್ಲಿ ವಿಶೋಕನೂ ಒಬ್ಬನು. ಪ್ರಸಕ್ತಸಮಯ ದಲ್ಲಿ ವಿಶೋಕನು ಮರಣಹೊಂದಿಲ್ಲವೆಂಬುದು ನಿಜ. ಕರ್ಣಪರ್ವದ ೭೬ನೆಯ ಅಧ್ಯಾಯದಲ್ಲಿ ವಿಶೋಕ-ಭೀಮಸೇನರ ಸಂವಾದವು ಬರುತ್ತದೆ. ಭೀಮಸೇನನು ತಾತ್ಕಾಲಿಕವಾಗಿ ಬೇರೊಬ್ಬ ಸಾರಥಿಯನ್ನು ಹೊಂದಿದ್ದು ಅವನು ಸತ್ತುಹೋದನೆಂದು ಊಹಿಸಬಹುದಾಗಿದೆ. ಈ ಅಧ್ಯಾಯವನ್ನು ಬಹಳ ಸೂಕ್ಷ್ಮವಾಗಿ ಪರಿಶೀಲಿಸಿದರೆ ೩೧ನೆಯ ಶ್ಲೋಕವಾದ **'ಪಾಞ್ಚಾಲಾಃ ಸೃಂಜಯಾಶ್ಚೈವ ನ ಶಾನ್ತಿಂ ಲೇಭಿರೇ ತತ್ರ ರಾಕ್ಷಸೈರ್ಭೃಶ ಪೀಡಿತಾಃ ।'** ರಾಕ್ಷಸರಿಂದ ಬಹಳವಾಗಿ ಪೀಡಿತರಾದ ಪಾಂಚಾಲ-

ಸೃಂಜಯರು ಮನಃಶಾಂತಿಯನ್ನು ಪಡೆದುಕೊಳ್ಳಲಿಲ್ಲ–ಎಂಬ ಶ್ಲೋಕದ ನಂತರ **ತದಪಶ್ಯದ್ಧೃಷೀಕೇಶಃ** ಎಂಬ ಕಡೆಯ ಶ್ಲೋಕವಿರುವುದು ಸಮಂಜಸವಾಗಿ ಕಾಣುತ್ತದೆ.

೧೭೮ನೆಯ ಅಧ್ಯಾಯ : ಶ್ರೀಕೃಷ್ಣನ ಸಲಹೆಯಂತೆ ಘಟೋತ್ಕಚನು ಅಲಾಯುಧನೊಡನೆ ಯುದ್ಧಮಾಡುತ್ತಾನೆ. ಅಧ್ಯಾಯಪೂರ್ತಿಯಾಗಿ ಅವರಿಬ್ಬರ ಘೋರಯುದ್ಧದ ವರ್ಣನೆಯೇ ಇದೆ. ಅವರು ಉಪಯೋಗಿಸಿದ ಆಯುಧಗಳ ಪಟ್ಟಿಯೂ ಈ ಅಧ್ಯಾಯದಲ್ಲಿ ಸಿಗುತ್ತದೆ. ಅಲಾಯುಧನನ್ನು ಘಟೋತ್ಕಚನು ನೆಲಕ್ಕಪ್ಪಳಿಸಿ ಅನಂತರ ತಲೆಯನ್ನು ಕತ್ತರಿಸಿ ಸಂಹರಿಸುತ್ತಾನೆ. ಇದರಿಂದ ಪಾಂಡವರಿಗೆ ಅತ್ಯಂತಸಂತೋಷ. ಅಂತೆಯೇ ದುರ್ಯೋಧನನಿಗೆ ಅತ್ಯಂತದುಃಖ. ಅಲಾಯುಧನು ಭೀಮನನ್ನು ಕೊಂದುಬಿಡುವನೆಂಬ ಭರವಸೆಯು ಅವನಿಗೆ ಸಂಪೂರ್ಣವಾಗಿದ್ದಿತು. ಅಲಾಯುಧನ ಸಂಹಾರದಿಂದಾಗಿ ದುರ್ಯೋಧನನು ತನ್ನ ಜೀವಿತದ ವಿಷಯದಲ್ಲಿಯೇ ಸಂಪೂರ್ಣವಾಗಿ ನಿರಾಶೆಹೊಂದುತ್ತಾನೆ.

೧೭೯ನೆಯ ಅಧ್ಯಾಯ : ಕರ್ಣನು ಪಾಂಚಾಲಯೋಧರೊಡನೆ ಯುದ್ಧಮಾಡುತ್ತಿರುತ್ತಾನೆ. ಕರ್ಣನ ಕೈಮೇಲಾಗುತ್ತದೆ. ಆ ಸಮಯದಲ್ಲಿ ಘಟೋತ್ಕಚನು ಪುನಃ ಕರ್ಣನನ್ನು ಎದುರಿಸಿ ಯುದ್ಧವನ್ನು ಪ್ರಾರಂಭಿಸುತ್ತಾನೆ. ಕರ್ಣನ ಮಹಾಸ್ತ್ರಗಳೂ ರಾಕ್ಷಸನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡುವುದಿಲ್ಲ. ಘಟೋತ್ಕಚನು ಮಾಯಾ ಯುದ್ಧದಲ್ಲಿ ತೊಡಗುತ್ತಾನೆ. ಅವನ ಮಾಯೆಯನ್ನು ಧ್ವಂಸಮಾಡಲು ಕರ್ಣನಿಗೆ ಸಾಧ್ಯವಾಗುವುದಿಲ್ಲ. ಅನೇಕಕೌರವಸೈನಿಕರು ನಾಶಹೊಂದುತ್ತಾರೆ. ಅನೇಕರು ಪಲಾಯನಮಾಡುತ್ತಾರೆ. ಕರ್ಣನೊಬ್ಬನೇ ಯುದ್ಧವನ್ನು ಮುಂದುವರಿಸುತ್ತಾನೆ. ಆದರೂ ರಾಕ್ಷಸನಿಂದ ಉಳಿಗಾಲವಿಲ್ಲವೆಂದು ಮನಗಂಡ ಕೌರವರು ಇಂದ್ರಶಕ್ತಿಯನ್ನು ರಾಕ್ಷಸನ ಮೇಲೆ ಪ್ರಯೋಗಿಸಲು ಕರ್ಣನಿಗೆ ಸಲಹೆಮಾಡುತ್ತಾರೆ. ಕರ್ಣನು ಅರ್ಜುನನನ್ನು ವಧಿಸುವ ಸಲುವಾಗಿಯೇ ಇಂದ್ರಶಕ್ತಿಯನ್ನು ಇಟ್ಟುಕೊಂಡಿರುತ್ತಾನೆ. ಆದರೆ 'ಬೀಸುವ ದೊಣ್ಣೆಗೆ ತಲೆತಪ್ಪಿಸಿಕೊಂಡರೆ ನೂರು ವರ್ಷಆಯುಸ್ಸು'–ಎಂಬ ನಾಣ್ಣುಡಿ ಯಂತೆ ಕರ್ಣನೂ ಆ ಸಮಯದಲ್ಲಿ ಘಟೋತ್ಕಚನನ್ನು ಸಂಹರಿಸುವುದೇ

ಸೂಕ್ತವೆಂದು ಭಾವಿಸುತ್ತಾನೆ. ಅಂತೆಯೇ ಶಕ್ತಿಯನ್ನು ರಾಕ್ಷಸನ ಮೇಲೆ ಪ್ರಯೋಗಿಸುತ್ತಾನೆ. ಆ ಶಕ್ತಿಯನ್ನು ನೋಡಿದೊಡನೆಯೇ ರಾಕ್ಷಸನು ತನ್ನ ಶರೀರವನ್ನು ವಿಂಧ್ಯಪರ್ವತದಷ್ಟು ದೊಡ್ಡದು ಮಾಡಿಕೊಂಡು ಓಡುತ್ತಾನೆ (೫೫). ಈ ಶ್ಲೋಕವೂ ಸೇರಿದಂತೆ ಈ ಪ್ರಕರಣದಲ್ಲಿರುವ ಕೆಲವು ಶ್ಲೋಕಗಳು ನೈಜವಾದ ಚಿತ್ರವನ್ನು ಮನಸ್ಸಿಗೆ ಒದಗಿಸುವುದಿಲ್ಲ. ೫೪ನೆಯ ಶ್ಲೋಕದಲ್ಲಿ ಕಡೆಯ ಪಾದ **'ವೈಕರ್ತನಃ ಪ್ರಾಹಿಣೋದ್ರಾಕ್ಷಸಾಯ'** ಕರ್ಣನು ಶಕ್ತಿಯನ್ನು ರಾಕ್ಷಸನ ಮೇಲೆ ಬಿಟ್ಟನು. ಮುಂದಿನ ಶ್ಲೋಕದಲ್ಲಿ (೫೫) **'ದೃಷ್ಟ್ವಾ ಶಕ್ತಿಂ ಬಾಹುಸಂಸ್ಥಾಂ ಜ್ವಲನ್ತೀಮ್'** ಭುಜಗಳ ಮಧ್ಯದಲ್ಲಿದ್ದ ಶಕ್ತ್ಯಾಯುಧವನ್ನು ನೋಡಿ ರಾಕ್ಷಸನು ಓಡಿದನೆಂದಿದೆ. ಹಿಂದಿನ ಶ್ಲೋಕದಲ್ಲಿಯೇ ಶಕ್ತ್ಯಾಯುಧವನ್ನು ಬಿಟ್ಟನೆಂದಿರುವಾಗ ಘಟೋತ್ಕಚನು ಪುನಃ ಅದನ್ನು ಹೇಗೆ ನೋಡಿದನೋ ತಿಳಿಯದು. ಶಕ್ತ್ಯಾಯುಧವನ್ನು ನೋಡಿ ಓಡಿದನೆಂಬುದೂ ಸಮಂಜಸವಾಗಿ ಕಾಣುವುದಿಲ್ಲ. ಹಿಂದೆ ಕರ್ಣನು ಅನೇಕ ಮಹಾಸ್ತ್ರಗಳನ್ನು ಪ್ರಯೋಗಿಸಿದಾಗಲೂ ಹೆದರದೇ ಇದ್ದವನು ಈಗೇಕೆ ಹೆದರುತ್ತಾನೆ? ೫೫ ಮತ್ತು ೫೬ನೆಯ ಶ್ಲೋಕಗಳನ್ನು ಬಿಟ್ಟರೆ ೫೭ನೆಯ ಶ್ಲೋಕವು ಸರಿಯಾಗಿ ಹೊಂದಿಕೊಳ್ಳುತ್ತದೆ. ೫೭ನೆಯ ಶ್ಲೋಕದಲ್ಲಿ ಆ ಶಕ್ತ್ಯಾಯುಧವು ರಾಕ್ಷಸನ ಮಾಯೆಯನ್ನು ಭಸ್ಮಮಾಡಿ ಅವನ ಹೃದಯವನ್ನೂ ಗಾಢವಾಗಿ ಭೇದಿಸಿತು ಎಂದಿದೆ. **ಸಾ ತಾಂ ಮಾಯಾಂ ಭಸ್ಮ ಕೃತ್ವಾ ಜ್ವಲನ್ತೀ ಭಿತ್ತ್ವಾ ಗಾಢಂ ಹೃದಯಂ ರಾಕ್ಷಸಸ್ಯ । ಊರ್ಧ್ವಂ ಯಯೌ ॥೫೭॥**

೫೫ನೆಯ ಶ್ಲೋಕದ ಪ್ರಕಾರ ಘಟೋತ್ಕಚನು ಓಡಿಹೋಗಿದ್ದರೆ ಶಕ್ತಿಯು ಹೃದಯವನ್ನು ಭೇದಿಸುವ ಸಾಧ್ಯತೆಯಿರಲಿಲ್ಲ. ಬೆನ್ನಿನಲ್ಲಿ ಪ್ರಹರಿಸಬೇಕಾಗಿದ್ದಿತು. ಕೆಲವು ಮಹಾಶಕ್ತಿಗಳನ್ನು ಓಡುತ್ತಿರುವವರ ಮೇಲೆ ಪ್ರಯೋಗಿಸಬಾರದು ಎಂಬ ನಿಯಮವೂ ಇದೆ. ಆದುದರಿಂದ ಐಂದ್ರೀಶಕ್ತಿಯನ್ನು ಓಡುತ್ತಿರುವ ಘಟೋತ್ಕಚನ ಮೇಲೆ ಬಿಟ್ಟನೆಂದರೆ ದೊಡ್ಡ ಅಪಚಾರವೇ ಸರಿ. ಈ ಕಾರಣಗಳಿಂದ ೫೫ ಮತ್ತು ಇದಕ್ಕೆ ಸಂಬಂಧಿಸಿದಂತೆಯೇ ಇರುವ ೫೬ನೆಯ ಶ್ಲೋಕಗಳು ಹೆಚ್ಚಿನವು ಎಂದು ಊಹಿಸಬಹುದಾಗಿದೆ.

೫೮ನೆಯ ಶ್ಲೋಕದಲ್ಲಿ 'ಇಂದ್ರನ ಶಕ್ತ್ಯಾಯುಧದಿಂದ ಘಟೋತ್ಕಚನು ಪ್ರಾಣಗಳಿಂದ ವಂಚಿತನಾದನು' ಅರ್ಥಾತ್ ಅಸುನೀಗಿದನು. **ಪ್ರಾಣೈರ್ವಿಪ್ರಾಜಿತಃ ಶಕ್ರಶಕ್ತ್ಯಾ** (೫೮) ಎಂದಿದೆ. ಇಲ್ಲಿಂದ ಮುಂದಿನ ನಾಲ್ಕು ಶ್ಲೋಕಗಳಿಗೆ ಅರ್ಥಸಮನ್ವಯಮಾಡುವುದು ಕಷ್ಟ. 'ಶತ್ರು ಕ್ಷಯಕ್ಕೋಸ್ಕರ ಆಶ್ಚರ್ಯಕರವಾದ ಕರ್ಮಮಾಡಿದನು. ಶೈಲಮೇಘಪ್ರಕಾಶನಾಗಿ ಕಾಣುತ್ತಿದ್ದನು' ಇದು ೫೯ನೆಯ ಶ್ಲೋಕದ ತಾತ್ಪರ್ಯ. 'ದೊಡ್ಡದಾದ ರೂಪವನ್ನು ಹೊಂದಿ ಅಂತರಿಕ್ಷದಿಂದ ತಲೆಕೆಳಗಾಗಿ ಕೆಳಕ್ಕೆ ಬಿದ್ದನು.' ೬೦ ನೆಯ ಶ್ಲೋಕದ ತಾತ್ಪರ್ಯ ಇದು. ಅವನು ಆಕಾಶಕ್ಕೆ ಯಾವಾಗ ಹಾರಿದ್ದನೆಂಬುದಕ್ಕೆ ಹಿನ್ನೆಲೆಯಿಲ್ಲ. ಶಕ್ತಿಯಾದರೂ ಅವನನ್ನು ಅಂತರಿಕ್ಷಕ್ಕೆ ಹಾರಿಸಿತೇ ಎಂಬುದಕ್ಕೂ ವಾಕ್ಯವಿಲ್ಲ. ಹಾಗೆ ಬಿದ್ದಾಗ ಸೈನ್ಯದ ಒಂದು ಭಾಗವನ್ನು ನಾಶಮಾಡುತ್ತಾನೆ. ಇದು ೬೧ನೆಯ ಶ್ಲೋಕದ ತಾತ್ಪರ್ಯ. ೬೨ ನೆಯ ಶ್ಲೋಕದಲ್ಲಿ ಈ ವಿಷಯವನ್ನೇ ಪರ್ಯಾಯದಿಂದ ಹೇಳಿ ಅಂತರಿಕ್ಷದಿಂದ ಕೆಳಕ್ಕೆ ಬಿದ್ದು ಒಂದು ಅಕ್ಷೌಹಿಣೀಸೈನ್ಯವನ್ನು ಸಂಹರಿಸಿದನು ಎಂದಿದೆ. ಮುಂದಿನ ಶ್ಲೋಕದಲ್ಲಿ ರಾಕ್ಷಸನು ನಿಹತನಾದುದನ್ನೂ, ರಾಕ್ಷಸನ ಮಾಯೆಯು ವಿನಾಶವಾದುದನ್ನೂ ಕಂಡು ಕೌರವರು ಆನಂದ ಪಟ್ಟರು–ಎಂದಿದೆ. ಅಕ್ಷೌಹಿಣೀಸೈನಿಕರು ಮರಣಹೊಂದಿದ್ದು ಕೌರವರ ಗಮನಕ್ಕೆ ಬರಲಿಲ್ಲವೇ? ೫೮ನೆಯ ಶ್ಲೋಕದಿಂದ ನಾಲ್ಕು ಶ್ಲೋಕಗಳನ್ನು ಬಿಟ್ಟು ಮುಂದಕ್ಕೆ ೬೩ನೆಯ ಶ್ಲೋಕವನ್ನು ಓದಿದರೆ ಸುಸಂಗತವಾಗಿ ಕಾಣುತ್ತದೆ. ರಾಕ್ಷಸನು ಶಕ್ತ್ಯಾಯುಧದಿಂದ ಮರಣಹೊಂದುತ್ತಾನೆ. ಕೌರವರು ಅದನ್ನು ನೋಡಿ ಆನಂದಿಸುತ್ತಾರೆ. ಹಿನ್ನೆಲೆಯಿಲ್ಲದ ಈ ಶ್ಲೋಕಗಳು ರಾಕ್ಷಸನ ಭವ್ಯತೆಯನ್ನು ಮತ್ತಷ್ಟು ಅತಿಶಯಿಸಲು ಸೇರಿಸಲ್ಪಟ್ಟಿವೆಯೆಂದು ಕಾಣುತ್ತದೆ. ಅಕ್ಷೌಹಿಣೀಸೈನ್ಯವನ್ನು ವಿನಾಶಮಾಡಿದನೆಂದು ಹೇಳಿರುವ ೬೨ನೆಯ ಶ್ಲೋಕವು ಒಂದು ಪುಸ್ತಕದಲ್ಲಿರುವುದಿಲ್ಲ.

೧೮೦ನೆಯ ಅಧ್ಯಾಯ : ಘಟೋತ್ಕಚನ ಮರಣದಿಂದಾಗಿ ಈ ಅಧ್ಯಾಯದಲ್ಲಿ ಪಾಂಡವರ ದುಃಖವು ಹೆಚ್ಚು ವರ್ಣಿತವಾಗಿರದಿದ್ದರೂ ಶ್ರೀಕೃಷ್ಣನಿಗಾದ ಸಂತೋಷ ಮತ್ತು ಅದಕ್ಕೆ ಕಾರಣಗಳು ವಿಪುಲವಾಗಿ

ವರ್ಣಿತವಾಗಿವೆ. ಪರ್ಯಾಯದಿಂದ ಈ ಅಧ್ಯಾಯವನ್ನು ಕರ್ಣಪ್ರಶಂಸಾಧ್ಯಾಯವೆಂದೇ ಕರೆಯಬಹುದಾಗಿದೆ. ಕವಚ-ಕರ್ಣಕುಂಡಲಗಳಿಂದ ಕರ್ಣನು ಕೂಡಿದ್ದರೆ ಅವನನ್ನು ಸಂಹರಿಸಲು ಆಗುತ್ತಿರಲಿಲ್ಲ. ಕರ್ಣಕುಂಡಲಗಳ ವಿನಿಮಯರೂಪವಾಗಿ ಶಕ್ತಿಯನ್ನು ಪಡೆದನು. ಅದನ್ನೂ ಅರ್ಜುನನ ಸಂಹಾರದ ಸಲುವಾಗಿಯೇ ಪಡೆದುಕೊಂಡನು. ಆದರೆ ಅದರ ವಿನಿಯೋಗವನ್ನು ಮಾತ್ರ ದೈವವು ಬೇರೆಯ ವಿಧದಲ್ಲಿ ಕಲ್ಪಿಸಿತು. 'ಇಂತಹ ಸಂದರ್ಭದಲ್ಲಿಯೂ ಕರ್ಣನನ್ನು ಋಜುಮಾರ್ಗದಿಂದ ಸಂಹರಿಸಲು ಸಾಧ್ಯವಿಲ್ಲ'– ಎನ್ನುತ್ತಾನೆ ಶ್ರೀಕೃಷ್ಣ. ಮಹಾಬಲಿಷ್ಠರಾದ ದುಷ್ಟರನ್ನು ಉಪಾಯದಿಂದಲೇ ಕೊಲ್ಲಬೇಕೆಂಬುದು ಶ್ರೀಕೃಷ್ಣನ ಅಭಿಮತ. ಜರಾಸಂಧ, ಶಿಶುಪಾಲ, ಏಕಲವ್ಯ ಮುಂತಾದವರನ್ನು ಶ್ರೀಕೃಷ್ಣನು ಉದಾಹರಿಸುತ್ತಾನೆ. ಘಟೋತ್ಕಚನು ಪಾಂಡವರೊಡನೆ ಸೇರಿ ಯುದ್ಧಮಾಡಿದ ಮಾತ್ರಕ್ಕೆ ಅವನ ರಾಕ್ಷಸತ್ವವು ಹೋದಂತಾಗಲಿಲ್ಲ. ರಾಕ್ಷಸನು ರಾಕ್ಷಸನೇ ; ಅಂತಹವರು ಯಾವುದೇ ಪಕ್ಷಕ್ಕೆ ಸೇರಿದವರಾಗಿದ್ದರೂ ಉಪಾಯಾಂತರದಿಂದ ಅವರನ್ನು ಕೊಲ್ಲಲೇಬೇಕು. ಎಂಬುದು ಶ್ರೀಕೃಷ್ಣನ ಇಂಗಿತವಾಗಿದೆ. ಅದು ಈ ಅಧ್ಯಾಯದಲ್ಲಿ ಸ್ವಲ್ಪಮಟ್ಟಿಗೆ ವ್ಯಕ್ತವಾಗಿದೆ.

೧೮೧ನೆಯ ಅಧ್ಯಾಯ : ೧೮೦ನೆಯ ಅಧ್ಯಾಯದಿಂದ ಅನುವರ್ತಿತವಾಗಿರುವ ಅಧ್ಯಾಯವಿದು. ಅರ್ಜುನನು, ತಮ್ಮ ಹಿತಕ್ಕಾಗಿ ಜರಾಸಂಧಾದಿಗಳು ಯಾವ ಉಪಾಯಗಳಿಂದ ಹತರಾದರೆಂದು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ. ಜರಾಸಂಧ, ಶಿಶುಪಾಲ ಮತ್ತು ಏಕಲವ್ಯರ ವಿಷಯವು ಅರ್ಜುನನಿಗೂ ತಿಳಿದೇ ಇರುತ್ತದೆ. ಆದರೆ ಅವರಿದ್ದರೇನಾಗುತ್ತಿತ್ತೆಂಬುದರ ಬಗೆಗೆ ಅರ್ಜುನನು ಎಂದೂ ಯೋಚಿಸಿದವನಲ್ಲ. ಶ್ರೀಕೃಷ್ಣನು ಈ ಅಧ್ಯಾಯದಲ್ಲಿ ಜಗತ್ತಿನ ಸೂತ್ರಧಾರನೇ ತಾನೆಂಬ ಅಂಶವನ್ನು ಸ್ಪಷ್ಟಪಡಿಸಿದ್ದಾನೆ.

**ತ್ವದ್ಧಿತಾರ್ಥಂ ತು ಸ ಮಯಾ ಹತಃ ಸಂಗ್ರಾಮಮೂರ್ಧನಿ ॥**

(ಶ್ಲೋಕದ ಪೂರ್ವಾರ್ಧ ಅನುವಾದ ಪುಟ 3400 ಪ್ಯಾರ 2) ಇದನ್ನು ನಾವು ಅನುವಾದಮಾಡುವಾಗ ಶಿಶುಪಾಲನಿಗೆ ಅನ್ವಯಿಸಿದ್ದೇವೆ. ಅನಂತರದ ಪರಿಶೋಧನೆಯಲ್ಲಿ ಇದು ಏಕಲವ್ಯನಿಗೆ ಅನ್ವಯಿಸತಕ್ಕುದೆಂದು ವ್ಯಕ್ತಪಟ್ಟಿದೆ. ಆ ಪ್ಯಾರಾದಲ್ಲಿ 'ನಿನ್ನ ಹಿತಾರ್ಥವಾಗಿಯೇ ನಾನು ರಣಾಂಗಣ

ದಲ್ಲಿ' ಆದನಂತರ 'ಏಕಲವ್ಯನನ್ನು ಸಂಹರಿಸಿದೆನು'–ಎಂದು ಓದಿಕೊಂಡು ಮುಂದೆ ಓದಬೇಕು. ಘಟೋತ್ಕಚನ ಸಂಹಾರವನ್ನು ಬಹಳ ಚೆನ್ನಾಗಿ ಸಮರ್ಥನೆಮಾಡಿದ್ದಾನೆ. 'ರಾಕ್ಷಸರು ರಾಕ್ಷಸರೇ. ಅವರು ಸತ್ಪುರುಷರ ಪಕ್ಷ ದಲ್ಲಿ ಸೇರಿದ ಮಾತ್ರಕ್ಕೆ ಸತ್ಪುರುಷರಾಗಿಬಿಡುವುದಿಲ್ಲ. ಅವರ ರಾಕ್ಷಸಸ್ವಭಾ ವವು ಹೋಗಿಬಿಡುವುದಿಲ್ಲ.' ಪ್ರಹ್ಲಾದ, ಬಲಿ–ಇವರಂತಹವರು ಬಹಳ ಅಪರೂಪ. ಅದೇ ವಂಶದ ಬಾಣನು ಅಸುರನೇ ಆದನು. ಇದನ್ನೇ ಶ್ರೀಕೃಷ್ಣನು ಸ್ಪಷ್ಟಪಡಿಸಿ ಹೇಳಿದ್ದಾನೆ. ಅಧ್ಯಾಯವು ಬಹಳ ಸುಂದರವಾಗಿದೆ.

೧೮೨ನೆಯ ಅಧ್ಯಾಯ : ಕರ್ಣನು ಶಕ್ತಿಯನ್ನು ಅರ್ಜುನನ ಮೇಲೆ ಮೊದಲೇ ಪ್ರಯೋಗಿಸದ ಬಗೆಗೆ ಧೃತರಾಷ್ಟ್ರನು ಜಿಜ್ಞಾಸೆಮಾಡುತ್ತಾನೆ. ಅವನ ಮಾತುಗಳು ಬಹಳ ಚೆನ್ನಾಗಿವೆ. ಅದಕ್ಕೆ ಸಂಜಯನು ಕೊಡುವ ಉತ್ತರವೂ ಸುಂದರವಾಗಿದೆ. ಪ್ರತಿರಾತ್ರಿಯಲ್ಲಿಯೂ ಕರ್ಣನಿಗೆ ಕೃಷ್ಣನನ್ನು ಅಥವಾ ಪಾರ್ಥನನ್ನು ಸಂಹರಿಸಲು ಸಲಹೆನೀಡುತ್ತಿದ್ದುದಾಗಿಯೂ ಸಂಜಯನು ಹೇಳುತ್ತಾನೆ. ಕಡೆಗೆ ಜನಾರ್ದನನನ್ನು ಜಯಿಸುವವರು ಮೂರು ಲೋಕಗಳಲ್ಲಿಯೂ ಯಾರೂ ಇಲ್ಲವೆಂಬ ಉದ್ಗಾರವನ್ನೂ ಹಾಕು ತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯಬೇಕಾಗಿದ್ದಿತು ; ಮುಗಿದಿರಲೂ ಬಹುದು. ಏಕೆಂದರೆ ಮುಂದಿನ ಅಧ್ಯಾಯದಲ್ಲಿ ಧೃತರಾಷ್ಟ್ರನು ಇದೇ ಮಾತನ್ನೇ ಮುಂದುವರಿಸುತ್ತಾನೆ. ಆದರೆ ಈ ಮಧ್ಯದಲ್ಲಿ 'ತತಃ ಕೃಷ್ಣಂ ಮಹಾಬಾಹುಂ' ಎಂದು ಶ್ಲೋಕವು ಪ್ರಾರಂಭವಾಗುತ್ತದೆ. ಈ ಹಿಂದೆ ೧೮೧ನೆಯ ಅಧ್ಯಾಯವು ಕೃಷ್ಣಾರ್ಜುನರ ಸಂಭಾಷಣೆಯೊಡನೆ ಮುಗಿದಿರು ತ್ತದೆ. ಅಲ್ಲಿ ಸಾತ್ಯಕಿಯು ಬಂದ ಪ್ರಸ್ತಾಪವಿಲ್ಲ. ಇಲ್ಲಿ ಇದ್ದಕ್ಕಿದ್ದಂತೆಯೇ ಸಾತ್ಯಕಿಯು ಕೃಷ್ಣನನ್ನು ಪ್ರಶ್ನಿಸಿದ ಪ್ರಕರಣವು ಬರುತ್ತದೆ. ಶ್ರೀಕೃಷ್ಣನ ಮಾತಿನಲ್ಲಿ ಈ ವಾಕ್ಯಗಳಿವೆ. ದುಃಶಾಸನ, ಕರ್ಣ, ಶಕುನಿ, ಸೈಂಧವ, ದುರ್ಯೋಧನ ಇವರೆಲ್ಲರೂ ಪ್ರತಿನಿತ್ಯವೂ ಮಂತ್ರಾಲೋಚನೆ ಮಾಡುತ್ತಿ ದ್ದರು (೩೫) ಎಂದಿದೆ. ಈ ಹಿಂದೆ ೨೦ನೆಯ ಶ್ಲೋಕದಲ್ಲಿ ಸಂಜಯನು, 'ನಾನು, ದುರ್ಯೋಧನ, ಶಕುನಿ ಮತ್ತು ದುಃಶಾಸನರು ಕರ್ಣನಿಗೆ ಹೇಳುತ್ತಿದ್ದೆವು. ಧನಂಜಯನನ್ನು ಸಂಹರಿಸಲಾಗದಿದ್ದರೆ ಕೃಷ್ಣನನ್ನಾದರೂ ಸಂಹರಿಸುವಂತೆ ಹೇಳಿದೆವು'–ಎಂದಿದೆ. ಒಂದಕ್ಕೊಂದಕ್ಕೆ ಸಂಬಂಧವೇ ಇಲ್ಲ.

'ನಾನೇ ರಾಧೇಯನನ್ನು ಮೋಹಗೊಳಿಸುತ್ತೇನೆ. ಆದುದರಿಂದ ಕರ್ಣನು ಅರ್ಜುನನ ಮೇಲೆ ಶಕ್ತಿಯನ್ನು ಪ್ರಯೋಗಿಸಲಿಲ್ಲ' (೪೦) ಎಂದು ಶ್ರೀಕೃಷ್ಣನು ಸಾತ್ಯಕಿಯೊಡನೆ ಹೇಳುತ್ತಾನೆ. ಈ ಮಾತನ್ನು ಧೃತರಾಷ್ಟ್ರನು ಕೇಳಿದ್ದ ಪಕ್ಷದಲ್ಲಿ ಮುಂದಿನ ಅಧ್ಯಾಯದಲ್ಲಿ ಧೃತರಾಷ್ಟ್ರನು ಪುನಃ ಇದನ್ನೇ ಪ್ರಸ್ತಾಪಿಸಿ 'ದೇವಕೀಪುತ್ರನ ಮೇಲಾಗಲೀ, ಧನಂಜಯನ ಮೇಲಾಗಲೀ ಕರ್ಣನು ಶಕ್ತಿಯನ್ನು ಏಕೆ ಪ್ರಯೋಗಿಸಲಿಲ್ಲ?' (೩) ಎಂದು ಪ್ರಶ್ನಿಸುತ್ತಿರಲಿಲ್ಲ. ಇಲ್ಲಿರುವ ಶ್ಲೋಕಗಳೂ ಸಹ ಸುರಸವಾಗಿ ಹಿತವಾಗಿಲ್ಲ. ಈ ಕಾರಣಗಳಿಂದ ೩೩ನೆಯ ಶ್ಲೋಕದಿಂದ ಅಧ್ಯಾಯದ ಕಡೆಯವರೆಗಿರುವ ಶ್ಲೋಕಗಳು ಅರ್ಥಾತ್ ಸಾತ್ಯಕಿ-ಕೃಷ್ಣರ ಸಂವಾದವು ಹೆಚ್ಚಿನ ಪಾಠವಿರಬಹುದೆಂಬುದು ನಮ್ಮ ಅಭಿಪ್ರಾಯವಾಗಿದೆ.

೧೮೩ನೆಯ ಅಧ್ಯಾಯ : ಕರ್ಣನು ಶಕ್ತಿಯನ್ನು ಅರ್ಜುನನ ಮೇಲಾಗಲೀ–ಶ್ರೀಕೃಷ್ಣನ ಮೇಲಾಗಲೀ ಪ್ರಯೋಗಿಸಲಿಲ್ಲವಲ್ಲಾ! ಎಂಬ ಧೃತರಾಷ್ಟ್ರನ ಪಶ್ಚಾತ್ತಾಪವು ಈ ಅಧ್ಯಾಯದ ಮೊದಲಿನಲ್ಲಿ ಪುನಃ ವರ್ಣಿತ ವಾಗಿದೆ. ಸಂಜಯನು ಯಥಾಯೋಗ್ಯವಾದ ಉತ್ತರವನ್ನೇ ಕೊಡುತ್ತಾ ಕೇವಲ ದೇವಮಾಯೆಯಿಂದ ಕರ್ಣನು ಶಕ್ತಿಯನ್ನು ಅವರಿಬ್ಬರ ಮೇಲೂ ಪ್ರಯೋಗಿಸಲಿಲ್ಲವೆನ್ನುತ್ತಾನೆ. ಧೃತರಾಷ್ಟ್ರನೂ ಅದನ್ನೇ ಒಪ್ಪಬೇಕಾಗುತ್ತದೆ. **ದೈವೇನೋಪಹತಾ ಯೂಯಂ** ಎಂದು ಉದ್ಗಾರಹಾಕುತ್ತಾನೆ. ಅನಂತರ ಧೃತರಾಷ್ಟ್ರನು, ಕರ್ಣ-ದ್ರೋಣರು ಪಾಂಚಾಲ-ಸೃಂಜಯರೊಡನೆ ಮಾಡಿದ ಯುದ್ಧದ ವರ್ಣನೆಯನ್ನು ಕೇಳಲು ಅಪೇಕ್ಷಿಸುತ್ತಾನೆ. ಸಂಜಯನು ಘಟೋತ್ಕಚನ ವಧೆಯಿಂದ ಯುಧಿಷ್ಠಿರನಿಗಾದ ದುಃಖವನ್ನು ವರ್ಣಿಸು ತ್ತಾನೆ. ಘಟೋತ್ಕಚನ ಮರಣಕ್ಕಾಗಿ ಪಾಂಡವರ ಪಕ್ಷದಲ್ಲಿ ಹೆಚ್ಚು ದುಃಖಿಸಿದವನೆಂದರೆ ಯುಧಿಷ್ಠಿರನೊಬ್ಬನೇ. ಇಲ್ಲಿ ಯುಧಿಷ್ಠಿರನು ಶ್ರೀಕೃಷ್ಣ ನೊಡನೆ ಎತ್ತುವ ಕೆಲವು ವಿಷಯಗಳು ಬಹಳ ಸ್ವಾರಸ್ಯವಾಗಿವೆ. 'ಅರ್ಜುನನಿಲ್ಲದ ಸಮಯದಲ್ಲಿ ಅಭಿಮನ್ಯುವು ಮೃತನಾದನು. ಅರ್ಜು ನನೇ ಪ್ರತ್ಯಕ್ಷದಲ್ಲಿದ್ದುಕೊಂಡು ರಾಕ್ಷಸನು ಹೇಗೆ ಹತನಾದನು? ಅಭಿಮನ್ಯು ವಿನ ಮರಣಕ್ಕೆ ಕಾರಣರು ದ್ರೋಣ-ಕರ್ಣರು ವಧೆಮಾಡುವುದು ಹೇಗೆಂಬ ಯೋಜನೆಯನ್ನು ಸಿದ್ಧಪಡಿಸಿದವರೇ ದ್ರೋಣರು. ಅದನ್ನು ಕಾರ್ಯ

ರೂಪಕ್ಕೆ ತಂದವರು ಕರ್ಣನೇ ಮೊದಲಾದ ಯೋಧರು ; ದ್ರೋಣರೂ ಅವರೊಡನೆ ಸೇರಿಯೇ ಇದ್ದರು. ಸೈಂಧವನು ವ್ಯೂಹದ ಒಳಗೆ ಹೋಗದಂತೆ ಪಾಂಡವರನ್ನು ತಡೆದನೇ ಹೊರತು ಅಭಿಮನ್ಯುವಿನ ಸಂಹಾರವಾಗುವಾಗ ಅವನು ಹತ್ತಿರದಲ್ಲಿಯೂ ಇರಲಿಲ್ಲ. ಆದರೆ ಅರ್ಜುನನು ಅಭಿಮನ್ಯುವಿನ ಸಂಹಾರದ ಸೇಡನ್ನು ತೀರಿಸಿಕೊಂಡುದು ಸೈಂಧವನ ಮೇಲೆ. ದ್ರೋಣ-ಕರ್ಣರನ್ನೇ ಮೊಟ್ಟಮೊದಲಿಗೆ ಸಂಹರಿಸಬೇಕಾಗಿತ್ತು.' ಇದು ಯುಧಿಷ್ಠಿರನ ಆಗಿನ ಅಭಿಪ್ರಾಯವಾಗಿತ್ತು. ಆ ಹಿಂದಿನ ಸಂದರ್ಭದಲ್ಲಿಯೂ ಸಹ ಯುಧಿಷ್ಠಿರನು ಅರ್ಜುನನಿಗೆ ನಡೆದ ವಿಷಯವನ್ನು ಸ್ಪಷ್ಟವಾಗಿ ಹೇಳಿರುತ್ತಾನೆ :

**ತತಃ ಸೈನ್ಧವಕೋ ರಾಜಾ ಕ್ಷುದ್ರಸ್ತಾತ ಜಯದ್ರಥಃ ।**
**ವರದಾನೇನ ರುದ್ರಸ್ಯ ಸರ್ವಾನ್ನಃ ಸಮವಾರಯತ್ ॥೯॥**

**ತತೋ ದ್ರೋಣಃ ಕೃಪಃ ಕರ್ಣಃ ದ್ರೌಣಿಃ ಕೌಸಲ್ಯ ಏವ ಚ ।**
**ಕೃತವರ್ಮಾ ಚ ಸೌಭದ್ರಂ ಷಡ್ರಥಾಃ ಪರ್ಯವಾರಯನ್ ॥೧೦॥**

**ಪರಿವಾರ್ಯ ತು ತೈ ಸರ್ವೈರ್ಯುಧಿ ಬಾಲೋ ಮಹಾರಥೈಃ ।**
**ಯತಮಾನಃ ಪರಂ ಶಕ್ತ್ಯಾ ಬಹುಭಿರ್ವಿರಥೀಕೃತಃ ॥೧೧॥**

**ತತೋ ದೌಃಶಾಸನಿಃ ಕ್ಷಿಪ್ರಂ ತಥಾ ತೈರ್ವಿರಥೀಕೃತಮ್ ।**
**ಸಂಶಯಂ ಪರಮಂ ಪ್ರಾಪ್ಯ ದಿಷ್ಟಾನ್ತೇನಾಭ್ಯಯೋಜಯತ್ ॥೧೨॥**

(ಅಧ್ಯಾಯ : ದ್ರೋಣ-೭೩)

ಆದರೂ ಸಹ ಅರ್ಜುನನು ಜಯದ್ರಥನನ್ನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿ ಅವನನ್ನು ಸಂಹರಿಸುತ್ತಾನೆ. ಇದು ದೈವಸಂಕಲ್ಪವೇ ಇರಬಹುದು. ಆದರೆ ಯುಧಿಷ್ಠಿರನು ಹೇಳಿದಂತೆ ಅಭಿಮನ್ಯುವಿನ ಸಂಹಾರಕ್ಕೂ ಸೈಂಧವನಿಗೂ ನೇರಸಂಬಂಧವಂತೂ ಇಲ್ಲ.

ಯುಧಿಷ್ಠಿರನು ತಾನೇ ಕರ್ಣನನ್ನು ಸಂಹರಿಸುವುದಾಗಿ ಹೇಳಿ ಕೋಪದಿಂದ ಹೊರಟೇಬಿಡುತ್ತಾನೆ. ಆದರೆ ಆ ಸಮಯದಲ್ಲಿ ವ್ಯಾಸರು ಬಂದು ಸಮಾಧಾನಮಾಡುತ್ತಾರೆ. 'ಇಂದಿಗೆ ಐದನೆಯ ದಿವಸದಲ್ಲಿ ನೀನು ಸಾರ್ವಭೌಮನಾಗುವೆ' ಎಂದು ಹೇಳಿ ಅವರು ಮರೆಯಾಗುತ್ತಾರೆ.

೧೮೪ನೆಯ ಅಧ್ಯಾಯ : ವ್ಯಾಸರ ಮಾತಿನಂತೆ ಯುಧಿಷ್ಠಿರನು ಕರ್ಣನೊಡನೆ ಯುದ್ಧಕ್ಕೆ ಹೋಗದಿದ್ದರೂ ಅವನ ಕೋಪವಿನ್ನೂ ಉಪಶಮನ

ವಾಗಿರುವುದಿಲ್ಲ. ಧೃಷ್ಟದ್ಯುಮ್ನನೇ ಮೊದಲಾದವರನ್ನು ದ್ರೋಣರ ಮೇಲೆ ಯುದ್ಧಕ್ಕೆ ಹೋಗುವಂತೆ ಪ್ರೇರಿಸುತ್ತಾನೆ. ಎಲ್ಲ ಮುಖ್ಯಯೋಧರೂ ದ್ರೋಣರ ಮೇಲೆ ಯುದ್ಧಕ್ಕೆ ಹೋಗುತ್ತಾರೆ. ದುರ್ಯೋಧನನೂ ಸಹ ದ್ರೋಣರ ರಕ್ಷಣೆಗಾಗಿ ಜಾಗರೂಕತೆಯನ್ನು ವಹಿಸುತ್ತಾನೆ. ಎರಡೂ ಪಕ್ಷದವರಿಗೂ ಘೋರಯುದ್ಧವು ಪ್ರಾರಂಭವಾಗುತ್ತದೆ. ರಾತ್ರಿಯ ಎರಡನೆಯ ಯಾಮವೂ ಕಳೆದುಹೋಗಿದೆ. ಬೆಳಗಿನಿಂದಲೂ ಯುದ್ಧಮಾಡುತ್ತಲೇ ಇದ್ದಾರೆ ಸ್ವಲ್ಪವಾದರೂ ವಿರಾಮವೇ ಇಲ್ಲ. ಬಹಳ ಬಳಲಿದ್ದ ಸೈನಿಕರಿಗೆ ತಡೆಯಲಾಗದ ತೂಕಡಿಕೆಯು ಪ್ರಾರಂಭವಾಗಿದೆ. ಧನುರ್ಬಾಣಗಳೂ ಕೈಗಳಿಂದ ಕಳಚಿಬೀಳುತ್ತಿವೆ. ಎರಡೂ ಪಕ್ಷಗಳ ಸೈನಿಕರ ಪರಿಸ್ಥಿತಿಯೂ ಇದೇ ಆಗಿರುತ್ತದೆ. ಆ ಸಮಯದಲ್ಲಿ ಅರ್ಜುನನು ಯುದ್ಧವಿರಾಮವನ್ನು ಘೋಷಿಸುತ್ತಾನೆ. ಆ ಮಾತು ಬಳಲಿದ್ದ ಸೈನಿಕರಿಗೆ ಅಮೃತಪ್ರಾಯವಾಗುತ್ತದೆ. ಶತ್ರುಪಕ್ಷದವರೂ ಅರ್ಜುನನನ್ನು ಶ್ಲಾಘಿಸುತ್ತಾರೆ. ಹೇಗಿದ್ದರೆ ಹಾಗೇ ನಿದ್ದೆಮಾಡುತ್ತಾರೆ. ನಿದ್ರಾದೇವಿಗೆ ಯಾವ ವಿಷಯದಲ್ಲೂ ಪಕ್ಷಪಾತವಿಲ್ಲ. ಬಳಲಿದ್ದ ಆ ಎಲ್ಲ ಯೋಧರನ್ನೂ ಪ್ರೀತಿಯಿಂದ ಆಲಿಂಗಿಸಿಕೊಳ್ಳುತ್ತಾಳೆ. ಚಂದ್ರೋದಯವು ಪೂರ್ವದಿಕ್ಕಿನಲ್ಲಾಗುತ್ತದೆ. ವರ್ಣನೆಯು ಅಲ್ಪವಾಗಿದ್ದರೂ ಬಹಳ ರಮಣೀಯವಾಗಿದೆ. ಅನಂತರ ಅರುಣೋದಯವೂ ಆಗುತ್ತದೆ. ಪುನಃ ಎರಡು ಪಕ್ಷಗಳ ಸೈನಿಕರಿಗೂ ಘೋರವಾದ ಯುದ್ಧವು ಪ್ರಾರಂಭವಾಗುತ್ತದೆ.

---

೧೮೫ನೆಯ ಅಧ್ಯಾಯ ದ್ರೋಣವಧಪರ್ವ (ಮುಂದುವರಿದಿದೆ.)

## ದುರ್ಯೋಧನನು ದ್ರೋಣರನ್ನು ಅವಹೇಳನಮಾಡಿದುದು : ದ್ರೋಣರ ವ್ಯಂಗ್ಯೋಕ್ತಿ

ಸಂಜಯನು ಹದಿನೈದನೆಯ ದಿವಸದ ಮುಂಜಾವದ ವಿಷಯವನ್ನು ಧೃತರಾಷ್ಟ್ರನಿಗೆ ಹೇಳುತ್ತಾನೆ :

“ಮಹಾರಾಜ! ಅನಂತರ ಕ್ರೋಧಾವಿಷ್ಟನಾಗಿದ್ದ ದುರ್ಯೋಧನನು ದ್ರೋಣರ ಬಳಿಗೆ ಬಂದು ಹರ್ಷವನ್ನೂ ಮತ್ತು ವೀರ್ಯೋತ್ಸಾಹವನ್ನೂ ಹುಟ್ಟಿಸುತ್ತಾ ಅವರೊಡನೆ ಈ ಮಾತುಗಳನ್ನು ಹೇಳಿದನು :

"ಆಚಾರ್ಯರೇ! ನಮ್ಮ ಶತ್ರುಗಳ ವಿಷಯದಲ್ಲಿ ಅದರಲ್ಲಿಯೂ ವಿಶೇಷವಾಗಿ ಲಬ್ಧಲಕ್ಷ್ಯವಾಗಿರುವ (ಲಕ್ಷ್ಯವನ್ನು ಭೇದಿಸುವುದರಲ್ಲಿ ಮಹಾಕುಶಲರಾಗಿರುವ ) ಶತ್ರುಗಳ ವಿಷಯದಲ್ಲಿ–ಅವರು ವಿಶ್ರಮಿಸಿಕೊಳ್ಳುತ್ತಿದ್ದರೂ ಬಳಲಿದ್ದರೂ, ಯುದ್ಧಮಾಡಲು ಉತ್ಸಾಹವಿಲ್ಲದವರಾಗಿದ್ದರೂ–ಕ್ಷಮೆ



ಯನ್ನು ತೋರಲೇಬಾರದು. ನಿಮಗೆ ಪ್ರಿಯವನ್ನುಂಟುಮಾಡಲೆಂದೇ ನಾವು ಈ ಸಮಯದಲ್ಲಿ ಸಹನೆಯನ್ನು ತಾಳಿದೆವು (ಅವರು ಮಲಗಿ ನಿದ್ರಿಸುತ್ತಿದ್ದಾಗ ನಾವು ಹೋಗಿ ಅವರನ್ನು ಸಂಹರಿಸಲಿಲ್ಲ ). ಈ ಕಾರಣದಿಂದಲೇ ನಿಶ್ಚಿಂತರಾಗಿ ವಿಶ್ರಾಂತಿಸುಖವನ್ನನುಭವಿಸಿದ ಆ ಪಾಂಡವರೀಗ ಹೆಚ್ಚಿನ ಬಲವುಳ್ಳವರಾಗಿರುತ್ತಾರೆ.

**ಸರ್ವಥಾ ಪರಿಹೀನಾಃ ಸ್ಮ ತೇಜಸಾ ಚ ಬಲೇನ ಚ ।**
**ಭವತಾ ಪಾಲ್ಯಮಾನಾಸ್ತೇ ವಿವರ್ಧನ್ತೇ ಪುನಃ ಪುನಃ ॥೮॥**

ನಾವಾದರೋ ತೇಜಸ್ಸಿನಿಂದಲೂ ಮತ್ತು ಬಲದಿಂದಲೂ ಸರ್ವಥಾ ಹೀನರಾಗುತ್ತಿದ್ದೇವೆ. ಆದರೆ ನಿಮ್ಮಿಂದ ರಕ್ಷಿಸಲ್ಪಡುತ್ತಿರುವ ಪಾಂಡವರಾದರೋ ಪುನಃ ಪುನಃ ವರ್ಧಿಸುತ್ತಲೇ ಇದ್ದಾರೆ. ಬ್ರಹ್ಮಾಸ್ತ್ರವೇ ಮೊದಲಾದ ಎಲ್ಲ ದಿವ್ಯಾಸ್ತ್ರಗಳೂ ವಿಶೇಷವಾಗಿ ನಿಮ್ಮಲ್ಲಿಯೇ ಪ್ರತಿಷ್ಠಿತವಾಗಿವೆ. ಪಾಂಡವರಾಗಲೀ, ನಾವಾಗಲೀ, ಲೋಕದಲ್ಲಿರುವ ಮತ್ತಾವ ಧನುರ್ಧಾರಿಗಳೇ ಆಗಲೀ–ಯುದ್ಧಮಾಡುತ್ತಿರುವ ನಿಮಗೆ ಸಮಾನರಾಗುವುದಿಲ್ಲ. ನಿಮಗೆ ಈ ಮಾತನ್ನು ನಾನು ಸತ್ಯವಾಗಿ ಹೇಳುತ್ತೇನೆ. ಸಕಲವಿಧವಾದ ಅಸ್ತ್ರಗಳನ್ನೂ ತಿಳಿದಿರುವ ನೀವು ಸುರಾಸುರ-ಗಂಧರ್ವರಿಂದ ಕೂಡಿದ ಈ ಎಲ್ಲ ಲೋಕಗಳನ್ನೂ ತಮ್ಮಲ್ಲಿರುವ ದಿವ್ಯಾಸ್ತ್ರಗಳಿಂದ ಸಂಹಾರಮಾಡಬಲ್ಲಿರಿ. ಇದರಲ್ಲಿ ಸಂಶಯವೇ ಇಲ್ಲ.

**ಸ ಭವಾನ್ಮರ್ಷಯತ್ಯೇತಾಂಸ್ತ್ವತ್ತೋ ಭೀತಾನ್ವಿಶೇಷತಃ ।**
**ಶಿಷ್ಯತ್ವಂ ವಾ ಪುರಸ್ಕೃತ್ಯ ಮಮ ವಾ ಮನ್ದಭಾಗ್ಯತಾಮ್ ॥೯॥**

ಅವರು ನಿಮ್ಮನ್ನು ಕಂಡರೆ ಭಯಭೀತರಾಗಿದ್ದರೂ, ಅವರು ನಿಮಗೆ ಪ್ರಿಯಶಿಷ್ಯರಾಗಿರುವ ಕಾರಣದಿಂದಲೋ ಅಥವಾ ನನ್ನ ದೌರ್ಭಾಗ್ಯದಿಂದಲೋ ನಿಮ್ಮಲ್ಲಿ ಇಂತಹ ಅತುಲಪರಾಕ್ರಮವಿದ್ದರೂ ನೀವು ಪಾಂಡವರ ವಿಷಯದಲ್ಲಿ ವಿಶೇಷವಾದ ಸಹನೆಯನ್ನೇ ತೋರುತ್ತಿರುವಿರಿ.”

ಮಹಾರಾಜ! ದ್ರೋಣರಿಗೆ ಹರ್ಷೋತ್ಸಾಹವನ್ನು ತುಂಬಬೇಕೆಂಬ ಇಚ್ಛೆಯಿಂದ ಹೀಗೆ ಹೇಳಿದ ನಿನ್ನ ಮಗನ ಮಾತನ್ನು ಕೇಳಿ ದ್ರೋಣರು ಬಹಳ ಕುಪಿತರಾದರು. ಆಕ್ರೋಶದಿಂದ ಕೂಡಿದ್ದ ದ್ರೋಣರು ದುರ್ಯೋಧನನನ್ನು ಕುರಿತು ಹೇಳಿದರು :

**ಸ್ಥವಿರಃ ಸನ್ಪರಂ ಶಕ್ತ್ಯಾ ಘಟೇ ದುರ್ಯೋಧನಾಹವೇ ।**
**ಅತಃ ಪರಂ ಮಯಾ ಕಾರ್ಯಂ ಕ್ಷುದ್ರಂ ವಿಜಯಗೃದ್ಧಿನಾ ॥೧೦॥**

“ದುರ್ಯೋಧನ! ನಾನು ಯದ್ಯಪಿ ವೃದ್ಧನೇ ಆಗಿದ್ದರೂ ಯುದ್ಧಭೂಮಿಯಲ್ಲಿ ನನ್ನ ಸಂಪೂರ್ಣವಾದ ಶಕ್ತಿಯನ್ನೂ ವಿನಿಯೋಗಿಸಿ ನಿನ್ನ ವಿಜಯಕ್ಕೋಸ್ಕರ ಪ್ರಯತ್ನಿಸುತ್ತಲೇ ಇದ್ದೇನೆ. ಇನ್ನು ಮುಂದೆ ವಿಜಯದ

ಆಶೆಯಿಂದ ನಾನು ನೀಚವಾದ ಕಾರ್ಯವನ್ನೂ ಮಾಡಬೇಕೆಂಬುದು ನಿನ್ನ ಅಭಿಪ್ರಾಯವಾಗಿರುವುದೇ?

**ಅನಸ್ತ್ರವಿದಯಂ ಸರ್ವೋ ಹನ್ತವ್ಯೋಽಸ್ತ್ರವಿದಾ ಜನಃ ।**
**ಯದ್ಭವಾನ್ಮನ್ಯತೇ ಚಾಪಿ ಶುಭಂ ವಾ ಯದಿ ವಾಶುಭಮ್ ।**
**ತದ್ವೈ ಕರ್ತಾಸ್ಮಿ ಕೌರವ್ಯ ವಚನಾತ್ತವ ನಾನ್ಯಥಾ ॥೧೧॥**

'ಇಲ್ಲಿರುವ ಯಾರೊಬ್ಬರೂ ದಿವ್ಯಾಸ್ತ್ರಗಳನ್ನು ತಿಳಿದವರಾಗಿಲ್ಲ. ಆದುದರಿಂದ ದಿವ್ಯಾಸ್ತ್ರಗಳನ್ನು ತಿಳಿದಿರುವ ನಾನು ಈ ಎಲ್ಲ ಜನರನ್ನೂ ಸಂಹರಿಸಬೇಕು'–ಹೀಗೆ ನೀನು ಭಾವಿಸುವೆಯಲ್ಲವೇ? ಕೌರವ್ಯನೇ! ಶುಭವೋ-ಅಶುಭವೋ (ಒಳ್ಳೆಯದೋ-ಕೆಟ್ಟುದೋ) ನಿನ್ನ ಮಾತಿನಿಂದ ನೀನು ಏನು ಹೇಳಿದೆಯೋ ಅದನ್ನೇ ಮಾಡುತ್ತೇನೆ. ಅದಕ್ಕೆ ವಿರುದ್ಧವಾಗಿ ಏನನ್ನೂ ಮಾಡುವುದಿಲ್ಲ.

**ನಿಹತ್ಯ ಸರ್ವಪಞ್ಚಾಲಾನ್ಯುದ್ಧೇ ಕೃತ್ವಾ ಪರಾಕ್ರಮಮ್ ।**
**ವಿಮೋಕ್ಷ್ಯೇ ಕವಚಂ ರಾಜನ್ಸತ್ಯೇನಾಯುಧಮಾಲಭೇ ॥೧೨॥**

ಯುದ್ಧದಲ್ಲಿ ಅಸಾಧಾರಣವಾದ ಪರಾಕ್ರಮವನ್ನು ತೋರುತ್ತಾ ಎಲ್ಲ ಪಾಂಚಾಲರನ್ನೂ ಸಂಹರಿಸಿದನಂತರವೇ ನಾನು ಈ ಕವಚವನ್ನು ಬಿಚ್ಚುತ್ತೇನೆ. ಈ ಮಾತನ್ನು ನಾನು ನನ್ನ ಧನುಸ್ಸಿನ ಮೇಲೆ ಆಣೆಯಿಟ್ಟು ಹೇಳುತ್ತೇನೆ.

ಆದರೆ ಬಳಲಿರುವ ಅರ್ಜುನನನ್ನು ಯುದ್ಧದಲ್ಲಿ ಸಂಹರಿಸಿಬಿಡಬಹುದೆಂದು ನೀನು ಭಾವಿಸಿರುವೆಯಲ್ಲವೇ? ಕೌರವ! ಅವನ ವೀರ್ಯವೆಷ್ಟೆಂಬುದನ್ನು ಸತ್ಯವಾಗಿ ಹೇಳುತ್ತೇನೆ ಕೇಳು. ಕುಪಿತನಾದ ಅರ್ಜುನನನ್ನು ದೇವತೆಗಳಾಗಲೀ, ಗಂಧರ್ವ-ಯಕ್ಷ-ರಾಕ್ಷಸರಾಗಲೀ ಯುದ್ಧದಲ್ಲಿ ಜಯಿಸಲು ಉತ್ಸಾಹವನ್ನು ತೋರುವುದಿಲ್ಲ (ಅರ್ಜುನನೊಡನೆ ಯುದ್ಧಕ್ಕೆ ಹೋದರೆ ಜಯವು ಖಂಡಿತವಾಗಿಯೂ ಲಭಿಸಲಾರದೆಂಬುದೇ ಅವರ ಈ ನಿರುತ್ಸಾಹಕ್ಕೆ ಕಾರಣವಾಗಿರುತ್ತದೆ). ಖಾಂಡವದಾಹದ ಕಾಲದಲ್ಲಿ ಅದ್ಭುತವಾದ ಮಳೆಗರೆಯುತ್ತಾ ಭಗವಾನ್ ಇಂದ್ರದೇವನೇ ಅರ್ಜುನನನ್ನು ಎದುರಿಸಿದನು. ಆ ಸಮಯದಲ್ಲಿ ಮಹಾತ್ಮನಾದ ಪಾಂಡವನು ಇಂದ್ರನನ್ನು ಬಾಣಗಳಿಂದಲೇ ತಡೆದುನಿಲ್ಲಿಸಿದನು. ಯಕ್ಷ-ನಾಗ-ದೈತ್ಯರೂ ಮತ್ತು ಬಲಗರ್ವಿತರಾದ ಇತರ

ವೀರರೂ ಪುರುಷಶ್ರೇಷ್ಠನಾದ ಅರ್ಜುನನಿಂದ ಹತರಾದರು. ಈ ವಿಷಯವೂ ನಿನಗೆ ತಿಳಿದೇ ಇದೆ.

**ಗನ್ಧರ್ವಾ ಘೋಷಯಾತ್ರಾಯಾಂ ಚಿತ್ರಸೇನಾದಯೋ ಜಿತಾಃ ।**
**ಯೂಯಂ ತೈರ್ಹ್ರಿಯಮಾಣಾಶ್ಚ ಮೋಕ್ಷಿತಾ ದೃಢಧನ್ವನಾ ॥೧೨॥**

ಘೋಷಯಾತ್ರೆಯ ಸಮಯದಲ್ಲಿ ಅರ್ಜುನನು ಚಿತ್ರಸೇನಾದಿ ಗಂಧರ್ವರನ್ನು ಜಯಿಸಿದನು. ಆಗ ಗಂಧರ್ವರಿಂದ ಸೆಳೆದೆಳೆಯಲ್ಪಟ್ಟ ನೀವೆಲ್ಲರೂ ದೃಢಧನ್ವನಾದ ಅರ್ಜುನನಿಂದಲೇ ವಿಮೋಚಿತರಾದಿರಿ.

ದೇವತೆಗಳ ಶತ್ರುಗಳಾದ ಮತ್ತು ದೇವತೆಗಳಿಂದಲೂ ಅವಧ್ಯರಾದ ನಿವಾತಕವಚರೂ ಸಹ ಆ ವೀರನಾದ ಅರ್ಜುನನಿಂದಲೇ ನಿರ್ಜಿತರಾದರು. ಹಿರಣ್ಯಪುರವಾಸಿಗಳಾಗಿದ್ದ ಸಾವಿರಾರು ದಾನವರನ್ನು ಪುರುಷವ್ಯಾಘ್ರನಾದ ಅರ್ಜುನನು ಜಯಿಸಿದನು. ಇಂತಹ ಅದ್ಭುತಸಾಹಸಕಾರ್ಯವು ಮಾನವ ಸಾಮಾನ್ಯನಿಂದ ಹೇಗೆ ತಾನೇ ಸಾಧ್ಯವಾಗುತ್ತದೆ? ನಾವುಗಳೆಷ್ಟೇ ಪ್ರಯತ್ನ ಪೂರ್ವಕವಾಗಿ ಯುದ್ಧಮಾಡುತ್ತಿದ್ದರೂ ನಮ್ಮ ಈ ಅಪಾರಸೈನ್ಯವೂ ನಿನ್ನ ಸಮಕ್ಷದಲ್ಲಿಯೇ ಪಾಂಡುಪುತ್ರನಾದ ಅರ್ಜುನನಿಂದ ವಿಧ್ವಂಸಿತವಾಯಿತು."

ಮಹಾರಾಜ! ಈ ಪ್ರಕಾರವಾಗಿ ಅರ್ಜುನನನ್ನು ಪ್ರಶಂಸೆಮಾಡುತ್ತಿದ್ದ ದ್ರೋಣರನ್ನು ಕುರಿತು ಕುಪಿತನಾದ ನಿನ್ನ ಮಗನು ಪುನಃ ಹೇಳಿದನು :

"ಆಚಾರ್ಯರೇ! (ಅರ್ಜುನನ ಸಂಬಂಧವಾದ ತಮ್ಮ ಪ್ರಶಂಸೆಯನ್ನು ಸಾಕುಮಾಡಿರಿ). ನಾನು, ದುಃಶಾಸನ, ಕರ್ಣ ಮತ್ತು ನನ್ನ ಮಾವನಾದ ಶಕುನಿ–ಈ ನಾಲ್ವರೂ ಸೇರಿ ನಮ್ಮ ಸೈನ್ಯವನ್ನು ಎರಡು ಭಾಗಗಳಾಗಿ ವಿಂಗಡಿಸಿಕೊಂಡು ಯುದ್ಧದಲ್ಲಿ ಅರ್ಜುನನನ್ನು ಸಂಹರಿಸುತ್ತೇವೆ."

ದುರ್ಯೋಧನನು ಅಸಹನೆಯಿಂದ ಹೇಳಿದ ಮಾತನ್ನು ಕೇಳಿ ದ್ರೋಣರು ನಸುನಗುತ್ತಾ 'ಸ್ವಸ್ತಿ ತೇಽಸ್ತು'–'ನಿನಗೆ ಮಂಗಳವಾಗಲಿ' ಎಂದು ಹೇಳಿ ದುರ್ಯೋಧನನಿಗೆ ಅರ್ಜುನನೊಡನೆ ಯುದ್ಧಮಾಡಲು ಅನುಮತಿಯನ್ನಿತ್ತು ಮತ್ತೂ ಕೆಲವು ಮಾತುಗಳನ್ನು ಹೇಳಿದರು :

**ಕೋ ಹಿ ಗಾಣ್ಡೀವಧನ್ವಾನಂ ಜ್ವಲನ್ತಮಿವ ತೇಜಸಾ ।**
**ಅಕ್ಷಯಂ ಕ್ಷಪಯೇತ್ಕಶ್ಚಿತ್ಕ್ಷತ್ರಿಯಃ ಕ್ಷತ್ರಿಯರ್ಷಭಮ್ ॥೨೪॥**

"ಆತ್ಮತೇಜಸ್ಸಿನಿಂದ ಪ್ರಜ್ವಲಿಸುವ ಕ್ಷತ್ರಿಯರ್ಷಭನಾದ, ಗಾಂಡೀವ ಧನುರ್ಧರನಾದ, ನಾಶರಹಿತನಾದ ಅರ್ಜುನನನ್ನು ಈ ಭೂಮಿಯಲ್ಲಿರುವ ಯಾವ ಕ್ಷತ್ರಿಯನು ವಿನಾಶಮಾಡಬಲ್ಲನು?

**ತಂ ನ ವಿತ್ತಪತಿರ್ನೇನ್ದ್ರೋ ನ ಯಮೋ ನ ಜಲೇಶ್ವರಃ ।**
**ನಾಸುರೋರಗರಕ್ಷಾಂಸಿ ಕ್ಷಪಯೇಯುಃ ಸಹಾಯುಧಮ್ ॥೨೫॥**

ಕುಬೇರನಾಗಲೀ, ಇಂದ್ರನಾಗಲೀ, ಯಮನಾಗಲೀ, ವರುಣನಾಗಲೀ, ಅಸುರೋರಗ-ರಾಕ್ಷಸರಾಗಲೀ, ಧನುಷ್ಮಂತನಾದ ಅರ್ಜುನನನ್ನು ಖಂಡಿತ ವಾಗಿಯೂ ನಾಶಗೊಳಿಸಲಾರರು.

**ಮೂಢಾಸ್ತ್ವೇತಾನಿ ಭಾಷನ್ತೇ ಯಾನೀಮಾನ್ಯಾತ್ಥ ಭಾರತ ।**
**ಯುದ್ಧೇ ಹ್ಯರ್ಜುನಮಾಸಾದ್ಯ ಸ್ವಸ್ತಿಮಾನ್ಕೋ ವ್ರಜೇದ್ಗೃಹಾನ್ ॥೨೬॥**

ನೀನು ಹೇಳಿದ ಈ ಮಾತುಗಳನ್ನು ('ನಾವು ನಾಲ್ವರು ಹೋಗಿ ಅರ್ಜುನನನ್ನು ಸಂಹರಿಸುತ್ತೇವೆ'–ಮುಂತಾದ ಮಾತುಗಳನ್ನು) ಮೂಢ ರಾದವರು ಮಾತ್ರವೇ ಆಡುತ್ತಾರೆ. ಅರ್ಜುನನೊಡನೆ ಯುದ್ಧದಲ್ಲಿ ತೊಡ ಗುವ ಯಾರು ತಾನೇ ಸ್ವಸ್ತಿಮಂತರಾಗಿ (ಕುಶಲಿಗಳಾಗಿ) ಮನೆಗೆ ಹಿಂದಿರುಗು ತ್ತಾರೆ?

ದುರ್ಯೋಧನ! ನೀನು ನಿಷ್ಠುರವಾಗಿ ಮಾತನಾಡುವವನು. ಪಾಪ ಪೂರ್ಣವಾದ ಸಂಕಲ್ಪವನ್ನು ಹೊಂದಿರತಕ್ಕವನು. ಮನಸ್ಸಿನಲ್ಲಿ ಎಲ್ಲರ ವಿಷಯದಲ್ಲಿಯೂ ಸಂದೇಹಪಡತಕ್ಕವನು. ನಿನಗೆ ಶ್ರೇಯಸ್ಕಾಮಿಗಳಾದ ವರ, ನಿನ್ನ ಹಿತದಲ್ಲಿಯೇ ಸರ್ವದಾ ಯುಕ್ತರಾಗಿರತಕ್ಕವರ ವಿಷಯದಲ್ಲಿಯೂ ನೀನು ಇಂತಹ ಅತಿನಿಷ್ಠುರವಾದ ಮಾತುಗಳನ್ನಾಡಲು ಇಚ್ಛಿಸುವೆ.

ದುರ್ಯೋಧನ! ಅರ್ಜುನನ ಸಮೀಪಕ್ಕೆ ನೀನೇ ಹೋಗು. ಸಾಧ್ಯ ವಾದಷ್ಟು ಬೇಗ ಅವನನ್ನು ಸಂಹರಿಸು. ನೀನು ಸತ್ಕುಲಪ್ರಸೂತನೂ, ಕ್ಷತ್ರಿ ಯನೂ ಆಗಿರುವೆ. ನಿನಗೂ ಯುದ್ಧಮಾಡಬೇಕೆನ್ನುವ ಅಭಿಲಾಷೆಯಿದೆ. ಆದುದರಿಂದ ನಿರಪರಾಧಿಗಳಾದ ಕ್ಷತ್ರಿಯಯೋಧರನ್ನು ಏಕೆ ಸಂಹರಿಸುವೆ? (ಅರ್ಜುನನನ್ನು ಅಥವಾ ಯುಧಿಷ್ಠಿರನನ್ನು ಸಂಹರಿಸಿಬಿಟ್ಟರೆ ಉಳಿದವರನ್ನು ಸಂಹರಿಸುವ ಅಗತ್ಯವೇ ಇಲ್ಲ).

**ತ್ವಮಸ್ಯ ಮೂಲಂ ವೈರಸ್ಯ ತಸ್ಮಾದಾಸಾದಯಾರ್ಜುನಮ್ ।**
**ಏಷ ತೇ ಮಾತುಲಃ ಪ್ರಾಜ್ಞಃ ಕ್ಷತ್ರಧರ್ಮಮನುವ್ರತಃ ।**
**ದುರ್ದ್ಯೂತದೇವೀ ಗಾನ್ಧಾರೇ ಪ್ರಯಾತ್ವರ್ಜುನಮಾಹವೇ ॥೩೦॥**

ಜ್ಞಾತಿಗಳ ಈ ಪರಸ್ಪರವೈರಕ್ಕೆ ನೀನೇ ಮೂಲಕಾರಣನಾಗಿರುವೆ. ಆದುದರಿಂದ ನೀನು ಅರ್ಜುನನೊಡನೆ ಯುದ್ಧಮಾಡಲು ಹೋಗುವುದು ಯುಕ್ತವಾಗಿಯೇ ಇದೆ. ಧಾರಾಳವಾಗಿ ಹೋಗಬಹುದು. ನಿನ್ನ ಸೋದರ ಮಾವನಂತೂ ಮಹಾಪ್ರಾಜ್ಞನು. ಕ್ಷತ್ರಧರ್ಮದಲ್ಲಿಯೇ ಸದಾ ನಿರತನಾಗಿರ ತಕ್ಕವನು. ಆದುದರಿಂದಲೇ ಅವನು ವಂಚನೆಯಿಂದ ದ್ಯೂತವಾಡುವುದರಲ್ಲಿ ಸಂಪೂರ್ಣಪರಿಶ್ರಮವನ್ನೂ ಹೊಂದಿರುತ್ತಾನೆ. ಆದುದರಿಂದ ಇವನೂ ಸಹ ಅರ್ಜುನನೊಡನೆ ಯುದ್ಧಮಾಡಲು ಹೋಗಲಿ. ಇವನಿಗೆ ಪಾಂಡವರನ್ನು ಜಯಿಸಲು ತಕ್ಕುದಾದ ಯೋಗ್ಯತೆಯೂ ಇದೆ.

**ಏಷೋಽಕ್ಷಕುಶಲೋ ಜಿಹ್ಮೋ ದ್ಯೂತಕೃತ್ಕಿತವಃ ಶಠಃ ।**
**ದೇವಿತಾ ನಿಕೃತಿಪ್ರಜ್ಞೋ ಯುಧಿ ಜೇಷ್ಯತಿ ಪಾಣ್ಡವಾನ್ ॥೩೧॥**

ಇವನು ಅಕ್ಷವಿದ್ಯೆಯಲ್ಲಿ ಮಹಾಕುಶಲನು. ವಕ್ರಬುದ್ಧಿಯವನು. ಜೂಜಿನ ಜಾಲವನ್ನು ವ್ಯವಸ್ಥೆಗೊಳಿಸುವವನು. ಮಹಾವಂಚಕನು. ಶಠನು. ಜೂಜುಕೋರನು. ಮೋಸದಲ್ಲಿ ಮಹಾಪ್ರಾಜ್ಞನು. ಇಂತಹ ಸಕಲ ಸದ್ಗುಣಸಂಪನ್ನನಾದ ನಿನ್ನ ಮಾವನಾದ ಶಕುನಿಯು ಯುದ್ಧದಲ್ಲಿ ಪಾಂಡವ ರನ್ನು ಜಯಿಸಿಯೇ ಜಯಿಸುತ್ತಾನೆ. ನೀನು ಏಕಾಂತದಲ್ಲಿ ಕರ್ಣನೊಡನೆ ಸೇರಿಕೊಂಡು ಪರಮಹೃಷ್ಟನಾದವನಂತೆ ತೋರ್ಪಡಿಸಿಕೊಳ್ಳುತ್ತಾ ಮೋಹ ಪರವಶನಾಗಿ ಧೃತರಾಷ್ಟ್ರನಿಗೆ ಕೇಳಿಸುವಂತೆ ಹಲವು ಬಾರಿ ಈ ಮಾತುಗಳನ್ನು ಹೇಳಿರುವೆ.

**ಅಹಂ ಚ ತಾತ ಕರ್ಣಶ್ಚ ಭ್ರಾತಾ ದುಃಶಾಸನಶ್ಚ ಮೇ ।**
**ಪಾಣ್ಡುಪುತ್ರಾನ್ಹನಿಷ್ಯಾಮಃ ಸಹಿತಾಃ ಸಮರೇ ತ್ರಯಃ ॥೩೪॥**

"ತಾತ! ನಾನು, ಕರ್ಣ ಮತ್ತು ತಮ್ಮನಾದ ದುಃಶಾಸನ ಈ ಮೂವರೂ ಸೇರಿ ಪಾಂಡುವಿನ ಮಕ್ಕಳನ್ನು ಸಂಹರಿಸಿಬಿಡುತ್ತೇವೆ." ಹೀಗೆ ನೀನು ಗಳಹುತ್ತಿದ್ದುದನ್ನು ನಾವು ಪ್ರತಿಸಭೆಯಲ್ಲಿಯೂ ಕೇಳುತ್ತಲೇ ಇದ್ದೆವು.

**ಅನುತಿಷ್ಠ ಪ್ರತಿಜ್ಞಾಂ ತಾಂ ಸತ್ಯವಾಗ್ಭವ ತೈಃ ಸಹ ।**
**ಏಷ ತೇ ಪಾಣ್ಡವಃ ಶತ್ರುರವಿಶಙ್ಕ್ಯೋಽಗ್ರತಃ ಸ್ಥಿತಃ ।**
**ಕ್ಷತ್ರಧರ್ಮಮವೇಕ್ಷಸ್ವ ಶ್ಲಾಘ್ಯಸ್ತವ ವಧೋ ಜಯಾತ್ ॥೩೫॥**

ಆಗ ಮಾಡಿದ ಪ್ರತಿಜ್ಞೆಗೆ ಅನುಸಾರವಾಗಿ ನೀನೀಗ ಆಚರಿಸು. ಅವರೊಡನೆ ಕೂಡಿಕೊಂಡು ಅರ್ಜುನನನ್ನು ಸಂಹರಿಸಿ ಸತ್ಯವಾದಿಯಾಗು. ಆ ನಿನ್ನ ಶತ್ರುವಾದ ಅರ್ಜುನನೇ ಯಾವ ವಿಧವಾದ ಶಂಕೆಯೂ (ಭಯ ಲೇಶವೂ) ಇಲ್ಲದೇ ನಿನ್ನ ಮುಂದೆ ನಿಂತಿದ್ದಾನೆ. ಕ್ಷತ್ರಿಯಧರ್ಮದ ಕಡೆಗೆ ದೃಷ್ಟಿಯಿಟ್ಟು ಯುದ್ಧಮಾಡು (ಅರ್ಜುನನೊಡನೆ ನೀನು ಜಯಗಳಿಸು ವುದಂತೂ ಒತ್ತಟ್ಟಿಗಿರಲಿ). ಅವನೊಡನೆ ನೀನು ಸಾಹಸಪೂರ್ಣವಾಗಿ ಯುದ್ಧಮಾಡಿ ಅವನಿಂದ ಹತನಾದರೂ ಅದೂ ನಿನಗೆ ಶ್ಲಾಘ್ಯವೇ ಆಗಿರು ತ್ತದೆ. ಅದರಿಂದಲೂ ನೀನು ಎಲ್ಲರ ಪ್ರಶಂಸೆಗೂ ಪಾತ್ರನಾಗುವೆ.

**ದತ್ತಂ ಭುಕ್ತಮಧೀತಂ ಚ ಪ್ರಾಪ್ತಮೈಶ್ವರ್ಯಮೀಪ್ಸಿತಮ್ ।**
**ಕೃತಕೃತ್ಯೋಽನೃಣಶ್ಚಾಸಿ ಮಾ ಭೈರ್ಯುಧ್ಯಸ್ವ ಪಾಣ್ಡವಮ್ ॥೩೬॥**

ದುರ್ಯೋಧನ! ನೀನು ಅನೇಕಪ್ರಕಾರವಾಗಿ ದಾನಮಾಡಿರುವೆ. ಸುಖೋಪಭೋಗಗಳನ್ನು ಅನುಭವಿಸಿರುವೆ. ವೇದಾಧ್ಯಯನವನ್ನು ಮಾಡಿ ರುವೆ. ನಿನ್ನ ಆಸೆಯಿದ್ದಷ್ಟು ಯಥೇಚ್ಛವಾದ ಐಶ್ವರ್ಯವನ್ನೂ ಪಡೆದು ಕೊಂಡಿರುವೆ. ದೇವರ್ಷಿ-ಪಿತೃಋಣಗಳಿಂದಲೂ ಮುಕ್ತನಾಗಿರುವೆ. ಆದುದ ರಿಂದ ನೀನು ಭಯಪಡಬೇಡ. ಅರ್ಜುನನೊಡನೆ ಧೈರ್ಯವಾಗಿ ಯುದ್ಧ ಮಾಡು."

ಮಹಾರಾಜ! ದ್ರೋಣರು ನಿನ್ನ ಮಗನೊಡನೆ ಹೀಗೆ ಹೇಳಿ ಶತ್ರುಗಳಿದ್ದ ಸ್ಥಳಕ್ಕೆ ಯುದ್ಧಮಾಡಲು ಹೊರಟುಹೋದರು. ಅನಂತರ ದುರ್ಯೋಧನನ ಆಜ್ಞೆಯಂತೆ ಸೈನ್ಯವು ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟಿತು. ಬಹಳ ಘೋರವಾದ ಯುದ್ಧವು ಪ್ರಾರಂಭವಾಯಿತು.

೧೮೫ನೆಯ ಅಧ್ಯಾಯವು ಮುಗಿಯಿತು.

೧೮೬ನೆಯ ಅಧ್ಯಾಯ ದ್ರೋಣವಧಪರ್ವ (ಮುಂದುವರಿದಿದೆ.)

## ಪಾಂಡವವೀರರು ದ್ರೋಣರನ್ನು ಆಕ್ರಮಿಸಿದುದು : ದ್ರುಪದಪೌತ್ರರು, ದ್ರುಪದ-ವಿರಾಟ ಇವರೇ ಮೊದಲಾದವರ ವಧೆ : ಧೃಷ್ಟದ್ಯುಮ್ನನ ಪ್ರತಿಜ್ಞೆ

ಸಂಜಯನು ಮುಂದುವರಿದು ಹೇಳುತ್ತಾನೆ :

“ಮಹಾರಾಜ! *ಮೂರು ಭಾಗಗಳು ಮಾತ್ರವೇ ಉಳಿದಿದ್ದ ಆ ರಾತ್ರಿಯಲ್ಲಿ ವಿಶ್ರಾಂತಿಯನ್ನನುಭವಿಸಿ ಸಂಹೃಷ್ಟರಾಗಿದ್ದ ಕೌರವರಿಗೂ ಮತ್ತು ಪಾಂಡವರಿಗೂ ಯುದ್ಧವು ಪ್ರಾರಂಭವಾಯಿತು. ಸ್ವಲ್ಪ ಹೊತ್ತು ಕಳೆದನಂತರ ಆದಿತ್ಯನ ಮುಂಭಾಗದಲ್ಲಿರುವ ಅರುಣನು ಚಂದ್ರನ ಪ್ರಭೆಯನ್ನು ಅಪಹರಿಸುತ್ತಾ, ಅಂತರಿಕ್ಷವನ್ನೇ ಕೆಂಪಾಗಿ ಮಾಡುತ್ತಾ ಉದಯಿಸಿದನು. (ಅರುಣೋದಯವಾಯಿತು). ಅರುಣನಿಂದ ಕೆಂಪಾಗಿ ಮಾಡಲ್ಪಟ್ಟಿದ್ದ ಪೂರ್ವದಿಕ್ಕಿನಲ್ಲಿ ಸೂರ್ಯದೇವನ ಮಂಡಲವು ಸುವರ್ಣಮಯವಾದ ಚಕ್ರದಂತೆಯೇ ಪ್ರಕಾಶಿಸತೊಡಗಿತು.

**ತತೋ ರಥಾಶ್ವಾಂಶ್ಚ ಮನುಷ್ಯಯಾನಾ-**
**ನ್ಯುತ್ಸೃಜ್ಯ ಸರ್ವೇ ಕುರುಪಾಣ್ಡುಯೋಧಾಃ ।**
**ದಿವಾಕರಸ್ಯಾಭಿಮುಖಂ ಜಪನ್ತಃ**
**ಸನ್ಧ್ಯಾಗತಾಃ ಪ್ರಾಞ್ಜಲಯೋ ಬಭೂವುಃ ॥೪॥**

ಸುವರ್ಣಚಕ್ರದಂತೆ ಪ್ರಕಾಶಮಾನವಾಗಿದ್ದ ಸೂರ್ಯಮಂಡಲವನ್ನು ಕಾಣುತ್ತಲೇ ಕುರು-ಪಾಂಡವಯೋಧರು ರಥಗಳಿಂದಲೂ, ಗಜಾಶ್ವಯಾನ ಗಳಿಂದಲೂ ಕೆಳಗಿಳಿದು ಸಂಧ್ಯಾವಂದನೆಯಲ್ಲಿ ತತ್ಪರರಾಗಿ ಬದ್ಧಾಂಜಲಿ

---

* ತ್ರಿಭಾಗಮಾತ್ರಶೇಷಾಯಾಂ–ಎಂಬ ಪದವು ಇಲ್ಲಿದೆ. ತ್ರಿಭಾಗವೇ ಉಳಿದಿದ್ದ ರಾತ್ರಿಯಲ್ಲಿ ಎಂದರ್ಥ. ಮೂರು ಭಾಗಗಳು ಎಂದರೆ ಯಾವುದರಲ್ಲಿ ಮೂರು ಭಾಗಗಳು? ರಾತ್ರಿಯಲ್ಲಿಯೂ ಮತ್ತು ಹಗಲಿನಲ್ಲಿಯೂ ಹದಿನೈದು-ಹದಿನೈದು ಮುಹೂರ್ತಗಳು ಬರುತ್ತದೆ. ನಲವತ್ತೆಂಟು ನಿಮಿಷಕ್ಕೆ ಒಂದು ಮುಹೂರ್ತ. ಮೂರು ಭಾಗಗಳು ಎಂದರೆ ಹದಿನೈದು ಮುಹೂರ್ತಗಳಲ್ಲಿ ಮೂರು ಮುಹೂರ್ತಗಳು ಉಳಿದಿವೆ ಎಂದರ್ಥ. ಅರ್ಥಾತ್ ೧೪೪ ನಿಮಿಷಗಳು ಅಥವಾ ೨ ಗಂಟೆ ೨೪ ನಿಮಿಷಗಳು ರಾತ್ರಿಯಲ್ಲಿ ಉಳಿದಿವೆ–ಎಂಬ ಅಭಿಪ್ರಾಯ.

ಗಳಾಗಿ ಸೂರ್ಯನಿಗೆ ಅಭಿಮುಖರಾಗಿ ನಿಂತು ಸೂರ್ಯಮಹಾಮಂತ್ರವನ್ನು ಜಪಮಾಡುತ್ತಿದ್ದರು.

ಕೌರವರ ಸೈನ್ಯವು ದುರ್ಯೋಧನನ ಯೋಜನೆಯಂತೆ ಎರಡು ಭಾಗ ಗಳಾಗಿ ವಿಂಗಡಿಸಲ್ಪಟ್ಟನಂತರ ದ್ರೋಣರು ದುರ್ಯೋಧನನನ್ನು ಮುಂದೆ ಮಾಡಿಕೊಂಡು ಪಾಂಡು-ಪಾಂಚಾಲಸೈನಿಕರ ಮೇಲೆ ದಾಳಿಯನ್ನು ಉಪ ಕ್ರಮಿಸಿದರು. ಕೌರವರು ತಮ್ಮ ಸೈನ್ಯವನ್ನು ಎರಡು ಭಾಗಗಳಾಗಿ ವಿಂಗಡಿಸಿದುದನ್ನು ಕಂಡು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು :

"ಅರ್ಜುನ! ಶತ್ರುಗಳನ್ನು ಎಡಕ್ಕೆ ಬಿಟ್ಟುಕೊಂಡು, ದ್ರೋಣರನ್ನು ಬಲಭಾಗದಲ್ಲಿ ಬಿಟ್ಟುಕೊಂಡು (ಪ್ರದಕ್ಷಿಣಾಕಾರವಾಗಿ) ಮುಂದೆಹೋಗು."

ಧನಂಜಯನು ಹಾಗೆಯೇ ಆಗಲೆಂದು ಶ್ರೀಕೃಷ್ಣನಿಗೆ ಅನುಮತಿಯಿತ್ತ ನಂತರ ಮಹಾಧನುಷ್ಮಂತನಾದ ಅರ್ಜುನನು ದ್ರೋಣ-ಕರ್ಣರಿಬ್ಬರನ್ನೂ ಅವರ ಎಡಭಾಗದ ಕಡೆಯಿಂದ ಪ್ರದಕ್ಷಿಣೆಮಾಡಿದನು. ಶ್ರೀಕೃಷ್ಣನ ಅಭಿಪ್ರಾಯವೇನೆಂಬುದನ್ನು ತಿಳಿದುಕೊಂಡ ಪರಪುರಂಜಯನಾದ ಭೀಮ ಸೇನನು ರಣರಂಗದ ಅಗ್ರಭಾಗದಲ್ಲಿ ಉಪಸ್ಥಿತನಾಗಿದ್ದ ಅರ್ಜುನನನ್ನು ಕುರಿತು ಹೇಳಿದನು :

"ಅರ್ಜುನ! ಅರ್ಜುನ! ಬೀಭತ್ಸುವೇ! ಈ ನನ್ನ ಮಾತನ್ನು ಕೇಳು. ಯಾವ ಪ್ರಯೋಜನಕ್ಕಾಗಿ ಕ್ಷತ್ರಿಯಾಣಿಯು ಮಕ್ಕಳನ್ನು ಹಡೆಯು ತ್ತಾಳೆಯೋ–ಅಂತಹ ಪ್ರಯೋಜನವನ್ನು ಪಡೆಯಬೇಕಾದ ಕಾಲವೀಗ ಸನ್ನಿಹಿತವಾಗಿದೆ. ಅಂತಹ ಕಾಲವು ಪ್ರಾಪ್ತವಾದಾಗಲೂ ನೀನು ಮಾಡ ಬೇಕಾದ ಕಾರ್ಯವನ್ನು ಪೂರೈಸಿ ಶ್ರೇಯಸ್ಸನ್ನು ಪಡೆಯದಿದ್ದ ಪಕ್ಷದಲ್ಲಿ ಇದುವರೆಗೂ ವೀರ್ಯ-ಪರಾಕ್ರಮ-ಸದ್ಗುಣಗಳಿಂದ ಸಂಭಾವಿತನ ರೂಪ ದಿಂದ ಕಾಣುತ್ತಿದ್ದ ನೀನು ಅಸಂಭಾವಿತನ (ಅಯೋಗ್ಯನ) ರೂಪವನ್ನು ಪಡೆಯುವೆ. ನಮ್ಮ ವಿಷಯದಲ್ಲಿ ಅತಿಕಠೋರವಾಗಿ ವರ್ತಿಸುವವನಾಗುವೆ.

ಯೋಧಶ್ರೇಷ್ಠನೇ! ನೀನು ನಿನ್ನ ಪರಾಕ್ರಮದ ಮೂಲಕವಾಗಿ ಸತ್ಯ, ಲಕ್ಷ್ಮೀ, ಧರ್ಮ ಮತ್ತು ಯಶಸ್ಸುಗಳ ಋಣವನ್ನು ತೀರಿಸು. ಶತ್ರುಸೈನ್ಯವನ್ನು ಬಲಕ್ಕೆ ಬಿಟ್ಟುಕೊಂಡು ಭಗ್ನಗೊಳಿಸು."

ಮಹಾರಾಜ! ಅರ್ಜುನನು ಭೀಮನಿಂದಲೂ, ಕೇಶವನಿಂದಲೂ ಪ್ರೇರಿತನಾಗಿ ಕರ್ಣ-ದ್ರೋಣರಿಬ್ಬರನ್ನೂ ಆಕ್ರಮಿಸಿ ನಾಲ್ಕು ಕಡೆಗಳಿಂದಲೂ ಮುತ್ತಿಗೆ ಹಾಕಿದನು. ಕ್ಷತ್ರಿಯಪುಂಗವರು ಅತ್ಯಂತಪರಾಕ್ರಮದಿಂದ ಎಷ್ಟೇ ಪ್ರಯತ್ನಿಸಿದರೂ ರಣಾಂಗಣದ ಅಗ್ರಭಾಗಕ್ಕೆ ಬರುತ್ತಿದ್ದ ಕ್ಷತ್ರಿಯಶ್ರೇಷ್ಠರನ್ನು ಬಾಣಾಗ್ನಿಯಿಂದ ದಹಿಸುತ್ತಿದ್ದ, ಅಗ್ನಿಯೋಪಾದಿಯಲ್ಲಿ ಕ್ಷಣ-ಕ್ಷಣಕ್ಕೂ ವರ್ಧಿಸುತ್ತಿದ್ದ, ಮಹಾಪರಾಕ್ರಮಿಯಾದ ಅರ್ಜುನನನ್ನು ತಡೆಯಲು ಶಕ್ತರಾಗಲಿಲ್ಲ. ಅನಂತರ ದುರ್ಯೋಧನ, ಕರ್ಣ, ಸುಬಲನ ಮಗನಾದ ಶಕುನಿ–ಈ ಮೂವರೂ ಬಾಣಗಳ ಸಮೂಹದಿಂದ ಕುಂತೀಪುತ್ರನಾದ ಧನಂಜಯನನ್ನು ಅಭಿಷೇಚಿಸಿದರು. ಉತ್ತಮವಾದ ಅಸ್ತ್ರಗಳನ್ನು ತಿಳಿದವರಲ್ಲಿ ಶ್ರೇಷ್ಠನಾದ ಅರ್ಜುನನು ಆ ಎಲ್ಲ ಕುರುಯೋಧರ ಅಸ್ತ್ರಗಳನ್ನೂ ನಿರರ್ಥಕಗೊಳಿಸಿ (ಲೆಕ್ಕಿಸದೆ) ಪುನಃ ಅವರ ಮೇಲೆ ಬಾಣಗಳ ಮಳೆಗರೆದನು. ಲಘುಹಸ್ತನಾದ, ಜಿತೇಂದ್ರಿಯನಾದ ಧನಂಜಯನು ಉತ್ತಮಾಸ್ತ್ರಗಳಿಂದ ಕುರುಯೋಧರು ಬಿಟ್ಟ ಅಸ್ತ್ರಗಳೆಲ್ಲವನ್ನೂ ನಿವಾರಣೆಮಾಡಿಕೊಂಡು ದುರ್ಯೋಧನಾದಿಗಳನ್ನು ನಿಶಿತವಾದ ಹತ್ತು-ಹತ್ತು ಬಾಣಗಳಿಂದ ಪ್ರಹರಿಸಿ ದನು. ಆ ಸಮಯದಲ್ಲಿ ಘೋರವಾದ ಧೂಳಿನ ರಾಶಿಯು ಮೇಲೆದ್ದು ಸೈನಿಕರ ಮೇಲೆ ಸುರಿಯತೊಡಗಿತು. ಬಾಣಗಳ ವೃಷ್ಟಿಯೂ ಆಗುತ್ತಿದ್ದಿತು. ಧೂಳಿನ ಮತ್ತು ಬಾಣಗಳ ವೃಷ್ಟಿಯಿಂದಾಗಿ ಘೋರವಾದ ಕತ್ತಲೆಯು ಆವರಿಸಿತು. ದೊಡ್ಡ ಕೋಲಾಹಲಶಬ್ದವಾಗತೊಡಗಿತು. ಅಂತಹ ಅವಸ್ಥೆಯಲ್ಲಿ ಆಕಾಶ, ಭೂಮಿ, ದಿಕ್ಕುಗಳು ಯಾವುದೊಂದೂ ತಿಳಿಯುತ್ತಲೇ ಇರಲಿಲ್ಲ. ಸೈನಿಕರ ಪದಸಂಘಟ್ಟನೆಗಳಿಂದ ಹುಟ್ಟಿದ ಧೂಳಿನಿಂದ ಆಚ್ಛಾದಿತವಾಗಿ ಎಲ್ಲವೂ ಅಂಧಕಾರಮಯವಾಗಿಯೇ (ಕತ್ತಲಿನಂತೆಯೇ) ಕಾಣಿಸುತ್ತಿದ್ದಿತು. ನಾವಾಗಲೀ, ಅವರಾಗಲೀ–ಯಾರು ಯಾರೆಂದು ಪರಸ್ಪರವಾಗಿ ತಿಳಿದುಕೊಳ್ಳಲೂ ಸಾಧ್ಯವಾಗುತ್ತಿರಲಿಲ್ಲ. ನಾಮ-ಗೋತ್ರಗಳನ್ನು ಹೇಳಿದ ನಂತರವೇ ಪರಸ್ಪರವಾಗಿ ಯಾರು–ಯಾರೆಂಬುದನ್ನು ತಿಳಿದುಕೊಂಡು ಯುದ್ಧಮಾಡುತ್ತಿದ್ದೆವು. ರಥಹೀನರಾದನಂತರ ರಥಗಳಿಂದಿಳಿದು ಎರಡು ಕಡೆಗಳ ಯೋಧರೂ ಎದುರು-ಬದುರಾಗಿ ನಿಂತು ಒಬ್ಬರು ಮತ್ತೊಬ್ಬರ

ಜುಟ್ಟನ್ನೂ, ಕವಚಗಳನ್ನೂ ಮತ್ತು ಭುಜಗಳನ್ನೂ ಹಿಡಿದು ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ಹತಾಶ್ವರಾದ, ಹತಸಾರಥಿಗಳಾದ ರಥಿಕರು ಹತರಾಗಿದ್ದರೂ ಸಹ ನಿಶ್ಚೇಷ್ಟರಾಗಿರುವ ಜೀವಂತವ್ಯಕ್ತಿಗಳಂತೆಯೇ ಕಾಣು ತ್ತಿದ್ದರು (ಅವರ ದೇಹಕಾಂತಿಯು ಯಥಾಪೂರ್ವಸ್ಥಿತಿಯಲ್ಲಿಯೇ ಇದ್ದಿತು). ಕುದುರೆಗಳು ಮತ್ತು ಕುದುರೆಸವಾರರು ಪರ್ವತೋಪಮವಾದ ಸತ್ತುಹೋದ ಆನೆಗಳನ್ನು ತಬ್ಬಿಕೊಂಡು ಸತ್ತುಬಿದ್ದಿರುವಂತೆ ಕಾಣುತ್ತಿದ್ದರು. ಅನಂತರ ದ್ರೋಣರು ತಾವಿದ್ದ ಸ್ಥಳದಿಂದ ಉತ್ತರದ ಕಡೆಗೆ ಹೋಗಿ–ಧೂಮರಹಿತ ವಾದ ಅಗ್ನಿಯು ಪ್ರಜ್ವಲಿಸುವಂತೆ–ಜಾಜ್ವಲ್ಯಮಾನರಾಗಿ ಪ್ರಕಾಶಿಸುತ್ತಾ ಯುದ್ಧಸನ್ನದ್ಧರಾಗಿ ನಿಂತರು. ದ್ರೋಣರು ಸೈನ್ಯದ ಅಗ್ರಭಾಗವನ್ನು ಬಿಟ್ಟು ಒಂದು ಪಕ್ಕಕ್ಕೆ ಬಂದು ನಿಂತಿರುವುದನ್ನು ನೋಡಿ ಪಾಂಡವರ ಸೈನಿಕರು ಭಯದಿಂದ ನಡುಗಿದರು. ತೇಜಸ್ಸಿನಿಂದ ಜಾಜ್ವಲ್ಯಮಾನರಾಗಿ ಕಾಣುತ್ತಿದ್ದ, ಶ್ರೀಸಂಪನ್ನರಾಗಿದ್ದ ದ್ರೋಣರು ಉತ್ತರದ ಕಡೆಯಲ್ಲಿ ತಮ್ಮ ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವುದನ್ನು ಕಂಡು ಶತ್ರುಸೈನಿಕರಲ್ಲಿ ಕೆಲವರು ಭಯದಿಂದ ನಡುಗಿದರು ; ಮತ್ತೆ ಕೆಲವರು ಪಲಾಯನಮಾಡಿದರು ; ಕೆಲವರು ಕಳೆಗುಂದಿದರು.

ದಾನವರು ಇಂದ್ರನನ್ನು ಜಯಿಸಲು ಸಾಧ್ಯವಾಗದಿದ್ದಂತೆ–ಶತ್ರುಗಳನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದ, ಮದೋದಕವನ್ನು ಸುರಿಸುವ ಆನೆಯಂತಿದ್ದ ದ್ರೋಣರನ್ನು ಪಾಂಡವರ ಪಕ್ಷದಲ್ಲಿ ಯಾರೊಬ್ಬರೂ ಜಯಿಸಲು ಇಚ್ಛಿಸಲಿಲ್ಲ (ಅವರೊಡನೆ ಯುದ್ಧಮಾಡಲು ಮುಂದೆ ಬರಲಿಲ್ಲ). ದ್ರೋಣರ ಯುದ್ಧಾಹ್ವಾನವನ್ನು ಕೇಳಿ ಶತ್ರುಪಕ್ಷದಲ್ಲಿ ಕೆಲವರು ಉತ್ಸಾಹ ಹೀನರಾದರು. ಅಭಿಮಾನಿಗಳಾದ ಕೆಲವರು ಕ್ರುದ್ಧರಾದರು. ಕೆಲವರು ಅಚ್ಚರಿಗೊಂಡರು. ಮತ್ತೆ ಕೆಲವರು ಸಹನೆಯನ್ನು ಕಳೆದುಕೊಂಡರು. ಕೆಲವು ರಾಜರು ಕೈಗಳಿಂದ ಕೈಗಳ ತುದಿಯನ್ನು ಉಜ್ಜುತ್ತಿದ್ದರು. ಮತ್ತೆ ಕೆಲವು ರಾಜರು ಕ್ರೋಧಾಭಿಭೂತರಾಗಿ ಹಲ್ಲುಗಳಿಂದ ತುಟಿಗಳನ್ನು ಕಚ್ಚುತ್ತಿದ್ದರು. ಕೆಲವು ಯೋಧರು ತಮ್ಮ ಆಯುಧಗಳನ್ನು ಗರ-ಗರನೆ ತಿರುಗಿಸಿ ದ್ರೋಣರ ಕಡೆಗೆ ಎಸೆಯುತ್ತಿದ್ದರು. ಮತ್ತೆ ಕೆಲವರು ತಮ್ಮ ಭುಜಗಳನ್ನು ತಟ್ಟಿಕೊಳ್ಳುತ್ತಿದ್ದರು. ಮಹಾತೇಜಸ್ವಿಗಳಾದ ಇನ್ನೂ ಕೆಲವು

ಯೋಧರು ತಮ್ಮ ಪ್ರಾಣಗಳನ್ನೇ ಒತ್ತೆಯಾಗಿಟ್ಟು ದ್ರೋಣರ ಮೇಲೆ ಯುದ್ಧಕ್ಕೆರಗಿದರು. ಯುದ್ಧಮಾಡುತ್ತಿದ್ದವರಲ್ಲಿ ಪಾಂಚಾಲಯೋಧರನ್ನೇ ದ್ರೋಣರು ವಿಶೇಷವಾಗಿ ಬಾಣಗಳಿಂದ ಪೀಡಿಸುತ್ತಿದ್ದರು. ಪಾಂಚಾಲ ಯೋಧರು ಬಹಳ ಗಾಯಗೊಂಡಿದ್ದರೂ ಯುದ್ಧದಲ್ಲಿಯೇ ಆಸಕ್ತರಾಗಿ ಯುದ್ಧವನ್ನು ಮುಂದುವರಿಸುತ್ತಿದ್ದರು.

ರಣಾಂಗಣದ ಸುತ್ತಲೂ ಧನುಷ್ಪಾಣಿಗಳಾಗಿ ಸುತ್ತುತ್ತಿದ್ದ, ಸಮರ ದುರ್ಜಯರಾದ ದ್ರೋಣರನ್ನು ವಿರಾಟ-ದ್ರುಪದರು ಎದುರಿಸಿದರು. ಅವ ರನ್ನು ಅನುಸರಿಸಿ ದ್ರುಪದನ ಮೂವರು ಮೊಮ್ಮಕ್ಕಳೂ, ಮಹಾಧನುಷ್ಮಂತ ರಾದ ಚೇದಿಯೋಧರೂ ದ್ರೋಣರನ್ನು ಆಕ್ರಮಿಸಿದರು. ದ್ರೋಣರು ನಿಶಿತ ವಾದ ಮೂರು ಬಾಣಗಳಿಂದ ದ್ರುಪದನ ಮೂವರು ಪೌತ್ರರ ತಲೆಗಳನ್ನೂ ಕ್ಷಣಮಾತ್ರದಲ್ಲಿ ಕತ್ತರಿಸಿದರು. ಆ ಮೂವರೂ ಹತರಾಗಿ ಭೂಮಿಯ ಮೇಲೆ ಬಿದ್ದರು. ಅನಂತರ ಭರದ್ವಾಜರ ಮಕ್ಕಳಾದ ದ್ರೋಣರು ಯುದ್ಧದಲ್ಲಿ ಮಹಾರಥರಾದ ಸಮಸ್ತಚೇದಿ-ಕೇಕಯ-ಸೃಂಜಯ-ಮತ್ಸ್ಯಯೋಧರನ್ನೂ ಸಂಪೂರ್ಣವಾಗಿ ಜಯಿಸಿದರು. ಅದನ್ನು ನೋಡಿ ಪರಮಕ್ರುದ್ಧನಾದ ದ್ರುಪದನು ದ್ರೋಣರ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು. ದ್ರುಪದನನ್ನೇ ಅನುಸರಿಸಿ ವಿರಾಟನೂ ಅನೇಕ ಬಾಣಗಳನ್ನು ದ್ರೋಣರ ಮೇಲೆ ಪ್ರಯೋಗಿಸಿದನು. ಕ್ಷತ್ರಿಯಮರ್ದನರಾದ ದ್ರೋಣರು, ದ್ರುಪದ- ವಿರಾಟರು ಬಿಟ್ಟ ಶರವೃಷ್ಟಿಯನ್ನು ನಾಶಗೊಳಿಸಿ ವಿರಾಟ-ದ್ರುಪದರಿಬ್ಬರನ್ನೂ ಸಾವಿರಾರು ಬಾಣಗಳಿಂದ ಮುಚ್ಚಿದರು. ದ್ರೋಣರು ಬಿಟ್ಟ ಬಾಣಗಳಿಂದ ಆಚ್ಛಾದಿತರಾಗಿದ್ದ, ಕ್ರುದ್ಧರಾಗಿದ್ದ ದ್ರುಪದ-ವಿರಾಟರು ಇನ್ನೂ ಹೆಚ್ಚು ಕೋಪಗೊಂಡವರಾಗಿ ದ್ರೋಣರನ್ನು ಅನೇಕ ಬಾಣಗಳಿಂದ ಬಹಳವಾಗಿ ಗಾಯಗೊಳಿಸಿದರು.

ಮಹಾರಾಜ! ಅನಂತರ ದ್ರೋಣರು ಕೋಪದಿಂದಲೂ, ಅಸಹನೆ ಯಿಂದಲೂ ಕೂಡಿದವರಾಗಿ, ಅತ್ಯಂತತೀಕ್ಷ್ಣವಾಗಿದ್ದ ಭಲ್ಲಗಳಿಂದ ವಿರಾಟ-ದ್ರುಪದರ ಎರಡು ಧನುಸ್ಸುಗಳನ್ನೂ ಕತ್ತರಿಸಿದರು. ಅದರಿಂದ ಕುಪಿತನಾದ ವಿರಾಟನು ದ್ರೋಣರನ್ನು ವಧಿಸುವ ಇಚ್ಛೆಯಿಂದ ಹತ್ತು ತೋಮರ ಗಳನ್ನೂ, ಹತ್ತು ಬಾಣಗಳನ್ನೂ ದ್ರೋಣರ ಮೇಲೆ ಪ್ರಯೋಗಿಸಿದನು.

ದ್ರುಪದನೂ ಸಹ ಘೋರವಾಗಿದ್ದ, ಲೋಹಮಯವಾಗಿದ್ದ, ಸ್ವರ್ಣಭೂಷಿತ ವಾಗಿದ್ದ, ಸರ್ಪಸದೃಶವಾಗಿದ್ದ ಶಕ್ತ್ಯಾಯುಧವನ್ನು ದ್ರೋಣರ ರಥದ ಕಡೆಗೆ ಎಸೆದನು. ಅನಂತರ ದ್ರೋಣರು ಸುನಿಶಿತವಾದ ಭಲ್ಲಗಳಿಂದ ವಿರಾಟನು ಬಿಟ್ಟಿದ್ದ ಹತ್ತು ತೋಮರಗಳನ್ನೂ, ಮತ್ತೆ ಕೆಲವು ಬಾಣಗಳಿಂದ ದ್ರುಪದನು ಬಿಟ್ಟಿದ್ದ ಕನಕ-ವೈಡೂರ್ಯಾದಿಗಳಿಂದ ಅಲಂಕೃತವಾಗಿದ್ದ ಶಕ್ತ್ಯಾಯುಧವನ್ನೂ ಕತ್ತರಿಸಿದರು. ಅನಂತರ ಅರಿಮರ್ದನರಾದ ದ್ರೋಣರು ಚೆನ್ನಾಗಿ ಎಣ್ಣೆಯಿಂದ ಹದಮಾಡಿದ್ದ ಎರಡು ಭಲ್ಲಗಳಿಂದ ದ್ರುಪದನನ್ನೂ ಮತ್ತು ವಿರಾಟನನ್ನೂ ಯಮನ ಅರಮನೆಗೆ ಕಳುಹಿಸಿಕೊಟ್ಟರು.

ದ್ರುಪದ-ವಿರಾಟರೂ, ಕೇಕಯರೂ, ಚೇದಿ-ಮತ್ಸ್ಯ-ಪಾಂಚಾಲರೂ, ದ್ರುಪದನ ಮೂವರು ಪೌತ್ರರೂ ದ್ರೋಣರಿಂದ ಹತರಾಗಲಾಗಿ, ದ್ರೋಣರು ಎಸಗಿದ ಆ ಪರಮಾದ್ಭುತವಾದ ಸಂಹಾರಕಾರ್ಯವನ್ನು ನೋಡಿ ಕೋಪ-ದುಃಖಸಮನ್ವಿತನಾದ, ಮಹಾತ್ಮನಾದ ಧೃಷ್ಟದ್ಯುಮ್ನನು ರಥಿಗಳ ಮಧ್ಯದಲ್ಲಿ ಶಪಥವನ್ನು ಮಾಡಿದನು.

*** ಇಷ್ಟಾಪೂರ್ತಾತ್ತಥಾ ಕ್ಷಾತ್ರಾದ್ಬ್ರಾಹ್ಮಣ್ಯಾಚ್ಚ ಸ ನಶ್ಯತು ।**
**ದ್ರೋಣೋಯಸ್ಯಾದ್ಯಮುಚ್ಯೇತ ಯಂ ವಾ ದ್ರೋಣಃ ಪರಾಭವೇತ್ ॥**

"ಇಂದಿನ ಯುದ್ಧದಲ್ಲಿ ದ್ರೋಣರು ಯಾವನ ಕೈಯಿಂದ ತಪ್ಪಿಸಿಕೊಂಡು ಹೋಗುವರೋ ಅಥವಾ ದ್ರೋಣರು ಯಾವನನ್ನು ಪರಾಭವ ಗೊಳಿಸುವನೋ ಅವನು ಇಷ್ಟಾಪೂರ್ತಗಳಿಂದ ಪ್ರಾಪ್ತವಾಗುವ ಶುಭಫಲ ಗಳಿಂದಲೂ, ಕ್ಷಾತ್ರಧರ್ಮದಿಂದಲೂ ಮತ್ತು ಬ್ರಾಹ್ಮಣಧರ್ಮದಿಂದಲೂ ಭ್ರಷ್ಟನಾಗಿಹೋಗಲಿ."

ಹೀಗೆ ಧೃಷ್ಟದ್ಯುಮ್ನನು ಸರ್ವಧನುಷ್ಮಂತರ ಮಧ್ಯದಲ್ಲಿ ಪ್ರತಿಜ್ಞೆಮಾಡಿ ಸೈನ್ಯಸಮೇತನಾಗಿ ದ್ರೋಣರನ್ನು ಆಕ್ರಮಿಸಿದನು. ಒಂದು ಕಡೆಯಲ್ಲಿ ಪಾಂಡವರೊಡನೆ ಸೇರಿಕೊಂಡು ಪಾಂಚಾಲಯೋಧರು ದ್ರೋಣರನ್ನು

---

* ಈ ಶ್ಲೋಕದಲ್ಲಿ ಧೃಷ್ಟದ್ಯುಮ್ನನು ತಾನು ಕ್ಷತ್ರಿಯ ಮತ್ತು ಬ್ರಾಹ್ಮಣ ಎಂಬುದನ್ನು ಸೂಚಿಸುತ್ತಾನೆ. ಕ್ಷತ್ರಿಯನಾದ ದ್ರುಪದನ ಕುಲಕ್ಕೆ ಸೇರಿದವನಾದುದರಿಂದ ಕ್ಷತ್ರಿಯನು ; ಬ್ರಾಹ್ಮಣಸ್ವರೂಪನಾದ ಯಜ್ಞೇಶ್ವರನಲ್ಲಿ ಹುಟ್ಟಿದವನಾದುದರಿಂದ ಬ್ರಾಹ್ಮಣನು. ಯಾಜ ಮತ್ತು ಉಪಯಾಜರ ತಪಃಪ್ರಭಾವದಿಂದ ಹುಟ್ಟಿದವನಾದುದರಿಂದಲೂ ಧೃಷ್ಟದ್ಯುಮ್ನನು ಬ್ರಾಹ್ಮಣನೆಂದು ನೀಲಕಂಠರು ಅಭಿಪ್ರಾಯಪಡುತ್ತಾರೆ.

ಬಾಣಗಳಿಂದ ಪ್ರಹರಿಸುತ್ತಿದ್ದರು. ಮತ್ತೊಂದು ಕಡೆಯಿಂದ ದುರ್ಯೋಧನ, ಕರ್ಣ, ಸುಬಲನ ಮಗನಾದ ಶಕುನಿ, ದುರ್ಯೋಧನನ ಮುಖ್ಯ-ಮುಖ್ಯ ರಾದ ಸೋದರರು–ಇವರೆಲ್ಲರೂ ದ್ರೋಣರನ್ನು ರಕ್ಷಿಸುತ್ತಿದ್ದರು. ಪಾಂಚಾ ಲರು ಎಷ್ಟೇ ಪ್ರಯತ್ನಿಸಿದರೂ ಆ ಎಲ್ಲ ಮಹಾರಥರಿಂದಲೂ ರಕ್ಷಿಸಲ್ಪಡುತ್ತಿದ್ದ ದ್ರೋಣರನ್ನು ನೋಡಲೂ ಕೂಡ ಅವರಿಗೆ ಸಾಧ್ಯವಾಗಲಿಲ್ಲ. ಆ ಸಮಯದಲ್ಲಿ ಭೀಮಸೇನನು ಧೃಷ್ಟದ್ಯುಮ್ನನ ವಿಷಯದಲ್ಲಿ ಕೋಪಗೊಂಡು ಕಠಿನವಾದ ಮಾತುಗಳಿಂದ ಪಾರ್ಷತನನ್ನು ಚುಚ್ಚುತ್ತಾ ಹೇಳಿದನು :

"ಪಾರ್ಷತ! ನೀನು ದ್ರುಪದನ ವಂಶದಲ್ಲಿ ಹುಟ್ಟಿದವನಾಗಿರುವೆ. ಎಲ್ಲ ಅಸ್ತ್ರಗಳಲ್ಲಿಯೂ ಪರಿಶ್ರಮವನ್ನು ಪಡೆದಿರುವೆ. ಅಸ್ತ್ರವಿದರಲ್ಲಿ ಶ್ರೇಷ್ಠನಾಗಿ ರುವೆ. ಆದರೆ ಸ್ವಾಭಿಮಾನಿಯಾದ ಯಾವ ಕ್ಷತ್ರಿಯನು ತಾನೇ ಶತ್ರುವು ಕಣ್ಣೆದುರಿನಲ್ಲಿರುವಾಗ ನಿನ್ನಂತೆ ನೋಡುತ್ತಾ ನಿಂತುಕೊಳ್ಳುತ್ತಾನೆ? ಪ್ರತ್ಯಕ್ಷ ದಲ್ಲಿಯೇ ನಿನ್ನ ತಂದೆ ಮತ್ತು ಮಕ್ಕಳ ವಧೆಯಾದುದನ್ನು ಕಂಡು–ಅದ ರಲ್ಲಿಯೂ ವಿಶೇಷವಾಗಿ ರಾಜರ ಸಭೆಯಲ್ಲಿ ಪ್ರತಿಜ್ಞೆಯನ್ನೂ ಮಾಡಿ–ಯಾವ ಮನುಷ್ಯನು ತಾನೇ ತನ್ನ ಜೀವರಕ್ಷಣೆಯನ್ನು ಮಾಡಿಕೊಂಡು ನಿಂತಿರುತ್ತಾನೆ? ಧನುರ್ಬಾಣಗಳನ್ನೇ ಕಟ್ಟಿಗೆಯ ರೂಪದಲ್ಲಿ ಹೊಂದಿರುವ, ಹುತಮಾಡಿದ ಯಜ್ಞೇಶ್ವರನಂತೆ ಪ್ರಜ್ವಲಿಸುತ್ತಿರುವ ದ್ರೋಣರು ತಮ್ಮ ಪ್ರಭಾವದಿಂದ ಕ್ಷತ್ರಿಯರ ವಂಶವನ್ನೇ ದಹಿಸುತ್ತಿದ್ದಾರೆ. ಪಾಂಡವರ ಸೈನ್ಯವನ್ನು ಸಂಪೂರ್ಣವಾಗಿ ನಾಶಮಾಡುವ ಮೊದಲೇ ನಾನು ಇವರನ್ನು ಆಕ್ರಮಿಸು ತ್ತೇನೆ. ಇಲ್ಲಿಯೇ ನಿಂತು ನೀವು ನನ್ನ ಸಾಹಸಕರ್ಮವನ್ನಾದರೂ ನೋಡಿರಿ."

ಮಹಾರಾಜ! ಹೀಗೆ ಹೇಳಿ ಕ್ರುದ್ಧನಾದ ವೃಕೋದರನು ಆಕರ್ಣವಾಗಿ ಸೆಳೆದು ಬಿಡುತ್ತಿದ್ದ ಬಾಣಗಳಿಂದ ನಿನ್ನ ಸೈನಿಕರನ್ನು ಪಲಾಯಿತರನ್ನಾಗಿ ಮಾಡುತ್ತಾ ದ್ರೋಣರ ಸೈನ್ಯವನ್ನು ಪ್ರವೇಶಿಸಿದನು. ಪಾಂಚಾಲರಾಜ ಕುಮಾರನಾದ ಧೃಷ್ಟದ್ಯುಮ್ನನೂ ಸಹ ಕೌರವರ ದೊಡ್ಡ ಸೈನ್ಯದ ಒಳಹೊಕ್ಕು ದ್ರೋಣರ ಬಳಿಗೆ ಬಂದನು. ಅನಂತರ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಮಹಾರಾಜ! ಆ ದಿನದ ಸೂರ್ಯೋದಯದ ಸಮಯದಲ್ಲಿ ನಡೆಯುತ್ತಿದ್ದ ಜನಸಂಹಾರಕವಾದ ಮಹಾಸಂಗ್ರಾಮವನ್ನು ನಾವು ಈ ಹಿಂದೆ ಎಲ್ಲಿಯೂ ಕಂಡಿರಲಿಲ್ಲ ; ಕೇಳಿಯೂ ಇರಲಿಲ್ಲ. ಆ ಮಹಾ

ಯುದ್ಧದಲ್ಲಿ ರಥಗಳ ಸಮೂಹಗಳು ಒಂದಕ್ಕೊಂದು ಸೇರಿಕೊಂಡಂತೆಯೇ ಇದ್ದುವು. ಸತ್ತುಹೋದ ಸೈನಿಕರ ಶರೀರಗಳೆಲ್ಲವೂ ರಣಾಂಗಣದಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಬೇರೆಯ ಕಡೆಗೆ ಹೋಗುತ್ತಿದ್ದ ಯೋಧರನ್ನು ಶತ್ರುಪಕ್ಷದ ಯೋಧರು ಹಾದಿಯಲ್ಲಿಯೇ ಆಕ್ರಮಿಸಿ ಸಂಹರಿಸುತ್ತಿದ್ದರು. ಯುದ್ಧದಿಂದ ಪರಾಙ್ಮುಖರಾಗಿ ಓಡುತ್ತಿದ್ದವರನ್ನು ಶತ್ರುಪಕ್ಷದವರು ಹಿಂದಿನಿಂದಲೇ ಸಂಹರಿಸುತ್ತಿದ್ದರು. ತಮ್ಮೆದುರಾಗಿ ನಿಂತು ಯುದ್ಧಮಾಡದೇ ಇದ್ದರೂ ಕೆಲವು ಸೈನಿಕರು ಪಕ್ಕದಿಂದಲೇ ಎದುರಾಳಿಗಳನ್ನು ಪ್ರಹರಿಸುತ್ತಿದ್ದರು. ಈ ರೀತಿಯಲ್ಲಿ ಪರಸ್ಪರವಾಗಿ ನಡೆಯುತ್ತಿದ್ದ ಆ ಯುದ್ಧವು ಅತಿಭಯಂಕರಯುದ್ಧವಾಗಿ ಪರಿಣಮಿಸಿತು. ಪ್ರಾತಃಸಂಧ್ಯಾಗತನಾಗಿದ್ದ ಬಾಲಸೂರ್ಯನ ಪೂರ್ಣೋದಯವಾಯಿತು.

೧೮೬ನೆಯ ಅಧ್ಯಾಯವು ಮುಗಿಯಿತು.

೧೮೭ನೆಯ ಅಧ್ಯಾಯ ದ್ರೋಣವಧಪರ್ವ (ಮುಂದುವರಿದಿದೆ.)

## ರಣಾಂಗಣದ ಭೀಕರತೆಯ ವರ್ಣನೆ : ನಕುಲನಿಂದ ದುರ್ಯೋಧನನು ಪರಾಜಿತನಾದುದು

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ :

ಮಹಾರಾಜ! ರಣಾಂಗಣದಲ್ಲಿ ನಾನು ಹಿಂದೆ ಹೇಳಿದ ರೀತಿಯಲ್ಲಿ ಕವಚಗಳನ್ನು ಧರಿಸಿ ಯುದ್ಧಸನ್ನದ್ಧರಾಗಿ ನಿಂತಿದ್ದ ಸೈನಿಕರು ಪ್ರಾತಃಸಂಧ್ಯೆಯ ಸಮಯದಲ್ಲಿ ಆವಿರ್ಭೂತನಾದ ಸಾವಿರಾರು ಕಿರಣಗಳುಳ್ಳ ಸೂರ್ಯನನ್ನು ಧ್ಯಾನಮಾಡಿದರು. ಪುಟಕ್ಕೆ ಹಾಕಿದ ಚಿನ್ನದ ಪ್ರಭೆಯಂತಿರುವ, ಪ್ರತಿಭಾವಂತನಾದ ಸಾವಿರ ಕಿರಣಗಳ ಸೂರ್ಯನು ಉದಯಿಸಲಾಗಿ, ಎಲ್ಲ ಲೋಕಗಳೂ ಸಹಸ್ರಾಂಶುವಿನ ಕಿರಣಗಳಿಂದ ಪ್ರಕಾಶಗೊಳ್ಳಲಾಗಿ, ಪುನಃ ಯುದ್ಧವು ಪ್ರಾರಂಭವಾಯಿತು.

ಮಹಾರಾಜ! ಸೂರ್ಯೋದಯಕ್ಕೆ ಮೊದಲು ಯಾರು ದ್ವಂದ್ವ ಯುದ್ಧವನ್ನು ಮಾಡುತ್ತಿದ್ದರೋ ಅವರೇ ಸೂರ್ಯೋದಯಾನಂತರವೂ ದ್ವಂದ್ವಯುದ್ಧದಲ್ಲಿಯೇ ತೊಡಗಿದ್ದರು. ರಥಸೈನಿಕರೊಡನೆ–ಅಶ್ವಸೈನಿಕರು ; ಅಶ್ವಸೈನಿಕರೊಡನೆ–ಗಜಸೈನಿಕರು ; ಪದಾತಿಗಳೊಡನೆ ಗಜಸೈನಿಕರು ; ಅಶ್ವಸೈನಿಕರೊಡನೆ–ಅಶ್ವಸೈನಿಕರು ; ಪದಾತಿಗಳೊಡನೆ–ಪದಾತಿಗಳು ಹೀಗೆ

ನಾನಾರೀತಿಯಲ್ಲಿ ಯುದ್ಧಮಾಡುತ್ತಿದ್ದರು. ರಥಸೈನಿಕರೊಡನೆ–ರಥ ಸೈನಿಕರೂ, ಗಜಸೈನಿಕರೊಡನೆ–ಗಜಸೈನಿಕರೂ ಯುದ್ಧದಲ್ಲಿ ತೊಡಗಿದ್ದರು. ಕೆಲವು ಕಡೆಗಳಲ್ಲಿ ಸಾಮೂಹಿಕವಾಗಿಯೂ, ಕೆಲವು ಕಡೆಗಳಲ್ಲಿ ಪ್ರತ್ಯೇಕ-ಪ್ರತ್ಯೇಕವಾಗಿಯೂ ಯೋಧರು ಯುದ್ಧಮಾಡುತ್ತಾ ಪ್ರಾಣಗಳನ್ನು ತೊರೆದು ಭೂಮಿಯ ಮೇಲೆ ಬೀಳುತ್ತಿದ್ದರು. ರಾತ್ರಿಯೆಲ್ಲಾ ಯುದ್ಧಮಾಡುತ್ತಿದ್ದು ಬಳಲಿದವರಾಗಿ ಹಸಿವು-ಬಾಯಾರಿಕೆಗಳಿಂದಲೂ ಸಂಕಟಪಡುತ್ತಾ ಅನೇಕ ಸೈನಿಕರು ಪ್ರಜ್ಞಾಹೀನರಾದರು. ಶಂಖ-ಭೇರಿ-ಮೃದಂಗಾದಿಗಳ ಶಬ್ದಗಳೂ, ಆನೆಗಳ ಘೀಂಕಾರನಿನಾದಗಳೂ, ಸೆಳೆಯಲ್ಪಡುತ್ತಿದ್ದ ಧನುಸ್ಸುಗಳ ಟೇಂಕಾರಶಬ್ದಗಳೂ ಆಕಾಶವನ್ನು ಮುಟ್ಟಿದುವು. ಓಡಿಹೋಗುತ್ತಿರುವ ಪದಾತಿಗಳ ಟಪ-ಟಪಾ ಶಬ್ದಗಳೂ, ಸೈನಿಕರ ಮೇಲೆ ಬೀಳುತ್ತಿದ್ದ ಶಸ್ತ್ರಾಸ್ತ್ರಗಳ ಸೊಯ್ ಎಂಬ ಶಬ್ದಗಳೂ, ಕುದುರೆಗಳ ಕೆನೆತಗಳ ಶಬ್ದಗಳೂ, ಹಿಂದಿರುಗುತ್ತಿದ್ದ ರಥಗಳ ಗಡ-ಗಡಾ ಶಬ್ದಗಳೂ, ಸೈನಿಕರ ಕೂಗಿನ ಶಬ್ದಗಳೂ ಮತ್ತು ಗರ್ಜನೆಯ ಶಬ್ದಗಳೂ ಸಮ್ಮಿಶ್ರವಾಗಿ ಮಹಾಭಯಂಕರವಾದ ಶಬ್ದವು ಸ್ವರ್ಗವನ್ನೂ ಮುಟ್ಟಿತು. ನಾನಾವಿಧವಾದ ಅಸ್ತ್ರ-ಶಸ್ತ್ರಗಳಿಂದ ಗಾಯಗೊಂಡು ಚಡಪಡಿಸುತ್ತಿದ್ದ ಯೋಧರ ಆರ್ತನಾದಗಳು ರಣಾಂಗಣದಲ್ಲಿ ಸರ್ವತ್ರ ಕೇಳಿಬರುತ್ತಿದ್ದುವು. ಪ್ರಾಣಗಳನ್ನು ತೊರೆದು ಕೆಳಕ್ಕೆ ಬಿದ್ದಿದ್ದ ಮತ್ತು ಬೀಳುವುದರಲ್ಲಿದ್ದ, ಬಹಳವಾಗಿ ಗಾಯಗೊಂಡ ರಥ-ಗಜಾಶ್ವ-ಪದಾತಿಸೈನಿಕರ ಅನುಕಂಪನೀಯವಾದ ದುಃಸ್ಥಿತಿಯು ಸರ್ವತ್ರ ಕಾಣುತ್ತಿದ್ದಿತು. ಎಲ್ಲ ಚತುರಂಗಸೈನಿಕರೂ ಹಲವುಬಾರಿ ಪರಸ್ಪರ ಯುದ್ಧದಲ್ಲಿ ತೊಡಗಿದಾಗ ಕೆಲವು ವೇಳೆ ಒಂದು ಕಡೆಯವರು ತಮ್ಮ ಕಡೆಯ ಸೈನಿಕರನ್ನೇ ಸಂಹರಿಸುತ್ತಿದ್ದರು. ಶತ್ರುಪಕ್ಷದ ಸೈನಿಕರೂ ತಮ್ಮ ಕಡೆಯವರನ್ನೇ ಕೊಲ್ಲುತ್ತಿದ್ದರು. ಮತ್ತೆ ಕೆಲವು ಸಮಯಗಳಲ್ಲಿ ಒಂದು ಪಕ್ಷದ ಸೈನಿಕರು ಎದುರು ಪಕ್ಷದಲ್ಲಿದ್ದ ತಮ್ಮಬಂಧುಗಳನ್ನೂ, ಸ್ನೇಹಿತರನ್ನೂ ಸಂಹರಿಸುತ್ತಿದ್ದರು. ಶುಭ್ರಗೊಳಿಸಲು ಅಗಸನ ಮನೆಗೆ ರಾಶಿ-ರಾಶಿಯಾಗಿ ಬಟ್ಟೆಗಳು ಬಂದುಬೀಳುವಂತೆ–ಯೋಧರ ಮೇಲೂ, ಆನೆಗಳ ಮೇಲೂ ವೀರಯೋಧರ ಬಾಹುಗಳಿಂದ ಪ್ರಮುಕ್ತವಾದ ಶಸ್ತ್ರಗಳು ರಾಶಿ-ರಾಶಿಯಾಗಿ ಬಿದ್ದಿರುವುದು ಆ ರಣರಂಗದಲ್ಲಿ ಕಾಣುತ್ತಿದ್ದಿತು. ವೀರಯೋಧರ ಬಾಹು

ಗಳಿಂದ ಮೇಲೆತ್ತಲ್ಪಟ್ಟು ಪ್ರತಿಯೋಧರ ಕತ್ತಿಗಳಿಂದ ತಡೆಯಲ್ಪಟ್ಟ ಖಡ್ಗಗಳ ಖಟ್-ಖಟ್ ಎಂಬ ಶಬ್ದವು–ಅಗಸರು ಬಂಡೆಗಳ ಮೇಲೆ ಬಟ್ಟೆಗಳನ್ನೊಗೆಯುವಾಗ ಉಂಟಾಗುವ ಶಬ್ದಕ್ಕೆ ಅನುರೂಪವಾಗಿದ್ದಿತು. ಅರ್ಧಕತ್ತಿಗಳಿಂದಲೂ (ಚೂರಿಗಳಿಂದಲೂ), ಖಡ್ಗಗಳಿಂದಲೂ, ತೋಮರಗಳಿಂದಲೂ, ಗಂಡುಗೊಡಲಿಗಳಿಂದಲೂ–ಯೋಧರೂ ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ಆ ಯುದ್ಧವು ಅತಿಕ್ರೂರವಾಗಿ ಪರಿಣಮಿಸಿತು. ವೀರಯೋಧರು ಪರಲೋಕಗಾಮಿನಿಯಾದ ಒಂದು ರಕ್ತನದಿಯನ್ನೇ ಸೃಷ್ಟಿಸಿದರು. ಆ ರಕ್ತನದಿಗೆ ಉಗಮಸ್ಥಾನವು ಆನೆ-ಕುದುರೆಗಳ ಶರೀರಗಳೇ ಆಗಿದ್ದುವು. ಆ ನದಿಯು ಮನುಷ್ಯರ ಶರೀರಗಳ ಮೂಲಕವಾಗಿಯೇ ಪ್ರವಹಿಸುತ್ತಿದ್ದಿತು. ಶಸ್ತ್ರರೂಪವಾದ ಮೀನುಗಳು ಆ ರಕ್ತನದಿಯಲ್ಲಿ ಸಮೃದ್ಧವಾಗಿದ್ದುವು. ಮಾಂಸ-ರಕ್ತಗಳ ಮಿಶ್ರಣವೇ ಆ ನದಿಯ ಕೆಸರಾಗಿದ್ದಿತು. ಯೋಧರು ಮಾಡುತ್ತಿದ್ದ ಆರ್ತನಾದಗಳೇ ಆ ನದಿಯ ಪ್ರವಾಹದ ಧ್ವನಿಯಾಗಿದ್ದಿತು. ಪತಾಕೆಗಳೂ ಮತ್ತು ಶಸ್ತ್ರಗಳೇ ನೊರೆಯ ರೂಪದಲ್ಲಿದ್ದುವು. ಇಂತಹ ನದಿಯನ್ನು ಎರಡೂ ಪಕ್ಷಗಳ ಯೋಧರೂ ಸೇರಿ ರಣರಂಗದಲ್ಲಿ ಪ್ರವಹಿಸುವಂತೆ ಮಾಡಿದರು. ರಾತ್ರಿಯ ಯುದ್ಧದಿಂದ ಬುದ್ಧಿಗೆಟ್ಟಿದ್ದ, ಸತ್ತ್ವಹೀನವಾಗಿದ್ದ ಬಾಣಗಳಿಂದಲೂ ಮತ್ತು ಶಕ್ತಿಯೇ ಮೊದಲಾದ ಆಯುಧಗಳಿಂದಲೂ ಬಹಳವಾಗಿ ಗಾಯಗೊಂಡಿದ್ದ, ಬಹಳವಾಗಿ ಬಳಲಿದ್ದ ಆನೆ-ಕುದುರೆಗಳು ಶರೀರಗಳನ್ನು ಸ್ತಬ್ಧಗೊಳಿಸಿ ನಿಂತುಬಿಟ್ಟುವು (ಕಾಲುಗಳನ್ನು ಅಳ್ಳಾಡಿಸಲೂ ಅವುಗಳಿಗೆ ಚೈತನ್ಯವಿರಲಿಲ್ಲ). ಮನೋಹರವಾದ ಕುಂಡಲಗಳಿಂದ ಕೂಡಿದ ಶಿರಸ್ಸುಗಳಿಂದ ಕೂಡಿದ್ದರೂ ವೀರಯೋಧರ ಮುಖಗಳು ಬಹಳವಾಗಿ ಸೊರಗಿಹೋಗಿದ್ದುವು. ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಪ್ರಕಾಶಮಾನವಾದ ಯುದ್ಧೋಪಕರಣಗಳಿಂದಲೂ, ಮಾಂಸಾಶಿಗಳಾದ ಪ್ರಾಣಿಗಳ ಸಮೂಹಗಳಿಂದಲೂ ವ್ಯಾಪ್ತವಾಗಿದ್ದ, ಸತ್ತ ಮತ್ತು ಸಾಯುವುದರಲ್ಲಿದ್ದ ಯೋಧರಿಂದ ತುಂಬಿಹೋಗಿದ್ದ ಆ ರಣಾಂಗಣದಲ್ಲಿ ಸಂಚರಿಸಲು ರಥಮಾರ್ಗವೇ ಇರಲಿಲ್ಲ (ರಥಮಾರ್ಗಗಳೆಲ್ಲವೂ ಹೆಣಗಳಿಂದಲೂ, ಮಾಂಸಭಕ್ಷಿಗಳಾದ ಪ್ರಾಣಿಗಳಿಂದಲೂ ತುಂಬಿಹೋಗಿದ್ದುವು). ರಕ್ತ-ಮಾಂಸಗಳ ಸಮ್ಮಿಶ್ರಣದಿಂದ ಉಂಟಾದ ಕೆಸರಿನಲ್ಲಿ ರಥಚಕ್ರಗಳು ಹೂತುಕೊಂಡುಬಿಡುತ್ತಿದ್ದುವು.

ಕುದುರೆಗಳಾದರೋ ಬಹಳವಾಗಿ ಬಳಲಿದ್ದುವು. ಬಾಣಗಳಿಂದ ಬಹಳವಾಗಿ ಗಾಯಗೊಂಡು ನಡುಗುತ್ತಿದ್ದುವು. ಅಂತಹ ದಾರುಣವಾದ ಸಂದರ್ಭ ದಲ್ಲಿಯೂ ಆನೆಗಳಂತಿದ್ದ, ಒಳ್ಳೆಯ ಕುಲದಿಂದಲೂ, ಸತ್ತ್ವದಿಂದಲೂ, ಬಲದಿಂದಲೂ ಸಂಪನ್ನವಾಗಿದ್ದ ಆ ಕುದುರೆಗಳೇ ಬಲವೆಲ್ಲವನ್ನೂ ಕ್ರೋಡೀ ಕರಿಸಿ ಬಹಳ ಕಷ್ಟದಿಂದ ರಥಗಳನ್ನು ಒಯ್ಯುತ್ತಿದ್ದುವು.

ಆ ಸಮಯದಲ್ಲಿ ದ್ರೋಣಾರ್ಜುನರನ್ನು ಬಿಟ್ಟು ಉಳಿದೆಲ್ಲ ಯೋಧರೂ ಒಡನೆಯೇ ವಿಹ್ವಲರೂ, ಭ್ರಾಂತರೂ, ಭೀತರೂ, ಆತುರರೂ ಆದರು. ದ್ರೋಣ ಮತ್ತು ಅರ್ಜುನರೇ ತಮ್ಮ-ತಮ್ಮ ಕಡೆಯ ಯೋಧರಿಗೆ ಆಶ್ರಯಸ್ಥಾನವಾಗಿದ್ದರು. ಆರ್ತರಾದವರಿಗೆ ರಕ್ಷಣೆಯನ್ನು ನೀಡುವವರಾಗಿ ದ್ದರು. ಆದರೆ ಪಾಂಡುಪಕ್ಷದ ಯೋಧರು ದ್ರೋಣರ ಬಳಿಗೂ, ಕೌರವಪಕ್ಷದ ಯೋಧರು ಅರ್ಜುನನ ಬಳಿಗೂ ಹೋದರೆಂದರೆ ಯಮನ ಮನೆಯನ್ನೇ ಸೇರುತ್ತಿದ್ದರು. ಯುದ್ಧದಲ್ಲಿ ತೊಡಗಿದ್ದ ಕೌರವಸೈನಿಕರೂ ಮತ್ತು ಪಾಂಚಾಲಸೈನಿಕರೂ ಅರ್ಜುನ-ದ್ರೋಣರ ಬಾಣಗಳ ಪ್ರಹಾರಗಳಿಂದ ಮಹಾಕಷ್ಟಕ್ಕೊಳಗಾದರು. ಅವರಿಗೆ ಆ ಸಮಯದಲ್ಲಿ ಯಾವುದೂ ತಿಳಿಯುತ್ತಲೇ ಇರಲಿಲ್ಲ. ರಣಭೂಮಿಯು ಆ ಸಮಯದಲ್ಲಿ ಯಮರಾಜನ ಆಟದ ಮೈದಾನದಂತೆಯೇ ಕಾಣುತ್ತಿದ್ದಿತು. ಹೇಡಿಗಳಿಗೆ ಅದು ಭಯವನ್ನು ಹೆಚ್ಚಿಸುವುದಾಗಿದ್ದಿತು. ಭೂಮಂಡಲದಲ್ಲಿದ್ದ ರಾಜವಂಶೀಯರಾದ ಕ್ಷತ್ರಿಯರ ಮಹಾವಿನಾಶವು ನಡೆಯುತ್ತಿದ್ದ ಆ ಸಮಯದಲ್ಲಿ ಯುದ್ಧದಲ್ಲಿ ತತ್ಪರರಾಗಿದ್ದ ಸಕಲಯೋಧರ ಪದಸಂಘಟ್ಟನೆಗಳಿಂದ ಹುಟ್ಟಿದ ಧೂಳಿನಿಂದ ಎಲ್ಲರೂ ಮುಚ್ಚಿಹೋಗಿದ್ದರು. ಈ ಕಾರಣದಿಂದಾಗಿ ನಾವಲ್ಲಿ ಕರ್ಣನನ್ನಾಗಲೀ, ದ್ರೋಣರನ್ನಾಗಲಿ, ಅರ್ಜುನನನ್ನಾಗಲೀ, ಯುಧಿಷ್ಠಿರನನ್ನಾಗಲೀ, ಭೀಮಸೇನ ನನ್ನಾಗಲೀ, ನಕುಲ-ಸಹದೇವರನ್ನಾಗಲೀ, ಧೃಷ್ಟದ್ಯುಮ್ನನನ್ನಾಗಲೀ, ಸಾತ್ಯಕಿಯನ್ನಾಗಲೀ, ದುಃಶಾಸನನನ್ನಾಗಲೀ, ಕೃಪ-ಶಲ್ಯ-ಕೃತ ವರ್ಮರನ್ನಾಗಲೀ, ಅಶ್ವತ್ಥಾಮನನ್ನಾಗಲೀ, ಬೇರೆ ಯಾವ ಯೋಧರನ್ನೇ ಆಗಲೀ ನೋಡಲೇ ಇಲ್ಲ.

ಭೂಮಿಯಾಗಲೀ, ದಿಕ್ಕುಗಳಾಗಲೀ, ಅಂತರಿಕ್ಷವಾಗಲೀ–ಕಾಣಿಸುತ್ತಿರ ಲಿಲ್ಲ. ಎಲ್ಲಕ್ಕಿಂತಲೂ ಮಿಗಿಲಾಗಿ ನಮ್ಮನ್ನೇ ನಾವು ನೋಡಿಕೊಳ್ಳಲೂ

ಸಾಧ್ಯವಾಗುತ್ತಿರಲಿಲ್ಲ. ಆ ಸಮಯದಲ್ಲಿ ಅಂತಹ ಪರಮಾದ್ಭುತವಾದ ಧೂಳೆದ್ದಿತು. ಸರ್ವತ್ರ ಭ್ರಾಂತಿಯನ್ನುಂಟುಮಾಡುವ ಮಹಾಘೋರವಾದ ಮತ್ತು ಭಯಂಕರವಾದ, ಮೇಘರೂಪಿಯಾದ ಧೂಳು ಮೇಲೇಳಲಾಗಿ, ಯೋಧರೆಲ್ಲರೂ ಎರಡನೆಯ ರಾತ್ರಿಯೇ ಬಂದುಬಿಟ್ಟಿತೋ ಎಂಬ ಭ್ರಾಂತಿಯನ್ನು ಹೊಂದಿದರು. ಧೂಳಿನಿಂದ ಉಂಟಾದ ಆ ಕತ್ತಲೆಯಲ್ಲಿ ಕೌರವರು ಯಾರೆಂಬುದೂ ತಿಳಿಯುತ್ತಿರಲಿಲ್ಲ. ಪಾಂಚಾಲ-ಪಾಂಡವರು ಎಲ್ಲಿದ್ದಾರೆಂಬುದೂ ತಿಳಿಯುತ್ತಿರಲಿಲ್ಲ. ದಿಕ್ಕುಗಳಾಗಲೀ, ಆಕಾಶವಾಗಲೀ, ಭೂಮಿಯಾಗಲೀ–ಕಾಣುತ್ತಿರಲಿಲ್ಲ. 'ಹಳ್ಳವೆಲ್ಲಿದೆ?–ದಿಣ್ಣೆಯೆಲ್ಲಿದೆ?' ಎಂಬುದೂ ಸಹ ತಿಳಿಯುತ್ತಿರಲಿಲ್ಲ. ಆ ಸಮಯದಲ್ಲಿ ವಿಜಯೇಚ್ಛುಗಳಾದ ಯೋಧರು ಕೈಗೆ ಯಾರು ಸಿಕ್ಕಿದರೆ ಅವರನ್ನೇ ಎಳೆದುಕೊಂಡು ಅವರು ತಮ್ಮ ಕಡೆಯವರೇ? ಅಥವಾ ಶತ್ರುಪಕ್ಷದವರೇ?–ಎಂಬ ವಿವೇಚನೆಯೂ ಇಲ್ಲದೇ ಅವರೊಡನೆ ಯುದ್ಧದಲ್ಲಿ ತೊಡಗಿ ಅವರನ್ನು ಸಂಹರಿಸುತ್ತಿದ್ದರು.

ಗಾಳಿಯು ಜೋರಾಗಿ ಬೀಸಿದ್ದರಿಂದಲೂ, ನೆಲದಲ್ಲಿ ಹುಟ್ಟಿದ ಧೂಳಿಯು ಮೇಲು-ಮೇಲಕ್ಕೆ ಹೋಗುತ್ತಿದ್ದುದರಿಂದಲೂ, ಭೂಮಿಯ ಮೇಲೆ ಯೋಧರ ರಕ್ತವು ಸುರಿಯುತ್ತಿದ್ದುದರಿಂದಲೂ, ಭೂಮಿಯ ಮೇಲಿನ ಧೂಳಿಯು ಉಪಶಮನಗೊಂಡಿತು. ರಕ್ತದಿಂದ ತೋಯ್ದು ಹೋಗಿದ್ದ ಆನೆಗಳೂ, ಕುದುರೆಗಳೂ, ಯೋಧರೂ, ರಥಿಗಳೂ, ಪದಾತಿಗಳೂ ಪಾರಿಜಾತವೃಕ್ಷಗಳ ಮನೆಗಳೋಪಾದಿಯಲ್ಲಿ ರಣಾಂಗಣದಲ್ಲಿ ಗೋಚರಿಸುತ್ತಿದ್ದರು.

ಅನಂತರ ದುರ್ಯೋಧನ, ಕರ್ಣ, ದ್ರೋಣ ಮತ್ತು ದುಃಶಾಸನ–ಈ ನಾಲ್ವರು ಮಹಾರಥರೂ ನಾಲ್ವರು ಪಾಂಡವಯೋಧರೊಡನೆ ಯುದ್ಧದಲ್ಲಿ ತೊಡಗಿದರು. ದುರ್ಯೋಧನನು ತನ್ನ ತಮ್ಮನಾದ ದುಃಶಾಸನನೊಡನೆ ಕೂಡಿಕೊಂಡು ನಕುಲ-ಸಹದೇವರೊಡನೆ ಯುದ್ಧವನ್ನು ಪ್ರಾರಂಭಿಸಿದನು. ಭೀಮಸೇನನೊಡನೆ ಕರ್ಣನೂ, ದ್ರೋಣರೊಡನೆ ಅರ್ಜುನನೂ ಯುದ್ಧದಲ್ಲಿ ತೊಡಗಿದರು. ಉಗ್ರವಾದ, ರಥಶ್ರೇಷ್ಠರ ಅಮಾನುಷವಾದ, ಅತ್ಯಾಶ್ಚರ್ಯಕರವಾದ, ಮಹಾಘೋರವಾದ ಸಂಘರ್ಷವನ್ನು ಎಲ್ಲರೂ–ಎಲ್ಲ ಕಡೆಗಳಿಂದಲೂ ನೋಡಿದರು. ವಿಚಿತ್ರವಾದ ರಥದ ನಡಿಗೆಗಳಿಂದ ಕೂಡಿದ್ದ, ವಿಚಿತ್ರವಾದ ರಥಗಳಿಂದ ಸಮಾಕುಲವಾಗಿದ್ದ, ಚಿತ್ರಯೋಧಿಗಳ ವಿಚಿತ್ರ

ಯುದ್ಧವನ್ನು ರಥಿಗಳೆಲ್ಲರೂ ನಿಂತು ನೋಡುತ್ತಿದ್ದರು. ಒಬ್ಬನು ಮತ್ತೊಬ್ಬರನ್ನು ಜಯಿಸಲಿಚ್ಛಿಸಿ ಪ್ರಯತ್ನಪೂರ್ವಕವಾಗಿ ಪರಾಕ್ರಮವನ್ನು ತೋರಿಸುತ್ತಿದ್ದ ಆ ಮಹಾಯೋಧರು–ವರ್ಷಾಕಾಲದ ಮೇಘಗಳು ಜಲವೃಷ್ಟಿಯನ್ನು ಸುರಿಸುವಂತೆ–ಬಾಣಗಳ ವೃಷ್ಟಿಯನ್ನು ಸುರಿಸಿದರು. ಸೂರ್ಯಸದೃಶವಾದ ರಥಗಳಲ್ಲಿ ಕುಳಿತು ಯುದ್ಧಮಾಡುತ್ತಿದ್ದ ಪುರುಷರ್ಷಭರಾದ ಪಾಂಡವ-ಕೌರವಯೋಧರು ಪ್ರಕಾಶಮಾನವಾದ ಮಿಂಚಿನಿಂದ ಕೂಡಿದ ಶರತ್ಕಾಲದ ಮೇಘಗಳಂತೆಯೇ ಪ್ರಕಾಶಿಸುತ್ತಿದ್ದರು. ಪಾಂಡವ-ಕೌರವಪಕ್ಷಗಳ ಆ ಯೋಧಮುಖ್ಯರು ಕೋಪದಿಂದಲೂ, ಅಸಹನೆಯಿಂದಲೂ ಕೂಡಿದವರಾಗಿದ್ದರು. ಮಹಾಧನುಸ್ಸುಗಳನ್ನು ಹಿಡಿದಿದ್ದರು. ವಿಜಯಕ್ಕಾಗಿ ಬಹಳವಾಗಿ ಪ್ರಯತ್ನಿಸುತ್ತಿದ್ದರು. ಒಬ್ಬರು ಮತ್ತೊಬ್ಬರೊಡನೆ ಸ್ಪರ್ಧಿಸುತ್ತಿದ್ದರು. ಧನುರ್ಧಾರಿಗಳಾದ ಯೋಧರು ಈ ರೀತಿಯಲ್ಲಿ ಮದಿಸಿದ ಶ್ರೇಷ್ಠಗಜಗಳೋಪಾದಿಯಲ್ಲಿ ಪರಸ್ಪರವಾಗಿ ಆಕ್ರಮಣ ನಡೆಸಿದರು. ಆ ಘೋರಯುದ್ಧದಲ್ಲಿ ಯಾರೊಬ್ಬರೂ ಉಳಿಯುವ ಸ್ಥಿತಿಯಲ್ಲಿಯೇ ಇರಲಿಲ್ಲ. ಆದರೆ :

**ನ ನೂನಂ ದೇಹಭೇದೋಽಸ್ತಿ ಕಾಲೇ ರಾಜನ್ನನಾಗತೇ ।**
**ಯತ್ರ ಸರ್ವೇ ನ ಯುಗಪದ್ವ್ಯಶೀರ್ಯನ್ತ ಮಹಾರಥಾಃ ॥೪೨॥**

ಮರಣಕಾಲವು ಸನ್ನಿಹಿತವಾಗುವ ಮೊದಲು ಯಾವುದೇ ಕಾರಣದಿಂದಲೂ ದೇಹವು ವಿನಾಶವಾಗುವುದಿಲ್ಲ. ಈ ಕಾರಣದಿಂದಲೇ ಆಗಿನ ಘೋರಸಂಗ್ರಾಮದಲ್ಲಿ ಎಲ್ಲ ಯೋಧಮುಖ್ಯರೂ ಕ್ಷತ-ವಿಕ್ಷತರಾದರೇ ಹೊರತು ಎಲ್ಲರೂ ಒಂದೇ ಬಾರಿಗೆ ನಾಶಹೊಂದಲಿಲ್ಲ.

ಆ ಸಮಯದಲ್ಲಿ ಕತ್ತರಿಸಿ ಬಿದ್ದಿದ್ದ ಅನೇಕ ಕಾಲುಗಳಿಂದಲೂ, ಕುಂಡಲಗಳಿಂದ ಯುಕ್ತವಾದ ಶಿರಸ್ಸುಗಳಿಂದಲೂ, ಧನುಸ್ಸುಗಳಿಂದಲೂ, ಬಾಣಗಳಿಂದಲೂ, ಪ್ರಾಸ-ಖಡ್ಗ-ಪರಶು-ಪಟ್ಟಿಶಗಳಿಂದಲೂ, ನಾಲೀಕಗಳಿಂದಲೂ ಕ್ಷುದ್ರನಾರಾಚಗಳಿಂದಲೂ, ನಖಗಳಿಂದಲೂ, ಶಕ್ತಿ-ತೋಮರಗಳಿಂದಲೂ, ವಿಧ-ವಿಧವಾದ ಆಕಾರಗಳನ್ನು ಹೊಂದಿದ್ದ, ಹದಮಾಡಲ್ಪಟ್ಟಿದ್ದ ಶ್ರೇಷ್ಠವಾದ ಆಯುಧಗಳಿಂದಲೂ, ವಿಚಿತ್ರವಾದ ಮತ್ತು ವಿಧ-ವಿಧವಾದ ಆಕಾರಗಳನ್ನು ಹೊಂದಿದ್ದ ಶರೀರದ ಆವರಣ (ಕವಚ)ಗಳಿಂದಲೂ, ಭಗ್ನವಾಗಿ ಹೋಗಿದ್ದ ಚಿತ್ರ-ವಿಚಿತ್ರವಾದ ರಥಗಳಿಂದಲೂ, ಅಸುನೀಗಿ ಬಿದ್ದಿದ್ದ ಗಜಾಶ್ವ

ಗಳಿಂದಲೂ, ಯೋಧರಿಂದಲೂ, ಧ್ವಜಗಳಿಂದಲೂ, ಸಾರಥಿಯಿಂದ ವಿಹೀನ ವಾಗಿದ್ದು ನಿಯಂತ್ರಕನಿಲ್ಲದೇ ಅನಿಯಂತ್ರಿತವಾಗಿ ಭಯಗೊಂಡು ಅತ್ತಲಿತ್ತ ವಾಯುವೇಗದಿಂದ ಎಳೆದಾಡುತ್ತಿದ್ದ ಕುದುರೆಗಳಿಂದ ಕೂಡಿದ, ಸಮಲಂಕೃತ ವಾದ ವಿಶಾಲವಾದ ನಗರದಂತೆ ಕಾಣುತ್ತಿದ್ದ ಶೂನ್ಯರಥಗಳಿಂದಲೂ, ವ್ಯಜನ ಗಳಿಂದಲೂ, ಕವಚಗಳಿಂದಲೂ, ಕೆಳಕ್ಕೆ ಬೀಳಿಸಲ್ಪಟ್ಟ ಧ್ವಜಗಳಿಂದಲೂ ಛತ್ರಗಳಿಂದಲೂ, ಆಭರಣಗಳಿಂದಲೂ, ವಸ್ತ್ರಗಳಿಂದಲೂ, ಸುಗಂಧಯುಕ್ತ ವಾದ ಮಾಲೆಗಳಿಂದಲೂ, ರತ್ನಹಾರಗಳಿಂದಲೂ, ಕಿರೀಟ-ಮಕುಟ ಮತ್ತು ಉಷ್ಣೀಷಗಳಿಂದಲೂ, ಕಿರುಗೆಜ್ಜೆಗಳ ಸಮೂಹಗಳಿಂದಲೂ, ವೀರರು ವಕ್ಷಃಸ್ಥಳದಲ್ಲಿ ತೊಟ್ಟಿದ್ದ ಮಣಿಗಳಿಂದಲೂ, ನಿಷ್ಕಗಳಿಂದಲೂ, ಚೂಡಾ ಮಣಿಗಳಿಂದಲೂ ವ್ಯಾಪ್ತವಾಗಿದ್ದ ಆ ರಣಭೂಮಿಯು ನಕ್ಷತ್ರಗಳಿಂದ ಕೂಡಿದ್ದ ಆಕಾಶದಂತೆಯೇ ಪ್ರಕಾಶಿಸುತ್ತಿದ್ದಿತು.

ಮಹಾರಾಜ! ಹಿಂದೆ ಹೇಳಿದಂತೆ ಕೋಪದಿಂದ ಸಹನೆಯನ್ನು ಕಳೆದು ಕೊಂಡಿದ್ದ ದುರ್ಯೋಧನನಿಗೂ ಮತ್ತು ಕುಪಿತನಾಗಿಯೂ ಅಸಹನಶೀಲ ನಾಗಿಯೂ ಇದ್ದ ನಕುಲನಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು. ದುರ್ಯೋಧನನಿಗೆ ಪ್ರತಿಕೂಲವಾಗುವ ರೀತಿಯಲ್ಲಿ ಪರಮಹೃಷ್ಟನಾಗಿದ್ದ ನಕುಲನು ದುರ್ಯೋಧನನ ಮೇಲೆ ನೂರಾರು ಬಾಣಗಳನ್ನು ಸುರಿಸುತ್ತಾ ಅವನನ್ನು ಬಲಭಾಗಕ್ಕೆ ಬಿಟ್ಟುಕೊಂಡು ಅವನೊಡನೆ ಯುದ್ಧಮಾಡುತ್ತಿದ್ದನು. ಆ ಸಮಯದಲ್ಲಿ ಭಯಂಕರವಾದ ಕೋಲಾಹಲವೆದ್ದಿತು. ತನ್ನನ್ನು ಬಲಕ್ಕೆ ಬಿಟ್ಟುಕೊಂಡು ತನಗೆ ಪ್ರತಿಕೂಲವಾಗುವ ರೀತಿಯಲ್ಲಿ ಯುದ್ಧಮಾಡುತ್ತಿರುವುದನ್ನು ಅಸಹನಶೀಲನಾದ ದುರ್ಯೋಧನನು ಸಹಿಸಿಕೊಳ್ಳಲಿಲ್ಲ. ನಿನ್ನ ಮಗನಾದ ದುರ್ಯೋಧನನು ಬಹಳ ಬೇಗ ನಕುಲನನ್ನು ತನ್ನ ಬಲಗಡೆಗೆ ಬಿಟ್ಟುಕೊಳ್ಳುವುದರ ಮೂಲಕ ಅವನಿಗೆ ಪ್ರತಿಮಾಡಿದನು. ವಿಚಿತ್ರರೀತಿಯಲ್ಲಿ ಯುದ್ಧಮಾಡುವುದನ್ನು ತಿಳಿದಿದ್ದ ತೇಜಸ್ವಿಯಾದ ನಕುಲನು ತನ್ನನ್ನು ಬಲಭಾಗಕ್ಕೆ ಬಿಟ್ಟುಕೊಂಡು ತನಗೆ ಪ್ರತೀಕಾರಮಾಡಲು ಪ್ರಯತ್ನಿಸುತ್ತಿದ್ದ ದುರ್ಯೋಧನನನ್ನು ತಡೆದನು. ನಕುಲನು ಎಲ್ಲ ಕಡೆಗಳಿಂದಲೂ ದುರ್ಯೋಧನನನ್ನು ತಡೆಯುತ್ತಾ, ಬಾಣ ಗಳ ಸಮೂಹಗಳಿಂದ ಅವನನ್ನು ಬಹಳವಾಗಿ ಪೀಡಿಸುತ್ತಾ ರಾಜನನ್ನು ಪರಾ

ಜ್ಮುಖನನ್ನಾಗಿ ಮಾಡಿದನು. ನಕುಲನ ಆ ಸಾಹಸಕಾರ್ಯವನ್ನು ಎಲ್ಲ ಸೈನಿಕರೂ ಶ್ಲಾಘಿಸಿದರು. ತಾನು ಹಿಂದೆ ಅನುಭವಿಸಿದ ಸಕಲದುಃಖಗಳನ್ನೂ ಮತ್ತು ನಿನ್ನ ದುರಾಲೋಚನೆಯನ್ನೂ ಸ್ಮರಿಸುತ್ತಲೇ ಇದ್ದ ನಕುಲನು ಓಡಿ ಹೋಗುತ್ತಿದ್ದ ನಿನ್ನ ಮಗನನ್ನು ಕುರಿತು ನಿಲ್ಲು-ನಿಲ್ಲೆಂದು ಕೂಗುತ್ತಿದ್ದನು.

೧೮೭ನೆಯ ಅಧ್ಯಾಯವು ಮುಗಿಯಿತು.

೧೮೮ನೆಯ ಅಧ್ಯಾಯ ದ್ರೋಣವಧಪರ್ವ (ಮುಂದುವರಿದಿದೆ.)

## ದುಃಶಾಸನ-ಸಹದೇವರ, ಕರ್ಣ-ಭೀಮರ ಮತ್ತು ದ್ರೋಣಾರ್ಜುನರ ಮಹಾಸಮರ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

ಮಹಾರಾಜ! ಅನಂತರ ಕ್ರುದ್ಧನಾದ ದುಃಶಾಸನನು ತೀವ್ರವಾದ ರಥವೇಗದಿಂದ ಭೂಮಿಯನ್ನೇ ನಡುಗಿಸುತ್ತಿರುವನೋ–ಎಂಬಂತೆ ರಥದಲ್ಲಿ ಕುಳಿತು ವೇಗದಿಂದ ಹೋಗಿ ಸಹದೇವನನ್ನು ಆಕ್ರಮಿಸಿದನು. ದುಃಶಾಸನ ನಿನ್ನೂ ಮೇಲೆ ಬೀಳುವುದರೊಳಗಾಗಿಯೇ ಶತ್ರುಸೂದನನಾದ, ಮಾದ್ರಿಯ ಮಗನಾದ ಸಹದೇವನು ಒಂದು ಭಲ್ಲದಿಂದ ದುಃಶಾಸನನ ಸಾರಥಿಯ ಶಿರಸ್ತ್ರಾಣಸಹಿತವಾದ ಕತ್ತನ್ನು ಬಹಳ ಶೀಘ್ರವಾಗಿ ಕತ್ತರಿಸಿದನು.

ಸಹದೇವನು ಅತ್ಯಂತತ್ವರೆಯಿಂದ ದುಃಶಾಸನನ ಸಾರಥಿಯ ಕತ್ತನ್ನು ಕತ್ತರಿಸಿದುದನ್ನು–ದುಃಶಾಸನನಾಗಲೀ ಅವನಕಡೆಯ ಸೈನಿಕರಾಗಲೀ–ತಿಳಿ ಯಲೇ ಇಲ್ಲ. ನಿಯಂತ್ರಕನಿಲ್ಲದ ಕಾರಣದಿಂದ ಕುದುರೆಗಳು ಸ್ವೇಚ್ಛೆಯಿಂದ ಹೋಗುತ್ತಿರುವುದನ್ನು ಗಮನಿಸಿದನಂತರವೇ ದುಃಶಾಸನನಿಗೆ ಸಾರಥಿಯು ಹತನಾಗಿರುವ ವಿಷಯವು ತಿಳಿಯಿತು. ಹಯಶಿಕ್ಷೆಯಲ್ಲಿ ಪರಿಣತನಾಗಿದ್ದ, ರಥಿಶ್ರೇಷ್ಠನಾದ ದುಃಶಾಸನನು ತಾನೇ ಕುದುರೆಗಳ ಕಡಿವಾಣಗಳನ್ನೂ ಹಿಡಿದು ಅವುಗಳನ್ನು ನಿಯಂತ್ರಿಸುತ್ತಾ ಶೀಘ್ರವಾಗಿಯೂ, ಚಿತ್ರ-ವಿಚಿತ್ರವಾಗಿಯೂ, ಖಡಾ-ಖಡಿಯಾಗಿಯೂ ಸಹದೇವನೊಡನೆ ಯುದ್ಧಮಾಡಲು ಉಪಕ್ರಮಿಸಿದನು. ಸೂತನಿಂದ ವಿಹೀನವಾಗಿದ್ದ ರಥದಲ್ಲಿ ಕುಳಿತು, ಸ್ವಲ್ಪವಾದರೂ ಭಯಗೊಳ್ಳದಿರುವನಂತೆ ರಣಾಂಗಣದಲ್ಲಿ ಸಂಚರಿಸುತ್ತಿದ್ದ ದುಃಶಾಸನನ ಸಾಹಸಕರ್ಮವನ್ನು ನಮ್ಮ ಕಡೆಯವರೂ ಶತ್ರುಗಳ ಕಡೆ ಯವರೂ ಶ್ಲಾಘಿಸಿದರು. ಸಹದೇವನು ದುಃಶಾಸನನ ಕುದುರೆಗಳನ್ನು ತೀಕ್ಷ್ಣ

ವಾದ ಬಾಣಗಳಿಂದ ಮುಚ್ಚಿದನು. ಸಹದೇವನ ಬಾಣಗಳಿಂದ ಪೀಡಿತವಾದ ಆ ಕುದುರೆಗಳು ಅಲ್ಲಿಂದಿಲ್ಲಿಗೆ–ಇಲ್ಲಿಂದಲ್ಲಿಗೆ ಓಡತೊಡಗಿದುವು. ಆ ಸಮಯದಲ್ಲಿ ಅವುಗಳನ್ನು ನಿಯಂತ್ರಿಸಲು ಕಡಿವಾಣಗಳನ್ನು ಹಿಡಿದ ದುಃಶಾಸನನು ಧನುಸ್ಸನ್ನು ವಿಸರ್ಜಿಸಿದನು. ಕುದುರೆಗಳನ್ನು ಹತೋಟಿಗೆ ತೆಗೆದುಕೊಂಡು ಸಹದೇವನೆದುರು ರಥವನ್ನು ನಿಲ್ಲಿಸಿದನಂತರ ಪುನಃ ಕಡಿವಾಣಗಳನ್ನು ಬಿಟ್ಟು ಧನುಸ್ಸನ್ನು ಕೈಗೆತ್ತಿಕೊಳ್ಳುತ್ತಿದ್ದನು. ಇಂತಹ ದೌರ್ಬಲ್ಯದ ಸಂದರ್ಭಗಳಲ್ಲಿಯೇ ಸಹದೇವನು ದುಃಶಾಸನನನ್ನು ಬಾಣಗಳಿಂದ ಮುಚ್ಚುತ್ತಿದ್ದನು. ಆ ಮಧ್ಯದಲ್ಲಿ ನಿನ್ನ ಮಗನನ್ನು ರಕ್ಷಿಸುವ ಇಚ್ಛೆಯಿಂದ ಕರ್ಣನು ಸಹಾಯಕ್ಕಾಗಿ ಬಂದನು. ಆಗ ವೃಕೋದರನು ಏಕಾಗ್ರಚಿತ್ತನಾಗಿ ಆಕರ್ಣವಾಗಿ ಸೆಳೆದ ಮೂರು ಭಲ್ಲಗಳಿಂದ ಕರ್ಣನ ತೋಳುಗಳಲ್ಲಿಯೂ ಮತ್ತು ವಕ್ಷಃಸ್ಥಳದಲ್ಲಿಯೂ ಪ್ರಹರಿಸಿ ಗರ್ಜಿಸಿದನು. ಕಾಲಿನಿಂದ ಮೆಟ್ಟಿದ ಸರ್ಪದೋಪಾದಿಯಲ್ಲಿ–ಕ್ರುದ್ಧನಾದ ಕರ್ಣನು ಪುನಃ ಭೀಮಸೇನನ ಬಳಿಗೆ ಧಾವಿಸಿ ಬಂದು ನಿಶಿತವಾದ ಬಾಣಗಳನ್ನು ಅವನ ಮೇಲೆ ಸುರಿಸುತ್ತಾ ಅವನು ಮುಂದೆ ಬರದಂತೆ ತಡೆದನು. ಆ ಸಮಯದಲ್ಲಿ ಭೀಮ-ರಾಧೇಯರಿಗೆ ಘೋರವಾದ ಯುದ್ಧವಾಯಿತು. ಅವರಿಬ್ಬರೂ ಹೋರಿಗಳಂತೆ ಗುಟುರು ಹಾಕುತ್ತಿದ್ದರು. ಅಗಲವಾಗಿ ಕಣ್ಣುಗಳನ್ನು ಬಿಟ್ಟುಕೊಂಡಿದ್ದರು. ಕ್ರುದ್ಧರಾದ ಆ ಇಬ್ಬರೂ ಅತ್ಯಂತರಭಸದಿಂದ ಒಬ್ಬರ ಮೇಲೊಬ್ಬರು ಬಿದ್ದರು. ಯುದ್ಧಕುಶಲರಾದ ಭೀಮ-ಕರ್ಣರು ಒಬ್ಬರು ಮತ್ತೊಬ್ಬರಿಗೆ ಸೇರಿಕೊಂಡಂತೆಯೇ ಇದ್ದುದರಿಂದ ಪರಸ್ಪರವಾಗಿ ಬಾಣಗಳನ್ನು ಬಿಡುವುದು ನಿಂತುಹೋಗಿ ಅವರಿಬ್ಬರೂ ಗದಾಯುದ್ಧವನ್ನು ಪ್ರಾರಂಭಿಸಿದರು. ಭೀಮಸೇನನು ತನ್ನ ಗದೆಯಿಂದ ಕರ್ಣನ ರಥದ ಮೂಕಿಯನ್ನು ಪ್ರಹರಿಸಿ ನೂರಾರು ಚೂರುಗಳನ್ನಾಗಿ ಮಾಡಿದನು. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಅನಂತರ ಕರ್ಣನು ಭೀಮನ ಆ ಗದೆಯನ್ನೇ ಎತ್ತಿಕೊಂಡು ಗರ-ಗರನೆ ತಿರುಗಿಸಿ ಭೀಮನ ರಥದ ಕಡೆಗೆ ಎಸೆದನು. ಆ ಗದೆಯನ್ನು ಭೀಮಸೇನನು ಮತ್ತೊಂದು ಗದೆಯಿಂದಲೇ ಭಗ್ನಗೊಳಿಸಿದನು. ಅನಂತರ ಭೀಮಸೇನನು ಮತ್ತೊಂದು ಭಾರವಾಗಿದ್ದ ಗದೆಯನ್ನು ಕರ್ಣನ ಕಡೆಗೆ ಎಸೆದನು. ಒಡನೆಯೇ ಕರ್ಣನು ನಿಶಿತವಾಗಿ ಮಾಡಲ್ಪಟ್ಟಿದ್ದ, ಸುಂದರವಾದ ರೆಕ್ಕೆಗಳನ್ನು

ಹೊಂದಿದ್ದ ಬಾಣಗಳಿಂದ ಪುನಃ ಭೀಮಪ್ರೇಷಿತವಾದ ಗದೆಯನ್ನು ಪ್ರಹರಿಸಿದನು. ಬಾಣಗಳ ಸತತಪ್ರಹಾರದಿಂದಾಗಿ ಆ ಗದೆಯು ಪುನಃ ಭೀಮನ ಸಮೀಪಕ್ಕೆ ಹಿಂದಿರುಗಿ ಬಂದಿತು. ಕರ್ಣನ ಬಾಣಗಳಿಂದ ವೇಗವಾಗಿ ದೂಡಲ್ಪಟ್ಟ ಆ ಗದೆಯು ಮಂತ್ರದಿಂದ ಹತವಾದ ವಿಷಸರ್ಪದೋಪಾದಿಯಲ್ಲಿ–ಭೀಮನ ರಥದ ಮೇಲೆ ರಭಸದಿಂದ ಬಿದ್ದುದರ ಪರಿಣಾಮವಾಗಿ ಭೀಮಸೇನನ ವಿಶಾಲವಾದ ಧ್ವಜವು ಮುರಿದು ಕೆಳಕ್ಕೆ ಬಿದ್ದಿತು. ಗದೆಯಿಂದ ಪ್ರಹೃತನಾದ ಭೀಮಸೇನನ ಸಾರಥಿಯೂ ಮೂರ್ಛಿತನಾದನು. ಕ್ರೋಧಮೂರ್ಛಿತನಾದ ಭೀಮಸೇನನು ಎಂಟು ಬಾಣಗಳನ್ನು ಕರ್ಣನ ಮೇಲೆ ಪ್ರಯೋಗಿಸಿದನು. ಮಹಾಬಲನಾದ, ಶತ್ರುವೀರಹಂತಕನಾದ ಭೀಮಸೇನನು ನಗು-ನಗುತ್ತಲೇ ನಿಶಿತವಾದ ಎಂಟು ಬಾಣಗಳಿಂದ ಕರ್ಣನ ರಥದ ಧ್ವಜವನ್ನೂ, ಧನುಸ್ಸನ್ನೂ ಮತ್ತು ಬತ್ತಳಿಕೆಯನ್ನೂ ಕತ್ತರಿಸಿದನು. ಕರ್ಣನು ಸುವರ್ಣಮಯವಾದ ಹಿಂಭಾಗದಿಂದ ಕೂಡಿದ್ದ, ದುರಾಸದವಾದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ರಥದಲ್ಲಿಟ್ಟಿದ್ದ ಬಾಣಗಳಿಂದ ಭೀಮಸೇನನ ಕರಿಯ ಬಣ್ಣದಿಂದ ಕೂಡಿದ್ದ ಕುದುರೆಗಳನ್ನೂ ಅವನ ಇಬ್ಬರು ಪಾರ್ಶ್ವರಕ್ಷಕರನ್ನೂ ಸಂಹರಿಸಿದನು. ರಥಹೀನನಾದ, ಅರಿಂದಮನಾದ ಭೀಮಸೇನನು– ಸಿಂಹವು ಪರ್ವತಶಿಖರಕ್ಕೆ ನೆಗೆಯುವಂತೆ–ನಕುಲನ ರಥಕ್ಕೆ ಹಾರಿ ಕುಳಿತನು.

ಅದೇ ರೀತಿಯಲ್ಲಿ ಗುರು-ಶಿಷ್ಯರಾದ, ಮಹಾರಥಿಗಳಾದ ದ್ರೋಣಾರ್ಜುನರು–ಪರಸ್ಪರವಾಗಿ ಬಾಣಗಳಿಂದ ಪ್ರಹರಿಸುತ್ತಾ ವಿಚಿತ್ರವಾದ ರೀತಿಯಲ್ಲಿ ಯುದ್ಧಮಾಡುತ್ತಿದ್ದರು. ಶೀಘ್ರತಾಪೂರ್ವಕವಾದ ಬಾಣಗಳ ಸಂಧಾನ ಪ್ರಯೋಗಗಳಿಂದಲೂ, ದ್ವೈರಥಯುದ್ಧದಿಂದಲೂ ಪ್ರೇಕ್ಷಕರ ಕಣ್ಮನಗಳನ್ನು ಭ್ರಮೆಗೊಳಿಸುತ್ತಾ ದ್ರೋಣಾರ್ಜುನರು ಯುದ್ಧಮಾಡುತ್ತಿದ್ದರು. ಭರತಶ್ರೇಷ್ಠನೇ! ಹಿಂದೆಂದೂ ನೋಡದಿದ್ದ ಗುರು-ಶಿಷ್ಯರ ಯುದ್ಧವನ್ನು ನೋಡುತ್ತಾ ಎಲ್ಲ ಯೋಧರೂ ಯುದ್ಧದಿಂದ ವಿರಮಿಸಿದರು. ಉಭಯ ಸೈನ್ಯಗಳ ಮಧ್ಯದಲ್ಲಿ ವಿಚಿತ್ರವಾದ ರಥದ ನಡಿಗೆಗಳನ್ನು ಪ್ರಕಟಪಡಿಸುತ್ತಾ ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಬಲಭಾಗಕ್ಕೆ ಬಿಟ್ಟುಕೊಂಡು ಯುದ್ಧಮಾಡಲು ಇಬ್ಬರೂ ಅಪೇಕ್ಷಿಸುತ್ತಿದ್ದರು. ದ್ರೋಣಾರ್ಜುನರ ಪರಾಕ್ರಮವನ್ನು ಎರಡೂ ಕಡೆಗಳ ಯೋಧರೂ ವಿಸ್ಮಯಪೂರ್ವಕವಾಗಿ

ನೋಡುತ್ತಿದ್ದರು. ಮಾಂಸದ ತುಂಡಿನ ಸಲುವಾಗಿ ಆಕಾಶದಲ್ಲಿ ಎರಡು ಗಿಡಗಗಳ ನಡುವೆ ನಡೆಯುವ ಸೆಣೆಸಾಟದಂತೆ–ದ್ರೋಣಾರ್ಜುನರ ನಡುವೆ ಮಹಾಯುದ್ಧವು ನಡೆಯಿತು. ಕುಂತೀಪುತ್ರನನ್ನು ಜಯಿಸಬೇಕೆನ್ನುವ ಇಚ್ಛೆಯಿಂದ ದ್ರೋಣರು ಏನೇನು ಮಾಡುತ್ತಿದ್ದರೋ–ಯಾವ ಯಾವ ರೀತಿಯಲ್ಲಿ ಬಾಣಗಳನ್ನು ಬಿಡುತ್ತಿದ್ದರೋ–ಅವುಗಳೆಲ್ಲವನ್ನೂ ಪಾಂಡವನು ಗಹ-ಗಹಿಸಿ ನಗುತ್ತಲೇ ವಿನಾಶಗೊಳಿಸುತ್ತಿದ್ದನು. ಯಾವಾಗ ಸಾಧಾರಣವಾದ ಬಾಣಗಳ ಪ್ರಯೋಗದಿಂದ ಅರ್ಜುನನನ್ನು ಅತಿಶಯಿಸಲು ದ್ರೋಣರಿಗೆ ಸಾಧ್ಯವಾಗಲಿಲ್ಲವೋ–ಆಗ ಅಸ್ತ್ರಮಾರ್ಗವಿಶಾರದರಾದ ದ್ರೋಣರು ಮಹಾಸ್ತ್ರಗಳನ್ನು ಪ್ರದರ್ಶಿಸಲು ಉಪಕ್ರಮಿಸಿದರು. ದ್ರೋಣರ ಧನುಸ್ಸಿನಿಂದ ಐಂದ್ರ, ಪಾಶುಪತ, ತ್ವಾಷ್ಟ್ರ, ವಾಯವ್ಯ, ವಾರುಣ–ಇವೇ ಮೊದಲಾದ ಯಾವ ಮಹಾಸ್ತ್ರಗಳು ಹೊರಬೀಳುತ್ತಿದ್ದುವೋ ಅವುಗಳೆಲ್ಲವನ್ನೂ ಅರ್ಜುನನು ಪ್ರತ್ಯಸ್ತ್ರಗಳಿಂದ ಶಾಂತಗೊಳಿಸಿದನಂತರ ಅಸ್ತ್ರಗಳಿಂದ ಅಸ್ತ್ರಗಳನ್ನು ವಿಧಿವತ್ತಾಗಿ ಪಾರ್ಥನು ಉಪಶಮನಗೊಳಿಸುತ್ತಿದ್ದನು. ದ್ರೋಣರು ಶ್ರೇಷ್ಠವಾದ ದಿವ್ಯಾಸ್ತ್ರಗಳಿಂದಲೇ ಅರ್ಜುನನನ್ನು ಆಕ್ರಮಿಸಿದರು. ಪಾರ್ಥನನ್ನು ಜಯಿಸುವ ಇಚ್ಛೆಯಿಂದ ದ್ರೋಣರು ಯಾವ ಯಾವ ಮಹಾಸ್ತ್ರಗಳನ್ನು ಬಿಡುತ್ತಿದ್ದರೋ–ಅಂತಹ ಅಸ್ತ್ರಗಳನ್ನು ವಿಘಾತಗೊಳಿಸಲು ಅರ್ಜುನನೂ ಅವುಗಳಿಗೆ ತಕ್ಕುದಾದ ಪ್ರತ್ಯಸ್ತ್ರಗಳನ್ನೇ ಪ್ರಯೋಗಿಸುತ್ತಿದ್ದನು. ದ್ರೋಣರು ಬಿಟ್ಟ ದಿವಾಸ್ತ್ರಗಳೆಲ್ಲವನ್ನೂ ಅರ್ಜುನನು ಯಥಾವಿಧಿಯಾಗಿಯೇ ವಿನಾಶಗೊಳಿಸುತ್ತಿರಲಾಗಿ ದ್ರೋಣರು ತಮ್ಮ ಶಿಷ್ಯನನ್ನು ಮನಸ್ಸಿನಲ್ಲಿಯೇ ಪ್ರಶಂಸಿಸಿದರು. ಶತ್ರುಗಳಿಗೆ ಪರಿತಾಪವನ್ನುಂಟುಮಾಡುವ ದ್ರೋಣರು ತಮ್ಮ ಶಿಷ್ಯನಾದ ಅರ್ಜುನನ ಕಾರಣದಿಂದ ಈ ಪ್ರಪಂಚದಲ್ಲಿ ತಾವು ಎಲ್ಲ ಶಸ್ತ್ರವೇತ್ತರಿಗಿಂತಲೂ ಅಧಿಕರಾದವರೆಂದು ಭಾವಿಸಿಕೊಂಡರು. ಮಹಾತ್ಮರಾದ ಯೋಧರ ಮಧ್ಯದಲ್ಲಿ ಅರ್ಜುನನಿಂದ ತಡೆಯಲ್ಪಡುತ್ತಿದ್ದ ದ್ರೋಣರು ಪ್ರೀತಿಪೂರ್ವಕವಾಗಿ ನಗು-ನಗುತ್ತಲೇ ಮುಂದೆಬಾರದಂತೆ ಅರ್ಜುನನನ್ನು ಪ್ರಯತ್ನಪೂರ್ವಕವಾಗಿ ತಡೆಯುತ್ತಿದ್ದರು. ಆ ಸಮಯದಲ್ಲಿ ಅಂತರಿಕ್ಷದಲ್ಲಿ ಸಾವಿರಾರು ದೇವ-ಗಂಧರ್ವರೂ ಋಷಿಗಳೂ, ಸಿದ್ಧಸಂಘಗಳೂ ಯುದ್ಧವನ್ನು ನೋಡುವ ಇಚ್ಛೆಯಿಂದ ಕುಳಿತಿದ್ದುವು. ಅಪ್ಸರೆಯರಿಂದ ವ್ಯಾಪ್ತವಾಗಿದ್ದ

ಮತ್ತು ದೇವ-ಗಂಧರ್ವರಿಂದ ಸಮಾಕುಲವಾಗಿದ್ದ ಆಕಾಶವು–ಮೇಘಗಳ ಸಮೂಹದಿಂದ ಕಾಂತಿಯುಕ್ತವಾಗಿ ಕಾಣುವಂತೆ–ಕಾಂತಿಯುಕ್ತವಾಗಿದ್ದಿತು. ನರಾಧಿಪನೇ! ದ್ರೋಣ-ಪಾರ್ಥರ ಸ್ತೋತ್ರಗಳನ್ನೊಳಗೊಂಡ ಮಾತುಗಳನ್ನು ಅದೃಶ್ಯರಾದ ವ್ಯಕ್ತಿಗಳು ಹೇಳುತ್ತಿದ್ದುದು ಪುನಃ-ಪುನಃ ಕೇಳಿಬರುತ್ತಿದ್ದಿತು. ಮಹಾಸ್ತ್ರಗಳನ್ನು ಧನುಸ್ಸುಗಳಿಂದ ಬಿಡುತ್ತಿರಲಾಗಿ, ಹತ್ತು ದಿಕ್ಕುಗಳನ್ನೂ ಆ ಮಹಾಸ್ತ್ರಗಳಿಂದ ಬೆಳಗುತ್ತಿರಲಾಗಿ, ಯುದ್ಧವನ್ನು ನೋಡಲು ಆಗಮಿಸಿದ್ದ ಸಿದ್ಧರೂ ಮತ್ತು ಋಷಿಗಳೂ ಹೀಗೆ ಹೇಳುತ್ತಿದ್ದರು :

**ನೈವೇದಂ ಮಾನುಷಂ ಯುದ್ಧಂ ನಾಸುರಂ ನ ಚ ರಾಕ್ಷಸಮ್ ।**
**ನ ದೈವಂ ನ ಚ ಗಾನ್ಧರ್ವಂ ಬ್ರಾಹ್ಮಂ ಧ್ರುವಮಿದಂ ಪರಮ್ ।**
**ವಿಚಿತ್ರಮಿದಮಾಶ್ಚರ್ಯಂ ನ ನೋದೃಷ್ಟಂ ನ ಚ ಶ್ರುತಮ್ ॥೪೨॥**

"ಇದು ಮಾನುಷಯುದ್ಧವೂ ಅಲ್ಲ; ಆಸುರಯುದ್ಧವೂ ಅಲ್ಲ; ರಾಕ್ಷಸಯುದ್ಧವೂ ಅಲ್ಲ; ದೈವ-ಗಾಂಧರ್ವಯುದ್ಧವೂ ಅಲ್ಲ. ನಿಶ್ಚಯ ವಾಗಿಯೂ ಇದು ಪರಮೋತ್ತಮವಾದ ಬ್ರಾಹ್ಮಣಯುದ್ಧವೇ ಆಗಿದೆ. ಈ ಯುದ್ಧವು ವಿಚಿತ್ರವೂ, ಆಶ್ಚರ್ಯಕಾರಕವೂ ಆಗಿದೆ. ನಾವು ಇಂತಹ ಯುದ್ಧವು ನಡೆದುದನ್ನು ಹಿಂದೆ ನೋಡಿಯೂ ಇರಲಿಲ್ಲ; ಕೇಳಿಯೂ ಇರಲಿಲ್ಲ. ಆಚಾರ್ಯದ್ರೋಣರು ಅರ್ಜುನನನ್ನು ಅತಿಶಯಿಸಿ ಯುದ್ಧಮಾಡುತ್ತಾರೆ. ಅರ್ಜುನನು ಆಚಾರ್ಯರನ್ನು ಅತಿಶಯಿಸಿ ಯುದ್ಧಮಾಡುತ್ತಾನೆ. ಇವರಿಬ್ಬರಲ್ಲಿ ಯಾವ ವಿಧವಾದ ವ್ಯತ್ಯಾಸವನ್ನೂ ಕಂಡುಹಿಡಿಯಲು ಬೇರೆ ಯಾರಿಂದಲೂ ಸಾಧ್ಯವೇ ಆಗುವುದಿಲ್ಲ.

**ಯದಿ ರುದ್ರೋ ದ್ವಿಧಾಕೃತ್ಯ ಯುಧ್ಯೇತಾತ್ಮಾನಮಾತ್ಮನಾ ।**
**ತತ್ರ ಶಕ್ಯೋಪಮಾ ಕರ್ತುಮನ್ಯತ್ರ ತು ನ ವಿದ್ಯತೇ ॥೪೪॥**

ರುದ್ರನು ತನ್ನ ಶರೀರವನ್ನೇ ಎರಡು ಭಾಗಗಳನ್ನಾಗಿ ಮಾಡಿಕೊಂಡು ಆ ಎರಡು ಶರೀರಗಳೂ ಪರಸ್ಪರವಾಗಿ ಯುದ್ಧಮಾಡುವುದಾದರೆ ಆ ಒಂದು ಅಪೂರ್ವಯುದ್ಧದ ಉಪಮೆಯನ್ನು ದ್ರೋಣಾರ್ಜುನರ ಯುದ್ಧಕ್ಕೆ ಕೊಡ ಬಹುದಾಗಿದೆ. ದ್ವೈಧೀಭೂತರಾದ ರುದ್ರರ ಯುದ್ಧಕ್ಕೆ ದ್ರೋಣಾರ್ಜುನರ

ಯುದ್ಧವು ಸಮಾನವಾಗಿದೆಯೆಂದು ಹೇಳಬಹುದು. ಅದು ಹೊರತಾಗಿ ಇವರ ಯುದ್ಧಕ್ಕೆ ಬೇರೆಯ ಉಪಮಾನವೇ ಇಲ್ಲ.

**ಜ್ಞಾನಮೇಕಸ್ಥಮಾಚಾರ್ಯೇ ಜ್ಞಾನಂ ಯೋಗಶ್ಚ ಪಾಣ್ಡವೇ ।**
**ಶೌರ್ಯಮೇಕಸ್ಥಮಾಚಾರ್ಯೇ ಬಲಂ ಶೌರ್ಯಂ ಚ ಪಾಣ್ಡವೇ ॥**

ಶಸ್ತ್ರಾಸ್ತ್ರಗಳ ಸಂಪೂರ್ಣಜ್ಞಾನವೂ ಆಚಾರ್ಯದ್ರೋಣರಲ್ಲಿ ಏಕತ್ರ ನೆಲಸಿದೆ. ಆದರೆ ಪಾಂಡವನಲ್ಲಿ ಜ್ಞಾನ ಮತ್ತು ಉಪಾಯ ಎರಡೂ ಇವೆ. ಆಚಾರ್ಯರೊಬ್ಬರಲ್ಲಿಯೇ ಶೌರ್ಯವು ನೆಲೆಸಿದೆ. ಆದರೆ ಅರ್ಜುನನಲ್ಲಿ ಬಲ ಮತ್ತು ಶೌರ್ಯಗಳೆರಡೂ ಇವೆ.

**ನೇಮೌ ಶಕ್ಯೌ ಮಹೇಷ್ವಾಸೌ ಯುದ್ಧೇ ಕ್ಷಪಯಿತುಂ ಪರೈಃ ।**
**ಇಚ್ಛಮಾನೌ ಪುನರಿಮೌ ಹನ್ಯೇತಾಂ ಸಾಮರಂ ಜಗತ್ ॥೪೬॥**

ಮಹಾಧನುಷ್ಮಂತರಾದ ಇವರಿಬ್ಬರನ್ನೂ ಯುದ್ಧದಲ್ಲಿ ಶತ್ರುಗಳಾರೂ ಪರಾಜಯಗೊಳಿಸಲಾರರು. ಇವರೇನಾದರೂ ಇಚ್ಛಿಸಿದ್ದೇ ಆದರೆ ದೇವತೆಗಳಿಂದ ಕೂಡಿರುವ ಈ ಜಗತ್ತನ್ನೇ ಸಂಹಾರಮಾಡಬಲ್ಲರು."

ಮಹಾರಾಜ! ಆ ಇಬ್ಬರು ಪುರುಷಶ್ರೇಷ್ಠರನ್ನು (ಪುರುಷಶ್ರೇಷ್ಠರು ಮಾಡುತ್ತಿದ್ದ ಯುದ್ಧವನ್ನು) ನೋಡಿದ ಅದೃಶ್ಯಪ್ರಾಣಿಗಳೂ ಮತ್ತು ಎಲ್ಲೆಡೆಯಲ್ಲಿಯೂ ಕಾಣುವ ಪ್ರಾಣಿಗಳೂ ಹೀಗೆ ಮಾತನಾಡಿಕೊಳ್ಳುತ್ತಿದ್ದುವು.

ಅನಂತರ ಮಹಾಬುದ್ಧಿವಂತರಾದ ದ್ರೋಣರು ಅದೃಶ್ಯವಾದ ಪ್ರಾಣಿಗಳನ್ನೂ ಮತ್ತು ಪಾರ್ಥನನ್ನೂ ಸಂತಾಪಗೊಳಿಸುತ್ತಾ ಬ್ರಹ್ಮಾಸ್ತ್ರವನ್ನು ಪ್ರಕಟಪಡಿಸಿದರು.

**ತತಶ್ಚಚಾಲ ಪೃಥಿವೀ ಸಪರ್ವತವನದ್ರುಮಾ ।**
**ವವೌ ಚ ವಿಷಮೋ ವಾಯುಃ ಸಾಗರಾಶ್ಚಾಪಿ ಚುಕ್ಷುಭುಃ ॥೪೯॥**

ದ್ರೋಣರು ಬ್ರಹ್ಮಾಸ್ತ್ರವನ್ನು ಪ್ರಕಟಪಡಿಸಿದೊಡನೆಯೇ ಪರ್ವತ-ವನ-ವೃಕ್ಷಗಳಿಂದ ಸಮಾಕುಲವಾಗಿದ್ದ ಪೃಥಿವಿಯು ನಡುಗಿತು. ಚಂಡ ಮಾರುತವು ಬೀಸತೊಡಗಿತು. ಸಮುದ್ರಗಳು ಅಲ್ಲೋಲ-ಕಲ್ಲೋಲವಾದುವು.

ಮಹಾತ್ಮರಾದ ದ್ರೋಣರು ಆ ಮಹಾಸ್ತ್ರವನ್ನು ಮೇಲೆತ್ತಲಾಗಿ

ಪ್ರಪಂಚದ ಎಲ್ಲ ಪ್ರಾಣಿಗಳಿಗೂ, ಕುರು-ಪಾಂಡವ ಸೈನಿಕರಿಗೂ ದೊಡ್ಡ ಆತಂಕವುಂಟಾಯಿತು. ಅನಂತರ ಅರ್ಜುನನು ಆಚಾರ್ಯರ ಬ್ರಹ್ಮಾಸ್ತ್ರವನ್ನು ಬ್ರಹ್ಮಾಸ್ತ್ರದಿಂದಲೇ ಪ್ರಹರಿಸಿದನು. ಒಡನೆಯೇ ಎಲ್ಲರ ಮನಸ್ಸುಗಳಲ್ಲಿಯೂ ಹುಟ್ಟಿದ್ದ ಉಪದ್ರವವು ಉಪಶಮನಗೊಂಡಿತು. ದ್ರೋಣಾರ್ಜುನರ ಯುದ್ಧವು ಯಾವಾಗ ಕೊನೆಯನ್ನೇ ಕಾಣಲಿಲ್ಲವೋ–ಅವರಲ್ಲಿ ಯಾರೊಬ್ಬರೂ ಸೋಲಲಿಲ್ಲವೋ–ಆಗ ಸಾಮೂಹಿಕಯುದ್ಧವು ಪ್ರಾರಂಭವಾಗಿ ದ್ರೋಣಾರ್ಜುನರ ಯುದ್ಧವು ವ್ಯಾಕುಲಗೊಂಡಿತು (ಕೊನೆಯನ್ನು ಕಂಡಿತು). ದ್ರೋಣ-ಪಾರ್ಥರಿಬ್ಬರಿಗೂ ಭಯಂಕರವಾದ ಯುದ್ಧವು ನಡೆಯುತ್ತಿರಲಾಗಿ ಪುನಃ ಆ ರಣಭೂಮಿಯಲ್ಲಿ ಏನಾಗುತ್ತಿದೆಯೆಂಬುದೇ ತಿಳಿಯುತ್ತಿರಲಿಲ್ಲ.

ಆಕಾಶವು ಮೇಘಗಳ ಸಮೂಹದಿಂದ ವ್ಯಾಪ್ತವಾಗುವಂತೆ–ಬಾಣಗಳ ಸಮೂಹದಿಂದ ಆಕಾಶವೇ ವ್ಯಾಪ್ತವಾಗಿರಲಾಗಿ, ಅಂತರಿಕ್ಷದಲ್ಲಿ ಚಲಿಸುತ್ತಿದ್ದ ಯಾವ ಪಕ್ಷಿಯೂ ಮುಂದೆ ಹೋಗಲು ಸಾಧ್ಯವಾಗುತ್ತಿರಲಿಲ್ಲ."

೧೮೮ನೆಯ ಅಧ್ಯಾಯವು ಮುಗಿಯಿತು.

೧೮೯ನೆಯ ಅಧ್ಯಾಯ ದ್ರೋಣವಧಪರ್ವ (ಮುಂದುವರಿದಿದೆ.)

## ಧೃಷ್ಟದ್ಯುಮ್ನನು ದುಃಶಾಸನನನ್ನು ಪರಾಜಯಗೊಳಿಸಿ ದ್ರೋಣರನ್ನು ಆಕ್ರಮಿಸಿದುದು : ನಕುಲ-ಸಹದೇವರು ಧೃಷ್ಟದ್ಯುಮ್ನನನ್ನು ರಕ್ಷಿಸಿದುದು : ದುರ್ಯೋಧನ-ಸಾತ್ಯಕಿಗಳ ಸಂಭಾಷಣೆ ಮತ್ತು ಯುದ್ಧ: ಕರ್ಣ-ಭೀಮಸೇನರ ಸಂಗ್ರಾಮ : ಕೌರವರ ಮೇಲೆ ಅರ್ಜುನನ ಆಕ್ರಮಣ

ಸಂಜಯನು ಭಯಂಕರಯುದ್ಧದ ವರ್ಣನೆಯನ್ನು ಮುಂದುವರಿಸಿ ಹೇಳುತ್ತಾನೆ :

ಮಹಾರಾಜ! ಗಜಾಶ್ವ-ಪದಾತಿಸೈನಿಕರ ಸಂಹಾರವು ಅವ್ಯಾಹತವಾಗಿ ನಡೆಯುತ್ತಿರಲಾಗಿ, ದುಃಶಾಸನನು ಧೃಷ್ಟದ್ಯುಮ್ನನೊಡನೆ ಯುದ್ಧದಲ್ಲಿ ತೊಡಗಿದನು. ದ್ರೋಣರೊಡನೆ ಯುದ್ಧದಲ್ಲಿ ಆಸಕ್ತನಾಗಿದ್ದ ಧೃಷ್ಟ ದ್ಯುಮ್ನನನ್ನು ದುಃಶಾಸನನು ಬಾಣಗಳಿಂದ ಬಹಳವಾಗಿ ಪೀಡಿಸಿದನು. ಅದರಿಂದ ಪರಮಕ್ರುದ್ಧನಾದ ಪಾರ್ಷತನು ನಿಶಿತವಾದ ಬಾಣಗಳಿಂದ ನಿನ್ನ

ಮಗನ ಕುದುರೆಗಳನ್ನು ಮುಚ್ಚಿದನು. ಧೃಷ್ಟದ್ಯುಮ್ನನ ಬಾಣಗಳಿಂದ ಮುಚ್ಚಲ್ಪಟ್ಟಿದ್ದ ಸಾರಥಿ-ಧ್ವಜಸಹಿತವಾದ ದುಃಶಾಸನನ ರಥವು ಕ್ಷಣ ಕಾಲದವರೆಗೆ ಕಾಣಿಸಲೇ ಇಲ್ಲ. ಮಹಾತ್ಮನಾದ ಪಾಂಚಾಲ್ಯನ ಬಾಣಗಳ ಸಮೂಹಗಳಿಂದ ಬಹಳವಾಗಿ ಪೀಡಿತನಾದ ದುಃಶಾಸನನು ಅವನ ಮುಂದೆ ಹೆಚ್ಚುಹೊತ್ತು ನಿಂತುಕೊಳ್ಳಲು ಸಮರ್ಥನಾಗಲಿಲ್ಲ. ಧೃಷ್ಟದ್ಯುಮ್ನನು ಬಾಣಗಳ ಪ್ರಹಾರಗಳಿಂದ ದುಃಶಾಸನನನ್ನು ಪರಾಙ್ಮುಖನನ್ನಾಗಿಮಾಡಿ ಸಾವಿರಾರು ಬಾಣಗಳನ್ನು ಸುರಿಸುತ್ತಾ ದ್ರೋಣರನ್ನೇ ಆಕ್ರಮಿಸಿದನು. ಪಾರ್ಷತನು ದ್ರೋಣರ ಬಳಿಗೆ ಬರುತ್ತಿರುವುನ್ನು ನೋಡಿ ಹೃದೀಕಪುತ್ರನಾದ ಕೃತವರ್ಮನೂ, ದುಃಶಾಸನನ ಮೂವರು ಸಹೋದರರೂ ಪಾರ್ಷತನನ್ನು ಸುತ್ತುವರಿದರು. ಪ್ರಜ್ವಲಿಸುವ ಯಜ್ಞೇಶ್ವರನಂತೆ–ಮಹಾತೇಜಸ್ಸಿನಿಂದ ಕೂಡಿದ್ದ, ದ್ರೋಣರ ಬಳಿಗೆ ರಭಸದಿಂದ ಹೋಗುತ್ತಿದ್ದ ಪಾರ್ಷತನನ್ನು ಪುರುಷಶ್ರೇಷ್ಠರಾದ ನಕುಲ-ಸಹದೇವರು ರಕ್ಷಿಸುತ್ತಾ ಅವನನ್ನೇ ಅನುಸರಿಸಿ ಹೋದರು. ಕೋಪಗೊಂಡಿದ್ದ, ಸತ್ತ್ವಯುಕ್ತರಾಗಿದ್ದ ಶ್ರೇಷ್ಠಮಹಾರಥರೆಲ್ಲರೂ ಮರಣವನ್ನೇ ಮುಂದಿಟ್ಟುಕೊಂಡು ಕೆಚ್ಚಿನಿಂದ ಯುದ್ಧಮಾಡುತ್ತಿದ್ದರು. ಶುದ್ಧಾತ್ಮರಾದ, ಶುದ್ಧಚರಿತರಾದ ರಾಜರು ಸ್ವರ್ಗದ ಪ್ರಾಪ್ತಿಯನ್ನೇ ಲಕ್ಷ್ಯವನ್ನಾಗಿಟ್ಟುಕೊಂಡು ಒಬ್ಬರು ಮತ್ತೊಬ್ಬರನ್ನು ಜಯಿಸಬೇಕೆಂಬ ಇಚ್ಛೆಯಿಂದ ಆರ್ಯಜನೋಚಿತವಾದ ಯುದ್ಧವನ್ನೇ ಮಾಡುತ್ತಿದ್ದರು. ಅವರೆಲ್ಲರ ವಂಶಗಳೂ ಸದ್ವಂಶಗಳಾಗಿಯೇ ಇದ್ದುವು. ಅವರು ಯಾವಾ ಗಲೂ ಸತ್ಕರ್ಮಗಳಲ್ಲಿಯೇ ನಿರತರಾಗಿದ್ದರು. ಧೀಮಂತರಾದ ಅಂತಹ ಎಲ್ಲ ರಾಜರೂ ಉತ್ತಮವಾದ ಗತಿಯನ್ನೇ ಅಭಿಲಾಷಿಸಿ ಧರ್ಮಮೂಲವಾದ ಯುದ್ಧವನ್ನೇ ಮಾಡುತ್ತಿದ್ದರು.

**ನ ತತ್ರಾಸೀದಧರ್ಮಿಷ್ಠಮಶಸ್ತಂ ಯುದ್ಧಮೇವ ಚ ।**
**ನಾತ್ರ ಕರ್ಣೀ ನ ನಾಲೀಕೋ ನ ಲಿಪ್ತೋ ನ ಚ ವಸ್ತಿಕಃ ॥೧೧॥**

ಅಲ್ಲಿ ಅಧರ್ಮಪೂರ್ವಕವಾದ ಅಥವಾ ನಿಂದನೀಯವಾದ ಯುದ್ಧವು ನಡೆಯುತ್ತಿರಲಿಲ್ಲ. ಆ ಯುದ್ಧದಲ್ಲಿ *ಕರ್ಣೀ, ನಾಲೀಕ, ವಿಷಲಿಪ್ತವಾದ

---

* ಕರ್ಣೀ–ಮುಂತಾದುವುಗಳಿಗೆ ವ್ಯಾಖ್ಯಾನಕಾರರು ಲಕ್ಷಣಗಳನ್ನು ಕೊಟ್ಟಿರುತ್ತಾರೆ. ಕರ್ಣೀ–ವಿಲೋಮಕಣ್ಟಕದ್ವಯಯುಕ್ತಃ ಸ ಹಿ ಉದ್ಧ್ರಿಯಮಾಣಃ ಅಸ್ತ್ರಾಣ್ಯುದ್ಧ

ಬಾಣ ಮತ್ತು ವಸ್ತಿಕವೆಂಬ ಅಸ್ತ್ರ–ಇವುಗಳನ್ನು ಯಾವುದೇ ಕಾರಣದಿಂದಲೂ ಪ್ರಯೋಗಿಸುತ್ತಿರಲಿಲ್ಲ.

**ನ ಸೂಚೀ ಕಪಿಶೋ ನೈವ ನ ಗವಾಸ್ಥಿರ್ಗಜಾಸ್ಥಿಜಃ ।**
**ಇಷುರಾಸೀನ್ನ ಸಂಶ್ಲಿಷ್ಟೋ ನ ಪೂತಿರ್ನ ಚ ಜಿಹ್ಮಗಃ ॥೧೨॥**

ಸೂಚೀ ಎಂಬ ಬಾಣವನ್ನಾಗಲೀ, ಕಪಿಶ ಎಂಬ ಬಾಣವನ್ನಾಗಲೀ, ಹಸುವಿನ ಮೂಳೆಗಳಿಂದ ಮತ್ತು ಆನೆಯ ಮೂಳೆಗಳಿಂದ ಮಾಡಿದ ಬಾಣಗಳನ್ನಾಗಲೀ–ಆ ಧರ್ಮಯುದ್ಧದಲ್ಲಿ ಪ್ರಯೋಗಿಸುತ್ತಿರಲಿಲ್ಲ. ಬಾಣಗಳು ಒಂದಕ್ಕೊಂದು ಅಂಟಿಕೊಂಡಿರುತ್ತಿರಲಿಲ್ಲ. ದುರ್ಗಂಧಯುಕ್ತವಾಗಿರುತ್ತಿರಲಿಲ್ಲ. ವಕ್ರವಾಗಿಯೂ ಇರುತ್ತಿರಲಿಲ್ಲ.

**ಋಜೂನ್ಯೇವ ವಿಶುದ್ಧಾನಿ ಸರ್ವೇ ಶಸ್ತ್ರಾಣ್ಯಧಾರಯನ್ ।**
**ಸುಯುದ್ಧೇನ ಪರಾನ್ಲೋಕಾನೀಪ್ಸನ್ತಃ ಕೀರ್ತಿಮೇವ ಚ ॥೧೩॥**

ಧರ್ಮಯುದ್ಧದಿಂದ ಕೀರ್ತಿಯನ್ನೂ–ಉತ್ತಮಲೋಕಗಳನ್ನೂ ಪಡೆದುಕೊಳ್ಳಬೇಕೆಂದು ಇಚ್ಛಿಸಿದ್ದ ಎಲ್ಲ ಯೋಧರೂ ನೇರವಾದ ಮತ್ತು ವಿಶುದ್ಧವಾದ ಬಾಣಗಳನ್ನೇ ಹೊಂದಿದ್ದರು.

ಮಹಾರಾಜ! ಅನಂತರ ನಿನ್ನ ಕಡೆಯ ನಾಲ್ವರು ಯೋಧರಿಗೂ–ಪಾಂಡವರ ಕಡೆಯ ಮೂವರು ಯೋಧರಿಗೂ ಸರ್ವದೋಷಗಳಿಂದಲೂ

---

ರತಿ । ಇದು ಹಿಂದು-ಮುಂದಾದ ಎರಡು ಮುಳ್ಳುಗಳಿಂದ ಕೂಡಿರುತ್ತದೆ. ಶರೀರದಿಂದ ಇದನ್ನು ಹೊರತೆಗೆಯಲು ಹೋದರೆ ಕರುಳುಗಳ ಸಮೇತವಾಗಿ ಹೊರಬರುತ್ತದೆ. **ನಾಲೀಕಃ –ಅಲ್ಪತ್ವಾದ್ದೇಹಮಗ್ನಃ ದುರುದ್ಧರಃ ।** ಇದು ಬಹಳ ಚಿಕ್ಕದಾಗಿರುವುದರಿಂದ ಶರೀರದಲ್ಲಿ ಹೊಕ್ಕರೆ ಹೊರಕ್ಕೆ ತೆಗೆಯಲು ಸಾಧ್ಯವಾಗುವುದಿಲ್ಲ. **ಲಿಪ್ತಃ**–ವಿಷದಿಂದ ಲೇಪಿತವಾದುದು. **ವಸ್ತಿಕಃ –ಶಲ್ಯದಣ್ಡಸನ್ಧೌ ಶಿಥಿಲಃ ತಸ್ಯೋದ್ಧರಣೇ ಶಲ್ಯಂ ವಸ್ತಿಮಧ್ಯೇ ಮಜ್ಜತಿ ದಣ್ಡಮಾತ್ರಂ ನಿಃಸರತಿ ।** ವಸ್ತಿ ಎಂದರೆ ನಾಭಿಯ ಕೆಳಭಾಗ. ಅಲ್ಲಿಯೇ ಉಳಿದುಕೊಳ್ಳುವುದಕ್ಕೆ ವಸ್ತಿಕ ಎಂದು ಹೆಸರು. ಇದರ ಚೂಪಾದ ತುದಿಗೂ ಮತ್ತು ದಂಡಕ್ಕೂ ಮಧ್ಯದಲ್ಲಿ ಬಹಳ ತೆಳುವಾದ ಭಾಗವಿರುತ್ತದೆ. ಇದು ಹೊಕ್ಕಳ ಕೆಳಭಾಗದಲ್ಲಿ ನೆಟ್ಟೊಡನೆಯೇ ಚೂಪಾದ ತುದಿಯು ವಸ್ತಿಯೊಳಗೆ ಸೇರಿಕೊಂಡು ದಂಡವು ಮಾತ್ರವೇ ಹೊರಬರುತ್ತದೆ. **ಸೂಚೀ : ಕರ್ಣಿಸಜಾತೀ ಯೋ ಬಹುಕಣ್ಟಕಃ ॥** ಇದು ಕರ್ಣಿಯಂತೆಯೇ ಇರುತ್ತದೆ. ಆದರೆ ಎರಡು ಮುಳ್ಳುಗಳಿಗೆ ಬದಲಾಗಿ ಇದರಲ್ಲಿ ಅನೇಕ ಮುಳ್ಳುಗಳಿರುತ್ತವೆ. **ಕಪಿಶಃ = ಸೂಚೀತುಲ್ಯಃ ಮರ್ಕಟಾ–**

ವರ್ಜಿತವಾಗಿದ್ದ, ಭಯಂಕರವಾದ ಧರ್ಮಯುದ್ಧವು ನಡೆಯಿತು. ಶೀಘ್ರವಾಗಿ ಅಸ್ತ್ರಗಳನ್ನು ಪ್ರಯೋಗಿಸುವ ಧೃಷ್ಟದ್ಯುಮ್ನನು–ತನ್ನನ್ನು ತಡೆಯಲು ಬಂದಿದ್ದ ಕೌರವಯೋಧರನ್ನು ನಕುಲ-ಸಹದೇವರು ಎದುರಿಸಿದುದನ್ನು ಕಂಡು ದ್ರೋಣರ ಬಳಿಗೇ ನೇರವಾಗಿ ಹೋದನು.

ಚಂಡಮಾರುತಗಳು ಎರಡು ಪರ್ವತಗಳಿಂದ ತಡೆಯಲ್ಪಡುವಂತೆ–ಪುರುಷಸಿಂಹರಾದ ನಕುಲ-ಸಹದೇವರಿಂದ ತಡೆಯಲ್ಪಟ್ಟ ನಾಲ್ವರೂ (ಹಾರ್ದಿಕ್ಯ ಮತ್ತು ಮೂವರು ದುಃಶಾಸನನ ಅನುಜರು) ನಕುಲ-ಸಹದೇವ ರೊಡನೆಯೇ ಯುದ್ಧದಲ್ಲಿ ತೊಡಗಿದರು. ರಥಶ್ರೇಷ್ಠರಾದ ನಕುಲ-ಸಹ ದೇವರು ಇಬ್ಬಿಬ್ಬರು ಕುರುಯೋಧರೊಡನೆ ಯುದ್ಧದಲ್ಲಿ ತೊಡಗಿದರು. ಆ ಮಧ್ಯದಲ್ಲಿ ಧೃಷ್ಟದ್ಯುಮ್ನನು ದ್ರೋಣರ ಬಳಿಗೆ ಹೊರಟುಹೋದನು. ಯುದ್ಧದುರ್ಮದನಾದ ಧೃಷ್ಟದ್ಯುಮ್ನನು ದ್ರೋಣರ ಕಡೆಗೆ ರಭಸದಿಂದ ಹೋಗುತ್ತಿರುವುದನ್ನೂ, ದ್ರೋಣರ ರಕ್ಷಣೆಯಲ್ಲಿ ನಿರತರಾಗಿದ್ದ ನಾಲ್ವರು ಕೌರವಯೋಧರು ನಕುಲ ಸಹದೇವರೊಡನೆ ಯುದ್ಧದಲ್ಲಿ ತೊಡಗಿರುವು ದನ್ನೂ ಕಂಡ ದುರ್ಯೋಧನನು ರಕ್ತವನ್ನು ಹೀರುವ ಬಾಣಗಳನ್ನು ಸುರಿಸುತ್ತಾ ಅವರ ಮಧ್ಯದಲ್ಲಿ ನುಗ್ಗಿದನು. ಅದನ್ನು ನೋಡಿದ ಸಾತ್ಯಕಿಯು ಪುನಃ ದುರ್ಯೋಧನನನ್ನೇ ಆಕ್ರಮಿಸಿದನು. ನರಶ್ರೇಷ್ಠರಾದ, ನಿರ್ಭೀತ

---

**ಸ್ಥಿಮಯೋ ವಾ ।** ಇದು ಸೂಚಿಗೆ ಅನುರೂಪವಾಗಿಯೇ ಇರುತ್ತದೆ. ಕಪಿಯ ಮೂಳೆ ಯಿಂದ ಮಾಡಿದುದೆಂದು ಕೆಲವರು ಹೇಳುತ್ತಾರೆ. **ಕಾರ್ಷ್ಣಾಯಸಮಯಃ ಸ ಹಿ ಅದೃಢೇಽಪ್ಯಾಘಾತೇ ಅನ್ತರ್ಬಹು ಪ್ರವಿಶತಿ**–ಈ ಕಪಿಶವು ಕಬ್ಬಿಣದಿಂದ ಮಾಡಿದು ದೆಂದೂ ಬಹಳ ಮೃದುವಾಗಿಯೇ ಪ್ರಹರಿಸಿದರೂ ದೇಹದೊಳಗೆ ಬಹಳ ಗಾಢವಾಗಿ ಹೋಗುವುದೆಂದೂ ಮತ್ತೆ ಕೆಲವರು ಹೇಳುತ್ತಾರೆ. **ಗವಾಸ್ಥಿರ್ಗಜಾಸ್ಥಿಜಃ–ಗವಾಸ್ಥಿಜೋ ಗಜಾಸ್ಥಿಜಃ ತನ್ಮಯಫಲಕಬಾಣೋ ವಿಷಲಿಪ್ತವತ್ ಜ್ಞೇಯಃ**–ಹಸುವಿನ ಮೂಳೆಯಿಂದ ಮತ್ತು ಆನೆಯ ಮೂಳೆಯಿಂದ ಮಾಡಿದ ಕೊಳವೆಯಲ್ಲಿ ಇದನ್ನು ಇಟ್ಟಿರುತ್ತಾರೆ. ಇದಕ್ಕೂ ವಿಷವನ್ನು ಲೇಪಿಸಿರುತ್ತಾರೆ. **ಶ್ಲಿಷ್ಟಃ–ದ್ವಿಶಲ್ಯಃ ಕ್ಷತದ್ವಯಕರತ್ವಾತ್ ಹೇಯಃ ।** ಎರಡು ಬಾಣಗಳು ಜೋಡಿಯಲ್ಲಿರುವುದು. ಒಂದೇ ಬಾರಿಗೆ ಎರಡು ಕಡೆಗಳಲ್ಲಿ ಗಾಯವಾಗುವುದರಿಂದ ಈ ಬಾಣವನ್ನು ಬಿಡುವುದು ಹೇಯವಾದುದು. **ಪೂತಿಃ = ಮಲಿನಶಲ್ಯಃ ।** ಮಲಿನವಾದ ಬಾಣ. **ಜಿಹ್ಮಗಃ –ಅನ್ಯ ಲಕ್ಷ್ಯತ್ವೇನಪ್ರದರ್ಶ್ಯಾನ್ಯತ್ರ ಪಾತಿತಃ**–ಒಂದು ಕಡೆಗೆ ಲಕ್ಷ್ಯವನ್ನು ತೋರಿಸುತ್ತಿದ್ದು ಮತ್ತೊಂದು ಕಡೆಗೆ ಹೋಗಿ ಬೀಳತಕ್ಕುದು.

ರಾಗಿದ್ದ, ಗಹಗಹಿಸಿ ನಗುತ್ತಿದ್ದ ಕುರು-ಮಾಧವರು ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಸಮೀಪಕ್ಕೆ ಬಂದು ಯುದ್ಧದಲ್ಲಿ ತೊಡಗಿದರು. ಬಾಲ್ಯದಲ್ಲಿ ನಡೆದ ಎಲ್ಲ ವಿಷಯಗಳನ್ನೂ ಸ್ಮರಿಸಿಕೊಳ್ಳುತ್ತಾ ತನ್ನ ಪ್ರಿಯಸಖನಾದ ಸಾತ್ಯಕಿಯೊಡನೆ ಹೇಳಿದನು :

**ಧಿಕ್ಕ್ರೋಧಂ ಧಿಕ್ಸಖೇ ಲೋಭಂ ಧಿಙ್ಮೋಹಂ ಧಿಗಮರ್ಷಿತಮ್ ।**
**ಧಿಗಸ್ತು ಕ್ಷಾತ್ರಮಾಚಾರಂ ಧಿಗಸ್ತು ಬಲಮೌರಸಮ್ ॥೨೩॥**

"ಪ್ರಿಯಸಖನೇ! ಕೋಪಕ್ಕೆ ಧಿಕ್ಕಾರವಿರಲಿ ; ಲೋಭಕ್ಕೆ ಧಿಕ್ಕಾರ ವಿರಲಿ; ಮೋಹಕ್ಕೆ ಧಿಕ್ಕಾರವಿರಲಿ ; ಅಸಹನೆಗೆ ಧಿಕ್ಕಾರವಿರಲಿ ; ಕ್ಷತ್ರಿಯೋ ಚಿತವಾದ ಆಚಾರಕ್ಕೆ ಧಿಕ್ಕಾರವಿರಲಿ ; ಶ್ರೇಷ್ಠವಾದ ಎದೆಗಾರಿಕೆಗೂ ಧಿಕ್ಕಾರ ವಿರಲಿ.

**ಯತ್ರ ಮಾಮಭಿಸಂಧತ್ಸೇ ತ್ವಾಂ ಚಾಹಂ ಶಿನಿಪುಙ್ಗವ ।**
**ತ್ವಂ ಹಿ ಪ್ರಾಣೈಃ ಪ್ರಿಯತರೋ ಮಮಾಹಂ ಚ ಸದಾ ತವ ॥೨೪॥**

ಶೈನೇಯ! ಹಿಂದೆ ನೀನು ನನಗೆ ಪ್ರಾಣಗಳಿಗಿಂತಲೂ ಪ್ರಿಯನಾಗಿದ್ದೆ. ನಿನಗೂ ನಾನು ಪ್ರಾಣಗಳಿಗಿಂತಲೂ ಪ್ರಿಯನಾದ ಸ್ನೇಹಿತನಾಗಿದ್ದೆನು. ಆದರೆ ಈಗ ಕ್ರೋಧ-ಲೋಭ-ಮೋಹಪರವಶರಾಗಿರುವ ನಾವು ಪರಸ್ಪರವಾಗಿ ಯುದ್ಧಮಾಡಲು ನಿಂತಿದ್ದೇವೆ. ನನ್ನ ಮೇಲೆ ಬಿಡಲು ನೀನು ಬಾಣವನ್ನು ಅನುಸಂಧಾನಮಾಡಿರುವೆ. ನಿನ್ನ ಮೇಲೆ ಬಿಡಲು ನಾನೂ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿದ್ದೇನೆ. ಆ ನಮ್ಮ ಬಾಲ್ಯಾಚರಣೆಗಳೆಲ್ಲವನ್ನೂ ನಾನು ಸ್ಮರಣೆಯಲ್ಲಿಟ್ಟುಕೊಂಡಿದ್ದೇನೆ. ಆದರೆ ಈ ರಣಭೂಮಿಯಲ್ಲಿ ನಮ್ಮ ಸದ್ವ್ಯವಹಾರಗಳೆಲ್ಲವೂ ಹಾಳಾಗಿಹೋಗಿವೆ.

ಕ್ರೋಧ-ಲೋಭ-ಮೋಹಗಳಲ್ಲದೇ ಈ ನಮ್ಮ ಯುದ್ಧಕ್ಕೆ ಬೇರಾವ ಕಾರಣವಿದೆ? ಸಾತ್ವತ!"

ಮಹಾರಾಜ! ಹೀಗೆ ಹೇಳುತ್ತಿದ್ದ ದುರ್ಯೋಧನನನ್ನು ಕುರಿತು ಶ್ರೇಷ್ಠ ವಾದ ಅಸ್ತ್ರಗಳನ್ನು ತಿಳಿದುಕೊಂಡಿದ್ದ ಸಾತ್ಯಕಿಯು ನಸುನಗುತ್ತಾ ತೀಕ್ಷ್ಣವಾದ ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ದುರ್ಯೋಧನನೊಡನೆ ಹೇಳಿದನು :

**ನೇಯಂ ಸಭಾ ರಾಜಪುತ್ರ ನಾಚಾರ್ಯಸ್ಯ ನಿವೇಶನಮ್ ।**
**ಯತ್ರ ಕ್ರೀಡಿತಮಸ್ಮಾಭಿಸ್ತದಾ ರಾಜನ್ಸಮಾಗತೈಃ ॥೨೮॥**

“ನಿಜ, ದುರ್ಯೋಧನ! ನಾವು ಹಿಂದೆ ರಾಜಸಭೆಯಲ್ಲಿಯೂ ಮತ್ತು ಆಚಾರ್ಯರ ಮನೆಯಲ್ಲಿಯೂ ಅನೇಕವಿಧವಾದ ಆಟಗಳನ್ನಾಡುತ್ತಿದ್ದೆವು. ಆದರೆ ಈಗ ಇದು ರಾಜಸಭೆಯೂ ಅಲ್ಲ ; ಗುರುಗಳ ಮನೆಯೂ ಅಲ್ಲ.”

**ಕ್ವ ಸಾ ಕ್ರೀಡಾ ಗತಾಸ್ಮಾಕಂ ಬಾಲ್ಯೇ ವೈ ಶಿನಿಪುಙ್ಗವ ।**
**ಕ್ವ ಚ ಯುದ್ಧಮಿದಂ ಭೂಯಃ ಕಾಲೋ ಹಿ ದುರತಿಕ್ರಮಃ ॥೨೮॥**

“ಶಿನಿಪುಂಗವನೇ! ನಾವು ಬಾಲ್ಯದಲ್ಲಿ ಆಡುತ್ತಿದ್ದ ಆಟವು ಈಗ ಎಲ್ಲಿಗೆ ಹೋಯಿತು? ಇಂದು ಈ ಘೋರವಾದ ಯುದ್ಧವು ಎಲ್ಲಿಂದ ಬಂದಿತು? (ಒಂದಕ್ಕೂ ಮತ್ತೊಂದಕ್ಕೂ ಸಂಬಂಧವೇ ಇಲ್ಲ ; ಅಲ್ಲವೇ?) ನಿಶ್ಚಯ ವಾಗಿಯೂ ಕಾಲದ ಉಲ್ಲಂಘನೆಯು ಬಹಳ ದುಸ್ತರವಾದುದೇ ಸರಿ. (ಎಂದು ಏನಾಗಬೇಕೋ ಅಂದು ಅದು ಹಾಗೆಯೇ ನಡೆಯಲೇಬೇಕು).

**ಕಿಂ ನು ನೋ ವಿದ್ಯತೇ ಕೃತ್ಯಂ ಧನೇನ ಧನಲಿಪ್ಸಯಾ ।**
**ಯತ್ರ ಯುಧ್ಯಾಮಹೇ ಸರ್ವೇ ಧನಲೋಭಾತ್ಸಮಾಗತಾಃ ॥೨೯॥**

ನಾವೀಗ ಧನಲೋಭದಿಂದಲೇ ಎಲ್ಲರೂ ಇಲ್ಲಿಗೆ ಬಂದು ಯುದ್ಧ ಮಾಡುತ್ತಿದ್ದೇವೆ. ಆದರೆ ನಮಗೆ ಧನದಿಂದಾಗಲೀ, ಧನದ ಆಸೆಯಿಂದಾಗಲೀ ಆಗುವ ಕಾರ್ಯವೇನಿದೆ? (ನಾವೇ ಅಳಿಯುವೆವೋ–ಉಳಿಯುವೆವೋ ಎಂಬ ಸಂಶಯವುಂಟಾಗಿರುವಾಗ ಧನ ಅಥವಾ ಧನದ ಲೋಭವು ನಮಗೆ ಯಾವ ಪ್ರಯೋಜನಕ್ಕೆ ಬರುತ್ತದೆ? ಧನದ ಲೋಭವು ನಮ್ಮನ್ನು ಯುದ್ಧದಲ್ಲಿ ತೊಡಗಿಸಿದೆಯೇ ಹೊರತು ಅದು ನಮಗೆ ಯಾವ ರೀತಿಯಲ್ಲೂ ಹಿತವನ್ನುಂಟುಮಾಡಲಾರದು).”

ಮಹಾರಾಜ! ಹೀಗೆ ಹೇಳಿದ ರಾಜನನ್ನು ಕುರಿತು ಪುನಃ ಸಾತ್ಯಕಿಯು ಹೇಳಿದನು :

**ಏವಂ ವೃತ್ತಂ ಸದಾ ಕ್ಷಾತ್ರಂ ಯುಧ್ಯನ್ತೀಹ ಗುರೂನಪಿ ।**
**ಯದಿ ತೇಽಹಂ ಪ್ರಿಯೋ ರಾಜನ್ಜಹಿ ಮಾಂ ಮಾ ಚಿರಂ ಕೃಥಾ ॥**

“ದುರ್ಯೋಧನ! ಕ್ಷತ್ರಧರ್ಮದಲ್ಲಿ ಇದು ಎಂದೆಂದಿಗೂ ಹೀಗೆಯೇ ಸರಿ. ಇದು ಬದಲಾವಣೆಯಾಗುವುದೇ ಇಲ್ಲ. ಗುರುಜನರೊಡನೆಯೂ ಯುದ್ಧಮಾಡುತ್ತಾರೆ (ಯುದ್ಧಮಾಡಲೇಬೇಕಾಗುತ್ತದೆ). ನಿಶ್ಚಯ ವಾಗಿಯೂ ನಾನು ನಿನಗೆ ಬಹಳ ಪ್ರಿಯನಾಗಿರುವುದಾದರೆ ಕ್ಷತ್ರಧರ್ಮಾನು

ಸಾರವಾಗಿ ನನ್ನನ್ನು ಬೇಗ ಜಯಿಸು (ಸಂಹರಿಸು); ಸಾವಕಾಶಮಾಡ ಬೇಡ.

**ತ್ವತ್ಕೃತೇ ಸುಕೃತಾಂಲ್ಲೋಕಾನ್ಗಚ್ಛೇಯಂ ಭರತರ್ಷಭ ।**
**ಯಾ ತೇ ಶಕ್ತಿರ್ಬಲಂ ಯಚ್ಚ ತತ್ಕ್ಷಿಪ್ರಂ ಮಯಿ ದರ್ಶಯ ।**
**ನೇಚ್ಛಾಮಿ ತದಹಂ ದ್ರಷ್ಟುಂ ಮಿತ್ರಾಣಾಂ ವ್ಯಸನಂ ಮಹತ್ ॥**

ನೀನು ಹಾಗೆ ಮಾಡಿದಲ್ಲಿ ನಾನು ಅನೇಕಪುಣ್ಯಲೋಕಗಳನ್ನು ಜಯಿಸುತ್ತೇನೆ. ಆದುದರಿಂದ ನಿನ್ನಲ್ಲಿ ಶಕ್ತಿ-ಬಲಗಳೆಷ್ಟಿವೆಯೋ ಅವುಗಳೆಲ್ಲ ವನ್ನೂ ಶೀಘ್ರವಾಗಿ ನನ್ನಲ್ಲಿ ಪ್ರದರ್ಶಿಸು. ನನ್ನ ಮಿತ್ರರು ಅನುಭವಿಸುತ್ತಿರುವ ಈ ಮಹಾವ್ಯಸನವನ್ನು ಇನ್ನೂ ಹೆಚ್ಚುಕಾಲ ನೋಡಿಕೊಂಡಿರುವ ಇಚ್ಛೆಯು ನನಗಿಲ್ಲ."

ಮಹಾರಾಜ! ಸಾತ್ಯಕಿಯು ಹೀಗೆ ಸ್ಪಷ್ಟವಾಗಿ ಮಾತನಾಡುವುದರ ಮೂಲಕ ದುರ್ಯೋಧನನಿಗೆ ಉತ್ತರಿಸಿ ಸ್ಥಿರವಾದ ಬುದ್ಧಿಯಿಂದ ಮುನ್ನುಗ್ಗಿ ದನು. ತನ್ನ ಶರೀರದ ವಿಷಯದಲ್ಲಿಯೂ ಸಾತ್ಯಕಿಯು ದಯೆತೋರಲಿಲ್ಲ. ದುರ್ಯೋಧನನು ಮೇಲೆ ಬೀಳಲು ರಭಸದಿಂದ ಮುನ್ನುಗ್ಗಿಬರುತ್ತಿದ್ದ ಮಹಾಬಾಹುವಾದ ಸಾತ್ಯಕಿಯನ್ನು ತಡೆದು ನಿಲ್ಲಿಸುತ್ತಾ ಬಾಣಗಳಿಂದ ಅವನನ್ನು ಮುಚ್ಚಿದನು. ಅನಂತರ ಆನೆಗೂ ಮತ್ತು ಸಿಂಹಕ್ಕೂ ನಡೆಯುವ ಕಾಳಗದಂತೆ–ಯೋಧಶ್ರೇಷ್ಠರಾದ ಮತ್ತು ಕ್ರುದ್ಧರಾಗಿದ್ದ ದುರ್ಯೋಧನ-ಸಾತ್ಯಕಿಗಳಿಗೆ ಘೋರವಾದ ಯುದ್ಧವು ಪ್ರಾರಂಭವಾಯಿತು. ಕುಪಿತನಾದ ದುರ್ಯೋಧನನು ಸುದೀರ್ಘವಾಗಿ ಸೆಳೆದು ಬಿಟ್ಟ ಹತ್ತು ಬಾಣಗಳಿಂದ ಯುದ್ಧದುರ್ಮದನಾದ ಸಾತ್ಯಕಿಯನ್ನು ಪ್ರಹರಿಸಿದನು. ಅದೇ ರೀತಿಯಲ್ಲಿ ಸಾತ್ಯಕಿಯೂ ದುರ್ಯೋಧನನನ್ನು ಪ್ರತಿಯಾಗಿ ಐವತ್ತು ಬಾಣಗಳಿಂದ ಪ್ರಹರಿಸಿ, ಮತ್ತೊಮ್ಮೆ ಮೂವತ್ತು ಬಾಣಗಳಿಂದಲೂ, ಪುನಃ ಹತ್ತು ಬಾಣ ಗಳಿಂದಲೂ ಪ್ರಹರಿಸಿ ಅವನನ್ನು ಬಾಣಗಳಿಂದಲೇ ಮುಚ್ಚಿದನು. ನಿನ್ನ ಮಗನು ಅಟ್ಟಹಾಸದಿಂದ ನಗುತ್ತಾ ಆಕರ್ಣವಾಗಿ ಸೆಳೆದು ಬಿಟ್ಟ ನಿಶಿತವಾದ ಮೂವತ್ತು ಬಾಣಗಳಿಂದ ಸಾತ್ಯಕಿಯನ್ನು ಪ್ರಹರಿಸಿದನು. ಬಳಿಕ ಅವನು ಬಾಣಸಹಿತವಾದ ಸಾತ್ಯಕಿಯ ಧನುಸ್ಸನ್ನೂ ಕ್ಷುರಪ್ರದಿಂದ ಎರಡಾಗಿ ಕತ್ತರಿಸಿದನು. ಶೀಘ್ರಹಸ್ತನಾದ ಸಾತ್ಯಕಿಯು ಮತ್ತೊಂದು ಸುದೃಢವಾಗಿದ್ದ

ಧನುಸ್ಸನ್ನೆತ್ತಿಕೊಂಡು ನಿನ್ನ ಮಗನ ಮೇಲೆ ಬಾಣಗಳ ಸಾಲುಗಳನ್ನೇ ಸುರಿಸಲು ಉಪಕ್ರಮಿಸಿದನು. ವಧಿಸುವ ಸಲುವಾಗಿ ತನ್ನ ಕಡೆಗೆ ಬರುತ್ತಿದ್ದ ಬಾಣಗಳ ಸಾಲುಗಳನ್ನು ಕೌರವರಾಜನು ಅನೇಕಪ್ರಕಾರವಾಗಿ ಕತ್ತರಿಸಿ ಹಾಕಿದನು. ಆ ಸಮಯದಲ್ಲಿ ಪ್ರೇಕ್ಷಕರು ಹರ್ಷಧ್ವನಿಮಾಡಿದರು. ಅನಂತರ ದುರ್ಯೋಧನನು ಆಕರ್ಣಾಂತವಾಗಿ ಸೆಳೆದುಬಿಟ್ಟಿದ್ದ ಚಿನ್ನದ ಮೂಲಭಾಗಗಳನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಮೂವತ್ತೇಳು ಬಾಣಗಳಿಂದ ಸಾತ್ಯಕಿಯನ್ನು ಬಹಳವಾಗಿ ಪೀಡಿಸಿದನು. ಸಂಧಾನಮಾಡಿದ್ದ ಬಾಣವನ್ನೂ, ಆ ಬಾಣದಿಂದ ಕೂಡಿದ್ದ ದುರ್ಯೋಧನನ ಧನುಸ್ಸನ್ನೂ ಬಹಳ ಬೇಗ ಸಾತ್ಯಕಿಯು ಕತ್ತರಿಸಿಬಿಟ್ಟನು. ಅನಂತರ ಬಾಣಗಳಿಂದ ದುರ್ಯೋಧನನನ್ನು ಗಾಯಗೊಳಿಸಿದನು. ಸಾತ್ಯಕಿಯ ಬಾಣಗಳಿಂದ ಪೀಡಿತನಾದ, ಆಳವಾಗಿ ಗಾಯಗೊಂಡ ದುರ್ಯೋಧನನು ಬಹಳ ವ್ಯಥಿತನಾಗಿ ರಥಗಳ ಮಧ್ಯಭಾಗದಲ್ಲಿ ನುಸುಳಿದನು. ಸ್ವಲ್ಪಹೊತ್ತು ವಿಶ್ರಮಿಸಿಕೊಂಡನಂತರ ದುರ್ಯೋಧನನು ಸಾತ್ಯಕಿಯ ರಥದ ಮೇಲೆ ಬಾಣಗಳ ಸಮೂಹವನ್ನೇ ಸುರಿಸುತ್ತಾ ಅವನನ್ನು ಪುನಃ ಆಕ್ರಮಿಸಿದನು. ಅದೇ ರೀತಿಯಲ್ಲಿ ಸಾತ್ಯಕಿಯೂ ಸಹ ದುರ್ಯೋಧನನ ರಥದ ಮೇಲೆ ಸತತವಾಗಿ ಬಾಣಗಳನ್ನು ಸುರಿಸುತ್ತಿದ್ದನು. ಅನಂತರ ಅವರ ಆ ಯುದ್ಧವು ಸಂಕುಲ ಯುದ್ಧವಾಗಿ ಪರಿಣಮಿಸಿತು. ದುರ್ಯೋಧನ-ಸಾತ್ಯಕಿಗಳಿಂದ ಬಿಡಲ್ಪಡುತ್ತಿದ್ದ ಬಾಣಗಳು ಯೋಧರ ಶರೀರಗಳಲ್ಲಿ ಬೀಳುತ್ತಿರುವಾಗ–ದೊಡ್ಡದಾದ ಪೊದೆಗೆ ಅಗ್ನಿಯು ಬಿದ್ದಾಗ ಉಂಟಾಗುವ ಶಬ್ದದಂತೆ–ಅತಿಘೋರವಾದ ಶಬ್ದವಾಯಿತು. ದುರ್ಯೋಧನ–ಶೈನೇಯರು ಸತತವಾಗಿ ಬಿಡುತ್ತಿದ್ದ ಸಾವಿರಾರು ಬಾಣಗಳಿಂದ ಭೂಮಿಯೇ ಮುಚ್ಚಿಹೋಯಿತು. ಆಕಾಶವೂ ಸಹ ಬಾಣಗಳಿಂದ ತುಂಬಿಹೋಗಿ ಪಕ್ಷಿಗಳ ಸಂಚಾರಕ್ಕೂ ಅಸಾಧ್ಯವಾಯಿತು. ರಥಶ್ರೇಷ್ಠನಾದ ಮಾಧವನು ಅತಿಶಯಿಸುತ್ತಿರುವುದನ್ನು ಗಮನಿಸಿ, ನಿನ್ನ ಮಗನನ್ನು ರಕ್ಷಿಸುವ ಇಚ್ಛೆಯಿಂದ ಕರ್ಣನು ಅಲ್ಲಿಗೆ ಧಾವಿಸಿಬಂದನು. ದುರ್ಯೋಧನ-ಸಾತ್ಯಕಿಗಳು ಯುದ್ಧಮಾಡುತ್ತಿದ್ದಾಗ ಕರ್ಣನು ಮಧ್ಯದಲ್ಲಿ ಪ್ರವೇಶಿಸಿದುದನ್ನು ಭೀಮನು ಸಹಿಸಿಕೊಳ್ಳಲಿಲ್ಲ. ಮಹಾಬಲನಾದ ಭೀಮಸೇನನು ಕರ್ಣನ ಮೇಲೆ ಬಹುಸಂಖ್ಯಾತವಾದ ಬಾಣಗಳನ್ನು ಸುರಿಸುತ್ತಾ ಅವನನ್ನು

ತ್ವರೆಯಿಂದ ಆಕ್ರಮಿಸಿದನು. ನಗು-ನಗುತ್ತಲೇ ಕರ್ಣನು ನಿಶಿತವಾದ ಬಾಣ ಗಳನ್ನು ಭೀಮನ ಮೇಲೆ ಪ್ರಯೋಗಿಸುತ್ತಾ ಭೀಮಸೇನನ ಧನುಸ್ಸನ್ನೂ ಮತ್ತು ಬಾಣಗಳನ್ನೂ ಕತ್ತರಿಸಿ, ಅವನ ಸೂತನನ್ನೂ ಬಾಣಗಳಿಂದ ಸಂಹರಿಸಿದನು. ಅದರಿಂದ ಕ್ರುದ್ಧನಾದ ಭೀಮಸೇನನು ಗದೆಯನ್ನೆತ್ತಿಕೊಂಡು ಶತ್ರುವಾದ ಕರ್ಣನ ಧ್ವಜವನ್ನೂ, ಧನುಸ್ಸನ್ನೂ ಮತ್ತು ಸೂತನನ್ನೂ ಧ್ವಂಸಮಾಡಿದನು. ಅನಂತರ ಮಹಾಬಲನಾದ ಭೀಮಸೇನನು ಕರ್ಣನ ರಥದ ಒಂದು ಚಕ್ರವನ್ನೂ ಒಡೆದು ಹಾಕಿದನು. ಕರ್ಣನು ಭಗ್ನವಾದ ಚಕ್ರದಿಂದ ಕೂಡಿದ್ದ ರಥದಲ್ಲಿ ಸ್ವಲ್ಪವಾದರೂ ಕಂಪಿತನಾಗದೆ, ಪರ್ವತದೋಪಾದಿಯಲ್ಲಿ ಸುಸ್ಥಿರ ನಾಗಿಯೇ ಕುಳಿತಿದ್ದನು. ಒಂದೇ ಚಕ್ರವಿರುವ ಸೂರ್ಯನ ರಥವನ್ನು ಏಳು ಕುದುರೆಗಳು ಎಳೆದುಕೊಂಡು ಹೋಗುವಂತೆ–ಕರ್ಣನ ಏಕಚಕ್ರವಿರುವ ರಥ ವನ್ನು ಕುದುರೆಗಳು ಬಹಳ ಹೊತ್ತಿನವರೆಗೂ ಎಳೆದುಕೊಂಡು ಹೋಗುತ್ತಿ ದ್ದುವು. ಅಸಹನಶೀಲನಾದ ಕರ್ಣನು ನಾನಾವಿಧವಾದ ಬಾಣಗಳ ಸಮೂಹ ಗಳಿಂದಲೂ, ನಾನಾವಿಧವಾದ ಶಸ್ತ್ರಗಳಿಂದಲೂ ಭೀಮಸೇನನೊಡನೆ ಯುದ್ಧ ಮಾಡಿದನು. ಅದೇ ರೀತಿಯಲ್ಲಿ ಭೀಮನೂ ಸಹ ಕರ್ಣನೊಡನೆ ಯುದ್ಧ ಮಾಡುತ್ತಿದ್ದನು. ಹೀಗೆ ಒಂದೊಂದು ರಂಗದಲ್ಲಿಯೂ ಒಂದೊಂದು ರೀತಿಯ ಯುದ್ಧವು ನಡೆಯುತ್ತಿರಲಾಗಿ, ಕ್ರುದ್ಧನಾದ ಯುಧಿಷ್ಠಿರನು ನರಶ್ರೇಷ್ಠರಾದ ಪಾಂಚಾಲರನ್ನೂ, ಪುರುಷರ್ಷಭರಾದ ಮತ್ಸ್ಯಯೋಧರನ್ನೂ ಕುರಿತು ಹೇಳಿದನು :

"ಯೋಧಶ್ರೇಷ್ಠರೇ! ಯಾರು ನಮಗೆ ಪ್ರಾಣಸಮಾನರಾಗಿರುವರೋ, ಶಿರಸ್ಸಿಗೆ ಸಮಾನರಾಗಿರುವರೋ, ಮಹಾರಥರಾಗಿರುವರೋ–ಅಂತಹ ಪುರುಷಶ್ರೇಷ್ಠರೆಲ್ಲರೂ ಈಗ ಧೃತರಾಷ್ಟ್ರನ ಮಕ್ಕಳೊಡನೆ ಯುದ್ಧ ಮಾಡುತ್ತಿದ್ದಾರೆ. ಈ ಸಮಯದಲ್ಲಿ ಮೂಢರಂತೆ, ಜ್ಞಾನತಪ್ಪಿದ ಮನುಷ್ಯ ರಂತೆ ನೀವೇಕೆ ನಿಂತಿರುವಿರಿ? ನನ್ನ ಕಡೆಯ ಯೋಧರು ಎಲ್ಲಿ ಯುದ್ಧಮಾಡು ತ್ತಿರುವರೋ ಅಲ್ಲಿಗೆ ಕ್ಷತ್ರಿಯಧರ್ಮವನ್ನು ಮುಂದೆಮಾಡಿಕೊಂಡು ನಿಶ್ಚಿಂತ ರಾಗಿ ಹೋಗಿರಿ.

**ಜಯನ್ತೋ ವಧ್ಯಮಾನಾಶ್ಚ ಗತಿಮಿಷ್ಟಾಂ ಗಮಿಷ್ಯಥ ।**
**ಜಿತ್ವಾ ವಾ ಬಹುಭಿರ್ಯಜ್ಞೈರ್ಯಜಧ್ವಂ ಭೂರಿದಕ್ಷಿಣೈಃ ।**
**ಹತಾ ವಾ ದೇವಸಾದ್ಭೂತ್ವಾ ಲೋಕಾನ್ಪ್ರಾಪ್ಸ್ಯಥ ಪುಷ್ಕಲಾನ್ ॥೬೦॥**

ಯುದ್ಧದಲ್ಲಿ ವಿಜಯಿಗಳಾದರೂ ಅಥವಾ ಪ್ರಾಣಗಳನ್ನು ತೊರೆದರೂ ಇಷ್ಟವಾದ ಗತಿಯನ್ನೇ ಹೊಂದುವಿರಿ. ಯುದ್ಧದಲ್ಲಿ ನೀವು ಶತ್ರುಗಳನ್ನು ಜಯಿಸಿದ್ದೇ ಆದರೆ ಭೂರಿದಕ್ಷಿಣಾಕವಾದ ಅನೇಕ ಯಾಗಗಳನ್ನು ಮಾಡಿರಿ. ಒಂದು ವೇಳೆ ಯುದ್ಧದಲ್ಲಿ ಮಡಿದರೆ ದೇವರೂಪಿಗಳಾಗಿ ಪುಷ್ಕಲವಾಗಿರುವ ಪುಣ್ಯಲೋಕಗಳನ್ನು ಪಡೆಯುವಿರಿ.”

ಮಹಾರಾಜ! ಯುಧಿಷ್ಠಿರರಾಜನಿಂದ ಹೀಗೆ ಪ್ರಚೋದಿತರಾದ ಮಹಾರಥರು ಯುದ್ಧೋದ್ಯತರಾಗಿ ಕ್ಷಾತ್ರಧರ್ಮವನ್ನು ಮುಂದೆಮಾಡಿ ಕೊಂಡು ಬಹಳ ತ್ವರೆಯಿಂದ ದ್ರೋಣರ ಕಡೆಗೇ ಧಾವಿಸಿದರು. ಪಾಂಚಾಲ ಯೋಧರು ಒಂದು ಕಡೆಯಲ್ಲಿ ನಿಂತು ದ್ರೋಣರನ್ನು ನಿಶಿತವಾದ ಬಾಣ ಗಳಿಂದ ಪ್ರಹರಿಸುತ್ತಿದ್ದರು. ಮತ್ತೊಂದು ಕಡೆಯಿಂದ ಭೀಮಸೇನಪುರಃಸರ ರಾದ ಯೋಧರು ದ್ರೋಣರನ್ನೇ ಆಕ್ರಮಿಸಿದರು.

ಪಾಂಡುವಿನ ಮಕ್ಕಳಲ್ಲಿ ಯಮಳರು ಮತ್ತು ಭೀಮಸೇನ–ಈ ಮೂವರು ಮಹಾರಥರು* ಕುಟಿಲಸ್ವಭಾವದವರಾಗಿದ್ದರು. ಆ ಮೂವರೂ ಧನಂಜಯನನ್ನು ಗಟ್ಟಿಯಾಗಿ ಕೂಗುತ್ತಾ ಹೇಳಿದರು :

**ಅಭಿದ್ರವಾರ್ಜುನ ಕ್ಷಿಪ್ರಂ ಕುರೂನ್ದ್ರೋಣಾದಪಾನುದ ।**
**ತತ ಏನಂ ಹನಿಷ್ಯನ್ತಿ ಪಞ್ಚಾಲಾ ಹತರಕ್ಷಿಣಮ್ ॥೯೪॥**

“ಓಡಿ ಬಾ, ಅರ್ಜುನ! ಬೇಗ ಬಾ. ಕುರುಯೋಧರನ್ನು ದ್ರೋಣರಿಂದ ಬೇರ್ಪಡಿಸು. ಅನಂತರ ರಕ್ಷಕರಿಲ್ಲದ ಈ ದ್ರೋಣರನ್ನು ಪಾಂಚಾಲ ಯೋಧರು ಸಂಹರಿಸುತ್ತಾರೆ.”

---

* ೬೩ನೆಯ ಶ್ಲೋಕವು ಹೀಗಿದೆ : ಆಸಂಸ್ತು ಪಾಣ್ಡುಪುತ್ರಾಣಾಂ ತ್ರಯೋ ಜಿಹ್ಮಾ ಮಹಾರಥಾಃ। ಯಮೌ ಚ ಭೀಮಸೇನಶ್ಚ। ಪಾಂಡುವಿನ ಮಕ್ಕಳಲ್ಲಿ ನಕುಲ-ಸಹದೇವರು ಮತ್ತು ಭೀಮಸೇನ–ಈ ಮೂವರು ಕುಟಿಲರು ಎಂಬ ತಾತ್ಪರ್ಯವನ್ನು ಈ ಶ್ಲೋಕವು ಕೊಡುತ್ತದೆ. ಇದುವರೆಗೆ ದುರ್ಯೋಧನಾದಿಗಳಿಗೆ ಈ ವಿಶೇಷಣವಿದ್ದಿತು. ಪಾಂಡವರಿಗೆ ಇರಲಿಲ್ಲ. ಕೆಲವು ಪುಸ್ತಕಗಳಲ್ಲಿ ಮಾತ್ರ ತ್ರಯೋಽಜಿಹ್ಮಾಃ ಪಾಂಡುವಿನ ಮಕ್ಕಳಲ್ಲಿ ಮೂವರು ಋಜುಮಾರ್ಗದವರಿದ್ದರು–ಎಂಬ ಪಾಠವೂ ಇದೆ. ಆದರೆ ಉಳಿದಿಬ್ಬರು ಕುಟಿಲರೇ–ಎಂಬ ಸಂಶಯಕ್ಕೆ ಅವಕಾಶವುಂಟಾಗುತ್ತದೆ. ಆದುದರಿಂದ ಇಲ್ಲಿ ನಾವು ತ್ರಯೋ ಜಿಹ್ಮಾಃ –ಮೂವರು ಕುಟಿಲರು ಎಂಬ ಪಾಠವನ್ನೇ ತೆಗೆದುಕೊಂಡಿರುತ್ತೇವೆ. ಮುಂದಿನ ಅಧ್ಯಾಯದಲ್ಲಿ ಈ ಅರ್ಥಕ್ಕೆ ಸ್ವಲ್ಪ ಪುಷ್ಟಿಯೂ ಸಿಕ್ಕುತ್ತದೆ.

ಮಹಾರಾಜ! ಅಣ್ಣ-ತಮ್ಮಂದಿರ ಆ ಕೂಗನ್ನು ಕೇಳಿದೊಡನೆಯೇ ಅರ್ಜುನನು ಕೌರವರ ಸೈನ್ಯದ ಕಡೆಗೆ ಧಾವಿಸಿದನು. ದ್ರೋಣರು ಧೃಷ್ಟ ದ್ಯುಮ್ನಪುರಃಸರರಾದ ಪಾಂಚಾಲಯೋಧರನ್ನೇ ಮರ್ದಿಸತೊಡಗಿದರು. ಆ ಐದನೆಯ ದಿವಸದಲ್ಲಿ ಎರಡೂ ಕಡೆಗಳ ಯೋಧರೂ ಪರಸ್ಪರವಾಗಿ ಒಬ್ಬರ ನ್ನೊಬ್ಬರು ಮರ್ದನಮಾಡುತ್ತಿದ್ದರು."

೧೮೯ನೆಯ ಅಧ್ಯಾಯವು ಮುಗಿಯಿತು.

೧೯೦ನೆಯ ಅಧ್ಯಾಯ ದ್ರೋಣವಧಪರ್ವ (ಮುಂದುವರಿದಿದೆ.)

## ದ್ರೋಣಾಚಾರ್ಯರ ಘೋರಸಂಹಾರಕ್ರಿಯೆ : ಋಷಿಗಳು ಅಸ್ತ್ರತ್ಯಾಗಮಾಡುವಂತೆ ದ್ರೋಣರಿಗೆ ಆದೇಶನೀಡಿದುದು : ಅಶ್ವತ್ಥಾಮನು ಹತನಾದನೆಂಬುದನ್ನು ತಿಳಿದು ದ್ರೋಣರಿಗೆ ಜೀವನದಲ್ಲಿಯ ನಿರಾಶೆಯುಂಟಾದುದು

ಸಂಜಯನು ದ್ರೋಣರ ಯುದ್ಧದ ಪ್ರಖರತೆಯನ್ನು ಧೃತರಾಷ್ಟ್ರನಿಗೆ ವಿವರಿಸಿ ಹೇಳುತ್ತಾನೆ :

ಮಹಾರಾಜ! ಕ್ರುದ್ಧನಾದ ಇಂದ್ರನು ಯಾವ ರೀತಿಯಲ್ಲಿ ದಾನವರನ್ನು ಕ್ಷಯಗೊಳಿಸುತ್ತಿದ್ದನೋ–ಅದೇ ರೀತಿಯಲ್ಲಿ ದ್ರೋಣರೂ ಪಾಂಚಾಲ ಯೋಧರನ್ನು ಅಪಾರಸಂಖ್ಯೆಯಲ್ಲಿ ಸಂಹಾರಮಾಡಿದರು. ದ್ರೋಣರ ಅಸ್ತ್ರ ಗಳಿಂದ ಸತತವಾಗಿ ವಧಿಸಲ್ಪಡುತ್ತಿದ್ದರೂ ಸತ್ತ್ವವಂತರಾದ, ಮಹಾರಥರಾದ ಪಾಂಚಾಲ-ಯೋಧರು ದ್ರೋಣರಿಗೆ ಭಯಪಡಲಿಲ್ಲ. ಯುದ್ಧ ಪರಾಯಣರಾದ ಪಾಂಚಾಲ-ಸೃಂಜಯಮಹಾರಥರು ಯುದ್ಧಮಾಡುತ್ತಾ ದ್ರೋಣರ ಸಮೀಪಕ್ಕೆ ಮುನ್ನುಗ್ಗಿ ಹೋಗುತ್ತಿದ್ದರು. ದ್ರೋಣರ ಬಾಣಗಳಿಂದ ಮುಚ್ಚಲ್ಪಟ್ಟವರಾಗಿ ಅವ್ಯಾಹತವಾದ ಬಾಣಗಳ ವೃಷ್ಟಿಯಿಂದ ಸುತ್ತಲೂ ಸಂಹೃತರಾಗುತ್ತಿದ್ದ ಪಾಂಚಾಲಯೋಧರ ಭಯಂಕರವಾದ ಆರ್ತನಾದಗಳು ಕೇಳಿಬರುತ್ತಿದ್ದುವು. ಯುದ್ಧದಲ್ಲಿ ಮಹಾತ್ಮರಾದ ದ್ರೋಣರಿಂದ ಪಾಂಚಾಲಯೋಧರು ವಧಿಸಲ್ಪಡುತ್ತಿರಲಾಗಿ, ದ್ರೋಣರ ಅಸ್ತ್ರಗಳು ಎಡಬಿಡದೆ ಧನುಸ್ಸಿನಿಂದ ಹೊರಬರುತ್ತಿರಲಾಗಿ, ಪಾಂಡವರ ಮನಸ್ಸನ್ನು ಭಯವು ಆವರಿಸಿತು. ತಮ್ಮ ಕಡೆಯ ಅಶ್ವ-ಗಜ-ಪದಾತಿಗಳ ಕ್ಷಯವನ್ನು ನೋಡಿ ಪಾಂಡವೇಯರು ವಿಜಯದ ಆಸೆಯನ್ನೇ ತೊರೆದರು.

“ಗ್ರೀಷ್ಮರ್ತುವಿನಲ್ಲಿ ಪ್ರಜ್ವಲಿಸುವ ಅಗ್ನಿಯು ಪೊದೆಯನ್ನು ಸುಟ್ಟು ಭಸ್ಮಮಾಡುವಂತೆ–ಪರಮಾಸ್ತ್ರವಿದರಾದ ದ್ರೋಣರು ನಮ್ಮೆಲ್ಲರನ್ನೂ ಸಂಹಾರಮಾಡಿಬಿಡಬಹುದಲ್ಲವೇ?

**ನ ಚೈನಂ ಸಂಯುಗೇ ಕಶ್ಚಿತ್ಸಮರ್ಥಃ ಪ್ರತಿವೀಕ್ಷಿತುಮ್ ।**
**ನ ಚೈನಮರ್ಜುನೋ ಜಾತು ಪ್ರತಿಯುಧ್ಯೇತ ಧರ್ಮವಿತ್ ॥೯॥**

ಯುದ್ಧಸಮಯದಲ್ಲಿ ನಮ್ಮ ಕಡೆಯಲ್ಲಿರುವ ಯೋಧರಲ್ಲಿ ಯಾರೂ ದ್ರೋಣರನ್ನು ದಿಟ್ಟಿಸಿ ನೋಡುವ ಸಾಮರ್ಥ್ಯವನ್ನೂ ಹೊಂದಿರುವುದಿಲ್ಲ. ಎದುರಿಸಲು ಸಮರ್ಥನಾಗಿರುವ ಧರ್ಮವಿದನಾದ ಅರ್ಜುನನು ಯಾವ ಸಮಯದಲ್ಲಿಯೂ ದ್ರೋಣರನ್ನೆದುರಿಸಿ ಯುದ್ಧಮಾಡುವುದಿಲ್ಲ.”

ಹೀಗೆಂದು ಅವರು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು.

ದ್ರೋಣರ ಬಾಣಗಳಿಂದ ಪೀಡಿತರಾದ ಕುಂತಿಯ ಮಕ್ಕಳು ಭಯ ಗೊಂಡಿರುವುದನ್ನು ಕಂಡು ಬುದ್ಧಿವಂತನಾದ, ಪಾಂಡವರ ಶ್ರೇಯಸ್ಸಿನಲ್ಲಿಯೇ ಆಸಕ್ತನಾದ ಶ್ರೀಕೃಷ್ಣನು ಅರ್ಜುನನೊಡನೆ ಹೇಳಿದನು :

**ನೈಷ ಯುದ್ಧೇನ ಸಂಗ್ರಾಮೇ ಜೇತುಂ ಶಕ್ಯಃ ಕಥಞ್ಚನ ।**
**ಸಧನುರ್ಧನ್ವಿನಾಂ ಶ್ರೇಷ್ಠೋ ದೇವೈರಪಿ ಸವಾಸವೈಃ ॥೧೦॥**

“ಅರ್ಜುನ! ಧನುಷ್ಮಂತರಲ್ಲಿ ಶ್ರೇಷ್ಠರಾದ ದ್ರೋಣರು ಯುದ್ಧ ಭೂಮಿಯಲ್ಲಿ ಕೈಯಲ್ಲಿ ಧನುಸ್ಸನ್ನು ಹಿಡಿದಿರುವವರೆಗೆ ಇಂದ್ರಸಹಿತರಾದ ದೇವತೆಗಳಿಂದಲೂ ಇವರನ್ನು ಯುದ್ಧದ ಮೂಲಕವಾಗಿ ಜಯಿಸಲು ಸಾಧ್ಯ ವಾಗುವುದಿಲ್ಲ.

**ನ್ಯಸ್ತಶಸ್ತ್ರಸ್ತು ಸಂಗ್ರಾಮೇ ಶಕ್ಯೋ ಹನ್ತುಂ ಭವೇನ್ನೃಭಿಃ ।**
**ಆಸ್ಥೀಯತಾಂ ಜಯೇ ಯೋಗೋ ಧರ್ಮಮುತ್ಸೃಜ್ಯ ಪಾಣ್ಡವಾಃ ।**
**ಯಥಾ ವಃ ಸಂಯುಗೇ ಸರ್ವಾನ್ನ ಹನ್ಯಾದ್ರುಕ್ಮವಾಹನಃ ॥೧೧॥**

ಇವರೇನಾದರೂ ಶಸ್ತ್ರಸಂನ್ಯಾಸಮಾಡಿದರೆ ಆಗ ಮಾತ್ರ ಇವರನ್ನು ಸಂಹರಿಸಲು ಮನುಷ್ಯರಿಂದ ಸಾಧ್ಯವಾಗುತ್ತದೆ. ಸುವರ್ಣಮಯವಾದ ರಥವನ್ನು ಹೊಂದಿರುವ ದ್ರೋಣರು ಯುದ್ಧದಲ್ಲಿ ನಿಮ್ಮೆಲ್ಲರನ್ನೂ ಸಂಹರಿಸದ ರೀತಿಯಲ್ಲಿ ಮತ್ತು ನೀವು ಜಯಗಳಿಸಲು ಸಾಧ್ಯವಾಗುವ ರೀತಿಯಲ್ಲಿ ಧರ್ಮವನ್ನು ಬದಿಗೊತ್ತರಿಸಿ ಉಪಾಯವನ್ನು ಕೈಗೊಳ್ಳಬೇಕಾಗಿದೆ.

**ಅಶ್ವತ್ಥಾಮ್ನಿ ಹತೇ ನೈಷ ಯುಧ್ಯೇದಿತಿ ಮತಿರ್ಮಮ ।**
**ತಂ ಹತಂ ಸಂಯುಗೇ ಕಶ್ಚಿದಸ್ಮೈ ಶಂಸತು ಮಾನವಃ ॥೧೨॥**

ಇವರ ಪ್ರಿಯಪುತ್ರನಾದ ಅಶ್ವತ್ಥಾಮನು ಹತನಾದರೆ ಇವರು ಮುಂದೆ ಯುದ್ಧಮಾಡುವುದಿಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ (ಆದರೆ ಈಗ ಅಶ್ವತ್ಥಾಮನನ್ನು ಸಂಹರಿಸುವ ಸಾಧ್ಯತೆಯಿಲ್ಲ). ಯುದ್ಧದಲ್ಲಿ ಅಶ್ವತ್ಥಾಮನು ಹತನಾದನೆಂಬುದಾಗಿ ಯಾವ ಮನುಷ್ಯನಾದರೂ ಇವರಿಗೆ ತಿಳಿಯ ಪಡಿಸಲಿ."

ಮಹಾರಾಜ! ಶ್ರೀಕೃಷ್ಣನ ಈ ಸಲಹೆಯು ಅರ್ಜುನನಿಗೆ ರುಚಿಸಲಿಲ್ಲ.

**ಏತನ್ನಾರೋಚಯದ್ರಾಜನ್ಕುನ್ತೀಪುತ್ರೋ ಧನಂಜಯಃ ।**
**ಅನ್ಯೇ ತ್ವರೋಚಯನ್ಸರ್ವೇ ಕೃಚ್ಛ್ರೇಣ ತು ಯುಧಿಷ್ಠಿರಃ ॥೧೩॥**

ಶ್ರೀಕೃಷ್ಣನ ಈ ಕುಟಿಲೋಪಾಯವು ಅರ್ಜುನನಿಗೆ ಹಿಡಿಸಲೇ ಇಲ್ಲ. ಭೀಮ-ನಕುಲ-ಸಹದೇವಾದಿ ಇತರರು ಒಪ್ಪಿದರು. ಯುಧಿಷ್ಠಿರನೂ ಬಹಳ ಕಷ್ಟದಿಂದ ಈ ಸಲಹೆಗೆ ತನ್ನ ಒಪ್ಪಿಗೆಯನ್ನೂ ಇತ್ತನು.

ಅನಂತರ ಮಹಾಬಾಹುವಾದ ಭೀಮಸೇನನು 'ಅಶ್ವತ್ಥಾಮಾ' ಎಂಬ ಹೆಸರಿನ ದೊಡ್ಡದಾದ ತನ್ನ ಪಕ್ಷದ ಆನೆಯನ್ನೇ ಗದೆಯಿಂದ ಸಂಹರಿಸಿದನು. ಆ ಆನೆಯು ಮಹಾಭಯಂಕರವಾಗಿದ್ದು ಶತ್ರುಗಳನ್ನು ಸದೆಬಡೆಯುತ್ತಿದ್ದಿತು. ಅದು ಮಾಲವದೇಶೀಯನಾದ ಇಂದ್ರವರ್ಮನ ಆನೆಯಾಗಿದ್ದಿತು. ಅನಂತರ ಭೀಮಸೇನನು ಲಜ್ಜಾಯುಕ್ತನಾಗಿಯೇ ದ್ರೋಣರ ಸಮೀಪಕ್ಕೆ ಹೋಗಿ **'ಅಶ್ವತ್ಥಾಮಾ ಹತಃ'** 'ಅಶ್ವತ್ಥಾಮನು ಸತ್ತುಹೋದನು' ಎಂದು ಗಟ್ಟಿಯಾಗಿ ಕೂಗಿಕೊಂಡನು. ಅಶ್ವತ್ಥಾಮ ಎಂಬ ಹೆಸರಿನ ಸುವಿಖ್ಯಾತವಾಗಿದ್ದ ಆನೆಯು ಸತ್ತುಹೋಗಿದ್ದಿತು. ಅದನ್ನೇ ಮನಸ್ಸಿನಲ್ಲಿಟ್ಟುಕೊಂಡು ಭೀಮಸೇನನು ದ್ರೋಣರೊಡನೆ ಸುಳ್ಳುಹೇಳಿದನು. ಪರಮಾಪ್ರಿಯವಾದ ಭೀಮಸೇನನ ಆ ಮಾತನ್ನು ಕೇಳಿ ದ್ರೋಣರು ಮನಸ್ಸಿನಲ್ಲಿ ವ್ಯಾಕುಲಗೊಂಡರು. ನೀರಿನಲ್ಲಿ ಮರಳು ಕದಡಿಹೋಗುವಂತೆ–ಅಶ್ವತ್ಥಾಮನು ಹತನಾದನೆಂಬ ವಾರ್ತೆ ಯನ್ನು ಕೇಳಿದೊಡನೆಯೇ ದ್ರೋಣರ ಶರೀರವು ಶಿಥಿಲವಾಗಿ ಹೋಯಿತು. ಆದರೆ ಮರುಕ್ಷಣದಲ್ಲಿಯೇ ತಮ್ಮ ಮಗನ ವೀರ್ಯವೆಷ್ಟೆಂಬು

ದನ್ನು ಚೆನ್ನಾಗಿ ಮನಗಂಡಿದ್ದ ದ್ರೋಣರು, ಭೀಮನು ಹೇಳಿದ ಮಾತು ಸುಳ್ಳಿರಬಹುದೆಂದೇ ಶಂಕಿಸಿದರು. ಅಶ್ವತ್ಥಾಮನು ಹತನಾದನೆಂಬ ವಾರ್ತೆಯನ್ನು ಕೇಳಿದರೂ ಅವರು ಧೈರ್ಯದಿಂದ ವಿಚಲಿತರಾಗಲಿಲ್ಲ. ತಮ್ಮ ಮಗನು ಶತ್ರುಗಳಿಂದ ಎದುರಿಸಲು ಅಸಾಧ್ಯನಾದವನೆಂಬುದನ್ನು



ಕೂಲಂಕಷವಾಗಿ ವಿಮರ್ಶಿಸಿ ನಿಶ್ಚಯಿಸಿ ಪುನಶ್ಚೇತನವನ್ನು ಪಡೆದು ಕ್ಷಣ ಮಾತ್ರದಲ್ಲಿ ಸಮಾಧಾನಹೊಂದಿದರು. ತಮಗೆ ಮೃತ್ಯುರೂಪನಾಗಿದ್ದ ಧೃಷ್ಟ ದ್ಯುಮ್ನನನ್ನು ಸಂಹರಿಸುವ ಇಚ್ಛೆಯಿಂದ ದ್ರೋಣರು ಅವನನ್ನು ಆಕ್ರಮಿಸಿ ತೀಕ್ಷ್ಣವಾಗಿದ್ದ ಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಸಾವಿರಾರು ಬಾಣಗಳಿಂದ ಮುಚ್ಚಿದರು. ರಣಾಂಗಣದಲ್ಲಿ ಶತ್ರುಗಳನ್ನು ಸಂಹರಿಸುತ್ತಾ ಸಂಚರಿಸು

ತ್ತಿದ್ದ ದ್ರೋಣರನ್ನು ಇಪ್ಪತ್ತು ಸಾವಿರ ಪಾಂಚಾಲನರಶ್ರೇಷ್ಠರು ಎಲ್ಲ ಕಡೆಗಳಿಂದಲೂ ಬಾಣಗಳಿಂದ ಮುಚ್ಚಿದರು. ವರ್ಷಾಕಾಲದಲ್ಲಿ ಮೋಡ ಗಳಿಂದ ಆಚ್ಛಾದಿತನಾದ ಸೂರ್ಯನು ಕಾಣದಿರುವಂತೆ–ಪಾಂಚಾಲಮಹಾ ರಥರ ಬಾಣಗಳಿಂದ ಮುಚ್ಚಲ್ಪಟ್ಟಿದ್ದ ಮಹಾರಥರಾದ ದ್ರೋಣರನ್ನು ನಾವು ಕಾಣಲೇ ಇಲ್ಲ. ಪಾಂಚಾಲರ ಬಾಣಗಳ ಸಮೂಹವನ್ನು ನಾಶಗೊಳಿಸಿ ಕ್ರುದ್ಧರಾದ, ಶತ್ರುತಾಪಕರಾದ ದ್ರೋಣರು ಶೂರರಾದ ಪಾಂಚಾಲ ಯೋಧರ ವಧೆಗಾಗಿ ಬ್ರಹ್ಮಾಸ್ತ್ರವನ್ನು ಪ್ರಕಟಿಸಿದರು. ಬ್ರಹ್ಮಾಸ್ತ್ರಪ್ರಯೋಗದಿಂದ ದ್ರೋಣರು ಸರ್ವಸೈನಿಕರನ್ನೂ ವಿನಾಶಗೊಳಿಸುತ್ತಾ ಬಹಳವಾಗಿ ಪ್ರಕಾಶಿಸಿದರು. ಆ ಮಹಾಯುದ್ಧದಲ್ಲಿ ಪಾಂಚಾಲಯೋಧರ ಸಾವಿರಾರು ಶಿರಸ್ಸುಗಳನ್ನೂ ಕೆಳಕ್ಕೆ ಕೆಡವಿದರು. ಕನಕಾಂಗದಗಳಿಂದ ಸಮಲಂಕೃತವಾಗಿದ್ದ, ಪರಿಘಾಕಾರದ ತೋಳುಗಳನ್ನೂ ಕತ್ತರಿಸಿದರು. ಭರದ್ವಾಜರಿಂದ ವಧಿಸಲ್ಪಡುತ್ತಿದ್ದ ಪಾಂಚಾಲಯೋಧರು–ಚಂಡಮಾರುತದಿಂದ ಬುಡ ಮೇಲಾಗಿ ಮಾಡಲ್ಪಟ್ಟ ವೃಕ್ಷಗಳಂತೆಯೇ–ರಣಭೂಮಿಯಲ್ಲಿ ಚೆಲ್ಲಾಪಿಲ್ಲಿ ಯಾಗಿ ಬಿದ್ದಿದ್ದರು. ಸಾವಿರಾರು ಆನೆಗಳ ಮತ್ತು ಕುದುರೆಗಳ ಪತನದಿಂದಾಗಿ ಭೂಮಿಯು ಮಾಂಸರಕ್ತಗಳ ಸಮ್ಮಿಶ್ರಣದಿಂದುಂಟಾದ ಕೆಸರಿನಿಂದಲೂ ಕೂಡಿ ಸಂಚಾರಕ್ಕೆ ಅಯೋಗ್ಯವಾಗಿದ್ದಿತು.

ದ್ರೋಣರು ಇಪ್ಪತ್ತು ಸಾವಿರ ಪಾಂಚಾಲರಥಿಗಳನ್ನು ಸಂಹರಿಸಿ ಸೇನೆಯ ಅಗ್ರಭಾಗದಲ್ಲಿ–ಧೂಮರಹಿತನಾದ ಯಜ್ಞೇಶ್ವರನಂತೆಯೇ– ಪ್ರಜ್ವಲಿಸುತ್ತಾ ನಿಂತಿದ್ದರು. ಪ್ರತಾಪವಂತರಾದ ಭಾರದ್ವಾಜರು ಅತಿಕ್ರುದ್ಧ ರಾಗಿ ಭಲ್ಲದಿಂದ ವಸುದಾನನ ಶಿರಸ್ಸನ್ನು ಶರೀರದಿಂದ ಬೇರ್ಪಡಿಸಿದರು. ಪುನಃ ದ್ರೋಣರು ಐದುನೂರು ಮತ್ಸ್ಯಯೋಧರನ್ನೂ, ಆರು ಸಾವಿರ ಸೃಂಜಯ ಯೋಧರನ್ನೂ, ಹತ್ತು ಸಾವಿರ ಗಜಸೈನಿಕರನ್ನೂ ಮತ್ತು ಹತ್ತು ಸಾವಿರ ಅಶ್ವಸೈನಿಕರನ್ನೂ ಸಂಹರಿಸಿದರು. ಕ್ಷತ್ರಿಯರನ್ನು ಸಂಪೂರ್ಣವಾಗಿ ವಿನಾಶಮಾಡಲೆಂದೇ ರಣಾಂಗಣದಲ್ಲಿ ದ್ರೋಣರು ನಿಂತಿರುವುದನ್ನು ನೋಡಿ–ಋಷಿಗಳೆಲ್ಲರೂ ಯಜ್ಞೇಶ್ವರನನ್ನು ಮುಂದೆಮಾಡಿಕೊಂಡು ಬಹಳ ತ್ವರೆಯಿಂದ ದ್ರೋಣರ ಸಮೀಪಕ್ಕೆ ಆಗಮಿಸಿದರು. ದ್ರೋಣರನ್ನು ಬ್ರಹ್ಮ

ಲೋಕಕ್ಕೆ ಕರೆದುಕೊಂಡು ಹೋಗುವ ಇಚ್ಛೆಯಿಂದ ವಿಶ್ವಾಮಿತ್ರರು, ಜಮದಗ್ನಿಗಳು, ಭರದ್ವಾಜರು, ಗೌತಮರು, ವಸಿಷ್ಠರು, ಕಶ್ಯಪರು, ಅತ್ರಿಗಳು–ಇವರೇ ಮುಂತಾದ ಮಹರ್ಷಿಗಳು ಅಲ್ಲಿಗೆ ಆಗಮಿಸಿದರು. ಅವರೊಡನೆ ಸಿಕತರು, ಪೃಶ್ನಿಗಳು, ಗರ್ಗರು, ವಾಲಖಿಲ್ಯರು, ಮರೀಚಿಪರು, ಭೃಗುಗಳು, ಅಂಗಿರಸರು ಸೂಕ್ಷ್ಮರೂಪಗಳನ್ನು ಧರಿಸಿದ್ದ ಇನ್ನೂ ಅನೇಕ ಮಹರ್ಷಿಗಳೂ ಇದ್ದರು. ಅವರೆಲ್ಲರೂ ರಣಾಂಗಣಕ್ಕೆ ಶೋಭಾಯಮಾನವಾಗಿ ಕಾಣುತ್ತಿದ್ದ ದ್ರೋಣರನ್ನು ಕುರಿತು ಹೇಳಿದರು :

**ಅಧರ್ಮತಃ ಕೃತಂ ಯುದ್ಧಂ ಸಮಯೋ ನಿಧನಸ್ಯ ತೇ ।**
**ನ್ಯಸ್ಯಾಯುಧಂ ರಣೇ ದ್ರೋಣ ಸಮೀಕ್ಷಾಸ್ಮಾನವಸ್ಥಿತಾನ್ ।**
**ನಾತಃ ಕ್ರೂರತರಂ ಕರ್ಮ ಪುನಃ ಕರ್ತುಮಿಹಾರ್ಹಸಿ ॥೩೬॥**

"ದ್ರೋಣ! ನೀನು ಆಯುಧವನ್ನು ಕೆಳಗಿಡು. ಇಲ್ಲಿ ಬಂದು ನಿಂತಿರುವ ನಮ್ಮನ್ನು ಚೆನ್ನಾಗಿ ನೋಡು. ನೀನು ಇದುವರೆಗೆ ಅಧರ್ಮದಿಂದಲೇ ಯುದ್ಧಮಾಡಿರುವೆ. ಮೃತ್ಯುವನ್ನಪ್ಪಲು ಇದು ನಿನಗೆ ಸಕಾಲವಾಗಿದೆ. ಆದುದರಿಂದ ಕ್ರೂರತರವಾದ ಈ ಸಂಹಾರಕಾರ್ಯವನ್ನು ಪುನಃ ಮಾಡು ವುದು ನಿನಗೆ ಉಚಿತವಲ್ಲ.

**ವೇದವೇದಾಙ್ಗವಿದುಷಃ ಸತ್ಯಧರ್ಮರತಸ್ಯ ಚ ।**
**ಬ್ರಾಹ್ಮಣಸ್ಯ ವಿಶೇಷೇಣ ತವೈತನ್ನೋಪಪದ್ಯತೇ ॥೩೭॥**

ನೀನು ವೇದ-ವೇದಾಂಗಪಾರಂಗತನಾಗಿರುವೆ. ಸತ್ಯ ಮತ್ತು ಧರ್ಮಗಳಲ್ಲಿ ನಿರತನಾಗಿರುವೆ. ಎಲ್ಲಕ್ಕಿಂತಲೂ ಮಿಗಿಲಾಗಿ ಬ್ರಾಹ್ಮಣನಾಗಿರುವೆ. ಆದುದರಿಂದ ನಿನ್ನಂತಹವನಿಗೆ ಈ ವಿನಾಶಕಾರ್ಯವು ಖಂಡಿತವಾಗಿಯೂ ಶೋಭಿಸುವುದಿಲ್ಲ.

**ತ್ಯಜಾಯುಧಮಮೋಘೇಷೋ ತಿಷ್ಠ ವರ್ತ್ಮನಿ ಶಾಶ್ವತೇ ।**
**ಪರಿಪೂರ್ಣಶ್ಚ ಕಾಲಸ್ತೇ ವಸ್ತುಂ ಲೋಕೇಽದ್ಯ ಮಾನುಷೇ ॥೩೮॥**

ವ್ಯರ್ಥವಾಗದಿರುವ ಬಾಣಗಳನ್ನು ಹೊಂದಿರುವ ದ್ರೋಣನೇ! ಶಸ್ತ್ರನ್ಯಾಸಮಾಡು. ಶಾಶ್ವತವಾದ ಸನಾತನಧರ್ಮದಲ್ಲಿ ಬುದ್ಧಿಯನ್ನು ಸ್ಥಿರೀ

ಕರಿಸು. ಈ ಮನುಷ್ಯಲೋಕದಲ್ಲಿ ನೀನು ವಾಸಮಾಡಬೇಕಾಗಿರುವ ಕಾಲವು ಪೂರ್ಣವಾಗಿ ಮುಗಿದುಹೋಗಿದೆ.



**ಬ್ರಹ್ಮಾಸ್ತ್ರೇಣ ತ್ವಯಾ ದಗ್ಧಾ ಅನಸ್ತ್ರಜ್ಞಾ ನರಾ ಭುವಿ ।**
**ಯದೇತದೀದೃಶಂ ವಿಪ್ರ ಕೃತಂ ಕರ್ಮ ನ ಸಾಧು ತತ್ ॥೩೯॥**

ನೀನು ಶಸ್ತ್ರಗಳನ್ನು ತಿಳಿಯದೇ ಇರತಕ್ಕವರನ್ನೂ ಬ್ರಹ್ಮಾಸ್ತ್ರದಿಂದ ದಹಿಸಿರುವೆ. ನೀನು ಇಂತಹ ಅಧರ್ಮಯುಕ್ತವಾದ ಕಾರ್ಯವನ್ನು ಮಾಡಿರುವುದು ಖಂಡಿತವಾಗಿಯೂ ಉಚಿತವಲ್ಲ.

**ನ್ಯಸ್ಯಾಯುಧಂ ರಣೇ ವಿಪ್ರ ದ್ರೋಣ ಮಾ ತ್ವಂ ಚಿರಂ ಕೃಥಾಃ ।**
**ಮಾ ಪಾಪಿಷ್ಠತರಂ ಕರ್ಮ ಕರಿಷ್ಯಸಿ ಪುನರ್ದ್ವಿಜ ॥೪೦॥**

ದ್ವಿಜಶ್ರೇಷ್ಠನೇ! ದ್ರೋಣ! ಈಗಲೇ ನೀನು ಶಸ್ತ್ರಸಂನ್ಯಾಸಮಾಡು. ಸಾವಕಾಶಮಾಡಬೇಡ. ಅತ್ಯಂತಪಾಪಹೇತುವಾದ ಈ ಸಂಹಾರಕಾರ್ಯ ವನ್ನು ಪುನಃ ಪ್ರಾರಂಭಿಸಬೇಡ.''

ಮಹಾರಾಜ! ಋಷಿಗಳು ಬಂದು ಹೀಗೆ ಹೇಳಿದುದನ್ನೂ-ಭೀಮ ಸೇನನು 'ಅಶ್ವತ್ಥಾಮನು ಹತನಾದನು'-ಎಂದು ಕೂಗಿಕೊಳ್ಳುತ್ತಿರುವುದನ್ನೂ ಕೇಳಿ, ಧೃಷ್ಟದ್ಯುಮ್ನನು ಆಯುಧವನ್ನೆತ್ತಿಕೊಂಡು ನಿಂತಿರುವುದನ್ನೂ ನೋಡಿ ದ್ರೋಣರು ಉದಾಸೀನಮನಸ್ಕರಾದರು. ದ್ರೋಣರು-ತಮ್ಮ ಮಗನು ಸತ್ತುಹೋದನೇ?-ಎಂಬ ವಿಷಯದಲ್ಲಿ ಸಂದೇಹನಿವಾರಣೆಗಾಗಿ ಕುಂತಿಯ ಮಗನಾದ ಯುಧಿಷ್ಠಿರನನ್ನು ಕುರಿತು-'ನನ್ನ ಮಗನು ಸತ್ತಿರುವನೇ, ಇಲ್ಲವೇ?'-ಎಂದು ಪ್ರಶ್ನಿಸಿದರು. ಅವರು ಯುಧಿಷ್ಠಿರನನ್ನು ಪ್ರಶ್ನಿಸಲು ಕಾರಣವಿಷ್ಟೆ.

**ಸ್ಥಿರಾ ಬುದ್ಧಿರ್ಹಿ ದ್ರೋಣಸ್ಯ ನ ಪಾರ್ಥೋ ವಕ್ಷ್ಯತೇಽನೃತಮ್ ।**
**ತ್ರಯಾಣಾಮಪಿ ಲೋಕಾನಾಮೈಶ್ವರ್ಯಾರ್ಥೇ ಕಥಂಚನ ॥೪೩॥**

ಮೂರು ಲೋಕಗಳ ಐಶ್ವರ್ಯಕ್ಕಾಗಿಯೇ ಆದರೂ, ಯಾವುದೇ ಕಾರಣದಿಂದಲೂ ಯುಧಿಷ್ಠಿರನು ಸುಳ್ಳುಹೇಳುವುದಿಲ್ಲವೆಂಬ ಸ್ಥಿರವಾದ ಬುದ್ಧಿಯು ದ್ರೋಣರಿಗಿದ್ದಿತು.

**ತಸ್ಮಾತ್ತಂ ಪರಿಪಪ್ರಚ್ಛ ನಾನ್ಯಂ ಕಶ್ಚಿದ್ದ್ವಿಜರ್ಷಭಃ ।**
**ತಸ್ಮಿಂಸ್ತಸ್ಯ ಹಿ ಸತ್ಯಾಶಾ ಬಾಲ್ಯಾತ್ಪ್ರಭೃತಿ ಪಾಣ್ಡವೇ ॥೪೪॥**

ಈ ಕಾರಣದಿಂದಲೇ ದ್ರೋಣರು ಸತ್ಯಾಂಶವನ್ನು ತಿಳಿಯುವುದಕ್ಕಾಗಿ ಬೇರೆ ಯಾರನ್ನೂ ಕೇಳದೇ ಯುಧಿಷ್ಠಿರನನ್ನೇ ಪ್ರಶ್ನಿಸಿದರು. ಯುಧಿಷ್ಠಿರನು ಬಾಲ್ಯದಿಂದಲೂ ಸತ್ಯನಿಷ್ಠನೆಂಬುದರಲ್ಲಿ ಆಚಾರ್ಯರಿಗೆ ವಿಶ್ವಾಸವಿದ್ದಿತು.

ಮಹಾರಾಜ! ಭೂಮಿಯನ್ನು ಪಾಂಡವರಹಿತವನ್ನಾಗಿ ಮಾಡಲು ಉದ್ಯುಕ್ತರಾಗಿದ್ದ, ಯೋಧಶ್ರೇಷ್ಠರಾದ ದ್ರೋಣರು ಮಗನ ಮರಣದ ವಿಷಯದಲ್ಲಿ ನಿಜಸಂಗತಿಯನ್ನು ತಿಳಿಯುವ ಸಲುವಾಗಿ ಧರ್ಮರಾಜನನ್ನು ಪ್ರಶ್ನಿಸಿದರೆಂಬ ವಾರ್ತೆಯನ್ನು ಕೇಳಿ ಶ್ರೀಕೃಷ್ಣನು ಬಹಳ ವ್ಯಥಿತನಾದನು. ಅಂತೆಯೇ ಯುಧಿಷ್ಠಿರನನ್ನು ಕುರಿತು ಹೇಳಿದನು :

**ಯದ್ಯರ್ಧದಿವಸಂ ದ್ರೋಣೋ ಯುಧ್ಯತೇ ಮನ್ಯುಮಾಸ್ಥಿತಃ ।**
**ಸತ್ಯಂ ಬ್ರವೀಮಿ ತೇ ಸೇನಾ ವಿನಾಶಂ ಸಮುಪೈಷ್ಯತಿ ॥೪೬॥**

“ಕ್ರೋಧಪರವಶರಾದ ದ್ರೋಣರು ಇನ್ನು ಕೇವಲ ಅರ್ಧದಿವಸ ಯುದ್ಧಮಾಡಿದ್ದೇ ಆದರೆ–ನಿನ್ನ ಸೈನ್ಯವನ್ನು ಸಂಪೂರ್ಣವಾಗಿ ವಿನಾಶಮಾಡುತ್ತಾರೆ. ಈ ವಿಷಯವನ್ನು ನಾನು ಸತ್ಯವಾಗಿ ಹೇಳುತ್ತಿದ್ದೇನೆ.

**ಸ ಭವಾಂಸ್ತ್ರಾತು ನೋ ದ್ರೋಣಾತ್ಸತ್ಯಾಜ್ಜ್ಯಾಯೋಽನೃತಂ ವಚಃ ।**
**ಅನೃತಂ ಜೀವಿತಸ್ಯಾರ್ಥೇ ವದನ್ನ ಸ್ಪೃಶ್ಯತೇಽನೃತೈಃ ॥೪೭॥**

ಮಹಾರಾಜ! ನೀನೀಗ ನಮ್ಮೆಲ್ಲರನ್ನೂ ದ್ರೋಣರಿಂದ ರಕ್ಷಿಸಬೇಕಾಗಿದೆ. ಕೆಲವು ಸಮಯಗಳಲ್ಲಿ ಸತ್ಯವಚನಕ್ಕಿಂತಲೂ ಸುಳ್ಳುಮಾತೇ ಶ್ರೇಷ್ಠವಾದುದು (ಮೇಲಾದುದು). ಪ್ರಾಣವನ್ನು ಉಳಿಸಿಕೊಳ್ಳುವ ಸಲುವಾಗಿ ಸುಳ್ಳುಹೇಳಿದರೆ ಮನುಷ್ಯನು–ಸುಳ್ಳುಹೇಳಿದುದರಿಂದ ಉಂಟಾಗುವ ಪಾಪಗಳಿಂದ ಲಿಪ್ತನಾಗುವುದಿಲ್ಲ.”

ಶ್ರೀಕೃಷ್ಣ-ಯುಧಿಷ್ಠಿರರು ಹೀಗೆ ಸಂಭಾಷಣೆಯನ್ನು ಮಾಡುತ್ತಿದ್ದಾಗ ಭೀಮಸೇನನು ಹೇಳಿದನು :

“ಅಣ್ಣ! ಮಹಾತ್ಮರಾದ ದ್ರೋಣರ ವಧೋಪಾಯವನ್ನು ಶ್ರೀಕೃಷ್ಣ ನಿಂದ ಕೇಳಿದ ನಾನು ನಿನ್ನ ಸೈನ್ಯದ ಮಧ್ಯದಲ್ಲಿ ಸಂಚರಿಸುತ್ತಿದ್ದ, ಇಂದ್ರನ ಆನೆಯಾದ ಐರಾವತಕ್ಕೆ ಸಮಾನವಾಗಿದ್ದ, ಸುವಿಖ್ಯಾತವಾಗಿದ್ದ, ಮಾಲವ ದೇಶರಾಜನಾದ ಇಂದ್ರವರ್ಮನ ‘ಅಶ್ವತ್ಥಾಮಾ’ ಎಂಬ ಆನೆಯನ್ನು ಯುದ್ಧ ದಲ್ಲಿ ಪರಾಕ್ರಮದಿಂದ ಸಂಹರಿಸಿ ಅನಂತರ ನಾನು ದ್ರೋಣರಿಗೆ ಹೇಳಿದೆನು :

**ಅಶ್ವತ್ಥಾಮಾ ಹತೋ ಬ್ರಹ್ಮನ್ನಿವರ್ತಸ್ವಾಹವಾದಿತಿ ॥೫೧॥**

‘ಅಶ್ವತ್ಥಾಮನು ಹತನಾದನು. ಇನ್ನಾದರೂ ಯುದ್ಧದಿಂದ ವಿರಮಿಸಿರಿ’–ಎಂದು ಹೇಳಿದೆನು. ಆದರೆ ಪುರುಷರ್ಷಭರಾದ ದ್ರೋಣರು ನನ್ನ ಮಾತಿನಲ್ಲಿ ವಿಶ್ವಾಸವನ್ನಿಡಲಿಲ್ಲ. ಆದುದರಿಂದ, ಯುಧಿಷ್ಠಿರ! ನಮ್ಮಗ್ರಳ ವಿಜಯವನ್ನೇ ಸತತವಾಗಿ ಆಶಿಸುತ್ತಿರುವ ಶ್ರೀಕೃಷ್ಣನ ಮಾತುಗಳನ್ನು ಗೌರವಿಸು. ಅವನು ಹೇಳಿದಂತೆ ಮಾಡು. ಶಾರದ್ವತಿಯ ಮಗನಾದ ಅಶ್ವತ್ಥಾಮನು ಹತನಾದನೆಂದು ದ್ರೋಣರಿಗೆ ಹೇಳು.

**ತ್ವಯೋಕ್ತೋ ನೈವ ಯುಧ್ಯೇತ ಜಾತು ರಾಜನ್ದ್ವಿಜರ್ಷಭಃ ।**
**ಸತ್ಯವಾನ್ಹಿ ತ್ರಿಲೋಕೇಽಸ್ಮಿನ್ಭವಾನ್ಖ್ಯಾತೋ ಜನಾಧಿಪ ॥೫೩॥**

ನೀನು ಈ ಮಾತನ್ನು ಹೇಳಿದರೆ ಬ್ರಾಹ್ಮಣಶ್ರೇಷ್ಠರಾದ ದ್ರೋಣರು ಮುಂದೆ ಖಂಡಿತವಾಗಿಯೂ ಯುದ್ಧಮಾಡುವುದಿಲ್ಲ. ಇದಕ್ಕೆ ಕಾರಣವೇನೆಂದರೆ : ನೀನು ಮೂರು ಲೋಕಗಳಲ್ಲಿಯೂ ಸತ್ಯವಂತನೆಂಬ ಖ್ಯಾತಿಯನ್ನು ಪಡೆದಿರುವೆ."

ಕೌರವೇಶ್ವರ! ಭೀಮಸೇನನು ಹೇಳಿದ ಈ ಮಾತನ್ನು ಕೇಳಿ, ಶ್ರೀಕೃಷ್ಣನಿಂದಲೂ ಅಶ್ವತ್ಥಾಮನು ಹತನಾದನೆಂಬ ಆ ಒಂದು ಮಾತನ್ನು ಹೇಳುವಂತೆ ಪ್ರಚೋದಿತನಾದ, ಯುಧಿಷ್ಠಿರನು (ದೈವಯೋಗದಿಂದ ಮುಂದೆ ಹಾಗೆಯೇ ಆಗಬೇಕಾಗಿದ್ದುದರಿಂದ) ಆ ಮಾತನ್ನು ಹೇಳಲು ಸಿದ್ಧನಾದನು.

ಆ ಸಮಯದಲ್ಲಿ ರಾಜನಿಗೆ ಸುಳ್ಳು ಹೇಳಿದುದರಿಂದ ಸಂಭವಿಸುವ ಪಾಪದ ವಿಷಯವಾಗಿ ಭಯವೂ ಇದ್ದಿತು. ಹೇಗಾದರೂ ಮಾಡಿ ವಿಜಯವನ್ನು ಗಳಿಸಿಕೊಳ್ಳಬೇಕೆಂಬ ಆಸಕ್ತಿಯೂ ಇದ್ದಿತು. ಇಂತಹ ಡೋಲಾಯಮಾನವಾದ ಮನಸ್ಸಿನಿಂದಿದ್ದ ಯುಧಿಷ್ಠಿರನು 'ಅಶ್ವತ್ಥಾಮಾ' ಎಂದು ಗಟ್ಟಿಯಾಗಿ ಹೇಳಿ ಅನಂತರ ಸ್ಪಷ್ಟವಾಗಿ ಕೇಳಿಸದ ರೀತಿಯಲ್ಲಿ 'ಹತಃ ಕುಞ್ಜರಃ' ಎಂಬ ಶಬ್ದವನ್ನೂ ಸೇರಿಸಿದನು.

**ಅವ್ಯಕ್ತಮಬ್ರವೀದ್ರಾಜನ್ಹತಃ ಕುಞ್ಜರ ಇತ್ಯುತ ॥೫೫॥**

ಸುಳ್ಳು ಹೇಳಿದುದರ ಪರಿಣಾಮವೂ ಒಡನೆಯೇ ಆಯಿತು.

**ತಸ್ಯ ಪೂರ್ವಂ ರಥಃ ಪೃಥ್ವ್ಯಾಶ್ಚತುರಙ್ಗುಲಮುಚ್ಛ್ರಿತಃ ।**
**ಬಭೂವೈವಂ ಚ ತೇನೋಕ್ತೇ ತಸ್ಯ ವಾಹಾಃ ಸ್ಪೃಶನ್ಮಹೀಮ್ ॥೫೬॥**

ಯುಧಿಷ್ಠಿರನ ರಥವು ಆ ಹಿಂದೆ ಭೂಮಿಯಿಂದ ನಾಲ್ಕು ಅಂಗುಲಗಳಷ್ಟು ಮೇಲಿದ್ದಿತು. ಯುಧಿಷ್ಠಿರನು ಆ ಒಂದು ಸುಳ್ಳುಮಾತನ್ನು ಹೇಳಿದೊಡನೆಯೇ ಅವನ ಕುದುರೆಗಳು ಭೂಮಿಯನ್ನು ಸ್ಪರ್ಶಿಸಿದುವು (ಮೇಲಿದ್ದ ರಥವು ನೆಲಕ್ಕೆ ಕುಸಿಯಿತು). ಯುಧಿಷ್ಠಿರನಿಂದ ಆ ಮಾತನ್ನು ಕೇಳುತ್ತಲೇ ಮಹಾರಥರಾದ ದ್ರೋಣರು ಪುತ್ರವ್ಯಸನದಿಂದ ಸಂತಪ್ತರಾಗಿ ಜೀವನ

ದಲ್ಲಿಯೇ ನಿರಾಶೆಯನ್ನು ಹೊಂದಿದರು. ತಮ್ಮ ಪುತ್ರನು ಹತನಾದನೆಂಬ ವಾರ್ತೆಯನ್ನು ಕೇಳಿದ ದ್ರೋಣರು ಋಷಿಗಳ ಮಾತಿನಂತೆ ತಾವು ಮಹಾತ್ಮ ರಾದ ಪಾಂಡವರಿಗೆ ಮಹಾಪರಾಧವನ್ನೇ ಮಾಡಿರುವುದಾಗಿ ಭಾವಿಸಿದರು. ಪುತ್ರಶೋಕದಿಂದಾಗಿ ಬುದ್ಧಿಗೆಟ್ಟಿದ್ದ, ಉದ್ವಿಗ್ನರಾಗಿದ್ದ ದ್ರೋಣರು ಧೃಷ್ಟ ದ್ಯುಮ್ನನನ್ನು ನೋಡಿದರೂ ಹಿಂದಿನಂತೆ ರೋಷಾವೇಷದಿಂದ ಯುದ್ಧ ಮಾಡಲು ಅವರಿಂದ ಸಾಧ್ಯವಾಗಲಿಲ್ಲ."

೧೯೦ನೆಯ ಅಧ್ಯಾಯವು ಮುಗಿಯಿತು.

೧೯೧ನೆಯ ಅಧ್ಯಾಯ ದ್ರೋಣವಧಪರ್ವ (ಮುಂದುವರಿದಿದೆ.)

## ದ್ರೋಣ-ಧೃಷ್ಟದ್ಯುಮ್ನರ ಯುದ್ಧ: ಸಾತ್ಯಕಿಯ ಶೌರ್ಯ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸುತ್ತಾನೆ :

ಮಹಾರಾಜ! ಬಹಳ ಉದ್ವಿಗ್ನರಾಗಿದ್ದ, ಶೋಕದಿಂದ ವ್ಯಥಿತವಾದ ಮನಸ್ಸಿನಿಂದ ಕೂಡಿದ್ದ ದ್ರೋಣರನ್ನು ನೋಡಿ ಪಾಂಚಾಲರಾಜನ ಮಗನಾದ ಧೃಷ್ಟದ್ಯುಮ್ನನು ದ್ರೋಣರ ಸಮೀಪಕ್ಕೆ ಧಾವಿಸಿದನು. ಮನುಜೇಂದ್ರನಾದ ದ್ರುಪದನು, ತಾನು ಮಾಡಿದ ಮಹಾಯಾಗದಲ್ಲಿ, ಪ್ರಜ್ವಲಿಸುತ್ತಿದ್ದ ಯಜ್ಞೇ ಶ್ವರನಿಂದ, ದ್ರೋಣರ ವಿನಾಶಾರ್ಥವಾಗಿಯೇ ಧೃಷ್ಟದ್ಯುಮ್ನನನ್ನು ಪಡೆದು ಕೊಂಡಿದ್ದನು. ಪಾರ್ಷತನು ದ್ರೋಣರನ್ನು ವಧಿಸುವ ಇಚ್ಛೆಯಿಂದ ದೃಢವಾದ ಮೌರ್ವಿಯಿಂದ ಕೂಡಿದ್ದ, ಮೇಘದ ಧ್ವನಿಯಂತೆ ಶಬ್ದಮಾಡುತ್ತಿದ್ದ, ಜೀರ್ಣವಾಗದಿದ್ದ, ಭಯಂಕರವಾಗಿದ್ದ, ವಿಜಯವನ್ನು ಸಾಧಿಸಿಕೊಡುವು ದಾಗಿದ್ದ, ದಿವ್ಯವಾದ ಧನುಸ್ಸನ್ನು ಕೈಗೆತ್ತಿಕೊಂಡು ಅದರಲ್ಲಿ ಸರ್ಪೋಪಮ ವಾಗಿದ್ದ ಮತ್ತು ಮಹಾಜ್ವಾಲೆಯಿಂದ ಕೂಡಿರುವ ಯಜ್ಞೇಶ್ವರನಂತಿದ್ದ ಬಾಣ ವನ್ನು ಅನುಸಂಧಾನಮಾಡಿದನು. ಮೌರ್ವಿಯನ್ನು ಆಕರ್ಣವಾಗಿ ಸೆಳೆದು ಮಂಡಲಾಕಾರವಾಗಿಸಿದ್ದ ಆ ಧನುಸ್ಸಿನ ಮಧ್ಯಭಾಗದಲ್ಲಿದ್ದ ಆ ದಿವ್ಯಬಾಣದ ರೂಪವು–ಶರತ್ಕಾಲದಲ್ಲಿ ವರ್ತುಲಾಕಾರವಾದ ಪ್ರಭೆಯಿಂದ ಕೂಡಿದ (ಪರಿ ವೇಷದಿಂದ ಕೂಡಿದ ) ಸೂರ್ಯನ ರೂಪದಂತೆಯೇ–ಕಾಣುತ್ತಿದ್ದಿತು. ಧೃಷ್ಟದ್ಯುಮ್ನನು ಹಿಡಿದಿದ್ದ, ಪ್ರಜ್ವಲಿಸುತ್ತಿರುವ ಅಗ್ನಿಯಂತೆಯೇ ಇದ್ದ ಆ

ಧನುಸ್ಸನ್ನು ನೋಡಿ ಸೈನಿಕರು ಪ್ರಳಯಕಾಲವೇ ಸನ್ನಿಹಿತವಾಗಿರಬಹುದೆಂದು ಭಾವಿಸಿದರು. ಸರ್ಪೋಪಮವಾದ ಬಾಣವನ್ನು ಧೃಷ್ಟದ್ಯುಮ್ನನು ಧನುಸ್ಸಿನಲ್ಲಿ ಅನುಸಂಧಾನಮಾಡಿದುದನ್ನು ನೋಡಿ ಪ್ರತಾಪವಂತರಾದ ದ್ರೋಣರು ತಮ್ಮ ಶರೀರದ ಕಾಲಾವಧಿಯು ಮುಗಿಯುವ ಸಮಯವು ಸನ್ನಿಹಿತವಾಯಿತೆಂದು ಭಾವಿಸಿದರು. ಆಚಾರ್ಯರು ಧೃಷ್ಟದ್ಯುಮ್ನನ ಆ ಬಾಣವನ್ನು ವಿನಾಶ ಗೊಳಿಸಬೇಕೆಂದು ಬಹಳವಾಗಿ ಪ್ರಯತ್ನಿಸಿದರು. ಆದರೆ ಆ ಸಮಯದಲ್ಲಿ ಯಾವ ಮಹಾಸ್ತ್ರಗಳೂ ಮಹಾತ್ಮರಾದ ದ್ರೋಣರ ಸ್ಮೃತಿಪಥದಲ್ಲಿ ಸುಳಿಯಲಿಲ್ಲ.

**ತಸ್ಯ ತ್ವಹಾನಿ ಚತ್ವಾರಿ ಕ್ಷಪಾ ಚೈಕಾಸ್ಯತೋ ಗತಾ ।**
**ತಸ್ಯ ಚಾಹ್ನಸ್ತ್ರಿಭಾಗೇನ ಕ್ಷಯಂ ಜಗ್ಮುಃ ಪತತ್ರಿಣಃ ॥೯॥**

ದ್ರೋಣರು ನಾಲ್ಕು ದಿವಸಗಳು ಮತ್ತು ಒಂದು ರಾತ್ರಿ ಬಾಣಗಳನ್ನು ನಿರಂತರವಾಗಿ ಬಿಡುತ್ತಲೇ ಇದ್ದರು. ಹಗಲಿನಲ್ಲಿ ಮೂರು ಭಾಗವು ಕಳೆದು ಹೋಗುತ್ತಲೇ (22 ಘಳಿಗೆಗಳು ಕಳೆಯುತ್ತಲೇ) ಅವರಲ್ಲಿದ್ದ ಬಾಣಗಳೂ ಮುಗಿದುಹೋದುವು. ಪುತ್ರಶೋಕದಿಂದ ಬಹಳ ಪೀಡಿತರಾಗಿದ್ದರು. ನಾನಾ ವಿಧವಾದ ಯಾವ ದಿವ್ಯಾಸ್ತ್ರಗಳೂ ಆ ಸಮಯದಲ್ಲಿ ಅವರಿಗೆ ಗೋಚರಿಸು ತ್ತಲೇ ಇರಲಿಲ್ಲ. ದ್ರೋಣರು ಋಷಿಗಳ ಮಾತಿನಿಂದಲೂ ಪ್ರಭಾವಿತರಾಗಿ ದ್ದರು. ಈ ಎಲ್ಲ ಕಾರಣಗಳಿಂದಲೂ ದ್ರೋಣರು ಶಸ್ತ್ರಸಂನ್ಯಾಸಮಾಡಲು ಇಚ್ಛಿಸಿದರು. ಯದ್ಯಪಿ ಅವರು ಆಗಲೂ ಪರಿಪೂರ್ಣವಾದ ತೇಜಸ್ಸಿನಿಂದ ಕೂಡಿದ್ದರೂ ಹಿಂದಿನಂತೆ ಯುದ್ಧಮಾಡುವ ಸಾಮರ್ಥ್ಯವನ್ನು ಹೊಂದಿರ ಲಿಲ್ಲ.

[ಅನಂತರ ದ್ರೋಣರು ಪುನಃ ಅಂಗಿರಸವೆಂಬ ಹೆಸರಿನ ದಿವ್ಯವಾದ ಮತ್ತೊಂದು ಧನುಸ್ಸನ್ನೂ ಬ್ರಹ್ಮದಂಡಸದೃಶವಾದ ಬಾಣಗಳನ್ನೂ ತೆಗೆದುಕೊಂಡು ಧೃಷ್ಟದ್ಯುಮ್ನನೊಡನೆ ಯುದ್ಧಮಾಡಲು ಉಪಕ್ರಮಿಸಿದರು. ಕ್ರುದ್ಧರಾದ ದ್ರೋಣರು ಬಾಣಗಳ ದೊಡ್ಡ ಮಳೆಯಿಂದ ಪಾರ್ಷತನನ್ನು ಮುಚ್ಚಿದರು. ಪರಮಕ್ರುದ್ಧನಾಗಿದ್ದ ಧೃಷ್ಟದ್ಯುಮ್ನನನ್ನು ಬಾಣಗಳಿಂದ ಕ್ಷತ-ವಿಕ್ಷತಗೊಳಿಸಿದರು. ಧೃಷ್ಟದ್ಯುಮ್ನನು ಬಿಡುತ್ತಿದ್ದ ನೂರಾರು ಬಾಣಗಳನ್ನೂ ದ್ರೋಣರು ನಿಶಿತವಾದ ಬಾಣಗಳಿಂದ ನೂರಾರು ತುಂಡು

ಗಳನ್ನಾಗಿ ಕತ್ತರಿಸಿದರು. ಅನಂತರ ಅವನ ರಥದ ಧ್ವಜವನ್ನೂ ಧನುಸ್ಸನ್ನೂ ಕತ್ತರಿಸಿ ಸಾರಥಿಯನ್ನೂ ರಥದಿಂದ ಕೆಳಕ್ಕೆ ಕೆಡವಿದರು. ಧೃಷ್ಟದ್ಯುಮ್ನನು ಗಹಗಹಿಸಿ ನಗುತ್ತಾ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ನಿಶಿತವಾದ ಬಾಣದಿಂದ ದ್ರೋಣರ ವಕ್ಷಃಸ್ಥಳದಲ್ಲಿ ಪುನಃ ಪ್ರಹರಿಸಿದನು. ಆ ಪ್ರಹಾರದಿಂದ ದ್ರೋಣರು ಬಹಳವಾಗಿ ಗಾಯಗೊಂಡರೂ ಗಾಬರಿಗೊಳ್ಳದೇ ಚೂಪಾದ ಅಲಗಿನಿಂದ ಕೂಡಿದ ಭಲ್ಲದಿಂದ ಧೃಷ್ಟದ್ಯುಮ್ನನ ಧನುಸ್ಸನ್ನು ಪುನಃ ಕತ್ತರಿಸಿದರು. ಮಹಾರಾಜ! ಗದೆ ಮತ್ತು ಕತ್ತಿ ಈ ಎರಡನ್ನು ಬಿಟ್ಟು ಧೃಷ್ಟದ್ಯುಮ್ನನ ಬಳಿಯಲ್ಲಿದ್ದ ನಾನಾವಿಧವಾದ ಬಾಣಗಳನ್ನೂ, ಅನೇಕ ಧನುಸ್ಸುಗಳನ್ನೂ ದುರ್ಧರ್ಷರಾದ ದ್ರೋಣರು ಕತ್ತರಿಸಿದರು. ಅನಂತರ ಶತ್ರುತಾಪಕರಾದ ದ್ರೋಣರು ಕ್ರೋಧದ ಮೂರ್ತಿಯೇ ಆಗಿದ್ದ ಧೃಷ್ಟದ್ಯುಮ್ನನನ್ನು– ಜೀವಿತವನ್ನು ಅಂತ್ಯಗೊಳಿಸುವ ಸಾಮರ್ಥ್ಯವಿದ್ದ ನಿಶಿತವಾದ ಒಂಬತ್ತು ಬಾಣಗಳಿಂದ ಪ್ರಹರಿಸಿದರು. ಬಳಿಕ ಮಹಾತ್ಮನಾದ, ಮಹಾರಥನಾದ ಧೃಷ್ಟದ್ಯುಮ್ನನು ಬ್ರಹ್ಮಾಸ್ತ್ರವನ್ನು ಹೊರಗೆಡಹುತ್ತಾ ತನ್ನ ರಥದ ಕುದುರೆಗಳನ್ನು ದ್ರೋಣರ ರಥದ ಕುದುರೆಗಳೊಡನೆ ಬೆರೆಸಿದನು. ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ಧೃಷ್ಟದ್ಯುಮ್ನನ ಕಪೋತವರ್ಣದ ಕುದುರೆಗಳೂ, ದ್ರೋಣರ ಕೆಂಪುಬಣ್ಣದ ಕುದುರೆಗಳೂ ಪರಸ್ಪರ ಸಮ್ಮಿಳಿತವಾಗಿ ಬಹುವಾಗಿ ಶೋಭಿಸಿದುವು. ವರ್ಷಾಕಾಲದಲ್ಲಿ ಮಿಂಚಿನಿಂದ ಕೂಡಿದ ಗರ್ಜನೆಮಾಡುವ, ನಾನಾವರ್ಣಗಳ ಮೇಘಗಳು ಪ್ರಕಾಶಿಸುವಂತೆ– ರಣಾಂಗಣದಲ್ಲಿ ಸಮ್ಮಿಳಿತವಾದ ದ್ರೋಣ-ಧೃಷ್ಟದ್ಯುಮ್ನರ ಕುದುರೆಗಳು ಪರಸ್ಪರ ಸಮ್ಮಿಶ್ರವಾಗಿದ್ದ ಆ ಸಮಯದಲ್ಲಿ ಧೃಷ್ಟದ್ಯುಮ್ನನ ಈಷಾಬಂಧವನ್ನೂ, ಚಕ್ರಬಂಧವನ್ನೂ, ರಥಬಂಧವನ್ನೂ ದ್ರೋಣರು ಧ್ವಂಸಮಾಡಿದರು. ಧನುಸ್ಸಿನಿಂದಲೂ, ಧ್ವಜದಿಂದಲೂ, ಸಾರಥಿಯಿಂದಲೂ ವಿಹೀನನಾಗಿದ್ದ ಧೃಷ್ಟದ್ಯುಮ್ನನು ಘೋರವಾದ ಆಪತ್ತಿನಲ್ಲಿ ಸಿಕ್ಕಿಕೊಂಡವನಾಗಿ ಗದೆಯನ್ನೆತ್ತಿಕೊಂಡನು. ತಮ್ಮ ಮೇಲೆ ರಭಸದಿಂದ ಎಸೆಯಲ್ಪಡುತ್ತಿರುವ ಆ ಗದೆಯನ್ನು ಮಹಾರಥರಾದ, ಸತ್ಯಪರಾಕ್ರಮರಾದ, ಕ್ರುದ್ಧರಾದ ದ್ರೋಣರು ತೀಕ್ಷ್ಣವಾದ ಬಾಣಗಳಿಂದ ಧ್ವಂಸಮಾಡಿದರು. ತನ್ನ ಗದೆಯನ್ನು ಬಾಣಗಳಿಂದ ಧ್ವಂಸಮಾಡಿದುದನ್ನು ನೋಡಿ

ಧೃಷ್ಟದ್ಯುಮ್ನನು ಝುಳಪಿಸುತ್ತಿದ್ದ ಕತ್ತಿಯನ್ನೂ, ಕಾಂತಿಯುಕ್ತವಾಗಿದ್ದ ಗುರಾಣಿಯನ್ನೂ ಕೈಗೆತ್ತಿಕೊಂಡನು. ಖಡ್ಗಹಸ್ತನಾಗಿದ್ದ ಧೃಷ್ಟದ್ಯುಮ್ನನು, ಮಹಾತ್ಮರಾದ ಆಚಾರ್ಯಮುಖ್ಯರಾದ ದ್ರೋಣರ ವಧೆಗೆ ಅದು ಒಳ್ಳೆಯ ಕಾಲವಾಗಿರುವುದೆಂದು ನಿಃಸಂಶಯವಾಗಿ ಭಾವಿಸಿದನು. ತನ್ನ ರಥದ ಈಷಾ ದಂಡದ ಮೂಲಕವಾಗಿ ರಥದ ಆಸನದಲ್ಲಿ ಕುಳಿತಿದ್ದ ದ್ರೋಣರ ಬಳಿಗೆ ಕತ್ತಿಯನ್ನೂ ಮತ್ತು ಪ್ರಕಾಶಮಾನವಾಗಿದ್ದ ಗುರಾಣಿಯನ್ನೂ ಎತ್ತಿಕೊಂಡು ಧಾವಿಸಿದನು. ಮಹಾರಥನಾದ ಧೃಷ್ಟದ್ಯುಮ್ನನು ದುಷ್ಕರವಾದ ಕರ್ಮವನ್ನು ಮಾಡಲು ಉದ್ದೇಶಿಸಿ ಭಾರದ್ವಾಜರ ವಕ್ಷಃಸ್ಥಳವನ್ನು ಕತ್ತಿಯಿಂದ ಭೇದಿಸಲು ಇಚ್ಛಿಸಿದನು. ಆ ಸಮಯದಲ್ಲಿ ಧೃಷ್ಟದ್ಯುಮ್ನನು ನೊಗದ ಮಧ್ಯಭಾಗದಲ್ಲಿ ಕಾಲಿಟ್ಟು ಮತ್ತೊಮ್ಮೆ, ನೊಗದ ಬಂಧನಸ್ಥಳದಲ್ಲಿಯೂ, ಪುನಃ ದ್ರೋಣರ ಕುದುರೆಗಳ ಹಿಂಭಾಗದಲ್ಲಿಯೂ ಕಾಲುಗಳನ್ನಿಟ್ಟುಕೊಂಡು ನಿಂತುಕೊಳ್ಳು ತ್ತಿದ್ದನು. ಒಮ್ಮೆ ಧೃಷ್ಟದ್ಯುಮ್ನನು ನೊಗದ ಮಧ್ಯಭಾಗದಲ್ಲಿಯೂ ನಿಲ್ಲುತ್ತಿದ್ದನು. ಮತ್ತೊಮ್ಮೆ ದ್ರೋಣರ ಕುದುರೆಗಳ ಹಿಂಭಾಗದಲ್ಲಿಯೂ ನಿಲ್ಲುತ್ತಿದ್ದನು. ದ್ರೋಣರಿಗೂ ಸಹ ಧೃಷ್ಟದ್ಯುಮ್ನನು ಎಲ್ಲಿ ನಿಂತಿದ್ದಾನೆಂಬ ಅರಿವೇ ಆಗುತ್ತಿರಲಿಲ್ಲ. ಇಲ್ಲಿದ್ದಾನೆಯೋ–ಕುದುರೆಗಳ ಹಿಂಭಾಗದಲ್ಲಿ ನಿಂತಿ ದ್ದಾನೆಯೋ ಎಂದು ಅವರೂ ಭ್ರಾಂತರಾಗುತ್ತಿದ್ದರು. ಅವನ ಆ ಶೀಘ್ರ ಗತಿಯು ನಮಗೂ ಅದ್ಭುತವಾಗಿ ಕಾಣಿಸಿತು. ಮಾಂಸದ ತುಂಡನ್ನು ಆಶಿಸಿದ ಗಿಡಗವು ಯಾವ ರೀತಿಯಲ್ಲಿ ಶೀಘ್ರಾತಿಶೀಘ್ರವಾಗಿ ಹಾರಾಡುತ್ತದೆಯೋ– ಅದೇ ರೀತಿಯಲ್ಲಿ ದ್ರೋಣ ಮತ್ತು ಧೃಷ್ಟದ್ಯುಮ್ನರ ನಡುವೆ ವೇಗಪೂರ್ವಕ ವಾದ ಆಕ್ರಮಣವು ನಡೆಯುತ್ತಿದ್ದಿತು. ದ್ರೋಣರು ತಮ್ಮ ಕೆಂಪುಕುದುರೆ ಗಳನ್ನು ಗಾಯಗೊಳಿಸದೇ ಎಚ್ಚರಿಕೆಯಿಂದ ಧೃಷ್ಟದ್ಯುಮ್ನನ ಕಪೋತ ವರ್ಣದ ಕುದುರೆಗಳನ್ನು ರಥಶಕ್ತಿಯಿಂದ ಸಂಹರಿಸಿದರು. ಧೃಷ್ಟದ್ಯುಮ್ನನ ಕುದುರೆಗಳು ದ್ರೋಣರ ಶಕ್ತಿಯಿಂದ ಹತವಾಗಿ ಕೆಳಕ್ಕೆ ಬಿದ್ದುವು. ದ್ರೋಣರ ರಕ್ತಾಶ್ವಗಳು ರಥಬಂಧನದಿಂದ ವಿಮುಕ್ತಿಹೊಂದಿದುವು. ವಿಪ್ರಶ್ರೇಷ್ಠರಿಂದ ತನ್ನ ಕುದುರೆಗಳು ಹತವಾದುದನ್ನು ಕಂಡು ದ್ರುಪದನ ಮಗನಾದ, ಮಹಾರಥನಾದ, ಯೋಧಶ್ರೇಷ್ಠನಾದ ಧೃಷ್ಟದ್ಯುಮ್ನನು ಸಹಿಸಿಕೊಳ್ಳಲಿಲ್ಲ. ರಥಹೀನನಾದ, ಖಡ್ಗಧಾರಿಗಳಲ್ಲಿ ಶ್ರೇಷ್ಠನಾದ ಧೃಷ್ಟದ್ಯುಮ್ನನು ಖಡ್ಗವನ್ನೆತ್ತಿ

ಕೊಂಡು ಗರುಡನು ಸರ್ಪದ ಮೇಲೆ ರಭಸದಿಂದ ಎರಗುವಂತೆ–ದ್ರೋಣರನ್ನು ಆಕ್ರಮಿಸಿದನು. ಭಾರದ್ವಾಜರನ್ನು ಸಂಹರಿಸಲಿಚ್ಛಿಸಿದ್ದ ಧೃಷ್ಟದ್ಯುಮ್ನನ ಆಗಿನ ರೂಪವು–ಹಿಂದೆ ಹಿರಣ್ಯಕಶಿಪುವಿನ ವಧೆಯ ಕಾಲದಲ್ಲಿ ವಿಷ್ಣುವು ಧರಿಸಿದ್ದ ನೃಸಿಂಹನ ಘೋರವಾದ ರೂಪದಂತೆಯೇ–ಇದ್ದಿತು. ಆಗ ಧೃಷ್ಟದ್ಯುಮ್ನನು ರಣಾಂಗಣದಲ್ಲಿ ಸಂಚರಿಸುತ್ತಾ ಇಪ್ಪತ್ತು ಬಗೆಯ ಶ್ರೇಷ್ಠವಾದ ಕತ್ತಿವರಸೆಗಳನ್ನು ಪ್ರದರ್ಶಿಸಿದನು.

***ಭ್ರಾನ್ತಮುದ್ಭ್ರಾನ್ತಮಾವಿದ್ಧಮಾಪ್ಲುತಂ ಪ್ರಸೃತಂ ಸೃತಮ್ ।**
**ಪರಿವೃತ್ತಂ ನಿವೃತ್ತಂ ಚ ಖಡ್ಗಂ ಚರ್ಮ ಚ ಧಾರಯನ್ ॥೩೮॥**

**ಸಮ್ಪಾತಂ ಸಮುದೀರ್ಣಂ ಚ ದರ್ಶಯಾಮಾಸ ಪಾರ್ಷತಃ ।**
**ಭಾರತಂ ಕೌಶಿಕಂ ಚೈವ ಸಾತ್ವತಂ ಚೈವ ಶಿಕ್ಷಯಾ ॥೩೯॥**

ಧೃಷ್ಟದ್ಯುಮ್ನನು ಕತ್ತಿಯನ್ನೂ–ಗುರಾಣಿಯನ್ನೂ ಹಿಡಿದು ಭ್ರಾಂತ, ಉದ್ಭ್ರಾಂತ, ಆವಿದ್ಧ, ಆಪ್ಲುತ, ಪ್ರಸೃತ, ಸೃತ, ಪರಿವೃತ್ತ, ನಿವೃತ್ತ ಸಂಪಾತ, ಸಮುದೀರ್ಣ, ಭಾರತ, ಕೌಶಿಕ, ಸಾತ್ವತ–ಮೊದಲಾದ ಇಪ್ಪತ್ತೊಂದು ವರಸೆಗಳನ್ನು ಆ ರಣಾಂಗಣದಲ್ಲಿ ಪ್ರದರ್ಶಿಸಿದನು.

---

* ಮಣ್ಡಲಾಕಾರಕಂ ಖಡ್ಗಭ್ರಾಮಣಂ ಭ್ರಾನ್ತಮುಚ್ಯತೇ ।ತದೇವ ಬಾಹುಮು ದ್ಯಮ್ಯ ಕೃತಮುದ್ಭ್ರಾನ್ತಮೀರಿತಮ್ ॥೧॥ ಭ್ರಾಮಣಂ ಸ್ವಸ್ಯ ಪರಿತಃ ಖಡ್ಗಸ್ಯಾವಿದ್ಧ ಮುಚ್ಯತೇ । ಪರಪ್ರಯುಕ್ತಶಸ್ತ್ರಸ್ಯ ವಾರಣಾರ್ಥಮಿದಂ ತ್ರಯಮ್ ॥೨॥ ಶತ್ರೋ ರಾಕ್ರಮಣಾರ್ಥಾಯ ಗಮನಂ ತ್ವಾಪ್ಲುತಂ ಮತಮ್ । ಖಡ್ಗಸ್ಯಾಗ್ರೇಣ ತದ್ದೇಹಸ್ಪರ್ಶನಂ ಪ್ರಸೃತಂ ಮತಮ್॥೩॥ ವಞ್ಚಯಿತ್ವಾ ರಿಪೌ ಶಸ್ತ್ರಪಾತನಂ ಗದಿತಂ ಸೃತಮ್ । ಪರಿವೃತ್ತಂ ಭವೇಚ್ಛತ್ರೋರ್ವಾಮದಕ್ಷಿಣಭಾಗತಃ॥೪॥ ಪಶ್ಚಾತ್ತದಾಪಸರಣಂ ನಿವೃತ್ತಂ ಸಂಪ್ರಚಕ್ಷತೇ। ಅನ್ಯೋನ್ಯತಾಡನಂ ಪ್ರಾಹುಃ ಸಮ್ಪಾತಮುಭಯೋರಪಿ ॥೫॥ ಆಧಿಕ್ಯಮಾತ್ಮನೋ ಯತ್ತತ್ಸಮುದೀರ್ಣಮುದೀರಿತಮ್ । ಅಙ್ಗಪ್ರತ್ಯಙ್ಗದೇಶೇಷು ಭ್ರಮಣಂ ಭಾರತಂ ಸ್ಮೃತಮ್ ॥೬॥ ವಿಚಿತ್ರಖಡ್ಗಸಂಚಾರದರ್ಶನಂ ಕೌಶಿಕಂ ಸ್ಮೃತಮ್। ನಿಲೀಯ ಚರ್ಮಣಿ ಕ್ಷೇಪೋ ಯದಸೇಃ ಸಾತ್ವತಂ ಹಿ ತತ್ ॥೬॥

ಮಂಡಲಾಕಾರವಾಗಿ ಕತ್ತಿಯನ್ನು ತಿರುಗಿಸುವುದು ಭ್ರಾಂತ. ಅದನ್ನೇ ಕೈಯನ್ನು ಮೇಲೆತ್ತಿ ಮಾಡಿದರೆ ಅದು ಉದ್ಭ್ರಾಂತವೆನಿಸಿಕೊಳ್ಳುತ್ತದೆ. ತನ್ನ ಸುತ್ತಲೂ ಕತ್ತಿಯನ್ನು ತಿರುಗಿಸುತ್ತಿದ್ದರೆ ಅದು ಆವಿದ್ಧ. ಈ ಮೂರು ವರಸೆಗಳೂ ಶತ್ರುಗಳ

ದ್ರೋಣರನ್ನು ಕಡೆಗಾಣಿಸುವ ಇಚ್ಛೆಯಿಂದ ನಾನಾಪ್ರಕಾರವಾದ ಕತ್ತಿಯ ವರಸೆಗಳನ್ನು ಪ್ರದರ್ಶಿಸುತ್ತಾ, ಕತ್ತಿಯನ್ನೂ-ಗುರಾಣಿಯನ್ನೂ ಹಿಡಿದುಕೊಂಡು ರಣಾಂಗಣದಲ್ಲಿ ಚಿತ್ರ-ವಿಚಿತ್ರವಾದ ನಡಿಗೆಗಳನ್ನಿಡುತ್ತಾ ಸಂಚರಿಸುತ್ತಿದ್ದ ಧೃಷ್ಟದ್ಯುಮ್ನನನ್ನು ಕಂಡು ರಣಾಂಗಣದಲ್ಲಿದ್ದ ಯೋಧರೂ, ಯುದ್ಧವನ್ನು ನೋಡಲು ಬಂದಿದ್ದ ದೇವತೆಗಳೂ ಅಚ್ಚರಿಗೊಂಡರು. ಅನಂತರ ದ್ವಿಜಶ್ರೇಷ್ಠರಾದ ದ್ರೋಣರು ಒಂದು ಸಾವಿರ ಬಾಣಗಳಿಂದ ನೂರು ಚಂದ್ರರ ಚಿಹ್ನೆಗಳಿದ್ದ ಗುರಾಣಿಯನ್ನೂ ಮತ್ತು ಖಡ್ಗವನ್ನೂ ಛಿನ್ನ-ಭಿನ್ನಮಾಡಿ ಕೆಳಕ್ಕೆ ಕೆಡವಿದರು. ಹತ್ತಿರದಲ್ಲಿದ್ದವರೊಡನೆಯೂ ಯುದ್ಧಮಾಡಲು ಸಾಧ್ಯವಾಗುವಂತಹ *ವೈತಸ್ತಿಗಳೆಂಬ ಬಾಣಗಳಿಂದ ದ್ರೋಣರು ಧೃಷ್ಟದ್ಯುಮ್ನನ ಕತ್ತಿ-ಗುರಾಣಿಗಳನ್ನು ಕತ್ತರಿಸಿದರು. ಆ ಬಾಣಗಳು, ಅತಿಸಮೀಪದ ಯುದ್ಧದಲ್ಲಿಯೂ ಕುಶಲರಾದ ದ್ರೋಣರಲ್ಲಿ ಮಾತ್ರವೇ ಇದ್ದಿತು. ಬೇರೆಯವರಲ್ಲಿರಲಿಲ್ಲ. ಅಂತಹ ಗೇಣುದ್ದದ ಬಾಣಗಳು ಕೃಪರು, ಕರ್ಣ, ಅರ್ಜುನ, ಅಶ್ವತ್ಥಾಮಾ, ಪ್ರದ್ಯುಮ್ನ, ಯುಯುಧಾನ ಮತ್ತು ಅಭಿಮನ್ಯು–ಇವರುಗಳನ್ನು ಬಿಟ್ಟು ಬೇರೆ ಯಾರಲ್ಲಿಯೂ ಇರಲಿಲ್ಲ.

---

ಆಕ್ರಮಣವನ್ನು ತಡೆಯಲು ಉಕ್ತವಾಗಿವೆ. ಶತ್ರುವಿನ ಮೇಲೆ ಆಕ್ರಮಣಮಾಡಲು ಹೋಗುವುದಕ್ಕೆ ಆಪ್ಲುತವೆಂದು ಹೆಸರು. ಖಡ್ಗದ ಅಗ್ರಭಾಗದಿಂದ ಶತ್ರುವಿನ ದೇಹಸ್ಪರ್ಶಮಾಡುವುದಕ್ಕೆ ಪ್ರಹೃತವೆಂದು ಹೆಸರು. ವಂಚನೆಯಿಂದ ಶತ್ರುವಿನ ಮೇಲೆ ಖಡ್ಗಪಾತಮಾಡುವುದಕ್ಕೆ ಸೃತವೆಂದು ಹೆಸರು. ಶತ್ರುವನ್ನು ಎಡಗಡೆಯಿಂದಲೂ ಮತ್ತು ಬಲಗಡೆಯಿಂದಲೂ ಸುತ್ತುವುದಕ್ಕೆ ಪರಿವೃತ್ತವೆಂದು ಹೆಸರು. ಕತ್ತಿಯನ್ನು ತೋರಿಸುತ್ತಾ ಹಿಂದಕ್ಕೆ ನಡಿಗೆಗಳನ್ನಿಡುವುದಕ್ಕೆ ನಿವೃತ್ತವೆಂದು ಹೆಸರು. ಪರಸ್ಪರವಾಗಿ ಕತ್ತಿಯಿಂದ ಪ್ರಹರಿಸುವುದಕ್ಕೆ ಸಂಪಾತವೆಂದು ಹೆಸರು. ಎದುರಾಳಿಯನ್ನು ತಾನು ಅತಿಶಯಿಸಿರುವೆನೆಂಬುದನ್ನು ತೋರಿಸುವುದಕ್ಕೆ ಸಮುದೀರ್ಣವೆಂದು ಹೆಸರು. ಅಂಗ-ಪ್ರತ್ಯಂಗಗಳಲ್ಲಿ ಕತ್ತಿಯನ್ನು ತಿರುಗಿಸುವುದಕ್ಕೆ ಭಾರತವೆಂದು ಹೆಸರು. ವಿಚಿತ್ರ ರೀತಿಯಲ್ಲಿ ಕತ್ತಿಯನ್ನು ತಿರುಗಿಸುವ ಕಲೆಯನ್ನು ತೋರಿಸುವುದಕ್ಕೆ ಕೌಶಿಕವೆಂದು ಹೆಸರು. ಗುರಾಣಿಯೊಳಗೆ ತನ್ನನ್ನು ಹುದುಗಿಸಿಕೊಂಡು ಶತ್ರುವನ್ನು ಖಡ್ಗದಿಂದ ಪ್ರಹರಿಸುವುದಕ್ಕೆ ಸಾತ್ವತ ಎಂದು ಹೆಸರು.

* **ವೈತಸ್ತಿಕಾಃ–ವಿತಸ್ತಿಪ್ರಮಾಣಾಃ ಬಾಣಾಃ.** ವಿತಸ್ತಿ–ಎಂದರೆ ಹನ್ನೆರಡು ಅಂಗುಲ ಉದ್ದದ ಗೇಣು. **ಅಙ್ಗುಷ್ಠೇ ಸಕನಿಷ್ಠೇಸ್ಯಾದ್ವಿತಸ್ತಿರ್ದ್ವಾದಶಾಙ್ಗುಲಃ** [ಅಮರಃ] ಗೇಣುದ್ದದ ಬಾಣಗಳು.

ಅನಂತರ ಪುತ್ರಸದೃಶನಾದ ಶಿಷ್ಯನನ್ನು (ಪಾರ್ಷತನನ್ನು ) ಸಂಹರಿಸುವ ಇಚ್ಛೆಯಿಂದ ಆಚಾರ್ಯದ್ರೋಣರು ಉತ್ತಮವಾದ, ಸುದೃಢವಾದ ಬಾಣ ವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿದರು. ಆ ವೇಳೆಗೆ ಸರಿಯಾಗಿ ಸಾತ್ಯಕಿಯು ನಿಶಿತವಾದ ಹತ್ತು ಬಾಣಗಳಿಂದ ಮಹಾತ್ಮರಾದ ಕರ್ಣನ ಮತ್ತು ನಿನ್ನ ಮಗನ ಸಮ್ಮುಖದಲ್ಲಿಯೇ ದ್ರೋಣರು ಧನುಸ್ಸಿನಲ್ಲಿ ಅನು ಸಂಧಾನಮಾಡಿದ್ದ ಬಾಣವನ್ನು ಕತ್ತರಿಸಿ ಆಚಾರ್ಯಮುಖ್ಯರಾದ ದ್ರೋಣರ ಹಿಡಿತಕ್ಕೆ ಸಿಕ್ಕಿದ್ದ ಧೃಷ್ಟದ್ಯುಮ್ನನನ್ನು ವಿಮೋಚಿಸಿದನು. ದ್ರೋಣ-ಕರ್ಣ- ಕೃಪರ ಮಧ್ಯದಲ್ಲಿದ್ದುಕೊಂಡು ರಥಮಾರ್ಗದಲ್ಲಿ ಸಂಚರಿಸುತ್ತಾ, ಆ ಮೂವರೂ ಬಿಡುತ್ತಿದ್ದ ದಿವ್ಯಾಸ್ತ್ರಗಳನ್ನೂ ಧ್ವಂಸಮಾಡುತ್ತಿದ್ದ ಅಚ್ಯುತನಾದ, ಸತ್ಯವಿಕ್ರಮನಾದ ಸಾತ್ಯಕಿಯನ್ನು ಮಹಾತ್ಮರಾದ ವಿಷ್ವಕ್ಸೇನ-ಧನಂಜಯರು ನೋಡಿದರು. 'ಸಾಧು! ಸಾತ್ಯಕೇ ಸಾಧು!' ಎಂದು ಹೇಳುತ್ತಾ ಕೃಷ್ಣಾರ್ಜುನರು ಸಾತ್ಯಕಿಯನ್ನು ಪ್ರಶಂಸಿಸಿದರು. ಅನಂತರ ಕೃಷ್ಣಾರ್ಜುನರು ಶತ್ರುಸೇನೆಯ ಮೇಲೆ ದಾಳಿನಡೆಸಿದರು. ಆಗ ಧನಂಜಯನು ಶ್ರೀಕೃಷ್ಣನನ್ನು ಕುರಿತು ಹೇಳಿದನು : "ನೋಡು ಕೃಷ್ಣ! ಸಾತ್ಯಕಿಯು ಆಚಾರ್ಯರ ರಕ್ಷಣೆಯಲ್ಲಿ ತತ್ಪರರಾಗಿರುವ ರಥಶ್ರೇಷ್ಠರ ಮಧ್ಯದಲ್ಲಿ ಯುದ್ಧದ ಆಟವಾಡುತ್ತಿದ್ದಾನೆ. ಶತ್ರುವೀರಹಂತಕನಾದ ಸಾತ್ಯಕಿಯು ತನ್ನ ಪರಾಕ್ರಮದಿಂದ ನನ್ನನ್ನು ಸಂತೋಷಗೊಳಿಸುತ್ತಿದ್ದಾನೆ. ನಕುಲ- ಸಹದೇವರನ್ನೂ, ಭೀಮನನ್ನೂ ಮತ್ತು ಯುಧಿಷ್ಠಿರನನ್ನೂ ಇವನು ಸಂತೋಷಗೊಳಿಸುತ್ತಾನೆ.

ವೃಷ್ಣಿವಂಶದ ಕೀರ್ತಿವರ್ಧಕನಾದ ಸಾತ್ಯಕಿಯು ಉತ್ತಮವಾದ ಶಿಕ್ಷಣವನ್ನು ಪಡೆದಿದ್ದರೂ ನಿರಹಂಕಾರಿಯಾಗಿದ್ದಾನೆ. ಮಹಾರಥರೊಡನೆ ಯುದ್ಧದ ಆಟವಾಡುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದಾನೆ. ವಿಸ್ಮಿತರಾದ ಸೈನಿಕರು ಮತ್ತು ಸಿದ್ಧರೂ ಸಾತ್ಯಕಿಯನ್ನು ಪ್ರಶಂಸೆಮಾಡುತ್ತಿದ್ದಾರೆ. ಯುದ್ಧದಲ್ಲಿ ಪರಾಜಿತನಾಗದ, ಸತ್ಯವಿಕ್ರಮನಾದ ಸಾತ್ಯಕಿಯನ್ನು ನೋಡಿ ಎಲ್ಲರೂ 'ಸಾಧು! ಸಾತ್ಯಕೇ, ಸಾಧು!' ಎಂದು ಕೊಂಡಾಡುತ್ತಿದ್ದಾರೆ.

ಎರಡೂ ಕಡೆಗಳ ಸೈನಿಕರೂ ಸಾತ್ಯಕಿಯ ವೀರೋಚಿತವಾದ ಕರ್ಮ ಗಳಿಂದ ಪ್ರಭಾವಿತರಾಗಿ ಅವನನ್ನು ಅಭಿನಂದಿಸುತ್ತಿದ್ದಾರೆ."

೧೯೧ನೆಯ ಅಧ್ಯಾಯವು ಮುಗಿಯಿತು.

೧೯೨ನೆಯ ಅಧ್ಯಾಯ ದ್ರೋಣವಧಪರ್ವ (ಮುಂದುವರಿದಿದೆ.)

## ಎರಡೂ ಪಕ್ಷಗಳ ಮಹಾರಥರ ಪರಸ್ಪರಯುದ್ಧ: ಧೃಷ್ಟದ್ಯುಮ್ನನ ಆಕ್ರಮಣ : ದ್ರೋಣರು ಶಸ್ತ್ರಸಂನ್ಯಾಸಮಾಡಿ ಯೋಗಧಾರಣೆಯ ಮೂಲಕವಾಗಿ ಬ್ರಹ್ಮಲೋಕಕ್ಕೆ ಹೋದುದು : ಧೃಷ್ಟದ್ಯುಮ್ನನು ದ್ರೋಣರ ಶಿರಸ್ಸನ್ನು ಕತ್ತರಿಸಿದುದು

ಸಂಜಯನು ಸಾತ್ಯಕಿಯ ಪರಾಕ್ರಮವರ್ಣನೆಯನ್ನು ಮುಂದುವರಿಸು ತ್ತಾನೆ :

"ಮಹಾರಾಜ! ಸಾತ್ವತನ ಆ ಸಾಹಸಕರ್ಮವನ್ನು ನೋಡಿ ದುರ್ಯೋಧನಾದಿಗಳು ಪರಮಕ್ರುದ್ಧರಾಗಿ ಶೈನೇಯನನ್ನು ಎಲ್ಲ ಕಡೆ ಗಳಿಂದಲೂ ಒಡನೆಯೇ ಆಕ್ರಮಿಸಿದರು. ಕೃಪ-ಕರ್ಣರೂ ಮತ್ತು ನಿನ್ನ ಮಕ್ಕಳೂ ತ್ವರೆಯಿಂದ ಬಂದು ಶೈನೇಯನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದರು. ಅನಂತರ ರಾಜನಾದ ಯುಧಿಷ್ಠಿರ, ನಕುಲ-ಸಹದೇವರು ಮತ್ತು ಬಲಿಷ್ಠನಾದ ಭೀಮಸೇನ–ಇವರೆಲ್ಲರೂ ಸಾತ್ಯಕಿಯನ್ನು ಸುತ್ತು ವರಿದು ಅವನ ರಕ್ಷಣೆಯಲ್ಲಿ ನಿರತರಾದರು. ಕರ್ಣ, ಮಹಾರಥರಾದ ಗೌತ ಮರು ಮತ್ತು ದುರ್ಯೋಧನಾದಿಗಳು ಬಾಣಗಳ ಮಳೆಗರೆಯುತ್ತಾ ಸಾತ್ಯಕಿ ಯನ್ನು ಆಕ್ರಮಿಸಿದರು. ಸಾತ್ಯಕಿಯು ಆ ಮಹಾರಥರೊಡನೆ ಯುದ್ಧ ಮಾಡುತ್ತಾ ಅವರ ಕಡೆಯಿಂದ ಬರುತ್ತಿದ್ದ, ಕೌರವಯೋಧರು ಒಟ್ಟಾಗಿ ಸೇರಿ ಬಿಡುತ್ತಿದ್ದ, ಘೋರರೂಪವಾದ ದಿವ್ಯಾಸ್ತ್ರಗಳನ್ನು ದಿವ್ಯಾಸ್ತ್ರ ಗಳಿಂದಲೇ ವಿಧಿವತ್ತಾಗಿ ನಿವಾರಣೆಮಾಡುತ್ತಿದ್ದನು. ಹಿಂದೆ (ಪ್ರಳಯದಲ್ಲಿ) ಕ್ರುದ್ಧನಾದ ರುದ್ರನು ಪಶುಗಳನ್ನು (ಪ್ರಾಣಿಗಳನ್ನು) ನಿರ್ದಯನಾಗಿ ಸಂಹರಿಸುತ್ತಿದ್ದಂತೆ–ಆ ರಾಜರ ಸಮಾಗಮದಲ್ಲಿ ಅತ್ಯಂತ ಕ್ರೂರ ವಾದ ಯುದ್ಧವು ಪ್ರಾರಂಭವಾಯಿತು. ಯುದ್ಧದಲ್ಲಿ ಕತ್ತರಿಸಲ್ಪಟ್ಟ ತೋಳುಗಳು, ಶಿರಸ್ಸುಗಳು, ಧನುಸ್ಸುಗಳು, ಛತ್ರಗಳು, ಚಾಮರಗಳು–

ಇವೇ ಮುಂತಾದ ಪದಾರ್ಥಗಳ ರಾಶಿಗಳು ರಣಾಂಗಣದಲ್ಲಿ ಅಲ್ಲಲ್ಲಿ ಕಾಣು ತ್ತಿದ್ದುವು. ಮುರಿದುಹೋದ ಚಕ್ರಗಳಿಂದ ಕೂಡಿದ್ದ ರಥಗಳಿಂದಲೂ, ಕೆಳಗೆ ಬಿದ್ದಿದ್ದ ಮಹಾಧ್ವಜಗಳಿಂದಲೂ, ಹತರಾದ ಕುದುರೆಸವಾರರಿಂದಲೂ ಆ ರಣಾಂಗಣವು ವ್ಯಾಪ್ತವಾಗಿದ್ದಿತು. ಕುರುಸತ್ತಮ! ಬಾಣಗಳ ಬೀಳುವಿಕೆಯಿಂದ ಗಾಯಗೊಂಡಿದ್ದ ಯೋಧರು ನಾನಾವಿಧವಾದ ಚೇಷ್ಟೆಗಳನ್ನು ಮಾಡುತ್ತಾ ಚಡಪಡಿಸುತ್ತಿದ್ದುದು ಅಲ್ಲಿ ಕಾಣುತ್ತಿದ್ದಿತು. ದೇವಾಸುರರ ಯುದ್ಧಕ್ಕೆ ಸಮಾನವಾದ ಕೌರವ-ಪಾಂಡವರ ಯುದ್ಧವು ಹೀಗೆ ನಡೆಯುತ್ತಿರಲಾಗಿ ಕ್ಷತ್ರಿಯವೀರರನ್ನು ಕುರಿತು ಯುಧಿಷ್ಠಿರನು ಹೇಳಿದನು : "ಮಹಾರಥರೇ! ನೀವೆಲ್ಲರೂ ಸಂಪೂರ್ಣವಾದ ಪ್ರಯತ್ನದಿಂದ ದ್ರೋಣರ ಮೇಲೆ ದಾಳಿಮಾಡಿರಿ. ಭಾರದ್ವಾಜರೊಡನೆ ಯುದ್ಧಮಾಡುತ್ತಿರುವ ವೀರನಾದ ಪಾರ್ಷತನು ಅವರನ್ನು ಸಂಹರಿಸುವ ಸಲುವಾಗಿ ಯಥಾಶಕ್ತಿ ಪ್ರಯತ್ನಿಸುತ್ತಿದ್ದಾನೆ. ಈ ಮಹಾರಣಾಂಗಣದಲ್ಲಿ ಕಾಣುತ್ತಿರುವ ದೃಶ್ಯಗಳನ್ನು ಸೂಕ್ಷ್ಮವಾಗಿ ಗಮನಿಸಿದ್ದೇ ಆದರೆ ಕ್ರುದ್ಧನಾದ ಪಾರ್ಷತನು ಈಗ ದ್ರೋಣರನ್ನು ಸಂಹರಿಸುವನೆಂಬುದು ಬಹಳ ಸ್ಪಷ್ಟವಾಗಿ ಕಾಣುತ್ತದೆ. ಆದುದರಿಂದ ನೀವೆಲ್ಲರೂ ಒಟ್ಟಾಗಿ ಸೇರಿ ಕುಂಭಜನ್ಮರಾದ ದ್ರೋಣರೊಡನೆ ಯುದ್ಧಮಾಡಿರಿ."

ಮಹಾರಾಜ! ಯುಧಿಷ್ಠಿರನಿಂದ ಆಜ್ಞಪ್ತರಾದ ಸೃಂಜಯಮಹಾರಥರು ಭಾರದ್ವಾಜರನ್ನು ಸಂಹರಿಸುವ ಇಚ್ಛೆಯಿಂದ ಸನ್ನದ್ಧರಾಗಿ ದ್ರೋಣರನ್ನು ಆಕ್ರಮಿಸಿದರು. ಮಹಾರಥರಾದ ದ್ರೋಣರು ಸಂಹೃತರಾಗಬೇಕೆಂದು ನಿಶ್ಚಯಿಸಿದವರಾಗಿ ತಮ್ಮ ಮೇಲೆ ಬೀಳಲು ಬರುತ್ತಿದ್ದವರೊಡನೆ ಯುದ್ಧ ಮಾಡಲು ಶೀಘ್ರವಾಗಿ ಮುಂದೆ ಹೋದರು. ಸತ್ಯಸಂಧರಾದ ದ್ರೋಣರು ಮುಂದೆಹೋಗುತ್ತಿರಲು ಭೂಮಿಯೇ ನಡುಗಿತು. ಸಕಲಸೈನ್ಯವನ್ನೂ ಭಯ ಪಡಿಸುತ್ತಾ ಸಿಡಿಲುಗಳ ಶಬ್ದಗಳೊಡನೆ ಚಂಡಮಾರುತವು ಬೀಸತೊಡಗಿತು. ಮುಂದಾಗುವ ಮಹಾಭಯವನ್ನು ಸೂಚಿಸುತ್ತಿದೆಯೋ–ಎಂಬಂತೆ ಸೂರ್ಯ ಮಂಡಲದಿಂದ ದೊಡ್ಡದಾದ ಉಲ್ಕೆಯು ಹೊರಗೆ ಬಂದು ಎರಡೂ ಪಕ್ಷಗಳ ಸೈನಿಕರನ್ನೂ ಪ್ರಕಾಶಗೊಳಿಸುತ್ತಾ ಕೆಳಕ್ಕೆ ಬಿದ್ದಿತು. ದ್ರೋಣರ ಶಸ್ತ್ರಗಳು ತಾವೇ ತಾವಾಗಿ ಉರಿಯತೊಡಗಿದುವು. ರಥಚಕ್ರಗಳು ಅಸಾಧಾರಣವಾಗಿ

ಶಬ್ದಮಾಡುತ್ತಿದ್ದುವು. ಕುದುರೆಗಳ ಕಣ್ಣುಗಳಿಂದ ನೀರು ಸುರಿಯುತ್ತಿದ್ದಿತು. ಮಹಾರಥರಾದ ದ್ರೋಣರು ತೇಜಸ್ಸಿನಿಂದ ವಿಹೀನರಾದಂತಾದರು. ಅವರ ಎಡಗಣ್ಣು ಮತ್ತು ಎಡತೋಳು ಅದುರತೊಡಗಿದುವು. ಧೃಷ್ಟದ್ಯುಮ್ನನು ತಮ್ಮ ಮುಂದಿರುವುದನ್ನು ಕಂಡು ದ್ರೋಣರು ಉದಾಸೀನಮನಸ್ಕರಾದರು. ದ್ರೋಣರು ಸ್ವರ್ಗಗಮನದ ವಿಷಯವಾಗಿ ಬ್ರಹ್ಮವಾದಿಗಳಾದ ಋಷಿಗಳು ಹೇಳಿದುದನ್ನು ಸ್ಮರಿಸುತ್ತಾ ಧರ್ಮಯುದ್ಧದ ಮೂಲಕವಾಗಿ ತಮ್ಮ ಪ್ರಾಣ ಗಳನ್ನು ತ್ಯಜಿಸಲು ನಿಶ್ಚಯಿಸಿದರು. ದ್ರುಪದನ ಸೈನಿಕರಿಂದ ನಾಲ್ಕು ಕಡೆ ಗಳಿಂದಲೂ ಆಕ್ರಮಿಸಲ್ಪಟ್ಟಿದ್ದ ದ್ರೋಣರು ಕ್ಷತ್ರಿಯರ ಸಮೂಹಗಳನ್ನೇ ತಮ್ಮ ಬಾಣಾಗ್ನಿಯಿಂದ ದಹಿಸುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದರು. ಅರಿಮರ್ದನರಾದ ದ್ರೋಣರು ಇಪ್ಪತು ಸಾವಿರ ಸೈನಿಕರನ್ನು ಸಂಹರಿಸಿದ ರಲ್ಲದೇ ಒಂದು ಲಕ್ಷ ಆನೆಗಳನ್ನೂ ನಿಶಿತವಾದ ಬಾಣಗಳಿಂದ ಸಂಹರಿಸಿದರು. ಕ್ಷತ್ರಿಯರನ್ನು ಸಂಪೂರ್ಣವಾಗಿ ವಿನಾಶಮಾಡುವ ಸಲುವಾಗಿ ಬ್ರಹ್ಮಾಸ್ತ್ರವನ್ನು ಸಮಾಶ್ರಯಿಸಿ ಜಾಗರೂಕತೆಯಿಂದ ರಣಾಂಗಣದಲ್ಲಿ ನಿಂತಿದ್ದರು. ಆಗವರು ಧೂಮರಹಿತನಾದ ಯಜ್ಞೇಶ್ವರನಂತೆಯೇ ಪ್ರಕಾಶಿಸುತ್ತಿದ್ದರು. ರಥದಿಂದ ವಿಹೀನನಾಗಿದ್ದ, ಸಕಲವಿಧವಾದ ಆಯುಧಗಳನ್ನೂ ಕಳೆದುಕೊಂಡಿದ್ದ, ವಿಷಣ್ಣವದನನಾಗಿದ್ದ, ಮಹಾತ್ಮನಾದ ಪಾರ್ಷತನನ್ನು ಭೀಮಸೇನನು ತ್ವರೆಯಿಂದ ಸಂಧಿಸಿದನು. ಒಡನೆಯೇ ಶತ್ರುಮರ್ದನನಾದ ಭೀಮಸೇನನು ಧೃಷ್ಟದ್ಯುಮ್ನನನ್ನು ತನ್ನ ರಥಕ್ಕೆ ಹತ್ತಿಸಿಕೊಂಡು, ಬಹಳ ಹತ್ತಿರದಿಂದಲೇ ಬಾಣಗಳನ್ನು ಬಿಡುತ್ತಿದ್ದ ದ್ರೋಣರನ್ನು ನೋಡಿ ಪಾರ್ಷತನೊಡನೆ ಹೇಳಿದನು:

"ಪಾರ್ಷತ! ನಿನ್ನೊಬ್ಬನನ್ನು ಬಿಟ್ಟು ಬೇರೆ ಯಾರೂ ಆಚಾರ್ಯರೊಡನೆ ಯುದ್ಧಮಾಡುವ ಉತ್ಸಾಹವನ್ನು ಹೊಂದಿರುವುದಿಲ್ಲ. ಆದುದರಿಂದ ಅವರನ್ನು ವಧಿಸುವ ಭಾರವು ಸಂಪೂರ್ಣವಾಗಿ ನಿನ್ನ ಮೇಲೇ ಬಿದ್ದಿದೆ. ಆದುದರಿಂದ ಅವರ ಸಂಹಾರಕ್ಕಾಗಿ ತ್ವರೆಮಾಡು."

ಮಹಾರಾಜ! ಭೀಮಸೇನನು ಹೀಗೆ ಹೇಳಿದನಂತರ ಮಹಾಬಾಹು ವಾದ ಧೃಷ್ಟದ್ಯುಮ್ನನು ಸರ್ವಭಾರವನ್ನು ಸಹಿಸುವ, ಆಯುಧಗಳಲ್ಲಿ ಶ್ರೇಷ್ಠವಾದ, ಸುದೃಢವಾದ ಧನುಸ್ಸನ್ನು ಮುಂದಕ್ಕೆ ಬಗ್ಗಿ ಕೈಗೆತ್ತಿಕೊಂಡನು.

ಧೃಷ್ಟದ್ಯುಮ್ನನು ಕುಪಿತನಾಗಿ ಬಾಣಗಳನ್ನು ಬಿಡುತ್ತಿದ್ದನು. ತಡೆಯಲು ಅಸಾಧ್ಯರಾದ ದ್ರೋಣರನ್ನು ತಡೆದು ನಿಲ್ಲಿಸಬೇಕೆಂಬ ಇಚ್ಛೆಯಿಂದ ಪಾರ್ಷತನು ನಿಶಿತವಾದ ಬಾಣಗಳ ವೃಷ್ಟಿಯಿಂದ ಅವರನ್ನು ಮುಚ್ಚಿದನು. ಯೋಧಶ್ರೇಷ್ಠರಾದ, ರಣಶೋಭಿಗಳಾದ ದ್ರೋಣ-ಧೃಷ್ಟದ್ಯುಮ್ನರು ಕುಪಿತರಾಗಿ ಒಬ್ಬರು ಮತ್ತೊಬ್ಬರ ಮೇಲೆ ಬ್ರಾಹ್ಮವೇ ಮೊದಲಾದ ದಿವ್ಯಾಸ್ತ್ರಗಳನ್ನು ಹಲವು ಬಾರಿ ಪ್ರಯೋಗಿಸುತ್ತಾ, ಒಬ್ಬರು ಮತ್ತೊಬ್ಬರನ್ನು ಮುಂದೆ ಬರಲು ಅವಕಾಶವಾಗದಂತೆ ತಡೆದರು. ಪಾರ್ಷತನು ಭಾರದ್ವಾಜರು ಬಿಟ್ಟ ಸರ್ವಾಸ್ತ್ರಗಳನ್ನೂ ಧ್ವಂಸಮಾಡಿ ದ್ರೋಣರನ್ನು ಮಹಾಸ್ತ್ರಗಳಿಂದ ಮುಚ್ಚಿದನು. ಯಾವಾಗಲೂ ಯುದ್ಧಧರ್ಮದಿಂದ ವಿಚಲಿತನಾಗದೇ ಇದ್ದ, ಅಚ್ಯುತನಾದ ಧೃಷ್ಟದ್ಯುಮ್ನನು ದ್ರೋಣರನ್ನು ಸಂರಕ್ಷಿಸುತ್ತಿದ್ದ ವಸಾತಿ, ಶಿಬಿ, ಬಾಹ್ಲಿಕ ಮತ್ತು ಕೌರವಯೋಧರನ್ನೂ ಬಾಣಗಳಿಂದ ಸಂಹರಿಸಿದನು. ಮಹಾರಾಜ! ಈ ರೀತಿಯಲ್ಲಿ ಧೃಷ್ಟದ್ಯುಮ್ನನು–ಸೂರ್ಯನು ಕಿರಣಗಳಿಂದ ಎಲ್ಲ ದಿಕ್ಕುಗಳನ್ನೂ ವ್ಯಾಪಿಸುತ್ತಾ ಪ್ರಕಾಶಿಸುವಂತೆ–ಬಾಣರೂಪವಾದ ಕಿರಣಗಳಿಂದ ಎಲ್ಲ ದಿಕ್ಕುಗಳನ್ನೂ ಆಚ್ಛಾದಿಸುತ್ತಾ ಪ್ರಕಾಶಿಸಿದನು. ಆ ಸಮಯದಲ್ಲಿ ದ್ರೋಣರು ಪಾರ್ಷತನ ಧನುಸ್ಸನ್ನು ಕತ್ತರಿಸಿ ಶಿಲೀಮುಖಗಳಿಂದ ಮರ್ಮಸ್ಥಳಗಳಲ್ಲಿಯೂ ಬಹಳವಾಗಿ ಗಾಯಗೊಳಿಸಿದರು. ಅದರಿಂದ ಪಾರ್ಷತನು ಬಹಳ ವ್ಯಥಿತನಾದನು. ಅನಂತರ ಮಹಾಕೋಪಿಷ್ಠನಾದ ಭೀಮಸೇನನು ದ್ರೋಣರ ರಥದೊಡನೆ ತನ್ನ ರಥವನ್ನು ತಾಗಿಸಿಕೊಂಡು ಮೆಲ್ಲ-ಮೆಲ್ಲನೆ ಹೇಳಿದನು :

**ಯದಿ ನಾಮ ನ ಯುಧ್ಯೇರಞ್ಶಿಕ್ಷಿತಾ ಬ್ರಹ್ಮಬನ್ಧವಃ ।**
**ಸ್ವಕರ್ಮಭಿರಸಂತುಷ್ಟಾ ನ ಸ್ಮ ಕ್ಷತ್ರಂ ಕ್ಷಯಂ ವ್ರಜೇತ್ ॥೩೭॥**

"ಒಂದು ವೇಳೆ ಶಿಕ್ಷಿತರಾದ ಬ್ರಹ್ಮಬಂಧುಗಳು (ಬ್ರಾಹ್ಮಣರೆಂದು ಹೇಳಿಕೊಳ್ಳುವವರು ) ತಮ್ಮ ಕರ್ಮಗಳಿಂದ ಅಸಂತುಷ್ಟರಾಗಿ ಪರಧರ್ಮ

ವನ್ನು ಆಶ್ರಯಿಸಿ ಯುದ್ಧವನ್ನು ಮಾಡದಿದ್ದ ಪಕ್ಷದಲ್ಲಿ ಕ್ಷತ್ರಿಯರ ವಿನಾಶ ವಾಗುತ್ತಿರಲಿಲ್ಲ.

**ಅಹಿಂಸಾಂ ಸರ್ವಭೂತೇಷು ಧರ್ಮಂ ಜ್ಯಾಯಸ್ತರಂ ವಿದುಃ ।**
**ತಸ್ಯ ಚ ಬ್ರಾಹ್ಮಣೋ ಮೂಲಂ ಭವಾಂಶ್ಚ ಬ್ರಹ್ಮವಿತ್ತಮಃ ॥೩೮॥**

ಪ್ರಾಣಿಸಾಮಾನ್ಯವನ್ನೂ ಹಿಂಸಿಸದಿರುವುದೇ ಶ್ರೇಷ್ಠತರವಾದ ಧರ್ಮ ವೆಂದು ಹೇಳುತ್ತಾರೆ. ಅಂತಹ ಅಹಿಂಸಾಧರ್ಮಕ್ಕೆ ಬ್ರಾಹ್ಮಣನೇ ಮೂಲ ಭೂತನಾಗಿರುತ್ತಾನೆ. ನೀವಾದರೋ ಬ್ರಹ್ಮವಿದರಲ್ಲಿ ಶ್ರೇಷ್ಠರಾಗಿರುವಿರಿ.

**ಶ್ವಪಾಕವನ್ಮ್ಲೇಚ್ಛಗಣಾನ್ಹತ್ವಾ ಚಾನ್ಯಾನ್ಪೃಥಗ್ವಿಧಾನ್ ।**
**ಅಜ್ಞಾನಾನ್ಮೂಢವದ್ಬ್ರಹ್ಮನ್ಪುತ್ರದಾರಧನೇಪ್ಸಯಾ ॥೩೯॥**

ಬ್ರಾಹ್ಮಣಶ್ರೇಷ್ಠರೇ! ಬ್ರಹ್ಮವಿದರಾಗಿದ್ದರೂ ನೀವು ಪತ್ನೀ-ಪುತ್ರ-ಧನೇಚ್ಛೆಗಳಿಂದ ಮೂಢರಾದ ಚಂಡಾಲರಂತೆ ಮ್ಲೇಚ್ಛರ ಸಮೂಹಗಳನ್ನೂ ಇನ್ನೂ ಅನೇಕಕ್ಷತ್ರಿಯರ ಸಮೂಹಗಳನ್ನೂ ಅಜ್ಞಾನದಿಂದ ಸಂಹರಿಸು ತ್ತಿರುವಿರಿ.

**ಏಕಸ್ಯಾರ್ಥೇ ಬಹೂನ್ಹತ್ವಾ ಪುತ್ರಸ್ಯಾಧರ್ಮವಿದ್ಯಯಾ ।**
**ಸ್ವಕರ್ಮಸ್ಥಾನ್ವಿಕರ್ಮಸ್ಥೋ ನ ವ್ಯಪತ್ರಪಸೇ ಕಥಮ್ ॥೪೦॥**

ಸ್ವಕರ್ಮಭ್ರಷ್ಟರಾಗಿರುವ ನೀವು, ಒಬ್ಬನೇ ಒಬ್ಬ ಮಗನ ಸಲುವಾಗಿ, ನಿಮಗೆ ತಕ್ಕುದಲ್ಲದ ಧರ್ಮಕ್ಕೆ ಸಂಬಂಧಿಸಿದ ಕ್ಷಾತ್ರವಿದ್ಯೆಯ ಮೂಲಕವಾಗಿ ಸ್ವಕರ್ಮದಲ್ಲಿಯೇ ನಿಷ್ಠರಾಗಿದ್ದ ಅನೇಕಕ್ಷತ್ರಿಯರನ್ನು ಸಂಹರಿಸುತ್ತಿರುವಿರಿ. ಇದರಿಂದ ನಿಮಗೆ ನಾಚಿಕೆಯಾಗುವುದಿಲ್ಲವೇ?

**ಯಸ್ಯಾರ್ಥೇ ಶಸ್ತ್ರಮಾದಾಯ ಯಮಪೇಕ್ಷ್ಯ ಚ ಜೀವಸಿ ।**
**ಸ ಚಾದ್ಯ ಪತಿತಃ ಶೇತೇ ಪೃಷ್ಠೇ ನಾವೇದಿತಸ್ತವ ।**
**ಧರ್ಮರಾಜಸ್ಯ ತದ್ವಾಕ್ಯಂ ನಾಭಿಶಙ್ಕಿತುಮರ್ಹಸಿ ॥೪೧॥**

ಯಾರ ಸಲುವಾಗಿ ನೀವು ಶಸ್ತ್ರವನ್ನು ಹಿಡಿದಿರೋ, ಯಾರ ಸಲುವಾಗಿ ನೀವು ಜೀವಿಸಿರುವಿರೋ–ಅವನೇ ಈಗ ಹತನಾಗಿ ಸೇನೆಯ ಹಿಂಭಾಗದಲ್ಲಿ ನೆಲದ ಮೇಲೆ ಮಲಗಿದ್ದಾನೆ. ಆದರೆ ಕೌರವರು ನಿಮಗೆ ಈ ವಿಷಯ

ವನ್ನು ತಿಳಿಸಿರುವುದಿಲ್ಲ. ಧರ್ಮರಾಜನು ಹೇಳಿದ ಆ ಮಾತನ್ನು ನೀವು ಶಂಕಿಸುವ ಕಾರಣವಿಲ್ಲ."

ಮಹಾರಾಜ! ಭೀಮಸೇನನು ದ್ರೋಣರೊಡನೆ ಹೀಗೆ ಹೇಳಿದನಂತರ ಆಚಾರ್ಯರು ಧನುಸ್ಸನ್ನು ವಿಸರ್ಜಿಸಿ, ಸಕಲಾಸ್ತ್ರಗಳನ್ನೂ ತ್ಯಾಗಮಾಡುವ ಇಚ್ಛೆಯಿಂದ ಕೂಡಿದವರಾಗಿ ದುರ್ಯೋಧನಾದಿಗಳಿಗೆ ಹೇಳಿದರು :

"ಕರ್ಣ! ಮಹಾಧನುಷ್ಮಂತನಾದ ಕೃಪನೇ! ದುರ್ಯೋಧನ! ಈಗ ನೀವೆಲ್ಲರೂ ಸೇರಿ ಯುದ್ಧದಲ್ಲಿ ವಿಜಯಗಳಿಸಲು ಪ್ರಯತ್ನಿಸಿರಿ. ನಾನು ಈ ಮಾತನ್ನು ಬಾರಿ-ಬಾರಿಗೂ ಹೇಳುತ್ತಲೇ ಇದ್ದೇನೆ. ಪಾಂಡವರಿಂದ ನಿಮಗೆ ಶುಭವಾಗಲಿ. ನಾನೀಗ ಶಸ್ತ್ರಪರಿತ್ಯಾಗಮಾಡುತ್ತೇನೆ."

ದ್ರೋಣರು ಹೀಗೆ ಹೇಳಿ 'ಅಶ್ವತ್ಥಾಮ!' 'ಪ್ರಿಯಪುತ್ರ!' ಎಂದೆನ್ನುತ್ತಾ ಹಲವು ಬಾರಿ ಕೂಗಿಕೊಂಡರು. ಶಸ್ತ್ರಗಳನ್ನು ಪರಿತ್ಯಾಗಮಾಡಿ ರಥದ ಹಿಂಭಾಗದಲ್ಲಿ ಕುಳಿತುಕೊಂಡರು. ಸರ್ವಪ್ರಾಣಿಗಳಿಗೂ ಅಭಯದಾನ ಮಾಡಿದರು. ಅನಂತರ ಸಮಾಧಿಸ್ಥರಾದರು. ದ್ರೋಣರನ್ನು ಪ್ರಹರಿಸಲು ಅದೇ ಸರಿಯಾದ ಸಮಯವಾಗಿರುವುದೆಂದು ಭಾವಿಸಿದ, ಪ್ರತಾಪವಂತನಾದ ಧೃಷ್ಟದ್ಯುಮ್ನನು ಬಾಣದಿಂದ ಕೂಡಿರುವ ಘೋರವಾದ ಧನುಸ್ಸನ್ನು ರಥ ದಲ್ಲಿಯೇ ಇಟ್ಟು, ಖಡ್ಗಹಸ್ತನಾಗಿ ಒಡನೆಯೇ ದ್ರೋಣರ ಬಳಿಗೆ ಹೋದನು. ಸಮಾಧಿಸ್ಥಿತಿಯಲ್ಲಿದ್ದಾಗ ದ್ರೋಣರು ಧೃಷ್ಟದ್ಯುಮ್ನನ ವಶರಾದುದನ್ನು ಕಂಡು ಸರ್ವಪ್ರಾಣಿಗಳೂ, ಮಾನವರೂ ಮತ್ತು ಇತರರೂ ಹಾಹಾಕಾರ ಮಾಡಿದರು. ಅಲ್ಲಿದ್ದವರೆಲ್ಲರೂ 'ಅಯ್ಯೋ! ಅಯ್ಯೋ!' ಎಂದು ಕೂಗಿ ಕೊಂಡರು. ಮತ್ತೆ ಕೆಲವರು 'ಧೃಷ್ಟದ್ಯುಮ್ನನಿಗೆ ಧಿಕ್ಕಾರ!' ಎಂದು ಕೂಗಿಕೊಂಡರು. ಆದರೆ ದ್ರೋಣರು ಮಾತ್ರ ಶಸ್ತ್ರಗಳನ್ನು ತ್ಯಜಿಸಿದನಂತರ ತಮ್ಮ ಮನಸ್ಸನ್ನು ಪರಮಜ್ಞಾನಸ್ವರೂಪದಲ್ಲಿ ವಿಲೀನಗೊಳಿಸಿಬಿಟ್ಟಿದ್ದರು.

ಶಸ್ತ್ರಗಳನ್ನು ಪರಿತ್ಯಾಗಮಾಡುವೆನೆಂದು ಹೇಳಿದ ಮಹಾತಪಸ್ವಿಗಳಾದ ದ್ರೋಣರು ಯೋಗದ ಆಶ್ರಯವನ್ನು ಹೊಂದಿ ಜ್ಯೋತಿಃಸ್ವರೂಪರಾಗಿ, ಪುರಾಣಪುರುಷನಾದ ಮಹಾವಿಷ್ಣುವನ್ನು (ವಿಷ್ಣುವಿನ ಸಾನ್ನಿಧ್ಯವನ್ನು) ಮನಸ್ಸಿನಿಂದಲೇ ಹೊಂದಿದರು.

ಮುಖಂ ಕಿಂಚಿತ್ಸಮುನ್ನಾಮ್ಯ ವಿಷ್ಟಭ್ಯ ಉರ ಅಗ್ರತಃ ।
ನಿಮೀಲಿತಾಕ್ಷಃ ಸತ್ತ್ವಸ್ಥೋ ನಿಕ್ಷಿಪ್ಯ ಹೃದಿ ಧಾರಣಾಮ್ ॥೫೧॥

ಓಮಿತ್ಯೇಕಾಕ್ಷರಂ ಬ್ರಹ್ಮ ಜ್ಯೋತಿರ್ಭೂತೋ ಮಹಾತಪಾಃ ।
ಸ್ಮರಿತ್ವಾ ದೇವದೇವೇಶಮಕ್ಷರಂ ಪರಮಂ ಪ್ರಭುಮ್ ।
ದಿವಮಾಕ್ರಾಮದಾಚಾರ್ಯಃ ಸಾಕ್ಷಾತ್ಸದ್ಭಿರ್ದುರಾಕ್ರಮಾಮ್ ॥೫೨॥



ದ್ರೋಣರು ಮುಖವನ್ನು ಸ್ವಲ್ಪವೇ ಮೇಲೆತ್ತಿ ಎದೆಯನ್ನು ಸ್ವಲ್ಪ ಮುಂದೆಮಾಡಿ ಸ್ಥಿರವಾಗಿ ಕುಳಿತಿದ್ದರು. ವಿಶುದ್ಧಸತ್ತ್ವಸ್ಥರಾಗಿ ಕಣ್ಣು ಗಳನ್ನು ಮುಚ್ಚಿಕೊಂಡು ಹೃದಯದಲ್ಲಿ ಧಾರಣಾಮೂರ್ತಿಯನ್ನು ಸ್ಥಾಪಿಸಿ ಕೊಂಡರು. 'ಓಂ' ಎಂಬ ಏಕಾಕ್ಷರಪರಬ್ರಹ್ಮಮಂತ್ರವನ್ನು ಜಪಿಸುತ್ತಾ

ಮಹಾತಪಸ್ವಿಗಳಾದ ದ್ರೋಣಾಚಾರ್ಯರು ಪ್ರಣವಕ್ಕೆ ಮೂಲಭೂತನಾದ, ದೇವನಾದ, ದೇವೇಶನಾದ, ಅವ್ಯಯನಾದ, ಪ್ರಭುವಾದ, ಪರಮಪುರುಷನ ಸಚ್ಚಿದಾನಂದಸ್ವರೂಪವನ್ನು ಸ್ಮರಿಸುತ್ತಾ ಜ್ಯೋತಿಃಸ್ವರೂಪರಾಗಿ ಸಾಕ್ಷಾತ್ ಸತ್ಪುರುಷರಿಂದಲೂ ಪ್ರವೇಶಿಸಲು ಅಸಾಧ್ಯವಾದ ಬ್ರಹ್ಮಲೋಕಕ್ಕೆ ಹೋದರು. ಹೀಗೆ ದ್ರೋಣರು ಬ್ರಹ್ಮಲೋಕದ ಕಡೆಗೆ ಹೋಗುತ್ತಿರುವಾಗ ಆಕಾಶದಲ್ಲಿ ಇಬ್ಬರು ಸೂರ್ಯರಿರಬಹುದೆಂಬ ಭಾವನೆಯು ನಮಗುಂಟಾಯಿತು. ಸೂರ್ಯನಿಗೆ ಸಮಾನರಾದ ಭಾರದ್ವಾಜದಿವಾಕರನು ಉದಯಿಸಲಾಗಿ, ಆಕಾಶವೆಲ್ಲವೂ ತೇಜಸ್ಸುಗಳಿಂದ ತುಂಬಿಹೋಯಿತು. ಅನಂತರ ದ್ರೋಣರ ಜ್ಯೋತಿಯು ಸೂರ್ಯಜ್ಯೋತಿಯೊಡನೆ ಸೇರಿಹೋಗಿ ಒಂದೇ ಮುಖವಾಗಿ ಪರಿಣಮಿಸಿತು. ಮಹಾರಾಜ! ಹೀಗೆ ನಿಮೇಷಮಾತ್ರದಲ್ಲಿ ಆ ಮಹಾಜ್ಯೋತಿಯು ಅಂತರ್ಹಿತವಾಯಿತು. ದ್ರೋಣರು ಬ್ರಹ್ಮಲೋಕಕ್ಕೆ ಹೋಗಲಾಗಿ, ಧೃಷ್ಟದ್ಯುಮ್ನನು ಮೋಹಪರವಶನಾಗಲಾಗಿ, ದೇವತೆಗಳು ಹರ್ಷೋಲ್ಲಾಸದಿಂದ ಕಲ-ಕಲ ಧ್ವನಿಮಾಡಿದರು.

ಯೋಗಯುಕ್ತರಾದ, ಮಹಾತ್ಮರಾದ ದ್ರೋಣರು ಪರಂಧಾಮಕ್ಕೆ ಹೋಗುತ್ತಿರುವುದನ್ನು–ಮನುಷ್ಯರಲ್ಲಿ–ನಾನು, ಧನಂಜಯ, ಕೃಪರು, ವಾಸುದೇವ ಮತ್ತು ಧರ್ಮಪುತ್ರನಾದ ಯುಧಿಷ್ಠಿರ–ಈ ಐವರು ಮಾತ್ರವೇ ನೋಡಿದೆವು. ಯೋಗಯುಕ್ತವಾಗಿ ಊರ್ಧ್ವಗತಿಯನ್ನು ಹೊಂದಲು ಹೋಗುತ್ತಿದ್ದ ಧೀಮಂತರಾದ ದ್ರೋಣರ ಮಹಿಮೆಯನ್ನು ಉಳಿದವರಾರೂ ಕಾಣಲಿಲ್ಲ. ಮಹಾರಾಜ! ಬ್ರಹ್ಮಲೋಕವು ಅತಿಮಹತ್ತ್ವಪೂರ್ಣವಾದುದು. ದಿವ್ಯವಾದುದು. ದೇವತೆಗಳಿಗೂ ಅದು ರಹಸ್ಯವಾಗಿಯೇ ಇರುತ್ತದೆ. ಅದು ಪರಮಗತಿಸ್ವರೂಪವಾಗಿರುತ್ತದೆ. ಶತ್ರುಸೂದನರಾದ ದ್ರೋಣರು ಯೋಗದ ಆಶ್ರಯವನ್ನು ಪಡೆದು ಮಹರ್ಷಿಗಳೊಡನೆ ಅಂತಹ ಶ್ರೇಷ್ಠವಾದ ಬ್ರಹ್ಮ ಲೋಕಕ್ಕೆ ಹೋಗುತ್ತಿರುವುದನ್ನು ಅಜ್ಞಾನಿಗಳಾದ ಮನುಷ್ಯರು ನೋಡಲಿಲ್ಲ.

(ಜ್ಯೋತೀರೂಪರಾಗಿ ಪರಿವರ್ತಿತರಾದ ದ್ರೋಣರ ಪರಲೋಕ ಗಮನದ ವಿಷಯವನ್ನು ಹೇಳಿದನಂತರ ಸಂಜಯನು ಅವರ ಭೌತಿಕ ಶರೀರದ ವಿಷಯವಾಗಿ ಹೇಳುತ್ತಾನೆ. )

ಮಹಾರಾಜ! ದ್ರೋಣರು ಯೋಗಾರೂಢನಾಗಿ ಕುಳಿತಿದ್ದ ಆ

ಸಮಯದಲ್ಲಿ ಅವರ ಅಂಗಾಂಗಗಳೆಲ್ಲವೂ ಬಾಣಗಳಿಂದ ಕ್ಷತ-ವಿಕ್ಷತ ವಾಗಿದ್ದುವು. ಆಯುಧವನ್ನು ವಿಸರ್ಜಿಸಿದ್ದರು. ಅವರ ಶರೀರದಿಂದ ರಕ್ತವು ಸೋರುತ್ತಿದ್ದಿತು. ಅಂತಹ ಸ್ಥಿತಿಯಲ್ಲಿದ್ದಾಗ ಧೃಷ್ಟದ್ಯುಮ್ನನು ಅವರನ್ನು ಹೋಗಿ ಹಿಡಿದುಕೊಂಡನು. ಒಡನೆಯೇ ಎಲ್ಲ ಪ್ರಾಣಿಗಳೂ ಧೃಷ್ಟದ್ಯುಮ್ನನನ್ನು ಧಿಕ್ಕರಿಸಿದುವು.

ಆ ಸಮಯದಲ್ಲಿ ದ್ರೋಣರ ಪ್ರಾಣಗಳು ಪರಂಜ್ಯೋತಿಯಲ್ಲಿ ಲೀನ ವಾಗಿ ಶರೀರದಿಂದ ಹೊರಬಂದಿದ್ದುವು. ಆದುದರಿಂದಲೇ ಯಾವ ಮಾತೂ ಅವರ ಬಾಯಿಂದ ಹೊರಬರುತ್ತಿರಲಿಲ್ಲ. ಅಂತಹ ಸ್ಥಿತಿಯಲ್ಲಿದ್ದಾಗ ಧೃಷ್ಟದ್ಯುಮ್ನನು ದ್ರೋಣರ ತಲೆಗೂದಲನ್ನು ಹಿಡಿದುಕೊಂಡು ಕತ್ತಿಯಿಂದ ಕತ್ತನ್ನು ಕತ್ತರಿಸಿಬಿಟ್ಟನು. ದ್ರೋಣರ ಶಿರಸ್ಸು ಕೆಳಕ್ಕೆ ಬೀಳಲಾಗಿ ಮಹಾ ಹರ್ಷಯುಕ್ತನಾದ ಧೃಷ್ಟದ್ಯುಮ್ನನು ಕತ್ತಿಯನ್ನು ಝಳಪಿಸುತ್ತಾ ಸಿಂಹನಾದ ಮಾಡಿದನು.

**ಆಕರ್ಣಪಲಿತಃ ಶ್ಯಾಮೋ ವಯಸಾಶೀತಿಪಞ್ಚಕಃ ।**
**ತ್ವತ್ಕೃತೇ ವ್ಯಚರತ್ಸಂಖ್ಯೇ ಸ ತು ಷೋಡಶವರ್ಷವತ್ ॥೬೪॥**

ಮಹಾರಾಜ! ದ್ರೋಣರ ಬಣ್ಣವು ಶ್ಯಾಮಲವಾಗಿದ್ದಿತು. ಅವರಿಗೆ ಎಂಬತ್ತೈದು ವರ್ಷಗಳಾಗಿದ್ದುವು (ನಾಲ್ಕು ನೂರು ವರ್ಷಗಳು ಎಂದು ವ್ಯಾಖ್ಯಾನಕಾರು ಅರ್ಥಮಾಡಿದ್ದಾರೆ). ತಲೆಯಿಂದ ಕಿವಿಯವರೆಗೂ ಅವರ ಕೂದಲುಗಳು ನರೆತುಹೋಗಿದ್ದುವು. ನಿನ್ನ ಸಲುವಾಗಿ ಅವರು ಹದಿನಾರು ವರ್ಷದ ಪ್ರಾಯದವನಂತೆ ರಣಾಂಗಣದಲ್ಲಿ ಸಂಚರಿಸುತ್ತಿದ್ದರು (ಯುದ್ಧ ಮಾಡುತ್ತಿದ್ದರು).

ಧೃಷ್ಟದ್ಯುಮ್ನನು ಕತ್ತಿಯನ್ನೆತ್ತಿಕೊಂಡು ದ್ರೋಣರ ಬಳಿಗೆ ಹೋದಾಗ ಕುಂತಿಯ ಮಗನಾದ ಮಹಾಬಾಹುವಾದ ಅರ್ಜುನನು :

**ಜೀವನ್ತಮಾನಯಾಚಾರ್ಯಂ ಮಾ ವಧೀರ್ದ್ರುಪದಾತ್ಮಜ ॥೬೬॥**

"ದ್ರುಪದಪುತ್ರ! ಆಚಾರ್ಯರನ್ನು ಜೀವಂತರನ್ನಾಗಿಯೇ ಕರೆದು ಕೊಂಡು ಬಾ. ಯಾವುದೇ ಕಾರಣದಿಂದಲೂ ಅವರನ್ನು ಸಂಹರಿಸಬೇಡ"– ಎಂದು ಕೂಗಿ ಹೇಳಿದನು.

ಎರಡೂ ಪಕ್ಷಗಳ ಸೈನಿಕರೂ–'ನ ಹನ್ತವ್ಯೋ ನ ಹನ್ತವ್ಯಃ'

'ಆಚಾರ್ಯರು ಕೊಲ್ಲಲ್ಪಡತಕ್ಕವರಲ್ಲ'–ಎಂದು ಕೂಗಿಕೊಂಡರು. ಅರ್ಜುನನು ಕರುಣಾಮಯನಾಗಿ–'ಕೊಲ್ಲಬೇಡ! ದ್ರೋಣರನ್ನು ಕೊಲ್ಲ ಬೇಡ!'–ಎಂದು ಕಿರುಚಿಕೊಳ್ಳುತ್ತಾ ಧೃಷ್ಟದ್ಯುಮ್ನನ ಸಮೀಪಕ್ಕೆ ಧಾವಿಸಿದನು. ಅರ್ಜುನನು ಕೂಗಿಕೊಳ್ಳುತ್ತಿದ್ದರೂ, ಎಲ್ಲ ಕಡೆಗಳಿಂದಲೂ ಎಲ್ಲ ರಾಜರೂ ಧಿಕ್ಕರಿಸುತ್ತಿದ್ದರೂ–ರಥದ ಹಾಸಿಗೆಯ ಮೇಲೆ ಯೋಗಾರೂಢರಾಗಿ ಕುಳಿತಿದ್ದ ನರಶ್ರೇಷ್ಠರಾದ ದ್ರೋಣರನ್ನು ಧೃಷ್ಟದ್ಯುಮ್ನನು ಸಂಹರಿಸಿದನು. ದ್ರೋಣರ ಶರೀರವು ರಕ್ತದಿಂದ ತೋಯ್ದುಹೋಗಿ ರಥದಿಂದ ಕೆಳಕ್ಕೆ ಬಿದ್ದಿತು. ಆ ಸಮಯದಲ್ಲವರು ಲೋಹಿತಾಂಗನಾದ ಆದಿತ್ಯನಂತೆಯೇ ಕಾಣುತ್ತಿದ್ದರು. ಈ ರೀತಿಯಲ್ಲಿ ದ್ರೋಣರು ಹತರಾದುದನ್ನು ನಿನ್ನ ಸೈನಿಕರೆಲ್ಲರೂ ನೋಡಿದರು. ಮಹಾಧನುಷ್ಮಂತನಾದ ಧೃಷ್ಟದ್ಯುಮ್ನನು ತಾನು ಕತ್ತರಿಸಿದ ದ್ರೋಣರ ಶಿರಸ್ಸನ್ನೆತ್ತಿಕೊಂಡು ನಿನ್ನ ಮಕ್ಕಳ ಮುಂದೆ ಆ ಶಿರಸ್ಸನ್ನೆಸೆದನು. ನಿನ್ನ ಕಡೆಯವರೆಲ್ಲರೂ ಭಾರದ್ವಾಜರ ಆ ತಲೆಯನ್ನು ನೋಡಿ ಪಲಾಯನ ಮಾಡುವುದರಲ್ಲಿಯೇ ಹೆಚ್ಚಿನ ಉತ್ಸಾಹವುಳ್ಳವರಾಗಿ ದಿಕ್ಕು-ದಿಕ್ಕಿಗೂ ಓಡಿಹೋದರು.

**ದ್ರೋಣಸ್ತು ದಿವಮಾಸ್ಥಾಯ ನಕ್ಷತ್ರಪಥಮಾವಿಶತ್ ।**
**ಅಹಮೇವ ತದಾದ್ರಾಕ್ಷಂ ದ್ರೋಣಸ್ಯ ನಿಧನಂ ನೃಪ ।**
**ಋಷೇಃ ಪ್ರಸಾದಾತ್ಕೃಷ್ಣಸ್ಯ ಸತ್ಯವತ್ಯಾಃ ಸುತಸ್ಯ ಚ ॥೭೨॥**

ದ್ರೋಣರು ಆಕಾಶಕ್ಕೆ ಹೋಗಿ ನಕ್ಷತ್ರಮಾರ್ಗವನ್ನು ಪ್ರವೇಶಿಸಿದರು. ಸತ್ಯವತಿಯ ಮಕ್ಕಳಾದ ಕೃಷ್ಣದ್ವೈಪಾಯನರ ಅನುಗ್ರಹದಿಂದ ಆ ಸಮಯದಲ್ಲಿ ದ್ರೋಣರ ಮರಣವನ್ನು ನಾನೇ ಪ್ರತ್ಯಕ್ಷವಾಗಿ ನೋಡಿದೆನು. ಧೂಮ ರಹಿತವಾದ, ಜಾಜ್ವಲ್ಯಮಾನವಾಗಿ ಪ್ರಕಾಶಿಸುವ ಉಲ್ಕೆಯೋಪಾದಿಯಲ್ಲಿ ಆಕಾಶವನ್ನು ಸ್ತಬ್ಧಗೊಳಿಸಿ ಮೇಲೆ ಹೋಗುತ್ತಿರುವ ಮಹಾದ್ಯುತಿಮಂತರಾದ ದ್ರೋಣರನ್ನು ನಾವು ನೋಡಿದೆವು.

ದ್ರೋಣರು ಹತರಾದನಂತರ ನಿರುತ್ಸಾಹಿಗಳಾಗಿದ್ದ ಕುರುಯೋಧರನ್ನು ಪಾಂಡವ-ಸೃಂಜಯಸೈನಿಕರು ಮಹಾವೇಗದಿಂದ ಆಕ್ರಮಿಸಿದರು. ಆಗ ಕೌರವಸೈನ್ಯವು ಭಗ್ನವಾಗಿಹೋಯಿತು. ಪಾಂಡವರ ನಿಶಿತವಾದ ಬಾಣ ಗಳಿಂದ ನಿನ್ನ ಸೈನ್ಯದಲ್ಲಿ ಅನೇಕರು ಹತರಾಗಿಹೋದರು. ಅನೇಕರು ಮೃತ

ಪ್ರಾಯರಾದರು. ದ್ರೋಣರು ಹತರಾದನಂತರ ನಿನ್ನ ಕಡೆಯವರೆಲ್ಲರೂ ಸಾಮಾನ್ಯವಾಗಿ ಜೀವಚ್ಛವಗಳಂತೆಯೇ ಆದರು. ಕೌರವರು ಇಹದಲ್ಲಿ ಪರಾಜಯವನ್ನು ಹೊಂದಿದ ಮೇಲೂ ಅವರಿಗೆ ಪರಲೋಕಪ್ರಾಪ್ತಿಯ ವಿಷಯದಲ್ಲಿಯೂ ಮಹಾಭಯವೇ ಉಂಟಾಗಿದ್ದಿತು (ಬದುಕಿದರೆ ವಿಜಯಿಗಳಾಗಿ ಬದುಕಬೇಕು. ಇಲ್ಲದಿದ್ದರೆ ಯುದ್ಧದಲ್ಲಿ ಪ್ರಾಣತೊರೆದು ಸ್ವರ್ಗಕ್ಕಾದರೂ ಹೋಗಬೇಕು). ಈ ಎರಡರಿಂದಲೂ ವಂಚಿತರಾದ ಕೌರವರು ಧೃತಿಗೆಟ್ಟವರಾದರು. ನಮ್ಮ ಕಡೆಯ ರಾಜರು ದ್ರೋಣರ ಶರೀರವನ್ನು ಎಲ್ಲ ಕಡೆಗಳಲ್ಲಿಯೂ ಹುಡುಕಿದರು. ತಲೆಯೇ ಇಲ್ಲದೇ ಇದ್ದುದರಿಂದ ಸಾವಿರಾರು ಕಬಂಧಗಳಿಂದ ಸಮಾಕುಲವಾಗಿದ್ದ ಆ ರಣಾಂಗಣದಲ್ಲಿ ದ್ರೋಣರ ಶರೀರವನ್ನು ಹುಡುಕಲು ಕೌರವರಿಗೆ ಸಾಧ್ಯವಾಗಲಿಲ್ಲ.

ಪಾಂಡವರು ಇಹದಲ್ಲಿ ವಿಜಯವನ್ನೂ–ಪರಲೋಕದಲ್ಲಿ ಮಹಾಯಶಸ್ಸನ್ನೂ ಪಡೆದವರಾಗಿ ಬಾಣಗಳನ್ನು ಧನುಸ್ಸಿನಲ್ಲಿ ಯೋಜಿಸಿ ಠೇಂಕರಿಸಿದರು. ಶಂಖಧ್ವನಿಗಳನ್ನು ಮಾಡಿದರು. ಹಲವು ಬಾರಿ ಸಿಂಹನಾದಗಳನ್ನೂ ಮಾಡಿದರು. ಭೀಮಸೇನನೂ ಮತ್ತು ಧೃಷ್ಟದ್ಯುಮ್ನನೂ ಪರಸ್ಪರವಾಗಿ ಆಲಿಂಗಿಸಿಕೊಂಡು ಸೈನ್ಯದ ಮಧ್ಯದಲ್ಲಿ ಕುಣಿದಾಡಿದರು. ಅನಂತರ ಶತ್ರುತಾಪನನಾದ ಪಾರ್ಷತನನ್ನು ಕುರಿತು ಭೀಮನು ಹೇಳಿದನು :

**ಭೂಯೋಽಹಂ ತ್ವಾಂ ವಿಜಯಿನಂ ಪರಿಷ್ವಜ್ಯಾಮಿ ಪಾರ್ಷತ ।**
**ಸೂತಪುತ್ರೇ ಹತೇ ಪಾಪೇ ಧಾರ್ತರಾಷ್ಟ್ರೇ ಚ ಸಂಯುಗೇ ॥೮೧॥**

"ದ್ರುಪದಕುಮಾರ! ಪಾಪಿಷ್ಠರಾದ ಕರ್ಣ-ದುರ್ಯೋಧನರು ಯುದ್ಧದಲ್ಲಿ ಹತರಾದನಂತರ ವಿಜಯಿಯಾದ ನಿನ್ನನ್ನು ನಾನು ಮತ್ತೆ ಆಲಿಂಗಿಸಿಕೊಳ್ಳುತ್ತೇನೆ."

ಪಾರ್ಷತನಿಗೆ ಭೀಮಸೇನನು ಹೀಗೆ ಹೇಳಿ ಹರ್ಷೋದ್ರೇಕದಿಂದ ಗಟ್ಟಿಯಾಗಿ ತನ್ನ ಭುಜಗಳನ್ನು ತಟ್ಟಿಕೊಂಡು, ಆ ಘೋರಶಬ್ದದಿಂದ ಭೂಮಿಯನ್ನೇ ನಡುಗಿಸಿಬಿಟ್ಟನು. ಆ ಘೋರಶಬ್ದದಿಂದ ಭಯಗೊಂಡ ನಿನ್ನ ಕಡೆಯ ಸೈನಿಕರು ಕ್ಷತ್ರಧರ್ಮವನ್ನು ಬದಿಗೊತ್ತಿ ಪಲಾಯನಪರಾಯಣರಾಗಿ ಓಡಿಹೋದರು. ಪಾಂಡವರಾದರೋ ವಿಜಯವನ್ನು ಗಳಿಸಿ ಹೃಷ್ಟರಾದರು. ಸಂಗ್ರಾಮದಲ್ಲಿ ಶತ್ರುಗಳು ದಿನ-ದಿನಕ್ಕೂ ಕ್ಷಯಿಸುತ್ತಿದ್ದುದರಿಂದ ಸುಖಿಗಳಾಗಿದ್ದರು."

೧೯೨ನೆಯ ಅಧ್ಯಾಯವು ಮುಗಿಯಿತು.

## ೧೫ನೆಯ ದಿವಸದ ಯುದ್ಧದ ವಿಶ್ಲೇಷಣೆ

(ದ್ರೋಣವಧಪರ್ವ)

ಸೈನಿಕರು ಮಲಗಿ ಎದ್ದನಂತರ ಪ್ರಾರಂಭಿಸಿದ ಯುದ್ಧವನ್ನು ನಾವು ಹದಿನೈದನೆಯ ದಿವಸದ ಯುದ್ಧವೆಂದು ಭಾವಿಸಬೇಕಾಗಿದೆ. ಅದು ಹೊರ ತಾಗಿ ಇದು ಹದಿನೈದನೆಯ ದಿವಸದ ಯುದ್ಧವೆಂದು ಸೂಚಿಸುವ ವಾಕ್ಯಗಳಿ ರುವುದಿಲ್ಲ. ೧೮೫ನೆಯ ಅಧ್ಯಾಯದಲ್ಲಿ ದುರ್ಯೋಧನನು ದ್ರೋಣರ ಬಳಿಗೆ ಬರುತ್ತಾನೆ. ತನ್ನ ಸ್ವಭಾವಾನುಸಾರವಾಗಿ ಪಾಂಡವರಿಗೇ ಪ್ರಿಯರಾದವರೆಂದು ದ್ರೋಣರನ್ನು ಚುಚ್ಚಿ ಮಾತನಾಡುತ್ತಾನೆ : **ಭವತಾ ಪಾಲ್ಯಮಾನಾಸ್ತೇ ವಿವರ್ಧನ್ತೇ ಪುನಃ ಪುನಃ** (೪) 'ನಿಮ್ಮಿಂದಲೇ ರಕ್ಷಿಸಲ್ಪಡುತ್ತಿರುವ ಪಾಂಡವರು ದಿನ-ದಿನಕ್ಕೂ ವೃದ್ಧಿಹೊಂದುತ್ತಲೇ ಇದ್ದಾರೆ'–ಎಂದೂ ಹೇಳುತ್ತಾನೆ. ಪಾಂಡವರ ದೃಷ್ಟಿಯಲ್ಲಿ ದ್ರೋಣರು ದುರ್ಯೋಧನನ ಹಿತದಲ್ಲಿಯೇ ಆಸಕ್ತರಾಗಿರತಕ್ಕವರು. ದುರ್ಯೋಧನನ ದೃಷ್ಟಿಯಲ್ಲಿ ದ್ರೋಣರೇ ಪಾಂಡವ ರನ್ನು ಶ್ಲಾಘಿಸತಕ್ಕವರು. ಹೀಗಾಗಿ ದ್ರೋಣರಿಗೆ ಎರಡು ಪಕ್ಷದವರಿಂದಲೂ ಪುರಸ್ಕಾರವಿಲ್ಲ. ಅರ್ಜುನನನ್ನು ಶ್ಲಾಘಿಸಿದುದಕ್ಕಾಗಿ ದುರ್ಯೋಧನನಿಗೆ ಕೋಪವೇ ಬರುತ್ತದೆ. 'ನಾವು ನಾಲ್ವರೇ ಹೋಗಿ ಅರ್ಜುನನನ್ನು ಸಂಹರಿಸು ತ್ತೇವೆ'–ಎನ್ನುತ್ತಾನೆ ದುರ್ಯೋಧನ. 'ನಿನಗೆ ಮಂಗಳವಾಗಲಿ ; ಹೋಗಿ ಬಾ'–ಎಂದು ಹೇಳಿದ ದ್ರೋಣರು ನಾಲ್ವರ ವಿಷಯವಾಗಿಯೂ ದುರ್ಯೋ ಧನನಿಗೆ ಮನಚುಚ್ಚುವಂತೆ ಹೇಳಿ ಯುದ್ಧಕ್ಕೆ ಹೊರಡುತ್ತಾರೆ.

೧೮೬ನೆಯ ಅಧ್ಯಾಯ : ಈ ಅಧ್ಯಾಯದಲ್ಲಿ ಪ್ರಾತಃಕಾಲದಲ್ಲಿ ಎಲ್ಲ ಸೈನಿಕರೂ ಯುದ್ಧವನ್ನು ನಿಲ್ಲಿಸಿ ಸಂಧ್ಯೋಪಾಸನೆಮಾಡಿದ ಒಂದು ಶ್ಲೋಕ ವಿದೆ. ಯಾನಗಳೆಲ್ಲವನ್ನೂ ವಿಸರ್ಜಿಸಿ ದಿವಾಕರನಿಗೆ ಅಭಿಮುಖವಾಗಿ ಜಪ ಮಾಡುತ್ತಿದ್ದರೆಂದಿದೆ. ಆದರೆ ಮುಂದಿನ ಶ್ಲೋಕದಲ್ಲಿ ಪುನಃ ಅವರು ವಾಹನ ಗಳನ್ನು ಹತ್ತಿಕೊಂಡರು ಎಂಬ ಅನುವರ್ತನೆಯಿಲ್ಲ. ಮುಂದಿನ ಅಧ್ಯಾಯದಲ್ಲಿ ಪುನಃ ಸೂರ್ಯೋಪಸ್ಥಾನಮಾಡಿದ ವಿಷಯವು ಬಂದಿರುವುದರಿಂದ ಇದು ಹೆಚ್ಚು ಪಾಠವಿರಬಹುದು. ಒಂದು ಪುಸ್ತಕದಲ್ಲಿ ಈ ಶ್ಲೋಕವಿಲ್ಲ. ದುರ್ಯೋಧನನು ಸೈನ್ಯವನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿ ಯುದ್ಧಮಾಡಲು ಉಪಕ್ರಮಿಸುತ್ತಾನೆ. ದುರ್ಯೋಧನ-ಕರ್ಣ-ಸೌಬಲರು

ಅರ್ಜುನನೊಡನೆ ಯುದ್ಧಮಾಡುತ್ತಾರೆ. ಭೀಕರಯುದ್ಧದ ವರ್ಣನೆಯಿದೆ. ದ್ರೋಣರು ಉತ್ತರದ ಕಡೆಯಲ್ಲಿ ಯುದ್ಧವನ್ನು ಆರಂಭಿಸುತ್ತಾರೆ. ದ್ರುಪದ-ವಿರಾಟರೂ ಮತ್ತು ಪಾಂಚಾಲಯೋಧರೂ ದ್ರೋಣರೊಡನೆ ಯುದ್ಧ ಮಾಡುತ್ತಾರೆ. ಧೃಷ್ಟದ್ಯುಮ್ನನ ಮೂರು ಮಕ್ಕಳನ್ನೂ ದ್ರೋಣರು ಸಂಹರಿಸು ತ್ತಾರೆ. ಮುಂದೆ ೩೮ನೆಯ ಶ್ಲೋಕದಲ್ಲಿ–'ದ್ರೋಣರು ಭಲ್ಲದಿಂದ ದ್ರುಪದ-ವಿರಾಟರ ಧನುಸ್ಸುಗಳನ್ನು ಕತ್ತರಿಸಿದರು'–ಎಂದಿದೆ. **ಭಲ್ಲಾಭ್ಯಾಂ ಭೃಶತೀಕ್ಷ್ಣಾಭ್ಯಾಂ ಚಿಚ್ಛೇದ ಧನುಷೀ ತಯೋಃ** (೩೮). ಇದರ ಮುಂದಿನ ಶ್ಲೋಕದಲ್ಲಿ ವಿರಾಟನು ಪುನಃ ಧನುಸ್ಸನ್ನು ತೆಗೆದುಕೊಂಡ ಬಗೆಗೆ ಪ್ರಸ್ತಾಪವಿಲ್ಲ. ಆದರೆ **ತೋಮರಾನ್ ದಶ ದಶ ಶರಾನ್ ಚಿಕ್ಷೇಪ**–ಹತ್ತು ಬಾಣಗಳನ್ನೂ, ಹತ್ತು ತೋಮರಗಳನ್ನೂ ಪ್ರಹರಿಸಿದನು–ಎಂದಿದೆ. ೪೧ನೆಯ ಶ್ಲೋಕದಲ್ಲಿ–'ದ್ರೋಣರು ಹತ್ತು ತೋಮರಗಳನ್ನೂ ಕತ್ತರಿಸಿದರು' ಎಂದು ಮಾತ್ರವೇ ಇದೆ. ಬಾಣಗಳ ಪ್ರಸ್ತಾಪವಿಲ್ಲ. ಒಂದು ಪುಸ್ತಕದಲ್ಲಿ ಧನುಸ್ಸನ್ನು ಕತ್ತರಿಸಿದುದಕ್ಕೆ ಸಂಬಂಧಿಸಿದಂತೆ ನಾಲ್ಕು ಶ್ಲೋಕಗಳಿರುವುದಿಲ್ಲ. ಮುಂದೆ ವಿರಾಟ-ದ್ರುಪದರನ್ನು ದ್ರೋಣರು ಸಂಹರಿಸುತ್ತಾರೆ. ಧೃಷ್ಟದ್ಯುಮ್ನನು ಪ್ರತಿಜ್ಞೆಮಾಡುತ್ತಾನೆ. ಆದರೆ ಪ್ರತಿಜ್ಞೆಯನ್ನು ಕಾರ್ಯಗತಮಾಡಲು ಸಾಧ್ಯ ವಾಗುವುದಿಲ್ಲ. ಭೀಮಸೇನನು ಧೃಷ್ಟದ್ಯುಮ್ನನನ್ನು ನಿಂದಿಸಿ ತಾನೇ ದ್ರೋಣ ರೊಡನೆ ಯುದ್ಧಕ್ಕೆ ಹೋಗುತ್ತಾನೆ. ಆ ಸಮಯದಲ್ಲಿ ಧೃಷ್ಟದ್ಯುಮ್ನನೂ ದ್ರೋಣರೊಡನೆ ಯುದ್ಧಕ್ಕೆ ಹೋಗುತ್ತಾನೆ. ಪರಮಾದ್ಭುತವಾದ ಯುದ್ಧವು ಪ್ರಾರಂಭವಾಗುತ್ತದೆ. ೧೮೭ನೆಯ ಅಧ್ಯಾಯ : ಈ ಅಧ್ಯಾಯವು ಯುದ್ಧದ ವರ್ಣನೆಯಿಂದ ತುಂಬಿದೆ. ಕೌರವರ ಕಡೆಯ ನಾಲ್ಕು ಯೋಧರಿಗೂ–ಪಾಂಡವರ ಕಡೆಯ ನಾಲ್ಕು ಯೋಧರಿಗೂ ದ್ವೈರಥಯುದ್ಧವು ಪ್ರಾರಂಭ ವಾಗುತ್ತದೆ. ಇಲ್ಲಿ ನಕುಲನು ದುರ್ಯೋಧನನನ್ನು ಎದುರಿಸಿ ಯುದ್ಧಮಾಡು ತ್ತಾನೆ. ಯುದ್ಧಪ್ರಕರಣದಲ್ಲಿ **ಅಪಸವ್ಯಂ** ಎಂಬ ಒಂದು ಪದದ ಪ್ರಯೋಗ ವಿದೆ. **ಅಪಸವ್ಯಂ ಚಕಾರಾಥ ಮಾದ್ರೀಪುತ್ರಸ್ತವಾತ್ಮಜಮ್–ಅಪಸವ್ಯ**–ಎಂದರೆ ಶರೀರದ ಬಲಭಾಗ, ವಿರುದ್ಧವಾದ, ಪ್ರತಿಕೂಲವಾದ ಮತ್ತು ಬಲ ಭಾಗ ಎಂಬ ಅರ್ಥಗಳೂ ಆಗುತ್ತವೆ. ಯಜ್ಞೋಪವೀತವನ್ನು ಎಡಭುಜದ ಮೇಲೆ ಹಾಕಿಕೊಳ್ಳುವುದು ಸವ್ಯವೂ, ಬಲಭುಜದ ಮೇಲೆ ಬರುವಂತೆ ಹಾಕಿ

ಕೊಳ್ಳುವುದು ಅಪಸವ್ಯವೂ ಆಗುತ್ತದೆ. ಪ್ರಕೃತಸಂದರ್ಭದಲ್ಲಿ ಈ ಯಾವ ಅರ್ಥಗಳೂ ಇಲ್ಲಿ ಸಮನ್ವಯವಾಗುವುದಿಲ್ಲ. 'ಬಲಭಾಗದಲ್ಲಿರುವಂತೆ ಮಾಡಿದನು'–ಎಂಬ ಅರ್ಥವಾದರೂ ಬಲಭಾಗದಲ್ಲಿರುವಂತೆ ಮಾಡಿದರೆ ಹೆಚ್ಚಿನ ಪ್ರಯೋಜನವೇನು? ಇದರಿಂದ ಕೋಲಾಹಲವೆದ್ದುದೇಕೆ? ಪುನಃ ದುರ್ಯೋಧನನೂ ಅದನ್ನೇ ಮಾಡಲು ಪ್ರಯತ್ನಿಸಿದುದೇಕೆ?–ಈ ಸಮಸ್ಯೆ ಗಳಿಗೆ ಉತ್ತರಸಿಗುವುದಿಲ್ಲ. ಅಪಸವ್ಯವೆಂಬುದು ಯುದ್ಧಪ್ರಕ್ರಿಯೆಯ ಪಾರಿಭಾಷಿಕಶಬ್ದವಿರಬಹುದು. ಈ ಪ್ರಕ್ರಿಯೆಯು ಬಹಳ ಮಹತ್ತ್ವದ್ದಾಗಿರ ಬಹುದು. ಏಕೆಂದರೆ : 'ಅಪಸವ್ಯವನ್ನು ಅಪಸವ್ಯದಿಂದಲೇ ಪ್ರತಿಮಾಡಿ ದನು'–ಎಂಬುದಾಗಿಯೇ ಇದೆ. ಆದರೆ ಈ ಅಪಸವ್ಯ ಶಬ್ದಕ್ಕೆ ಸಾಮಾನ್ಯವಾಗಿ ಎಲ್ಲರೂ ಬಲಭಾಗ ಎಂಬ ಅರ್ಥವನ್ನೇ ಹೇಳಿರುತ್ತಾರೆ. ವಿಶೇಷಾರ್ಥವನ್ನು ಯಾರೂ ಹೇಳಿಲ್ಲ. ರಹಸ್ಯವನ್ನು ತಿಳಿದವರು ತಿಳಿಯಪಡಿಸಿದಲ್ಲಿ ಕೃತಜ್ಞತೆಯಿಂದ ಪ್ರಕಟಪಡಿಸಲಾಗುವುದು. ಕಡೆಯಲ್ಲಿ ದುರ್ಯೋಧನನು ಪರಾಙ್ಮುಖನಾಗುತ್ತಾನೆ.

೧೮೮ನೆಯ ಅಧ್ಯಾಯ : ೧೮೭ನೆಯ ಅಧ್ಯಾಯದಲ್ಲಿ ಸಂಜಯನು ಸೂಚಿಸಿದ್ದ ರೀತಿಯಲ್ಲಿ ಈ ಅಧ್ಯಾಯದ ಮೊದಲು ದುಃಶಾಸನ-ಸಹದೇವರ ಯುದ್ಧದ ಕಥನವಿದೆ. ದುಃಶಾಸನನ ಸಾರಥಿಯು ಹತನಾಗಿ ಅವನು ಬಹಳ ಕಷ್ಟದಲ್ಲಿರುವಾಗ ಅವನಿಗೆ ಸಹಾಯಕನಾಗಿ ಕರ್ಣನು ಬರುತ್ತಾನೆ. ಕರ್ಣನನ್ನು ಭೀಮಸೇನನು ಎದುರಿಸುತ್ತಾನೆ. ಭೀಮಸೇನನು ರಥಹೀನನಾಗಿ ನಕುಲನ ರಥಕ್ಕೆ ಹತ್ತುತ್ತಾನೆ. ಅನಂತರ ಅಧ್ಯಾಯದ ಕಡೆಯವರೆಗೂ ದ್ರೋಣಾರ್ಜುನರ ಯುದ್ಧದ ಹೃದಯಂಗಮವಾದ ವರ್ಣನೆಯಿದೆ. ದ್ರೋಣರು ಪಾಶುಪತಾಸ್ತ್ರವನ್ನು ಅರ್ಜುನನ ಮೇಲೆ ಬಿಟ್ಟರೆಂಬ ಕಥನವಿದ್ದರೂ ಆ ಮಹಾಸ್ತ್ರದ ವರ್ಣನೆಯಿಲ್ಲ. ಆ ಮಹಾಸ್ತ್ರಪ್ರಯೋಗದಿಂದಾದ ಪರಿಣಾಮವೂ ವರ್ಣಿತವಾಗಿಲ್ಲ. ಅದನ್ನು ಕೂಡ ಅರ್ಜುನನು ಇತರ ಅಸ್ತ್ರಗಳಂತೆಯೇ ವಿನಾಶಮಾಡಿದನೆಂಬ ವಾಕ್ಯವಿದೆ. ಐಂದ್ರ–ತ್ವಾಷ್ಟ್ರ ಇವೇ ಮೊದಲಾದ ಸಾಧಾರಣ ಅಸ್ತ್ರಗಳ ಸಾಲಿಗೆ ಪಾಶುಪತಾಸ್ತ್ರವನ್ನೂ ಸೇರಿಸಲಾಗಿದೆ. ಅವೆಲ್ಲವೂ ವಿನಾಶವಾದನಂತರ ಅವುಗಳಿಗಿಂತಲೂ ಮಿಗಿಲಾದ ದಿವ್ಯಾಸ್ತ್ರಗಳನ್ನು ದ್ರೋಣರು ಪ್ರಯೋಗಿಸಿದರೆಂದು ಧನಂಜಯನು ಹೇಳು

ತ್ತಾನೆ. **ತತೋಽಸ್ತ್ರೈಃ ಪರಮೈರ್ದಿವ್ಯೈಃ ದ್ರೋಣಃ ಪಾರ್ಥಮವಾಕಿರತ್** (೩೨). ದ್ರೋಣ-ಪಾರ್ಥರ ಹೊಗಳಿಕೆಯಿದೆ. ಕಡೆಯಲ್ಲಿ ದ್ರೋಣರು ಬ್ರಹ್ಮಾಸ್ತ್ರವನ್ನು ಪ್ರಯೋಗಿಸುತ್ತಾರೆ. ಅದನ್ನೂ ಸಹ ಅರ್ಜುನನು ವಿಫಲ ಗೊಳಿಸುತ್ತಾನೆ. ಸೋಲು-ಗೆಲುವುಗಳು ಯಾರಿಗೂ ಲಭಿಸುವುದಿಲ್ಲ. ಕಡೆಯವರೆಗೂ ಯುದ್ಧವು ಸಮ-ಸಮವಾಗಿಯೇ ನಡೆಯುತ್ತದೆ. ಅನಂತರ ಸಾಮೂಹಿಕ ಯುದ್ಧವು ಪ್ರಾರಂಭವಾಗುತ್ತದೆ.

೧೮೯ನೆಯ ಅಧ್ಯಾಯ : ದುಃಶಾಸನ-ಧೃಷ್ಟದ್ಯುಮ್ನರ ಯುದ್ಧದೊಡನೆ ಅಧ್ಯಾಯವು ಪ್ರಾರಂಭವಾಗುತ್ತದೆ. ಹಾರ್ದಿಕ್ಯನು ದುಃಶಾಸನನ ಸಹಾಯಕ್ಕೆ ಬರುತ್ತಾನೆ. ನಕುಲ-ಸಹದೇವರು ಹಾರ್ದಿಕ್ಯನನ್ನು ತಡೆಯುತ್ತಾರೆ. ಮುಂದೆ ಹಲವಾರು ಶ್ಲೋಕದಲ್ಲಿ ಧರ್ಮಯುದ್ಧದ ವರ್ಣನೆಯಿದೆ. ಮುಂದೆ ಸಾತ್ಯಕಿಯು ದುರ್ಯೋಧನನನ್ನು ಎದುರಿಸುತ್ತಾನೆ. ಆ ಸಮಯದಲ್ಲಿ ದುರ್ಯೋಧನ-ಸಾತ್ಯಕಿಯರ ಸಂಭಾಷಣೆಯು ಬಹಳ ಸ್ವಾರಸ್ಯವಾಗಿದೆ. ಅನಂತರ ಇವರಿಬ್ಬರಿಗೂ ಭಯಂಕರವಾದ ಯುದ್ಧವಾಗುತ್ತದೆ. ದುರ್ಯೋಧನನ ಬಲವು ಕುಗ್ಗುತ್ತಿರುವುದನ್ನು ಕಂಡು ಕರ್ಣನು ದುರ್ಯೋಧನನ ಸಹಾಯಕ್ಕೆ ಬರುತ್ತಾನೆ. ಭೀಮಸೇನನು ಕರ್ಣನನ್ನು ತಡೆಯುತ್ತಾನೆ. ಭೀಮ-ಕರ್ಣರಿಗೆ ಯುದ್ಧವಾಗುತ್ತದೆ. ಆ ಮಧ್ಯದಲ್ಲಿ ಯುಧಿಷ್ಠಿರನು ಪಾಂಚಾಲ-ಮತ್ಸ್ಯರಿಗೆ ಯುದ್ಧಮಾಡಲು ಆದೇಶನೀಡುತ್ತಾನೆ. ಎಲ್ಲರೂ ಒಟ್ಟಾಗಿ ಸೇರಿ ದ್ರೋಣರೊಡನೆ ಯುದ್ಧವನ್ನು ಪ್ರಾರಂಭಿಸುತ್ತಾರೆ.

೧೯೦ನೆಯ ಅಧ್ಯಾಯ : ದ್ರೋಣರ ಸಂಹಾರಸಾಮರ್ಥ್ಯವೆಷ್ಟೆಂಬುದು ಈ ಅಧ್ಯಾಯದಲ್ಲಿ ವರ್ಣಿತವಾಗಿದೆ. ಬೇರೆ ಯಾರೂ ಇವರನ್ನು ಎದುರಿಸಲು ಸಾಧ್ಯವಿಲ್ಲ. ಎದುರಿಸಲು ಸಾಮರ್ಥ್ಯವಿರುವ ಅರ್ಜುನನು ದ್ರೋಣರೊಡನೆ ಯುದ್ಧಮಾಡಲು ಆಸಕ್ತನಾಗಿಲ್ಲ. ದ್ರೋಣರ ಕೈಯಲ್ಲಿ ಧನುಸ್ಸಿರುವವರೆಗೆ ಅವರನ್ನು ಪರಾಜಯಗೊಳಿಸುವ ಪ್ರಶ್ನೆಯೇ ಇಲ್ಲ. ಅವರನ್ನು ನಿರಾಯುಧರನ್ನಾಗಿ ಮಾಡುವುದು ಹೇಗೆ? ಅವರಿಗೆ ಜೀವನದಲ್ಲಿಯೇ ಜುಗುಪ್ಸೆಯನ್ನು ಹುಟ್ಟಿಸಬೇಕು. ಇದು ಹೇಗೆ ಸಾಧ್ಯ? ಅವರ ಪ್ರೀತಿಯೆಲ್ಲವೂ ಏಕಮಾತ್ರ ಪುತ್ರನಲ್ಲಿಯೇ ಕೇಂದ್ರೀಕೃತವಾಗಿದ್ದಿತು. ಆದರೆ ಪುತ್ರನನ್ನು ಸಂಹರಿಸಲು ಆ ಸಮಯದಲ್ಲಿ ಪಾಂಡವರಿಗೆ ಸಾಧ್ಯವೇ? ಸಾಧ್ಯವಿಲ್ಲ. ಯಾವ ಸಮಯ

ದಲ್ಲಿಯೂ ಸಾಧ್ಯವಿಲ್ಲ. ಅವನು ಚಿರಂಜೀವಿ. ಹಾಗಾದರೆ ಇದನ್ನು ಸಾಧಿಸು ವುದು ಹೇಗೆ? ಅಶ್ವತ್ಥಾಮನು ಹತನಾದನೆಂದು ಹೇಳಿಬಿಟ್ಟರಾಯಿತು. ಯಾರು ಈ ಮಾತನ್ನು ಹೇಳಬೇಕು? ಯಾರ ಮಾತಿನಲ್ಲಿ ದ್ರೋಣರಿಗೆ ಪೂರ್ಣವಿಶ್ವಾಸವಿರುವುದೋ ಅವರೇ ಹೇಳಬೇಕು. ಅರ್ಜುನನಂತೂ ಇದಕ್ಕೆ ಒಪ್ಪುವುದೇ ಇಲ್ಲ. ಭೀಮ-ಯಮಳರೇನೋ ಸಮ್ಮತಿಸುತ್ತಾರೆ. ಧರ್ಮ ರಾಜನೂ ಬಹಳ ಕಷ್ಟದಿಂದ ಒಪ್ಪುತ್ತಾನೆ. ಸುಳ್ಳು ನೂರು ಭಾಗ ಸುಳ್ಳಾಗ ದಿರಲಿ–ಎಂದು ಅಶ್ವತ್ಥಾಮಾ ಎಂಬ ಹೆಸರಿನ ಆನೆಯನ್ನು ಭೀಮನು ಸಂಹರಿಸಿ **'ಅಶ್ವತ್ಥಾಮಾ ಹತಃ'**–ಎಂದು ಕೂಗುತ್ತಾನೆ. ಆದರೆ ಭೀಮನು ಹೇಳಿದುದನ್ನು ದ್ರೋಣರು ನಂಬುವುದಿಲ್ಲ. ಯುಧಿಷ್ಠಿರನು ಹೇಳಿದುದನ್ನು ನಂಬುತ್ತಾರೆ. ಜೀವನದಲ್ಲಿ ಜುಗುಪ್ಸೆಹೊಂದುತ್ತಾರೆ.

೧೪ನೆಯ ಶ್ಲೋಕದಲ್ಲಿ : 'ತನ್ನ ಸೈನ್ಯದಲ್ಲಿಯೇ ಇದ್ದ ಅಶ್ವತ್ಥಾಮಾ ಎಂಬ ಹೆಸರಿನ ಆನೆಯನ್ನು ಭೀಮನು ಗದೆಯಿಂದ ಸಂಹರಿಸಿದನು. ಇದು ಇಂದ್ರವರ್ಮನ ಆನೆಯಾಗಿದ್ದಿತು' ಎಂದಿದೆ. **'ಅನೀಕೇ ಸ್ವೇ ಮಹಾ ಗಜಮ್' 'ಮಾಲವಸ್ಯೇನ್ದ್ರವರ್ಮಣಃ।'** ಆದರೆ ೪೯ನೆಯ ಶ್ಲೋಕದಲ್ಲಿ ಈ ವಿಷಯವನ್ನೇ ಭೀಮಸೇನನು ಯುಧಿಷ್ಠಿರನಿಗೆ ಹೇಳುವಾಗ–'ಇಂದ್ರ ವರ್ಮನು ನಿನ್ನ ಸೈನ್ಯದೊಳಕ್ಕೆ ನುಗ್ಗಿ ಬರುತ್ತಿದ್ದಾಗ ಅವನ ಸೈನ್ಯದಲ್ಲಿದ್ದ– ಸುಪ್ರಸಿದ್ಧವಾದ ಅಶ್ವತ್ಥಾಮಾ ಎಂಬ ಹೆಸರಿನ ಆನೆಯನ್ನು ನಾನು ಅತ್ಯಂತ ಪರಾಕ್ರಮದಿಂದ ಕಾದಾಡಿ ಕೊಂದೆನು' ಎಂದಿದೆ. **'ಗಾಹಮಾನಸ್ಯ ತೇ ಸೇನಾಂ' 'ನಿಹತೋ ಯುಧಿ ವಿಕ್ರಮ್ಯ।'** ಇಲ್ಲಿರುವ ಶ್ಲೋಕಗಳು ಆನೆಯು ಶತ್ರುಪಕ್ಷಕ್ಕೆ ಸೇರಿದುದೆಂಬ ಅರ್ಥವನ್ನು ಕೊಡುತ್ತದೆ. ಇಂದ್ರವರ್ಮನ ಮತ್ತು ಆನೆಯ ಹೆಸರು ಈ ಒಂದು ಪ್ರಕರಣವನ್ನು ಬಿಟ್ಟು ಮತ್ತೆಲ್ಲಿಯೂ ಬರುವುದಿಲ್ಲ. ತಮ್ಮ ಸೇನೆಯಲ್ಲಿದ್ದ ಆನೆಯನ್ನೇ ಸಂಹರಿಸಿದೆನೆಂದರೆ ಯುಧಿಷ್ಠಿರನು ಏನು ಹೇಳುವನೋ–ಎಂಬ ಸಂಕೋಚದಿಂದ ಭೀಮನು ಹೀಗೆ ಹೇಳಿರಬಹುದೇ? ಹಿಂದಿನದಕ್ಕೂ ಮತ್ತು ಇಲ್ಲಿಗೂ ಸಮಾಧಾನಿಸಲಾಗದ ವ್ಯತ್ಯಾಸವಂತೂ ಇದೆ.

೧೯೧-೧೯೨ನೆಯ ಅಧ್ಯಾಯಗಳು : ಭೀಷ್ಮರ ಪತನದ ಸಮಯದಲ್ಲಿ ಬಂದಿರುವ ಕೆಲವು ಅಸಂಗತಗಳೇ ದ್ರೋಣರ ಪತನದ ಸಮಯದಲ್ಲಿಯೂ

ಇವೆ. ೧೯೦ನೆಯ ಅಧ್ಯಾಯದಲ್ಲಿ ಯುಧಿಷ್ಠಿರನು 'ಅಶ್ವತ್ಥಾಮಾ' ಎಂದು ಗಟ್ಟಿಯಾಗಿ ಹೇಳಿ '**ಹತಃ ಕುಂಜರಃ**' ಎಂಬುದನ್ನು ಮೆಲ್ಲಗೆ ಹೇಳಿದನೆಂದಿದೆ. ಅದರಿಂದ ದ್ರೋಣರು ಬಹಳ ವ್ಯಾಕುಲರಾದರೆಂದೂ, ಧೃಷ್ಟದ್ಯುಮ್ನನು ತಮ್ಮೆದುರಿನಲ್ಲಿ ನಿಂತಿರುವುದನ್ನು ನೋಡಿ ಉದ್ವಿಗ್ನರಾದರೆಂದೂ ಹೇಳಿದೆ. ೧೯೧ನೆಯ ಅಧ್ಯಾಯದಲ್ಲಿ ಇದೇ ವಿಷಯವು ಮುಂದುವರಿದು ಧೃಷ್ಟ ದ್ಯುಮ್ನನು ಮಹಾಶರವೊಂದನ್ನು ಧನುಸ್ಸಿನಲ್ಲಿ ಯೋಜಿಸಿದನೆಂದೂ ಅದನ್ನು ತಡೆಯಲು ಆಚಾರ್ಯರು ಪ್ರಯತ್ನಿಸಿದರೂ ಮಹಾಸ್ತ್ರಗಳೊಂದೂ ಅವರ ಸ್ಮೃತಿಪಥಕ್ಕೆ ಬರಲಿಲ್ಲವೆಂದೂ ಹೇಳಿದೆ. **ನ ಚಾಸ್ಯಸ್ತ್ರಾಣಿ ರಾಜೇನ್ದ್ರಪ್ರಾದು ರಾಸೀನ್ಮಹಾತ್ಮನಃ** (೮). ಇದರ ಮುಂದಿನ ಶ್ಲೋಕದಲ್ಲಿಯೇ ಅವರಲ್ಲಿದ್ದ ಬಾಣಗಳೆಲ್ಲವೂ ಕ್ಷಯಿಸಿದುವು ಎಂದೂ ಇದೆ. **ತಸ್ಯ ಚಾಹ್ನಸ್ತ್ರಿಭಾಗೇನ ಕ್ಷಯಂ ಜಗ್ಮುಃ ಪತತ್ರಿಣಃ** (೯). ಇದರ ಮುಂದಿನ ಶ್ಲೋಕದಲ್ಲಿ ಬಾಣಗಳು ಕ್ಷಯಿಸಿದ್ದರಿಂದಲೂ, ದಿವ್ಯಾಸ್ತ್ರಗಳು ಪ್ರಸನ್ನವಾಗದೇ ಇದ್ದುದರಿಂದಲೂ, ಋಷಿಗಳು ಶಸ್ತ್ರಸಂನ್ಯಾಸಮಾಡಲು ಹೇಳಿದ್ದರಿಂದಲೂ–ಶಸ್ತ್ರಸಂನ್ಯಾಸ ಮಾಡಲು ಇಚ್ಛಿಸಿದ ದ್ರೋಣರು ಮೊದಲಿನಂತೆ ಯುದ್ಧಮಾಡಲಿಲ್ಲ (೧೦-೧೧) ಎಂದಿದೆ. ಆದರೆ ಈ ಶ್ಲೋಕದಿಂದ ಮುಂದಕ್ಕೆ ಹೊಸ ಪ್ರಕರ ಣವೇ ಪ್ರಾರಂಭವಾಗುತ್ತದೆ. ಆಂಗಿರಸ ಎಂಬ ಧನುಸ್ಸನ್ನು ಮತ್ತು ಯಮ ದಂಡಕ್ಕೆ ಸಮಾನವಾದ ಬಾಣಗಳನ್ನೂ ದ್ರೋಣರು ತೆಗೆದುಕೊಂಡು ಧೃಷ್ಟ ದ್ಯುಮ್ನನೊಡನೆ ಯುದ್ಧವನ್ನು ಪ್ರಾರಂಭಿಸಿದರು–ಎಂದಿದೆ. ಈ ಹಿಂದೆ ಇವರ ಧನುಸ್ಸು ಧ್ವಂಸವಾದ ವಿಷಯವೇನೂ ಬಂದಿರುವುದಿಲ್ಲ. ಕ್ಷೀಣಿಸಿಹೋದ ಬಾಣಗಳು ಪುನಃ ಹೇಗೆ ಬಂದುವು?–ಎಂಬ ಬಗೆಗೆ ವಿವರಣೆಯಿಲ್ಲ. ಋಷಿ ಗಳ ಮಾತಿನಂತೆ ಶಸ್ತ್ರಸಂನ್ಯಾಸಮಾಡಲು ಇಚ್ಛಿಸಿದ್ದವರು ಪುನಃ ಏಕೆ ಶಸ್ತ್ರ ಗಳನ್ನು ತೆಗೆದುಕೊಂಡರೆಂಬುದಕ್ಕೂ ಇಲ್ಲಿ ಸಮಾಧಾನವು ಸಿಕ್ಕುವುದಿಲ್ಲ. ಮುಂದಿನ ಕೆಲವು ಶ್ಲೋಕಗಳು ದ್ರೋಣಪರ್ವದ ೯೭ನೆಯ ಅಧ್ಯಾಯದಲ್ಲಿ ದ್ದಂತೆಯೇ ಇವೆ. ಅಲ್ಲಿ ಧೃಷ್ಟದ್ಯುಮ್ನನ ರಕ್ಷಣೆಗೆ ಸಾತ್ಯಕಿಯು ಬಂದಂತೆ ಇಲ್ಲಿಯೂ ಧೃಷ್ಟದ್ಯುಮ್ನನ ರಕ್ಷಣೆಗೆ ಸಾತ್ಯಕಿಯೇ ಬರುತ್ತಾನೆ. ವೈತಸ್ತಿಕವೆಂಬ ಬಾಣಗಳ ವಿಷಯವು ಇಲ್ಲಿಯೂ ಬರುತ್ತದೆ. ಅಧ್ಯಾಯ-೧೨೨ ಶ್ಲೋ- ೭೧ರಲ್ಲಿಯೂ ಬರುತ್ತದೆ. ಅಲ್ಲಿಯೂ ಸಹ ಈ ಬಾಣಗಳನ್ನು ದ್ರೋಣರು

ಧೃಷ್ಟದ್ಯುಮ್ನನ ಮೇಲೆಯೇ ಉಪಯೋಗಿಸುತ್ತಾರೆ. ಇಲ್ಲಿ ಬರುವ ೪೨ನೆಯ ಶ್ಲೋಕದಲ್ಲಿ ನಾನ್ಯೇಷಾಂ ಸನ್ತಿ ತೇ ಶರಾಃ–ಬೇರೆಯವರಲ್ಲಿ ಇಂತಹ ಬಾಣಗಳಿಲ್ಲ–ಎಂದು ಹೇಳಿದ್ದರೂ ಮುಂದಿನ ಶ್ಲೋಕದಲ್ಲಿ ಕೃಪ, ಅರ್ಜುನ, ಅಶ್ವತ್ಥಾಮಾ, ಕರ್ಣ, ಪ್ರದ್ಯುಮ್ನ, ಸಾತ್ಯಕಿ, ಅಭಿಮನ್ಯು–ಇವರಲ್ಲಿಯೂ ಈ ಬಾಣಗಳಿದ್ದುವೆಂದು ಹೇಳಿದೆ. ಆದರೆ ಇವರಾರೂ ಇದುವರೆಗೆ ಆ ಬಾಣ ಗಳನ್ನು ಉಪಯೋಗಿಸಿದ ಪ್ರಕರಣವು ಬಂದಿಲ್ಲ. ಶೈನೇಯನ ಪರಾಕ್ರಮ ವರ್ಣನೆಯೊಡನೆ ಅಧ್ಯಾಯವು ಮುಗಿಯುತ್ತದೆ. ೧೯೨ನೆಯ ಅಧ್ಯಾಯದಲ್ಲಿ ಶೈನೇಯನ ಪರಾಕ್ರಮವರ್ಣನೆಯು ಮುಂದುವರಿದು ದುರ್ಯೋಧ ನಾದಿಗಳು ಸಾತ್ಯಕಿಯನ್ನು ತಡೆಗಟ್ಟುತ್ತಾರೆ. ಸಾತ್ಯಕಿಯ ಕಡೆಗೆ ಯುಧಿಷ್ಠಿರ, ಭೀಮ, ನಕುಲ-ಸಹದೇವರು ಸಹಾಯಕರಾಗಿ ನಿಂತು ಯುದ್ಧಮಾಡುತ್ತಾರೆ. ಇಲ್ಲಿ ಭಯಂಕರಯುದ್ಧದ ವರ್ಣನೆಯಿದೆ. ಹೀಗೆ ಯುದ್ಧವು ನಡೆಯುತ್ತಿದ್ದಾಗ ಯುಧಿಷ್ಠಿರನು ಪುನಃ ತನ್ನ ಸೈನಿಕರಿಗೆ ದ್ರೋಣರೊಡನೆ ಯುದ್ಧಮಾಡಲು ಆದೇಶನೀಡುತ್ತಾನೆ. ಆಗ ಎಲ್ಲ ಸೈನಿಕರೂ ದ್ರೋಣರ ಮೇಲೆ ಪುನಃ ಆಕ್ರಮಣವನ್ನು ನಡೆಸುತ್ತಾರೆ. ಧೃಷ್ಟದ್ಯುಮ್ನನು ಎದುರಾಗಿರುವುದನ್ನು ಕಂಡು ಮತ್ತು ಋಷಿಗಳ ಮಾತನ್ನೂ ಜ್ಞಾಪಿಸಿಕೊಂಡು ದ್ರೋಣರು ಗತೋತ್ಸಾಹರಾದರೂ ಉತ್ತಮ ಯುದ್ಧದ ಮೂಲಕ ಪ್ರಾಣಗಳನ್ನು ಬಿಡಲು ನಿರ್ಧರಿಸುತ್ತಾರೆ. (೨೨) ಅನಂತರ ಮಹಾಘೋರವಾದ ಸಂಹಾರಕಾರ್ಯ ದಲ್ಲಿ ತೊಡಗುತ್ತಾರೆ.

ಇಪ್ಪತ್ತು ಸಾವಿರ ಕ್ಷತ್ರಿಯರನ್ನೂ, ಒಂದು ಲಕ್ಷ ಆನೆಗಳನ್ನೂ ಸಂಹರಿ ಸಿದರೆಂದು ಇಲ್ಲಿ ಹೇಳಿದೆ (೨೪). ಈ ಹಿಂದೆ ೧೯೦ನೆಯ ಅಧ್ಯಾಯ ದಲ್ಲಿಯೂ ಇಪ್ಪತ್ತು ಸಾವಿರ ಪಾಂಚಾಲರನ್ನು ಸಂಹರಿಸಿದರೆಂದು ಬಂದಿದೆ (೨೯). ಇಲ್ಲಿ ಒಂದು ಸಂಶಯವು ಉಂಟಾಗುತ್ತದೆ. ದ್ರೋಣರು ಯಥಾ ಪೂರ್ವವಾಗಿ ಅಥವಾ ಅದಕ್ಕಿಂತಲೂ ಹೆಚ್ಚಾಗಿ ಸಂಹಾರಕಾರ್ಯದಲ್ಲಿ ತೊಡ ಗಿದರೇ? ಯುಧಿಷ್ಠಿರನು ಸುಳ್ಳುಹೇಳಿದುದರ ಫಲಿತಾಂಶವೇನು? ಋಷಿ ಗಳು ಹೇಳಿದುದನ್ನು ದ್ರೋಣರು ಲೆಕ್ಕಿಸಲೇ ಇಲ್ಲವೇ? ಋಷಿಗಳು ಬ್ರಹ್ಮಾಸ್ತ್ರ ವನ್ನು ಬಿಡಕೂಡದೆಂದೂ ಅದರಿಂದ ಅನೇಕ ಅನಸ್ತ್ರಜ್ಞರ ಹತ್ಯೆಯಾಗು ವುದೆಂದೂ ಸ್ಪಷ್ಟವಾಗಿ ಹೇಳಿದ್ದರು. ಇಂತಹ ಕಾರ್ಯವು ನಿನಗೆ ಉಚಿತವಲ್ಲ

ವೆಂದೂ ಹೇಳಿದ್ದರು (೧೯೦-೩೯) ಆ ಮಾತನ್ನೂ ಅವರು ಲೆಕ್ಕಿಸಲಿಲ್ಲವೇ? ಏಕೆಂದರೆ : ಈ ಅಧ್ಯಾಯದ ೨೫ನೆಯ ಶ್ಲೋಕದಲ್ಲಿ–**ಕ್ಷತ್ರಿಯಾಣಾಮಭಾವಾಯ ಬ್ರಾಹ್ಮಮಸ್ತ್ರಂ ಸಮಾಸ್ಥಿತಃ**–ಎಂದು ಸ್ಪಷ್ಟವಾಗಿದೆ. ಆದುದರಿಂದ ಎಲ್ಲಿಯೋ ಒಂದು ಕಡೆಯಲ್ಲಿ ಎಳೆಯನ್ನು ಹರಿದು ಕಾಡುಹೂಗಳನ್ನೂ ಪೋಣಿಸಿರಬೇಕೆಂದು ಭಾಸವಾಗುತ್ತದೆ.

ಈ ಅಧ್ಯಾಯದ ೧೨ನೆಯ ಶ್ಲೋಕದ ತಾತ್ಪರ್ಯವು ಹೀಗಿದೆ : ಧೃಷ್ಟದ್ಯುಮ್ನನು ತನ್ನ ಎದುರಿನಲ್ಲಿ ನಿಂತಿರುವುದನ್ನು ನೋಡಿ ದ್ರೋಣರು ಉದಾಸೀನಭಾವವನ್ನು ತಾಳಿದರು. **ವಿಮನಾಶ್ಚಾಭವದ್ಯುದ್ಧೇ ದೃಷ್ಟ್ವಾ ಪಾರ್ಷತಮಗ್ರತಃ ।** ಧೃಷ್ಟದ್ಯುಮ್ನನು ದ್ರೋಣರ ಎದುರಿನಲ್ಲಿ ಸರ್ವಸಿದ್ಧತೆಯಿಂದಲೂ ನಿಂತಿದ್ದನೆಂಬುದು ಈ ಶ್ಲೋಕದಲ್ಲಿ ಸ್ಪಷ್ಟವಾಗಿದೆ. ಈ ಶ್ಲೋಕದಿಂದ ಮುಂದಕ್ಕೆ ದ್ರೋಣ-ಧೃಷ್ಟದ್ಯುಮ್ನರು ನೇರವಾಗಿ ಯುದ್ಧಮಾಡಿದ ಪ್ರಕರಣವಾಗಲೀ, ಧೃಷ್ಟದ್ಯುಮ್ನನ ರಥ, ಧನುಸ್ಸು–ಮುಂತಾದುವು ದ್ರೋಣರ ಬಾಣಗಳಿಂದ ಧ್ವಂಸವಾದ ಪ್ರಕರಣವಾಗಲೀ ಬರುವುದಿಲ್ಲ. ದ್ರೋಣರು ಇಪ್ಪತ್ತು ಸಾವಿರ ಯೋಧರನ್ನೂ, ಒಂದು ಲಕ್ಷ ಗಜಸೈನಿಕರನ್ನೂ ನಿರ್ನಾಮ ಮಾಡಿದ ವಿಷಯವು ಬರುತ್ತದೆ. ಇದಾದನಂತರ ಅಸಂಗತವಾಗಿ **ಪಾಞ್ಚಾಲ್ಯಂ ವಿರಥಂ ಭೀಮೋ ಹತಸರ್ವಾಯುಧಂ ಬಲೀ** (೨೬)–ರಥಹೀನನಾದ, ಎಲ್ಲ ಆಯುಧಗಳನ್ನೂ ಕಳೆದುಕೊಂಡ ಧೃಷ್ಟದ್ಯುಮ್ನನನ್ನು ನೋಡಿ–ಎಂದು ಕಥೆಯು ಪ್ರಾರಂಭವಾಗುತ್ತದೆ. 'ರಥವನ್ನೂ, ಆಯುಧಗಳನ್ನೂ ಕಳೆದುಕೊಂಡ ಪ್ರಕರಣವನ್ನು ವಿವರಿಸಹೋಗದೇ ಫಲಿತಾಂಶವನ್ನು ಹೇಳಿ ಕಥೆಯನ್ನು ಮುಂದುವರಿಸಿರಬಹುದು'–ಎಂದು ಸಮಾಧಾನವನ್ನು ಹೇಳಬಹುದಾದರೂ ಹಿಂದೆ ಕಥೆಯ ನಿರೂಪಣೆಯಲ್ಲಿ ಹೀಗೆ ಬಂದಿರುವುದಿಲ್ಲ. ಮುಂದೆಯೂ ಸಹ ೩೫ನೆಯ ಶ್ಲೋಕದಲ್ಲಿ ದ್ರೋಣರು ಧೃಷ್ಟದ್ಯುಮ್ನನ ಧನುಸ್ಸನ್ನು ಕತ್ತರಿಸಿದರೆಂದೂ ಮರ್ಮಸ್ಥಳಗಳಲ್ಲಿ ಗಾಯಗೊಂಡ ಧೃಷ್ಟದ್ಯುಮ್ನನು ವ್ಯಥಿತನಾದನೆಂದೂ ಇದೆ. ಪುನಃ ೪೭ನೆಯ ಶ್ಲೋಕದಲ್ಲಿ ಬಾಣದಿಂದ ಕೂಡಿದ್ದ ಅದೇ ಧನುಸ್ಸನ್ನೇ ಧೃಷ್ಟದ್ಯುಮ್ನನು ರಥದಲ್ಲಿಟ್ಟನೆಂದಿದೆ. **ಸಶರಂ ತದ್ಧನುರ್ಘೋರಂ ಸಂನ್ಯಸ್ಯಾಥ ರಣೇ ತತಃ ।** ಧೃಷ್ಟದ್ಯುಮ್ನನು ಗಾಯಗೊಂಡು ವ್ಯಥಿತನಾದನಂತರ ಪುನಃ ಧನುಸ್ಸನ್ನು ಹಿಡಿದನೆಂದು

ಈ ಮಧ್ಯದಲ್ಲಿ ಬಂದಿರುವುದಿಲ್ಲ. ಧೃಷ್ಟದ್ಯುಮ್ನನು ಗಾಯಗೊಂಡನಂತರ ಭೀಮನು ಪುನಃ ದ್ರೋಣರ ಬಳಿಗೆ ಬಂದು ಅವರನ್ನು ನಿಂದಿಸಿದ ಮತ್ತು ಧರ್ಮರಾಜನ ಮಾತನ್ನು ನಂಬುವಂತೆ ಹೇಳಿದ ಪ್ರಕರಣವಿದೆ. **ಧರ್ಮ ರಾಜಸ್ಯ ತದ್ವಾಕ್ಯಂ ನಾಭಿಶಙ್ಕಿತುಮರ್ಹಸಿ** (೪೧). ಮುಂದೆ ಭೀಮಸೇನನು ಹೀಗೆ ಹೇಳಿದ ನಂತರವೇ ದ್ರೋಣರು ಧನುಸ್ಸನ್ನು ಪರಿತ್ಯಜಿಸಿದರೆಂದಿದೆ. ಧರ್ಮರಾಜನು ಹೇಳಿದುದನ್ನೂ ದ್ರೋಣರು ಶಂಕಿಸಿದ್ದರೆಂದು ಇದರ ಭಾವವೇ? ಏಕೆಂದರೆ : ಧರ್ಮಜನು ಅಶ್ವತ್ಥಾಮನು ಹತನಾದನೆಂದು ಹೇಳಿದ ಮೇಲೂ ಸಂಹಾರಕ್ರಿಯೆಯು ಅವ್ಯಾಹತವಾಗಿಯೇ ನಡೆದಿರುವ ಪ್ರಕರಣವು ಈ ಮಧ್ಯದಲ್ಲಿ ಬಂದಿದೆ. ಸುಳ್ಳುಹೇಳದವನು ಸುಳ್ಳುಹೇಳಿ, ಆಕಾಶದಲ್ಲಿದ್ದ ತನ್ನ ರಥವು ಭೂಮಿಗಿಳಿಯುವಂತೆ ಮಾಡಿಕೊಂಡು, ಅದರಿಂದ ಯಾವ ಪ್ರಯೋಜನವನ್ನೂ ಪಡೆಯಲಿಲ್ಲವೆಂದರೆ ಇದಕ್ಕಿಂತಲೂ ಹೆಚ್ಚಿನ ವ್ಯಥೆಯು ಮತ್ತೊಂದಿರಲಾರದು. ಆದರೆ ಹಾಗೆ ಖಂಡಿತವಾಗಿಯೂ ಆಗಲಿಲ್ಲವೆಂಬುದು ನಮ್ಮ ನಿಶ್ಚಯವಾಗಿದೆ. ಧರ್ಮರಾಜನು ಹೇಳಿದ ನಂತರ ಪುನಃ ಭೀಮಸೇನನು ಹೇಳುವ ಅಗತ್ಯವೇ ಇರಲಿಲ್ಲ. ಆದುದರಿಂದ ಕಥೆಯ ಎಳೆಯು ಹೀಗಿರಬಹುದೆಂದು ಸಕಾರಣದಿಂದ ಹೀಗೆ ಊಹಿಸಬಹುದಾಗಿದೆ :

ಧರ್ಮರಾಜನು, ಅಶ್ವತ್ಥಾಮನು ಹತನಾದನೆಂದು ಹೇಳಿದನಂತರ ದ್ರೋಣರಿಗೆ ಯುದ್ಧಮಾಡುವುದರ ಬಗೆಗೆ ಉತ್ಸಾಹವು ಸಂಪೂರ್ಣವಾಗಿ ಹೊರಟುಹೋಗುತ್ತದೆ. **ಯೋದ್ಧುಂ ನಾಶಕ್ನುವದ್ರಾಜನ್ಯಥಾಪೂರ್ವ ಮರಿಂದಮಃ ।** ಇದು ೧೯೦ನೆಯ ಅಧ್ಯಾಯದ ಕಡೆಯ ಶ್ಲೋಕ. ಅಲ್ಲಿಂದ ಮುಂದಕ್ಕೆ ಉದ್ವಿಗ್ನರಾದ ದ್ರೋಣರನ್ನು ನೋಡಿದ ಧೃಷ್ಟದ್ಯುಮ್ನನು ಭಯಂಕರವಾದ ಬಾಣವನ್ನು ಧನುಸ್ಸಿನಲ್ಲಿ ಯೋಜಿಸುತ್ತಾನೆ. ಅದನ್ನು ನಿವಾರಿಸಿಕೊಳ್ಳಲು ಪ್ರಯತ್ನಿಸಿದ ದ್ರೋಣರಿಗೆ ಅಸ್ತ್ರಗಳಾವುವೂ ಸಿದ್ಧಿಸು ವುದೇ ಇಲ್ಲ. **ನ ಚಾಸ್ಯಾಸ್ತ್ರಾಣಿ ರಾಜೇನ್ದ್ರ ಪ್ರಾದುರಾಸನ್ಮಹಾತ್ಮನಃ** (೮). ಮುಂದಿನ ಶ್ಲೋಕದಲ್ಲಿ ಬಾಣಗಳೂ ಮುಗಿದುಹೋದುವೆಂದಿದೆ. **ಕ್ಷಯಂ ಜಗ್ಮುಃ ಪತತ್ರಿಣಃ** (೯). ಆ ಸಮಯದಲ್ಲವರು ಪುತ್ರಶೋಕದಿಂದ ಪೀಡಿತರಾಗಿ ಯುದ್ಧಮಾಡಲು ದಿವ್ಯಾಸ್ತ್ರಗಳು ಪ್ರಸನ್ನವಾಗದೇ ಇರುವುದ ರಿಂದ ಋಷಿವಾಕ್ಯದಿಂದ ಪ್ರಚೋದಿತರಾಗಿ ಶಸ್ತ್ರಗಳನ್ನು ನ್ಯಾಸಮಾಡುವ

ಅಪೇಕ್ಷೆಯುಳ್ಳವರಾಗುತ್ತಾರೆ–**ಉತ್ರಸ್ಚುಕಾಮಃ ಶಸ್ತ್ರಾಣಿ ಋಷಿವಾಕ್ಯ ಪ್ರಚೋದಿತಃ।** ಆದರೆ ಈ ಶ್ಲೋಕದ ಉತ್ತರಾರ್ಧವು ಖಂಡಿತವಾಗಿಯೂ ಪೂರ್ವಾರ್ಧಕ್ಕೆ ಹೊಂದಿಕೆಯಾಗುವುದಿಲ್ಲ. **ತೇಜಸಾ ಪೂರ್ಯಮಾಣಶ್ಚ ಯುಯುಧೇ ನ ಯಥಾ ಪುರಾ।** ಹಿಂದೆ ಕೊಟ್ಟಿರುವ ಮೂರು ಕಾರಣಗಳಿಂದ ಅವರು ನಿಸ್ತೇಜರಾಗಿರುತ್ತಾರೆಯೇ ಹೊರತು ತೇಜಸ್ಸಿನಿಂದ ಪೂರ್ಣರಾಗಿರುವುದಿಲ್ಲ. ಮುಂದಿನ ಪ್ರಕರಣವನ್ನು ಯಥಾವತ್ತಾಗಿ ತೆಗೆದು ಕೊಂಡರೆ **ಯುಯುಧೇ ನ ಯಥಾ ಪುರಾ** ಎಂಬುದೂ ಸುಳ್ಳಾಗುತ್ತದೆ. ದ್ರೋಣರು ಹೆಚ್ಚು ಪರಾಕ್ರಮದಿಂದ ಕಾದಾಡಿ ಇಪ್ಪತ್ತು ಸಾವಿರ ಯೋಧ ರನ್ನೂ, ಒಂದು ಲಕ್ಷ ಗಜಸೈನಿಕರನ್ನೂ ಸಂಹಾರಮಾಡಿರುವುದು ಈ ಹಿಂದೆ ವರ್ಣಿತವಾಗಿದೆ. ಅದೂ ಅಲ್ಲದೇ ಹಿಂದಿನ ಶ್ಲೋಕದಲ್ಲಿ ಮಹಾಸ್ತ್ರಗಳಾವುವೂ ಪ್ರಾದುರ್ಭವಿಸಲಿಲ್ಲ. ಬಾಣಗಳೂ ಕ್ಷೀಣಿಸಿದ್ದುವು–ಎಂದು ಹೇಳಿ ಮುಂದಿನ ಶ್ಲೋಕದಲ್ಲಿಯೇ (೧೨) ಬ್ರಹ್ಮದಂಡೋಪಮವಾದ ಬಾಣಗಳಿಂದ ದ್ರೋಣರು ಧೃಷ್ಟದ್ಯುಮ್ನನೊಡನೆ ಯುದ್ಧಮಾಡಿದರೆಂದು ಹೇಳಿರುವುದು ಬಹಳ ಅಸಂಗತವಾಗಿ ಕಾಣುತ್ತದೆ. ಆದುದರಿಂದ ಕಥೆಯ ಎಳೆಯು ಹರಿದು ಹೋಗಿರುವುದು ಇದೇ ಸ್ಥಳದಲ್ಲಿ ಎಂಬುದರಲ್ಲಿ ಸಂಶಯವೇ ಇಲ್ಲ.

**ಉತ್ರಸ್ಚುಕಾಮಃ ಶಸ್ತ್ರಾಣಿ ಋಷಿವಾಕ್ಯಪ್ರಚೋದಿತಃ**–ಎಂಬ ೧೧ ನೆಯ ಶ್ಲೋಕದ ಪೂರ್ವಾರ್ಧವಾದನಂತರ ೧೯೨ನೆಯ ಅಧ್ಯಾಯದ ೪೨ನೆಯ ಶ್ಲೋಕದ ಉತ್ತರಾರ್ಧವನ್ನು ಜೋಡಿಸಿಕೊಳ್ಳಬೇಕು. **ಸರ್ವಾಣ್ಯ ಸ್ತ್ರಾಣಿ ಧರ್ಮಾತ್ಮಾ ಹಾತುಕಾಮೋಽಭ್ಯಭಾಷತ।**–ಎಲ್ಲ ಅಸ್ತ್ರಗಳನ್ನೂ ಬಿಟ್ಟುಬಿಡುವ ಇಚ್ಛೆಯಿಂದ ದ್ರೋಣರು ಹೇಳಿದರು.

೧೯೧ನೆಯ ಅಧ್ಯಾಯದಲ್ಲಿ ದ್ರೋಣರ ವಧೆಗಾಗಿಯೇ ಧೃಷ್ಟದ್ಯು ಮ್ನನು ಘೋರವಾದ ಬಾಣವನ್ನು ಧನುಸ್ಸಿನಲ್ಲಿ ಯೋಜಿಸುತ್ತಾನೆಂಬ ವಿಷ ಯವು ಬಂದಿದೆ. **ಧೃಡಜ್ಯಮಜರಂ ದಿವ್ಯಂ ಶರಂ ಚಾಶೀವಿಷೋಪಮಮ್** (೩). ಆದರೆ ಈಗಿರುವ ಕಥಾನುವರ್ತನೆಯ ಪ್ರಕಾರ ಈ ಉಗ್ರಬಾಣಕ್ಕೆ ಪ್ರಯೋಜನವನ್ನೇ ಹೇಳಲಿಲ್ಲ. ಅದನ್ನು ಬಿಟ್ಟನೇ ಅಥವಾ ಇಲ್ಲವೇ ಎಂಬ ವಾಕ್ಯವೂ ಇಲ್ಲ. ಅದರ ಕೊಂಡಿಯು ಇಲ್ಲಿ ಎಂದರೆ ೧೯೨ನೆಯ ಅಧ್ಯಾಯದ ೪೯ನೆಯ ಶ್ಲೋಕದಲ್ಲಿ ಸಿಕ್ಕುತ್ತದೆ. **ಸಶರಂ ತದ್ಧನುರ್ಘೋರಂ ಸಂನ್ಯಸ್ಯಾಥ ರಥೇ ತತಃ। ಸಶರಂ ತದ್ಧನುರ್ಘೋರಂ** ಎಂಬುದು

೧೯೧ನೆಯ ಅಧ್ಯಾಯದ ೩ನೆಯ ಶ್ಲೋಕದಲ್ಲಿ ಉಕ್ತವಾಗಿರುವ ಧನುಸ್ಸೇ ಆಗಿದೆ. ಆದುದರಿಂದ ೧೯೧ನೆಯ ಅಧ್ಯಾಯದಲ್ಲಿ ೧೧ನೆಯ ಶ್ಲೋಕಾರ್ಧದಿಂದ ೧೯೨ನೆಯ ಅಧ್ಯಾಯದ ೪೨ನೆಯ ಶ್ಲೋಕದವರೆಗೆ ೮೫ ಶ್ಲೋಕಗಳು ಹೆಚ್ಚು ಶ್ಲೋಕಗಳೆಂಬುದು ನಮ್ಮ ಅಭಿಪ್ರಾಯವಾಗಿದೆ. ಸಾಮಾನ್ಯವಾಗಿ ಈ ಶ್ಲೋಕಗಳ ತಾತ್ಪರ್ಯವು ಹಿಂದಿನ ಅಧ್ಯಾಯಗಳಲ್ಲಿಯೂ ಬಂದಿರುತ್ತದೆ. ಈ ಕಾರಣದಿಂದಲೂ ಈ ಶ್ಲೋಕಗಳನ್ನು ಹೆಚ್ಚು ಶ್ಲೋಕಗಳೆಂದು ಪರಿಗಣಿಸಬಹುದಾಗಿದೆ.

ಮುಂದಿನ ಕಥೆಯು ಹೀಗೆ ಸಾಗುತ್ತದೆ : ದ್ರೋಣರು ಪ್ರಯತ್ನಪೂರ್ವಕವಾಗಿ ಯುದ್ಧಮಾಡುವಂತೆ ಕರ್ಣಾದಿಗಳಿಗೆ ಹೇಳಿ–'ಪಾಂಡವರಿಂದ ನಿಮಗೆ ಶುಭವಾಗಲಿ. ನಾನು ಶಸ್ತ್ರಸಂನ್ಯಾಸಮಾಡುತ್ತೇನೆ'–ಎಂದು ಹೇಳುತ್ತಾ ಅಶ್ವತ್ಥಾಮನನ್ನೂ ಕೂಗಿಕೊಂಡು ಶಸ್ತ್ರಸಂನ್ಯಾಸಮಾಡಿ ರಥದ ಹಿಂಬದಿಯಲ್ಲಿ ಕುಳಿತುಕೊಳ್ಳುತ್ತಾರೆ. ಅನಂತರ ಸರ್ವಭೂತಗಳಿಗೂ ಅಭಯಪ್ರದವಾದ ಸಮಾಧಿಯನ್ನು ಅವಲಂಬಿಸುತ್ತಾರೆ. ಧೃಷ್ಟದ್ಯುಮ್ನನು ಧನುರ್ಬಾಣಗಳನ್ನು ರಥದಲ್ಲಿಟ್ಟು ಕತ್ತಿಯನ್ನು ಹಿಡಿದು ದ್ರೋಣರ ಬಳಿಗೆ ಹೋಗುತ್ತಾನೆ. ಪ್ರಾಣಿಗಳೆಲ್ಲವೂ ಹಾಹಾಕಾರಮಾಡುತ್ತವೆ (೪೮-೪೯). ಈ ಶ್ಲೋಕಗಳಾದನಂತರ 'ತಥೋಕ್ತ್ವಾ' ಎಂದು ಶ್ಲೋಕವು ಪ್ರಾರಂಭವಾಗುತ್ತದೆ. ಈ ೫೦ನೆಯ ಶ್ಲೋಕದಿಂದ ಮುಂದಕ್ಕೆ ೬೦ನೆಯ ಶ್ಲೋಕದವರೆಗೂ ದ್ರೋಣರು ಸಮಾಧಿಸ್ಥರಾಗಿ ಕುಳಿತುದು ; ಅವರ ಆತ್ಮಜ್ಯೋತಿಯು ಹೊರಬಂದುದು ; ಅದು ಬ್ರಹ್ಮಲೋಕಕ್ಕೆ ಋಷಿಗಳೊಡನೆ ಹೋದುದು–ಎಲ್ಲವೂ ವರ್ಣಿತವಾಗಿದೆ.

ಇಲ್ಲಿ ಅನೇಕ ತಾತ್ತ್ವಿಕಸಿದ್ಧಾಂತಗಳನ್ನು ಅಳವಡಿಸಿದಂತಿದೆ. **ಯೋಗಮೀಯಿವಾನ್ (೪೫) ಪರಮಂ ಸಾಂಖ್ಯಮಾಸ್ಥಿತಃ (೪೯) ಪುರಾಣಂ ಪುರುಷಂ ವಿಷ್ಣುಂ ಮನಸಾ ಜಗಾಮ (೫೦) ಜ್ಯೋತಿರ್ಭೂತೋ ಮಹಾತಪಾಃ ದಿವಮಾಕ್ರಾಮದಾಚಾರ್ಯಃ (೫೨) ದ್ವೌ ಸೂರ್ಯಾವಿತಿ ನೋ ಬುದ್ಧಿರಾಸೀತ್ (೫೩) ನಿಮೇಷಮಾತ್ರೇಣ ತಜ್ಜ್ಯೋತಿಃ ಆನ್ತರಧೀಯತ (೫೫) ವಯಮೇವ ತದಾದ್ರಾಕ್ಷ್ಮ ಪಞ್ಚಮಾನುಷಯೋನಯಃ (೫೬) ನ್ಯಯೋನಯಃ ನಾಪಶ್ಯನ್ಗಚ್ಛಮಾನಂ ಹಿ ತಂ ಸಾರ್ಧಮೃಷಿಪುಙ್ಗವೈಃ (೬೦) ದ್ರೋಣಸ್ತು ದಿವಮಾಸ್ಥಾಯ ನಕ್ಷತ್ರ**

**ರಥಮಾವಿಶತ್ । ಅಹಮೇವ ತದಾದ್ರಾಕ್ಷಂ ಋಷೇಃ ಪ್ರಸಾದಾತ್ಕೃಷ್ಣಸ್ಯ (೭೨) ದಿವಂ ಗಚ್ಛನ್ತಂ ತಂ ಮಹಾದ್ಯುತಿಂ ಅಪಶ್ಯಾಮ (೭೩)** ಈ ರೀತಿಯಲ್ಲಿ ಒಂದು ಶ್ಲೋಕದಿಂದ ಮತ್ತೊಂದು ಶ್ಲೋಕಕ್ಕೆ ಅಭಿಪ್ರಾಯ ವ್ಯತ್ಯಾಸವಿರುವುದು ಕಂಡುಬರುತ್ತದೆ.

**ತಸ್ಯ ಮೂರ್ಧಾನಮಾಲಮ್ಬ್ಯ ಗತಸತ್ತ್ವಸ್ಯ ದೇಹಿನಃ । ವಿಚಕರ್ತಾಸಿನಾ ಶಿರಃ।** ದ್ರೋಣರ ಪ್ರಾಣಹೋದಮೇಲೆ ಧೃಷ್ಟದ್ಯುಮ್ನನು ಅವರ ತಲೆಯನ್ನು ಕತ್ತರಿಸಿದನೆಂಬ ಅಭಿಪ್ರಾಯವು ಈ ಶ್ಲೋಕದಿಂದ ಬರುತ್ತದೆ. (೬೨). ಪ್ರಾಣವೇ ಹೋಗಿದ್ದುದಾದರೆ–೫೬ನೆಯ ಶ್ಲೋಕದಲ್ಲಿ ಹೇಳಿರುವಂತೆ ಪ್ರಾಣಜ್ಯೋತಿಯು ಹೋದುದನ್ನು ಅರ್ಜುನನು ನೋಡಿದ್ದುದಾದರೆ 'ಜೀವನ್ತಮಾನಯಾಚಾರ್ಯಂ–ಆಚಾರ್ಯರನ್ನು ಜೀವಸಹಿತವಾಗಿ ಕರೆದು ಕೊಂಡು ಬಾ' (೬೫) ಎಂದು ಅರ್ಜುನನೇಕೆ ಹೇಳುತ್ತಿದ್ದನು? ಇತ್ಯಾದಿ ಅನೇಕ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಅನುಪೂರ್ವಿಯು ಹೀಗಿದ್ದಿರಬಹುದೆಂದು ಭಾಸವಾಗುತ್ತದೆ.

**ದ್ರೋಣಂ ತಥಾಗತಂ ದೃಷ್ಟ್ವಾ ಧೃಷ್ಟದ್ಯುಮ್ನವಶಂ ಗತಮ್ ॥೪೮॥**

**ವಿತುನ್ನಾಙ್ಗಂ ಶರವ್ರಾತೈರ್ನ್ಯಸ್ತಾಯುಧಮಸೃಕ್ಷರಮ್ ।**
**ಧಿಕ್ಕೃತಃ ಪಾರ್ಷತಸ್ತಂ ತು ಸರ್ವಭೂತೈಃ ಪರಾಮೃಶತ್ ॥೬೧॥**

**ಉಕ್ತವಾಂಶ್ಚ ಮಹಾಬಾಹುಃ ಕುನ್ತೀಪುತ್ರೋ ಧನಂಜಯಃ ॥೬೫॥**

ಈ ಅನುಪೂರ್ವಿಯಿಂದ ಕಥಾಲೋಪವೂ ಆಗುವುದಿಲ್ಲ. ದ್ರೋಣರು ಬ್ರಹ್ಮನಿಷ್ಠರೆಂಬ ಬಗೆಗೆ ಸಂಶಯವೂ ಉಂಟಾಗುವುದಿಲ್ಲ. ಪ್ರತ್ಯಕ್ಷದರ್ಶಿ ಯಾದ ಸಂಜಯನ ಮಾತೇ ಇದಕ್ಕೆ ಸಾಕ್ಷಿಯಾಗಿರುತ್ತದೆ. ಯಾವ ವಿಧವಾದ ಅಸಂಗತಗಳೂ ಇರುವುದಿಲ್ಲ. ಈ ಹದಿನಾರು ಹೆಚ್ಚು ಶ್ಲೋಕಗಳಿಗೆ ಸಂಬಂಧಿಸಿದಂತೆಯೇ ಇರುವ ೭೩ನೆಯ ಶ್ಲೋಕದ **ವಿಧೂಮಮಿವ ಸಂಯಾನ್ತೀಂ** ಎಂಬುದೂ ಹೆಚ್ಚು ಶ್ಲೋಕವಿರಬಹುದೆಂಬುದು ನಮ್ಮ ಅಭಿಪ್ರಾಯವಾಗಿದೆ.

ಹದಿನೇಳನೆಯ ಸಂಪುಟವು ಮುಗಿಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥
ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು, ಓಂ ತತ್ಸತ್

